ಸಂ.೧೯

# ಶಿವಾನುಭವ

೧೯೪೧.

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬]　　　ಜುಲೈ ೧೯೪೨.　　　[ಸಂಚಿಕೆ ೧೦

## ವಿಷಯಾನುಕ್ರಮಣಿಕೆ.

# ರಾ|| ಬ|| ಹಳಕಟ್ಟಿ ವರ್ಧಂತ್ಯುತ್ಸವದ ಕಾಣಿಕೆ.

---

೧ ಶ್ರೀ ಬಸಲಿಂಗಪ್ಪ ಮಲ್ಲಪ್ಪ ಘಟನಟ್ಟಿ ಮಹಾಲಿಂಗಪೂರ ೫೧-೦-೦
೨ ಶ್ರೀ ಈಶ್ವರಪ್ಪ ಶಿವಲಿಂಗಪ್ಪ ಉಮರಾಣಿ ೫-೦-೦
ಸಬ್‌ರಜಿಸ್ಟ್ರಾರ ಗೋಕಾಕ
೩ ಶ್ರೀ ಎಸ್. ಎಮ್. ಭೋಜ ಫಸ್ಟಕ್ಲಾಸ ಸಬ್‌ಜಜ್ಜ ೧೦-೦-೦
ಕಾರವಾರ
೪ ಶ್ರೀ ರಾಮಚಂದ್ರಪ್ಪ ಬೋನಾಳ ಮೋರಟಗಿ ೫-೨-೦
೫ ಶ್ರೀ ದತ್ತಾತ್ರಯ ರಾಮಚಂದ್ರ ಬೇಂದ್ರೆ ಧಾರವಾಡ ೧-೦-೦
೬ ಶ್ರೀ ಜಿ. ಬಿ. ಜೋಶಿ ಸಂಪಾದಕ ಮನೋಹರ ಗ್ರಂಥಮಾಲಾ ೧-೦-೦
ಧಾರವಾಡ
೭ ಶ್ರೀ ಬಿ. ಎಮ್. ಪಾಟೀಲ ಬಿ. ಎ. ಎಲ್‌ಎಲ್. ಬಿ. ವಿಜಾಪುರ ೧-೦-೦
೮ ಶ್ರೀ ಸಂಗಮನಾಥ ದೇಶೀಕೇಂದ್ರ ಸ್ವಾಮಿಗಳವರು ೫-೦-೦
ವಿರಕ್ತಮಠ ಮು. ಬಿಲ್ಲಹಳ್ಳಿ ಡಿ. ಶಿವಮೊಗ್ಗಾ
೯ ಶ್ರೀಮತಿ ಗಂಗವ್ವಾ ಒಂಟಮುರಿ ಮಠ ೨-೦-೦
ಸೆಕ್ರೆಟರಿ ಅಕ್ಕನ ಬಳಗ ಗೋಕಾಕ
೧೦ ಶ್ರೀ ಶಿವಸಂಗಪ್ಪ ಪರ್ವತಗೌಡ ಚಿತ್ತರಗಿ ರಿಟಾಯರ್ಡ ೫-೦-೦
ಪೋಲಿಸ ಇನ್ಸಪೇಕ್ಟರ ಚಿತ್ತರಗಿ ಪೋ. ಅಮೀನಗಡ
೧೧ ಶ್ರೀ ಕೆ. ಬಿ. ಯಲಗೊಂಡ ಪೋಲಿಸ ಕಾನಸ್ಟೇಬಲ್ ೫-೦-೦
ಉತ್ತರಭಾಗ ವಿಜಾಪುರ
೧೨ ಶ್ರೀ ಎಸ್. ಎಂ. ಪಾಟೀಲ ಚೀಫಆಫೀಸರ ೫-೦-೦
ಲೋಕಲ್‌ಬೋರ್ಡ ಮಿರಜ
೧೩ ಶ್ರೀ ಬಸಪ್ಪ ಚನ್ನಪ್ಪ ಪಟ್ಟೇದ ಒಂಟಮುರಿ ೫-೦-೦
ಜಿ. ಬೆಳಗಾವ

೧೦೧-೦-೦

ಮೇಲ್ಕಂಡ ಮಹಾಶಯರ ಧನಸಹಾಯವನ್ನು ಕೃತಜ್ಞತಾಪೂರ್ವಕ ಸ್ವೀಕರಿಸಿದ್ದೇವೆ.

**ಕೆ. ಡಿ. ಬ್ಯಾಳಿ ಬಿ. ಎ. ಬಿ. ಟಿ.**
ಸೆಕ್ರೆಟರಿ ರಾ|| ಬ|| ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿ
ವಿಜಾಪುರ.

# ಶಿವಾನುಭವ.

| ವರ್ಷ ೧೬ | ಜುಲೈ = ೧೯೪೨. | ಸಂಚಿಕೆ ೧೦ |
| --- | --- | --- |

## ಶಿವಶರಣರ ಶಿವದೀಕ್ಷಾಕಾಲ.

(ಲೇ:— ಶ್ರೀಗುರುಮೂರ್ತಿದೇವರು ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲಸಂಸ್ಥಾನ.)



ವೀರಶೈವರಿಗೆ ಶಿವದೀಕ್ಷೆಯನ್ನು ಯಾವ ಕಾಲಕ್ಕೆ ಮಾಡಬೇಕು ಎಂಬ ವಿವಾದವು ಉದಯವಾದುದು ಸರಿಯಷ್ಟೆ. ಇದರಲ್ಲಿ ಕೆಲವರು ಗರ್ಭಕ್ಕೇನೆ ಮಾಡಬೇಕೆಂದೂ ಕೆಲವರು ಹುಟ್ಟಿದ ದಿನವೆ ಮಾಡಬೇಕೆಂದೂ ವಾದಿಸುವದಲ್ಲದೆ ಇದಕ್ಕೆ ಶಿವಶರಣರ ಚರಿತ್ರ, ನಡೆ, ನುಡಿಗಳೇ ಸಾಕ್ಷಿಯೆಂದು ತಪ್ಪು ಕಲ್ಪನೆಯಿಂದ ಸ್ಥೂಲವಾಗಿ ಅಂಗೀಕರಿಸುತ್ತಾರೆ. ಆದರೆ ಅವರ ನಡೆ, ನುಡಿ ಚರಿತ್ರಾದಿಗಳನ್ನು ಸಾಕಲ್ಯವಾಗಿ ಸಂಶೋಧಿಸಿದರೆ ವಾದಿಗಳ ಆ ತಪ್ಪುಕಲ್ಪನೆಯು ನಿಲ್ಲಲಾರದು. ಶಿವಶರಣರ ನುಡಿಗಳಿಂದ ಜ್ಞಾನೋದಯವಾದನಂತರ ಅಂದರೆ ಎಂಟು ವರುಷದ ಮೇಲೆ ದೀಕ್ಷೆ ಮಾಡಬೇಕೆಂದು ಸುಸ್ಪಷ್ಟವಾಗಿ ತಿಳಿದುಬರುತ್ತದೆ. ಅದು ಕಾರಣ ಅವರ ದೀಕ್ಷೆಯು ಚರಿತೆ, ನಡೆನುಡಿಗಳನ್ನಿಲ್ಲಿ ವಿವರವಾಗಿ ವಿಚಾರಿಸೋಣವಾಗುತ್ತದೆ.

ಶಿವಶರಣರಲ್ಲಿ ಪ್ರಮುಖರಾದವರು ಅಲ್ಲಮಪ್ರಭು, ಬಸವಣ್ಣನವರು. ಇವರು ಶೈವದಿಂದ ವೀರಶೈವರಾಗಿದ್ದರೂ ವೀರಶೈವ ಪದ್ಧತಿಯಂತೆ ಶಿವದೀಕ್ಷೆಯಾದುದಕ್ಕೆ ಹರಿಹರನ ರಗಳೆಗಳು ಪ್ರಮಾಣಗಳಾ

ಗುವದಿಲ್ಲ. ರೇವಣಸಿದ್ಧನ ಮಗನಾದ ರುದ್ರಮುನಿಗೆ ". .ಎಂಟನೆಯ ವರುಷದೊಳ್ ...ಶೈವೋಪದೇಶಮಂ ತಾನೆ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ" ಎಂದು ಹೇಳಿದೆ. ಅಲ್ಲದೆ ಹಾವಿನಹಾಳದಲ್ಲಿರುವ ಕಲ್ಲಯ್ಯನೆಂಬ ವೀರಶೈವ ಶರಣನಿಗೆ "ರುದ್ರಮುನಿದೇವರಿಂ ಕರುಣಮಂ ಮಾಡಿಸುತೆ। ರುದ್ರನಣುಗಂ ಶೈವದೀಕ್ಷೆಯಂ ನೀಡಿಸುತೆ॥ ಎಂದು ಹೇಳಲಾಗಿದೆ. ಇದರಿಂದ ಶರಣನಾದ ಹಾವಿನಹಾಳ ಕಲ್ಲಯ್ಯನಿಗೆ ಗರ್ಭದಲ್ಲಿಯಾಗಲಿ, ಜನನದಿನವಾಗಲಿ ಶಿವದೀಕ್ಷೆಯಾಗಿರಲಿಲ್ಲವೆಂದು ವ್ಯಕ್ತವಾಗುತ್ತದೆ.

## ಕರಸ್ಥಲ.

ಶಿವಶರಣರ ಪ್ರತಿಯೊಬ್ಬರ ವಚನಗಳಲ್ಲಿಯೂ 'ಕರಸ್ಥಲ'ದ ವಿಷಯವು ಕಣ್ಗೆಸೆಯುತ್ತದೆ. ಇದರಿಂದಲಾದರೂ ಶಿವಶರಣರ ಶಿವದೀಕ್ಷಾಕಾಲವನ್ನು ಸುಲಭವಾಗಿ ಗುರ್ತಿಸಬಹುದಾಗಿದೆ. ಗರ್ಭಲಿಂಗಧಾರಣೆಯಲ್ಲಾಗಲಿ, ಜನನದಿನ ಲಿಂಗಧಾರಣದಲ್ಲಾಗಲಿ ಲಿಂಗವನ್ನು ಕರಸ್ಥಲದಲ್ಲಿ ಕೊಡಲು ಅದೆಂದಿಗೂ ಸಾಧ್ಯವಿಲ್ಲ. ಗರ್ಭಧಾರಣದಲ್ಲಿ ತಾಯಿಯ ಗರ್ಭಕ್ಕೆ ಧರಿಸಲಾಗುತ್ತದೆ. ಜನನ ದಿನದಲ್ಲಿ ಉರಸ್ಥಲದಲ್ಲಿ ಧರಿಸಲಾಗುತ್ತದೆ. "ಶಿವಭಕ್ತರ ಶಿಶುವು ಧರಣಿಯ ಮೇಲೆ ಬಿದ್ದಾಗಲೆ ವಿಭೂತಿಪಟ್ಟವ ಕಟ್ಟಿ ಕೊರಳಲಿ ಲಿಂಗಸ್ವಾಯತವ ಮಾಡಿ..." ಎಂದು ಮುಂತಾಗಿ ಪ್ರಮಾಣಗಳಿವೆ. ಎಂಟು ವರುಷದ ಅನಂತರ ಶಿವದೀಕ್ಷೆ ಮಾಡಿದರೆ ಗುರುವು ಲಿಂಗವನ್ನು ಕರಸ್ಥಲದಲ್ಲಿ ಕರುಣಿಸುತ್ತಾನೆ. ಈ ವಿಷಯವನ್ನು ಎಲ್ಲ ಶರಣರೂ ನಿರೂಪಿಸಿದ್ದಾರೆ. ತಮಗೆಲ್ಲ ಗುರುವು ಇಷ್ಟಲಿಂಗವನ್ನು ಕರಸ್ಥಲಕ್ಕೆ ತಂದುಕೊಟ್ಟನೆಂದು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ

"ಕಾಣಬಾರದ ಲಿಂಗವೆನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ. ಕೇಳಲಮ್ಮೆ. ಎನಗಿದು ಸೋಜಿಗ. ಗುಹೇಶ್ವರನೆಂಬ ಲಿಂಗ ನಿರಾಕಾರ ಬಯಲು ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ."

"......ಶ್ರೀಗುರುವು ಎನ್ನ ಕರಸ್ಥಲಕ್ಕೆ ಲಿಂಗವ ಕೊಟ್ಟ......"

— ಗಣದಾಸಿವೀರಣ್ಣ.

"......ಶ್ರೀಗುರು ಕಾರುಣ್ಯದಿಂದ ಮಹಾವಸ್ತು ಕರಸ್ಥಳಕ್ಕೆ ಬಂದಬಳಿಕ ಸರ್ವಸುಖಂಗಳೆಲ್ಲವೂ ಇದೆ ನೋಡಾ......"

— ಉರಿಲಿಂಗಪೆದ್ದಿ.

ಎನ್ನ ಕರಸ್ಥಲದಲ್ಲಿ ಇಷ್ಟಲಿಂಗವಾಗಿ ಅಳವಟ್ಟಿತ್ತು...."
— ಸಿದ್ಧರಾಮ ಶಿವಯೋಗಿ.

ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೆ, ಕೂಡಲ ಸಂಗಮದೇವಯ್ಯ ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ"
— ಬಸವಣ್ಣ.

ಇವೆ ಮುಂತಾದ ಪ್ರಮಾಣಗಳುಂಟು. ಇನ್ನೂ ಹೆಚ್ಚು ಕಾಣಬೇಕೆನ್ನುವವರು ವಚನಗಳನ್ನೆ ಓದಬೇಕು.

## ಬೇರೆ ವಚನ ಪ್ರಮಾಣ.

ಶ್ರೀಮಾನ್ ರಾ. ಬ. ಹಳಕಟ್ಟಿಯವರು ವಚನಶಾಸ್ತ್ರಸಾರ (೧-೨-೩) ಭಾಗಗಳನ್ನು ಪ್ರಕಟಿಸಿದುದು ಒಂದು ವಿಧದಲ್ಲಿ ವೀರಶೈವ ಸಿದ್ಧಾಂತವನ್ನೇ ಪ್ರಕಟಪಡಿಸಿದಂತಿದೆ. ಇದಕ್ಕಾಗಿ ವೀರಶೈವ ಸಮಾಜವು ಅವರಿಗೆ ಚಿರಋಣಿ. ಶ್ರೀಮಾನ್ ಹಳಕಟ್ಟಿಯವರು ವಚನಶಾಸ್ತ್ರಸಾರ ಭಾಗ ೩ ರಲ್ಲಿ ಈ ವಾದಕ್ಕೆ ಒಂದು ವಿಶೇಷ ಮೆರಗನ್ನುಂಟು ಮಾಡುವ ಕೆಲವು ವಚನಗಳನ್ನು ಸಂಗ್ರಹಿಸಿ ಒಂದು ಬಗೆಯಿಂದ ಈಗ ಸಮಾಜದಲ್ಲಿ ಅನೂಚಾನವಾಗಿ ನಡೆಯುತ್ತ ಬಂದಿರುವುದೆ ನಿಜವೆಂದು ಸಿದ್ಧಮಾಡಿದ್ದಾರೆ. ಆ ವಚನಗಳನ್ನಿಲ್ಲಿ ಒಂದೊಂದಾಗಿ ಉದಹರಿಸಿ ವಿವರಿಸಬಯಸುತ್ತೇವೆ. ಇವರಿಂದಲೂ ಶಿವಶರಣರ ಶಿವದೀಕ್ಷಾ ಕಾಲವು ಯಾವುದೆಂಬುದು ವಾಚಕರಿಗೆ ಅಭಿವ್ಯಕ್ತವಾಗುತ್ತದೆ.

ಶಿವಶರಣರು ಜ್ಞಾನಕ್ರಿಯೆಗಳಿಗೆ ಹೆಚ್ಚು ಮಹತ್ವಕೊಟ್ಟಿದ್ದಾರೆ. ಶಿವದೀಕ್ಷೆಯಾಗಲು ಸನ್ನದ್ಧನಾಗುವವನು ಯಾವನೇ ಇರಲಿ ಅವನು ಆಚಾರ-ವಿಚಾರಗಳೆರಡರಿಂದಲೂ ಪರಿಣತನಾಗಿರಬೇಕು. **ಇಲ್ಲದಿದ್ದರೆ** ಶಿವದೀಕ್ಷೆಯು ಸಾಧ್ಯವಿಲ್ಲ. ಅಂಥವನಿಗೆ ಮಾಡಲೂ ಕೂಡದು, **ಎಂದು**ದಾಗಿ ಈ ವಚನದಲ್ಲಿ ಚನ್ನಬಸವಣ್ಣನವರು ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ. ಅದಿದು—

"ಆಚಾರವೆಂಬುದು ಕೂರಲಗು. ತಪ್ಪಿಬಂದರೆ ಪ್ರಾಣವ ತಗಲುವುದು. ಅದುಕಾರಣ ಅರಿದರಿದು ಆಚರಿಸಬೇಕು. ಆಚಾರ-ವಿಚಾರ ಉಭಯದ ವಿಚಾರವ ನೋಡದೆ ಶಿವದೀಕ್ಷೆಯ ಮಾಡಲಾಗದು..."

ದೀಕ್ಷಾಧಿಕಾರಿಯು ಆಚಾರ-ವಿಚಾರಗಳೆರಡರಿಂದಲೂ ಪವಿತ್ರನಾಗಿರಬೇಕೆಂದೂ ಇಲ್ಲವಾದರೆ ದೀಕ್ಷೆಯನ್ನ ಮಾಡಕೂಡದೆಂದೂ ಇಲ್ಲಿ ಪ್ರತಿಪಾದಿತವಾಗಿದೆ. ಇದರಿಂದ ಎಂಟನೆಯ ತಿಂಗಳ ಗರ್ಭಕ್ಕೆ ಶಿವದೀಕ್ಷೆಯು ಸಾಧ್ಯವೆ? ಗರ್ಭದ ಮಗುವು ಯಾವ ಆಚರಣೆಯಿಂದ ಪರಿಶುದ್ಧನಾಗಿರುವನು? ಗರ್ಭದಿಂದೀಚೆಗೆ ಬಂದು ಸರ್ವಾಂಗಸೌಷ್ಠವತೆಯನ್ನು ಪಡೆಯದೆ ಆಚರಣೆಗಳನ್ನು ಆಚರಿಸಲು ಸಾಧ್ಯವಿದೆಯೆ? ಇತ್ಯಾದಿ ಪ್ರಶ್ನೆಗಳು ಉತ್ತರವನ್ನು ಎದುರಿಸುತ್ತವೆ. ಇದಲ್ಲದೆ ಚನ್ನಬಸವಣ್ಣನು ಮೇಲ್ಕಂಡ ವಚನವನ್ನು ಮುಂದುವರಿಸುತ್ತ ೫೦ ಆಚಾರಗಳನ್ನು ಬಿತ್ತರಿಸಿದ್ದಾನೆ. ಅವನ್ನು ಆಚರಿಸುವ ಸಾಮರ್ಥ್ಯವುಳ್ಳವನಿಗೇನೆ ಶಿವದೀಕ್ಷೆಯನ್ನು ಮಾಡಬೇಕೆಂದು ಹೇಳಿದ್ದಾನೆ. ಅವುಗಳಲ್ಲಿ ಕೆಲವನ್ನಿಲ್ಲಿ ಎತ್ತಿ ವಿಮರ್ಶಿಸೋಣ!

"ಪರರ ಹೆಣ್ಣಿಗೆ ಕಣ್ಣಿಡದಿಹುದೆ ೧ನೆಯ ಆಚಾರ.
ಪರರ ದ್ರವ್ಯವ ಅಪಹಾರ ಮಾಡದಿಹುದೆ ೨ನೆಯ ಆಚಾರ.
ಸುಳ್ಳಾಡದಿಹುದೆ ೩ನೆಯ ಆಚಾರ.
ವಿಶ್ವಾಸ ಘಾತವ ಮಾಡದಿಹುದೆ ೪ನೆಯ ಆಚಾರ
ಪ್ರಾಣಹಿಂಸೆಯ ಮಾಡದಿಹುದೆ ೫ನೆಯ ಆಚಾರ
ಸಕಲ ಶಿವಗಣರ್ಗೆ ಸಂತೋಷವಂ ಪುಟ್ಟಿಸುವುದೆ ೬ನೆಯ ಆಚಾರ
ಸ್ವೀಕರಿಸುವ ನೇಮವಂ ಪ್ರಾಣಾಂತ್ಯವಾಗಿ ಬಿಡನೆಂಬುದೆ ೭ನೆಯ ಆಚಾರ.

...

ಪ್ರಣವ ಮುದ್ರೆಯಿಲ್ಲದೆ ವಸ್ತ್ರವ ಹೊದೆಯದಿಹುದೆ ೧೯ನೆ ಆಚಾರ.
ಹುಟ್ಟಿದ ಶಿಶುವಿಗೆ ಲಿಂಗಧಾರಣವ ಮಾಡದೆ ತಾಯ ಮೊಲೆಹಾಲು ಜೇನತುಪ್ಪ ಮುಟ್ಟಿಸದಿಹುದೆ ೨೦ನೆಯ ಆಚಾರ.

...........

ಲಿಂಗದ ಕಲೆಯರಿತು ಲಿಂಗವ ಪೂಜಿಸುವುದೆ ೩೦ನೆಯ ಆಚಾರ.
ಷಡ್ವರ್ಗಂಗಳಂ ಮೆಟ್ಟಿ ಷಟ್‌ಸ್ಥಲವ ನಿಂಬುಗೊಂಡುದೆ ೩೨ನೆಯ ಆಚಾರ.

.......................................

ಪ್ರಸಾದದಲ್ಲಿ ರುಚಿಯ ನೋಡದಿಹುದೆ ೩೯ನೆಯ ಆಚಾರ.

ಲಿಂಗಾರ್ಚನೆ ವಿರಹಿತ ಭೋಜನವ ಮಾಡದಿಹುದೆ ೪ನೆ ಆಚಾರ.

ಎಂದು ಮುಂತಾಗಿ ಹೇಳುತ್ತ ಮತ್ತೊಂದು ವಚನದಲ್ಲಿ—

"೧ನೆ ಆಚಾರದಿಂದ ಶೀಲವಂತನಾಗುವನು.
೨ನೆ ಆಚಾರದಿಂದ ಧನವಂತನಾಗುವನು.
೩ನೆ ಆಚಾರದಿಂದ ಕೀರ್ತಿವಂತನಾಗುವನು.
೪ನೆ ಆಚಾರದಿಂದ ವಿಶ್ವಾಸವಂತನಾಗುವನು.
೫ನೆ ಆಚಾರದಿಂದ ಸತ್ಪುರುಷನಾಗುವನು.
೬ನೆ ಆಚಾರದಿಂದ ಭಕ್ತಿವಂತನಾಗುವನು.
೭ನೆ ಆಚಾರದಿಂದ ವೀರಶೈವನಾಗುವನು.

ಎಂದು ಹೇಳಿದೆ.

ಏಳನೆಯ ಆಚರಣೆಗೆ ವೀರಶೈವತ್ವವು ಘಟಿಸಬೇಕಾದರೆ ಹಿಂದಿನ ಆರು ಆಚರಣೆಗಳು ಮುಗಿಯುವವರೆಗೂ ಮಗುವು ಶುದ್ಧಶೈವನಾಗಿ ಇರಬೇಕೆಂದೂ ಏಳನೆಯ ಆಚರಣೆಯ ಶಕ್ತಿ ಸಂಭವಿಸಿದಾಗ ಶಿವದೀಕ್ಷೆಯನ್ನು ಮಾಡಿ ವೀರಶೈವನನ್ನಾಗಿ ಮಾಡಬೇಕೆಂದೂ ಅರ್ಥವಾಗುತ್ತದೆ. ಅಲ್ಲದೆ ಮೊದಲಿನ ಆರು ನಿಯಮಗಳು ಗರ್ಭದ ಶಿಶುವಿಗೆ ಅನ್ವಯಿಸುವದಿಲ್ಲ. ಗರ್ಭದ ಶಿಶುವು ಆಚರಿಸಲು ಸಾಧ್ಯವೂ ಇಲ್ಲ. ಹುಟ್ಟಿದ ಮಗು ಆ ಐದಾರು ನಿಯಮಗಳನ್ನು ಆಚರಿಸುವಾಗ ಕೇವಲ ಲಿಂಗಧಾರಿಯಾಗಿರಬೇಕೆಂದು ಸಿದ್ಧವಾಗುತ್ತದೆ. ಇಷ್ಟಾಗಬೇಕಾದರೆ ಸುಮಾರು ೮-೧೦ ವರುಷಗಳಾದರೂ ಕಳೆಯದಿದ್ದರೆ ವಿಧಿಯಿಲ್ಲ. ಗರ್ಭದ ಶಿಶುವಿಗೆ ಶಿವದೀಕ್ಷೆಯನ್ನು ಮಾಡುವ ರೂಢಿಯು ಶಿವಶರಣರಲ್ಲಿದ್ದಿದ್ದರೆ ಈ ನಿಯಮಗಳನ್ನು ಹೇಳುವದರಲ್ಲಿ ಯಾವ ಪ್ರಯೋಜನವಿಲ್ಲ. ಅಲ್ಲದೆ ವೀರಶೈವರು ಹುಟ್ಟಿದ ಮಕ್ಕಳಿಗೆ (ಗರ್ಭಶಿಶುವಿಗಲ್ಲ.) ಲಿಂಗಧಾರಣಮಾಡಿ (ಶಿವದೀಕ್ಷೆಯನ್ನಲ್ಲ) ಮೊಲೆಹಾಲು ಜೇನುತುಪ್ಪ ಮುಟ್ಟಿಸುವುದು ೨ನೆಯ ಆಚಾರವೆಂದು ಹೇಳಿದೆ. ಇದರಿಂದ ಗರ್ಭದ ಶಿಶುವಿಗೊಮ್ಮೆ ಲಿಂಗಧಾರಣ, ಹುಟ್ಟಿದ ಮಗುವಿಗೆ ಮತ್ತೊಮ್ಮೆ ಲಿಂಗಧಾರಣೆಯನ್ನು ಮಾಡಬೇಕೆಂದಾಯ್ತು. ಗರ್ಭಲಿಂಗಧಾರಣವೆ ಶಿವದೀಕ್ಷೆಯೆಂದು ಶಿವಶರಣರು ತಿಳಿದಿದ್ದರೆ ಪುನಃ

ಜನನವಾದ ಮೇಲೆ ಮತ್ತೊಮ್ಮೆ ಲಿಂಗಧಾರಣವನ್ನು ಎಂದಿಗೂ ಹೇಳುತ್ತಿರಲಿಲ್ಲ. ಮತ್ತು ಜನನದ ಮಗುವಿಗೆ ಲಿಂಗಧಾರಣ ಮಾಡಬೇಕೆಂದು ಹೇಳುತ್ತಾರೆಯೇ ಹೊರತು ಶಿವದೀಕ್ಷೆ ಮಾಡಬೇಕೆಂದು ಎಲ್ಲಿಯೂ ಹೇಳುವದಿಲ್ಲ. ಗರ್ಭಧಾರಣವಾಗಲಿ ಜನ್ಮಧಾರಣವಾಗಲಿ ಶಿವಶರಣರ ದೃಷ್ಟಿಯಲ್ಲಿ ಅವು ಕೇವಲ ಲಿಂಗಧಾರಣಗಳೇ ವಿನಾ ಶಿವದೀಕ್ಷೆಗಳಲ್ಲ. ಇದಲ್ಲದೆ ಮೇಲಿನ ವಚನದಲ್ಲಿರುವಂತೆ ಹುಟ್ಟಿದ ದಿನ ಮಗುವಿಗೆ ಮಾಡಿದ ಲಿಂಗಧಾರಣವೆ ಶಿವದೀಕ್ಷೆಯೆಂದು ವಾದಿಗಳು ವಾದಿಸಿದರೆ ಆಗ "ಗರ್ಭಾಷ್ಟಮ" ಪದ ಏನಾಗಬೇಕು? ಗರ್ಭಕ್ಕೇನೆ ಶಿವದೀಕ್ಷೆಯನ್ನು ಮಾಡಬೇಕೆಂದು ಹೇಳುವದಾದರೆ ಕೆಲವು ವಚನಗಳಲ್ಲಿ ಹೇಳುವ 'ಹುಟ್ಟಿದ ಮಕ್ಕಳ ಲಿಂಗಧಾರಣವು' ಏನು ಪ್ರಯೋಜನ! ಇವೆಲ್ಲ ಕಾರಣಗಳಿಂದ ಶಿವಶರಣರ ಶಿವದೀಕ್ಷಾಕಾಲವು ಗರ್ಭವೂ ಅಲ್ಲ, ಜನನದಿನವೂ ಅಲ್ಲ ಎಂದು ಎಗ್ಗಳವಾಗುತ್ತದೆ

ಮೇಲ್ಕಂಡ ವಚನದಲ್ಲಿ ಪಳನೆಯು ಆಚಾರದಿಂದ ದೀಕ್ಷಿತನಾಗಿ ವೀರಶೈವನಾದವನು-ಪ್ರಸಾದದಲ್ಲಿ ರುಚಿಯ ನೋಡದಿಹುದು. (೩೯) ಲಿಂಗಾರ್ಚನೆ ವಿರಹಿತ ಭೋಜನೆ ಮಾಡದಿಹುದು. (೪೧) ಇವು ಆಚರಿಸಬೇಕಾದ ಆಚರಣೆಗಳು. ಇವನ್ನು ಇಂದು ಜನ್ಮಲಿಂಗಧಾರಣವೆ ಶಿವದೀಕ್ಷೆಯೆಂದು ಹೇಳಿಕೊಳ್ಳುವವರು ಎಷ್ಟು ಜನರು ಆಚರಿಸುತ್ತಿದ್ದಾರೆ? ಸಾಮಾನ್ಯವಾಗಿ ಜನನಲಿಂಗಧಾರಿಗಳೆಲ್ಲರೂ ಲಿಂಗಪೂಜೆಯಿಲ್ಲದೆ ಉಣ್ಣುವುದು, ಲಿಂಗನೈವೇದ್ಯವು ಹೆಚ್ಚಾದರೆ ಎತ್ತಿ ಬಿಸುಟುವುದು ಮುಂತಾದ ಶೈವ ಪದ್ಧತಿಯಲ್ಲಿಯೆ ನಿಂತು ಹೋಗಿದ್ದಾರೆ. ೮—೧೨ ವರುಷದ ಮೇಲೆ ದೀಕ್ಷೆಯಾದವರು ಬಹುಶಃ ಹೀಗೆ ಮಾಡುವದಿಲ್ಲ. ನಿಜಾಂಶವನ್ನು ತಿಳಿಯಲು ಇದೂ ಕೊಂಚ ಸಹಕಾರಿಯಾಗುತ್ತದೆ.

## ಅಜ್ಞಾನಾವಸ್ಥೆಯ ದೀಕ್ಷೆಯು ಸಲ್ಲದು.

"...ಏನೇನೂ ಅರಿಯದ ಎಡ್ಡಮಾನವಂಗೆ ಉಪದೇಶ ಮಾಡುವ ಗೊಡ್ಡ ಮಾನವನ ಮುಖವ ತೋರದಿರಯ್ಯ. ಅದೇನುಕಾರಣವೆಂದರೆ ಆ ಗೊಡ್ಡ ಜೀವಿಯು ಪ್ರಪಂಚವ ಕಳೆಯಲಿಲ್ಲ. ಅವನ ಪಂಚೇಂದ್ರಿಯಂಗಳ ಸಪ್ತವ್ಯಸನಂಗಳ ಅಷ್ಟಮದಂಗಳೆಂಬ ಗುಣಂಗಳ ಬಿಡಿಸಲಿಲ್ಲ. ಸೂತಕ ಪಾತಕಂಗಳ ಕೆಡಿಸಿ, ಮೂರುಮಲಂ

ಗಳ ಬಿಡಿಸಿ ಮುಕ್ತಿಪಥಂಗಳನರುಹಲಿಲ್ಲ. ಮಹಾಶೂನ್ಯನಿರಾಳ ನಿರಂಜನ ಲಿಂಗವ ಕರಮನಭಾವ ಸರ್ವಾಂಗದಲ್ಲಿ ತುಂಬಿ ನಿತ್ಯ ನೆಂದೆನಿಸಲಿಲ್ಲ..."

— ಅಂಬಿಗರ ಚೌಡಯ್ಯ.

"ಕಾಲಚಕ್ರ, ಕರ್ಮಚಕ್ರ, ನಾದಚಕ್ರದೊಳಗೆ ಹುಟ್ಟಿದ ಯೋನಿ ಯಿಲ್ಲ. ಮೆಟ್ಟಿದ ನೆಲವಿಲ್ಲ. ಉಣ್ಣದಾಹಾರವಿಲ್ಲ. ಕಾಣದ ದುಃಖ ವಿಲ್ಲ. ಇಂತೀ ನಾನಾ ಜನ್ಮದಲ್ಲಿ ನುಗ್ಗುನುರಿಯಾಗಿ ಬಂದವಂಗೆ ಪ್ರಾಯಶ್ಚಿತ್ತವಿಲ್ಲದೆ ಗುರುವ ಮುಟ್ಟಬಹುದೆ? ಲಿಂಗವನರ್ಚಿಸಬ ಹುದೆ? ಪ್ರಸಾದವ ಕೊಳ್ಳಬಹುದೆ? ಕೂಡಲಚನ್ನಸಂಗಮದೇವ ಹೀಗೆ ತ್ರಿಕರಣ ಶುದ್ಧವಿಲ್ಲದವಂಗೆ ಉಪದೇಶವ ಕೊಟ್ಟ ಗುರುವಿಂಗೆ ನಾಯಕನರಕ ತಪ್ಪದು."

— ಚನ್ನಬಸವಣ್ಣ.

"ಮಹಾಜ್ಞಾನ ತಲೆದೋರೆ, ಸರ್ವಸಂಗ ಪರಿತ್ಯಾಗವ ಮಾಡಿ ಗುರೂಪಾವಸ್ಥೆಯ ಮಾಡಿದ ಶಿಷ್ಯೋತ್ತಮಂಗೆ ಸೇವ್ಯರ ಭೃತ್ಯ ರಿಂದ ಪಂಚಕಲಶಂಗಳ ಸ್ಥಾಪಿಸಿ, ಸೂತ್ರವ ಹಾಕಿಸಿ ಅಷ್ಟವಿಧಾ ರ್ಚನೆ ಷೋಡಶೋಪಚಾರಗಳ ಮಾಡಿಸಿ, ತಮ್ಮ ಕೃಪಾಹಸ್ತವ ನಿಟ್ಟು, ಜಂಗಮಮೂರ್ತಿಗಳ ಸಿಂಹಾಸನದ ಮೇಲೆ ಮೂರ್ತವ ಮಾಡಿಸಿ, ಶ್ರೀಗುರುಲಿಂಗವು ಎದ್ದು ಪ್ರಮಥರೊಡಗೂಡಿ ಕುಮಾರ ಠಾವ ಮಾಡಿದಂಗಲಿಂಗವ ತನ್ನ ಚರಣತಳಕ್ಕೆ ಸೂತ್ರವ ಹಿಡಿಸಿ ಗುರುಶಿಷ್ಯತ್ವವೆಂಬ ಉಭಯಭೇದವಳಿದು ಏಕರೂಪವಾಗಿ ನಿರಂ ಜನ ಮೂರ್ತಿಗೆ ಅಭಿವಂದಿಸಿ, ಅಷ್ಟಾಂಗ ಪ್ರಣಿತರಾಗಿ ಅಪ್ಪ ಣೆಯ ಬೆಸಗೊಂಡು, ಆ ನಿರಂಜನ ಮೂರ್ತಿಗೆ ಪ್ರತಿಸಿಂಹಾಸ ನವ ಮಾಡಿಸಿ, ಗುರುಶಿಷ್ಯವಭಿಮುಖವಾಗಿ ಗುರುವಿನ ದೃಕ್ಕು ಶಿಷ್ಯನ ಮಸ್ತಕದಲ್ಲಿ ಸೂಸೆ, ಆ ಶಿಷ್ಯನ ದೃಕ್ಕು ಗುರುವಿನ ಚರಣ ಕಮಲದಲ್ಲಿ ಸೂಸೆ ಏಕಲಿಂಗನಿಷ್ಠೆಯಿಂದ ಸಾವಧಾನ ಭಕ್ತಿಕ ರಿಗೊಂಡು ಆ ಲಿಂಗಾಂಗದ ಭಾಳದ ಪೂರ್ವಲಿಖಿತವ ಜಂಗಮ ಚರಣೋದ್ಧೂಳನದಿಂದ ತೊಡೆದು, ಲಿಂಗಕ್ಕೆ ೨೧ ಪೂಜೆಯ ಮಾಡಿಸಿ ಲಿಂಗಕ್ಕೆ ಲಿಂಗವ ತೋರಿ, ಪಾಣಿಗ್ರಹಣವಮಾಡಿ,

ಮಂತ್ರವರ್ಣದಲ್ಲಿ ಉಸುರಿ, ಪ್ರಮಥರೊಡಗೂಡಿ, ಸೇವೆಯನೆರೆದು, ಕಂಕಣವ ಕಟ್ಟಿ, ನಿಮಿಷಾರ್ಧವಗಲಬೇಡೆಂದು ಅಭಯಹಸ್ತವನಿಟ್ಟು ಸರ್ವಾಂಗದಲ್ಲಿ ಚಿದ್ಘನಲಿಂಗವನಿತ್ತುದೇ ಪ್ರಥಮದಲ್ಲಿ ಗುರುಪ್ರಸಾದ ನೋಡಾ. ಅದರಿಂ ಮೇಲೆ ಕ್ರಿಯಾಮಂತ್ರವ ಹೇಳಿ, ದಶವಿಧಪಾದೋದಕ ಏಕಾದಶ ಪ್ರಸಾದವ ಕರುಣಿಸಿದುದೇ ದ್ವಿತೀಯದಲ್ಲಿ ಲಿಂಗಪ್ರಸಾದ ನೋಡಾ. ಅದರಿಂ ಲಿಂಗಾಂಗ ಷಟ್‌ಸ್ಥಾನಂಗಳಲ್ಲಿ ಅಷ್ಟವಿಧ ಸಕೀಲು ಮರ್ಮವ ಕರುಣಿಸಿದ್ದುದೆ ತೃತೀಯದಲ್ಲಿ ಜಂಗಮಪ್ರಸಾದ ನೋಡಾ. ಅದರಿಂದತ್ತ ಲಿಂಗಾಂಗವೆರಡಳಿದು ಸರ್ವಾಚಾರ ಸಂಪತ್ತಿನ ಆಚರಣೆಯ ತೋರಿ, ಮಹಾಪ್ರಸಾದ ಶಿವಾನುಭವ ಸ್ವರೂಪವ ಬೋಧಿಸಿ ಶ್ರೀಗುರು ಲಿಂಗ ಜಂಗಮರ ಅಂತರಂಗದಲ್ಲಿ ಬೆಳಗುವ ಚಿಜ್ಯೋತಿ ಶರಣನೇ ಚತುರ್ಥದಲ್ಲಿ ನಿಜಪ್ರಸಾದ ನೋಡಾ....”

—ಸಂಗನಬಸವೇಶ್ವರ.

ಈ ವಚನವನ್ನು ವಾಚಕರು ಸಾವಧಾನದಿಂದ ವಿಚಾರಮುಖಕ್ಕೆ ತಂದು ಓದಬೇಕು. ಇದರಲ್ಲಿ ಹೇಳಿದ ದೀಕ್ಷಾಕ್ರಿಯೆಗಳೆಲ್ಲ ಯಾವ ವಯಸ್ಸಿನ ವಟುವಿಗೆ ಯೋಗ್ಯವಾಗಿವೆಯೆಂಬುದು ಆಗ ತಾನಾಗಿಯೆ ವಾಚಕರ ಮನಸ್ಸಿಗೆ ಗೋಚರವಾಗುವುದು.

“ಗುರುಶಿಷ್ಯ ಸಂಬಂಧವೆಂತೆಂದೊಡೆ ಹೇಳಿಹೆ ಕೇಳಿರೊ ಸದ್ಭಕ್ತಶರಣಜನಂಗಳೆಲ್ಲರು. ಶ್ರೀಗುರು ಶಿಷ್ಯಗೆ ಉಪದೇಶವ ಮಾಡುವ ಕಾಲದಲ್ಲಿ ಶಿಷ್ಯನ ಸ್ಥೂಲತನು ಸೂಕ್ಷ್ಮತನು ಕಾರಣತನುವೆಂಬ ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು ಮಾಯಾ ಪ್ರಕೃತಿ ಕಾಯದ ಪೂರ್ವಾಶ್ರಯದಲ್ಲಿ ಚಿದಗ್ನಿಯಿಂದ ಸುಟ್ಟು ಚಿತ್ಕಾಯವೆಂದೆನಿಸಿ ಆ ಚಿತ್ಕಾಯ ಸ್ವರೂಪವಾದ ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸಿ ॥ಶ್ಲೋ॥ ಯಥಾಕಾಲಸ್ತಥಾ ಭಾವೋ ಯಥಾಭಾವಸ್ತಥಾ ಮನಃ। ಯಥಾಮನಸ್ತಥಾ ತೃಪ್ತಿರ್ದೃಷ್ಟಿಸ್ತಥಾ ಸ್ಥಲಂ ॥ ಎಂಬ ಆಗಮೋಕ್ತವಾಗಿ ಆ ಶಿಷ್ಯನ ಪಶ್ಚಿಮದೇಶದಲ್ಲಿ ಬೆಳಗುತ್ತಿರ್ದ ನಿತ್ಯನಿರಂಜನ ಪರಮ ಕಳೆಯನ್ನು ಧ್ಯಾನಿಸಿ ಭಾವಸ್ಥಲಕ್ಕೆ ತಂದು, ಆ ಭಾವಸ್ಥಲ

ದಿಂದ ಮನಸ್ಥಲಕ್ಕೆ ತಂದು, ಆ ಮನಸ್ಥಲದಿಂದ ದೃಷ್ಟಿಸ್ಥಲಕ್ಕೆ ತಂದು, ಆ ದೃಷ್ಟಿಸ್ಥಲದಿಂದ ಕರಸ್ಥಲಕ್ಕೆ ತಂದು, ಆ ಕರಸ್ಥಲದಿಂದ ಸಾಕಾರಮೂರ್ತಿಯಲ್ಲಿ ಮೂರ್ತಿಗೊಳಿಸಿ .........ಮತ್ತಮಾ ಇಷ್ಟಲಿಂಗದಲ್ಲಿ ವೃತ್ತ, ಕಟಿ, ವರ್ತುಲ, ಗೋಮುಖ, ನಾಳ, ಗೋಳಕವೆಂಬ ೬ ಸ್ಥಲಂಗಳ ತೋರಿ, ಆ ಆರು ಸ್ಥಲಂಗಳಲ್ಲಿ ನಕಾರ, ಮಕಾರ, ಶಿಕಾರ, ವಕಾರ, ಯಕಾರ ಓಂಕಾರವೆಂಬ ಆರು ಪ್ರಣಮಗಳನ್ನು ಬೋಧಿಸಿ, ಆ ಆರು ಪ್ರಣಮಗಳನ್ನೆ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗಳೆಂಬ ಆರು ಲಿಂಗಗಳೆಂದರುಪಿ, ಆರು ಲಿಂಗಂಗಳಿಗೆ ಘ್ರಾಣ, ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯಂಗಳೆಂಬ ಆರು ಇಂದ್ರಿಯಂಗಳನ್ನೆ ಆರು ಮುಖಗಳೆಂದು ತಿಳುಪಿ, ಆ ಮುಖಂಗಳಿಗೆ ಗಂಧ, ರುಚಿ, ರೂಪು, ಶಬ್ದ, ಸ್ಪರ್ಶನ, ತೃಪ್ತಿ ಎಂಬಾರು ಪದಾರ್ಥಗಳನ್ನು ಶ್ರದ್ಧಾ, ನೈಷ್ಠಿಕಾ, ಸಾವಧಾನ, ಅನುಭವ, ಆನಂದ, ಸಮರಸವೆಂಬಾರು ಭಕ್ತಿಗಳಿಂದರ್ಪಿಸಿ ಸಕೀಲ ತೋರಿಸಿ...'

—ಅಖಂಡೇಶ್ವರ.

ಈ ವಿವರಗಳನ್ನೆಲ್ಲ ದೀಕ್ಷೆಯ ಸಮಯಕ್ಕೆ ತಿಳಿಸಬೇಕಾಗಿದ್ದರೆ ದೀಕ್ಷಾಧಿಕಾರಿಯು ಯಾವ ವಯಸ್ಸಿನಲ್ಲಿರಬೇಕೆಂಬುದನ್ನು ವಾಚಕರೆ ನಿರ್ಧರಿಸಬೇಕು. ಇದರಿಂದಲಾದರೂ ಶಿವಶರಣರ ಶಿವದೀಕ್ಷಾ ಕಾಲವು ಯಾವುದೆಂಬುದು ಓದುಗರಿಗೆ ನ್ಯಾಯವಾದಿಗಳಿಗೆ ತತ್ವೈಕ ಪಕ್ಷವುಳ್ಳವರಿಗೆ ಮನವರಿಕೆಯಾಗದಿರದು.

(ಮುಂದುವರಿವುದು.)

# ದೀಕ್ಷಾವಾದ ವಿಮರ್ಶೆ.

(ಲೇಖಕರು:— ಶ್ರೀ. ಸಿದ್ಧವೀರದೇವರು ಹುಬ್ಬಳ್ಳಿ ಹೊಸಮಠ.)

ಧಾರಣ-ದೀಕ್ಷೆಗಳ ವಾದ-ವಿವಾದವು ಜರಗಿ ಬಹುದಿನಗಳು ಕಳೆದವು. ಇಂದಿಗೂ ಜರಗುತ್ತಲೆ ಇದೆ. ಇತ್ತೀಚಿಗೆ ಇದು ವಿಡಂಬನೆಯಾಗಿ ಪರಿಣಮಿಸಿದುದೊಂದು ವಿಷಾದದ ಸಂಗತಿ. ಇದ್ದುದನ್ನು ಮುಚ್ಚಿ ಇಲ್ಲುದನ್ನು ಎತ್ತಿಯಾಡುವ ನಾಲಗೆಯ ಚಾಪಲ್ಯವಾಗಿ ಪರಿಣಮಿಸಿದೆ. ಸುಳ್ಳಿನ ಕಳೆಯನ್ನಿರಿಸಿ ಸತ್ಯದ ಬೆಳೆಯನ್ನು ಕಿತ್ತೆಸೆವ ಬಾಲಿಶತನ ನಡೆದಿದೆ. ಇದು ಯಾರಿಗೂ ನ್ಯಾಯವಾದುದಲ್ಲ. 'ಶಿವಾನುಭವ' ಎಪ್ರಿಲ್ ಮೇ ಸಂಚಿಕೆಗಳಲ್ಲಿ ಪ್ರಕಟವಾದ ಶ್ರೀ. ಮಾ. ನಂ. ನಂಜಪ್ಪನವರ 'ದೀಕ್ಷಾವಾದ'ವು ಇಂತಹ ಮಾರ್ಗದಲ್ಲಿ ಮುಂದುವರಿದುದು ತುಂಬಾ ವ್ಯಸನಕರವು.

ಎಪ್ರಿಲ್ ಸಂಚಿಕೆಯಲ್ಲಿ ಶ್ರೀ. ನಂಜಪ್ಪನವರು:— ವೀರಶೈವರು ವಾಗಾಡಂಬರಕ್ಕೆ ಬೆರಗಾಗದೆ ಕೇವಲ ಸತ್ಯಾನ್ವೇಷಣ ಬುದ್ಧಿಯಿಂದ ಯಾವುದು ಶಾಸ್ತ್ರೀಯ, ಯಾವುದು ಅಶಾಸ್ತ್ರೀಯ......ಯಾವುದು ಸತ್ಯ, ಯಾವುದು ಅಸತ್ಯ ...ಯಾವುದು ಘಟ್ಟಿ, ಯಾವುದು ಪೊಳ್ಳು ಎಂಬ ವಿಚಾರಗಳನ್ನು ನಿರ್ದಾಕ್ಷಿಣ್ಯ ಬುದ್ಧಿಯಿಂದಲೂ ನ್ಯಾಯದೃಷ್ಟಿಯಿಂದಲೂ ಅರಿತು ವೀರಶೈವ ಸಮಾಜದ ಧಾರ್ಮಿಕ ಅಂತಸ್ತನ್ನು ಉತ್ತಮಗೊಳಿಸಲು ಸರ್ವಪ್ರಯತ್ನವನ್ನೂ ಮಾಡಬೇಕೆಂದು ಬಿನ್ನೈಸಿಕೊಂಡು ಈ ಲೇಖನವನ್ನು ಪ್ರಾರಂಭಿಸುತ್ತೇನೆ ಎಂದಂದಿದ್ದಾರೆ.

ಅವರ ಈ ಬಿನ್ನಹದ ಮಾತನ್ನು ಮುಂದು ಮಾಡಿಕೊಂಡು ಈ ಬರಹಕ್ಕೆ ಪ್ರಾರಂಭಿಸಲಾಗಿದೆ. ನಂಜಪ್ಪನವರ ಈ ಧ್ಯೇಯವೇನೊ ಒಳ್ಳೆಯದೆ. ಆದರೆ ಆದರಂತೆ ಎಲ್ಲರೂ ನಡೆದರಲ್ಲವೆ? ಅವರೆ ತಮ್ಮ ಆ ಉಚ್ಚ ಧ್ಯೇಯವನ್ನು ಸಂಪೂರ್ಣ ಮುರಿದು ಮುಂದುವರಿದಿದ್ದಾರೆ. ಇದರಿಂದ ಧಾರ್ಮಿಕ ಅಂತಸ್ತು ಯಾವ ರೀತಿ ಉತ್ತಮಗೊಳ್ಳಬೇಕು? ಸತ್ಯಾಸತ್ಯಗಳನ್ನು ನಿರ್ದಾಕ್ಷಿಣ್ಯ ಬುದ್ಧಿಯಿಂದ ನೋಡಬೇಕೆನ್ನುವವರು ಬರೀ ಅಸತ್ಯವನ್ನೇ ಹೇಳುತ್ತ ಹೋದರೆ ಹೇಗೆ? ಶಾಸ್ತ್ರೀಯವಾದುದನ್ನು

ಬಯಸುವವರು ಎಲ್ಲವನ್ನೂ ಅಶಾಸ್ತ್ರೀಯವಾಗಿ ಬರೆದರೆ ಏನು ಪ್ರಯೋಜನ? ಘಟ್ಟಿಯನ್ನೆ ಅರಸಬೇಕೆನ್ನುವವರು ಟೊಳ್ಳುಗಳನ್ನೆ ತುಂಬುತ್ತ ನಡೆದರೆ ಏನು ಗತಿ? ಎಂಬುದೆ ಒಂದು ಮಹತ್ತರವಾದ ಪ್ರಶ್ನೆ?

ಫೇಬ್ರುವರಿ ಸಂಚಿಕೆಯಲ್ಲಿ ಶ್ರೀ. ಗುರುಮೂರ್ತಿಗಳು ಪ್ರತ್ಯುತ್ತರವನ್ನು ಪ್ರಕಟಿಸಿದ್ದರೂ ನಂಜಪ್ಪನವರು ಅದನ್ನು ಕಂಡೂ ಕಾಣದಂತೆ—

ಗುರುಮೂರ್ತಿಗಳೇ ಮೂರ್ತಿಮತ್ತಾಗಿ ಉತ್ತರ ಕೊಟ್ಟಿದ್ದರೆ... ಅವರು ಒಂದೂ ಮಾತನ್ನು ಆಡಿರುವದಿಲ್ಲ. ಈ ರೀತಿ ಉತ್ತರ ಕೊಡದೆ

ಇತ್ಯಾದಿಯಾಗಿ ನುಡಿದಿದ್ದಾರೆ. ಈ ನುಡಿಗಳು ಸತ್ಯದ ಒರೆಗಲ್ಲಿಗೆ ನಿಲ್ಲುತ್ತವೆಯೆ?

ನೀವು ಈ ವಾದವನ್ನು ಯಾರ ಪರವಾಗಿ·ಬೆಂಬಲವಾಗಿ ಪ್ರಾರಂಭಿಸಿರುವಿರೆಂಬುದನ್ನು ಕೊಂಚ ನೀವೇ ಮೊದಲು ನಿಮ್ಮ ಮನಸ್ಸಿಗೆ ತಂದುಕೊಂಡರೆ, ಆಮೇಲೆ ಅಕ್ಕುಲಯ್ಯನವರು ಶ್ರೀಗುರುಮೂರ್ತಿಗಳವರ ಪರವಾಗಿ ಬಂದುದು ಸಮಂಜಸವೊ ಅಸಮಂಜಸವೊ ನಿಮಗೆ ಹೊಳೆಯುತ್ತದೆ. ಈ ಕಟಕಿಯು ಯಾರಿಗೂ ತರವಲ್ಲ. ಯಾರು ಯಾರ ಪರವಾಗಿ ಬಂದರೇನು? ತತ್ವ ಹೊರಬಿದ್ದರಾಯಿತು.

"ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು." ಎಂಬದನ್ನು ಅಕ್ಕುಲಯ್ಯನವರು ಪಿಂಡಸ್ಥಲಕ್ಕೆ ಉದಹರಿಸಿದ್ದರೆ ಪಿಂಡಜ್ಞಾನಸ್ಥಲಕ್ಕೆಂದು ಅಪಾರ್ಥಮಾಡಿಕೊಂಡು ಅಲ್ಪೋಕ್ತಿಗಳನಾಡುವುದು ಯಾವ ಸೌಜನ್ಯ? ಯಾವ ಪುರಾತನ ನಡೆ?

ನಂಜಪ್ಪನವರುಃ— "ತಾಯಿಯ ಗರ್ಭದಲ್ಲಿರುವ ಶಿಶುವಿಗೆ ಎಂಟನೆಯ ತಿಂಗಳು ಪರಿಪೂರ್ಣವಾದ ಜ್ಞಾನವು ಲಭಿಸುವದೆಂಬುದಕ್ಕೆ ವೀರ ಅಭಿಮನ್ಯುವಿನ ಉದಾಹರಣೆಯೊಂದೇ ಸಾಕಾಗಿದೆ ..... ಇದೇ ರೀತಿಯ ಪ್ರಸಂಗಗಳು ಶ್ರೀ ಚನ್ನಬಸವೇಶ್ವರ, ಛತ್ರಪತಿ ಶಿವಾಜಿ, ನೇಪೋಲಿಯನ್ ಬೋನಾಪಾರ್ಟ ಮುಂತಾದ ಅನೇಕ ಮಹನೀಯರ ಜೀವಿತದಲ್ಲೂ ಸಹ ನಡೆದವೆಂಬಂಶವನ್ನು ಈಗಾಗಲೆ ಶ್ರೀ. ಕ. ಬಸಪ್ಪನವರು ವ್ಯಕ್ತಗೊಳಿಸಿದ್ದಾರೆ.'' ಎಂದು ಬರೆದಿದ್ದಾರೆ ಇದು ಎಲ್ಲರಿಗೂ ಅನ್ವಯಿಸುವದಾದರೆ ಎಲ್ಲರೂ ಅವರಂತೇನೆ ಮಹಾತ್ಮರೇಕಾಗುವದಿಲ್ಲ? ರಾಜ್ಯಸ್ಥಾಪಕರೇಕಾಗುವದಿಲ್ಲ? ಧರ್ಮೋದ್ಧಾರಕರೇಕಾಗುವದಿಲ್ಲ?

ಈ ವಿಚಾರವನ್ನು ಶಾಸ್ತ್ರೀಯವಾಗಿ ಸಿದ್ಧಮಾಡಲು ಹೊರಟು ಮೊದಲು ಗರ್ಭೋಪನಿಷತ್ತಿನ ಸಹಾಯವನ್ನು ಬಯಸಿ ಕೊನೆಗೆ ಶ್ರೀ ನಿಜಗುಣರ ಅನುವಾದದ ಒಂದಂಶದಲ್ಲಿ ಮಾತ್ರ ತೃಪ್ತಿಯನ್ನು ಹೊಂದಿದ್ದಾರೆ. ಆದರೆ ನಂಜಪ್ಪನವರು ಮೂಲ ಗರ್ಭೋಪನಿಷತ್ತನ್ನೇ ಆಮೂಲಾಗ್ರವಾಗಿ ಓದಿದರೆ ಒಳ್ಳೆಯದಾದೀತು ? ತಮ್ಮ ಸಾಧನೆಯಲ್ಲಿ ಸ್ವಲ್ಪ ಸಿಥಿಲಮನೋರಥರಾದಾರು ? ಮೊದಲು ಶಾಸ್ತ್ರೀಯವಾದಕ್ಕೆ ಆರಂಭಿಸಿ— "ಬಸವನೆಂದರೆ ಪಾಪ......" ಎಂಬಂತೆ ಅನಂತರ ಅರ್ಥೋಕ್ತಿಯ ಅಶಾಸ್ತ್ರೀಯ ವಾದದಲ್ಲಿ ಹೆಜ್ಜೆಯನ್ನಿಕ್ಕುವುದು ಯಾವ ಶಾಸ್ತ್ರೀಯ ವಾದವಾದೀತು ಎಂಬುದು ಅವರಿಗೇನೆ ಅರಿಕೆಯಾದೀತು ?

ಅಕ್ಕಲಯ್ಯನವರ ಸಿದ್ಧಾಂತಶಿಖಾಮಣಿಯ ಪ್ರಶ್ನೆಗೆ ನಂಜಪ್ಪನವರು:— "...ಈ ಪ್ರಶ್ನೆಗೆ ಒಬ್ಬ ಸಣ್ಣ ಹುಡುಗನೂ ಉತ್ತರವನ್ನು ಹೇಳಬಲ್ಲವನಾಗಿದ್ದಾನೆ. ಇಂತಹದು ಅಕ್ಕಲಯ್ಯನವರಿಗೆ ಅರ್ಥವಾಗದೆ ಇದ್ದುದಕ್ಕಾಗಿ ವ್ಯಾಕುಲಪಡಬೇಕಾಗಿದೆ." ಎಂದಿದ್ದಾರೆ; ವ್ಯಾಕುಲಗೊಂಡಿದ್ದಾರೆ. ಆದರೆ ಅದೇ ಅಕ್ಕಲಯ್ಯನವರು "ವಿಧದತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ" ಎಂಬ ಶ್ಲೋಕದ ಗತಿಯೇನು ? ಎಂದು ಕೇಳಿದ ಉಳಿದರ್ಥ ಪ್ರಶ್ನೆಗೆ ಉತ್ತರಿಸದೆ ಇರುವದನ್ನು ನೋಡಿದರೆ ಅವರೆ ಹೇಳುವಂತೆ ಒಬ್ಬ ಸಣ್ಣ ಹುಡುಗನು ಹೇಳಬಲ್ಲುದನ್ನೂ ಸಹ ನಂಜಪ್ಪನವರು ಹೇಳಲಾರರೆಂದು ಕಾಣುತ್ತದೆ; ಹೇಳಲಾರದೆ ಹೋಗಿದ್ದಾರೆ. ಇದಕ್ಕಾಗಿ ಎಷ್ಟು ವ್ಯಾಕುಲಗೊಳ್ಳಬೇಕೊ ಅವರೇ ಹೇಳಬೇಕು. ಇಲ್ಲವೆ ಅವರ ಆ ಸಣ್ಣ ಹುಡುಗನೆ ಹೇಳಬೇಕು.

ಗಾರುಡ ಪುರಾಣ ಶ್ಲೋಕಗಳಿಗೂ "ಗರ್ಭಾಷ್ಟಮೇ ಕೃತಾದೀಕ್ಷಾ ಮುಖ್ಯಾ..." ಎಂಬ ಶ್ಲೋಕಕ್ಕೂ ಸರಿಯಾಗಿ ಟೀಕೆಯನ್ನು ಬರೆಯದೆ, ತಮಗನುಕೂಲಿಸುವಂತೆ ಮೇಲಿಂದಮೇಲೆ ತಪ್ಪರ್ಥವನ್ನೆ ಹೇಳುತ್ತ ಹೋದರೆ ಇದಾವ ಶಾಸ್ತ್ರೀಯ ವಾದ ? ಅಲ್ಲದೆ ಪ್ರಸಿದ್ಧವಾದ ಆ 'ಗರ್ಭಾಷ್ಟಮೇ' ಪದಕ್ಕೆ "ಯಾರಿಗಾದರೂ ತಿಳಿಯತಕ್ಕ ಅರ್ಥವೆಂದರೆ ಗರ್ಭದಲ್ಲಿ ಎಂಟನೆಯ ತಿಂಗಳಿನಲಿ" ಎಂದು ಮಾತ್ರವೇ. ಎಂದು ಅಪಾರ್ಥವನ್ನು ಮಾಡುತ್ತ ಹೊರಟರೆ ಸಂಸ್ಕೃತ ಬಲ್ಲ ವಾಚಕ ವೃಂದವಾದರೂ ಏನೆಂದೀತೆಂಬ ಭಯವಾದರೂ ಇರಬೇಡವೆ ? ಇದಾವ ಸತ್ಯಾರ್ಥ ಪ್ರಕಾಶ ?

ನಂಜಪ್ಪನವರು ಜ್ಞಾನಕ್ರಿಯೆಗಳ ಮಾತೆತ್ತಿ ಇದು ಸಣ್ಣ ಹುಡುಗರಿಗೂ ಸಹ ತಿಳಿದ ಮಾತು. ಎಂದು ಹೇಳುತ್ತಾರೆ. ಇವರು ಹೇಳುವದೆಲ್ಲ ಸಣ್ಣ ಹುಡುಗರು ತಿಳಿದಷ್ಟನ್ನೆ. ಆದ್ದರಿಂದ ಇವರು ಹೀಗೆ ಹೇಳುತ್ತಾರೆ. ಜ್ಞಾನಕ್ರಿಯೆಗಳೆರಡು ಉತ್ಪತ್ತ್ಯನಂತರ ಒಂದಾಗಿರುವವೆಂಬುದನ್ನು ಅಕ್ಕುಲಯ್ಯನವರೆ ಸುಸ್ಪಷ್ಟವಾಗಿ ಒಪ್ಪಿದ್ದಾರೆ. ಹೀಗಿದ್ದರೂ ಅದನ್ನು ತಿಳಿದುಕೊಳ್ಳದೆ ಅದನ್ನೆ ಒಂದೆರಡು ಪುಟಲಂಬಿಸಿ ಪ್ರಮಾಣ ಸಹಿತ ಬರೆದಲ್ಲಿ ಯಾವ ಪ್ರಯೋಜನವನ್ನೂ ಕಾಣೆವು. ಅಕ್ಕುಲಯ್ಯನವರು ಹೇಳುವುದು ಉತ್ಪತ್ತಿಸಮಯದಲ್ಲಿ ಮಾತ್ರ ಭಿನ್ನವಾದವುಗಳೆಂದು. ಇದಲ್ಲೆಂದು ಸಿದ್ಧಮಾಡಲು ಯಾರಿಂದಲೂ ಸಾಧ್ಯವಿಲ್ಲ. ಒಂದುವೇಳೆ ಮಾಡಹೊರಟರೆ ನಂಜಪ್ಪನವರೆ ಹೇಳುವಂತೆ ಅದು ಪೊಳ್ಳು ಹೊರ್ತು ಘಟ್ಟಿಯಾಗಲಾರದು. ಅದು ಸೃಷ್ಟಿಯ ಪ್ರಾಕೃತಿಕ ನಿಯಮವೂ ಅಲ್ಲ. ಪ್ರಕೃತಿ ಮೀರಿ ಹೇಳಲು ಯಾರಿಂದ ಸಾಧ್ಯ?

ಇನ್ನು ಮೇ ಸಂಚಿಕೆಯ ಮಾತು. "ಬಸವಣ್ಣ, ಪ್ರಭು, ರೇವಣಸಿದ್ಧ...ಮುಂತಾದವರೆಲ್ಲರೂ ಮೊದಲು ಶೈವರಾಗಿದ್ದು ವೀರಶೈವ ಧರ್ಮವನ್ನು ಅನಂತರ ಅವಲಂಬಿಸಿದುದು ಮಠಗಳಲ್ಲಿ ಓದುವ ಹುಡುಗರಿಗೆಲ್ಲ ಚನ್ನಾಗಿ ತಿಳಿದಿರುವ ಈ ಕಾಲದಲ್ಲಿ. ಎಂದು ನಂಜಪ್ಪನವರ ಹೇಳಿಕೆ ಮತ್ತೆ ಬಂತು ಹುಡುಗರ ಮಾತು. ಇವರು ಯಾವುದನ್ನೆತ್ತಿದರೂ ಹುಡುಗರಿಗೆ ತಿಳಿದ ವಿಚಾರವೆಂದೇ ಪ್ರಾರಂಭಿಸುತ್ತಾರೆ; ಲಂಬಿಸುತ್ತಾರೆ. ಆದರೆ ಹುಡುಗರ ತಿಳುವಳಿಕೆ ಈ ಹಿರಿಯರಿಗಿಲ್ಲದಿರುವುದು ತುಂಬಾ ಶೋಚನೀಯ. ಒಂದ ನಾಡ ಹೋಗಿ ಒಂಬತ್ತನಾಡುವವರೆಲ್ಲರೂ ಹಿರಿಯರೆ?" ಅಸತ್ಯದ ಕೊಂಬನ್ನು ದೀರ್ಘವಾಗಿ ಎಳೆದು ಸತ್ಯದ ಮೈಯನ್ನು ಮುಚ್ಚಲೆಳೆಸುವವರೆಲ್ಲರೂ ಹಿರಿಯರೆ? "ರೇವಣಸಿದ್ಧಾದಿಗಳ ಶರಣಯುಗದಿಂದ ನೋಡಿದರೂ ಕೂಡ ಒಮ್ಮೆ..." ಎಂಬೀ ವಾಕ್ಯವು, ಬಸವ, ಪ್ರಭು, ರೇವಣಸಿದ್ಧ ಇವರನ್ನು ಬಿಟ್ಟು ಎಂಬುದಾಗಿ ಅರ್ಥವನ್ನು ಕೊಡುತ್ತಿದೆಯೆ? ಸರ್ವಸಾಮಾನ್ಯವಾಗಿ ಯುಗದ ಮಾತೆತ್ತಿದ್ದರಿಂದ ಆ ಯುಗದ ಪ್ರಸಿದ್ಧ ವ್ಯಕ್ತಿಗಳ ಉದಾಹರಣೆಯನ್ನು ಉದಹರಿಸಿದರೆ ಇದು ಕಳ್ಳತನ, ಸುಳ್ಳತನವೆ? ಇದು ತಪ್ಪೆ? ಇದು ಪರಿಹಾಸಕರವೆ? ಇದು ವಂಚಕತನವೆ? ಈ ಬೈಗಳಿಗೆ ಔಚಿತ್ಯವಿದೆಯೆ? ಇದು ಪುರಾತನವೆ?

ಧಾರಣ-ದೀಕ್ಷೆಗಳು ಅಭಿನ್ನವಾದ ಏಕೈಕ ಸಂಸ್ಕಾರವೆಂಬುದಕ್ಕೆ ಆದ್ಯರ ಅನೇಕ ವಿಚಾರಗಳನ್ನು ಉದಹರಿಸಬಹುದು, ಎಂದು ನಂಜಪ್ಪನವರು ಆರಂಭಿಸಿ ವಿರೂಪಾಕ್ಷ ಪಂಡಿತಾರಾಧ್ಯರ ಇದೊಂದು ಉದಾಹರಣೆಯನ್ನು ಮಾತ್ರ ಉದಹರಿಸಿದ್ದಾರೆ. ಇದಾದರೂ ಇವರ ಅಭಿಪ್ರಾಯವನ್ನು ಎಷ್ಟರಮಟ್ಟಿಗೆ ಪ್ರತಿಪಾದಿಸುತ್ತದೆಂಬುದನ್ನು ಕೊಂಚ ವಿಮರ್ಶಿಸೋಣ!

"ಬಳಿಕ ತಿಥಿವಾರ ತಾರಾಯೋಗ ಕರಣ ಸ-।
ಮ್ಮಿಳಿತ ಶುಭದಿವಸದೊಳ್ ಶುಭಲಗ್ನದೊಳ್ ಪಡೆದ-।
ಳೊಲವಿನಿಂ "ಶಿವಲಿಂಗಧರೆ"ಯಾದ ಕುವರಿಯಂ ಗಿರಿರಾಜನೆಯ್ದೆ ನೋಡಿ ॥
ನಲಿದು "ತಚ್ಛಿಶುವಿಂಗೆ" "ತಲ್ಲಿಂಗಮಂ" ತನ್ನ ।
ಕುಲಗುರುವಿನಿಂ "ದೀಕ್ಷೆಯಿಂ ಕೊಡಿಸಿ" ಪೆಸರಿಡಲ್ ।
ಬಳೆವುತಿರ್ದಳ್

ಈ ಶ್ಲೋಕವು, ಎಂಟು ವರುಷಕ್ಕೆಂದು ಕಾಲಾವಧಿಯನ್ನು ನಿಷ್ಕರ್ಷವಾಗಿ ಹೇಳದಿದ್ದರೂ ಧಾರಣದೀಕ್ಷೆಗಳು ಭಿನ್ನ ಸಂಸ್ಕಾರಗಳೆಂಬುದನ್ನು ಸುವ್ಯಕ್ತವಾಗಿ ವಚಿಸುತ್ತದೆ. ತಚ್ಛಿಶುವಿಂಗೆ-ತಲ್ಲಿಂಗಮಂ ಈ ಪದಗಳಿಗೆ ಅರ್ಥವೇನೆಂಬುದನ್ನು ನಂಜಪ್ಪನವರು ನಿಟ್ಟಿಸಿಲ್ಲ. ಹುಟ್ಟಿದೊಡನೆ ಬರೀ ಲಿಂಗಧಾರಿಯಾ (ಜಾತಕರ್ಮವಾ)ದ ಮಗುವನ್ನು ತಂದೆಯು ನೋಡಿ ನೋಡಿ ನಲಿಯುತ್ತಿರಲು ನಾಮಕರಣ ದಿನವು (ಅಂದಿನ ಪದ್ಧತಿಯಂತೆ) ಪ್ರಾಪ್ತವಾಗಿದೆ. ಆ ಶುಭದಿನದ ಶುಭಲಗ್ನದಲ್ಲಿ ಪುನಃ ಅದೇ ಶಿಶುವಿಗೆ ಅದೇ ಲಿಂಗವನ್ನು ಗುರುದೀಕ್ಷೆಯಿಂದ ಕೊಡಿಸಿ ಹೆಸರಿಟ್ಟರೆಂಬುದೆ ಅದರ ನಿಜಾರ್ಥವು. ಹೀಗಿದ್ದರೂ ಲಿಂಗಧಾರಿಯಾದ ಎಂಬ ಮೂಲಪದವನ್ನು ಬಿಟ್ಟು ಬಿಟ್ಟು ತೇಲಿಸಿ ಅರ್ಥ ಮಾಡಿದರೇನು ಪ್ರಯೋಜನ? 'ತಚ್ಛಿಶುವಿಂಗೆ' ಎಂಬ ಭಿನ್ನ ಸಂಸ್ಕಾರಸೂಚಕ ಮೂಲ ಪದವನ್ನು ಕಣ್ಮರೆ ಮಾಡಹೊರಟರೆ ಹೇಗೆ? ಅಲ್ಲದೆ ಅಭಿನ್ನ ಸಂಸ್ಕಾರಗಳೆಂದು ಗ್ರಂಥಕಾರನ ಅಭಿಪ್ರಾಯವಿದ್ದಿದ್ದರೆ "ಶಿವಲಿಂಗಧರೆಯಾದ ತಚ್ಛಿಶುವಿಂಗೆ ತಲ್ಲಿಂಗಮಂ ಕುಲಗುರುವಿನಿಂ ದೀಕ್ಷೆಯಿಂಕೊಡಿಸಿ" ಎಂದು ದೀಕ್ಷೆಪದ ಇರುತ್ತಿರಲಿಕ್ಕೂ ಶಿವಲಿಂಗಧರೆಯಾದ ಈ ವಿಶೇಷಣವನ್ನು ಆದೆಂದಿಗೂ ಕೊಡುತ್ತಿರಲಿಲ್ಲ.

ಲೋಕಮಾತೆಯಾದ ಗಿರಿಜೆಗೂ ಸಹ ಲಿಂಗಧಾರಣವಾದ ಮೇಲೆ ಕೆಲವು ದಿನಗಳು ಕಳೆದನಂತರ ಅದೇ ಶಿಶುವಿಗೆ ಅದೇ ಲಿಂಗವನ್ನು ದೀಕ್ಷೆಯಿಂದ ಕೊಡಿಸಲಾಗಿದೆ. ಇದರಿಂದ ಜನನ ದಿನ ಕಟ್ಟಿದ ಲಿಂಗವನ್ನೇ ದೀಕ್ಷೆಯಲ್ಲಿ ಉಪಯೋಗಿಸಬೇಕೆಂಬ ವಿಷಯವು ವ್ಯಕ್ತವಾಗುತ್ತದೆ. ಈ ವಿಚಾರವನ್ನು ಶ್ರೀ ಗುರುಮೂರ್ತಿದೇವರು ಫೇಬ್ರುವರಿ ಸಂಚಿಕೆಯ ಪ್ರತ್ಯುತ್ತರದಲ್ಲಿ ವಿಶದವಾಗಿ ಪ್ರತಿಪಾದಿಸಿದ್ದಾರೆ. ಗಿರಿಜೆಯು ಲೋಕಮಾತೆಯೂ ಅಲೌಕಿಕ ಶಕ್ತಿಯುಳ್ಳವಳೂ ಆದ್ದರಿಂದ ಅವಳಿಗೆ ಹನ್ನೊಂದನೆಯ ದಿನಕ್ಕೇನೆ (ನಾಮಕರಣ ದಿನಕ್ಕೇನೆ) ಸಂಪೂರ್ಣ ಜ್ಞಾನವಳವಟ್ಟಿರಬಹುದು. ಅದರಿಂದ ನಾಮಕರಣದ ಶುಭದಿನದಲ್ಲಿ ಶಿವದೀಕ್ಷೆಯಾಗಿದೆ. ಈಗಲೂ ಯಾರಾದರೂ ಗಿರಿಜೆಯಂತೆ ಲೋಕೋತ್ತರ ವ್ಯಕ್ತಿಗಳಾಗಿ ಶಿಶುವಶೆಯಲ್ಲಿಯೆ ಸಂಪೂರ್ಣ ಜ್ಞಾನಿಗಳಾಗಿದ್ದರೆ ನಾಮಕರಣ ದಿನವೆ ದೀಕ್ಷೆಯನ್ನು ಮಾಡಬಹುದು. ಆದರೆ ನಂಜಪ್ಪನವರು ಹೇಳುವಂತೆ ಈ ಶ್ಲೋಕದಲ್ಲಿ ಧಾರಣ-ದೀಕ್ಷೆಗಳು ಅಭಿನ್ನವಾದ ಏಕೈಕ ಸಂಸ್ಕಾರಗಳೆಂದು ಆದೆಂದಿಗೂ ಅರ್ಥವಾಗುವದಿಲ್ಲ. ಇದರಲ್ಲಿ ಲಿಂಗಧಾರಣೆಗೂ ಶಿವದೀಕ್ಷೆಗೂ ಸ್ವಲ್ಪ ದಿನಗಳಾದರೂ ಅಂತರವು ಸುಸ್ಪಷ್ಟವಾಗಿ ತೋರುತ್ತದೆ. ಅಲ್ಲದೆ ನಂಜಪ್ಪನವರಂತೆ ಅಭಿನ್ನವಾದ ಏಕೈಕ ಸಂಸ್ಕಾರಗಳೆಂದು ಹೇಳುವದಾದರೆ ಲಿಂಗಧಾರಣ-ಶಿವದೀಕ್ಷೆ ಈ ಎರಡು ಪದಗಳಿಗೆ ವೈಯರ್ಥವುಂಟಾಗುತ್ತದೆ. ಇದನ್ನೆಲ್ಲ ನಂಜಪ್ಪನವರು ನಿಧಾನಿಸಿ ಚನ್ನಾಗಿ ವಿಚಾರಿಸಿ ನೋಡಬೇಕು.

ಇದಿಷ್ಟು ದೀಕ್ಷಾವಾದದ ವಿಷಯ ವಿಮರ್ಶೆ. ಇದರ ಮುಂದೆ ವೈಯಕ್ತಿಕವಾದ ವ್ಯರ್ಥಕಟು ಚರ್ಚೆಯಿದೆ. ಅದು ಇಲ್ಲಿ ವಿಷಯವಲ್ಲವಾದ್ದರಿಂದ ಅದರ ವಿಮರ್ಶೆ ಇಲ್ಲಿ ಅನಾವಶ್ಯಕ. ಕಳೆದ ಜೂನ್ ಸಂಚಿಕೆಯಲ್ಲಿ ಅಕ್ಕುಲಯ್ಯನವರು ಈ ವೈಯಕ್ತಿಕ ಕಟು ಟೀಕೆಯನ್ನು ಮಾನಸಿಕ ಮಾಡಿ ಬಿಟ್ಟು, ಈ ಜಯಪತ್ರವನ್ನು ನಂಜಪ್ಪನವರಿಗೇನೆ ಬಿಟ್ಟುಕೊಟ್ಟು, ತಾಳ್ಮೆಯಿಂದ ಮುಖ್ಯ ವಿಷಯ ವಿಚಾರದತ್ತ ಮಾತ್ರ ಹೊರಳಿ ಉತ್ತರವಿತ್ತು "ಮಾತಿನಲ್ಲಿ ಸೋತು ಹೋದವನೆ ಜಾಣ" ಎಂಬ ನಾಣ್ಣುಡಿಗೆ ಮೊದಲು ಮನ್ನಣೆಯನ್ನಿತ್ತುದು ತುಂಬಾ ಪ್ರಶಂಸನೀಯವಾದುದು. ಇದರಿಂದ ಬಿರುನುಡಿಗಳು ಕಡಿಮೆಯಾಗಿ ಮುಖ್ಯ ವಿಷಯದ ಚರ್ಚೆ ಬೇಗ ಬೇಗ ಮುಂದುವರಿಯಲು ಒಂದು ದೊಡ್ಡ ಅನು

ಕೂಲವೊದಗಿದಂತಾಯಿತು. ಲೇಖದ ಕೊನೆಗೆ ಅಕ್ಕುಲಯ್ಯನವರು ನಂಜಪ್ಪನವರನ್ನು ಕುರಿತು ಮಾಡಿದ ಐದು ಪ್ರಶ್ನೆಗಳು ಸೂಕ್ತವಾಗಿವೆ. ಶ್ರೀ ನಂಜಪ್ಪನವರು ಆ ಐದು ಪ್ರಶ್ನಗಳಿಗೆ ಪರಿಪಕ್ವ ಲೇಖನದಿಂದ ಪರಿ ಶುದ್ಧವಾಗಿ ಉತ್ತರವಿತ್ತಾರೆಂದು ನಂಬಿ ನಿಲ್ಲಿಸಲಾಗಿದೆ.

"ಸತ್ಯವೆ ಸ್ವರ್ಗ."

---

## ವೀರಶೈವ ಧರ್ಮದ ವೀರಸಂದೇಶವು.

(ಶ್ರೀ ಎಲ್. ಜಿ. ಹಿರೇಮಠ ಎಂ. ಎ. ಬಿ. ಟಿ.)

ವೀರಶೈವ ಧರ್ಮವು ವಿಶ್ವಧರ್ಮದ ತತ್ವಗಳನ್ನು ಒಳಗೊಂಡಿದೆ ಯೆಂದು ಅನ್ನುವುದನ್ನು ಕೇಳುತ್ತೇವೆ. ಆದರೂ ವೀರಶೈವ ಧರ್ಮ ವನ್ನು ಪುನರುಜ್ಜೀವನಗೊಳಿಸಿ ಪ್ರಸಾರಮಾಡಿ ಕರ್ನಾಟಕದಲ್ಲೆಲ್ಲ ಕೀರ್ತಿ ವೆತ್ತ ಬಸವಣ್ಣನವರ ಹೆಸರು ಉತ್ತರ ಹಿಂದುಸ್ತಾನದ ಜನರಿಗೆ ಅಪ ರಚಿತವಾಗಿ ಉಳಿದಿದೆ. ವೀರಶೈವ ಧರ್ಮದ ಸಂದೇಶವು ಕನ್ನಡದಲ್ಲಿದೆ ಯಾದ್ದರಿಂದ ಕರ್ನಾಟಕವನ್ನು ಬಿಟ್ಟು ಹೊರಗೆ ಹೋಗಿರಲಿಕ್ಕಿಲ್ಲ ಅಶೋಕನಂತಹ ಅರಸರು ಅದರ ಪ್ರಸಾರಕಾರ್ಯವನ್ನು ಕೈಕೊಳ್ಳಲಿಲ್ಲ ವಾದ್ದರಿಂದ ಅದು ಇಲ್ಲಿಯೇ ಉಳಿದಿರಬಹುದು. ಅದು ಏನೇ ಇರಲಿ ವೀರಶೈವ ಧರ್ಮವು ವಿಶ್ವಧರ್ಮವಾಗಬಲ್ಲ ಯೋಗ್ಯತೆಯುಳ್ಳದ್ದು ಇದೆಯೋ ಇಲ್ಲವೋ ಎಂಬ ಚರ್ಚೆಯ ಗೊಡವೆಗೆ ಹೋಗದೆ ಅದರ ಸಂದೇಶವಾ ದರೂ ಯಾವುದು ಎಂಬುದನ್ನು ತಿಳಿದುಕೊಳ್ಳುವಾ.

ಜೀವನದಲ್ಲಿ ಸದ್ಗತಿಯನ್ನು ಹೊಂದಬೇಕಾದರೆ ಐಹಿಕ ಸುಖೋಪ ಭೋಗಗಳನ್ನು ಸಂಪೂರ್ಣತ್ಯಜಿಸುವ ಅವಶ್ಯಕತೆಯಿಲ್ಲವೆಂದು ಶಿವಶರ ಣರು ಸಾರಿದ್ದು ಗಮನಾರ್ಹವಾಗಿದೆ. "ಪುನರ್ಜನ್ಮವೆಲ್ಲಿದೆ? ಇರುವ ವರೆಗೆ ಐಹಿಕ ಸುಖೋಪಭೋಗಗಳನ್ನು ಭೋಗಿಸೋಣ" ಎಂದು ಚಾರ್ವಾಕರೂ ಉಮರಖಯ್ಯಾಂನಂಥವರೂ ಹೇಳಿರುವರು. ಮತ್ತೆ ಕೆಲವರು "ದೇಹವು ನಶ್ವರವಿದೆ. ಐಹಿಕ ಸುಖಗಳು ಕ್ಷಣಿಕವಾದವು

ಗಳು. ಅವನ್ನು ಸೇವಿಸುವಾಗ ಅವು ಅಮೃತದಂತೆ ತೋರಿದರೂ ಕೊನೆಗೆ ಅವು ವಿಷವಾಗಿ ಪರಿಣಮಿಸುವವು. ಆದ್ದರಿಂದ ಇಂದ್ರಿಯಗಳನ್ನು ನಿಗ್ರಹಿಸಿ ಮೋಕ್ಷವನ್ನು ಪಡೆಯಬೇಕು '' ಎಂದು ಹೇಳಿರುವರು. ಇಂದ್ರಿಯಗಳಲ್ಲಿ ದೇವದತ್ತ ಶಕ್ತಿ ಇರುವುದರಿಂದ ಅವುಗಳನ್ನು ನಿಗ್ರಹಿಸಿಗೆಲ್ಲುವುದಕ್ಕಿಂತಲೂ ಅವುಗಳನ್ನು ಈಶ್ವರಾರ್ಪಣಬುದ್ಧಿಯಿಂದ ಸರಿಯಾದ ಕಾರ್ಯಗಳಿಗೆ ಹಚ್ಚಿ ಗೆಲ್ಲುವದು ಮೇಲೆಂದು ಶಿವಶರಣರು ಹೇಳಿರುವರು. ರಾಜಯೋಗದಿಂದ ಮನಸ್ಸನ್ನು ನಿಗ್ರಹಿಸುವದು ಸ್ವಲ್ಪ ಜನರಿಂದಾಗಬಹುದು; ಆದರೆ ಕರ್ಮಯೋಗದಿಂದ ಮನಸ್ಸನ್ನು ಗೆಲ್ಲುವದು ಬಹು ಜನರಿಗೆ ಸಾಧ್ಯವಿದೆ. ಕರ್ಮಯೋಗವನ್ನೇ 'ಕಾಯಕವೇ ಕೈಲಾಸ'ವೆಂಬ ತತ್ವದಲ್ಲಿ ಸಾರಿ ಶಿವಶರಣರು ಅದನ್ನು ಆಚರಣೆಯಲ್ಲಿ ತಂದರು. ಬಹು ಜನರು ಆಚರಣೆಯಲ್ಲಿ ತರಲಿಕ್ಕೆ ಸಾಧ್ಯವಾದ ಇಂಥ ತತ್ವಗಳನ್ನು ವೀರಶೈವ ಧರ್ಮವು ಒಳಗೊಂಡಿರುವದರಿಂದ ಅದು ಬರಿಯ ವಿಚಾರಧರ್ಮ ( *Theoretical Religion* ) ವಾಗಿರದೆ ಆಚಾರಧರ್ಮ (*Praectial Religion*)ವಾಗಿದೆಯೆಂದು ಅನ್ನಬಹುದು.

ವೇದ ಬಾಹಿರರಾದ ಶೂದ್ರರನ್ನೂ ಸ್ತ್ರೀಯರನ್ನೂ ವೀರಶೈವ ಧರ್ಮವು ಉದ್ಧರಿಸಿತು. ವಿದ್ಯೆ ವಿನಯಗಳಿಂದ ಕೂಡಿದ ಬ್ರಾಹ್ಮಣನೂ, ಚಾಂಡಾಲನೂ, ಮತ್ತು ಆಕಳು, ಆನೆ, ನಾಯಿ ಮೊದಲಾದ ಜೀವಿಗಳೆಲ್ಲ ಸಮ ಎಂದು ತಿಳಿಯತಕ್ಕದ್ದೆಂದು ಭಗವದ್ಗೀತೆಯು ಬೋಧಿಸುತ್ತದೆ. ಆದರೂ ನಿತ್ಯಜೀವನದಲ್ಲಿ ಬಸವಣ್ಣನವರ ಕಾಲಕ್ಕೆ ಅಸ್ಪೃಶ್ಯತೆಯು ಇದ್ದೇ ಇತ್ತು. ಬಸವಣ್ಣನವರು ಮಾತ್ರ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದ ಶಿವಶರಣರು ತಮಗಿಂತಲೂ ಹಿರಿಯರೆಂದು--ಯೋಗ್ಯತೆಯಲ್ಲಿ ಹಿರಿಯರೆಂದು--ಸಾರಿ ಅವರನ್ನು ಗೌರವಿಸಿದರು.

" ನಸ್ತ್ರೀ ಸ್ವಾತಂತ್ರ್ಯಮರ್ಹತಿ " ಎಂದು ವೈದಿಕಧರ್ಮದವರು ಹೆಣ್ಣುಮಕ್ಕಳ ಸ್ವಾತಂತ್ರ್ಯವನ್ನು ಕಸಿದುಕೊಂಡರು. ಹೆಣ್ಣುಮಕ್ಕಳು ತಮ್ಮ ಗಂಡಂದಿರನ್ನು ದೇವರೆಂದು ಭಾವಿಸಿದರಾಯಿತು. ಅವರಿಗೆ ಬೇರೆ ದೇವರ ಚಿಂತನೆಯು ಬೇಡವೇ ಬೇಡವೆಂಬ ಭಾವನೆಯು ಜನರಲ್ಲಿ ಬೇರೂರಿತ್ತು. ಆದರೆ ಬಸವಣ್ಣನವರ ಕಾಲದಲ್ಲಿ ಹೆಣ್ಣುಮಕ್ಕಳಿಗೆ ಧಾರ್ಮಿಕ ಜೀವನದಲ್ಲಿ ಸಂಪೂರ್ಣಸ್ವಾತಂತ್ರ್ಯವು ದೊರೆತದ್ದರಿಂದ(ಅವ

ರಿಗೂ ಲಿಂಗಧಾರಣೆ ಮೊದಲಾದ ಸಂಸ್ಕಾರಗಳನ್ನು ಕೊಟ್ಟಿದ್ದರಿಂದ) ಅನೇಕ ಉಜ್ವಲ ಶಿವಶರಣೆಯರು ತಲೆದೋರಿದರು. ಮಹದೇವಿಯಕ್ಕ ನಂತಹ ಶರಣೆಗೆ ಅನುಭವ ಮಂಟಪದಲ್ಲಿ ಉಚ್ಚವಾದ ಸ್ಥಾನವಿತ್ತು. ಆತ್ಮೋನ್ನತಿಗಾಗಿ ತನ್ನ ಗಂಡನನ್ನು ಕೂಡ ಬಿಟ್ಟ ಆ ವೀರವಿರಾಗಿ ನಿಯ ಆಧ್ಯಾತ್ಮಿಕ ನಿಲವನ್ನು ಕಂಡು ಜ್ಞಾನಮೂರ್ತಿಯಾದ ಅಲ್ಲಮ ಪ್ರಭುವೂ ಕೂಡ ಅವಳಿಗೆ ನಮೋ ನಮೋ ಎಂದನು. ಮೋಳಿಗೆಯ ಮಾರಯ್ಯ, ಆಯ್ದಕ್ಕಿಮಾರಯ್ಯ, ಹಡಪದ ಅಪ್ಪಣ್ಣ ಮೊದಲಾದವರ ಧರ್ಮಪತ್ನಿಯರು ಸಾಮಾನ್ಯರಲ್ಲ. ನಿಷ್ಠೆಯಲ್ಲಿ ತಮ್ಮ ಗಂಡಂದಿರನ್ನು ಮೀರಿದವರು; ಪ್ರಸಂಗಪೊದಗಿದಾಗ್ಗೆ ತಮ್ಮ ಗಂಡಂದಿರ ತಪ್ಪು ತಿಳಿ ವಳಿಕೆಗಳನ್ನು ಎತ್ತಿಹಿಡಿದು ಅವನ್ನು ಹೋಗಲಾಡಿಸಿದರು. ಹೆಣ್ಣು ಮಕ್ಕಳು ಈ ರೀತಿ ತಮ್ಮ ತಮ್ಮ ಮನೆಗಳನ್ನೂ ಅನುಭವ ಮಂಟಪ ವನ್ನೂ ಬೆಳಗಿದ್ದನ್ನು ಪರಿಶೀಲಿಸಿದರೆ ಆಗ ವೀರಶೈವ ಧರ್ಮವು ಅವರಿಗೆ ಉಚ್ಚ ಸ್ಥಾನವನ್ನು ಕೊಟ್ಟಿದ್ದು ನಮ್ಮ ನಿದರ್ಶನಕ್ಕೆ ಬರುತ್ತದೆ.

ಬೇರೆ ಬೇರೆ ಕಾಯಕಗಳನ್ನು ಮಾಡುತ್ತಿದ್ದ ವೀರಶೈವರೆಲ್ಲರೂ ಸಮಾನರೆಂದು ತಿಳಿದುಕೊಂಡು ಶಿವಶರಣರು ಅದರಂತೆ ಆಚರಿಸಿದ್ದು ಮಹತ್ವದ್ದಾಗಿದೆ. ವೈದಿಕ ಧರ್ಮದವರು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳನ್ನು ನಿರ್ಮಿಸಿ ಒಂದು ವರ್ಣದವರು ಉಚ್ಚ ಮತ್ತೊಂದು ವರ್ಣದವರು ನೀಚರೆಂಬ ಭಾವನೆಯನ್ನು ಜನರಲ್ಲಿ ಬೇರೂ ರಿದ್ದರು. ವೀರಶೈವ ಧರ್ಮವು ಎಲ್ಲ ಕಾಯಕದವರಿಗೂ ಸಮಾನ ಯೋಗ್ಯತೆಯನ್ನು ಕೊಟ್ಟಿತು. ಬಿಜ್ಜಳನ ಮಂತ್ರಿಯಾದ ಬಸವಣ್ಣನೂ, ಅಗಸನ ಕಾಯಕವನ್ನು ಮಾಡುವ (ಮಡಿವಳ) ಮಾಚಿದೇವನೂ, ಅಂಬಿ ಗರ ಚೌಡಯ್ಯನೂ, ಕ್ಷೌರವನ್ನು ಮಾಡುವ ಹಡಪದ ಅಪ್ಪಣ್ಣನೂ, ಪಾದರಕ್ಷೆಗಳನ್ನು ಮಾಡುವ ಕಾಯಕದ ಹರಳಯ್ಯನೂ – ಇವರೆಲ್ಲರೂ ಸಮಾನಸ್ಕಂಧರಾಗಿ ವರ್ತಿಸಿದರು. ಕಾಯಕದಿಂದಲೇ ಕೈಲಾಸವೆಂದು ಶರಣರು ಸಾರಿದರು. ಕಾಯಕವನ್ನು ಕೈಕೊಳ್ಳದೆ ಬರಿಯ ಜಪತಪ ವ್ರತೋಪವಾಸಗಳಲ್ಲಿ ವೇಳೆಯನ್ನು ಕಳೆದರೆ ಸದ್ಗತಿಯಾಗದೆಂದು ಅವರ ನಂಬುಗೆ.

ಕಾಯಕದಿಂದ ಬಂದ ಹಣವನ್ನು ಬರಿಯ ಸುಖೋಪಭೋಗಕ್ಕೆ ವಿನಿಯೋಗಿಸದೆ ಸಮಾಜಸೇವಾಸಕ್ತರಾದ ಜಂಗಮರಿಗೆ ಅರ್ಪಿಸಬೇ

ಕೆಂದು ಶಿವಶರಣರು ಬೋಧಿಸಿದರು. ಬಸವಣ್ಣನವರು ಮಂತ್ರಿಯ ಕಾಯಕದಿಂದ ಬಂದ ಹಣದಿಂದ ಜಂಗಮಾರಾಧನೆಯನ್ನು ಮಾಡಿದರೆ ಮೋಳಿಗೆಯ ಮಾರಯ್ಯನು ಕಟ್ಟಿಗೆ ಮಾರಿ ಬಂದ ಹಣದಿಂದ ದಾಸೋಹ ನಡೆಸುತ್ತಿದ್ದನು. ಈ ಪ್ರಕಾರ ಕಾಯಕವನ್ನು ಸವಿಸಿ ಕಾಯಕಮಾಡಿ ಸಮಾಜಸೇವೆ ಮಾಡಬೇಕೆಂಬುದು ವೀರಶೈವ ಧರ್ಮದ ಸಂದೇಶ.

ಶಿವಶರಣರು ಆಚರಿಸಿದ ಈ ತತ್ವಗಳೆಲ್ಲ ಉದಾತ್ತವಾಗಿವೆಯೆಂದು ಎಲ್ಲರೂ ಒಪ್ಪುವರು. ತಮ್ಮ ತತ್ವಗಳು ಇಷ್ಟು ಉದಾತ್ತವಾದವುಗಳೆಂದು ಈಗಿನ ವೀರಶೈವರು ಹೆಮ್ಮೆ ಪಡಬಹುದು. ಆದರೆ ಆ ತತ್ವಗಳನ್ನು ತಾವು ಆಚರಿಸುತ್ತಿರುವರೋ ಇಲ್ಲವೋ ವಿಚಾರಿಸಬೇಕು. ತಮ್ಮೊಳಗೆ ನೂರೆಂಟು ಒಳಪಂಗಡಗಳನ್ನು ಕಲ್ಪಿಸಿಕೊಂಡು ಒಂದು ಪಂಗಡದವರು ಮತ್ತೊಂದು ಪಂಗಡದವರೊಡನೆ ಊಟ, ಶರೀರಸಂಬಂಧ ಮೊದಲಾದವುಗಳನ್ನು ಮಾಡದೆ ಇರುವ ಈಗಿನ ವೀರಶೈವರು ತಾವು ಬಸವಣ್ಣನವರ ಅನುಯಾಯಿಗಳೆಂದು ಹೇಳಿಕೊಳ್ಳಲಿಕ್ಕೆ ಹೇಗೆ ಯೋಗ್ಯರಾದಾರು? ಕಾಯಕಕ್ಕೆ ಆಗಿದ್ದ ಮಹತ್ವ ಈಗೆಲ್ಲಿ ಉಳಿದಿದೆ? ಈಗಿನ ವೀರಶೈವರಲ್ಲಿ ಓಜಸ್ವಿಗಳಾದ ಶರಣರ ಸ್ವಾವಲಂಬನ, ಸ್ವಾಭಿಮಾನ, ಸತ್ಯತೆ, ನ್ಯಾಯನಿಷ್ಠುರತೆ ಮೊದಲಾದವುಗಳ ಲವಲೇಶವಾದರೂ ಕಂಡು ಬರುವದಿಲ್ಲ. ಆದ್ದರಿಂದ ವೀರಶೈವರ ಆರ್ಥಿಕ ಮತ್ತು ಆಧ್ಯಾತ್ಮಿಕ ಉನ್ನತಿಯಾಗಬೇಕಾದರೆ ಅವರು ಶಿವಶರಣರ ದಿವ್ಯಸಂದೇಶವನ್ನು ಕಿವಿಗೊಟ್ಟು ಕೇಳಿ ಮನಮುಟ್ಟಿ ಆಚರಿಸಬೇಕು. ಅದಾವ ಸಂದೇಶ?

''ಬಾಳು ಕೀಳೆಂದು ಹಳಿಯಬೇಡಿರಿ. ಹೊನ್ನು ಹೆಣ್ಣು ಮಣ್ಣುಗಳು ಮಾಯೆಯೆಂದು ತಿಳಿಯಬೇಡಿರಿ. ಮನದ ಅಳಿಯಾಸೆಯೇ ಮಾಯೆ: ಅದನ್ನು ಕಳೆಯಿರಿ. ಕಾಯಕದಲ್ಲಿ ನಿರತರಾಗಿರಿ. ಅದರಿಂದ ಬಂದ ಹಣದ ಅಲ್ಪ ಭಾಗವನ್ನಾದರೂ ಸಮಾಜಕ್ಕೆ ಸಲ್ಲಿಸಿರಿ. ಸತ್ಯಶೀಲರಾಗಿರಿ; ನ್ಯಾಯನಿಷ್ಠುರರಾಗಿರಿ; ಪರೋಪಕಾರಿಗಳಾಗಿರಿ; ವಿನಯಶಾಲಿಗಳಾಗಿರಿ. ತೇಜಸ್ವಿಗಳಾಗಿ ಬಾಳಿ ಜಗತ್ತಿಗೆ ಮಾರ್ಗದರ್ಶಕರಾಗಿರಿ." ಇದೇ ವೀರಶೈವ ಧರ್ಮದ ವೀರ ಸಂದೇಶವು.

# ಬಸವೇಶ್ವರನ ಚರಿತ್ರೆ.

(ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್‌ಎಲ್ ಬಿ. ವಿಜಾಪುರ)

[ಲೇಖಾಂಕ ೧೧]

---

ನಾವು ಹಿಂದಿನ ಲೇಖದಲ್ಲಿ ರೇವಣಸಿದ್ಧೇಶ್ವರನು ಬಿಜ್ಜಳನ ಆಳಿಕೆಯ ಆರಂಭಕಾಲದಲ್ಲಿ ಅನೇಕ ಮಹತ್ವದ ಕೃತ್ಯಗಳನ್ನೆಸಗಿ ಮುಂದೆ ಅವನ ಆಸ್ಥಾನದಿಂದ ತೊಲಗಿ ಬೇರೆ ಕಡೆಗೆ ಪ್ರವಾಸಕ್ಕೆ ಹೋಗಿರಬೇಕೆಂತಲೂ ಅವನಿಲ್ಲದ ಕಾಲದಲ್ಲಿ ಬಸವೇಶ್ವರನು ತರ್ದವಾಡಿ ನಾಡಿನ ರಾಜಧಾನೀ ಪಟ್ಟಣವಾದ ಮಂಗಳವಾಡಕ್ಕೆ ಬಂದು ಅಲ್ಲಿಯ ರಾಜನಲ್ಲಿ ಒಂದು ನೌಕರಿಯನ್ನು ಪಡೆದು ಪ್ರಸಿದ್ಧಿಗೆ ಬಂದಿರಬೇಕೆಂತಲೂ ಉಲ್ಲೇಖಿಸಿದ್ದೇವೆ. ಇದರಿಂದ ರೇವಣಸಿದ್ಧನಿಗೂ ಬಸವೇಶ್ವರನಿಗೂ ಪ್ರತ್ಯಕ್ಷ ಪರಿಚಯವು ಪರಸ್ಪರರಿಗೆ ಇದ್ದಿರಲಿಕ್ಕಿಲ್ಲೆಂಬ ಅನುಮಾನವು ಉಂಟಾಗುತ್ತದೆ. ಆದ್ದರಿಂದಲೇ ಅವರ ಚರಿತ್ರೆಗಳಲ್ಲಿ ಪರಸ್ಪರ ಉಲ್ಲೇಖಗಳು ಬಂದಿರುವದಿಲ್ಲೆಂದು ನಮಗೆ ತೋರುತ್ತದೆ. ಆದರೆ ಇಷ್ಟರಿಂದಲೇ ಈ ಉಭಯುತರು ಪರಸ್ಪರ ವಿರೋಧಿಗಳಾಗಿದ್ದರೆಂದು ಹೇಳಲಿಕ್ಕೆ ಬರಲಾರದು. ಈ ವಿಷಯುವನ್ನು ಕುರಿತು ನಾವು ಸವಿಸ್ತಾರವಾಗಿ ಹಿಂದಿನ ಲೇಖದಲ್ಲಿ ವಿವೇಚಿಸಿದ್ದೇವೆ.

## ರೇವಣಸಿದ್ಧನ ಧಾರ್ಮಿಕ ಚಳವಳಿಗಳು.

ರೇವಣಸಿದ್ಧನು ಬಿಜ್ಜಳನ ಆಸ್ಥಾನದಲ್ಲಿ ಎಷ್ಟು ವರ್ಷಗಳ ವರೆಗೆ ಕಾಲಕಳೆದನೆಂಬುದು ನಿಶ್ಚಿತವಾಗಿ ಹೇಳಲಿಕ್ಕೆ ಬರಲಾರದು. ಆದರೆ ಅವನು ಅಲ್ಲಿ ಬಹಳ ವರ್ಷಕಾಲ ಕಳೆದಿರಬೇಕೆಂದು ತೋರುತ್ತದೆ. ಅವನು ಅನೇಕ ವರ್ಷಗಳ ವರೆಗೆ ಮಂಗಳವಾಡನ್ನು ತನ್ನ ಮುಖ್ಯಸ್ಥಾನವನ್ನಾಗಿ ಮಾಡಿಕೊಂಡು ಉತ್ತರಕ್ಕೆ ಈಗಿನ ಸಾತಾರಾ ಜಿಲ್ಲೆಯ ಮಧ್ಯಭಾಗದಿಂದ ದಕ್ಷಿಣಕ್ಕೆ ಹಾವೇರೀ ತಾಲೂಕು ಮತ್ತು ಪೂರ್ವಕ್ಕೆ ವಿಜಾಪುರ ಜಿಲ್ಲೆಯ ಪೂರ್ವಮೇರೆಯಿಂದ ಪಶ್ಚಿಮಕ್ಕೆ ಕೊಲ್ಲಾಪುರ ಪಟ್ಟಣ ಇವುಗಳ ಮಧ್ಯ ಪ್ರದೇಶದಲ್ಲಿ ಯಾವಾಗಲೂ ಸಂಚರಿಸುತ್ತ ಒಂದು ದೊಡ್ಡ ಧಾರ್ಮಿಕ ಕ್ರಾಂತಿಯನ್ನೆಸಗಿದನೆಂದು ನಮಗೆ ತೋರುತ್ತದೆ.

ಯಾಕಂದರೆ ಈ ಭಾಗದಲ್ಲೆಲ್ಲ ಅವನ ಹೆಸರಿನ ದೇವಾಲಯಗಳೂ ಪುಣ್ಯ ಕ್ಷೇತ್ರಗಳೂ ಅನೇಕವಾಗಿ ದೊರೆಯುತ್ತವೆ. ಅವನು ಈ ಮಧ್ಯದಲ್ಲಿ ಚೋಳ ರಾಜನ ರಾಜಧಾನಿಯಾದ ಕಾಂಚೀಪುರಕ್ಕೆ ಹೋಗಿರಬೇಕು. ಆಗ ಅವನು ಅಲ್ಲಿ ಅನೇಕ ಪವಾಡಗಳನ್ನು ಮಾಡಿ ರಾಜನ ಮಗಳನ್ನು ಮದುವೆಯಾಗಿ ಪುನಃ ಮಂಗಳವಾಡಕ್ಕೆ ಬಂದು ವಾಸಮಾಡಿದನು. ಅವನು ಅಲ್ಲಿ ಇದ್ದಾಗ್ಗೆಯೇ ಅವನಿಗೆ ರುದ್ರಮುನಿಯು ಜನಿಸಿದನು. ಈ ಎಲ್ಲ ಸಂಗತಿಗಳನ್ನು ನಾವು ಲಕ್ಷಿಸಿದಲ್ಲಿ ರೇವಣಸಿದ್ಧೇಶ್ವರನು ಈ ಭಾಗದಲ್ಲಿ ಅನೇಕ ವರ್ಷ ಕಾಲಕಳೆದಿರಲಿಕ್ಕೆ ಬೇಕು. ಈ ಕಾಲದಲ್ಲಿ ಅವನು ಮಂಗಳವಾಡದ ಸೀಮೆಯಲ್ಲಿ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದನು. ಈ ಕೆರೆಗೆ ಈಗ ಸಿದ್ಧನಕೆರೆ ಎಂಬ ಹೆಸರಿದೆ. ರೇವಣಸಿದ್ಧನು ನಡಿಸಿದ ಅನೇಕ ಧಾರ್ಮಿಕ ಚಳವಳಿಗಳ ಮೂಲಕ ಜನರಲ್ಲಿ ಅವನು ಬಹು ಪ್ರಖ್ಯಾತಿಯನ್ನು ಹೊಂದಿರಲಿಕ್ಕೆಬೇಕು. ಮತ್ತು ಅವನಿದ್ದ ಸ್ಥಳವು ಗುರುಪೀಠವೆಂತಲೂ ಸಹ ಭಾವಿಸಲ್ಪಟ್ಟಿರಬೇಕು. ಆದ್ದರಿಂದಲೇ ಹರಿಹರನು ತನ್ನ ರೇವಣಸಿದ್ಧೇಶ್ವರನ ರಗಳೆಯಲ್ಲಿ ಅವನು ತನ್ನ ತರುವಾಯ ತನ್ನ ಮಗನಾದ ರುದ್ರಮುನಿಗೆ ಪಟ್ಟವನ್ನು ಕಟ್ಟಿದನೆಂದು ಹೇಳಿದ್ದಾನೆ. ಈ ಪ್ರಕಾರ ಪಟ್ಟಗಟ್ಟಿದ ಬಳಿಕ ರೇವಣಸಿದ್ಧೇಶ್ವರನು ಈ ಸ್ಥಾನವನ್ನು ಪರಿತ್ಯಜಿಸಿ ಬೇರೆ ಕಡೆಗೆ ಹೋದಂತೆ ತಿಳಿದುಬರುತ್ತದೆ. ಈಪ್ರಕಾರ ಸಂಗತಿಗಳು ಒದಗಿದಂತೆ ಈಗ ಪ್ರಚಲಿತವಿರುವ ರೇವಣಸಿದ್ಧೇಶ್ವರನ ಚರಿತ್ರೆಯಿಂದ ಕಂಡುಬರುತ್ತದೆ.

ಈ ಪ್ರಕಾರ ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿದ್ದಾಗ ಬಿಜ್ಜಳನು ಅಲ್ಲಿಯೇ ರಾಜ್ಯವಾಳುತ್ತಿದ್ದನು. ಅವನು ಅಲ್ಲಿ ರಾಜ್ಯವಾಳುತ್ತಿದ್ದದ್ದರ ಉಲ್ಲೇಖವು ಮ್ಹಸವಾಡಗ್ರಾಮದಲ್ಲಿಯ ಶಿಲಾಲೇಖದಲ್ಲಿ ಮೊದಲು ಬಂದಿರುತ್ತದೆ. ಅದು ೧೧೪೭ನೆಯ ಇಸ್ವಿಯದು ಆಗ ಬಸವನ ವಯಸ್ಸು ೧೫ ವರ್ಷ ಮಾತ್ರವಿದ್ದು ಆಗ ಅವನು ಇನ್ನೂ ಸ್ವಗ್ರಾಮವಾದ ಬಾಗೇವಾಡಿಯಲ್ಲಿಯೇ ಇರಬೇಕು. ಹರಿಹರನ ಹೇಳಿಕೆಯನ್ನು ನಾವು ನಂಬಿದಲ್ಲಿ ಬಸವನು ತನ್ನ ಯಜ್ಞೋಪವೀತವನ್ನು ೧೬ನೇ ವರ್ಷದಲ್ಲಿ ತೆಗೆದೊಗೆದು ಲಿಂಗಧಾರಿಯಾಗಿ ಸಂಗಮ ಕ್ಷೇತ್ರಕ್ಕೆ ಹೋಗಿ ಅಲ್ಲಿ ಎಂಟು ವರ್ಷ ವಾಸಮಾಡಿ ತನ್ನ ವಯಸ್ಸಿನ ೨೪ನೇ ವರ್ಷಕ್ಕೆ ಮಂಗಳವಾಡಕ್ಕೆ ಬಂದು ಬಿಜ್ಜಳನ ದರ್ಬಾರಿನಲ್ಲಿ ಒಂದು ನೌಕರಿಯನ್ನು ಸಂಪಾದಿಸಿದನೆಂದು

ನಾವು ಭಾವಿಸಬೇಕಾಗುತ್ತದೆ. ಆದರೆ ಬಸವನು ಮಂಗಳವಾಡಕ್ಕೆ ಬರುವ ಷ್ಟರಲ್ಲಿ ರೇವಣಸಿದ್ಧನು ತರ್ದೆವಾಡಿ ನಾಡನ್ನೇ ಬಿಟ್ಟು ಹೋಗಿರಬೇಕು.

## ಇಂಗುಳೇಶ್ವರದಲ್ಲಿ ರೇವಣಸಿದ್ಧನು.

ರೇವಣಸಿದ್ಧೇಶ್ವರನು ಈ ನಾಡನ್ನು ತ್ಯಜಿಸುವ ಪೂರ್ವದಲ್ಲಿಯೇ ಅವನು ಇಲ್ಲಿ ಧರ್ಮಜಾಗ್ರತಿಯ ಕಾರ್ಯಗಳನ್ನು ಮಾಡಿರಬೇಕೆಂದು ಕಂಡುಬರುತ್ತದೆ. ಯಾಕಂದರೆ ಅವನ ಹೆಸರಿನ ಪುಣ್ಯಕ್ಷೇತ್ರಗಳು ಈ ಭಾಗದಲ್ಲಿ ಅನೇಕವಿರುತ್ತವೆ. ಇಂಥ ಚಟುವಟಿಕೆಗಳನ್ನು ಅವನು ನಡಿಸದೆ ಇದ್ದಿದ್ದರೆ ಅವನ ಕ್ಷೇತ್ರಗಳು ಇಲ್ಲಿ ಉಂಟಾಗುತ್ತಿದ್ದಿಲ್ಲ. ಇವುಗಳಲ್ಲಿ ಇಂಗುಳೇಶ್ವರ ಒಂದಿದೆ. ಬಸವೇಶ್ವರನ ಚರಿತ್ರೆಯ ಸಂಶೋಧನೆಯಲ್ಲಿ ಈ ಸ್ಥಾನಕ್ಕೆ ನಾವು ಮಹತ್ವವನ್ನು ಕೊಡುವದು ಬಹು ಅವಶ್ಯವಿದೆ. ಇಂಗುಳೇಶ್ವರವು ಬಾಗೇವಾಡಿಯಿಂದ ೪ ಮೈಲು ಮಾತ್ರ ದೂರವಿದೆ. ಬಸವೇಶ್ವರನ ಕಾಲದಲ್ಲಿ ಈ ಗ್ರಾಮವು ಬಹು ವಿಸ್ತಾರವಾದದ್ದು ಮತ್ತು ಪ್ರಸಿದ್ಧವಾದದ್ದು. ಇಲ್ಲಿ ಅನೇಕ ದೇವಾಲಯುಗಳೂ ಶಿಲಾ ಶಾಸನಗಳೂ ಇವೆ. ಈ ಸ್ಥಳದಲ್ಲಿ ರೇವಣಸಿದ್ಧೇಶ್ವರನ ಹೆಸರಿನ ಒಂದು ಗವಿಯೂ ಉಂಟು. ಈ ಸ್ಥಾನವು ಒಂದು ಪುಣ್ಯಸ್ಥಳವೆಂದು ಭಾವಿಸಲ್ಪಟ್ಟಿದೆ. ಅದು ಈ ಗ್ರಾಮದ ಮುಖ್ಯ ದೇವತೆಯು. ಜಾತ್ರೆಯ ಕಾಲದಲ್ಲಿ ರೇವಣಸಿದ್ಧೇಶ್ವರ ಪುರಾಣವು ಹೇಳಲ್ಪಡುವದುಂಟು. ಈ ಎಲ್ಲ ಸಂಗತಿಗಳಿಂದ ರೇವಣಸಿದ್ಧೇಶ್ವರನು ಇಂಗುಳೇಶ್ವರದಲ್ಲಿದ್ದು ಧರ್ಮಜಾಗ್ರತಿಯ ಕಾರ್ಯಗಳನ್ನು ನಡಿಸಿರಬಹುದೆಂಬ ಊಹೆಗೆ ಆಸ್ಪದವಾಗುತ್ತದೆ. ಈ ಗ್ರಾಮವು ಬಾಗೇವಾಡಿಗೆ ಬಹು ಸಮೀಪವಾದದ್ದು. ಆದ್ದರಿಂದ ರೇವಣಸಿದ್ಧನು ಅಲ್ಲಿ ನಡಿಸಿದ ಚಟುವಟಿಕೆಗಳ ತಿಳುವಳಿಕೆಯು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಬಸವೇಶ್ವರನ ಮೇಲೆ ಆಗಿರಬೇಕೆಂದು ನಮಗೆ ತೋರುತ್ತದೆ.

ಕೀರ್ತನಕೇಸರಿ ವೇ। ಮೂ। ಬಿ. ಶಿವಮೂರ್ತಿ ಶಾಸ್ತ್ರಿಗಳವರು ೧೯೩೪ ರಲ್ಲಿ ಅಂದರೆ ೮ ವರ್ಷಗಳ ಕೆಳಗೆ ಈ ಸ್ಥಾನವನ್ನು ಸಂದರ್ಶಿಸಿ ಅದರ ವರ್ಣನೆಯನ್ನು ಶಿವಾನುಭವ ಪತ್ರಿಕೆಯ ೯ನೆಯ ಸಂಪುಟ ೪ನೆಯ ಸಂಚಿಕೆಯ ೨೭೮ ಪುಟದಲ್ಲಿ ಕೆಳಗೆ ಕಾಣಿಸಿದಂತೆ ಮಾಡಿದ್ದಾರೆ. ವಾಚಕರು ಅದನ್ನು ಚನ್ನಾಗಿ ಲಕ್ಷಿಸಬೇಕೆಂದು ನಮ್ಮ ವಿನಂತಿ ಅದೆ. ಅವರು ಹೇಳಿರುವದೇನಂದರೆ: —

"ರೇವಣಸಿದ್ಧೇಶ್ವರ ಗವಿ:— ಪೂರ್ವದಲ್ಲಿ ಈ ನಗರವು (ಇಂಗುಳೇಶ್ವರವು) ನಾಲ್ಕೆಂಟು ಮೈಲಿನ ವಿಸ್ತಾರವಾದ ಪಟ್ಟಣವಾಗಿತ್ತೆಂದು ತೋರುತ್ತದೆ. ಈ ಊರಿನಲ್ಲಿರುವ ಸಿದ್ಧೇಶ್ವರ ಗುಡ್ಡದಲ್ಲಿ ಒಂದು ಮನೋಹರವಾದ ಗವಿಯಿದೆ. ಈ ಗವಿಯು ಒಬ್ಬ ಮನುಷ್ಯನು ಕುಳಿತುಕೊಂಡು ಪ್ರವೇಶ ಮಾಡುವಷ್ಟು ಮಟ್ಟವಾಗಿದೆ. ಗವಿಯ ಬಾಗಿಲಿನಿಂದ ಸುಮಾರು ೫೦ ಮೊಳ ಒಳಕ್ಕೆ ಹೋದರೆ ಅಲ್ಲಿ ರೇವಣಸಿದ್ಧೇಶ್ವರನ ಭವ್ಯ ಮೂರ್ತಿಯಿದೆ. ಮೂರ್ತಿಯು ಸುಮಾರು ೪ ಅಡಿ ಎತ್ತರ ೨॥ ಅಡಿ ಅಗಲವಾಗಿದೆ. ಪದ್ಮಾಸನ ಹಾಕಿದೆ. ಎರಡು ಕೈಗಳನ್ನೂ ತೊಡೆಯ ಮೇಲಿಟ್ಟು ಕೊರಳಲ್ಲಿ ರುದ್ರಾಕ್ಷಿಯ ಸರವಿದೆ. ಮತ್ತು ವೀರಶೈವರ ಚಿನ್ಹೆಯಾದ ಕರಡಿಗೆ ಎದೆಯ ಮೇಲಿದೆ. ಕರಡಿಗೆಯು ಹಿರಿಯರು ಹಾಕಿಕೊಳ್ಳುತ್ತಿದ್ದ ಚೌಕಾಕಾರದ ಕರಂಡದಂತಿದೆ. ತಲೆಯಲ್ಲಿ ಜಡೆಯೂ, ಮುಖದಲ್ಲಿ ಗಡ್ಡವೂ ಬೆಳೆದಿವೆ ತಲೆಯ ಮೇಲೆ ಐದು ಹೆಡೆಯ ಸರ್ಪವಿದೆ. ಇಂತಹ ಭವ್ಯಮೂರ್ತಿಯನ್ನು ಈ ಲೇಖಕನು ಎಲ್ಲಿಯೂ ಕಂಡಿಲ್ಲ. ಸಿದ್ಧಗಿರಿಯಲ್ಲಿ ಗವಿಯ ಮುಖದಲ್ಲಿರುವ ರೇವಣಸಿದ್ಧನು, ಶ್ರೀಶೈಲದ ಘಂಟಾಸಿದ್ಧನ ಮಠದಲ್ಲಿರುವ ರೇವಣಸಿದ್ಧನು, ದೇವನಹಳ್ಳಿಯ ಕೆರೆಯಲ್ಲಿರುವ ಮರುಳಸಿದ್ಧನು, ಸಿದ್ಧಗಂಗೆ ಬೆಟ್ಟದಲ್ಲಿರುವ ಸಿದ್ಧಲಿಂಗನ ಮೂರ್ತಿಯು ಇವುಗಳಿಗಿಂತಲೂ ಈ ಮೂರ್ತಿಯು ದೊಡ್ಡದಾಗಿಯೂ ಭವ್ಯವಾಗಿಯೂ ಇದೆ. ಮಾಸನೂರು, ಸಿದ್ಧನಕೆರೆ, ಮಂಗಳವೇಢೆ, ಸೊನ್ನಲಿಗೆಯಲ್ಲಿರುವ ರೇವಣಸಿದ್ಧ ದೇವಾಲಯದಲ್ಲಿ ದೇವರು ಲಿಂಗಾಕಾರವಾಗಿದೆ. ಇಲ್ಲಿ ಮನುಷ್ಯಾಕಾರವಾಗಿ ಪದ್ಮಾಸನದಲ್ಲಿ ಕುಳಿತಿದೆ. ಈ ರೇವಣಸಿದ್ಧನು ಶಿವಯೋಗಿ ಶಾಂತಿಮಯ್ಯನ ಮಗನಾದ ರೇವಣಸಿದ್ಧನೇ ಎಂದು ಚರ್ಚಿಸಬೇಕಾಗಿದೆ. ಅಂತು ಇದು ಒಂದು ಪ್ರಾಚೀನ ವೀರಶೈವ ಆಚಾರ್ಯಸ್ಥಾನವೆಂಬುವುದರಲ್ಲಿ ಅನುಮಾನವಿಲ್ಲ" ಎಂದು ಶಾಸ್ತ್ರಿಗಳವರು ಇದನ್ನು ವರ್ಣಿಸಿದ್ದಾರೆ.

ಈ ಮೂರ್ತಿಯ ಮೇಲಿದ್ದ ಲಿಂಗದ ಕರಡಿಗೆ ಅಲ್ಲದೆ ಈಗಲೂ ಕೂಡ ಜನರಲ್ಲಿರುವ ನಂಬಿಗೆಗಳು ಇವುಗಳಿಂದ ಈ ಸ್ಥಾನವು ರೇವಣಸಿದ್ಧನದೇ ಎಂದು ನಮಗೆ ತೋರುತ್ತದೆ.

ರೇವಣಸಿದ್ಧನು ಇಲ್ಲಿ ವಾಸಮಾಡಿದಾಗ್ಗೆ ಬಸವನು ಚಿಕ್ಕವಯಸ್ಸಿನವನಾಗಿರಬೇಕು. ಒಂದು ವೇಳೆ ಅವನು ಇನ್ನೂ ಜನಿಸಿಯೂ ಇರ

ಲಿಕ್ಕಿಲ್ಲ. ಆದರೆ ರೇವಣಸಿದ್ಧೇಶ್ವರನು ಇಲ್ಲಿ ನಡಿಸಿದ ಧರ್ಮಜಾಗ್ರತಿಯ ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷ ಪರಿಣಾಮಗಳು ಅವನ ಮನಸ್ಸಿನ ಮೇಲೆ ಆಗಿರಲಿಕ್ಕೆಬೇಕೆಂದು ನಾವು ಊಹಿಸುತ್ತೇವೆ. ಹೀಗೆ ಊಹಿಸಲು ನಮಗೆ ಬಲವಾದ ಒಂದು ಕಾರಣವಿದೆ. ಅದು ರೇವಣಸಿದ್ಧೇಶ್ವರನ ಗವಿಗೆ ಸಮೀಪವಾಗಿ ಬಸವೇಶ್ವರನ ಅಕ್ಕನಾದ ನಾಗಲಾಂಬೆಯ ಗವಿಯು ಇದ್ದದ್ದೇ ಇದೆ. ಅಕ್ಕನಾಗಮ್ಮನ ಈ ಗವಿಯ ವರ್ಣನೆಯನ್ನು ವೇ. ಮೂ.— ಶಿವಮೂರ್ತಿ ಶಾಸ್ತ್ರಿಗಳು ಶಿವಾನುಭವ ಪತ್ರಿಕೆಯ ಅದೇ ಸಂಚಿಕೆಯಲ್ಲಿ ಮಾಡಿರುವದು ಹೇಗೆಂದರೆ:—

"ಅಕ್ಕನಾಗಮ್ಮನ ಗವಿ:— ಇದೇ ಗುಡ್ಡದಲ್ಲಿ ಈ ಗವಿಯಿದೆ. ಬಸವೇಶ್ವರನ ಅಕ್ಕನಾದ ಈ ನಾಗಲಾಂಬಿಕೆಯು ಒಳ್ಳೇ ಯೋಗಿನಿಯೆಂದು ತೋರುತ್ತದೆ. ಕಲ್ಯಾಣ ಪಟ್ಟಣದಲ್ಲಿ ಸಹ ಇವಳ ಅತಿ ಭವ್ಯವಾದ ಒಂದು ಗವಿಯಿದೆ. ಈ ರೇವಣಸಿದ್ಧನ ಗುಡ್ಡದ ಗವಿಯಲ್ಲಿ ಈಕೆಯ ಗವಿಯಿದೆ. ಈ ಗವಿಯಲ್ಲಿ ೪೦—೫೦ ಗಜ ಒಳಗೆ ಹೋದರೆ ಅಲ್ಲಿ ಒಂದು ಶಿವಲಿಂಗದ ಪೀಠವೂ ಒಡೆದುಹೋದ ಅಕ್ಕನಾಗಮ್ಮನ ಮೂರ್ತಿಯೂ ಕಾಣುತ್ತವೆ. ಇಲ್ಲಿನ ಲಿಂಗವಂತರು ಹೊಸದಾಗಿ ಒಂದು ಕಲ್ಲಿನಿಂದ ಅಕ್ಕನಾಗಮ್ಮನ ಮೂರ್ತಿಯನ್ನು ಮಾಡಿಸಿ ಪೂಜಿಸುತ್ತಾರೆ. ಈ ಗವಿಯ ಪ್ರವೇಶವೂ ರೇವಣಗವಿಯ ಪ್ರವೇಶದಂತೆಯೇ ಶ್ರಮಸಾಧ್ಯವಾಗಿದೆ."

ಅಕ್ಕನಾಗಮ್ಮನ ಗವಿಯು ಈ ಗ್ರಾಮದಲ್ಲಿರುವದರಿಂದ ಅಕ್ಕನಾಗಮ್ಮನು ಇಂಗುಳೇಶ್ವರದಲ್ಲಿ ಇದ್ದಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಆದ್ದರಿಂದ ಈ ಗ್ರಾಮವೇ ಆಕೆಯ ಗಂಡನಾದ ಶಿವಸ್ವಾಮಿಯ ಸ್ಥಾನವಾಗಿರಬೇಕೆಂದು ನಾವು ಊಹಿಸಿ ಹಿಂದೆ ನಾವು ಒಂದು ವಿಸ್ತೃತ ಲೇಖವನ್ನು ಬರೆದಿದ್ದೇವೆ. (ಶಿವಾನುಭವ ಸಂಪುಟ ೧೬ ಸಂಚಿಕೆ ೫ ಪುಟ ೨೫೩ ನೋಡಿರಿ.) ಈ ಎರಡು ಗವಿಗಳ ಸಾನ್ನಿಧ್ಯದಿಂದ ರೇವಣಸಿದ್ಧೇಶ್ವರನು ಮಾಡಿದ ಧರ್ಮಜಾಗ್ರತಿಯು ನಾಗಲಾಂಬಿಕೆಯ ಮನಸ್ಸಿನ ಮೇಲೂ ಆಗಿರಬೇಕೆಂಬ ಅನುಮಾನವನ್ನು ಮಾಡಿದ್ದಾದರೆ ಅದು ತಪ್ಪಾಗಲಿಕ್ಕಿಲ್ಲ. ಹಾಗಿದ್ದ ಪಕ್ಷದಲ್ಲಿ ಅಕ್ಕನಾಗಲಾಂಬಿಕೆಯ ಮೇಲೆ ಆದ ಧಾರ್ಮಿಕ ಪರಿಣಾಮಗಳು ಆಕೆಗೆ ಕೇವಲ ಪ್ರೀತ್ಯಾಸ್ಪದನಾದ ಬಸವೇಶ್ವರನ ಮೇಲೂ ಏಕಾಗಿರಬಾರದು? ಈ ಸಂಗತಿಗಳನ್ನು ವಾಚಕರು ಚನ್ನಾಗಿ ತೂಗಿ ನೋಡಬೇಕಂದು ನಮ್ಮ ಸೂಚನೆ ಇದೆ.

ಯಾವ ಮಹಾಪುರುಷನೂ ಜನಿಸಿದ ಕೂಡಲೆ ಮಹತ್ವದ ಪುರುಷನಾಗಲಾರನು. ಅವನ ಸುತ್ತಲಿನ ಪರಿಸ್ಥಿತಿ, ಅವನಿಗೆ ದೊರೆದ ಶಿಕ್ಷಣ, ಅವನ ಸ್ವಾಭಾವಿಕ ಮನಸ್ಸಿನ ಪ್ರವೃತ್ತಿ, ಅವನ ಸ್ಥೈರ್ಯ ಧೈರ್ಯಾದಿಗಳು, ಅವನ ಮಹತ್ವಕ್ಕೆ ಅಥವಾ ದೊಡ್ಡಸ್ತಿಕೆಗೆ ಕಾರಣವಾಗುತ್ತವೆ. ಈ ಸಂಗತಿಗಳನ್ನು ನಾವು ಲಕ್ಷಿಸುವದು ಬಹು ಅವಶ್ಯವು. ಅವುಗಳ ಮೂಲಕ ಒಬ್ಬ ಮಹಾಪುರುಷನ ಜೀವಿತದಲ್ಲಿ ಯಾವ ಯಾವ ಬದಲಾವಣೆಗಳಾದವು, ಅವನಲ್ಲಿ ಹೇಗೆ ಪ್ರಗತಿಯುಂಟಾಯಿತು, ಇವೇ ಮೊದಲಾದ ಸಂಗತಿಗಳನ್ನು ತಿಳಿದುಕೊಂಡಿದ್ದಾದರೆ ವಾಚಕರಿಗೆ ಅದು ಬೋಧಪ್ರದವಾಗದೆ ಇರದು. ಬಸವೇಶ್ವರ ಮತ್ತು ರೇವಣಸಿದ್ಧೇಶ್ವರ ಈ ಉಭಯತರು ವಾಸಿಸಿದ ನಾಡು ಒಂದೇ ಇದೆ. ಉಭಯತರೂ ಅದೇ ರಾಜನ ಕಾಲದಲ್ಲಿ ಪ್ರಸಿದ್ಧಿಗೆ ಬಂದಿದ್ದಾರೆ. ಉಭಯತರೂ ಒಂದೇ ನಾಡಿನಲ್ಲಿ ಮಾತ್ರವಲ್ಲ, ಸಮಿಸಮೀಪವಾದ ಗ್ರಾಮಗಳಲ್ಲಿದ್ದಾರೆ. ಇಬ್ಬರೂ ಧರ್ಮಜಾಗ್ರತಿಯ ಕಾರ್ಯಗಳನ್ನು ನಡಿಸಿದ್ದಾರೆ. ಇಂಥವರ ವಿಚಾರಗಳ ಪರಿಣಾಮವು ಪರಸ್ಪರರ ಮೇಲೆ ಆಗದೆ ಹೇಗೆ ಇದ್ದೀತು? ಅವರಲ್ಲೊಬ್ಬನು ಹಿರಿಯನಿರಬಹುದು. ಆದರೆ ಉಭಯತರು ಕೈಕೊಂಡ ಮಾರ್ಗವು ಒಂದೇಯಾಗಿದೆ. ಹಿರಿಯನು ಕೈಕೊಂಡ ಕಾರ್ಯವನ್ನು ಚಿಕ್ಕವನು ಮುಂದುವರಿಸುತ್ತ ಅದನ್ನು ಮತ್ತಿಷ್ಟು ಉಜ್ವಲ ಸ್ಥಿತಿಗೆ ಏಕೆ ತರಬಾರದು? ಹಿಂದಿನವರು ಮಾಡಿದ ಕಾರ್ಯಗಳನ್ನೇ ತಳಹದಿಯಾಗಿ ಮಾಡಿಕೊಂಡು ಅದರ ಮೇಲೆ ಮುಂದಿನವರು ಒಂದು ಭವ್ಯವಾದ ಕಟ್ಟಡವನ್ನು ಏಕೆ ಕಟ್ಟಬಾರದು?

## ಪಾಶುಪತರು.

ಬಸವೇಶ್ವರನು ಜನಿಸಿದ ಕಾಲದಲ್ಲಿ ಅವನಿದ್ದ ನಾಡಿನಲ್ಲಿ ಅನೇಕ ತರದ ಧಾರ್ಮಿಕ ಅಂದೋಲನಗಳು ನಡೆದಿದ್ದವು. ಇಂಗುಳೇಶ್ವರವು ರೇವಣಸಿದ್ಧೇಶ್ವರನ ಸ್ಥಾನವಾಗಿದ್ದರೆ, ಬಾಗೇವಾಡಿಯ ಪಶ್ಚಿಮಕ್ಕೆ ೬ ಮೈಲುಗಳ ಮೇಲಿರುವ ಮುತ್ತಿಗೆ ಎಂಬ ಗ್ರಾಮವು ಪಾಶುಪತ ಮತಸ್ಥರ ಮುಖ್ಯ ಕೇಂದ್ರವಾಗಿತ್ತು. ಇಂಗುಳೇಶ್ವರವು ಈ ಕಾಲದಲ್ಲಿ ಬಹು ಪ್ರಸಿದ್ಧ ಪಟ್ಟಣವು. ಹಾಗೆಯೇ ಮುತ್ತಿಗೆಯೂ ಕೂಡ ಪಾಶುಪತರಿಗೆ ಮಹತ್ವದ ಸ್ಥಾನವಾಗಿತ್ತು. ಅಲ್ಲಿ ಅನೇಕ ಶಿಲಾಶಾಸನಗಳೂ ಪುರಾತನ ದೇವಾ

ಲಯಗಳೂ ಈಗಲೂ ನಮ್ಮ ದೃಷ್ಟಿಗೆ ಬೀಳುತ್ತವೆ. ರಾಜಾರಾಮ ಕಾಲೇಜಿನ ಕನ್ನಡ ಪ್ರೊಫೆಸರರಾದ ಪ್ರೊ॥ ಕೇ. ಜಿ. ಕುಂದಣಗಾರ ಇವರು ಪ್ರಸಿದ್ಧಿಸಿದ "ಉತ್ತರ ಕರ್ನಾಟಕ ಮತ್ತು ಕೊಲ್ಹಾಪುರ ಸಂಸ್ಥಾನ ದಲ್ಲಿಯ ಶಿಲಾಶಾಸನಗಳು" ಎಂಬ ಹೆಸರಿನ ಇಂಗ್ಲಿಷ ಭಾಷೆಯಲ್ಲಿ ಬರೆದ ಗ್ರಂಥದಲ್ಲಿ ಈ ಪಾಶುಪತರ ಉಲ್ಲೇಖಗಳಿರುವ ಕೆಲವು ಶಾಸನ ಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲೊಂದು ಶಾಸನದಲ್ಲಿ ಲಕುಲೀಶನು ಉತ್ತರ ದೇಶದಿಂದ ಮೊದಲು ವಿಜಯಾಪುರಕ್ಕೆ ಬಂದು ಅಲ್ಲಿಂದ ಮುತ್ತಿಗೆ ಗ್ರಾಮದಲ್ಲಿ ಬಂದು ನಿಂತನೆಂದು ಹೇಳಲ್ಪಟ್ಟಿದೆ. ಅವನು ಈ ಶಾಸನದಲ್ಲಿ ಬಹು ಜ್ಞಾನಿ ಎಂದು ವರ್ಣಿಸಲ್ಪಟ್ಟಿದ್ದಾನೆ. ಪಾಶು ಪತ ಮತವು ವೀರಶೈವ ಮತವಲ್ಲದಿದ್ದರೂ ಅವು ಸಮಿಸಮಿಾಪವಾಗಿವೆ. ಈ ಪಾಶುಪತರ ಮತವನ್ನೂ ಕೂಡ ಬಸವೇಶ್ವರನು ಪರಿಶೀಲಿಸಿರಬೇಕು. ಯಾಕಂದರೆ ಅವರ ಮತವನ್ನು ವರ್ಣಿಸಿ ಉಲ್ಲೇಖಿಸುವ ಕೆಲವು ವಚ ನಗಳು ಅವನ ವಚನಗಳಲ್ಲಿ ಉಪಲಬ್ಧವಿವೆ. ಅವುಗಳಲ್ಲಿ ಒಂದು ಹೀಗೆ ಇದೆ :—

"ಬಾರದು ಬಾರದು ಭಕ್ತಂಗೆ ಪರಧನ ಪರಸತಿ. ಬಾರದು ಬಾರದು ವಿಷಯಿಗೆ ಪಶುಪತಿ ಬ್ರತವು. ಬಾರದು ಬಾರದು ಭವಭಾರಿಗೆ ಕೂಡಲ ಸಂಗಮದೇವನ ಒಕ್ಕುದ ಕೊಳಬಾರದು."

ವೀರಶೈವ ಸಿದ್ಧಾಂತದಲ್ಲಿ ಮತ್ತು ಅದರ ಆಚರಣೆಗಳಲ್ಲಿ "ಪಶು ಪತಿ ಬ್ರತ" ಎಂಬ ಹೆಸರು ಎಲ್ಲಿಯೂ ಬರುವದಿಲ್ಲ. ಈ ವ್ರತವು ಪಾಶು ಪತ ಮತಕ್ಕೆ ಸಂಬಂಧಿಸಿರಬಹುದು.

ಬಸವೇಶ್ವರನು ಚಿಕ್ಕವನಿರುವಾಗ ಅವನ ಮನಸ್ಸಿನ ಮೇಲೆ ಆಗ ಪ್ರಚಲಿತವಿದ್ದ ಅನೇಕ ಶೈವಪಂಥಗಳು ಪರಿಣಾಮ ಮಾಡುತ್ತಿರಬೇಕು. ಹಾಗೆಯೇ ವೀರಶೈವಕ್ಕೆ ಸಮಿಾಪವಾಗಿರುವ ಪಾಶುಪತ ಮತವೂ ಅವನ ಮನಸ್ಸಿನ ಮೇಲೆ ಪರಿಣಾಮ ಮಾಡಿರಬೇಕು. ಈ ಊಹೆಯನ್ನು ದೃಢ ಪಡಿಸುವ ಅವನ ಕೆಲವು ವಚನಗಳು ಉಪಲಬ್ಧವಿವೆ. ವಾಚಕರು ಕೆಳಗೆ ಕಾಣಿಸಿದ ವಚನಗಳನ್ನು ವಿಚಾರ ಮಾಡಬೇಕು.

"ಲಿಂಗದ ಉಂಡಿಗೆಯ ಪಶುವಾನಯ್ಯ. ವೇಷಧಾರಿಯಾನು. ಉದರ ಪೋಷಕ ನಾನಯ್ಯ. ಕೂಡಲಸಂಗನ ಶರಣರ ಧರ್ಮದ ಕವಿಲೆಯಾನು"

ಬಡಪಶು ಪಂಕದಲ್ಲಿ ಬಿದ್ದರೆ ಕಾಲಬಡಿವುದಲ್ಲದೆ ಬೇರೆ ಗತಿಯುಂಟೇ? ಶಿವಶಿವಾ ಹೋದೆಹೆ ಹೋದೆಹೆನಯ್ಯ. ನಿಮ್ಮ ಮನದತ್ತಲೆನ್ನ ತೆಗೆಯಯ್ಯ. ಪಶುವಾನು ಪಶುಪತಿ ನೀನು. ತುಡುಗುಣಿ ಎಂದು ಎನ್ನ ಹಿಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಯದಂತೆ ಮಾಡು ಕೂಡಲಸಂಗಮದೇವಾ.

ಅಡವಿಯೊಳಗೆ ಹೊಲಬುಗೆಟ್ಟ ಪಶುವಿನಂತೆ ಅಂಬಾ, ಅಂಬಾ ಎಂದು ಕರೆವುತ್ತಲಿದ್ದೇನೆ. ಅಂಬಾ ಅಂಬಾ ಎಂದು ಒರಲುತ್ತಲಿದ್ದೇನೆ. ಕೂಡಲಸಂಗಮದೇವಾ ಬಾಳು ಬಾಳೆಂಬನ್ನಕ್ಕರ.

ವಿಷಯವೆಂಬ ಹಸರನೆನ್ನ ಮುಂದೆ ತಂದು ಪಸರಿಸಿದೆಯಯ್ಯ. ಪಶುವೇನ ಬಲ್ಲುದು ಹಸುರೆಂದೆಳಿಸುವುದು. ವಿಷಯ ರಹಿತನಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿ ಎಂಬ ಉದಕವನೆರೆದು ನೋಡಿ ಸಲಹಯ್ಯ ಕೂಡಲಸಂಗಮದೇವಾ.

ಕೆಸರಲ್ಲಿ ಬಿದ್ದ ಪಶುವಿನಂತೆ ಆನು ದೆಸೆದೆಸೆಗೆ ಬಾಯಬಿಡುತಿದ್ದೆನಯ್ಯ. ಅಯ್ಯಾ ಆರೈವರಿಲ್ಲ. ಅಕಟಕಟಾ ಪಶುವೆಂದೆನ್ನ ಕೂಡಲಸಂಗಮದೇವಕೊಂಬ ಹಿಡಿದೆತ್ತವನ್ನಕ್ಕ."

ಈ ವಚನಗಳಲ್ಲಿ ಬಸವೇಶ್ವರನು ತನ್ನನ್ನು ಕುರಿತು ಸಂಬೋಧಿಸುವಲ್ಲಿ ಪಾಶುಪತ ಮತಕ್ಕೆ ಹೊಂದಿಕೆಯಾಗಬಹುದಾದ ಪಶು ಮೊದಲಾದ ಶಬ್ದಗಳನ್ನು ಏಕೆ ಉಪಯೋಗಿಸಬೇಕು? ಇದು ಕೇವಲ ಆಕಸ್ಮಿಕವಾಗಿರಲಿಕ್ಕಿಲ್ಲೆಂದು ತೋರುತ್ತದೆ. ಬಸವೇಶ್ವರನ ಜೀವಿತದ ಕಾಲದಲ್ಲಿ ಮುಖ್ಯವಾಗಿ ಅವನು ಚಿಕ್ಕ ವಯಸ್ಸಿನವನಿದ್ದಾಗ್ಗೆ ಅವನ ಮನಸ್ಸಿನ ಮೇಲೆ ಆವ ಆವ ಧರ್ಮಗಳು ಪರಿಣಾಮ ಮಾಡಿದವೆಂಬುದನ್ನು ಇಂಥ ವಚನಗಳಿಂದ ನಾವು ಕಂಡುಹಿಡಿಯಬಹುದಾಗಿದೆ. ಮತ್ತು ಇದರಿಂದ ಬಸವನು ಚಿಕ್ಕವಯಸ್ಸಿನವನಿದ್ದಾಗಳೇ ವಚನಗಳನ್ನು ರಚಿಸಹತ್ತಿದನೆಂತಲೂ ಅನುಮಾನಮಾಡಬಹುದಾಗಿದೆ.

## ಬಸವೇಶ್ವರನು ವಚನಗಳನ್ನು ರಚಿಸಲು ಪ್ರಾರಂಭಿಸಿದುದು ಎಂದಿನಿಂದ?

ಈ ವಿಷಯ ವಿವೇಚನೆಯಲ್ಲಿ ಬಸವೇಶ್ವರನು ಎಂದಿನಿಂದ ವಚನಗಳನ್ನು ರಚಿಸಲು ತೊಡಗಿದನೆಂಬ ಮಹತ್ವದ ಪ್ರಶ್ನೆಯು ಉದ್ಭವಿಸುತ್ತದೆ

ಈಗ ಬಹುಜನರು ಕಲ್ಯಾಣ ಪಟ್ಟಣದಲ್ಲಿ ಬಸವೇಶ್ವರನು ಮಂತ್ರಿಪದಾರೂಢ ನಾದ ಬಳಿಕ ಅಲ್ಲಿ ಶಿವಾನುಭವ ಮಂಟಪವು ಸ್ಥಾಪಿಸಲ್ಪಡಲು ಆಗ್ಗೆಯೇ ಬಸವೇಶ್ವರನು ತನ್ನ ವಚನಗಳನ್ನು ರಚಿಸಹತ್ತಿದನೆಂದು ತಿಳಿಯುವ ದುಂಟು. ಹಾಗೆ ತಿಳಿಯಲು ಬರಲಾರದೆಂದು ನಮಗೆ ತೋರುತ್ತದೆ. ಬಸವೇಶ್ವರನಲ್ಲಿ ವಿಚಾರ ಕ್ರಾಂತಿಯು ಅವನು ಸಣ್ಣವನಿರುವಾಗ್ಗೆಯೇ ಪ್ರಾರಂಭವಾಗಿತ್ತೆಂದೂ ಮೊದಲಿನಿಂದಲೂ ಅವನ ಮನಸ್ಸು ಧಾರ್ಮಿಕ ವಿಷಯ ವ್ಯಾಸಂಗದಲ್ಲಿ ತೊಡಗಿತ್ತೆಂದೂ ಆಗಾಗ್ಗೆ ತನಗೆ ಬಂದ ಅನು ಭವಗಳನ್ನು ಅವನು ಚಿಕ್ಕವನಿರುವಾಗಿನಿಂದಲೇ ನುಡಿಯುತ್ತ ಬಂದ ನೆಂದೂ ನಮಗೆ ತೋರುತ್ತದೆ. ಮನುಷ್ಯನ ಮನಸ್ಸಿನಲ್ಲಿ ಪ್ರಗತಿಯ ಚಲನವಲನೆಗಳು ಯಾವಾಗಲೂ ಇದ್ದೇಇರುತ್ತವೆ. ಅವು ಪ್ರತಿಕ್ಷಣವೂ ಉಂಟಾಗುತ್ತವೆ. ಆದರೆ ಅವುಗಳಿಗೊಂದು ಪ್ರಗಲ್ಭ ಸ್ಥಿತಿಯು ಪ್ರಾಪ್ತವಾ ಗಲು ಅದು ಒಂದು ಕ್ರಾಂತಿ ಎಂದು ಕರೆಯುತ್ತೇವೆ. ಅದರ ಬಾಹ್ಯ ಸ್ವರೂ ಪವು ಆಗ ಜನತೆಯ ದೃಷ್ಟಿಗೆ ಬೀಳುತ್ತಿದೆ. ಹಾಗೆಯೇ ಬಸವನಲ್ಲಿ ಧಾರ್ಮಿಕ ಜಾಗ್ರತಿಯುಂಟಾಗಹತ್ತಿದ್ದು ಅವನ ಚಿಕ್ಕಂದಿನಿಂದಲೇ ಎಂದು ಅವನ ಕೆಳಗೆ ಕಾಣಿಸಿದ ವಚನಗಳಿಂದ ಗೊತ್ತಾಗುತ್ತದೆ.

ಅವನು ವೀರಶೈವ ದೀಕ್ಷಾವಿಧಿಯನ್ನು ಹೊಂದದೆ ಇದ್ದಾಗ ಅಂದರೆ ಅವನು ಇನ್ನೂ ಬ್ರಾಹ್ಮಣ ಧರ್ಮದಲ್ಲಿದ್ದಾಗ ಸಹ ವಚನಗಳನ್ನು ರಚಿ ಸಿದ ಹಾಗೆ ತೋರುತ್ತದೆ. ವಾಚಕರು ಕೆಳಗಿನ ವಚನವನ್ನು ಲಕ್ಷಿಸಬೇಕು.

"ಸುಡಲೀ ಮನವೆನ್ನ ಸುಡುಹನ ಮಾಡಿತ್ತು. ನಡೆವಲ್ಲಿ ನುಡಿವಲ್ಲಿ ಅಧಿಕನೆಂದೆನಿಸಿತ್ತು. ಬಿಡಗಿನ ಕೀಲ ಕಳೆದು ಕೆಡೆದ ಬಳಿಕ ಕಡು ಗೂಪಮಡದಿ ತಾ ಮುಟ್ಟಲಮ್ಮಳು. ಒಡಲನುರಿ ಕೊಂಬುದು. ಒಡವೆಯ ನರಸುಕೊಂಬ. ಕಡುಗೂಪ ಮಡದಿಯು ಮತ್ತೊಬ್ಬ ಚನ್ನಿಗಕೊಂಬ. ಮುನ್ನ ಮಾಡಿದುದು ತನ್ನ ಬೆನ್ನ ಬಿಡದನ್ನಕ್ಕ ಇನ್ನು ಮಾಡಿದರೊ ಳವೇ ಕೂಡಲಸಂಗಮದೇವಾ?"

ಈ ವಚನದಲ್ಲಿ ಬಸವೇಶ್ವರನು ಒಬ್ಬ ದುರ್ಭಾಗ್ಯನಾದ ಮನುಷ್ಯನು ಮರಣ ಹೊಂದಿದ ಬಳಿಕ ಅವನಿಗೆ ಆಗುವ ಅವಸ್ಥೆಯನ್ನು ವರ್ಣಿ ಸುತ್ತಾನೆ. ಹೀಗೆ ವರ್ಣಿಸುವಲ್ಲಿ ಅವನು "ಒಡಲನು ಉರಿ ಕೊಂಬುದು" ಎಂದು ಹೇಳುತ್ತಾನೆ ಸತ್ತಬಳಿಕ ಮೃತ ಶರೀರವನ್ನು ದಹಿಸಿಬಿಡುವ

ಪದ್ಧತಿಯು ಬ್ರಾಹ್ಮಣರಲ್ಲಿದೆ, ವೀರಶೈವರಲ್ಲಿಲ್ಲ. ಆದರೆ ಈ ವಚನದಲ್ಲಿ ಬಸವೇಶ್ವರನು ಸುಡುವುದನ್ನು ಉಲ್ಲೇಖಿಸಿದ್ದಾನೆ. ಒಂದುವೇಳೆ ಈ ವಚನವನ್ನು ನುಡಿಯುವ ಕಾಲದಲ್ಲಿ ಬಸವೇಶ್ವರನಿಗೆ ಲಿಂಗಧಾರಣವಾಗಿದ್ದರೆ, ಅವನು ವೀರಶೈವರನ್ನುದ್ದೇಶಿಸಿಯೇ ಹೇಳುತ್ತಿದ್ದನೇ ಹೊರ್ತು ಈ ಪ್ರಕಾರ ಬ್ರಾಹ್ಮಣರಿಗೆ ಉಚಿತವಾದ ಕ್ರಿಯಾಕರ್ಮಗಳನ್ನು ಹೇಳುತ್ತಿದ್ದಿಲ್ಲ. ಆದ್ದರಿಂದ ಈ ವಚನವನ್ನು ರಚಿಸಿದ ಕಾಲದಲ್ಲಿ ಅವನು ಇನ್ನೂ ಬ್ರಾಹ್ಮಣನಾಗಿದ್ದನೆಂದು ನಮಗೆ ತೋರುತ್ತದೆ.

ಇದರಿಂದ ಬಸವೇಶ್ವರನು ಚಿಕ್ಕವನಿರುವಾಗಲೇ ವಚನಗಳನ್ನು ರಚಿಸಲು ತೊಡಗಿದನೆಂಬ ಊಹೆಯು ಉಂಟಾಗುತ್ತದೆ. ಈ ವಿಷಯವಾಗಿ ನಾವು ಇನ್ನೂ ಕೆಲವು ವಚನಗಳನ್ನು ಉದಹರಿಸುತ್ತೇವೆ. ಅವುಗಳನ್ನು ವಾಚಕರು ವಿಚಾರ ಮಾಡಬೇಕು.

ವಾಚಕರು ಕೆಳಗಿನ ವಚನವನ್ನು ಅವಲೋಕಿಸಬೇಕು.

"ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹಾದೇವಶೆಟ್ಟಿ. ಒಮ್ಮನವಾದಡೆ ಒಡನೆ ನುಡಿವನು. ಇಮ್ಮನವಾದಡೆ ನುಡಿಯನು. ಕಾಣಿಯ ಸೋಲ. ಅರ್ಧಗಾಣಿಯ ಗೆಲ್ಲ. ಜಾಣ ನೋಡವ್ವ ನಮ್ಮ ಕೂಡಲಸಂಗಮದೇವ."

ಈ ವಚನವನ್ನು ಬಸವೇಶ್ವರನು ಎಲ್ಲಿ ಮತ್ತು ಯಾವ ಕಾಲದಲ್ಲಿ ನುಡಿದನೆಂಬುದನ್ನು ವಿಚಾರ ಮಾಡತಕ್ಕ ವಿಷಯವಾಗಿದೆ. ಅವನು ಅದನ್ನು ಯಾವ ನಾಡಿನಲ್ಲಿ 'ಒಮ್ಮನ', 'ಇಮ್ಮನ'ವೆಂಬ ಹೆಸರಿನ ಅಳತೆಗಳು ಪ್ರಚಲಿತವಿರುತ್ತವೆಯೋ ಅಲ್ಲಿಯೇ ಅದನ್ನು ನುಡಿದಿರಬೇಕೆಂಬ ಅನುಮಾನವನ್ನು ಮಾಡಿದ್ದಾದರೆ ಅದು ತಪ್ಪಾಗಲಾರದು. ಈ ಒಮ್ಮನ ಇಮ್ಮನ ಮಾಪುಗಳು ಧಾರವಾಡ ಬೆಳಗಾವ ಜಿಲ್ಲೆಗಳಲ್ಲಾಗಲಿ ಇಲ್ಲವೆ ವಿಜಾಪುರ ಜಿಲ್ಲೆಯ ದಕ್ಷಿಣ ಭಾಗದಲ್ಲಾಗಲಿ ಪ್ರಚಲಿತವಿರದೆ ವಿಜಾಪುರ ಜಿಲ್ಲೆಯ ಉತ್ತರ ಭಾಗ ಅಂದರೆ ತರ್ದವಾಡಿ ನಾಡಿನಲ್ಲಿ ಈಗಲೂ ಪ್ರಚಲಿತವಿರುತ್ತವೆ. ಬಸವೇಶ್ವರನು ಈ ಭಾಗದಲ್ಲಿ ಜನಿಸಿ ಇಂದಿಗೆ ಎಂಟು ನೂರು ವರ್ಷಗಳಾದವು. ಆದರೂ ಕೂಡ ಇಲ್ಲಿ ಈ ಮಾಪುಗಳ ಹೆಸರುಗಳು ಬದಲಾಗಿಲ್ಲ. ಈಗ ಸರಕಾರದವರು ಎಲ್ಲ ಕಡೆಗೆ ಒಂದೇ ಮಾಪನ್ನು ರೂಢಿಯಲ್ಲಿ ತಂದಿದ್ದರೂ ಕೂಡ ಈ ಭಾಗದಲ್ಲಿಯು

ಹಳ್ಳಿಗಳಲ್ಲಿ ಒವ್ನು, ಇವ್ನು, ಅದ್ನ, ಗಿದ್ನ ಎಂಬ ಶಬ್ದಗಳ ಉಪಯೋಗವು ನಿಂತಿಲ್ಲ, ಒವ್ನುವೆಂದರೆ ಸರಕಾರೀ ನಾಲ್ಕು ಶೇರುಗಳು, ಇವ್ನುವೆಂದರೆ ಎಂಟು ಶೇರುಗಳು, ಅದ್ನವೆಂದರೆ ಅರ್ಧ ಶೇರು, ಗಿದ್ನವೆಂದರೆ ಒಂದು ಕಾಲು ಶೇರು. ಶೇರಿಗೆ ಸೊಲಿಗೆ ಎಂದು ಇಲ್ಲಿ ಕರೆಯುವದುಂಟು. ಒವ್ನುಕ್ಕೆ ಸಂಕ್ಷಿಪ್ತವಾಗಿ ಮಾನವೆಂತಲೂ ಅನ್ನುವದುಂಟು. ಮಾನ ಶಬ್ದವು ಕೆಲವು ಜಿಲ್ಲೆಗಳಲ್ಲಿ ಮುಖ್ಯವಾಗಿ ಕಾರವಾರ ಜಿಲ್ಲೆಯಲ್ಲಿ ಉಪಯೋಗಿಸುತ್ತಾರೆಂದು ಕೇಳುತ್ತೇವೆ. ಆದರೆ ಗಿದ್ನ, ಅದ್ನ, ಒವ್ನು, ಇವ್ನು ಈ ಶಬ್ದಗಳು ವಿಜಾಪುರ ಜಿಲ್ಲೆಯ ಉತ್ತರ ತಾಲೂಕುಗಳಲ್ಲಿ ಮಾತ್ರ ಅತ್ಯಂತ ಪ್ರಚಲಿತವಿರುತ್ತದೆ. ಇವನ್ನು ಬಿಟ್ಟು ಬೇರೆ ಮಾಪಿನ ಹೆಸರುಗಳನ್ನು ಉಪಯೋಗಿಸಿದರೆ ಇಲ್ಲಿಯ ಜನರಿಗೆ ಅವು ತಿಳಿಯವು. ಬಸವೇಶ್ವರನು ತನ್ನ ವಚನಗಳನ್ನು ಬರೆದುದು ಜನಸಾಮಾನ್ಯರಿಗೋಸ್ಕರ. ಆದ್ದರಿಂದ ಬಸವೇಶ್ವರನು ಈ ವಚನವನ್ನು ನುಡಿದುದು ಅವನು ಇನ್ನೂ ಈ ವಿಜಾಪುರ ಪ್ರಾಂತದಲ್ಲಿ ಅಂದರೆ ಬಾಗೇವಾಡಿ, ಸಂಗಮ ಗ್ರಾಮಗಳಲ್ಲಿ ಇದ್ದಾಗಲೇ ಎಂದು ನಾವು ಅನುಮಾನಮಾಡಬಹುದು. ಅಂದರೆ ಆಗ ಅವನು ಇನ್ನೂ ಮಂತ್ರಿಯಾಗಿರಲಿಲ್ಲ. ಈ ಸಂಗತಿಯಿಂದ ಅವನು ಉಚ್ಚ ಸ್ಥಾನವನ್ನು ಹೊಂದುವ ಪೂರ್ವದಲ್ಲಿಯೇ ತನ್ನ ಧರ್ಮಜಾಗ್ರತಿಯ ಕಾರ್ಯಗಳನ್ನು ಕೈಕೊಂಡು ಜನರಲ್ಲಿ ವಚನಗಳ ಮೂಲಕ ಧರ್ಮಪ್ರಸಾರ ಮಾಡುವ ಕಾರ್ಯದಲ್ಲಿ ಉದ್ಯುಕ್ತನಾಗಿದ್ದನೆಂದು ನಾವು ತಿಳಿಯಬೇಕಾಗುತ್ತದೆ.

ಕಲಬುರ್ಗಿ ನಾಡಿನಲ್ಲಿ ಈಗ ಇರುವ ಮಾಪಿನ ಹೆಸರುಗಳು ಅದ್ನ, ಅರುಣ, ಒಕ್ಕಳ, ಇಕ್ಕಳ ಎಂದಿವೆ. ಈ ನಾಡು ಕಲ್ಯಾಣ ಪಟ್ಟಣವಿದ್ದ ಪ್ರಾಂತ. ಆದರೆ ಮಾಪಿನ ಈ ಹೆಸರುಗಳು ವಿಜಾಪುರ ಜಿಲ್ಲೆಯ ಹೆಸರುಗಳಿಗಿಂತಲೂ ಭಿನ್ನವಾಗಿವೆ. ಆದ್ದರಿಂದ ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿದ್ದಾಗ ಈ ವಚನವನ್ನು ರಚಿಸಿರಲಿಕ್ಕಿಲ್ಲೆಂದು ತೋರುತ್ತದೆ.

ನಮ್ಮ ಈ ಬರಹದ ಉದ್ದೇಶವು ಬಸವನ ಧರ್ಮಜಾಗ್ರತಿಯ ಕಾರ್ಯಗಳು ಅವನು ದೊಡ್ಡವನಾದ ಬಳಿಕ ಪ್ರಾರಂಭವಾಗದೆ ಅವನು ಇನ್ನೂ ಚಿಕ್ಕವನಾಗಿರುವಾಗಲೇ ಪ್ರಾರಂಭವಾದವೆಂದು ಹೇಳುವದೇ ಇರುತ್ತದೆ. ಅವನು ತನ್ನ ೧೬ನೇ ವರ್ಷದಲ್ಲಿ ಅಂದರೆ ಲಿಂಗಧಾರಿಯಾಗುವ ಪೂರ್ವದಲ್ಲಿಯೂ ಕೂಡ ಅವನಲ್ಲಿ ಕ್ರಾಂತಿಯ ಬೀಜಗಳು ತಲೆದೋರಿ ಅವು ರೂಪು

ಗೊಳ್ಳಹತ್ತಿದ್ದವು. ಆರಂಭದ ದಿಶೆಯಲ್ಲಿ ಅವು ಪಕ್ವ ಸ್ಥಿತಿಯನ್ನು ಹೊಂದಿರಲಿಲ್ಲ. ಮುಂದೆ ಶಿವಾನುಭವ ಮಂಟಪದಲ್ಲಿ ಹೊರಟ ಪರಿಪಕ್ವ ವಿಚಾರಗಳು ಇನ್ನೂ ತಲೆದೋರಲಿಲ್ಲ. ಆದರಿಂದ ಅವನ ವಚನಗಳಲ್ಲಿಯ ವಿಚಾರಗಳಲ್ಲಿ ಕೆಲವು ವ್ಯತ್ಯಾಸಗಳು ತೋರಿಬರುತ್ತವೆ. ಇವುಗಳು ಅವನಲ್ಲಿ ಕಾಲಕಾಲಕ್ಕೆ ಉಂಟಾಗಿದ್ದ ಮಾರ್ಪಾಡುಗಳ ಕುರುಹುಗಳಾಗಿವೆ. ಅವುಗಳಲ್ಲಿ ಕೆಲವುಗಳನ್ನು ನಾವು ಇಲ್ಲಿ ವಿವೇಚಿಸುತ್ತೇವೆ.

ಬಸವೇಶ್ವರನು ಪುರಾತನರ ವಿಷಯವಾಗಿ ಬಹಳ ಪೂಜ್ಯಭಾವವನ್ನು ತನ್ನ ವಚನಗಳಲ್ಲಿ ತೋರಿಸುತ್ತಾನೆ. ಅವರ ವಿಷಯವಾಗಿ ಉಲ್ಲೇಖಗಳು ಅವನ ವಚನಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಆದರೆ ಈ ಪುರಾತನರು ವೀರಶೈವರಲ್ಲ. ಅವರು ಶೈವರು. ದೇವಾಲಯಗಳಲ್ಲಿ ಸ್ಥಾಪಿಸಲ್ಪಟ್ಟಿರುವ ಸ್ಥಾವರಲಿಂಗವನ್ನು ಪೂಜಿಸುವವರು. ಆದರೆ ಇವರ ಮಾರ್ಗವನ್ನು ಖಂಡಿಸುವ ಅನೇಕ ವಚನಕಾರರ ವಚನಗಳು ಉಪಲಬ್ಧವಿವೆ. ಅವರಲ್ಲೊಬ್ಬ ವಚನಕಾರನು "ವೀರಶೈವರು ಶೈವರು ಕಟ್ಟಿರ್ದ ಗುಡಿಯನ್ನು ಹೊಗಲೇಕೆ?" ಎಂದು ಹೇಳುತ್ತಾನೆ. ಆದರೆ ಇವರಂತೆ ಬಸವೇಶ್ವರನು ಪುರಾತನರ ಬಗ್ಗೆ ಅನಾದರವನ್ನು ತೋರಿಸುವದಿಲ್ಲ. ಅವರೆಲ್ಲರೂ ತಮಿಳು ದೇಶದವರು, ಚೋಳಮಂಡಳದವರು. ಆದರೂ ಇವರನ್ನು ಬಸವೇಶ್ವರನು ಬಹಳ ಆದರಿಸುತ್ತಾನೆ. ರೇವಣಸಿದ್ಧೇಶ್ವರನು ಚೋಳರಾಜರಲ್ಲಿ ಹೋಗಿ ಅವರಿಂದ ಮನ್ನಣೆಯನ್ನು ಹೊಂದಿದವನು. ಅವನು ಅಲ್ಲಿ ಅನೇಕ ವರ್ಷ ವಾಸಿಸಿದನು. ಆದ್ದರಿಂದ ಈ ರೇವಣಸಿದ್ಧೇಶ್ವರನೇ ಪುರಾತನರ ಭಕ್ತಿಪಥವನ್ನು ಕರ್ನಾಟಕದಲ್ಲಿ ಮೊದಲು ಹರಡಿರಬೇಕು. ಇದೇ ಸಾಂಪ್ರದಾಯವನ್ನು ಬಸವೇಶ್ವರನು ತನ್ನ ಆರಂಭಕಾಲದಲ್ಲಿ ಅನುಸರಿಸಬೇಕು. ಆದ್ದರಿಂದಲೇ ಅವರನ್ನು ಇಷ್ಟು ಹೊಗಳುತ್ತಾನೆ. ಅಲ್ಲದೆ ಅವನ ವಚನಗಳಲ್ಲಿ ಶಿವಾಲಯಗಳನ್ನು ದೂಷಣೆ ಮಾಡಿದ್ದು ಎಲ್ಲಿಯೂ ಕಂಡುಬರುವದಿಲ್ಲ. ರೇವಣಸಿದ್ಧನು ಶಿವನೇ ಸರ್ವೋತ್ತಮನೆಂದು ಭಾವಿಸಿ, ವಿಷ್ಣುಪೂಜೆಯನ್ನು ನಿರಾಕರಿಸಿದನು. ಬಸವೇಶ್ವರನಾದರೂ ಇದೇ ರೀತಿಯನ್ನು ಅನುಸರಿಸಿ ವಿಷ್ಣುವಿನನ್ನು ನಿಂದಿಸಿದ ಉಕ್ತಿಗಳನ್ನು ರಚಿಸಿದ್ದಾನೆ. ಆದರೆ ಈ ವಿಚಾರಗಳು ಅವನ ಆರಂಭ ಕಾಲಿನವು. ಆದರೆ ಮುಂದೆ ಶಿವಾನುಭವ ಮಂಟಪದಲ್ಲಿ ಈ ವಿಚಾರಗಳು ಬದಲಾವಣೆ ಹೊಂದಿದವು. ಅಲ್ಲಿ ತ್ರಿಮೂರ್ತಿಗಳಲ್ಲಿ

ಯಾರನ್ನೂ ಕೂಡ ಮನ್ನಿಸಕೂಡದೆಂದು ನಿರ್ಧರಿಸಲ್ಪಟ್ಟಿತು. ಆಗ ಈ ತತ್ವವನ್ನು ಪ್ರಕಟಪಡಿಸುವ ವಚನಗಳು ಪ್ರಸಾರವಾಗಹತ್ತಿದವು. ಅವು ಗಳಲ್ಲಿ ವಿಷ್ಣುವಿನೊಂದಿಗೆ ಬ್ರಹ್ಮ ರುದ್ರರೂ ನಿರಾಕರಿಸಲ್ಪಟ್ಟರು. ಶಿವಾ ಲಯಗಳಲ್ಲಿ ಸ್ಥಾವರ ಲಿಂಗಪೂಜೆಯು ಸಹ ನಿಷೇಧಿಸಲ್ಪಟ್ಟಿತು. ಈ ವಿಷಯವಾಗಿ ವಾಚಕರು ಕೆಳಗೆ ಕಾಣಿಸಿದ ವಚನಗಳನ್ನು ಪರಿಶೀಲಿಸ ಬೇಕು:—

(೧) ಉಮಾಧಿನಾಥರು ಕೋಟಿ. ಪಂಚವಕ್ತ್ರರು ಕೋಟಿ. ನಂದಿ ವಾಹನರೊಂದು ಕೋಟಿ ನೋಡಯ್ಯ. ಸದಾಶಿವರೊಂದು ಕೋಟಿ. ಗಂಗೆವಾಳುಕಸಮ ರುದ್ರರು. ಇವರೆಲ್ಲರೂ ಕೂಡಲಸಂಗನ ಸಾನ್ನಿಧ್ಯರ ಲ್ಲದೆ ಸಮರಸವೇದ್ಯರೊಬ್ಬರೂ ಇಲ್ಲ.

(೨) ಆರು ಕೋಟಿ ಬ್ರಹ್ಮರು ಮಡಿವಲ್ಲಿ ನಾರಾಯಣಂಗೆ ಒಂದು ದಿನವಾಯಿತು. ನಾರಾಯಣರೊಂದು ಕೋಟಿ ಮಡಿವಲ್ಲಿ ರುದ್ರನ ಕಣ್ಣೆವೆ ಹಳಚಿತು. ರುದ್ರಾವತಾರ ಹಲವಳಿದಲ್ಲಿ ನಮ್ಮ ಕೂಡಲಸಂಗ ಮದೇವನೇನೆಂದು ಅರಿಯ.

ಈ ವಚನಗಳಲ್ಲಿ ಬಸವೇಶ್ವರನು ಇತರ ದೇವತೆಗಳನ್ನೊಡಗೊಂಡು ಶಿವನನ್ನೂ ಕೂಡ ನಿರಾಕರಿಸಿದ್ದಾನೆ. ಆದರೆ ಅವನು ಬೇರೆ ಕೆಲವು ವಚನಗಳಲ್ಲಿ ವಿಷ್ಣುವಿನನ್ನು ನಿಂದಿಸಿ ಶಿವನನ್ನು ಎತ್ತಿ ಹಿಡಿದವುಗಳು ಇವೆ. ಇವೆಲ್ಲವೂ ಅವನ ಆರಂಭದ ಕಾಲದಲ್ಲಿ ರಚಿಸಲ್ಪಟ್ಟವಿರಬೇಕೆಂದು ನಮಗೆ ತೋರುತ್ತದೆ. ಆದರೆ ಮುಂದೆ ಶಿವಾನುಭವ ಮಂಟಪದಲ್ಲಿ ವೀರಶೈವ ಮತತತ್ವಗಳು ಸ್ಥಿರ ಪಡಿಸಲ್ಪಟ್ಟ ಬಳಿಕ ಇಂಥ ವಿಚಾರಗಳು ಹೊರಟು ಹೋಗಿ, ಪರಮಾತ್ಮನು ಒಬ್ಬನೇ ಇದ್ದಾನೆ, ಅವನು ಜಗತ್ತಿನಲ್ಲೆಲ್ಲ ವ್ಯಾಪಿ ಸಿದ್ದಾನೆ, ಎಂಬ ತತ್ವಗಳು ವಚನಗಳ ಮೂಲಕ ಸಾರಲ್ಪಟ್ಟವು. ಈ ಸಂಗತಿಗಳಿಂದ ಬಸವೇಶ್ವರನು ಚಿಕ್ಕ ವಯಸ್ಸಿನವನಿರುವಾಗಲೇ ಅಂದರೆ ಅವನು ಸಂಗಮ ಕ್ಷೇತ್ರವನ್ನು ಬಿಟ್ಟು ಕಲ್ಯಾಣಕ್ಕಾಗಲಿ ಇಲ್ಲವೆ ಮಂಗ ಳವಾಡಕ್ಕಾಗಲಿ ಹೋಗುವ ಪೂರ್ವದಲ್ಲಿಯೇ ವಚನಗಳನ್ನು ರಚಿಸಲು ತೊಡಗಿರಬೇಕೆಂದು ತೋರುತ್ತದೆ.

ಈ ವಿಷಯವನ್ನು ಸಮರ್ಥಿಸಲು, ನಾವು ಇನ್ನೊಂದು ಉದಾಹ ರಣೆಯನ್ನು ಕೆಳಗೆ ಕೊಡುತ್ತೇವೆ. ಬಸವೇಶ್ವರನ ವಚನಗಳಲ್ಲಿರುವ

ಮಹೇಶ್ವರ ಸ್ಥಳದ ವಚನಗಳನ್ನು ವಾಚಕರು ಪರಿಶೀಲಿಸಬೇಕು. ಅವು ಗಳಲ್ಲಿರುವ ವೀರರಸಭರಿತವಾದ ಮಾತುಗಳು ಯಾರ ಮನಸ್ಸನ್ನಾದರೂ ಕಲಕಿಸುವಂಥವಿರುತ್ತವೆ. ಅವುಗಳ ಮೇಲಿಂದ ಬಸವೇಶ್ವರನು ಯುದ್ಧ ಭೂಮಿಯನ್ನು ಪ್ರತ್ಯಕ್ಷ ಕಂಡಿರುವಂತೆ ಭಾಸವಾಗುತ್ತದೆ. ಮಹೇಶ್ವರ ಸ್ಥಲದ ನುಡಿಗಳಲ್ಲಿ ವಚನಕಾರರೆಲ್ಲರೂ ಉಬ್ಬಾಳುತನದ ನುಡಿಗಳನ್ನು ನುಡಿಯುವದು ವಾಡಿಕೆಯಾಗಿದೆ ಆದರೂ ಅವರ ಇಂಥ ವಚನಗ ಳನ್ನು ಬಸವೇಶ್ವರನ ವಚನಗಳಿಗೆ ಹೋಲಿಸಿ ನೋಡಿದರೆ ಅವು ಬಸ ವೇಶ್ವರನ ನುಡಿಗಳಿಗೆ ಸಮಬಾರವು. ಇವುಗಳಲ್ಲಿ ಆವೇಶವು ತುಂಬಿ ತುಳುಕುತ್ತದೆ. ಬಸವೇಶ್ವರನು ರಣ ಭೂಮಿಯನ್ನು ಕಂಡವನಾದ್ದ ರಿಂದ ಅಲ್ಲಿಯ ಭಯಾನಕ ದೃಶ್ಯಗಳನ್ನು ಅವನು ತನ್ನ ವಚನಗಳಲ್ಲಿ ಚಿತ್ರಿಸಿದಂತೆ ಭಾಸವಾಗುತ್ತದೆ. ಈ ವಚನಗಳಲ್ಲಿ ರಣಕ್ಷೇತ್ರದಲ್ಲಿ ಹರಿ ಯುವ ರಕ್ತದ ಹೊನಲುಗಳು, ಭಟರು ಕಡಿಖಂಡಮಾಡಿ ಕಡಿದಾಡು ವದು, ಅವರು ಮುಂಚೂಣಿಯಲ್ಲಿ ಕಾಳಗಮಾಡುವದು, ಅವರ ಕೋಲಾ ಹಲ, ಇವುಗಳೆಲ್ಲವೂ ಯಥಾವತ್ತಾಗಿ ವರ್ಣಿಸಲ್ಪಟ್ಟಿವೆ. ವೀರಭಟರು ಕಾಳಗಕ್ಕೋಸ್ಕರ ಮುಂಚಿತವಾಗಿ ಕೋಲಭ್ಯಾಸ ಮಾಡುವದು, ಕಾಳ ಗದಲ್ಲಿ ಹಿಂದಕ್ಕೆ ಸರಿದಲ್ಲಿ ಅವರಿಗೆ ಆಗುವ ಹಾನಿಗಳು, ಇವೇ ಮೊದಲಾದವುಗಳನ್ನೂ ಅವನು ವಿವರಿಸಿದ್ದಾನೆ. ಈ ವಿವರಣೆಗಳು ಕೇವಲ ಕಾಲ್ಪನಿಕವಾದವುಗಳಿರದೆ ಅವನು ನಿಜವಾಗಿ ಕಂಡಂಥವುಗಳಾ ಗಿರಬೇಕು. ಬಸವನು ಪುರಾಣಗಳಲ್ಲಿ ದಂಡನಾಥನೆಂದು ಹೇಳಲ್ಪಡುವ ದುಂಟು. ಇದರಿಂದ ಅವನು ಯುದ್ಧಕಲೆಯನ್ನು ಬಲ್ಲವನಾಗಿರಬೇಕು. ಅವನು ಮಂಗಳವಾಡದಲ್ಲಿ ಇದ್ದಾಗ್ಗೆ ಬಿಜ್ಜಳನಿಗೆ ಯುದ್ಧಮಾಡುವ ಪ್ರಸಂಗಗಳು ಬಂದಿರಬಹುದು. ಆಗ ಚಾಲುಕ್ಯರು ಹೊಯಿಸಳರ ಕೂಡ ಯುದ್ಧಮಾಡಿದ್ದು ಇತಿಹಾಸದಿಂದ ತಿಳಿಯುತ್ತದೆ. ಬಿಜ್ಜಳನು ಒಬ್ಬ ವೀರಪುರುಷನು, ಮಂಡಲಾಧಿಕಾರಿಯು. ಆದ್ದರಿಂದ ಅವನೊಡನೆ ಬಸವನು ರಣಾಂಗಣಕ್ಕೆ ಹೋಗಿರಬೇಕು. ಬಸವನು ಮಂಗಳವಾಡದಲ್ಲಿ ಇದ್ದಾಗ್ಗೆ ಆವ ಆವ ಸಂಗತಿಗಳು ಜರಗಿದವು ಎಂಬುದನ್ನು ಕುರಿತು ನಾವು ಮುಂದೆ ಈ ವಿಷಯುವನ್ನು ಬರೆಯುವಕಾಲಕ್ಕೆ ವಿಸ್ತರಿಸುತ್ತೇವೆ ಒಟ್ಟಿನರೆ ಈ ಬಗೆಯ ವೀರರಸಪ್ರಧಾನವಾಗಿರುವ ವಚನಗಳನ್ನು ಬಸವನು ದಂಡ ನಾಥನಾಗಿದ್ದಾಗ ರಚಿಸಿರಬೇಕೆಂದು ನಮಗೆ ತೋರುತ್ತದೆ. ಆಗ

ಅವನು ಇನ್ನೂ ಕಲ್ಯಾಣ ಪಟ್ಟಣದಲ್ಲಿ ಮಂತ್ರಿಯಾಗಿರಲಿಲ್ಲ. ಮಂಗಳವಾಡದಲ್ಲಿಯೇ ಬಿಜ್ಜಳನ ಆಸ್ಥಾನದಲ್ಲಿ ಅಧಿಕಾರ ಸ್ಥಾನಗಳನ್ನು ಕ್ರಮೇಣ ಸಂಪಾದಿಸುತ್ತ ಮುಂದುವರಿಯುತ್ತಾ ಇದ್ದನು. ಹರಿಹರನು ಹೇಳುವಂತೆ ಅವನು ಮೊದಲು ಒಬ್ಬ ಗುಮಾಸ್ತನು, ಆ ಮೇಲೆ ಕೊಶಾಧ್ಯಕ್ಷನು ಆಗಿದ್ದನು. ಯಾಕಂದರೆ ಅವನು ಬಸವ ಭಂಡಾರಿ ಎಂದು ಕರೆಯಲ್ಪಟ್ಟಿದ್ದಾನೆ. ಈ ಅಧಿಕಾರಗಳ ತರುವಾಯ ಅವನು ಸೇನಾಪತಿಯಾಗಿರಬೇಕು. ಯಾಕಂದರೆ 'ಬಸವ ದಂಡನಾಥ' ಎಂದು ಅವನು ಕರೆಯಲ್ಪಟ್ಟಿದ್ದಾನೆ. ಕಟ್ಟಕಡೆಗೆ ಮಂತ್ರಿಯಾಗಿರಬೇಕು. ಹೀಗೆ ಬೇರೆ ಬೇರೆ ಕಾಲಗಳಲ್ಲಿ ಬಸವನು ಅಧಿಕಾರಿಯಾಗಿ ಕಾರ್ಯ ಮಾಡುತ್ತಿರಬೇಕು. ಹೀಗೆ ಅಧಿಕಾರಿಯಾಗಿದ್ದರೂ ಕೂಡ ಅವನು ತನ್ನ ಧರ್ಮ ಜಾಗ್ರತಿಯ ಕಾರ್ಯಗಳನ್ನು ಬಿಟ್ಟಿದ್ದಿಲ್ಲೆಂಬುದು ಅವನ ವಚನಗಳಿಂದ ತಿಳಿಯುತ್ತದೆ.

ಅವನು ವಚನಗಳನ್ನು ಬರೆಯಲು ಆರಂಭಿಸಿದ್ದು ಮಂತ್ರಿಯಾದ ಬಳಿಕಲ್ಲ. ಅಥವಾ ಕಲ್ಯಾಣಪಟ್ಟಣಕ್ಕೆ ಬಂದಬಳಿಕಲ್ಲ. ಈ ಕಾರ್ಯವು ಅವನ ಚಿಕ್ಕಂದಿನಲ್ಲಿ ತಿಳುವಳಿಕೆಯುಂಟಾಗಿ ಧರ್ಮಜಾಗ್ರತಿಯ ವಿಚಾರಗಳು ಬಂದಂದಿನಿಂದಲೇ ಪ್ರಾರಂಭವಾಗಿತ್ತು. ನಾವು ಮೇಲೆ ಉದಹರಿಸಿದ ಒಂದು ವಚನದಿಂದ ಅವನು ಇನ್ನೂ ಬ್ರಾಹ್ಮಣನಿದ್ದಾಗಲೇ ವಚನಗಳನ್ನು ಬರೆಯಹತ್ತಿರಬೇಕೆಂದು ಗೊತ್ತಾಗುತ್ತದೆ. ಮುಂದೆ ಅವನ ಜೀವಿತದಲ್ಲಿ ಅನೇಕ ವಿಚಾರಕ್ರಾಂತಿಗಳಾದವು. ಅವುಗಳಿಗನುಸರಿಸಿ ಅವನು ವಚನಗಳನ್ನು ಆಗಿಂದಾಗ್ಗೆ ಪ್ರಕಟಮಾಡುತ್ತ ಹೋಗಿದ್ದಾನೆ. ಅವನು ಭಕ್ತಿಭಾವದಿಂದ ಹೇಗೆ ತುಂಬಿರುವನೋ ಹಾಗೆಯೇ ಅವನು ವ್ಯವಹಾರಜ್ಞನೂ ನೀತಿಶಾಸ್ತ್ರವಿದನೂ ಧೈರ್ಯಶಾಲಿಯೂ, ಸೇನಾಪತಿಯೂ ಆಗಿದ್ದನು. ಈ ಸ್ಥಿತಿಗಳಿಗೆ ಅನುರೂಪವಾದ ವಚನಗಳು ಅವನ ಬಾಯಿಂದ ಹೊರಟಿವೆ.

ಈ ಪ್ರಕಾರ ಬಸವೇಶ್ವರನು ಲಿಂಗಧಾರಣ ಹೊಂದಿದ ಸಮಯದಲ್ಲಿ ಅವನ ವಿಚಾರಗಳಲ್ಲಿ ಒಂದು ಮಹತ್ವದ ಕ್ರಾಂತಿಯುಂಟಾಗಿರಬೇಕೆಂಬುದು ಸ್ಪಷ್ಟವಿರುತ್ತದೆ. ಆಗ ಅವನು ಪ್ರಬುದ್ಧನಾಗಿರಬೇಕು. ಇದರ ಪರಿಣಾಮವಾಗಿ ಅವನು ಲಿಂಗಧಾರಣೆ ಮಾಡಿಕೊಳ್ಳಲು. ಆಗ

ಸ್ವಜಾತಿಯುವರು ಬಹಳ ಕೋಲಾಹಲವನ್ನು ಎಬ್ಬಿಸಿದರು. ಆದರೆ ಬಸವೇಶ್ವರನು ಧೈರ್ಯಗೆಡದೆ ತನ್ನ ಅಕ್ಕನಾದ ನಾಗಲಾಂಬಿಕೆಯೊಡನೆ ಸಂಗಮಕ್ಷೇತ್ರಕ್ಕೆ ತೆರಳುವವನಾದನು.

ಈ ಕಾಲದಲ್ಲಿ ಸಂಗಮಕ್ಷೇತ್ರವು ವೀರಶೈವರ ಕೇಂದ್ರಸ್ಥಾನವಾಗಿರಬೇಕೆಂದು ತೋರುತ್ತದೆ. ಅಲ್ಲದೆ ಈ ಸ್ಥಳದಲ್ಲಿ ಬಸವೇಶ್ವರನು ತನ್ನ ಬಾಲ್ಯವನ್ನು ಕಳೆದಿದ್ದಾನೆ. ಮತ್ತು ಅದು ತನ್ನ ತಾಯಿಯಾದ ಮಾದಲಾಂಬಿಕೆಯ ತಾಯಿಯ ಊರು. (ಶಿವಾನುಭವ ಸಂಪುಟ ೧೬ ಸಂಚಿಕೆ ೭ ನೋಡಿರಿ.) ಅಲ್ಲಿ ಸ್ವಬಾಂಧವರ ಪೀಡೆಯಿಂದ ರಕ್ಷಣೆಯು ದೊರೆಯುವದೆಂಬ ಭರವಸೆಯಿಂದ ಅಲ್ಲಿ ಹೋಗಿರಬೇಕು. ಅದಲ್ಲದೆ ಸಂಗಮಕ್ಷೇತ್ರವು ಬಹು ವಿಶಾಲವಾದ ಸುಂದರ ಪ್ರದೇಶವು. ಅಲ್ಲಿ ವಿಸ್ತಾರವಾದ ಕೃಷ್ಣಾ ಮತ್ತು ಮಲಪ್ರಭೆ ನದಿಗಳು ಕೂಡಿವೆ. ಈ ಸುಂದರ ಪ್ರದೇಶದಲ್ಲಿ ಬಸವೇಶ್ವರನು ಬಂದು ಸುಮಾರು ೭—೮ ವರ್ಷ ವಾಸಮಾಡಿದನು. ಆದರೆ ಇಲ್ಲಿ ಆವನು ವ್ಯರ್ಥವಾಗಿ ಕಾಲಕಳೆದಿಲ್ಲ. ಅಲ್ಲಿದ್ದುಕೊಂಡು ದೇಶದಲ್ಲೆಲ್ಲ ಒಂದು ದೊಡ್ಡ ಕ್ರಾಂತಿಯನ್ನಾರಂಭಿಸಿದನು. ಈ ವಿಷಯವು ಮುಂದಿನ ಲೇಖಾಂಕಗಳಲ್ಲಿ ಮುಂದುವರಿಸಲ್ಪಡುವದು.

---

# ವೀರಶೈವ ಸಮಾಜದ ಆರ್ಥಿಕ ಸುಧಾರಣೆ.

(ಲೇಖಕ:— ರಾ॥ ಬ॥ ಫ. ಗು. ಹಳಕಟ್ಟಿ, ಬಿ. ಏ. ಎಲ್. ಎಲ್. ಬಿ )

ಶಿವಾನುಭವ ಪತ್ರಿಕೆಯಲ್ಲಿ ಆರ್ಥಿಕ ವಿಷಯುಗಳ ವಿವೇಚನೆ ಏಕೆ, ಎಂದು ಅನೇಕರು ಪ್ರಶ್ನೆಮಾಡಬಹುದು. ಇಂಥ ವಿಷಯುಗಳ ವಿವೇಚನೆಯಾದರೂ ಶಿವಾನುಭವ ಪತ್ರಿಕೆಯಲ್ಲಿ ಈ ವರೆಗೂ ಬಂದಿರುವದಿಲ್ಲ. ಅದು ಕೆಲವೊಂದು ವಿಶಿಷ್ಟ ಕಾರ್ಯವನ್ನು ಕೈಕೊಂಡು ಅದನ್ನು ಈ ವರೆಗೂ ಮುಂದುವರಿಸುತ್ತ ಬಂದಿದೆ. ಆದರೆ ಶಿವಾನುಭವ ತತ್ವಗಳಿಗೂ ಇಂಥ ಪ್ರಾಪಂಚಿಕ ವ್ಯವಹಾರಕ್ಕೂ ಏನೂ ಸಂಬಂಧವಿಲ್ಲೆಂದು ಯಾರಾದರೂ ಭಾವಿಸಿದರೆ ಅದು ತಪ್ಪು ತಿಳುವಳಿಕೆ ಎಂದು ನಾವು ಹೇಳದೆ ಇರಲಾರೆವು. ಶಿವಾನುಭವವು ವ್ಯವಹಾರಕ್ಕೆ ನಿಕಟ ಸಂಬಂಧವುಳ್ಳುದಾಗಿದೆ. ವ್ಯವಹಾರದಲ್ಲಿ ಮನುಷ್ಯನು ಉಚ್ಚತಮ ಸ್ಥಿತಿಯನ್ನು ಯಾವ ರೀತಿಯಿಂದ ಹೊಂದಬೇಕೆಂಬುದನ್ನು ಅರುಹುವದು ಶಿವಾನುಭವಕ್ಕೆ ಹೊರತಾದುದಲ್ಲ. ಕಾರ್ಯಕ್ಷಮತೆಯೇ ಶಿವಾನುಭವದ ಗುರಿಯು. ಹಿಂದುಸ್ತಾನದಲ್ಲಿ ಅನೇಕ ಧರ್ಮಗಳೂ ಸಮಾಜಗಳೂ ಇವೆ. ಆದರೆ ವ್ಯವಹಾರ ಮತ್ತು ಧರ್ಮ ಇವುಗಳಲ್ಲಿ ಸರಿಯಾದ ಸಂಬಂಧವನ್ನುಂಟು ಮಾಡಿದ ಧರ್ಮವು ವೀರಶೈವವೊಂದೇ ಇದೆ.

ಬ್ರಾಹ್ಮಣ ಧರ್ಮವು ಜಪತಪಾನುಷ್ಠಾನಗಳಿಗೆ ಅನಾವಶ್ಯಕ ಮಹತ್ವವನ್ನು ಕೊಟ್ಟು ಕರ್ಮಮಾರ್ಗವನ್ನು ಬೆಳಿಸಿತು. ಇದರಿಂದ ಹಿಂದುಸ್ಥಾನದಲ್ಲಿ ಧಾರ್ಮಿಕ ವರ್ಗವೆಂದು ಸ್ವತಂತ್ರ ಸಮಾಜವು ಉಂಟಾಯಿತು. ಸಮಾಜದಲ್ಲಿ ಉಚ್ಚನೀಚ ಭಾವವು ಉತ್ಪನ್ನವಾಯಿತು. ಜಾತಿಗಳು ಉದ್ಭವಿಸಿದವು. ಸಮಾಜದಲ್ಲಿ ಒಡಕುಗಳು ಹುಟ್ಟಿದವು. ಇದರಿಂದ ದೇಶವು ಕುಗ್ಗಿತು. ಬ್ರಾಹ್ಮಣ ಧರ್ಮದಲ್ಲಿ ಬೇರೊಂದು ಮಾರ್ಗದವರು ಉತ್ಪನ್ನರಾಗಿ ಇವರ ಪ್ರಾಬಲ್ಯದ ಮೂಲಕ ಜನರು ಸಂಸಾರವನ್ನು ತ್ಯಜಿಸಿ, ಅರಣ್ಯವಾಸಿಗಳಾಗಿ ತಪಸ್ಸನ್ನಾಚರಿಸುವದೇ ಮನುಷ್ಯನ ಶ್ರೇಷ್ಠ ಧರ್ಮವೆಂದು ತಿಳಿಯಹತ್ತಿದರು. ಇದರಿಂದಲೂ ವ್ಯವಹಾರಕ್ಕೆ ಧರ್ಮವು ದೂರಾಗಹತ್ತಿತು. ಜೈನ ಸಂಸ್ಕೃತಿಯ ಮೂಲಕ ದೇಹವನ್ನು

ಕ್ಲೇಶಪಡಿಸುವದರಲ್ಲಿಯೇ ಮನುಷ್ಯನ ವಿಕಾಸವು ಇದೆ ಎಂದು ಭಾವಿಸಲ್ಪಟ್ಟಿತು. ಕರ್ನಾಟಕದಲ್ಲಿ ಜೈನ ಧರ್ಮದ ಸಂಸ್ಕೃತಿಯು ಒಂದು ಕಾಲದಲ್ಲಿ ಬಹಳವಾಗಿ ಪಸರಿಸಿತ್ತು. ಆಗ ದೇಶದಲ್ಲಿ ಈತರದ ವಿಚಾರಗಳು ಹೆಚ್ಚಾಗಿ ರೂಢವಾಗಿದ್ದವು. ಬೌದ್ಧ ಧರ್ಮವಾದರೂ ಇದೇ ರೀತಿಯಾಗಿ ಸಮಾಜದಲ್ಲಿ ಪರಿಣಾಮ ಮಾಡಿತು. ಬೌದ್ಧ ಸನ್ಯಾಸಿಗಳು ಜನರಿಂದ ದೂರಿರಬೇಕೆಂದು ಬಯಸಿ ಅರಣ್ಯ ಮಧ್ಯದಲ್ಲಿ ಗುಹೆಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದರು. ಇಂಥ ಗುಹೆಗಳು ಕರ್ನಾಟಕದಲ್ಲಿಯೂ ಮುಂಬಯಿ ಪಟ್ಟಣದ ನೆರೆಯಲ್ಲಿಯೂ ಅನೇಕವಾಗಿವೆ. ಆದರೆ ಈ ತರದ ವಿಚಾರಗಳಿಗೆ ವೀರಶೈವ ಧರ್ಮದಲ್ಲಿ, ಶಿವಾನುಭವದಲ್ಲಿ, ವಚನಶಾಸ್ತ್ರದಲ್ಲಿ, ಇಂಬಿರುವದಿಲ್ಲ. ಶಿವಶರಣರ ವಚನಶಾಸ್ತ್ರವು ವ್ಯವಹಾರ, ಮತ್ತು ಧರ್ಮ ಇವುಗಳನ್ನು ಪರಸ್ಪರ ದೂರಮಾಡಿರುವದಿಲ್ಲ. ಅವುಗಳಲ್ಲಿ ಪರಸ್ಪರ ಸಂಬಂಧವನ್ನುಂಟು ಮಾಡಿದೆ. ಶಿವಾನುಭವವು ವ್ಯವಹಾರದ ರೀತಿಯನ್ನು ಬೋಧಿಸುತ್ತದೆ. ಅದು ನೀತಿ ಶಾಸ್ತ್ರಕ್ಕೆ ಮಹತ್ವ ಕೊಟ್ಟಿದೆ. ನೀತಿಯನ್ನು ಬೋಧಿಸದೆ ಇದ್ದ ಯಾವ ವಚನವೂ ಇರುವದಿಲ್ಲ. ನೀತಿಯೇ ವೀರಶೈವ ಧರ್ಮಕ್ಕೆ ತಳಹದಿಯಾಗಿದೆ. ಒಬ್ಬ ವಚನಕಾರನು ಕೆಳಗಿನ ವಚನವನ್ನು ನುಡಿದಿದ್ದಾನೆ. ಅದನ್ನು ವಾಚಕರು ಚನ್ನಾಗಿ ಲಕ್ಷಿಸಬೇಕು. ಅವನು ಅನ್ನುವದೇನೆಂದರೆ:—

"ವೀರಶೈವವೆಂಬುದು ಒಂದು ಅರಣ್ಯ ಮಧ್ಯದಲ್ಲಿ ಒಬ್ಬ ಪರ್ಣಭಕ್ಷಕನು ಹೇಳಿದುದು ಅಲ್ಲ; ಒಬ್ಬ ಮಾಂಸ ಭಕ್ಷಕನು ಕೇಳಿದುದು ಅಲ್ಲ. ವೀರಶೈವವೆಂಬುದು ಒಂದು ವನದಲ್ಲಿರ್ದ ವಾಯು ಭಕ್ಷಕನು ಹೇಳಿದುದೂ ಅಲ್ಲ; ಒಬ್ಬ ಸುರಾಪಾನ ಮಾಡುವವನು ಕೇಳಿದುದೂ ಅಲ್ಲ. ವೀರಶೈವವೆಂಬುದು ಒಂದು ಪರ್ವತದಲ್ಲಿ ಒಬ್ಬ ದೇಹಿ ಹೇಳಿದುದು ಅಲ್ಲ; ಒಬ್ಬ ದೇಹಧಾರಕನು ಕೇಳಿದುದು ಅಲ್ಲ, ವೀರಶೈವವೆಂಬುದು ಅನಂತಕೋಟಿ ವೇದ ಶಾಸ್ತ್ರ ಪುರಾಣಾಗಮ ಮಂತ್ರಾರ್ಥಸಾರ ಸುಧಾರಸವು. ಪರಮಶಿವ ಪರಮಾರ್ಥ ಪರತತ್ವ ಪರಮಾತ್ಮ ಪರಬ್ರಹ್ಮ ಪರಮಲಿಂಗ ಪರಾಪರ ವಸ್ತುವಾದ ಪರಮಾತ್ಮನು" ಎಂದು ಹೇಳಿದ್ದಾನೆ. ಈ ವಚನದಲ್ಲಿ ವೀರಶೈವ ಧರ್ಮದ ನಿಜಸ್ವರೂಪವನ್ನು ಬಹು ಚನ್ನಾಗಿ ಈ ವಚನಕಾರನು ಬೋಧಿಸಿದ್ದಾನೆ. ಇನ್ನೊಬ್ಬ ವಚನಕಾರನಾದ ಸಿದ್ಧರಾಮೇಶ್ವರನು ಅನ್ನುವದೇನೆಂದರೆ:—

"ಭಕ್ತನ ಮನೆ ಹೆಣ್ಣಿನೊಳಗಾದರೆ ವಿವಾಹವಾಗಿ ಕೊಡುವುದು. ಭಕ್ತನ ಮನೆ ಮಣ್ಣಿನೊಳಗಾದರೆ ಕೊಂಡು ಆಲಯುವ ಮಾಡುವುದು. ಭಕ್ತನ ಮನೆ ಹೊನ್ನಿನೊಳಗಾದರೆ ಬಳಲಿ ಬೊರಕಿಸುವುದು ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ."

ಶಿವಾನುಭವದ ಉದ್ದೇಶವು ಮನುಷ್ಯನ ವ್ಯವಹಾರವನ್ನು ಉತ್ತಮಗೊಳಿಸಿ ಅವನನ್ನು ಉಚ್ಚಸ್ಥಿತಿಗೆ ಒಯ್ಯುವದದೆ. ವ್ಯವಹಾರ ಶಾಸ್ತ್ರಕ್ಕೆ ಅದು ಹೊರತಾದುದಲ್ಲ. ಆದ್ದರಿಂದ ಶಿವಾನುಭವ ಶಾಸ್ತ್ರದ ತಿಳುವಳಿಕೆಯನ್ನು ಬೋಧಿಸತಕ್ಕ ವೀರಶೈವರ ಮಠಗಳು ಗ್ರಾಮಗಳಲ್ಲಿವೆ. ಶಿವಶರಣರು ಗ್ರಾಮಗಳನ್ನು ಬಿಟ್ಟು ಅರಣ್ಯವಾಸಿಗಳಾಗಲಿಲ್ಲ, ವನವಾಸಿಗಳಾಗಲಿಲ್ಲ. ಅವರು ಜನತೆಯಲ್ಲಿದ್ದುಕೊಂಡೇ, ಜನರಲ್ಲಿಯೇ ವಾಸಿಸುತ್ತ, ಜನರು ಮಾಡುತ್ತಿರುವ ಉದ್ಯೋಗಗಳನ್ನು ಮಾಡುತ್ತ, ಜನರಲ್ಲಿಯೇ ಹುಟ್ಟಿ, ಬೆಳೆದು, ಬಾಳಿ, ಶ್ರಮಪಟ್ಟು, ತಮ್ಮ ಜೀವಿತದ ಕಾರ್ಯಗಳನ್ನು ಸಾಗಿಸಿದರು. ಅವರು ಜೈನ ಬೌದ್ಧರಂತೆ ದೇವಾಲಯಗಳನ್ನು ಕಟ್ಟಲಿಲ್ಲ. ತಮ್ಮ ದೇಹವೇ ದೇವಾಲಯವೆಂದು ಭಾವಿಸಿದರು. ಜನರ ಉದ್ಧಾರಕ್ಕಾಗಿ ಗ್ರಾಮಾಂತರಗಳಲ್ಲೆಲ್ಲ ಮಠಗಳನ್ನು ನಿರ್ಮಿಸಿದರು. ಈ ಮಠಗಳಲ್ಲಿದ್ದುಕೊಂಡು ಶಿವಶರಣರ ತತ್ವಗಳನ್ನು ಶಿವಾನುಭವ ಶಾಸ್ತ್ರವನ್ನು ಬೋಧಿಸುತ್ತಿದ್ದರು. ಗ್ರಾಮವಾಸಿಗಳಾಗಿ ಗ್ರಾಮದಲ್ಲಿಯ ಮಕ್ಕಳಿಗೆಲ್ಲ ಓದುಬರಹ ಕಲಿಸುತ್ತಿದ್ದರು. ವ್ಯಾಪಾರಸ್ಥರಿಗೆ ಬೇಕಾದ ಲೆಕ್ಕ, ಗಣಿತವನ್ನೂ, ಮಠಾಧಿಕಾರಿಗಳಿಗೆ ಅವರಿಗೆ ಬೇಕಾಗುವಷ್ಟು ಧರ್ಮ, ನೀತಿ, ಆಚಾರಗಳನ್ನೂ ಹೇಳುತ್ತಿದ್ದರು. ಹೀಗೆ ವೀರಶೈವ ಧರ್ಮವು ಮತ್ತು ವೀರಶೈವ ಸಮಾಜ ರಚನೆಯು ಮನುಷ್ಯನ ಸ್ವಾಭಾವಿಕ ವಿಕಾಸಕ್ಕೆ ಆತಂಕ ತರುವಂಥದಲ್ಲ. ಇಷ್ಟೇ ಅಲ್ಲ, ಅದು ಅದನ್ನು ಪೋಷಿಸುವಂಥದಿರುತ್ತದೆ.

ಕರ್ನಾಟಕದ ವ್ಯಾಪಾರಸ್ತರು ಮೊದಲಿನಿಂದಲೂ ಶಿವಾನುಭವಕ್ಕೆ ಹೊಂದಿದವರು. ಬಸವಾದಿ ಶಿವಶರಣರನ್ನು ಬಹಳ ಪ್ರೀತಿಸುವವರು. ಬಣಜಿಗರು ಬಸವನ ಕೇವಲ ಭಕ್ತರು, ವಚನಶಾಸ್ತ್ರವನ್ನು ಪ್ರೀತಿಸುವವರು. ಬಣಜಿಗರ ವೈಭವದ ಮೂಲಕ ಮೊದಲಿನ ಕರ್ನಾಟಕವು ಘನತೆಗೇರಿತು. ನಮ್ಮ ನಾಡಿನಲ್ಲಿ ಬಣಜಿಗರು, ಚಿಟ್ಟೇರು, ಕುರುಹಿನ ಶೆಟ್ಟಿಗಳು ಈ ಸಮಾಜದವರು ಧಾನ್ಯ, ಬಟ್ಟೆ ಮೊದಲಾದ ಜೀನಸುಗಳನ್ನು ಬರೇ ಒಳನಾ

ಡಿನಲ್ಲಿ ಮಾತ್ರವಲ್ಲ, ಬಂದರಗಳಿಗೆ ಹೋಗಿ ಪರನಾಡುಗಳಿಗೆ ಸಾಗಿಸುತ್ತಿದ್ದರು. ಇದರಿಂದ ಕರ್ನಾಟಕದ ಬಂದರಗಳು ಬೆಳೆದವು, ಕಾಡಿನಲ್ಲಿ ಪಟ್ಟಣಗಳು ಹುಟ್ಟಿದವು, ಬೈಲು ಸೀಮೆಯಲ್ಲಿ ವ್ಯಾಪಾರದ ಸ್ಥಾನಗಳು ಬೆಳೆದವು. ಅರ್ಜುನವಾಡವು ಹುಕ್ಕೇರಿ ಬದಿಯಲ್ಲಿ ಈಗ ಒಂದು ಕುಗ್ರಾಮವಾಗಿದೆ. ಆದರೆ ಅದು ೧೨ನೇ ಶತಮಾನದಲ್ಲಿ ಬಸವೇಶ್ವರನ ವಂಶಜರಿದ್ದ ಪುಣ್ಯಭೂಮಿಯಾಗಿ, ಆದರ ವಿಸ್ತಾರವು ಪೂರ್ವ ಪಶ್ಚಿಮ ೨-೩ ಮೈಲು ಮತ್ತು ಉತ್ತರ ದಕ್ಷಿಣ ೫-೬ ಮೈಲುಗಳ ವರೆಗೆ ಹಬ್ಬಿತ್ತು. ಆದರ ಹೆಸರು ಕವಿಳಾಸಪುರ, ಅಂದರೆ ಕೈಲಾಸಪುರ. ಪುಲಿಗೆರಿಯು ಯಾದವರಾಜರ ಮಾಂಡಲಿಕರಿದ್ದ ಸ್ಥಾನವು. ರಾಘವಾಂಕ ಕವಿಯು ಆದರ ಸೌಂದರ್ಯವನ್ನು ತನ್ನ ಸೋಮನಾಥ ಪುರಾಣದಲ್ಲಿ ಅತ್ಯಂತವಾಗಿ ವರ್ಣಿಸಿದ್ದಾನೆ. ರಟ್ಟ ರಾಜರ ಸ್ಥಾನವಾದ ಸವದತ್ತಿಯು, ಕದಂಬ ರಾಜರ ಸ್ಥಾನವಾದ ಹಲಸಿಗೆಯು, ದೊಡ್ಡ ಪಟ್ಟಣಗಳಾಗಿದ್ದವು. ಬನವಾಸಿ ಬಳ್ಳಿಗಾವಿಗಳು ನಿಬಿಡವಾದ ಕಾನನದ ಮಧ್ಯದಲ್ಲಿವೆ. ಆದರೆ ಅವು ಬಂದರಗಳಿಗೆ ಸರಕುಸಾಗಿಸುವ ಹಾದಿಗಳಲ್ಲಿದ್ದದರಿಂದ ಅವು ವೈಭವದಿಂದ ಮೆರೆದವು. ಬಳ್ಳಿಗಾವಿಯು ವೀರಬಣಂಜುಗಳ ಪುಣ್ಯಸ್ಥಾನವು. ಈ ಬಣಂಜುಗಳ ಐಶ್ವರ್ಯದಿಂದ ಅಲ್ಲಿ ಸುಂದರವಾದ ದೇವಾಲಯಗಳಾದವು. ಹೊಯಿಸಾಳ ರಾಜರ ವಿಷ್ಣುವರ್ಧನನು ಮತ್ತು ಕಲ್ಯಾಣದ ಕಲಚೂರ್ಯ ಬಿಜ್ಜಳನು ಅವುಗಳಿಗೆ ಉಂಬಳಿಯನ್ನಿತ್ತಿದ್ದಾರೆ ಈ ರಾಜರು ಈ ವೀರ ಬಣಂಜುಗಳನ್ನು ಬಹಳ ಸನ್ಮಾನಿಸಿದ್ದಾರೆ. ಅವರ ಗುರುಗಳ ಪಾದ ತೊಳೆದು ಮನ್ನಿಸಿದ್ದಾರೆ. ಬಣಜಿಗ ಸಮಾಜಕ್ಕೆ ಹಿರಿಯನೆಂದರೆ ಶೆಟ್ಟರಷ್ಟೇ. ಆದರೆ ಈ ಶೆಟ್ಟರ ಒಪ್ಪಿಗೆ ಇಲ್ಲದೆ ಹಿಂದಿನ ಯಾವ ರಾಜನೂ ಯಾವ ಮಾಂಡಲಿಕನೂ ಗ್ರಾಮಗಳಲ್ಲಿ ಉಂಬಳಿಯನ್ನು ಹಾಕಿ ಕೊಡುತ್ತಿದ್ದಿಲ್ಲ. ಇದು ಎಂಟು ನೂರುವರ್ಷದ ಹಿಂದಿನ ಸ್ಥಿತಿಯು.

ಮುಂದೆ ವಿಜಯನಗರದ ರಾಜ್ಯವು ಪ್ರಬಲವಾಯಿತು. ಉತ್ತರಕ್ಕೆ ವಿಜಾಪುರ ಬಾದಶಹರ ರಾಜ್ಯವೂ ಉದಯವಾಯಿತು. ಸ್ವಾದಿ ಕೆಳದಿ ಅರಸರು ವಿಜಯನಗರ ರಾಜರ ಮಾಂಡಲಿಕರು. ಈ ಎಲ್ಲ ರಾಜರ ಕಾಲದಲ್ಲಿಯೂ ಕರ್ನಾಟಕದ ವ್ಯಾಪಾರವು ಬಲಿಯಿತು. ವಿಜಯನಗರದ ವೈಭವದ ಖ್ಯಾತಿಯು ಯುರೋಪಖಂಡದ ವರೆಗೆ ಮುಟ್ಟಿ ಅಲ್ಲಿಯ ಇಂಗ್ಲಿಷ ಫ್ರೆಂಚ ಪೋರ್ತುಗೀಜರನ್ನು ಹಿಂದುಸ್ತಾನಕ್ಕೆ ಬರಮಾಡಿ

ಕೊಂಡಿತು. ಈ ರಾಜರ ಒಪ್ಪಿಗೆಯಿಂದ ಇಲ್ಲಿ ಅವರು ತಮ್ಮ ಅಂಗಡೀ ಹಾಕಿದರು. ಇದರ ಉತ್ತರಕ್ಕೆ ವಿಜಾಪುರದವರ ಸಂಪತ್ತು ಕಡಿಮೆಯಾಗಿರಲಿಲ್ಲ. ಅವರ ಹಡಗುಗಳು ಆಫ್ರಿಕಾ ತುರ್ಕಸ್ಥಾನಗಳಿಗೆ ಹೋಗುತ್ತಿದ್ದವು. ಹಬಸಿಗಳೂ ತುರ್ಕರೂ ಅವರ ರಾಜ್ಯದಲ್ಲಿ ಬಂದಿದ್ದರು. ಕೆಳದಿ ಸ್ವಾದಿ ಅರಸರು ಪೋರ್ತುಗೀಜರ ಕೂಡ ವ್ಯಾಪಾರ ನಡಿಸುತ್ತಿದ್ದರು. ಅವರ ಆಳಿಕೆಯಲ್ಲಿ ಅರಣ್ಯ ಮಧ್ಯದಲ್ಲಿ ಪಟ್ಟಣಗಳು ಹುಟ್ಟಿದವು. ಸಾಂಬ್ರಾಣಿ ಹಲ್ಯಾಗಳು ಬಹಳ ಬೆಳೆದವು. ಭಟಕಳ ಹೊನ್ನಾವರ ಬಂದರಗಳು ಸುಂದರ ಶಹರಗಳಾದವು. ಕಾಡಿನಲ್ಲೆಲ್ಲ ಮಾರ್ಗಗಳು ಒಯ್ಯಲ್ಪಟ್ಟವು. ಬಂದರಗಳಿಗೆ ಹೋಗಿ ಬರುವ ಸರಕುಗಳ ಮೇಲೆ ಕಳ್ಳಕಾಕರ ಭೀತಿಯು ಇರಲಿಲ್ಲ. ನಿರ್ಭೀತಿಯಿಂದ ಚಕ್ಕಡಿಗಳೂ ಹೇರಿನ ಎತ್ತುಗಳೂ ಬಂದರಗಳಿಗೆ ಹೋಗಿ ಬರುತ್ತಿದ್ದವು. ಇಟಲಿಯಲ್ಲಿ ಪ್ಲಾರೆನ್ಸ ಶಹರದ ಅಧಿಪತಿಗಳು ರಾಜ್ಯಭಾರಕ್ಕಿಂತಲೂ ವ್ಯಾಪಾರದಲ್ಲಿ ಹೆಚ್ಚಿಗೆ ಮನಸ್ಸು ಹಾಕಿದವರೆಂದು ಪ್ರಸಿದ್ಧಿ ಇದೆ. ಕೆಳದಿ ಸ್ವಾದಿ ರಾಜರನ್ನು ಯುರೋಪಿಯನ್ನ ಪ್ರವಾಸಿಗಳು ಈ ಪ್ಲಾರೆನ್ಸ ಅಧಿಪತಿಗಳಿಗೆ ಹೋಲಿಸಿ ನುಡಿದಿದ್ದಾರೆ. ಮಠಾಧಿಕಾರಿಗಳೂ ಕೂಡ ವ್ಯಾಪಾರದಲ್ಲಿ ಮಗ್ನರಾದವರಾಗಿದ್ದರು. ಇದರಿಂದ ದೇಶದಲ್ಲಿ ಶ್ರೀಮಂತಿಕೆಯು ಬೆಳೆಯಿತು. ಕಾರವಾರ ಶಿವಮೊಗ್ಗಾ ಜಿಲ್ಲೆಗಳ ಜನರಲ್ಲಿ ವೈಭವ ಹೆಚ್ಚಿತು. ಹೈದರನು ಬೀದನೂರನ್ನು ಸುಲಿದಾಗ, ಕೋಟಿಗಟ್ಟಲೆ ರೂಪಾಯಿಗಳನ್ನು ಬಳಿದುಕೊಂಡು ಹೋದನು. ಶಿವಾಜಿಯು ಹುಬ್ಬಳ್ಳಿಯನ್ನು ಸುಲಿದಾಗ ಅಪಾರ ಹಣವನ್ನು ದೋಚಿಕೊಂಡು ಹೋದನು.

ಆದರೆ ಈ ಸುಸ್ಥಿತಿಯು ಈಗ ಕರ್ನಾಟಕ ದೇಶದಲ್ಲಿ ಎಲ್ಲಿ ಉಳಿದದೆ? ಅದೊಂದು ಬಡದೇಶವಾಗಿದೆ. ಇಲ್ಲಿಯ ವ್ಯಾಪಾರಸ್ಥರಲ್ಲಿ—ಬಣಜಿಗರಲ್ಲಿ—ಮೊದಲಿನ ವೈಭವಸ್ಥಿತಿಯು ಇಲ್ಲದಾಗಿದೆ. ಅವರು ತಮ್ಮ ಮೊದಲಿನ ವ್ಯಾಪಾರವನ್ನು ಕಳೆದುಕೊಂಡಿದ್ದಾರೆ. ಅದು ಈಗ ಕರ್ನಾಟಕೇತರರ ಕೈಯ್ಯಲ್ಲಿ ಹೋಗಿಬಿಟ್ಟದೆ. ಪರಿಸ್ಥಿತಿಯು ಬದಲಾಯಿತು. ಆದರೆ ನಮ್ಮ ವ್ಯಾಪಾರಸ್ತರು ಅದಕ್ಕೆ ಅನುಸರಿಸಿ ತಮ್ಮ ಧೋರಣವನ್ನು ಇಟ್ಟುಕೊಳ್ಳಲಿಲ್ಲ. ಅದರಿಂದ ಅವರಿಗೆ ಈ ಹಾಡಾಯಿತು. ಮೊದಲಿನ ವ್ಯಾಪಾರೀ ಕೇಂದ್ರಗಳು ಈಚೆಗೆ ತಪ್ಪಿ ಹೋದವು. ನೊದಲಿನ ಕಾಲದಲ್ಲಿ ಹುಟ್ಟುವಳಿ ಪ್ರದೇಶಗಳಿಂದ ಬಂದರಗಳಿಗೆ ಹೋಗುವ ಮಾರ್ಗಗಳು ಕರ್ನಾ

ಟಕದಲ್ಲಿದ್ದದರಿಂದ ಕರ್ನಾಟಕದ ಬಂದರಗಳು ಬೆಳೆದವು. ಮತ್ತು ಅವುಗಳಿಗೆ ಹೋಗಿ ಬರುವ ಮಾರ್ಗಗಳ ಮೇಲಿನ ಗ್ರಾಮಗಳು ವ್ಯಾಪಾರೀ ಪಟ್ಟಣಗಳಾದವು. ಕುಮಠಾ, ಹೊನ್ನಾವರ, ಕಾರವಾರ, ಗೋವಾ ಬಂದರುಗಳು, ಅವುಗಳಿಂದ ಒಳಪ್ರದೇಶದಲ್ಲಿರುವ ಬಿದನೂರು, ಶಿರ್ಶಿ, ಸಿದ್ದಾಪುರ, ಹಲ್ಯಾಳ, ಸಾಂಬ್ರಾಣಿ ಗ್ರಾಮಗಳು, ಅವುಗಳಿಗಿಂತಲೂ ಈಚೆಗೆ ಬೈಲು ಪ್ರದೇಶದಲ್ಲಿರುವ ದಾವಣಗೆರೆ, ಬ್ಯಾಡಿಗಿ, ಹಾವೇರಿ, ಮುಂಡರಿಗಿ, ಗೋಕಾಕ, ಅಥಣಿ ಮುಂತಾದವುಗಳು, ಒಂದು ಕಾಲದಲ್ಲಿ ಬಹು ವೈಭವದಿಂದ ಮೆರೆದವು. ಆದರೆ ಮುಂದೆ ಪರಿಸ್ಥಿತಿಯು ಪಲ್ಲಟಿಸಿತು. ಕರ್ನಾಟಕದಿಂದ ೩೦೦ ಮೈಲು ದೂರವಿರುವ ಮುಂಬಯಿ ಪಟ್ಟಣವು ಮುಖ್ಯ ಬಂದರವಾಯಿತು. ಕೂಡಲೆ ಕರ್ನಾಟಕದ ವ್ಯಾಪಾರೀ ಪಟ್ಟಣಗಳು ಮುಗ್ಗಹತ್ತಿದವು. ರೇಲ್ವೆ ಕಂಪನಿಗಳು ರೇಲ್ವೆ ಮಾರ್ಗಗಳನ್ನು ಈ ವ್ಯಾಪಾರೀ ಪಟ್ಟಣಗಳ ಮೇಲಿಂದ ಹಾಯಿಸದೆ, ಮುಂಬಯಿಗೆ ಹೋಗಲು ಸಮೀಪವಿದ್ದ ದಾರಿಯನ್ನು ಹಿಡಿದು ಸಿಕ್ಕಸಿಕ್ಕ ಹಾಗೆ ಹಾಯಿಸಿದವು. ಇದರಿಂದ ಮೊದಲಿನ ವ್ಯಾಪಾರೀ ಪಟ್ಟಣಗಳು ಕುಗ್ಗಿ ಹೊಸ ಪಟ್ಟಣಗಳು ಮುಂದೆ ಬರಹತ್ತಿದವು. ಇದರಿಂದ ಅಂತಸ್ಥ ವ್ಯವಸ್ಥೆಯಲ್ಲಿ ಬದಲಾವಣೆಯಾದರೂ ಒಟ್ಟು ನಾಡಿನಹಿತಕ್ಕೆ ಇದು ಅಷ್ಟು ಬಾಧಕವಾಗಲಿಲ್ಲ. ಯಾಕಂದರೆ ಜನರ ಹಣವು ನಾಡಿನಲ್ಲಿಯೇ ಉಳಿಯಿತು. ಆದರೆ ಕರ್ನಾಟಕಕ್ಕೆ ಹಾನಿ ತಂದದ್ದು ಹೊಸತರದ ವ್ಯಾಪಾರವು. ಮುಂದೆ ಮುಂಬಯಿ ಬಂದರದ ಮುಖಾಂತರವಾಗಿ ರೇಲ್ವೆಮಾರ್ಗಗಳಿಂದ ಬಹು ದೊಡ್ಡ ಪ್ರಮಾಣದಿಂದ ಅಂತರರಾಷ್ಟ್ರೀಯ ವ್ಯಾಪಾರವು ಬೆಳೆಯಹತ್ತಿತು. ಇದರಿಂದ ಬಂಡವಲುಗಾರರ ಪ್ರಾಬಲ್ಯವು ಹೆಚ್ಚಿತು. ಕೋಟ್ಯಾವಧಿ ರೂಪಾಯಿಗಳ ವ್ಯವಹಾರವು ಅಲ್ಲಿ ನಡೆಯಹತ್ತಿತು. ಲಕ್ಷ, ಎರಡು ಲಕ್ಷ ಬಂಡವಲು ಇದ್ದ ಕರ್ನಾಟಕ ವ್ಯಾಪಾರಸ್ಥರ ಅಳತೆಗೆ ಈ ವ್ಯವಹಾರವು ಮಿಕ್ಕಿತು. ಬ್ಯಾಂಕುಗಳು ಉದಯವಾದವು. ಅವೆಲ್ಲವೂ ಪರಕೀಯರವು, ಇಲ್ಲವೆ ಪರನಾಡಿಗರವು. ಅವುಗಳ ಬೆಂಬಲವುಳ್ಳ ಪರಕೀಯ ವ್ಯಾಪಾರಿಗಳ ಮುಂದೆ ಕರ್ನಾಟಕ ವ್ಯಾಪಾರಿಗಳ ಬಲವು ಹೇಗೆ ಮುಂದುವರಿದೀತು? ಅವರ ವ್ಯಾಪಾರವು ಕುಗ್ಗಿತು. ಅವರು ಪರಾವಲಂಬಿಗಳಾದರು. ದುಡ್ಡಿನ ಬಲವುಳ್ಳವರು ಅವರ ಸತ್ವಹರಣಮಾಡಹತ್ತಿದರು. ಮುಂದೆ ಯಾಂತ್ರಿಕ ಕಲೆಯು ಹೆಚ್ಚಹತ್ತಿತು. ಬಟ್ಟೆಯ ಗಿರ

ಣಿಗಳು ಉತ್ಪನ್ನವಾದವು. ಇವುಗಳನ್ನು ಏರ್ಪಡಿಸಿದವರು ಪರನಾಡಿಗರೇ. ಅವರು ಶೇರು ಕೂಡಿಸಿ ದೊಡ್ಡ ಬಂಡವಲು ಹಾಕಿ ಅನೇಕ ತರದ ಕಂಪನಿಗಳನ್ನು ನಡಿಸಹತ್ತಿದರು. ಹೀಗೆ ದೊಡ್ಡ ಪ್ರಮಾಣದಿಂದ ನಡಿಸಿದ ವ್ಯವಹಾರಸ್ತರ ಕೂಡ ಅಲ್ಪ ಪ್ರಮಾಣದಿಂದ ಬಂಡವಲು ಹಾಕಿದವರು ಸ್ಪರ್ಧೆ ಮಾಡುವದು ಹೇಗಾದೀತು? ಇದರಿಂದ ವ್ಯಾಪಾರದಲ್ಲಿ ದೊಡ್ಡ ಬಂಡುವಲುಗಾರರು ಮುಂದುವರಿದರು. ಈಗಲೂ ಮುಂದುವರಿಯುತ್ತಲಿದ್ದಾರೆ. ಸಣ್ಣ ಬಂಡವಲುಗಾರರು ಹಿಂದೆ ಬಿದ್ದರು, ಇನ್ನೂ ಬೀಳುತ್ತಲೇ ಇದ್ದಾರೆ. ಇಂಥವರು ಪರಾಧೀನರಾಗಿ ತಮ್ಮ ತಮ್ಮೊಳಗೆ ಸ್ಪರ್ಧೆ ನಡಿಸಿದ್ದಾರೆ. ಇಂಥ ಸ್ಪರ್ಧೆಯು ಅವರ ನೈತಿಕ ಹಾನಿಗೆ ಕಾರಣವಾಗಿದೆ. ಹೀಗೆ ನೈತಿಕ ಹಾನಿಯಾಗಲು ಪತ್ತನ್ನು ಕಳೆದುಕೊಂಡರು. ಅದು ಈಗ ಏನೂ ಉಳಿದಿಲ್ಲೆಂದು ಹೇಳಿದರೆ ಸಲ್ಲುವದು. ಈಚೆಗೆ ದೇಶದಲ್ಲಿ ಹೊಸ ಹೊಸ ಜೀನಸುಗಳ ಬೇಡಿಕೆಯು ಅಸಾಧಾರಣವಾಗಿ ಬೆಳೆದಿದೆ ಅವೆಲ್ಲವೂ ಗರಜಿನ ಪದಾರ್ಥಗಳಾಗಿವೆ. ಅನೇಕ ತರದ ಕಬ್ಬಿಣ ಸಾಮಾನುಗಳು, ಸಾಬಣ, ಸುಗಂಧದ ದ್ರವ್ಯಗಳು, ಕಾಗದ, ಮಶಿ ಮೊದಲಾದ ಸ್ಟೇಶನರಿ ಸಾಮಾನುಗಳು, ಇವುಗಳ ಸಂಖ್ಯೆಯು ಮಿತಿಗೆಟ್ಟಿದೆ. ಆದರೆ ಅವುಗಳನ್ನು ತಯಾರಿಸಲಿಕ್ಕೆ ಯಾಂತ್ರಿಕ ಕಲೆಯು ಬೇಕು. ಮತ್ತು ರಸಾಯನಿಕ ಮತ್ತು ಶಾಸ್ತ್ರೀಯ ವಿಷಯ ಜ್ಞಾನ ಬೇಕು. ಇವುಗಳ ಜ್ಞಾನವಿದ್ದವರು ಈಗಿನ ಯುದ್ಧದ ಕಾಲದಲ್ಲಿ ಬಹಳ ಮುಂದುವರಿಯಹತ್ತಿದ್ದಾರೆ. ಮೊದಲು ಹಿಂದುಸ್ಥಾನದ ಹೊರಗೆ ಹೋಗುತ್ತಿದ್ದ ಹಣವು ಈಗ ಹೊರಗೆ ಹೋಗುವದಿಲ್ಲ ಇಷ್ಟೇ ಅಲ್ಲ, ಪರದೇಶಗಳಿಂದ ಇಲ್ಲಿಯ ಸಾಮಾನುಗಳಿಗೆ ಬೇಡಿಕೆಯು ಹೆಚ್ಚಾಗಹತ್ತಿದ್ದರಿಂದ ಹಿಂದುಸ್ತಾನದ ಸಾಂಪತ್ತಿಕ ಸ್ಥಿತಿಯು ಸುಧಾರಿಸುತ್ತ ನಡಿದಿದೆ. ಆದರೆ ಯಾವ ನಾಡಿನಲ್ಲಿ ಯಾಂತ್ರಿಕ ಮತ್ತು ವೈಜ್ಞಾನಿಕ ವಿಷಯುಗಳ ಜ್ಞಾನವು ಹೆಚ್ಚಿಗೆ ಇದೆಯೋ ಅಲ್ಲಿಯವರಿಗೆ ಮಾತ್ರ ಇದರಿಂದ ಲಾಭವಾಗುತ್ತಲಿದೆ. ಆದರೆ ಕರ್ನಾಟಕದ ವ್ಯಾಪಾರಿಗಳು, ಸುಶಿಕ್ಷಿತರು, ಬಣಜಿಗರು ಈ ಹೊಸ ಪರಿಸ್ಥಿತಿಯ ತಿಳುವಳಿಕೆ ಇಲ್ಲದೆ ಮೊದಲಿನಕಿಂತಲೂ ಹೆಚ್ಚು ಹೆಚ್ಚಿಗೆ ಕನಿಷ್ಟ ಸ್ಥಿತಿಯನ್ನು ಹೊಂದುತ್ತಲಿದ್ದಾರೆ. ಇದನ್ನು ತೀವ್ರ ದೂರಮಾಡಲಿಕ್ಕೆ ಈಗಲಾದರೂ ಶಕ್ಯವಿದೆಯೋ ಹೇಗೆ ಎಂದು ಪ್ರಶ್ನೆ ಮಾಡಿದರೆ, ಅದು ಶಕ್ಯವಿದೆ ಎಂತಲೇ ನಮ್ಮ ದೃಢವಾದ ಅಭಿಪ್ರಾಯವು.

ಸುಧಾರಿಸಬೇಕೆನ್ನುವವರು, ಕಾರ್ಯಮಾಡಬೇಕೆನ್ನುವವರು, ತಮ್ಮ ತಪ್ಪುಗಳನ್ನು ಮೊದಲು ತಾವು ತಿಳಿದು ನೋಡಿಕೊಳ್ಳಬೇಕು. ಮತ್ತು ಅವುಗಳನ್ನು ದೂರಮಾಡಲು ಪ್ರಯತ್ನಿಸಬೇಕು. ಸುಧಾರಣೆಗೆ ಸ್ವನಿರೀಕ್ಷಣೆಯು ಮೊದಲಿಗೆ ಬೇಕು. ಈ ಸಂಗತಿಯು ವ್ಯಕ್ತಿಗೂ ಅನ್ವಯಿಸುತ್ತದೆ, ಸಮಾಜಕ್ಕೂ ಅನ್ವಯಿಸುತ್ತದೆ ತಾವು ಹಿಂದೆ ಬಿದ್ದುದಕ್ಕೆ ಕಾರಣವು ಎರಡನೆಯವರೆಂದು ಹೇಳಿದರೆ, ಮನಸ್ಸು ಮೆಚ್ಚುತ್ತದೆ, ಅದಕ್ಕೆ ಸಮಾಧಾನವಾಗುತ್ತದೆ. ಆದರೆ ಅದಕ್ಕೆ ತಾವೇ ಜವಾಬುದಾರರೆಂದು ಹೇಳಿದರೆ ಈ ಮಾತುಬಹು ಕಹಿಯಾಗುತ್ತದೆ. 'ನಿನ್ನನ್ನು ನೀನು ತಿಳಿ' ಎಂಬುದೇ ಶಿವಶರಣರ ಮುಖ್ಯ ತತ್ವವಾಗಿದೆ. ಇದರ ಮೇಲೆಯೇ ಷಟ್‌ಸ್ಥಲ ಶಾಸ್ತ್ರದ ರಚನೆ ಇದೆ. ಶಿವಶರಣರು ತಮ್ಮ ವಚನಗಳಲ್ಲಿ ಹೆರವರಿಗೆ ಎಂದೂ ಬೋಧಿಸಿರುವದಿಲ್ಲ. ಅವರು ತಮಗೆಯೇ ಹೇಳಿಕೊಳ್ಳುತ್ತಾರೆ. ಇದರ ಮರ್ಮವನ್ನು ವೀರಶೈವರು ತಿಳಿಯಬೇಕು.

ನಮ್ಮ ದುಃಖಕ್ಕೆಲ್ಲ ಸರಕಾರವು ಅಥವಾ ನಮ್ಮ ನೆರೆ ಸಮಾಜಗಳು ಕಾರಣವೆಂಬ ತಿಳುವಳಿಕೆಯು ಜನರಲ್ಲಿದೆ. ಇಂಥ ಮನೋವೃತ್ತಿಯನ್ನು ಜನರಲ್ಲಿ ಪ್ರಸಾರಪಡಿಸಲು ಕಾರ್ಯಸಾಧುಗಳು ಯಾವಾಗಲೂ ಪ್ರಯತ್ನಿಸುವದುಂಟು. ಆದರೆ ಇದಕ್ಕೆ ವ್ಯಕ್ತಿಗಳು ಅಥವಾ ಸಮಾಜಗಳು ಬಲಿ ಬೀಳಬಾರದು. ಸಮಾಜ ಸುಧಾರಣೆಗೆ ಇದರ ತಿಳುವಳಿಕೆಯೇ ಮೊದಲನೆಯ ಮೆಟ್ಟಲು.

ವೀರಶೈವರು ತಮ್ಮ ಆರ್ಥಿಕ ಸ್ಥಿತಿಯ ಸುಧಾರಣೆಗೋಸ್ಕರ ಮೂರು ತರದ ಪ್ರಯತ್ನಗಳನ್ನು ಮಾಡಬೇಕೆಂದು ನಮಗೆ ತೋರುತ್ತದೆ. ಅವು (೧) ವ್ಯಾಪಾರೀ ಶಿಕ್ಷಣ (೨) ಕಾಯಕ (೩) ಸಾಮೂಹಿಕ ವ್ಯಾಪಾರ.

ಹೊಸ ಪ್ರಯತ್ನಗಳನ್ನು ಮಾಡುವದರಕಿಂತ ದೇಶದಲ್ಲಿದ್ದ ಸೌಕರ್ಯಗಳ ಲಾಭವನ್ನು ಮೊದಲು ಮಾಡಿಕೊಳ್ಳಬೇಕು. ಇಂಥ ಸೌಕರ್ಯಗಳು ಅಥವಾ ಅನುಕೂಲತೆಗಳು ನಮ್ಮ ದೇಶದಲ್ಲಿ ಎಲ್ಲ ಕಡೆಗೂ ಇರುತ್ತವೆ. ಅವು ಎಲ್ಲ ಜನರಿಗೋಸ್ಕರ ಇರುತ್ತವೆ. ಅವುಗಳ ಉಪಯೋಗವನ್ನು ಅವರು ಮೊದಲು ಮಾಡಿಕೊಳ್ಳಬೇಕು.

(೧) ವ್ಯಾಪಾರೀ ಶಿಕ್ಷಣ:— ವ್ಯಾಪಾರಸ್ಥರು ತಮ್ಮ ಮಕ್ಕಳನ್ನು ವ್ಯಾಪಾರದಲ್ಲಿಯೇ ಸೇರಿಸಬೇಕು. ತಮ್ಮ ವ್ಯಾಪಾರಕ್ಕೆ ತಕ್ಕಂತೆ ಅವರಿಗೆ

ಶಿಕ್ಷಣ ಕೊಡಬೇಕು. ಅವರು ಈಗಿನ ವಾಙ್ಮಯ ಕಾಲೇಜಗಳ ಮೋಹಕ್ಕೆ ಬೀಳಬಾರದು. ಈ ಕಾಲಕ್ಕೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವು ಎಲ್ಲ ರಿಗೂ ಅವಶ್ಯವಾಗಿಬೇಕು. ಇದು ಮುಗಿದ ಬಳಿಕ ಶ್ರೀಮಂತರು ವ್ಯಾಪಾರೀ ಕಾಲೇಜುಗಳಿಗೆ, ಮಧ್ಯಮ ಸ್ಥಿತಿಯವರು ಸಣ್ಣ ತರಗತಿಯ ವ್ಯಾಪಾರೀ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳಿಸಬೇಕು. ಅಲ್ಲಿ ಶಿಕ್ಷಣ ಹೊಂದಿದ ಬಳಿಕ ತಮ್ಮ ಮಕ್ಕಳನ್ನು ತಮ್ಮ ಉದ್ಯೋಗದಲ್ಲಿಯೇ ತೊಡಗಿಸಬೇಕು.

ಮುಂಬಯಿ ಸರಕಾರದವರು ಮಾಧ್ಯಮಿಕ ಶಿಕ್ಷಣ ಸುಧಾರಣೆಗೋ ಸ್ಕರ ಸೂಚನೆ ಮಾಡಲು ಒಂದು ಕಮಿಟಿಯನ್ನು ನೇಮಿಸಿದ್ದರು. ಅದಕ್ಕೆ 'ಜೋಶಿ ಕಮಿಟಿ' ಎಂಬ ಹೆಸರಿದೆ. ಮಾಧ್ಯಮಿಕ ಶಿಕ್ಷಣದಲ್ಲಿ ೬ನೇ ಎತ್ತೆ ಯಲ್ಲಿ ದ್ವಿವಿಧ ಮಾಡಿ ವಿದ್ಯಾರ್ಥಿಗಳಲ್ಲಿ ಔದ್ಯೋಗಿಕ ಒಲವುಂಟಾಗುವಂತೆ ಒಂದು ಅಭ್ಯಾಸ ಕ್ರಮವನ್ನು ಏರ್ಪಡಿಸಬೇಕೆಂದು ಸೂಚಿಸಿದ್ದಾರೆ. ಇದ ಕ್ಕನುಸರಿಸಿ ಸೊಲ್ಲಾಪುರ ಹೈಸ್ಕೂಲಿನಲ್ಲಿ ವ್ಯಾಪಾರೀ ಮತ್ತು ಔದ್ಯೋಗಿಕ ಶಿಕ್ಷಣಗಳು ಮತ್ತು ವಿಜಾಪುರ ಹೈಸ್ಕೂಲಿನಲ್ಲಿ ಒಕ್ಕಲತನ ಶಿಕ್ಷಣವು ಕೊಡ ಲ್ಪಡುತ್ತವೆ. ಈ ಬಗೆಯ ಏರ್ಪಾಡುಗಳು ಎಲ್ಲ ಕಡೆಗೂ ಆಗಬೇಕು.

ಶ್ರೀಮಂತರು ಅಹಮದಾಬಾದ, ಮುಂಬಯಿ, ಪುಣೆ ಪಟ್ಟಣಗಳ ಲ್ಲಿರುವ ಉಚ್ಚತರಗತಿಯ ವ್ಯಾಪಾರೀ ಕಾಲೇಜುಗಳು, ಮಧ್ಯಮ ಸ್ಥಿತಿಯ ವರು ಇವೇ ಪಟ್ಟಣಗಳಲ್ಲಿರುವ ವ್ಯಾಪಾರೀ ಶಾಲೆಗಳು, ಮತ್ತು ಹೈಸ್ಕೂಲುಗಳಿಗೆ ಹೊಂದಿ ಇರುವ ವ್ಯಾಪಾರೀ ಕ್ಲಾಸುಗಳು ಇವುಗಳ ಪೂರ್ಣ ಉಪಯೋಗ ಮಾಡಿಕೊಳ್ಳಬೇಕು. ಕರ್ನಾಟಕದಲ್ಲಿಯ ಸರ ಕಾರೀ ಹೈಸ್ಕೂಲುಗಳಲ್ಲಿ ಈ ಏರ್ಪಾಡು ಇರುವದಿಲ್ಲ. ಆದರೆ ವೀರಶೈವರು ಸರಕಾರದವರ ಮೇಲೆ ಅವಲಂಬಿಸದೆ ತಾವು ನಡಿಸುತ್ತಿರುವ ಶಾಲೆಗಳಲ್ಲಿ ಇಂಥ ವ್ಯಾಪಾರೀ ಶಿಕ್ಷಣದ ಏರ್ಪಾಡು ಮಾಡಿಕೊಳ್ಳಬೇಕು. ಈ ಲೇಖ ಕರು ವಿಜಾಪುರ ಶ್ರೀ ಸಿದ್ಧೇಶ್ವರ ಹೈಸ್ಕೂಲಿನ ಚಾಲಕರಿದ್ದಾಗ್ಗೆ ಮುಂಬಯಿ ಇಂಡಿಯನ್ನ ಚೇಂಬರ ಆಫ ಕಾಮರ್ಸದ ಶಿಕ್ಷಣ ಯೋಜ ನೆಗೆ ಅನುಸರಿಸಿ ಒಂದು ವ್ಯಾಪಾರೀ ವರ್ಗವನ್ನು ಅದರ ಅಧೀನತೆಯಲ್ಲಿ ಪ್ರಾರಂಭಿಸಿದ್ದರು. ಅದು ಉಪಯುಕ್ತವಾಗಿತ್ತು. ಈ ತೆರದ ಏರ್ಪಾಡು ಕರ್ನಾಟಕದಲ್ಲಿಯ ಪ್ರತಿಯೊಂದು ವ್ಯಾಪಾರೀ ಪಟ್ಟಣದಲ್ಲಿರಬೇಕು.

ಆದರೆ ವೀರಶೈವ ವಿದ್ಯಾರ್ಥಿಗಳು ಆರ್ಟ್ಸ ಕಾಲೇಜುಗಳನ್ನು ಸೇರಿ ಆರ್ಟ್ಸ ಅಥವಾ ಲಾ ಪದವೀಧರರಾಗುವ ವ್ಯಾಮೋಹವು ಅವರನ್ನು

ಇನ್ನೂ ಬಿಟ್ಟಿರುವದಿಲ್ಲ. ಅದರೆ ಹಿಂದುಸ್ತಾನಕ್ಕೆ ಮುಂದೆ ಒಂದು ಉಜ್ವಲ ಸ್ಥಿತಿಯು ಪ್ರಾಪ್ತವಾಗುವದರಲ್ಲಿದೆ. ಈ ಸ್ಥಿತಿಯ ಉಪಯೋಗವನ್ನು ದೊಡ್ಡ ದೊಡ್ಡ ವ್ಯವಹಾರದಲ್ಲಿದ್ದವರು ಮಾಡಿಕೊಳ್ಳಲು ಶಕ್ತರಾಗು ವರೇ ಹೊರ್ತು ಕೆಳಗಿನ ಸರಕಾರೀ ಅಥವಾ ಇತರ ನೌಕರಿಗಳಲ್ಲಿರುವವರು ಶಕ್ತರಾಗಲಾರರು.

ಹಿಂದುಸ್ತಾನದಲ್ಲಿಯೇ ಈಗ ಅಸಂಖ್ಯ ಜೀನಸುಗಳು ಹುಟ್ಟು ತ್ತವೆ. ಅಥವಾ ಅವು ಹೊರಗಿನಿಂದ ಬರುತ್ತವೆ. ಅವುಗಳು ಎಲ್ಲೆಲ್ಲಿಂದ ಯಾವ ಯಾವ ಪ್ರಮಾಣಗಳಿಂದ ಬರುತ್ತವೆ, ಅವುಗಳ ಬೇಡಿಕೆಯು ಎಷ್ಟು ಎಷ್ಟು ಮತ್ತು ಎಲ್ಲೆಲ್ಲಿ ಇದೆ, ಇದರ ತಿಳುವಳಿಕೆಯು ನಮ್ಮ ವ್ಯಾಪಾ ರಿಗಳಿಗೆ ಬೇಕು. ಸರಕಾರೀ ಪ್ರಕಟನೆಗಳ ಸಹಾಯದಿಂದ ಈ ಸಂಗತಿಗಳ ಎಣಿಕೆ ಮಾಡುವ ಜ್ಞಾನವು ಅವರಲ್ಲಿ ರಬೇಕು. ಬ್ಯಾಂಕುಗಳ ಉಪಯೋ ಗವು ಅವರಿಗೆ ತಿಳಿಯಬೇಕು. ವ್ಯವಹಾರದ ಸ್ಥಿತಿಯನ್ನು ತತ್ಕ್ಷಣ ತಿಳಿಗುಕೊಳ್ಳುವಂತೆ ಲೆಖ್ಖ ಇಡುವ ಪದ್ಧತಿಗಳನ್ನು ಅರಿಯಬೇಕು. ನೂರಾರು, ಸಾವಿರಾರು ಜನ ನೌಕರರುಳ್ಳ ಕಾರಖಾನೆಗಳನ್ನು ನಡಿಸು ವದು ಗೊತ್ತಿರಬೇಕು. ನಾಣ್ಯದ ಚಲನವಲನದ ಪರಿಣಾಮಗಳು, ಕರ ಗಳನ್ನು ಕೂಡ್ರಿಸುವದರಿಂದ ಆಗುವ ವ್ಯಾಪಾರದ ಬದಲಾವಣೆಗಳು ಇಂಥ ವಿಷಯಗಳನ್ನು ಬಲ್ಲವರಾಗಿರಬೇಕು. ಇಂಥವನೇ ನಿಜವಾದ ವ್ಯಾಪಾರಿ ಎನಿಸಿಕೊಳ್ಳುವನು. ಒಬ್ಬನು ಬರೇ ಕಮಿಶನದಿಂದ ಪ್ರತಿ ವರ್ಷ ಲಕ್ಷಾವಧಿ ರೂಪಾಯಿ ಗಳಿಸುತ್ತಿರಬಹುದು. ಅಷ್ಟರಿಂದಲೇ ಅವನು ವ್ಯಾಪಾರಿ ಯಾಗಲಾರನು. ವ್ಯಾಪಾರದಂಥ ಉಚ್ಚ ಉದ್ಯೋಗವನ್ನು ಬಿಟ್ಟುಕೊಟ್ಟು ಸರಕಾರೀ ನೌಕರಿಗಳನ್ನು ಆಶಿಸುವದರಲ್ಲಿ ಆವ ಆರ್ಥಿಕ ಮತ್ತು ಸಾಮಾಜಿಕ ಲಾಭವಿದೆ?

**ಕಾಯಕಗಳು:**— ಉದ್ಯೋಗಗಳಿಗೆ ವಚನಕಾರರು ಉಪಯೋ ಗಿಸುವ ಶಬ್ದವಿದಾಗಿದೆ. ಕಾಯಕವಿಲ್ಲದಿದ್ದರೆ ಶಿವಾನುಭವವಿರಲಾರದೆಂದು ಅವರ ಅಭಿಪ್ರಾಯವು. ಲಿಂಗಧಾರಣವಾದ ಬಳಿಕ ಒಂದು ಕಾಯಕ ಅಂದರೆ ಕೆಲವೊಂದು ಉದ್ಯೋಗವನ್ನು ಅನುಸರಿಸಲೇಬೇಕೆಂದು ಅವರ ಉಪದೇಶವಿರುತ್ತದೆ. ಶಿವಾನುಭವಿಯು ಭಿಕ್ಷೆಯನ್ನು ಬೇಡಕೂಡದು. ದುಡಿತದಿಂದ ದೊರಕಿಸಿ ನಿಃಸ್ವಾರ್ಥಬುದ್ಧಿಯಿಂದ ದೊರೆತದ್ದನ್ನು ಸರಿ ಯಾಗಿ ಉಪಯೋಗಿಸುವದರಲ್ಲಿ ಶಿವಾನುಭವಿಯ ಜೀವಿತ ಸಾಫಲ್ಯವಿದೆ.

ಏನೂ ದುಡಿಯದೆ ತಮ್ಮ ಬಂಡವಲಿನ ಬಲದಿಂದ ಹಣಗಳಿಸುವದು ವಚನ ಶಾಸ್ತ್ರದ ಪ್ರಕಾರ ಕಾಯಕವೆನಿಸಿಕೊಳ್ಳುವದಿಲ್ಲ. ಕಾಯಕವೆಂದರೆ ಈಗಿನ ಭಾಷೆಯಲ್ಲಿ ಕೈಗಾರಿಕೆ ಎಂದು ಹೇಳಬಹುದು. ಕೈಗಾರಿಕೆಗಳು ಹೆಚ್ಚಿದಲ್ಲಿ ವ್ಯಾಪಾರವು ಸ್ಥಿರಪಡುವದು. ಲಿಂಗಾಯತರು ಕೈಗಾರಿಕೆಯ ಸಮಾಜದವರಾಗಿದ್ದಾರೆ. ಆದರೆ ಅವರಲ್ಲಿ ಆಧುನಿಕ ಶಾಸ್ತ್ರೀಯ ಜ್ಞಾನದ ಪ್ರಸಾರವಿಲ್ಲ. ಆದ್ದರಿಂದ ಅವರ ಕೈಗಾರಿಕೆಗಳು ನಿಂತುಹೋಗಿವೆ. ಈ ಸ್ಥಿತಿಯನ್ನು ದೂರಮಾಡುವದು ಶಕ್ಯವದೆ. ದೇಶದಲ್ಲಿ ಅನೇಕ ಔದ್ಯೋಗಿಕ ಶಾಲೆಗಳಿವೆ. ಆದರೆ ಅವುಗಳಲ್ಲಿ ವೀರಶೈವರ ಸಂಖ್ಯೆಯು ಅತ್ಯಲ್ಪವಾಗಿದೆ. ಅವರ ಸಂಖ್ಯೆಯನ್ನು ಬೆಳಸಬೇಕು. ವೀರಶೈವರಲ್ಲಿ ಅನೇಕ ದೊಡ್ಡ ವಿದ್ಯಾಫಂಡುಗಳಿವೆ. ಆ ಫಂಡುಗಳ ಹಣವು ಇಂಥ ಔದ್ಯೋಗಿಕ ಶಾಲೆಗಳಲ್ಲಿ ಶಿಕ್ಷಣಹೊಂದುವವರಿಗೋಸ್ಕರ ಹೆಚ್ಚಾಗಿ ಉಪಯೋಗವಾಗಬೇಕು. ಮಧ್ಯಪ್ರಾಂತದಲ್ಲಿ ಹೆಚ್ಚಿನ ತರಗತಿಯ ಔದ್ಯೋಗಿಕ ಶಾಲೆಗಳಿವೆ. ಮಹಾರಾಷ್ಟ್ರ ಪ್ರಾಂತದಲ್ಲಿ ಮುನಿಸಿಪಾಲಿಟಿ ಲೋಕಲಬೋರ್ಡುಗಳು ಸಹ ಔದ್ಯೋಗಿಕ ಶಾಲೆಗಳನ್ನು ತೆರೆದಿವೆ. ಆದರೆ ಉದ್ಯೋಗವೇ ಜೀವನವಾಗಿದ್ದ ವೀರಶೈವರಿರುವ ಪ್ರಾಂತದಲ್ಲಿ ವೀರಶೈವರು ಇಂಥ ಸಂಸ್ಥೆಗಳನ್ನು ಏರ್ಪಡಿಸಲು ದುರ್ಲಕ್ಷಿಸುತ್ತಲಿದ್ದಾರೆ ಈ ಕಾಲದಲ್ಲಿ ಕಾಯಕಗಳಿಗೆ ಹೆಚ್ಚಿನ ತರಗತಿಯ ಶಾಸ್ತ್ರೀಯ ಜ್ಞಾನವು ಬೇಕು. ಯಂತ್ರಕಲೆ, ರಸಾಯನಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ ಇವುಗಳ ತಾತ್ವಿಕ ಮತ್ತು ವ್ಯವಹಾರಿಕ ಜ್ಞಾನವು ಬೇಕು. ಇವುಗಳನ್ನು ತಿಳಿಸಿಕೊಡುವ ಸಂಸ್ಥೆಗಳಿಗೋಸ್ಕರ ವೀರಶೈವರು ವೆಚ್ಚಮಾಡಿದ ಹಣವು ಎಷ್ಟೋ ಮಡಿಮಿಗಿಲಾಗಿ ಸಮಾಜಕ್ಕೆ ತಿರುಗಿಬರುತ್ತದೆ. ಆದರೆ ಸಮಾಜವು ಈ ವಿಷಯವನ್ನು ತೀರ ದುರ್ಲಕ್ಷಿಸಿರುತ್ತದೆ. ಸಮಾಜವಷ್ಟೇ ಅಲ್ಲ, ಕರ್ನಾಟಕವೆಲ್ಲವೂ ದುರ್ಲಕ್ಷಿಸಿರುತ್ತದೆ. ಇದರಿಂದ ಕರ್ನಾಟಕದ ಹಣವು ಅದರ ಜನರ ಕೈಬಿಟ್ಟು ಹೊರಗೆ ದೊಡ್ಡ ಪ್ರಮಾಣದಿಂದ ಹೋಗುತ್ತಲಿದೆ.

**ಸಾಮೂಹಿಕ ಬಂಡವಲದ ವ್ಯವಹಾರಗಳು:—** ಇನ್ನು ಮುಂದೆ ಸಾಮೂಹಿಕ ಬಂಡುವಲದ ಸಹಾಯದಿಂದ ವ್ಯಾಪಾರೋದ್ಯೋಗಗಳನ್ನು ನಡಿಸಿದ ಹೊರ್ತು ಗತ್ಯಂತರವಿಲ್ಲ. ಈಗ ಸ್ಪರ್ಧೆಗಳನ್ನು ಎದುರಿಸಬೇಕಾಗುತ್ತದೆ. ಇದರಲ್ಲಿ ದೊಡ್ಡ ಬಂಡುವಲಗಾರರು ಪ್ರಬಲರಾಗುವರು. ಸಾಮೂಹಿಕ ಬಂಡುವಲದ ವ್ಯವಹಾರಗಳು ಹೆಚ್ಚಿನ ತರ

ಗತಿಯುವು. ಆದರೆ ಅವುಗಳು ಪತ್ತುಳ್ಳವರು ನಡಿಸತಕ್ಕವುಗಳು. ಆದರೆ ಪತ್ತಿಗೆ ನೀತಿ, ಪ್ರಾಮಾಣಿಕತನ, ಸತ್ಯ ಮೊದಲಾದ ಹೆಚ್ಚಿನ ಗುಣಗಳು ಬೇಕು. ಈ ಗುಣಗಳ ಮೇಲೆಯೇ ಶಿವಶರಣರು ವೀರಶೈವ ಸಮಾಜವೆಂಬ ಕಟ್ಟಡವನ್ನು ಕಟ್ಟಿದ್ದಾರೆ. ಆದರೆ ಈ ಗುಣಗಳು ಒಟ್ಟಾರೆ ಈಗ ಸಮಾಜದಲ್ಲಿ ನಷ್ಟವಾಗಿವೆ. ಗ್ರಾಮಾಂತರಗಳಲ್ಲಿ ನೈತಿಕ ಪರಿಸ್ಥಿತಿಯು ಬಹು ಹೀನದೆಸೆಗೆ ಬಂದಿದೆ. ಗುಣವುಳ್ಳವರು ಅವುಗಳಲ್ಲಿ ವಾಸಿಸುವದು ಸಾಧ್ಯವಿಲ್ಲ. ದೊಡ್ಡ ಪಟ್ಟಣಗಳು ವ್ಯಾಪಾರೊದ್ಯೋಗಗಳ ಮೂಲಕ ಬೆಳೆದವುಗಳು. ಆದರೆ ಅಲ್ಲಿಯ ವರ್ತಕರಲ್ಲಿ ಸಹ ಪತ್ತು ಉಳಿದಿರುವದಿಲ್ಲ. ಇದಕ್ಕೆ ಅನೇಕ ಉದಾಹರಣೆಗಳು ಆಗಿಂದಾಗ್ಗೆ ಪ್ರತಿಯೊಂದು ಪಟ್ಟಣಗಳಲ್ಲಿ ಸಿಕ್ಕುತ್ತವೆ. ಸುಶಿಕ್ಷಿತರು ಸ್ಥಾನಿಕ ಸಂಸ್ಥೆಗಳು ಶಾಸನ ಸಭೆಗಳು ಇವುಗಳಲ್ಲಿ ಕಾರ್ಯ ಮಾಡುವದುಂಟು. ಆದರೆ ಅವರು ಸಾಮಾನ್ಯ ಹಿತವನ್ನು ದುರ್ಲಕ್ಷಿಸುತ್ತಿರುವದರಿಂದ ದೇಶದ ಮತ್ತು ಸಮಾಜದ ಕಾರ್ಯಗಳು ಅವರಿಂದಾಗದಂತೆ ಆಗಿವೆ. ಇದರಿಂದ ವೀರಶೈವರಲ್ಲಿ ಉದಾತ್ತವಾದ ಸಾರ್ವಜನಿಕ ಜೀವನವು ನಷ್ಟವಾಗಿರುತ್ತದೆ. ಈ ಸ್ಥಿತಿಯನ್ನು ದೂರಮಾಡಲು ಒಂದೇ ಒಂದು ಉಪಾಯವಿದೆ. ಅದು ಶಿವಶರಣರ ನಡೆನುಡಿಗಳನ್ನು ಹಳ್ಳಿಪಳ್ಳಿಗಳಲ್ಲಿ, ವ್ಯಾಪಾರೀ ವರ್ಗಗಳಲ್ಲಿ, ಪಟ್ಟಣಗಳಲ್ಲಿ, ಸಣ್ಣವರಲ್ಲಿ, ದೊಡ್ಡವರಲ್ಲಿ, ಬಾಲಬಾಲಿಕೆಯರಲ್ಲಿ, ಪ್ರತಿಯೊಂದು ಮನೆಯಲ್ಲಿ, ಪ್ರಸಾರಮಾಡಿ ಜೀವನವನ್ನು ಶುದ್ಧಗೊಳಿಸುವದೇ ಇರುತ್ತದೆ. ಸಮಾಜದ ನೈತಿಕ ವೃತ್ತಿಯನ್ನು ಶುದ್ಧಮಾಡದ ಹೊರತು ಅದಕ್ಕೆ ಏಳ್ಗೆ ಇಲ್ಲ. ರಾಷ್ಟ್ರವು ಏಳುವದು ಬೀಳುವದು, ವ್ಯಕ್ತಿಯು ಏರುವದು ಇಳಿಯುವದು ಶುದ್ಧವಾದ ನಡೆನುಡಿ, ಮನೋವೃತ್ತಿ, ಶುದ್ಧಾಂತಃಕರಣ ಇವುಗಳ ಮೇಲೆ ಅವಲಂಬಿಸಿದೆ. ಜಗತ್ತು ಹುಟ್ಟಿದಂದಿನಿಂದ ಅನೇಕ ರಾಷ್ಟ್ರಗಳು ಎದ್ದಿವೆ ಬಿದ್ದಿವೆ. ಆದರೆ ಅವು ಎದ್ದದ್ದು ಬಿದ್ದದ್ದು ಅವುಗಳ ಉಚ್ಚ ಅಥವಾ ಕಡಿಮೆತರದ ನೈತಿಕ ವರ್ತನಗಳೇ ಕಾರಣವೆಂದು ಅವುಗಳ ಇತಿಹಾಸಗಳು ಹೇಳುತ್ತಿವೆ.

# ವೀರಶೈವ ಮತದ ವೈಶಿಷ್ಟ್ಯ.

ಲೇಖಕ:— ಎಮ್. ಶ್ಚಿ. ಮಿಣಜಗಿ ಬಿ. ಎ. ಬಿ. ಟಿ.

---

ಯಾವದಾದರೊಂದು ಮತವು ದೇಶದಲ್ಲಿ ಜನರ ಮೆಚ್ಚುಗೆಗೆ ಪಾತ್ರವಾಗಿ ಬೆಳಗಬೇಕಾದರೆ ಅದರಲ್ಲಿ ಏನಾದರೊಂದು ವೈಶಿಷ್ಟ್ಯವು ಇರಲೇಬೇಕು. ಆ ತನ್ನ ವೈಶಿಷ್ಟ್ಯದಿಂದಲೇ ಅದು ತನ್ನ ನೆರೆಹೊರೆಯ ಸಮಾಜಬಾಂಧವರ ಮೇಲೆ ವರ್ಚಸ್ಸನ್ನು ಬೀರಿ ಅವರು ತನ್ನ ಅನುಯಾಯಿಗಳಾಗುವಂತೆ ಮಾಡುವದು. ಈ ರೀತಿಯಾಗಿ ತನ್ನ ನೆರೆ ಹೊರೆಯ ಸಮಾಜಬಾಂಧವರಾದ ಜೈನ, ಬ್ರಾಹ್ಮಣ ಮುಂತಾದ ಅನೇಕ ಮತೀಯರನ್ನು ಹನ್ನೆರಡನೆಯ ಶತಮಾನದಲ್ಲಿ ದೊಡ್ಡ ಪ್ರಮಾಣದಿಂದ ತನ್ನ ಅನುಯಾಯಿಗಳನ್ನಾಗಿ ಮಾಡಿಕೊಂಡು ತನ್ನ ವೈಭವವನ್ನು ಮೆರೆಯಿಸಬೇಕಾದರೆ ವೀರಶೈವ ಮತದಲ್ಲಿ ಯಾವ ವೈಶಿಷ್ಟ್ಯವಿರಬಹುದು? ಈ ಸಮಸ್ಯೆಯೇ ಈ ಲೇಖನದ ಗುರಿ.

ಒಂದು ಮತವು ತನ್ನ ವೈಶಿಷ್ಟ್ಯವನ್ನು ಅನೇಕ ಮುಖವಾಗಿ ತೋರಿಸಿಕೊಡಬಹುದು. ಒಂದು ಮತವು ಅಹಿಂಸೆಯ ಶ್ರೇಷ್ಠ ತತ್ವವನ್ನು ತನ್ನಲ್ಲಿ ಅಳವಡಿಸಿಕೊಂಡು ಅನೇಕ ಜನ ಅನುಯಾಯಿಗಳನ್ನು ಮಾಡಿಕೊಂಡು ಬಾಳಬಹುದು. ಇನ್ನೊಂದು ಮತವು ವಿಶ್ವಬಂಧುತ್ವವಾಗಲೀ ಇಲ್ಲವೆ ಬೇರೆ ಯಾವದೇ ಒಂದು ಬಹು ಜನರ ಮೆಚ್ಚುಗೆಗೆ ಪಾತ್ರವಾಗಬಹುದಾದ ತತ್ವವನ್ನು ಹಿಡಿದು ಬೆಳೆದು ಬಾಳಬಹುದು. ಆದರೆ ವೀರಶೈವ ಮತವು ತನ್ನ ವೈಶಿಷ್ಟ್ಯವನ್ನು ಅನೇಕ ಮುಖವಾಗಿ ಬೆಳಗಿಸಿ ಬಹುಜನ ಮನ್ನಣೆಗೆ ಪಾತ್ರವಾಗಿ ಇಡೀ ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ಹಿಂದುಸ್ತಾನದ ಬೇರೆ ಬೇರೆ ಭಾಗಗಳಲ್ಲಿಯೂ ಕೂಡ ಹಬ್ಬಿತು. ಆ ವೈಶಿಷ್ಟ್ಯಗಳು ಅನೇಕವಿದ್ದರೂ ಪ್ರಸ್ತುತಕ್ಕೆ ಕೆಲವನ್ನು ಮಾತ್ರ ತೆಗೆದುಕೊಂಡು ವಿಚಾರ ಮಾಡಬಯಸುತ್ತೇವೆ.

## ಸಮಾಜ ರಚನೆ.

ವೀರಶೈವ ಮತದಲ್ಲಿಯ ಸಮಾಜ ರಚನೆಗೆ ನಾವು ಎಲ್ಲಕ್ಕೂ ಹೆಚ್ಚಿನ ವೈಶಿಷ್ಟ್ಯವನ್ನು ಕೊಡಬಹುದು. ಇಪ್ಪತ್ತನೆಯ ಶತಮಾನದಂತಹ

ಸುಧಾರಣೆಯು ಮೇಲು ಮೆಟ್ಟಲಿನ ಕಾಲದಲ್ಲಿ ಯಾವ ಪ್ರಕಾರದ ಸಮಾಜ ರಚನೆಯಿರಬೇಕೆಂದು ಮಹಾತ್ಮಾ ಗಾಂಧಿಯವರಂಥ ಮಹಾ ವ್ಯಕ್ತಿಗಳು ಪ್ರಯತ್ನಿಸುತ್ತಿರುವರೋ ಆ ಪ್ರಕಾರದ ಸಮಾಜ ರಚನೆಯನ್ನು ನಾವು ಹನ್ನೆರಡನೆಯ ಶತಮಾನದಲ್ಲಿ ಅಂದರೆ ಮಹಾತ್ಮಾ ಬಸವೇಶ್ವರನ ಕಾಲದಲ್ಲಿ ಕಾಣಬಹುದು. ಉದಾಹರಣೆಗಾಗಿ ಈಗಿನ ಹರಿಜನೋದ್ಧಾರ ಚಟುವಟಿಕೆಯನ್ನು ತೆಗೆದುಕೊಳ್ಳುವಾ. ಯಾವ ಮಹಾತ್ಮಾ ಗಾಂಧಿಯವರು ಹಿಂದೀಯರಲ್ಲಿ ಸ್ಪೃಶ್ಯ, ಅಸ್ಪೃಶ್ಯತೆಯ ಭಾವನೆಯನ್ನು ಅಳಿದು ಎಲ್ಲರೂ ಸಮಾನಸ್ಥರಾಗಿ ಬಂಧುಗಳಂತೆ ವರ್ತಿಸಬೇಕೆಂದು ಅಹೋ ರಾತ್ರಿ ತಮ್ಮ ಅನುಯಾಯಿಗಳೊಡನೆ ಯತ್ನಿಸುತ್ತಿರುವರೋ ಅಂಥ ಕಾರ್ಯವನ್ನು ಮಹಾತ್ಮಾ ಬಸವೇಶ್ವರರು ವೀರಶೈವ ಮತದಲ್ಲಿ ರೂಢಿಯಲ್ಲಿ ತಂದು ತೋರಿಸಿದರು. ಆ ಕಾರ್ಯಕ್ಕಾಗಿ ಅವರು ಅನೇಕ ಬಗೆಯ ತೊಂದರೆಗಳಿಗೀಡಾಗಬೇಕಾಯಿತು. ಅನುಯಾಯಿಗಳನೇಕರು ಕಷ್ಟಪಡಬೇಕಾಯಿತು. ಆದರೂ ಯಾವದನ್ನೂ ಲಕ್ಷಿಸದೆ ಮನುಷ್ಯ ಮಾತ್ರರಲ್ಲಿ ಜನ್ಮತಃ ಉಚ್ಚತನ ಅಥವಾ ನೀಚತನವನ್ನು ಕಲ್ಪಿಸಿಕೊಳ್ಳದೆ ಅವರವರ ಕೃತಿಗಳಿಗನುಸರಿಸಿ ಶ್ರೀ ಬಸವೇಶ್ವರರು ಉಚ್ಚ ನೀಚ ಭಾವನೆಯನು ನಾವು ಅರಿಯಬೇಕೆಂದು ತಿಳಿಯಪಡಿಸಿದ್ದಾರೆ. ಅದನ್ನೇ ಅವರ ವಚನವನ್ನುದ್ಧರಿಸಿ ಉದಾಹರಿಸುತ್ತೇವೆ.

"ಹೊಲೆಯ ಹೊಲಬಿಗನಾದೊಡೆ ಅವನ ಹೊರೆಯಲ್ಲಿಪ್ಪುದು ಲೇಸು
ಹೊಲಬುಗೆಡದೆ ಲಿಂಗಶರಣೆನ್ನಿರಯ್ಯ ಹೊಲಬುಗೇಡಬೇಡ.
ಶಿವಶರಣೆನ್ನಿರಯ್ಯ. ನಮ್ಮ ಕೂಡಲ ಸಂಗನ ಮಹಾಮನೆಯಲು
ಮಾದಾರ ಚನ್ನಯ್ಯ ಹೊಲಬಿಗನಯ್ಯ.
"ಶ್ವಪಚನಾದರೇನು, ಲಿಂಗಭಕ್ತನೇ ಕುಲಜನು..."

ಇತ್ಯಾದಿಯಾಗಿ ಶ್ರೀ ಬಸವೇಶ್ವರ ಮೊದಲಾದ ಶಿವಶರಣರು ಜನನಕ್ಕೆ ಅಥವಾ ಹುಟ್ಟಿದ ಕುಲಕ್ಕೆ ಮಹತ್ವವನ್ನು ಕೊಡದೆ ಅವರ ಆಚಾರಗಳಿಗೆ ಮಹತ್ವವನ್ನು ಕೊಟ್ಟು ಕೀಳು ಕುಲದಲ್ಲಿ ಹುಟ್ಟಿದವರಾದರೂ ಶಿವಾಚಾರ ಸಂಪನ್ನರಾದವರನ್ನು ತಮ್ಮೊಳಗೆ ತೆಗೆದುಕೊಂಡು ಅವರೊಡನೆ ಬಂಧುಭಾವದಿಂದ ಕಂಡುದಲ್ಲದೆ ಸಮಾಜದಲ್ಲಿ ಅವರಿಗೆ ಹೆಚ್ಚಿನ ಮನ್ನಣೆಯನ್ನು ಸಹ ಸಲ್ಲಿಸಿದ್ದಾರೆ.

ಈ ರೀತಿಯಾಗಿ ಮಾನವ ಕುಲದಲ್ಲಿ ಜನ್ಮತಃ ಉಚ್ಚ ನೀಚತ್ವಗಳಿಗನುವು ಕೊಡದೆ ಆವರವರ ಆಚಾರ ವಿಚಾರಗಳಿಗೇನೇ ಮಹತ್ವ ಕೊಟ್ಟು ಅದನ್ನು ರೂಢಿಯಲ್ಲಿ ತಂದು ತೋರಿಸಿದ್ದೊಂದು ವೀರಶೈವ ಮತದ ವೈಶಿಷ್ಟ್ಯವು.

ಈ ಮತದ ಇನ್ನೊಂದು ವೈಶಿಷ್ಟ್ಯವನ್ನು ನಾವು ಅದರಲ್ಲಿ ಅಡಕವಾಗಿರುವ ಉದಾತ್ತ ತತ್ವವಾದ ಸ್ವಾವಲಂಬನದಲ್ಲಿ ಕಾಣಬಹುದು. ಅದು ಹೇಗೆಂದರೆ:- ಹಿಂದುಸ್ತಾನದಲ್ಲಿ ಅನೇಕ ಮತಗಳೂ ಪಂಥಗಳೂ ಇವೆ. ಆದರೆ ಅವೆಲ್ಲವೂ ತಮ್ಮ ಅಸ್ತಿತ್ವಕ್ಕೆ ಪರಮತದವರ ನೆರವನ್ನು ಬಯಸಲೇಬೇಕಾಗುತ್ತವೆ. ಆದರೆ ವೀರಶೈವ ಮತದಲ್ಲಿ ಮಾತ್ರ ಅಂಥ ಪರಾವಲಂಬಿತನವನ್ನು ಸಾಕಷ್ಟು ಮಟ್ಟಿಗೆ ತೆಗೆದು ಹಾಕಿ ಸಮಾಜವು ಸ್ವಾವಲಂಬಿಯಾಗುವ ಏರ್ಪಾಡು ಕಲ್ಪಿಸಲಾಗಿದೆ. ಇದಕ್ಕೆ ಮೂಲ ತಳಹದಿಯೆಂದರೆ ಶಿವಶರಣರು ಕಾಯಕಕ್ಕೆ ಕೊಟ್ಟ ಮಹತ್ವ. ಅವರು "ಕಾಯಕವೇ ಕೈಲಾಸ" ವೆಂದು ಹೇಳಿ ಜನರ ಮನದಟ್ಟು ಮಾಡಿಕೊಟ್ಟು ಅವರಲ್ಲಿರತಕ್ಕ ಕಾಯಕ ಅಥವಾ ತಮ್ಮ ವೃತ್ತಿಯ ಮೇಲಿನ ಊಚ, ನೀಚ ಭಾವನೆಗಳಿಗಾಸ್ಪದ ಕೊಡದೆ ಎಲ್ಲರೂ ಸಮಾನರು ಎಂಬ ಭಾವನೆಯನ್ನು ಬೇರೂರಿಸಿದರು. ಆ ಭಾವನೆಯಿಂದಲೇ ಒಂದೇ ಸಮಾಜದಲ್ಲಿ ಎಲ್ಲ ಪ್ರಕಾರದ ಕಾಯಕದವರು ಕಂಡು ಬರಹತ್ತಿದರು. ಇದನ್ನೇ ಹೆಚ್ಚಾಗಿ ಬಲಪಡಿಸುವದಕ್ಕೋಸ್ಕರ ಧರ್ಮದ ಆಚರಣೆಯ ಕಟ್ಟನ್ನೂ ಕೂಡ ಹಾಕಿದರು. ಶಿವಭಕ್ತರು ತಮ್ಮ ಎಲ್ಲ ವ್ಯವಹಾರಗಳನ್ನು ಶಿವಭಕ್ತರೊಡನೆಯೇ ಮಾಡತಕ್ಕದ್ದು. ಶಿವಭಕ್ತರಲ್ಲದವರ (ಭವಿಗಳ) ಕೂಡ ವ್ಯವಹರಿಸತಕ್ಕದ್ದಲ್ಲ ಎಂಬ ಕಟ್ಟು ಸಾಮಾನ್ಯ ಕಟ್ಟಲ್ಲ. ಈ ಕಟ್ಟನ್ನು ಅಮಲಿನಲ್ಲಿ ತರಬೇಕಾದರೆ ಸಮಾಜವು ಎಷ್ಟು ಪರಿಪೂರ್ಣವಿರಲಿಕ್ಕೆ ಬೇಕು! ಎಷ್ಟು ಸ್ವಾವಲಂಬಿಯಾಗಿರಲಿಕ್ಕೆ ಬೇಕು!

ಮೂರನೆಯ ವೈಶಿಷ್ಟ್ಯವನ್ನು ನಾವು ಈ ಮತ ಪ್ರವರ್ತಕರು ಮತಪ್ರಚಾರಕಾರ್ಯದಲ್ಲಿ ಮಾತೃ ಭಾಷೆಯನ್ನು ಬಳಿಕೆಯಲ್ಲಿ ತಂದದ್ದರಲ್ಲಿ ಕಾಣಬಹುದು. ಹನ್ನೆರಡನೆಯ ಶತಮಾನದ ವರೆಗೆ ಅನೇಕ ಮತಗಳು ರೂಢಿಯಲ್ಲಿ ಬಂದವು. ಆ ಎಲ್ಲ ಮತಾಚಾರ್ಯರು ತಮ್ಮ ಮತತತ್ವಗಳನ್ನಾಗಲೀ ಬೋಧೆಯನ್ನಾಗಲೀ ಬಹು ಜನ ಸಮಾಜಕ್ಕೆ

ಅರಿಯದ ಭಾಷೆಯಾದ ಸಂಸ್ಕೃತ ಭಾಷೆಯಲ್ಲಿ ಪ್ರಸಾರ ಮಾಡಬಯಸಿದರು. ಸಂಸ್ಕೃತ ಭಾಷೆಯ ಪ್ರಯೋಗದಿಂದಲೇ ಮತಗ್ರಂಥಗಳಿಗೆ ವೈಶಿಷ್ಟ್ಯವನ್ನು ಕಲ್ಪಿಸುವ ಕಾಲವು ಅದಾಗಿತ್ತು. ಆದರೆ ವೀರಶೈವ ಮತಪ್ರಚಾರಕರು ಬಹುಜನ ಸಮಾಜಕ್ಕೆ ತಿಳಿಯುವ ತಿಳಿಗನ್ನಡ ಭಾಷೆಯಲ್ಲಿಯೇ ತಮ್ಮ ಮತ ತತ್ವಗಳನ್ನು ಪ್ರಸಾರ ಮಾಡಿದರು. ಈ ರೀತಿ ಮಾತೃ ಭಾಷೆಗೆ ಇಂಥ ಗೌರವದ ಸ್ಥಾನವನ್ನು ಕೊಟ್ಟ ಬಹುಮಾನವು ವೀರಶೈವರಿಗೇನೇ ಸಲ್ಲುವದೆಂದರೆ ಅತಿಶಯೋಕ್ತಿಯಾಗಲಾರದು. ಮಾತೃಭಾಷೆಯ ಬಳಿಕೆಯಿಂದ ಎಲ್ಲ ಜನರಿಗೂ ಮತತತ್ವಗಳು ತಿಳಿದು ಅವುಗಳನ್ನು ಆಚರಣೆಯಲ್ಲಿ ತರಲು ಬಹು ಸುಲಭವಾಯಿತು.

ಈ ಬಗೆಯಾಗಿ ವೀರಶೈವಮತದಲ್ಲಿ ಇನ್ನೂ ಕೆಲವು ವೈಶಿಷ್ಟ್ಯಗಳಿದ್ದರೂ ನಾವು ಇನ್ನೊಂದನ್ನೇ ಉಲ್ಲೇಖಿಸಬಯಸುತ್ತೇವೆ. ಮಹಾತ್ಮಾ ಗಾಂಧಿಯವರು ತಮ್ಮ ಧ್ಯೇಯ ಸಾಧನೆಗಾಗಿ ಇಲ್ಲವೆ ಎರಡನೇಯವರಲ್ಲಿ ಕುಂದು ಕೊರತೆಗಳ ನಿವಾರಣೆಗಾಗಿ ಹುಡುಕಿ ತೆಗೆದಂಥ ಎರಡು ದಿವ್ಯಾಸ್ತ್ರಗಳ ಪ್ರಯೋಗವನ್ನು ಎಂಟುನೂರು ವರ್ಷಗಳ ಹಿಂದೆಯೇ ಶಿವಶರಣರು ಆಚರಣೆಯಲ್ಲಿ ತಂದು ಫಲಕಾರಿಯಾಗಿ ಮಾಡಿ ತೋರಿಸಿದ್ದಾರೆ. ಆ ದಿವ್ಯಾಸ್ತ್ರಗಳೆಂದರೆ 'ಸತ್ಯಾಗ್ರಹ' ಮತ್ತು 'ಆತ್ಮದೇಹದಂಡನೆ' ಸತ್ಯಾಗ್ರಹದ ಬಗ್ಗೆ ಶ್ರೀ. ಬಸವೇಶ್ವರರ ಜೀವನವೇ ಸಾಕಷ್ಟು ಉಚ್ಚವಾದ ಉದಾಹರಣೆಯಾಗಿದೆ. ಅವರು ತಮ್ಮ ಎಳ ವಯಸ್ಸಿನಲ್ಲಿಯೇ ತಮ್ಮ ಹಿರಿಯರ ಕೂಡ ಸತ್ಯಾಗ್ರಹಹೂಡಿ ತಮ್ಮ ಮಹಾತ್ಮ್ಯವನ್ನು ಹೊರಪಡಿಸಿದರು. ಇನ್ನೂ ಇದಕ್ಕೂ ಹೆಚ್ಚಿನ ಉದಾಹರಣೆಗಳು ಬೇಕಾದರೆ ವೀರಶೈವ ಸಮಾಜದ ಪ್ರಚಾರಕಾರ್ಯ ನಿಯುಕ್ತರಾದ ಕಾಯಕದ ಅಯ್ಯಗಳವರ ಚರಿತ್ರೆಯ ಕಡೆಗೆ ನೋಡಬಹುದು. ಈ ಕಾಯಕದ ಅಯ್ಯನವರೆಂದರೆ ಸಂಚಾರಕ ಧರ್ಮೋಪದೇಶಕರೇ ಸರಿ. ಅವರು ಹೋದ ಹೋದಲ್ಲೆಲ್ಲ ಭಕ್ತರ ಮನೆಗಳನ್ನು ಸಂದರ್ಶಿಸಿ ಆ ಭಕ್ತರಲ್ಲಿ ಯಾವದಾದರೂ ಲೋಪ ದೋಷಗಳು ಕಂಡು ಬಂದರೆ ಅವರಿಗೆ ತಿಳಿಹೇಳಿ ಅವನ್ನು ತಿದ್ದಿಕೊಳ್ಳಲಿಕ್ಕೆ ಉಪದೇಶಿಸುವದು; ಭಕ್ತರು ಈ ಉಪದೇಶವನ್ನು ಮನ್ನಿಸದಿದ್ದರೆ ಅಯ್ಯನವರು ಆ ಭಕ್ತರ ಕೂಡ ಸತ್ಯಾಗ್ರಹಹೂಡಿ ಮುಳ್ಳಾವಿಗೆಯ ಮೇಲೆ ನಿಂತಾಗಲಿ ಇಲ್ಲವೆ ಇಂಥ

ಬೇರೆ ಸ್ವದೇಹ ದಂಡನೆಯ ಮಾರ್ಗದಿಂದಾಗಲಿ ಭಕ್ತರನ್ನು ಸನ್ಮಾ ರ್ಗಕ್ಕೆ ತರುವದು ಇವೇ ಇವರ ಮುಖ್ಯ ಕರ್ತವ್ಯಗಳಾಗಿದ್ದವು. ಈ ರೀತಿಯಿಂದ ಸಮಾಜದ ಘಟಕಗಳಾದ ವ್ಯಕ್ತಿಗಳ ವೈಯಕ್ತಿಕ ಸುಧಾ ರಣೆಯ ಧ್ಯೇಯವನ್ನು ಸಾಧಿಸಲು ಇಂಥ ಅನೇಕ ಅಯ್ಯನವರು ದುಡಿ ಯುವ ಸಮಾಜವು ದೇಶದಲ್ಲಿ ನಿಜವಾಗಿ ವಿಶಿಷ್ಟಸ್ಥಾನವನ್ನು ಪಡೆಯು ವದು ಸಹಜ.

( ಮುಂದಿನ ಸಂಚಿಕೆಯಲ್ಲಿ ಈ ಮತದ ಇನ್ನೂ ಕೆಲವು ವೈಶಿಷ್ಟ್ಯ ಗಳನ್ನು ವಿಸ್ತರಿಸಿ, ಸದ್ಯದ ಸ್ಥಿತಿಯನ್ನು ಪರ್ಯಾಲೋಚಿಸಿ ಸಮಾಜವು ಮೊದಲಿನಂತೆ ಮೇಲು ಮೆಟ್ಟಲನ್ನು ಮುಟ್ಟಲು ಮಾಡಬಹುದಾದ ಪ್ರಯ ತ್ನಗಳ ಬಗ್ಗೆ ಬರೆಯಬಯಸುತ್ತೇವೆ.)

---

ಹದಿನಾರು ಮುಖ ಹದಿನಾರು ಕಲೆಯ ಬಿಳ್ಪಿನ ಮಣಿಗಳಾಗಿಹವು. ಸೂರ್ಯಲೋಚನದ ಉದಕದ ಹನಿ ಬಿದ್ದು ಉದಯವಾದ ವೃಕ್ಷದ ರುದ್ರಾಕ್ಷಿಯೇ ೧೨ ಮುಖ ೧೨ ಕಲೆ ಕೆಂಪಿನ ಮಣಿಗಳಾಗಿಹವು. ಅಗ್ನಿಲೋಚನದ ಉದಕದ ಹನಿಬಿದ್ದು ಉದಯವಾದ ವೃಕ್ಷದ ರುದ್ರಾಕ್ಷಿಯೇ ೧೦ ಮುಖ ೧೦ ಕಲೆ ಕಪ್ಪಿನ ಮಣಿಗಳಾಗಿಹವು. 'ಮರ್ತ್ಯಸ್ಯ ಮಾನವೋನರಃ' ಎಂದು ಮನುಷ್ಯರುಗಳ ಮರ್ತ್ಯಸ್ಯ ಭುವನೇಜನಾಃ ಎಂದು ಭೂಜನಾತ್ಮರುಗಳ ಘೋರ ಭಯಂಕರವಾದ ಪಾತಕಂಗಳನು ಪಂಚಮಹಾದೋಷಂಗಳನು ದಹಿಸಿ ಸುಟ್ಟುಬಿಟ್ಟು ಭಕ್ತಜನದೊಳೊಪ್ಪಿ ಸದ್ಭಕ್ತಶರಣಜನಂಗಳಲ್ಲಿ ಶೋಭಿಸಿ ತೋರುತಿಪ್ಪ ಕಾಣಿಸುತ್ತಿರ್ದಂಥ ರುದ್ರಾಕ್ಷಿ ಪುಣ್ಯ ಪುಂಜವು. ರೂ ಎಂಬ ರುಜೆಗಳನು ದ್ರಾ ಯೆತೆ ಓಡಿಸಿಬಿಡಲ್ಪಟ್ಟ ಪಾಪವಿದ್ರಾವಕ ಪರಶಿವಸ್ವರೂಪವಾದ ಚಿದ್ರುದ್ರಾಕ್ಷಿ ಪುಣ್ಯದ ಸುಕೃತದ ರಾಶಿಯು.

**ಮೂಲಃ**—ಸ್ಮರಿಸಿ ದುರಿತ ಹರವು ಈಕ್ಷಿಸಲ್ಕೆ ಕರ್ಮವಳಿವು ಮೊಲಿದು । ಸ್ಪರುಶನವನು ಮಾಡೆ ಜನ್ಮಪಾಶ ಪರಿವುದು । ಧರಿಸೆ ರುದ್ರ ಪದವಿಯರಿದು ಧರಿಸಿ ಜಪಿಸೆ ಸದ್ಯೋನ್ಮುಕ್ತಿ । ಪರಮವೀರಶೈವ ಮತದ ಮೂಲ ಭೂಷಣ ॥

**ಟೀಕಃ**—ಸ್ಮರಿಸಿ ದುರಿತ ಹರವು ಈ ರುದ್ರಾಕ್ಷಿಯೇ ಸಾಕ್ಷಾತ್ ಶಿವಸ್ವರೂಪವೆಂದು ನೆನೆದಷ್ಟರಲ್ಲಿಯೇ ಅಷ್ಟೋತ್ತರ ಶತವ್ಯಾಧಿಗಳು ಹುಲಿ ಕಂಡ ಹುಲ್ಲೆಯೋಪಾದಿಯಲ್ಲಿ ಸಿಂಹನ ಕಂಡ ಕರಿಯೋಪಾದಿಯಲ್ಲಿ ಕೆಡೆಬಡಿದು ಓಡುತ್ತಿಹವು. ಈಕ್ಷಿಸಲ್ಕೆ ಕರ್ಮವಳಿದು ಈ ರುದ್ರಾಕ್ಷಿಯೇ ಸಾಕ್ಷಾತ್ ಶಿವಸ್ವರೂಪವೆಂದು ನಿರೀಕ್ಷಣೆಯ ಮಾಡಿದಷ್ಟರಲ್ಲಿಯೇ ಸಂಚಿತ ಪ್ರಾರಬ್ಧಾಗಾಮಿ ಎಂಬ ಕೃತ್ಯವು ನಾಶವಾಗುತ್ತಿಹವು. ಒಲಿದು ಪ್ರೀತಿಯಿಂದೆ ಸ್ಪರ್ಶನವನು ಮಾಡೆ ಈ ರುದ್ರಾಕ್ಷಿಯನು ಸಾಕ್ಷಾತ್ ಶಿವಸ್ವರೂಪವೆಂದು ಮುಟ್ಟಿದಷ್ಟರಲ್ಲಿಯೇ ಜನ್ಮಪಾಶ ಭವಪಾಶವು ಪರಿವುದು ಛೇದನವಾಗುವುದು. ಧರಿಸಿ ರುದ್ರಪದವಿಯು ಆ ರುದ್ರಾಕ್ಷಿಯನು ತಳೆದುಕೊಳ್ಳೆ ದುಃಖಾಪಹಾರಿಯಾದ ಪರಶಿವಲಿಂಗದ ಪದವಿಯು ಅರಿದು ಆ ರುದ್ರಾಕ್ಷಿಯ ಸ್ಥಾನಭೇದ ಗಣನೆ ಭೇದ ಮಹತ್ವವನು ತಿಳಿದು ಧರಿಸೆ ತಳೆದುಕೊಳೆ ಜಪಿಸೆ ಏಕವಿಂಶತಿ ಪಂಚವಿಂಶತಿ ಷಷ್ಠವಿಂಶತಿ ಅಷ್ಟವಿಂಶತಿ ನೂರೆಂಟು ಮಣಿಮಾಲೆಗ

?ನು ಪುನಶ್ಚರಣೆಯು ಜಪಂಗಳ ಮಾಡಿ ಎಂಬುದೀಗ ಸದ್ಯೋನ್ಮುಕ್ತಿ ನಾಳುತ್ತಲೆ ನಿಜಮೋಕ್ಷ ಸ್ವರೂಪವನು ಆ ಕ್ಷಣದಲ್ಲಿಯೇ ಮುಕ್ತಿಯು ಪರಮ ಉತ್ಕೃಷ್ಟವಾದ ವೀರವಿಕಲ್ಪರಹಿತವಾದ ಶೈವ ಶಿವಸಂಬಂಧವಾದ ಮತದ ಮೋಕ್ಷಮಾರ್ಗದ ಶಿವ ಶೈವಮಾರ್ಗದ ಮೂಲಭೂಷಣ ಒಬ್ಬಾ ನೊಬ್ಬನು ಪತಿವ್ರತಾಂಗನೆಗೆ ಬಿಚ್ಚವೋಲೆ ಬೆಳ್ಳಿ ಮಣಿಯೇ ಅಲಂಕಾರ ನಾಗಿ ಒಪ್ಪುವ ಹಾಗೆ ಆ ಪರಮೇಶ್ವರನ ಪಂಚಮುಖಸ್ವರೂಪವಾದ ಚಿದ್ರುದ್ರಾಕ್ಷಿಯೇ ಸದ್ಭಕ್ತ ಶರಣ ಜನಂಗಳಿಗೆ ಪ್ರಥಮಾಭರಣವಾಗಿ ಒಪ್ಪುತ್ತಿಹುದು-

**ಮೂಲ:**-- ಹಸ್ತದಲ್ಲಿ ಬಾಹು ಕಂಠದಲ್ಲಿ ಕರ್ಣಯುಗಳದಲ್ಲಿ। ಉತ್ತಮಾಂಗದಲ್ಲಿ ಶಿಖಿಯ ಮೂಲದಲ್ಲಿ॥ ವಿಸ್ತರಿಸಿ ಮನೋನುರಾಗದಿಂದ ತಿಳಿದು ನೋಡೆಯಾಗ। ಮೋಕ್ತಿಯಿಂದ ಜಪಿಸಿದಾತ ಸತ್ಯ ನಿತ್ಯನು॥

**ಟೀಕು:** -- ಹಸ್ತದಲ್ಲಿ 'ಹಸ್ತೇನ ವಕ್ತ್ರಾಣಿ' ಎಂದು ೯ ಮುಖದ ಮಣಿಯನು ೧೨ ೧೨ ಆಗಿ ೨ ದ್ವಿಪಾಣಿ ಪ್ರಸ್ಥಾನದಲ್ಲಿ ಧರಿಸುವುದು. ಮತ್ತೆ ೧೦ ಮುಖದ ಮಣಿಗಳನು ೧೨ ೧೨ ಆಗಿ ಧರಿಸುವುದು. ಬಾಹು 'ಬಾಹೋತ್ರಯೋರ್ದಶ ವಕ್ತ್ರಾಣಿ' ಎಂದು ೧೩ ಮುಖದ ಮಣಿ ಎಂದು ೧೩ ಮುಖದ ಮಣಿಯನು ೧೬ ೧೬ ಆಗಿ ೨ ಪ್ರಕಾಂಡಸ್ಥಾನ ದಲ್ಲಿ ಧರಿಸುವುದು. ಮತ್ತೆ ೧೦ ಮುಖದ ಮಣಿ ೧೩ ಮುಖದ ಮಣಿ ಯನು ೧೬ ೧೬ ಆಗಿ ಧರಿಸುವುದು. ಕಂಠದಲ್ಲಿ 'ಷಡಾಷ್ಟವದನೆ ಕಂಠೆ' ಎಂದು ೬ ಮುಖದ ಮಣಿ ೮ ಮುಖದ ಮಣಿಯನು ೩೨ ಆಗಿ ಕಂಠಸ್ಥ ವಾಗಿ ಧರಿಸುವುದು. ಕರ್ಣಯುಗಳದಲ್ಲಿ ೫ ಮುಖದ ಮಣಿ ೧೦ ಮುಖದ ಮಣಿ ೭ ಮುಖದ ಮಣಿಯನು ಆರಾರಾಗಿ ಕಿವಿಯಲ್ಲಿ ಕರ್ಣ ಕುಂಡಲವಾಗಿ ಧರಿಸುವುದು. ಉತ್ತಮಾಂಗದಲ್ಲಿ 'ಉತ್ತುಮಾಂಗೇ ಕದಶ ವಕ್ತ್ರಾಣಿ' ಎಂದು ೧೧ ಮುಖದ ಮಣಿಯನು ೩೬ ರ ಗಣನೆಯಿಂದ ಶಿರಬಳಸಿ ತೊಂಡಿಲ ಬಾಸಿಂಗವಾಗಿ ಧರಿಸುವುದು. ಮತ್ತೆ ೧೬ ಮುಖದ ಮಣಿ ೧೭ ಮುಖದ ಮಣಿಯನು ಶಿರಬಳಿಸಿ ತೊಂಡಿಲ ಬಾಸಿಂಗವಾಗಿ ಧರಿಸುವುದು. ಶಿಖಿಯು 'ಶಿಖಿಯೋ ದ್ವಿ ತ್ರಿ ದ್ವಾದಶ ವಕ್ತ್ರಾಣಿ' ಎಂದು ೨ ಮುಖದ ಮಣಿ ೩ ಮುಖದ ಮಣಿ ೧೨ ಮುಖದ ಮಣಿಯನು ೩ ಆಗಿ ಶಿಖಾಚಕ್ರದ ಜುಟ್ಟಿಯಲ್ಲಿ ಧರಿಸುವುದು. ಮೂಲದಲ್ಲಿ 'ಪಶ್ಚಿ ಮೇಕದಶ ವಕ್ತ್ರಾಣಿ' ಎಂದು ಏಕ ಮುಖದ ರುದ್ರಾಕ್ಷಿಯನು ಪಶ್ಚಿಮ

ಚಕ್ರದಲ್ಲಿ ಒಂದಾಗಿ ಧರಿಸುವುದು. 'ಉರಸಂ ಚತುರ್ವಕ್ತ್ರಾಣಿ' ಎಂದು ನಾಲ್ಕು ಮುಖದ ರುದ್ರಾಕ್ಷಿಗಳನು ೫೨ ಗಣನೆಯಿಂದ ಉರದಲ್ಲಿ "ಗ್ರೈವೇಕವಾಗಿ ಧರಿಸುವುದು. ವಿಸ್ತರಿಸಿ ಹೇಗೆ ಪ್ರಕಟೀಕರಿಸಿ ಮನೋನುರಾಗದಿಂದ ಚಿತ್ತಿನ ಪ್ರೀತಿಯಾದಂತಹ ಮನಸಿನ ಬಯಕೆಯಿಂದ ತಿಳಿದು ಆ ರುದ್ರಾಕ್ಷಿಯ ಮಹತ್ವವನು ಅರಿದು ನೋಡೆ ಅವೇ ಸಾಕ್ಷಾತ್ ಶಿವ ಸ್ವರೂಪವೆಂದು ನಿರೀಕ್ಷಿಸಿ ಆಗಮೋಕ್ತದಿಂದ ಶಿವಾಗಮಂಗಳ ಮಾರ್ಗದಿಂದ ಧರಿಸಿದಾತ ತಳೆದುಕೊಂಡಾತ ಸತ್ಯ ಪಾರಮಾರ್ಥವಾದ ನಿತ್ಯನು ಶಾಶ್ವತ ಸ್ವರೂಪನಾದಾತನು.

**ಮೂಲಃ**— ಎಸೆವ ಹಲವು ಮುಖದ ಭೇದವರಿದು ಧರಿಸಿ ಬ್ರಹ್ಮ ಹತ್ಯ । ಶಶುವಿಘಾತ ಭ್ರೂಣಹತ್ಯ ಪಾಪನಾಶನಾ ॥ ಎಸೆದು ಚಿತ್ತ ಶುದ್ಧಿಯಿಂದ ಧರಿಸಿದಾತ ರುದ್ರನೆಂದು । ವಸುಧೆಯೊಳಗೆ ಸಾರುತಿಹುದು ವೇದ ವಾಕ್ಯವು ॥

**ಟೀಕು**:— ಎಸೆವ ಶೋಭಿಸುವಂಥ ಹಲವು ಮುಖದ ಭೇದವರಿದು, ಒಂದು ಮುಖದ ರುದ್ರಾಕ್ಷಿಯ ಧರಿಸಿದರೆ ಇಂತಹ ಫಲ, ೧೬ ಮುಖದ ರುದ್ರಾಕ್ಷಿಯ ಧರಿಸಿದರೆ ಇಂತಹ ಫಲವೆಂದು ಸ್ಥಾನಭೇದ ಮುಖಭೇದ ಗಣನೆಭೇದ ಮಹತ್ವವನು ತಿಳಿದು ಧರಿಸಿ ತಳೆದುಕೊಳ್ಳೆ ಬ್ರಹ್ಮಹತ್ಯ ಭ್ರೂಣರ ಕೊಂದಂಥ ದೋಷವು ಮತ್ತೆ ಲಿಂಗವ ಕಿತ್ತು ಹಾಕಿ ದ್ರವ್ಯವ ತೆಗೆದುಕೊಂಡಂಥ ದೋಷವು ಪಶುವಿಘಾತಗೋಹತ್ಯ ಭ್ರೂಣಹತ್ಯ ಗಂಡಸಿಲ್ಲದ ಸ್ತ್ರೀಯಳನು ಗರ್ಭಿಣಿಯ ಮಾಡಿ ಔಷಧ ಕಷಾಯಗಳನು ಕೊಟ್ಟು ಗರ್ಭ ಕಳಚಿದಂತಹ ದೋಷವು ಪಾಪ ನಾಶನ ಬ್ರಹ್ಮಹತ್ಯ ಪಶುಹತ್ಯ ಸ್ತ್ರೀಹತ್ಯ ಶಿಶುಹತ್ಯ ಗೋಹತ್ಯ ಈ ಪಂಚ ಮಹಾ ಪಾತಕಂಗಳು ನಷ್ಟವಾಗಿ ಹೋಗುತ್ತಿಹವು. ಒಸೆದು ಪ್ರೀತಿಯಿಂದ ಚಿತ್ತ ಶುದ್ಧಿಯಿಂದ ಮನ ನಿರ್ಮಲತ್ವದಿಂದ ಧರಿಸಿದಾತ ತಳೆದುಕೊಂಡಾತನೇ ರುದ್ರನೆಂದು ಅಥ ಏವ ರುದ್ರಾಕ್ಷಿ ಧಾರಣಾತ್ ರುದ್ರಾಯೆಂದು ಸಾಕ್ಷಾತ್ ಶಿವಸ್ವರೂಪನು. ವಸುಧೆಯೊಳಗೆ ಈ ಪೃಥ್ವಿಯಲ್ಲಿ ವೇದವಾಕ್ಯವು ಶ್ರುತಿವಚನಗಳಿಂದ ಸಾರುತ್ತಿಹವು ಬೊಬ್ಬಿಟ್ಟು ಕೂಗುತ್ತಿಹವು.

**ಮೂಲಃ**— ಪರಮ ಶಿವನ ಪರಬ್ರಹ್ಮ ದೇಹದಲ್ಲಿ ತೊಡಿಗೆಯಾಗಿ । ಪರಮಪುಣ್ಯ ಪುಂಜಮಾಲೆಯೆನಿಸಿಯೊಪ್ಪುವಾ ॥ ಶರಣ ಜನ ಮನೋರಥವೆನಿಪ್ಪ ಋದ್ರಾಕ್ಷಿಗಳನು । ಧರಿಸಿಯಾನು ಬದುಕಿದೆನು ಸಂಗನಿಮ್ಮೊಳು.

**ಟೀಕು:**— ಪರಮು ಉತ್ಕೃಷ್ಟವಾದ ಶಿವನ ನಿಃಕಲ-ಪರಶಿವನ ಪರ ಬ್ರಹ್ಮದ ಪಂಚಬ್ರಹ್ಮವನೊಳಕೊಂಡು ತೋರುವ ಘನ ಬ್ರಹ್ಮದ ದೇಹ ದಲ್ಲಿ ಚಿದಂಗದಲ್ಲಿ ತೊಡಿಗೆಯಾಗಿ ನಿಃಕಲ ಲಿಂಗಕ್ಕೆ ಜ್ಞಾನ ಚಿತ್ತುವಿ ನಿಂದಂಗವಾಗಿ ಮಹಾಲಿಂಗಕ್ಕೆ ಪರಶಕ್ತಿ ಪ್ರಣವದಿಂದಂಗವಾಗಿ ಸದಾ ಶಿವ ತತ್ವಕ್ಕ ಸದ್ಧರ್ಮದಿಂದಂಗವಾಗಿ ಪರಮು ಪುಣ್ಯ ಪುಂಜ ಮಾಲಿ ಶಿವಸದ್ಧರ್ಮರಾಶಿಯೂ ಮಾಲೆಯೂ ಎನಿಸಿ ಹೀಗೆಂದು ಹೇಳಿಸಿ ಒಪ್ಪುವ ಸದ್ಭಕ್ತ ಶರಣ ಜನಂಗಳಲ್ಲಿ ಶೋಭಿಸುವ ಶರಣ ಜನ ಮನೋರಥವೆನಿಪ ಪರಾಗ ರಸಾಂಕ ಭದ್ರ ಗಾಯಕ ಮೊದಲಾದ ಸದ್ಭಕ್ತ ಶರಣ ಜನಂಗಳ ಅವರ ಚಿತ್ತಿನ ಪ್ರೀತಿಯಾದಂತಹ ರುದ್ರಾಕ್ಷಿ ಗಳನು ರೂ ಎಂಬ ರುಜೆಗಳನು ದ್ರಾ ಇತಿ ಓಡಿಸಿ ಬಿಡಲ್ಪಟ್ಟ ಪಾಪ ವಿದ್ರಾವಕ ಪರಶಿವ ಸ್ವರೂಪವಾದ ಚಿದ್ರುದ್ರಾಕ್ಷಿಗಳನು ಧರಿಸಿ ತಳೆದು ಆನು ಶರಣನು ಬದುಕಿದೆನು ಕೃತಾರ್ಥನಾದೆನು ಸುಕೃತನಾದೆನು ಸಂಗ ಎಲೆ ಗುರುಮೂರ್ತಿಯೇ ನಿಮ್ಮೊಳು ನಿಮ್ಮಲ್ಲಿ.

**ಸೂತ್ರ:**— ಇಂತು ಅಂಗದಮೇಲೆ ಲಿಂಗಸಂಬಂಧವಾಗಿ ವಿಭೂತಿ ರುದ್ರಾಕ್ಷಿಯುಂ ಧರಿಸಿ ನಿತ್ಯ ಲಿಂಗಾರ್ಚನೆಯುಂ ಮಾಡುವ ಲಿಂಗ ಕ್ರಿಯಾಸಂಪನ್ನಂಗೆ ಪ್ರಣವು ಮೂಲವಾದ ಪಂಚಾಕ್ಷರಿಯು ಜಪಿಸ ಬೇಕಾದ ಕಾರಣ ಮುಂದೆ ಪಂಚಾಕ್ಷರಿಯು ಸ್ಥಲವಾದುದು.

**ಟೀಕು:**— ಸೂತ್ರ ಸೂಚನಮುಚ್ಯತೆ ಎಂದು ಈ ಪ್ರಕಾರದ ದೆಸೆ ಯಿಂದೆ ಅಂಗದ ಮೇಲೆ ಆಚಾರಂಗದ ಮೇಲೆ ಲಿಂಗ ಇಷ್ಟಲಿಂಗವು ಸಂಬಂಧವಾಗಿ ವಿಭೂತಿ ಶಿವನ ದ್ವೈಕಾಂತಿ ಸ್ವರೂಪವಾದ ಚಿದ್ವಿಭೂತಿ ರುದ್ರಾಕ್ಷಿಯುಂ ಪರಮೇಶ್ವರನ ಪಂಚಮುಖ ಸ್ವರೂಪವಾದ ಶಿವತತ್ವ ಚಿಂತಾಮಣಿ ಎಂಬ ರುದ್ರಾಕ್ಷಿಗಳನು ಧರಿಸಿ ತಳೆದು ನಿತ್ಯ ಲಿಂಗಾ ರ್ಚನೆಯು ಮಾಡುವ ತ್ರಿಕಾಲಂಗಳಲ್ಲಿ ತಪ್ಪದೆ ಮಾಡುವ ಇಷ್ಟಲಿಂಗದ ಅಷ್ಟವಿಧಾರ್ಚನೆ ಷೋಡಶೋಪಚಾರವನು ಎಸಗುವ ಲಿಂಗವ ಕ್ರಿಯಾ ಸಂಪನ್ನಂಗೆ ಶಿವ ಸತ್ಕ್ರಿಯಲ್ಲಿ ಸಮೃದ್ಧಿವೆತ್ತಂಥ ಶಿವಶರಣನಿಗೆ ಪ್ರಣವ ಮೂಲವಾದ ಓಂಕಾರ ಪ್ರಣಮುವೇ ಪುರಸ್ಕರವಾದ ಪಂಚಾಕ್ಷರಿಯು ಐದಕ್ಷರಂಗಳನು ಜಪಿಸಬೇಕಾದ ಕಾರಣ ಒಂದಾನೊಂದು ಬಸವ ಮೇಲೆ ಕಿರಿದೋಪಾದಿಯಲ್ಲಿ ಪುನಃ ಪುನಃ ಅನುಷ್ಠಾನವ ಮಾಡಬೇ

ಕಾವ ನಿಮಿತ್ಯವು ಮುಂದೆ ಪುರಸ್ಸರದಲ್ಲಿ ಪಂಚಾಕ್ಷರಿಯು ಸ್ಥಲವಾದುದು, ಪಂಚಾಕ್ಷರಿಯು ಸ್ಥಲವೆಂದೇ ಪೇಳಲಾಯಿತ್ತು.

### ೮ ಪಂಚಾಕ್ಷರಿಯು ಸ್ಥಲ.

**ಮೂಲಃ**-- ಸುರಿದು ಕರುಣಾಮೃತವ ಹೊರೆವುದೈ ಭಕ್ತರನು। ಪುರದ ಮಲ್ಲನ ನಾಮ ಪಂಚಾಕ್ಷರಿ ॥ಪ॥

**ಟೀಕುಃ**-- ಕರುಣಾಮೃತವ ಕೃಪಾಸುಧೆಯನು ದಯಾಸುಧೆಯನು ಸುರಿದು ಸ್ರವಿಸಿ ಭಕ್ತರನು ಹೊರೆವುದು. ಕುಂಬಾರ ಗುಂಡಯ್ಯ, ಗೊಡಲ ಮಲ್ಲಯ್ಯ ಮೊದಲಾದ ಸದ್ಭಕ್ತ ಶರಣಜನಂಗಳನು ರಕ್ಷಿಸುವುದು. ಅಲ್ಲಿ ಕಥೆ, ಆ ಪುರದ ಶಿವಪುರದ ಆಚಾರಂಗಂಗವೆಂಬ ಪಟ್ಟಣದ ಮಲ್ಲನ ವೃಥಾಂಗಪುಂಜನಾದ ಪರಮೇಶ್ವರನ ನಾಮ ಅದ್ವಯಾಭಿಧಾನವಾದ ಪಂಚಾಕ್ಷರಿ ನಮಃಶಿವಾಯ ಎಂಬ ಐದಕ್ಷರವು.

**ಮೂಲಃ**-- ತಾಯಿ ಶ್ರುತಿಗಳವೊತ್ತ ದಾಯು ಭಕ್ತ್ಯಾಂಗನೆಯು। ಶ್ರೀಯಖಿಳಭುವನ ಭವನವ ಸಲಹುವಾ। ಈಯುಲಿಕೆ ಬೇಡಿದುದ ಕಾಯುಲಿಕೆ ತನುವನು ತಾಯಿಂದಲನು ಕಂಡ್ಯ ಪಂಚಾಕ್ಷರಿ ॥

**ಟೀಕು**--ಶ್ರುತಿಗಳ ವೊತ್ತ ತಾಯಿ ನಿಗಮಂಗಳ ಸಮೂಹಕ್ಕೆ ಮಾತೆಯಾದ ಪಂಚಾಕ್ಷರೀ ಮಂತ್ರವು ಭಕ್ತ್ಯಂಗನೆಯದಾಯು ಶಿವಾದ್ವೈತ ಭಕ್ತಿ ಶಕ್ತಿಯರುಗಳಿಗೆ ಪರಮಾಯುಷ್ಯವಾದ ಪಂಚಾಕ್ಷರೀ ಮಂತ್ರವು, ಮತ್ತೆ ತ್ರಿನೀಲಕಂಠಯ್ಯಗಳ ಕಥೆ. ಅಖಿಳ ಭುವನಭವನ ಸಲಹುವ ಬಹಳವಾದ ಹದಿನಾಲ್ಕು ಭುವನಂಗಳಲ್ಲಿ ಮಂದಿರವನು ಕಟ್ಟಿಕೊಂಡಿರುವ ಉಪಾಧಿ ನಿರುಪಾಧಿ ಸಹಜ ಭಕ್ತರುಗಳ ರಕ್ಷಣ್ಯವ ಮಾಡುವ ಶ್ರೀ ಅವರ ಗೃಹಭಾರವನ್ನು ನಡಿಸಿಕೊಂಡು ಹೋಗುವ ಲಕ್ಷ್ಮಿಯೂ ಆ ಲಕ್ಷ್ಮಿ ಸ್ವರೂಪವಾದಂಥಾದ್ದು ಪಂಚಾಕ್ಷರೀ ಮಂತ್ರವೆಂಬುದೀಗ ಬೇಡಿದುದು ಈಯುಲಿಕೆ ಯಾಚಿಸಿದಂಥ ಇಷ್ಟಾರ್ಥ ಸಿದ್ಧಿಯನು ಕೊಡುವುದಕ್ಕೆ ಪಂಚಾಕ್ಷರೀ ಮಂತ್ರವೇ ಮುಖ್ಯವು. ತನುವನು ಕಾಯುಲಿಕೆ ಆ ಮಂತ್ರ ಸಿದ್ಧನನು ರಕ್ಷಣ್ಯವ ಮಾಡುವದಕ್ಕೆ ಈ ಪಂಚಾಕ್ಷರೀ ಮಂತ್ರವೇ ಮುಖ್ಯವಾಗಿಹುದು. ತಾಯಿಂದ ಮಾತೆಯಿಂದ ಅನುಕಂಡ್ಯ ಅತ್ಯಂತ ಸುಖವಾ

ದಂಥಾದ್ದು ಪ್ರೀತಿಯಾದಂಥಾದ್ದು ಈ ಪಂಚಾಕ್ಷರೀ ಈ ಪಂಚಾಕ್ಷರೀ ಮಂತ್ರವು ಅಲ್ಲಿ ಶುಕಮುನೀಶ್ವರನ ಕಥೆ.

**ಮೂಲ**:— ಕರಗಿ ಮನ ಕಂಗಳೊಳು ಸುರಿಯೆ ಸುಖವರುಷವಂ। ಕುರಿಸೆ ಪುಳಕಂಗಳಿಗೆ ಒಯಿದಂದದಿ॥ ಹರುಷದಿಂ ನೆನೆದು ನೆನವರಿಗೆ ಗಿರಿಜಾವರನ। ಕರೆದು ತೋರುವುದು ಶ್ರೀ ಪಂಚಾಕ್ಷರೀ॥

**ಟೀಕು**:— ಮನ ಕರಗಿ ಮನಸು ಲೀನವಾಗಿ ಕಂಗಳೊಳು ಸುಖ ವರುಷ ಸುರಿಯೆ ಎರಡು ಲೋಚನಾಗ್ರದ ಹರುಷ ಜಲವು ಮಡು ಗಟ್ಟಿ ಪ್ರವಾಹವಾಗಿ ಧಾರೋಪಧಾರಿಯಾಗಿ ಸ್ರವಿಸಿ ಆಗೆ ಐದಂದದಿ ಪುಳಕಂಗಳು ಅಂಕುರಿಸಿ ಒಂದಾನೊಂದು ನೆಲ್ಲಗೆಯನು ಹೊಯಿದು ಉದಕವನು ಬಿಟ್ಟಲ್ಲಿ ಎನ್ನ ಬಿಡು ತನ್ನ ಬಿಡು ಎಂದು ಹೇಗೆ ಮೊಳೆ ದೋರುತ್ತಿಹವು, ಹಾಗೆ ಈ ಪಂಚಾಕ್ಷರೀ ಮಂತ್ರವನು ಸ್ಮರಿಸುವಲ್ಲಿ ಅಂಗದ ಮೂರುವರೆ ಕೋಟಿ ರೋಮಂಗಳು ನಿಮಿರ್ದು ಅಂಚಿತ ವಾಗಿ ಹರುಷದಿಂ ಸಂತೋಷದಿಂದೆ ನೆನೆದು ಸ್ಮರಿಸಿ ನೆನೆವರಿಗೆ ಒಂದಾ ನೊಂದು ಬಸವ ಮೆಲಿಕಿರಿದೋಪಾದಿಯಲ್ಲಿ ವಾಚಕ ಮಾನಸ ಕಾಯಕ ದಲ್ಲಿ ಸ್ಮರಿಸುವಂತವರುಗಳಿಗೆ ಗಿರಿಜಾವರನ ಅಗಜಾವಲ್ಲಭನ ಪಾರ್ವತೀ ರಮಣನಾದ ಪರಮೇಶ್ವರನ ಕರೆದು ಆಹ್ವಾನಿಸಿ ತೋರುವುದು ನಿದರ್ಶ ನವ ಮಾಡುವುದು ಕಾಣಿಸುವುದು. ಶ್ರೀ ಪಂಚಾಕ್ಷರಿ ಐಶ್ವರ್ಯೋಪ ಲಕ್ಷಿತವಾದ 'ನಮಃ ಶಿವಾಯ' ಎಂಬ ಐದು ಅಕ್ಷರವು.

**ಮೂಲ**:— ಓದುವಾದಿನಲಿ ಸುರರಾದರಿಪ ಧರ್ಮದಲಿ। ಸಾಧಿ ಸುವ ತಪಸಿದ್ಧಿ ವಿದ್ಯೆಗಳಲಿ। ವೇದದಲಿ ಹಿರಿದು ಹೆಸರಾದ ಹೆಪ್ಪುಳ್ಳ ಶಿವನಾದಿ ನಾಮವ ನೋಡು ಪಂಚಾಕ್ಷರಿ॥

**ಟೀಕು**:— ಓದುವಾದಿನಲಿ ಓದು ಪಠಣೆಯೆಂದು ಅಕ್ಷರಾಭ್ಯಾ ಸವ ಕಲಿವಲ್ಲಿ ಈ ಪಂಚಾಕ್ಷರಿ ಮಂತ್ರವೇ ಅಧಿಕವು ಸುರರು ದೇವತೆ ಗಳು ಆದರಿಪ ಆಚರಿಸುವ ಧರ್ಮದಲ್ಲಿ ಅವರು ಮಾಡುವ ಯಜ್ಞ ಕರ್ಮದಲ್ಲಿ 'ಓಂ ಭರ್ಗೋ ದೇವಸ್ಯ ಧೀಮಹಿ' ಎಂಬಲ್ಲಿ ಈ ಪಂಚಾಕ್ಷರೀ ಮಂತ್ರವೇ ಅಧಿಕವು. ಸಾಧಿಸುವ ಅಭ್ಯಾಸಿಸುವ ತಪ ತನುದಂಡನೆಯು ಮಾಡುವಲ್ಲಿ ಸಿದ್ಧಿ ಅಂಜನಾ ಸಿದ್ಧಿ ಮೂಲಿಕಾ ಸಿದ್ಧಿ ಘುಟಿಕಾ ಸಿದ್ಧಿ ಕಾಯ ಸಿದ್ಧಿ ಜೀವ ಸಿದ್ಧಿ ದೂರ ದೃಷ್ಟಿ ದೂರ ಶ್ರವಣ ಇಂಥ ಅಷ್ಟ



ಮಹಾಸಿದ್ಧಿಗಳನು ಕಲಿವಲ್ಲಿ ಈ ಪಂಚಾಕ್ಷರೀ ಮಂತ್ರವೇ ಮುಖ್ಯವು. ವಿದ್ಯೆಗಳಲ್ಲಿ ಚೌಷಷ್ಟಿ ಕಳಾವಿದ್ಯೆಯಲ್ಲಿ ವೇದದಲ್ಲಿ ನಾಲ್ಕು ವೇದಂಗ ಳಲ್ಲಿ ಹಿರಿದು ಹೆಸರಾದ ಮಿಗೆ ಪೆಸರ್ವಡೆದ ಹೆಪ್ಪುಳ್ಳ ಹೆಚ್ಚುಗಾರಿಕೆ ಯನುಳ್ಳ ಶಿವನಾದಿ ನಾಮವ ನೋಡು ಪಂಚಾಕ್ಷರೀ ಆ ಪರಮೇಶ್ವ ರನಿಗೆ 'ಊರ್ಧ್ವರೇತೋ ವಿರೂಪಾಕ್ಷ ವಿಶ್ವರೂಪಾಯ ವೈ ನಮಃ' ಎಂದು ಅನೇಕ ನಾಮಂಗಳುಂಟು. ಆ ನಾಮಂಗಳೊಳಗೆ ಮುಖ್ಯವಾದ ಪಂಚಾ ಕ್ಷರೀ ಮಂತ್ರವೆಂದೇ ನಿರೀಕ್ಷಿಸು.

**ಮೂಲ**:— ದಣಿವರಿಯದೆ ದುಕ್ಕಿ ಸಂದಣಿಸೆ ಕರಣಂಗಳುರ। ವಣಿಸಿ ನೆನೆವರಿಗೆ ಸುರಧೇನುವಾಗಿ ಮಣಿಮಕುಟರಾಶಿಗಳ ಅಣಿಮಾದಿ ಗುಣಗಳನು। ತ್ರಿಣಯನನು ಕರೆವುದೀ ಪಂಚಾಕ್ಷರೀ ॥

**ಟೀಕು**:— ದಣಿವರಿಯದೆ ಆ ಪಂಚಾಕ್ಷರಿ ಮಂತ್ರವನು ಸ್ಮರಿ ಸುವಲ್ಲಿ ತನುವಲಿಸಿತ್ತು ಮನವಲಿಸಿತ್ತು ಆತ್ಮವಲಿಸಿತ್ತು ಎನ್ನದೆ ದುಃಖಿ ಆ ಪಂಚಾಕ್ಷರೀ ಮಂತ್ರವನು ಉಚ್ಚರಿಸುವಲ್ಲಿ ಅಂಗದ ರೋಮಂಗಳು ಹೆಚ್ಚಿ ಸಂದಣಿಸಿ ಇಟ್ಟಣಿಸಿ ಕರಣಂಗಳುರವಣಿಸಿ ಮನ ಮೊದಲಾದ ೬೬ ಕೋಟಿ ಕರಣಂಗಳು ಪಂಚಾಕ್ಷರೀ ಮಂತ್ರವನು ಉಚ್ಚರಿಸುವಲ್ಲಿ ಎನ್ನ ಬಿಡು, ತನ್ನ ಬಿಡು ಎಂದು ತವಕಿಸಿ ನೆನೆವರಿಗೆ ಪಂಚಾಕ್ಷರೀ ಮಂತ್ರವ ಸ್ಮರಿಸುವಂತವರುಗಳಿಗೆ ಸುರಧೇನುವಾಗಿ ಕಾಮಧೇನುವಾಗಿ, ಅಲ್ಲಿ ತ್ರಿಮೂಲ ದೇವರ ಕಥೆ. ಮಣಿಮಕುಟರಾಶಿಗಳು ರತ್ನ ಕಿರೀಟ ಪುಂಜಂ ಗಳು ಅಣಿಮಾದಿ ಗುಣಗಳನು ಗ್ರಂಥ—'ಅಣಿಮಾ ಮಹಿಮಾಶ್ಚೈವ ಗರಿಮಾ ಲಘಿಮಾ ಸ್ಥಿತಾ ಪ್ರಾಪ್ತಿ ಪ್ರಕಾಮ್ಯಮೀಶತ್ವಂ ವಶತ್ವಂ ಚಾಷ್ಟ ಭೂತಯಾ' ಎಂದು ಅಷ್ಟಮಹಾಸಿದ್ಧಿಯು ದಶವಿಧ ಕಲ್ಯಾಣ ಗುಣಂಗ ಳನು ಪಂಚ ವಿಧ ಗುಣಂಗಳನು ಅನಂತ ಗುಣಂಗಳನು ತ್ರಿಣಯನನು ಕರೆವುದೀ ಪಂಚಾಕ್ಷರೀ ತ್ರಿಲೋಚನವನುಳ್ಳ ಪರಮೇಶ್ವರನ ಕರೆವುದು ಆಹ್ವಾನಿಸುವುದು ನಮಃ ಶಿವಾಯ ಎಂಬ ಮಂತ್ರವು.

**ಮೂಲ**:— ಅರಿ ಮಿತ್ರ ತಪ ಪುನಶ್ಚರಣೆ ಸಿದ್ಧಾ ಸಿದ್ಧಿ। ಕರದ ಹಂಗೇತಕವರಿವರೆನ್ನದೆ ॥ ಸ್ಮರಣೆ ಮಾತ್ರದಲ್ಲಿ ಉಚ್ಚರಣೆ ಮಾತ್ರದಲಿ ಶಂ। ಕರನ ತೋರುವುದು ಶ್ರೀ ಪಂಚಾಕ್ಷರೀ ॥

**ಟೀಕು:**— ಶತ್ರುಗಳು ಮಿತ್ರ ಈ ಪಂಚಾಕ್ಷರಿ ಮಂತ್ರವನು ಸ್ಮರಿಸಿದಲ್ಲಿ ಅವರೆಲ್ಲರು ಸಖರಾಗುವರು. ತಪ ಉರುತರದ ಘೋರಾರಣ್ಯಕ್ಕೆ ಹೋಗಿ ಉಕ್ಕಿನ ಹಾರ ಜಲಾಹಾರ ಫಲಾಹಾರ ಪರ್ಣಾಹಾರ ಪವನಾಹಾರಂಗಳನು ತೆಗೆದುಕೊಂಡು ಏಕವಾದ ಸ್ಥಿತಿ ಮೊದಲಾದವರಿಂದೆ ಉಗ್ರತನು ದಂಡನೆಯು ಮಾಡುವಲ್ಲಿ ಈ ಪಂಚಾಕ್ಷರೀ ಮಂತ್ರವೇ ಮುಖ್ಯವು. ಪುನಶ್ಚರಣೆ ಸಿದ್ಧಬಸವ ಮೇಲು ಕಿರಿದೋಪಾದಿಯಲ್ಲಿ ಮರಳಿ ಮರಳಿ ಈ ಪಂಚಾಕ್ಷರಿ ಮಂತ್ರವನು ಸ್ಮರಿಸಿದಲ್ಲಿ ಏನಾರು ಸಾಧ್ಯತ್ವವಾಗುವುದೆಂಬುದು. ಅಂತು ಅಂತುಮಲ್ಲದೆ ನವನಾಥ ಸಿದ್ಧರುಗಳು ಅಂಜನಾ ಸಿದ್ಧಿ ಮೂಲಿಕಾ ಸಿದ್ಧಿ ಘುಟಿಕಾ ಸಿದ್ಧಿಯನು ಕಲಿವಲ್ಲಿ ಪಂಚಾಕ್ಷರೀ ಮಂತ್ರವೇ ಅಧಿಕವು. ಆಸಿದ್ಧಿ ಆ ಪಂಚಾಕ್ಷರಿ ಮಂತ್ರವನು ಸ್ಮರಿಸದಿದ್ದಲ್ಲಿ ಸಿದ್ಧಿಸದು. ಕರದ ಅವರು ಮಾಡುವ ಕರಣ ಹೀಗೇತಕ್ಕೆ ಅವರು ಪಂಚಾಕ್ಷರೀ ಮಂತ್ರವನು ಕಲಿತು ಅಷ್ಟ ಮಹಾ ಸಿದ್ಧಿಗಳನು ಪಡೆದುಕೊಂಡರು ಎಂಬ ವಾಂಛೆಯಾತಕ್ಕೆ? ಅವರಿವರೆನ್ನದೆ ಒಳ್ಳೆಯವರು ಹೊಲ್ಲವರೆನ್ನದೆ ಶತ್ರು ಮಿತ್ರರುಗಳೆನ್ನದೆ ಅಗ್ರಜ ಅಂತ್ಯಜರೆನ್ನದೆ ಸ್ಮರಣೆ ಮಾತ್ರದಲ್ಲಿ ಮಾನಸದಲ್ಲಿ ಸ್ಮರಿಸಿದಷ್ಟರಲ್ಲಿ ಉಚ್ಚರಣೆ ಮಾತ್ರದಲ್ಲಿ ವಾಚಕದಲ್ಲಿ ಉಚ್ಚರಿಸಿದಷ್ಟರಲ್ಲಿ ಶಂಕರನ ತೋರುವುದು. ಸುಖಂ ಕರೋತಿ ತೇ ಶಂಕರಾ ಎಂಬ ಪರಮೇಶ್ವರನ ಕಾಣಿಸುವುದು ಶ್ರೀ ಪಂಚಾಕ್ಷರೀ ಐಶ್ವರ್ಯೋಪ ಲಕ್ಷಿತವಾದ ನಮಃ ಶಿವಾಯ ಎಂಬ ಅಕ್ಷರವು. ಬಾಣ ಮಯೂರ ಸಾನಂದ ಗಣೇಶ್ವರನ ಕಥೆ ಹೇಳುವುದು.

**ಮೂಲ:**— ಪ್ರಣವ ರಾಜನ ಹೊಳೆವ ಮಣಿಮಕುಟದಲ್ಲಿಕೀ। ರಣದ ರತುನದ ತೊಡಿಗೆಯಾಭರಣದಾ॥ ತ್ರಿಣಯ ನೊಸೆದಿಪ್ಪ ಗುಣಮಣಿಯ ಚಿಂತಾ ಮಣಿಯ ಕಣಿಯ ಕರಡಿಗೆ ನೋಡು ಪಂಚಾಕ್ಷರಿ॥

**ಟೀಕು:**— ಪ್ರಣಮರಾಜನ ಸಪ್ತಕೋಟಿ ಮಹಾಮಂತ್ರ ಕೋಟಾನುಕೋಟಿಮಂತ್ರಂಗಳಿಗೆ ಆದಿ ಕರ್ತೃವಾದ ಪಂಚಾಕ್ಷರಿ ಮಂತ್ರದಿಂದೆ ಬೆಳಗುತ್ತಿರ್ದಂಥ ಆ ಮಹೇಶ್ವರ ಮೂರ್ತಿಯು ಹೊಳೆವ ಪ್ರಭಾವಿಸುವ ಮಣಿಮಕುಟದಲ್ಲಿ ರತ್ನ ಕಿರೀಟದಲ್ಲಿ ಕೆವಣದ ಕೆತ್ತಿಸಿರ್ದ ರತ್ನದೊಡಿಗೆಯ ರನ್ನದೊಡಿಗೆಯ ಆಭರಣದ ಅಲಂಕಾರದ ತ್ರಿಣಯನೊಸೆದಿಪ್ಪ ಮೂರು ಲೋಚನವನುಳ್ಳ ಪರಮೇಶ್ವರನ ಪ್ರೀತಿಯಿಂದೆ ಧರಿಸಿಪ್ಪ ಅನಂತ ಕಲ್ಯಾಣ ಗುಣಂಗಳನು ಮಣಿಯ ಪ್ರಕಾಶವನು ಚಿಂತಾಮಣಿಯ

# ನವಕರ್ನಾಟಕ.

ಸಂಪಾದಕರು :—

**ರಾ|| ಬ|| ಪಿ. ಜಿ. ಹಳಕಟ್ಟಿ**

ಬಿ. ಎ. ಎಲ್‌ಎಲ್. ಬಿ

ರಾಜಕಾರಣದ ನಿಜವಾದ ಜ್ಞಾನಮಾಡಿಕೊಡುವದೇ
ಈ ಪತ್ರಿಕೆಯ ಗುರಿ.

---

ಸಾಮಾಜಿಕ, ಆರ್ಥಿಕ ವಿಷಯಗಳನ್ನು ವಿವೇಚನಾತ್ಮಕ ರೀತಿಯಿಂದ
ಪ್ರತಿಪಾದಿಸುವದು ಈ ಪತ್ರಿಕೆಯ ಧ್ಯೇಯ.

---

ಮಹಾಯುದ್ಧದ ವಿಮರ್ಶೆ, ವ್ಯಾಪಾರದ ತೇಜಿಮಂದಿ ರೈತ ಹಾಗು ಕೂಲಿ
ಕಾರ ಜನರ ಸಮಸ್ಯೆ, ಮಧ್ಯ ತರಗತಿಯ ಜನರ ಪೀಕಲಾಟ
ಮೊದಲಾದ ವಿಷಯಗಳನ್ನು ಜನರ ಮುಂದಿಡುವ
ಪತ್ರಿಕೆ ಇದು.

---

ಇಂದೇ ಚಂದಾದಾರರಾಗಿರಿ.

**ವಾರ್ಷಿಕ ಚಂದಾ ೩—೧೦—೦**

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ಇವರು ವಿಜಾಪುರದಲ್ಲಿ ತಮ್ಮ **ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ** ಮುದ್ರಿಸಿ ತಮ್ಮ ೧೬೨ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

R. N. B. 2554

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬] ಅಕ್ಟೋಬರ ೧೯೪೧. [ಸಂಚಿಕೆ ೧

## ವಿಷಯಾನುಕ್ರಮಣಿಕೆ.

R. N. B. 2554

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬]　　　ಮೇ　೧೯೪೨.　　　[ಸಂಚಿಕೆ ೮

## ವಿಷಯಾನುಕ್ರಮಣಿಕೆ.

ಶಿರಿಯಾಳಸೆಟ್ಟಿಯು ಪದವು ಮರಾಠಿಯಲ್ಲಿದ್ದು ಅದರ ಆದಿ ಭಾಗದಲ್ಲಿ "ಶಿರಿಯಾಳಶೇಟ ಲಿಂಗಾಯತ ವಾಣ್ಯಾ" ಎಂದಿರುತ್ತದೆ. ಅವನ ಪದಗಳನ್ನು ಮರಾಠೀ ದೇಶದಲ್ಲಿಯ ವೀರಶೈವರು ಸಂಗ್ರಹಿಸಲು ಪ್ರಯತ್ನಿಸಬೇಕೆಂದು ನಮ್ಮ ಸೂಚನೆ ಇದೆ.

ಶಿರಿಯಾಳಸೆಟ್ಟಿಯು ಮೂರ್ತಿಯು ಮೇಲಿರುವ ಲಿಂಗದ ಕರಡಿಗೆ ಮತ್ತು ಅವನ ಪದ್ಯದ ಆದಿಭಾಗ ಇವುಗಳ ಮೇಲಿಂದ ಅವನು ವೀರಶೈವ ಬಣಜಿಗನೆಂಬುದು ಗೊತ್ತಾಗುತ್ತದೆ.

---

## ಪಾದೋದಕ.

ಲೇ.— ಶ್ರೀ ಎಸ್. ಎಸ್. ಮಹಾಂತಣ್ಣವರ ರಿಟಾಯರ್ಡ ಸುಪರವಾಯಿಜರ
ವಿಜಾಪುರ ಜಿಲ್ಹಾ ಸ್ಕೂಲಬೋರ್ಡ-ಮು. ಹುನ್ನೂರ ಸಂ. ಜಮಖಂಡಿ.

ಇದೇ ಮೇ ಜೂನ ತಿಂಗಳ ಶಿವಾನುಭವದ ಸಂಚಿಕೆಯಲ್ಲಿ ಸವದತ್ತಿಯ ಶ್ರೀ ಚರಮೂರ್ತಿಗಳು ಕಾಶಿಯಲ್ಲಿ ಕಲಿತು ಶಬ್ದಜಾಲವನ್ನರಿತು ತತ್ವಪದವೆಂಬ ಪುಸ್ತಕವನ್ನು ರಚಿಸಿ ಅದರಲ್ಲಿ ಒಂದು ಪದದೊಳಗೆ ಅಷ್ಟಾವರಣ ಕ್ರಿಯೆಯಲ್ಲಿ ಗದ್ದಿಗೆಯೊಳಿರ್ದ ಜಂಗಮನು ತನ್ನ ಇಷ್ಟಲಿಂಗಕ್ಕೆ ಕ್ರಿಯಾ ಪಾದೋದಕದಿಂದ ಎರೆಯಬಾರದೆಂಗೂ ಎರೆದರೆ ಪಾಪಗಳು ಘಟಿಸುವವೆಂದೂ ಜಂಗಮ ಮೂರ್ತಿಗಳಿಗೂ ವೀರಮಾಹೇಶ್ವರರಿಗೂ ಗೊತ್ತಾಗಬೇಕೆಂದು ಪಾದೋದಕದ ಅಪಪ್ರಚಾರವನ್ನು ಕೈಕೊಂಡಿರುವರು. ಈ ಬಗ್ಗೆ ಶಿವಾನುಭವದ ಸಂಚಿಕೆಗಳಲ್ಲಿ ನಿಗಮಾಗಮ ಆಧಾರಗಳಿಂದಲೂ ಬಸವಾದಿ ಪ್ರಮಥರ ವಚನಗಳಿಂದಲೂ ಕೆಲ ಮಹನೀಯರು ಈ ಅಪಪ್ರಚಾರವನ್ನು ಖಂಡಿಸಿರುವರು. ಇದೇ ಅಪಪ್ರಚಾರದ ಖಂಡನೆಯನ್ನು ಲೋಕಾಚಾರ ಶ್ರುತ್ಯಾಚಾರ ಪ್ರಮಥಾಚಾರಗಳಿಂದ ಮಂಡಿಸಲು ಯಥಾಮತಿ ಪ್ರಯತ್ನಿಸುವೆ.

ಜಂಗಮನು ಹೊರಪಡಸಾಲೆಯಲ್ಲಿಟ್ಟ ಕಲ್ಲುಡೋಣಿಯಲ್ಲಿ ಕಾಲಿದ್ದಿದ ನೀರಿನಿಂದಾಗಲಿ ಮೇಲ್ಪಚ್ಚುಲದಲ್ಲಿ ಕಾಲ್ತೊಳೆದ ನೀರಿನಿಂದಾಗಲಿ

ಬಚ್ಚಲಲ್ಲಿ ಸ್ನಾನವಮಾಡಿ ಬಚ್ಚಲ ಮನೆಯಿಂದ ಶುದ್ಧ ಅವುಗೆಗಳನ್ನು ಮೆಟ್ಟಿ ಶಿವಪೂಜಾ ಗೃಹಕ್ಕೆ ಬಿಜಯಂಗೈದು ಅಲ್ಲಿ ಪ್ರಥಮದಲ್ಲಿ ನಡೆಯುವ ಧೂಳೋದಕದಿಂದಾಗಲಿ ತನ್ನ ಇಷ್ಟಲಿಂಗಕ್ಕೆ ಎರೆಯುವದಿಲ್ಲ. ಅನಾಚಾರ ಭಕ್ತನಿಂದ ಕ್ರಿಯೆಗೈಸಿ ಆದ ಕ್ರಿಯಾ ಪಾದೋದಕದಿಂದಲೂ ತನ್ನ ಇಷ್ಟ ಲಿಂಗಕ್ಕೆ ಎರೆಯಲಾರನು. ಲಾಂಛನಕ್ಕೆ ನಮಸ್ಕಾರ, ಆಪ್ಯಾಯನಕ್ಕೆ ಅನ್ನ, ಆಚಾರಕ್ಕೆ ಸಮರಸವೆಂಬ ಉಕ್ತಿಗನುಸಾರವಾಗಿ ಸತ್ಕಾಯಕ ಸದ್ಭಕ್ತಿ ಸದಾಚಾರವುಳ್ಳ ಭಕ್ತ, ಸದಾಚಾರ ಸತ್ಕ್ರಿಯೆ ಸುಜ್ಞಾನ ಸುಶೀಲವುಳ್ಳ ಜಂಗಮ, ಇವರೀರ್ವರ ಸಂದೊಂದಾದ ಭಕ್ತಜಂಗಮರಲ್ಲಿಯೇ ಸತ್ಕ್ರಿಯೆ ಸುಜ್ಞಾನಾದಿಗಳೂ ನಿಜಾಷ್ಟಾವರಣಗಳೂ ಘಟಿಸುತ್ತವೆಂಬದನ್ನು ಯಾರೂ ಮರೆಯಲಾಗದು. ಆದರೆ ಇವರಿರ್ವರಿಂದುಂಟಾದ ಪಾದೋದಕ (ತೀರ್ಥ) ವನ್ನು ಎಲ್ಲ ಲಿಂಗಾಂಗಿಗಳೂ ಪಡೆದು ಪುನೀತರಾಗಿ ಮೋಕ್ಷ ಮಾರ್ಗದ ಒಂದೊಂದು ಪಾವಟಿಗೆಯನ್ನು ದಾಟಲು ಯಾವ ಅಭ್ಯಂತರವೂ ಇಲ್ಲ.

'ಗತಿಪಥ ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ. ಜೀವನೋಪಾಯಕ್ಕೆ ಬೇಡುವಾತ ಜಂಗಮನಲ್ಲ. ಗತಿಪಥ ಮುಕ್ತಿ ಸೂತಕ ವಿರಹಿತ ಭಕ್ತ. ಹಮ್ಮು ಬಿಮ್ಮು ಗಮನನಾಸ್ತಿಯಾದಾತನೇ ಜಂಗಮ. ಮಾಡುವಡೆ ಭಕ್ತ ಮಾಟದೊಳಗಿಲ್ಲದಿರಬೇಕು. ಬೇಡುವಡೆ ಜಂಗಮ ಕೊಂಬುವದರೊಳಗಿಲ್ಲದಿರಬೇಕು. ಈ ಉಭಯ ಸ್ಥಳಕುಳ ಸಂದೊಂದಾಗಿ ನಿಂದ ನಿಲವು ಕೂಡಲಸಂಗಮನಲ್ಲಿ ಭಕ್ತಜಂಗಮವೆಂಬೆ.'

'ತನುವಿಲ್ಲದ ಭಕ್ತ, ಮನವಿಲ್ಲದ ಭಕ್ತ, ಧನವಿಲ್ಲದ ಭಕ್ತ, ಪಂಚೇಂದ್ರಿಯ ಸುಖವಿಲ್ಲದ ಭಕ್ತ, ಕಾಯವಿಲ್ಲದ ಭಕ್ತ, ಕರ್ಮವಿಲ್ಲದ ಭಕ್ತ, ಕಲ್ಪಿತವಿಲ್ಲದ ಭಕ್ತ, ಅಶನವನರಿಯನು ಭಕ್ತ, ವ್ಯಸನಕ್ಕೆಳಸನು ಭಕ್ತ, ಹುಸಿಯ ನುಡಿಯನು ಭಕ್ತ, ಅರಿಷಡ್ವರ್ಗವನರಿಯನು ಭಕ್ತ, ಮದಂಗಳೆಂಟನು ಅಂಟನು ಭಕ್ತ, ಅಹಂಕಾರ ರಹಿತನು ಭಕ್ತ, ಗುರುಲಿಂಗಕ್ಕಾಧಾರ ಭಕ್ತ, ಲಿಂಗಕ್ಕಾಧಾರಭಕ್ತ, ಜಂಗಮಕ್ಕಾಧಾರ ಭಕ್ತ, ಪ್ರಸಾದಕ್ಕಾಧಾರ ಭಕ್ತ, ಕೂಡಲ ಚನ್ನಸಂಗಮನಲ್ಲಿ ಎನ್ನ ಮಾತಾಪಿತನು ಸದ್ಭಕ್ತನು.'

'ಹಸಿವಿಲ್ಲದೆ ಉಣಬಲ್ಲಡೆ, ಉಪಾಧಿ ಇಲ್ಲದೆ ಬೇಡಬಲ್ಲಡೆ, ಅದು ಮರ್ಮ, ಅದು ಸಂಬಂಧ. ಗಮನವಿಲ್ಲದೆ ಸುಳಿವಡೆ ನಿರ್ಗಮನಿಯಾಗಿ

ನಿಲಬಲ್ಲಡೆ ಅದು ವರ್ಮ, ಅದು ಸಂಬಂಧ, ಅವರ ನಡೆ ಪಾವನ, ಅವರ ನುಡಿ ತತ್ವ, ಅವರ (ಚರಜಂಗಮ) ಜಗದಾರಾಧ್ಯರೆಂಬೆ ಗುಹೇಶ್ವರಾ.'

ಇಂತಪ್ಪ ಸದಾಚಾರ ಸಂಪನ್ನರಾದ ಗುರು (ಭಕ್ತ) ಲಿಂಗ ಜಂಗಮರಲ್ಲಿ ಸತ್ಕ್ರಿಯೆ ನಡೆದು ಉಂಟಾದ ಪಾದೋದಕವನ್ನು ಜಂಗಮನು ತನ್ನ ಇಷ್ಟಲಿಂಗಕ್ಕೆ ದಶವಿಧ ಪಾದೋದಕಗಳಿಂದ ದಶೇಂದ್ರಿಯಗಳನ್ನೂ ಕರಣಾದಿಗಳನ್ನೂ ಲಿಂಗ ಸ್ವರೂಪವಾಗಿ ಮಾಡಿ ತಾನು ಲಿಂಗಸ್ವರೂಪವೇ ಆಗಿರುವನೆಂಬದನ್ನು ವಾಚಕರು ಅರಿಯದೆ ಇರಲಾರರೆಂದು ನನ್ನ ಮನವರಿಕೆ. ಅಷ್ಟಾವರಣ ಆಚರಣೆಯೂ ಕ್ರಿಯೆಯೂ ಜ್ಞಾನವೂ ಮುಕ್ತಿಪ್ರದಾಯಕವೆಂದು ಅರಿಯದ ಶಿವಾನುಭವಿಗಳಿಲ್ಲ.

ಗುರುಭಕ್ತಯ್ಯನು ಗುರುವಿನನ್ನೂ ನೀಲಲೋಚನೆ ತಾಯಿಯು ಲಿಂಗವನ್ನೂ ದಂಡನಾಯಕ ಶ್ರೀ ಬಸವನು ಜಂಗಮವನ್ನೂ ಕೇಶಿರಾಜಯ್ಯನು ಪಾದೋದಕವನ್ನೂ ಬಿಬ್ಬಿಬಾಚಯ್ಯನು ಪ್ರಸಾದವನ್ನೂ ಕುಂಬಾರ ಗುಂಡಯ್ಯನು ಭಸ್ಮವನ್ನೂ ಚಾರಮರಾಜನು ಶ್ರೀ ರುದ್ರಾಕ್ಷಿಯನ್ನೂ ಮಂತ್ರಜಾತ ಒಡೆಯರು ಮಂತ್ರವನ್ನೂ ನಂಬಿ ಇಷ್ಟಲಿಂಗದೊಳಗಾದರು. ಈ ಅಷ್ಟಾವರಣಗಳಲ್ಲಿ ಒಂದೊಂದು ನಂಬಿ ನಡೆದವರು ಲಿಂಗಗೊಳಗಾದ ಬಳಿಕ ಅಷ್ಟಾವರಣಗಳನ್ನೆಲ್ಲ ನಂಬಿ ನಡೆದವರಿಗೆ ಮೋಕ್ಷವಾಗುವದೆಂಬ ಸಂದೇಹವಿಲ್ಲ. ಆದಿ ಪುರಾತನರ ನೂತನ ಪುರಾತನರ ಮಾತು ಒತ್ತಟ್ಟಿಗಿರಲಿ. ಈಗೀಗ ನೋಡಿದ ಸರ್ಪಭೂಷಣ ಶಿವಯೋಗಿಗಳ ಯೋಗ್ಯತೆಯನ್ನೂ ಶ್ರೀಘನಮಠದಪ್ಪನವರು ಮೊದಲು ಪ್ರಾಪಂಚಿಕರಿದ್ದರೂ ಅವರ ವೈರಾಗ್ಯ ಸುಶೀಲ ಸುಜ್ಞಾನಗಳನ್ನೂ ಶ್ರೀ ವೀರಪ್ಪನಾಲತವಾಡ ಇವರ ಶರಣ ಮಾರ್ಗಗಳನ್ನೂ ಶ್ರೀ ಮುರುಘಾರಾಜೇಂದ್ರ ಅಥಣಿಮಠ ಇವರ ಶಿವಯೋಗಾಚರಣೆಯನ್ನೂ ಶ್ರೀ ಮನ್ನಿರಂಜನ ಇಲಕಲ್ಲ ಮಹಾಂತ ಶಿವಯೋಗಿಗಳ ವಾಕ್‌ಪರುಷ ನಯನಪರುಷ ಹಸ್ತಪರುಷಗಳನ್ನೂ ಶ್ರೀ ಹಾನಗಲ್ಲ ಕುಮಾರ ಸ್ವಾಮಿಗಳ ಶ್ರೀ ಮೃತ್ಯುಂಜಯ ಸ್ವಾಮಿ ಧಾರವಾಡ ಇವರ ಭೃತ್ಯಾಚಾರವನ್ನೂ ಶ್ರೀ ವಾರದ ಮಲ್ಲಪ್ಪನವರ ಶ್ರೀ ಸಕ್ಕರೆ ಕರಡೆಪ್ಪನವರ ಶರಣಮಾರ್ಗಗಳನ್ನೂ ಪರಿಶೀಲಿಸಿದರೆ ಅಷ್ಟಾವರಣದ ಮಹಿಮೆಯೂ ಪವಿತ್ರತೆಯೂ ಎಷ್ಟಿರುವವೆಂಬದು ಪ್ರತಿಯೊಬ್ಬ ವೀರಶೈವನಿಗೆ ಹೊಳೆಯದೆ ಇರದು.

ಈ ಶರೀರವು ಅಷ್ಟ ಆವರಣಗಳಿಂದ ಕೂಡಿದ್ದರಿಂದ ಅಷ್ಟಾವರಣಾಚಾರವು ವೀರಶೈವನಿಗೆ ಪ್ರಾಮುಖ್ಯವಾದದ್ದು. ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಏಕಲಿಂಗನೈಷ್ಠಿಕನಾಗಿರುವದೇ ವೀರಶೈವನ ಧರ್ಮಾಚಾರವು. ಅಷ್ಟಾವರಣಗಳಲ್ಲಿ ಐದುವರ್ಗಗಳನ್ನು ಮಾಡಬಹುದು.

| ಕ್ರಿಯಾಷ್ಟಾವರಣ | ಬಹಿರಂಗಾಷ್ಟಾವರಣ | ಅಂತರಂಗಾಷ್ಟಾವರಣ |
|---|---|---|
| ೧ ಗುರು | ೧ ಕ್ರಿಯೆ | ೧ ಅರುಹು |
| ೨ ಲಿಂಗ | ೨ ಕರ | ೨ ಪ್ರಾಣ |
| ೩ ಜಂಗಮ | ೩ ಆಚರಣೆ | ೩ ಜ್ಞಾನ |
| ೪ ಪಾದೋದಕ | ೪ ಪಾದ | ೪ ಜಿಹ್ವೆ |
| ೫ ಪ್ರಸಾದ | ೫ ಜಿಹ್ವೆ | ೫ ಘ್ರಾಣ |
| ೬ ವಿಭೂತಿ | ೬ ಲಲಾಟ | ೬ ತ್ವಕ್ಕು |
| ೭ ರುದ್ರಾಕ್ಷಿ | ೭ ಕೊರಳು | ೭ ನೇತ್ರ |
| ೮ ಮಂತ್ರ | ೮ ಐಕ್ಯ | ೮ ಕರ್ಣ |

| ಸುಜ್ಞಾನಾಷ್ಟಾವರಣ | ಐಕ್ಯಾಷ್ಟಾವರಣ |
|---|---|
| ೧ ತನು | ೧ ಸತ್ |
| ೨ ಮನ | ೨ ಚಿತ್ |
| ೩ ಧನ | ೩ ಆನಂದ |
| ೪ ಜ್ಞಾನ | ೪ ನಿತ್ಯ |
| ೫ ಭಾವ | ೫ ಪರಿಪೂರ್ಣ |
| ೬ ಮೂಲ | ೬ ಚಿದ್ಭರಿತ |
| ೭ ಬುದ್ಧಿ | ೭ ಕರಣಾದಿಗಳು |
| ೮ ಅರುಹು | ೮ ತನ್ನಾಮವೇ |

ಕ್ರಿಯೆಯಲ್ಲಿ ಪಾದೋದಕವಾಗಿಯೂ ಬಹಿರಂಗದಲ್ಲಿ ಪಾದಸ್ಥಳವಾಗಿಯೂ ಅಂತರಂಗದಲ್ಲಿ ಜಿಹ್ವಾಸ್ಥಳವಾಗಿಯೂ ಸುಜ್ಞಾನದಲ್ಲಿ ಜ್ಞಾನವಾಗಿಯೂ ಐಕ್ಯದಲ್ಲಿ ನಿತ್ಯ ಸ್ವರೂಪವಾಗಿಯೂ ಇರುವದೆಂಬದು ಪ್ರಮಥಾಚಾರವುಳ್ಳ ಸದ್ಭಕ್ತರು ತಿಳಿಯದೆ ಇರಲಾರರು. ಇದೇ ಅನುಭವಕ್ಕನುಸಾರವಾಗಿ ರೂಢಿಯಲ್ಲಿ ಮಗನು ತಂದೆಗೆ ತೀರ್ಥರೂಪನೆಂದೂ

ಇನ್ನಿತರ ಸಂಬಂಧವುಳ್ಳ ಹಿರಿಯರಿಗೆ ತೀರ್ಥಸ್ವರೂಪರೆಂದೂ ಸೂಕ್ಷ್ಮಾನುಭವಿಗಳು ಭಾವಿಸಿದ್ದಾಗಿದೆ. ಅಂತೇ ಗುರುಪಾದೋದಕದಿಂದ ಪ್ರಾರಬ್ಧಕರ್ಮವೂ ಲಿಂಗೋದಕದಿಂದ ಸಂಚಿತ ಕರ್ಮವೂ ಪ್ರಸಾದೋದಕ (ಜಂಗಮ ಪಾದೋದಕ) ದಿಂದ ಆಗಾಮಿ ಕರ್ಮವೂ ನಾಶವಾಗದೆ ಇರವು. ಇದನ್ನರಿತ ಮಹನೀಯರು "ಗುರಿಯ ಕಟ್ಟಿದ ಕೋಲು ಗುರಿಯ ತಾಕಬಲ್ಲದೆ ಗುರುಲಿಂಗ ಜಂಗಮರ ಪಾದತೀರ್ಥ ಪ್ರಸಾದವನರಿಯದೆ ಪರಮನ ಕಂಡೆನೆಂಬೋ ದುರಾಚಾರಿಗಳ ಮುಖವ ನೋಡಲಾಗದೆಂದ ಕಲಿದೇವರದೇವ ॥೧॥" "ಬಿಂದು ಕಳೆಯೆಂಬ ಆನಂದವನವುಂಟು ಚಂದ್ರಧರನೆಂಬೋ ಕೊಳಲುಂಟು (ಚಂದ್ರಧರನೆಂಬ ಕೊಳಲುಂಟು) ತಿಳಿನೀರ ಬಲ್ಲಾತ ಮುಕ್ತ ಸರ್ವಜ್ಞ ॥೨॥" ಈ ಪ್ರಕಾರ ಹಾಡಿಕೊಂಡಿದ್ದಾರೆ.

ಅಂಗುಷ್ಠಾಗ್ರೇ ಅಷ್ಟ ಷಷ್ಠಿ ತೀರ್ಥಾನಿತ್ಯಂ ವಸಂತಿ ವೈ । ಸಪ್ತ ಸಾಗರ ಪಾದಾರ್ಥೇ ತದಾರ್ಥೇ ಕುಲಿ ಪರ್ವತಾಃ ॥

ಸಪ್ತಸಾಗರ ಪರ್ಯಂತಂ ತೀರ್ಥಸ್ನಾನ ಫಲಂ ಯಥಾ ಗುರೋರಂಘ್ರಿ ಜಲೇಬಿಂದು ಸಹಸ್ರಾಂಶೇನ ಪೂರಯೇತ್ ॥೨॥

ಪಾದೋದಕಂ ಪರಬ್ರಹ್ಮ ನಿರ್ಮಲಂ ಅಘನಾಶನಂ। ಅಜಡಂ ಜಡಮಿಚ್ಛಂತಿ ಸ ಪಾಪಿ ಬ್ರಹ್ಮಘಾತಕಃ ॥೩॥

ಭವಭೂಜಕುಠಾರಾಯ ರೋಗಪಂಕಸ್ಯ ಭಾನವೆ । ಅನ್ಯಾನಗಿರಿ ವಜ್ರಾಯ ಪಾದತೀರ್ಥಾಯ ತೇ ನಮಃ ॥೪॥

ಅಕಾಲಮೃತ್ಯು ಮರಣಂ ಸರ್ವವ್ಯಾಧಿ ವಿನಾಶನಂ। ಸರ್ವಪಾಪೋಪಶಮನಂ ಶಂಭು ಪಾದೋದಕಂ ಶುಭಂ ॥೫॥

ಈ ಪ್ರಕಾರವಾಗಿ ಶಿವಾಗಮಗಳೂ ಕೂಗುತ್ತವೆ.

ಕಟ್ಟಡವಿಯಲ್ಲಿ ಸಾಗುವಮಾಡಿದ ಭೂಭಾಗವು ಹೊಲವೇಕೆ? ಗುಡಿಗಳೊಳಗಿನ ಶಿಲೆಯು ದೇವರೇಕೆ? ಎಲ್ಲ ನದಿಗಳ ನೀರು ನೀರಾದರೆ ಗಂಗಾಜಲವು ತೀರ್ಥವೇಕೆ? ಎಲ್ಲ ಮನೆಗಳಿಂದ ಮಠಗಳು ಪವಿತ್ರವೇಕೆ? ಎಲ್ಲ ತರುಗಳೂ ತರುಗಳಾದರೆ ಕಲ್ಪತರುವು ಹೆಚ್ಚಿನದೇಕೆ? ಎಲ್ಲ ಪ್ರಾಣಿಗಳ ಮೂತ್ರವು ಮೂತ್ರವಾದರೆ ಗೋಮೂತ್ರವು ಪವಿತ್ರವೇಕೆ? ಎಲ್ಲ ಪ್ರಾಣಿಗಳ ಮಲವು ಮಲವಾದರೆ ಗೋಮಲವು ಶುದ್ಧವೇಕೆ?

ಎಲ್ಲ ಮನುಷ್ಯರು ಮನುಷ್ಯರಾದರೆ ಭುಜಬಲರು ರಾಜರೇಕೆ? ನರರೊಳು ಗುರುವು ಶ್ರೇಷ್ಠನೇಕೆ? ಎಲ್ಲ ಮನುಷ್ಯರು ನರರಾದರೆ ಬ್ರಾಹ್ಮಣರು ಭೂಸುರರೂ ಜಂಗಮರು ಭೂರುದ್ರರೇಕೆ? ಎಲ್ಲ ನರರ ಕಾಲುಗಳು ಕಾಲುಗಳೆಂದೆನಿಸಿದರೆ ವೀರಮಾಹೇಶ್ವರರ ಕಾಲುಗಳು ಪೂಜ್ಯಪಾದಗಳೇಕೆ? ಎಲ್ಲ ಕ್ಷೇತ್ರಗಳಲ್ಲಿಯು ತೀರ್ಥಕ್ಕಿಂತ ವೀರಮಾಹೇಶ್ವರರ ಪಾದಸ್ಪರ್ಶನದ ನೀರು ಕ್ರಿಯಾಭೇದದಿಂದ (ಗುರು ಲಿಂಗೋದಕಾದಿ) ಪಾದತೀರ್ಥವೇಕೆ? ನದೀ ಮೂಲವು ಋಷಿಮೂಲವೂ ಹ್ಯೇಯವೆಂದೆನಿಸಿದರೂ ಅವುಗಳ ಮಹಿಮೆಯಿಂದ ಪವಿತ್ರತೆಯು ಹೇಗೋ ಹಾಗೆ ಗುರು ಲಿಂಗ ಜಂಗಮಾದಿ ಅಷ್ಟಾವರಣ ಕ್ರಿಯೆಯಿಂದುದಿಸಿದ ಪಾದೋದಕವು ಇಷ್ಟಲಿಂಗಕ್ಕೆರೆಯಲ್ಪಡಬಾರದೆಂಬ ವಿಧಾನ ಮಾಡಿ ಹಾಡುವ ಅರೆಪಂಡಿತರಿಗೆ ಏನನ್ನಬೇಕೋ ತಿಳಿಯದಾಗಿದೆ.

ಮಹನೀಯರೇ, ಪಾದದ್ವಾರದಿಂದ ಬಂದ ಉದಕವು ಅಪವಿತ್ರವೆಂದು ಹೇಳಿದ ಬಳಿಕ ತಾಯಿಯ ಮೂತ್ರದ್ವಾರದಿಂದ ಬಂದ ಶಿಸುವನ್ನು ಎತ್ತಿ ಮುಂಡಾಡಿ ಮುದ್ದುಕೊಡುವದು ಕೇವಲ ಪಾಪವೆಂದೇ ಭಾವಿಸಬೇಕಾಯಿತು. ಲಿಂಗಕ್ಕೆ ಧರಿಸುವ ವಿಭೂತಿಯು ಪಾದೋದಕದಿಂದ ಶುದ್ಧವಾಗಿದೆಯಷ್ಟೇ? ವಿಭೂತಿಯನ್ನು ಲಿಂಗಕ್ಕೆ ಧರಿಸಬಾರದಾಯಿತು. ಭಾವಿ ಹಳ್ಳ ಹೊಳೆಗಳ ನೀರು ಕಪ್ಪೆ ಮೀನುಗಳ ಎಂಜಲೆಂದ ಬಳಿಕ ಅದನ್ನು ಶುದ್ಧೀಕರಿಸಿ ಲಿಂಗಕ್ಕೆ ಎರೆಯಬಾರದಾಯಿತು. ಎಲ್ಲ ದೇವಾಲಯಗಳ ದೇವರನ್ನು ನದಿಗಳ ನೀರಿನಿಂದ ಪೂಜಿಸುವರಷ್ಟೇ. ಆದರೆ ನದಿಯನ್ನೇ ಪೂಜಿಸುವಾಗ ನದಿಯ ನೀರಿನಿಂದಲೇ ಪೂಜಿಸಬೇಕಾಗುವದು. ಇದರಂತೆ ದೇವತಾದಿಗಳನ್ನು ಪತ್ರೆಯಿಂದ ಪೂಜಿಸುವರಷ್ಟೇ. ಆದರೆ ಪತ್ರೇ ಗಿಡವನ್ನೇ ಪೂಜಿಸುವಾಗ ಅದೇ ಪತ್ರೆಯಿಂದಲೇ ಪೂಜಿಸಬೇಕಾಗುವದು. ಗುರುವಿಗೆ ಮುಖವು ಮಂತ್ರವೂ ಜಂಗಮಕ್ಕೆ ಮುಖವು ಆಚಾರವೂ ಲಿಂಗಕ್ಕೆ ಮುಖವು ಜಂಗಮವೂ ಪಾದೋದಕಕ್ಕೆ ಮುಖವು ಭಕ್ತನೂ ಆದ ಬಳಿಕ ಅಂತಪ್ಪ ಭಕ್ತ ಜಂಗಮರ ಸತ್ಕ್ರಿಯೆಸುಜ್ಞಾನಗಳಿಂದುದಿಸಿದ ಗುರು ಪಾದೋದಕ ಲಿಂಗ ಪಾದೋದಕ ಜಂಗಮ ಪಾದೋದಕಗಳಿಂದ ಚಿದ್ಘನಸ್ವರೂಪವಾದ ಇಷ್ಟ ಪ್ರಾಣ ಭಾವಲಿಂಗಗಳಿಗೆ ಚಿದ್ಘನ ಸ್ವರೂಪವಾದ ಗುರುಪಾದೋದಕ ಲಿಂಗಪಾದೋದಕ ಜಂಗಮಪಾದೋದಕಗಳನ್ನು ಎರೆಯಬಾರದೆಂದು ತತ್ವ ಪದ

ಗಳನ್ನು ಮಾಡಿ ಹಾಡುವ ವೀರಶೈವ ತಾತ್ವಿಕ ಮಹಾಶಯರು ಯಾವ ಸ್ಥಳದವರೋ, ಯಾವ ಆಚಾರದವರೋ, ತಿಳಿಯದು. ಅಷ್ಟಾವರಣದ ಮಹಿಮೆಯನ್ನರಿಯದವರೇ ಹೀಗೆಂದಾರೆಯೇ ಹೊರತು ಅಷ್ಟಾವರಣ ವನ್ನರಿತ ಮಹಿಮರು ಯಾಕೆ ಅಂದಾರು ?

ಸದ್ಭಕ್ತರಿಗೇ ಅಷ್ಟಾವರಣ ಬೇಕೆಂದು ಹೇಳಿದರೆ ಮಾಹೇಶ್ವರರಿಗೆ ಬೇಡವೇ ? ಭಕ್ತನಿಗೆ ಮುಕ್ತಿ ಬೇಕಲ್ಲದೆ ಮಹೇಶ್ವರನಿಗೆ ಬೇಡವೇ ? ಪಂಚಾಚಾರಗಳು ಭಕ್ತನಿಗೆ ಬೇಕಲ್ಲದೆ ಮಹೇಶ್ವರನಿಗೆ ಬೇಡವೇ ? ಭೃತ್ಯಾಚಾರವು ಭಕ್ತನಿಗೆ ಬೇಕಲ್ಲದೆ ಮಹೇಶ್ವರನಿಗೆ ಬೇಡವೇ ? ಅದೇಕೆ? ಭಕ್ತನಂತೆ ಏಕಾಸನದಲ್ಲಿರ್ದ ಜಂಗಮನಿಗೂ ಅಂಗ ಲಿಂಗ ಸಾಮರಸ್ಯ ಜ್ಞಾನವು ಬೇಕು. ಆ ಜಂಗಮ ಮೂರ್ತಿಯು ಪಾದೋದಕಕ್ಕಾಧಾರ ವಾದ ಭಕ್ತನಿಗೆ ಶರಣುಹಾಕಿಯೇ ತೀರ್ಥಪ್ರಸಾದವನ್ನು ಸಲ್ಲಿಸುವನು. ಅಂದ ಬಳಿಕ ಮೋಕ್ಷದಾಯಕವಾದ ಅಷ್ಟಾವರಣಕ್ರಿಯೆಯು ಭಕ್ತನಿಗೆ ಎಷ್ಟು ಅವಶ್ಯವೋ ಅಷ್ಟೇ ಜಂಗಮನಿಗೆ ಅಗತ್ಯವೆಂದು ಹೇಳಬೇಕಿಲ್ಲ. ಊಟದಲ್ಲಿ ತಾಯಿಯಾಗಿ ಜನಿಸಿದಳು ಮಾಯೆ, ಮಾಟದಲ್ಲಿ ಸೇವಕಿ ಯಾಗಿ ಜನಿಸಿದಳು ಮಾಯೆ, ಕೂಟದಲ್ಲಿ ಅರ್ಧಾಂಗಿಯಾಗಿ ಜನಿಸಿ ದಳು ಮಾಯೆ. ಏಕಾಸನದಲ್ಲಿ [ಏಕಾಂತದಲ್ಲಿ] ಗಂಡಹೆಂಡಿರ ಭೇದ ಭಾವವು ಸೇವ್ಯಸೇವಕತ್ವವು ಹೇಗೆ ದೂರಾಗುವದೋ ಹಾಗೆ ಪರಶಿ ವನು ಪ್ರತಿಯೊಬ್ಬ ವೀರಶೈವನಿಗೆ ದೀಕ್ಷೆಯಲ್ಲಿ ಗುರುವಾಗಿಯೂ ಪೂಜೆ ಯಲ್ಲಿ ಲಿಂಗವಾಗಿಯೂ ಭೋಗದಲ್ಲಿ ಜಂಗಮನಾಗಿಯೂ ಇರುವನು. ಏಕೋದೇವಸ್ತ್ರಯೋಭಾಗಂ ಗುರುಲಿಂಗಂತು ಜಂಗಮಃ'' ''ಪೂಜಾ ಮೂರ್ತಿರ್ಭವೇಲ್ಲಿಂಗಂ ದೀಕ್ಷಾಮೂರ್ತಿರ್ಗುರುಸ್ತಥಾ ಜಂಗಮಂ ಭೋಗ ಮೂರ್ತಿಂಚ ಸತ್ಯಂ ಸತ್ಯಂ ನ ಸಂಶಯಃ'' ಅಷ್ಟಾವರಣ ಕ್ರಿಯೆಯಲ್ಲಿ ಮಾತ್ರ ಗುರುಲಿಂಗ ಜಂಗಮದಲ್ಲಿ ಏಕತ್ವವೆಂಬುದು ಲೋಕಾಚಾರವೂ ಶ್ರುತ್ಯಾಚಾರವೂ ಘಂಟಾ ಘೋಷವಾಗಿ ಕೂಗುತ್ತಿರಲು, ನಮ್ಮ ಸತ್ಕ್ರಿಯೆ ಸುಜ್ಞಾನಗಳನ್ನು ಅಳವಡಿಸಿಕೊಂಡು ನುಡಿದು ನಡೆವವರು ಎತ್ತ ? ಆ ಸತ್ಕ್ರಿಯೆಗಳ ಮರ್ಮ ತಿಳಿಯದೆ ಜರಿದು ನುಡಿದು ಹಾಡುವ ಕಲಿಯುಗದ ಅರೆಪಂಡಿತರೆತ್ತ ? ವಾಚಕರೇ ಊಹಿಸಲಿ.

ಒಂದಾನೊಂದು ಊರಲ್ಲಿ ಗುರಪ್ಪನೆಂಬ ಮನುಷ್ಯನಿದ್ದನು. ಆವನು ತನ್ನ ಊಟಪಾಟಗಳಲ್ಲಿ ಹಾಲನ್ನೇ ಉಪಯೋಗಿಸುತ್ತಿದ್ದನು. ಚಿಕ್ಕಂದಿ

ನಿಂದ ಹಾಲನ್ನೇ ಉಂಡುಂಡು ಮಜ್ಜಿಗೆ ತುಪ್ಪಗಳನ್ನು ಅರಿಯದಾಗಿದ್ದನು. ಆತನು ಊಟಕ್ಕೆ ಕುಳಿತಾಗ ಮಜ್ಜಿಗೆಯು ನೀಡಹೋದರೆ ಅದು ತೀರ ಕಡಿಮೆಯ ತರಹ ಪದಾರ್ಥವೆಂದು ಭಾವಿಸಿ ಸಮೀಪಕ್ಕೆ ತರಗೊಡುತ್ತಿದ್ದಿಲ್ಲ. ತುಪ್ಪದ ಸವಿಯನ್ನಂತೂ ತಮ್ಮ ತಾಯಿಯು ಹೆತ್ತಾಗಿನಿಂದಲೂ ಅರಿಯದಾಗಿದ್ದನು. ಹೀಗಿರುತ್ತಿರಲು ಅವನ ತಾಯಿತಂದೆಗಳೂ ಗುರುಹಿರಿಯರೂ ಮಜ್ಜಿಗೆ ತುಪ್ಪಗಳ ಅನುಭವ ಮಾಡಿಕೊಡಬೇಕೆಂದು ಒಂದು ಪ್ರಸ್ತದಲ್ಲಿ ನೀಡಹೋದರು. ಆಗ್ಗೆ ಪ್ರಬುದ್ಧನಾದ್ದರಿಂದ ನಾನು ಗುರಪ್ಪಸಿದ್ದರೂ ಹಾಲು ಹೆಚ್ಚಿನದೆಂದು ಹಾಲನ್ನೇ ಉಣ್ಣುತ್ತ ಬಂದಿರುವೆನು. ಈಗ ನೀವು ಮಜ್ಜಿಗೆ ತುಪ್ಪಗಳು ಈ ಪ್ರಸ್ತಕ್ಕೆ ಪ್ರಾಶಸ್ತ್ಯವೆಂದು ಹೇಳುತ್ತೀರಿ. ಅಂದಬಳಿಕ ನೀಡಿರಿ, ಉಂಡೇನೋಡುವೆನೆಂದು ಅಂದನು. ಆಪ್ರಕಾರ ಆ ದಿವಸ ಮೃಷ್ಟಾನ್ನದ ಕೂಡ ತುಪ್ಪ ಮಜ್ಜಿಗೆಗಳನ್ನು ಕ್ರಮವರಿತು ಸ್ವೀಕರಿಸಿದನು. ಊಟದ ಕಡೆಯಲ್ಲಿ ತಾಜಾ ಮಜ್ಜಿಗೆಯನ್ನು ಪಾನಮಾಡಲು ಅದು ಈ ಲೋಕದ ಅಮೃತವೆಂದು ಭಾಸವಾಯಿತು. ಆಗ್ಗೆ ಅವನು ಈ ಮಜ್ಜಿಗೆ ತುಪ್ಪಗಳು ಹೇಗೆ ಆಗುತ್ತವೆಂದು ವಿಚಾರಿಸಲು ಹಾಲಿಗೆ ಮಜ್ಜಿಗೆಯ ಸಂಸ್ಪರ್ಶನದಿಂದ ಹೆಪ್ಪುಗಟ್ಟಿ ಮೊಸರೂ ಮೊಸರು ಕಡೆದು ಬೆಣ್ಣೆಯೂ ಬೆಣ್ಣೆಯ ಕಾಸಿ ತುಪ್ಪವೂ ಆಗುತ್ತವೆಂದು ಗೊತ್ತುಮಾಡಿಕೊಂಡನು. ಆಗ್ಗೆ ಹಾಲೇ ಶ್ರೇಷ್ಠವೆಂಬ ತಿಳವಳಿಕೆಯನ್ನು ಬಿಟ್ಟು ಘೃತ ಶ್ರೇಷ್ಠವೆಂದೂ ಈ ಶ್ರೇಷ್ಠ ಪದಾರ್ಥ ಸಿಗುವದಕ್ಕೆ ಮಜ್ಜಿಗೆಯು ಹುಳಿಯಾದರೂ ಸಾಧನೀಭೂತವಾಗಿದೆಯೆಂದೂ ತಿಳಿದನು. ಇದೇ ತತ್ವವನ್ನು ಒತ್ತಿ ಹೇಳಿದ ಕವಿಗಳೂ ಜ್ಞಾನಿಗಳೂ ಆದ ಸರ್ವಭೂಷಣ ಶಿವಯೋಗಿಗಳ ತಮ್ಮ ಕೈವಲ್ಯದ ಶಿವಯೋಗ ಪ್ರಕರಣದಲ್ಲಿಯ "ಗೋವಿನೊಳಗಿಹ ಘೃತವು ಗೋವಿನಿಂ ಪೊರಮಟ್ಟು ಗೋವಿನಂಗದ ರುಜೆಯ ಕೆಡಿಸುವಂತೆ॥ ಜೀವಭಾವವ ಕಳೆಯಲಾ ವಿಮಲಚಿದ್ಬಿಂದು ಆವರಿಸಿ ಪೊರಗಿಷ್ಟಲಿಂಗ ತಾನಾಗಿ ಎಂಬ ನುಡಿಯ ನಿಜಾಂಶವನ್ನು ತಿಳಿದಾದರೂ ಈ ಕಲಿಯುಗದ ಕಾಶಿಯ ಪಂಡಿತರು ತಮ್ಮ ಅಪಪ್ರಚಾರವನ್ನು ಬಿಡುವರೇನು?

ಈಗಿನ ಕಾಲದಲ್ಲಿ ದುಷ್ಟ ಜನರ ಕಾಟವು ಶಿಷ್ಟ ಜನರಿಗೆ ಆಗುವದು ಹೆಚ್ಚು. ಒಂದಕ್ಕೊಂದು ಹಳ್ಳಿಯಲ್ಲಿ ದುಷ್ಟಜನರು ಒಬ್ಬ ದೊಡ ಮನುಷ್ಯನ ಮೇಲೆ ಅಲ್ಲದ ಸಲ್ಲದ ಆರೋಪ ಹೊರಿಸಿ ಆತನನ್ನು ಕಚೇ

# ಅಗರಖೇಡದ ಶಿಲಾಶಾಸನವು.

(ಲೇಖಕ:— ರಾ॥ ಬ॥ ಫ. ಗು. ಹಳಕಟ್ಟಿ ಬಿ. ಏ. ಎಲ್‌ಎಲ್. ಬಿ. ವಿಜಾಪೂರ)

ಅಗರಖೇಡವು ವಿಜಾಪುರ ಜಿಲ್ಹಾ, ಇಂಡಿ ತಾಲೂಕಿನಲ್ಲಿ ಭೀಮಾ ತೀರದಲ್ಲಿದೆ. ಇಲ್ಲಿಯ ಒಂದು ಶಿಲಾಶಾಸನವನ್ನು ಕೆಲವು ವರುಷಗಳ ಹಿಂದೆ ಶ್ರೀ ಚನವಲ್ಲಪ್ಪ ಹಲಸಂಗಿ ಮತ್ತು ಶ್ರೀ ರೇವಪ್ಪ ಕಾಪಸೆ ಇವರು ಹೋಗಿ ಓದಿಕೊಂಡಿದ್ದರು. ಇದನ್ನು ಶ್ರೀ ಸಿಂಪೀ ಲಿಂಗಪ್ಪ ನವರು ನಮ್ಮ ಕಡೆಗೆ ಕಳಿಸಿಕೊಟ್ಟಿದ್ದಾರೆ. ಈ ಮಹನೀಯರಿಗೆಲ್ಲರಿಗೂ ನಾವು ಬಹಳ ಆಭಾರಿಯಾಗಿದ್ದೇವೆ.

ಈ ಶಾಸನವು ಬಿಜ್ಜಳನ ಮಗನಾದ ರಾಯಮುರಾರಿ ಸೋವಿ ದೇವನ ಕಾಲದಲ್ಲಿಯದು ಇದೆ. ರಾಯಮುರಾರಿಯು ಇದರಲ್ಲಿ 'ಕಳಚುರ್ಯ ಚಕ್ರವರ್ತಿ' ಎಂದು ವರ್ಣಿಸಲ್ಪಟ್ಟಿದ್ದಾನೆ. ದಂಡನಾಯಕ ಬಸವರಸ, ಮಹಾಮಂಡಳೇಶ್ವರ ಚೌಂಡರಸ ಮತ್ತು ಖೇಡದ ಪ್ರಭು ಗಾವುಂಡಗಳು ಕೂಡಿಕೊಂಡು ಈ ಗ್ರಾಮದಲ್ಲಿದ್ದ ಕೈಲಾಸೇಶ್ವರ ದೇವರಿಗೆ ಕೊಟ್ಟ ದಾನವು ಇದರಲ್ಲಿ ಉಲ್ಲೇಖಿಸಲ್ಪಟ್ಟಿರುತ್ತದೆ.

ಈ ಶಾಸನದ ಕಾಲದಲ್ಲಿ ರಾಯ ಮುರಾರಿ ಸೋವಿ ದೇವನು ರಾಜ್ಯ ಭಾರ ಮಾಡುತ್ತಿದ್ದನೆಂಬುದು ಸ್ಪಷ್ಟವಾಗಿದೆ. ಶಾಸನದ ವರುಷವು ವಿಕೃತ ಸಂವತ್ಸರವೆಂದಿದ್ದು ಇದು ಕ್ರಿ. ಶ. ೧೧೭೦ ಆಗುತ್ತದೆ. ಬಿಜ್ಜಳನ ಶಿಲಾ ಶಾಸನಗಳು ೧೧೬೮ ರ ತರುವಾಯ ದೊರೆಯುವದಿಲ್ಲೆಂಬುದಕ್ಕೆ ಈ ಶಾಸನವು ಒಂದು ಆಧಾರವಾಗಿದೆ. ಬಸವೇಶ್ವರನು ೧೧೭೦ ರ ಹಿಂದೆಯೇ ಜೀವಿಸಿರಬೇಕು.

ಈ ಶಾಸನದಲ್ಲಿ ಹೇಳಿದ ಬಸವರಸನು ಬಸವೇಶ್ವರನಾಗಿರದೆ ಬೇರೊಬ್ಬನಿದ್ದಾನೆಂಬುದು ಸ್ಪಷ್ಟವದೆ. 'ಬಸವ' ಈ ಹೆಸರು ಬಸವನ ಪೂರ್ವದಲ್ಲಿ ಮತ್ತು ಅವನ ತರುವಾಯ ಜನರಲ್ಲಿ ಪ್ರಚಾರದಲ್ಲಿತ್ತೆಂದು ಕಂಡು ಬರುತ್ತದೆ. ೧೦೭೬ ರಿಂದ ೧೧೨೬ ರ ವರೆಗೆ ಆಳಿದ ವಿಕ್ರಮಾದಿತ್ಯನ ಕಾಲದಲ್ಲಿ ಹುಟ್ಟಿದ ಕುರ್ತಕೋಟಿಯ ಶಿಲಾಶಾಸನದಲ್ಲಿ ಎಡೆವ ಬಸವಯ್ಯ ಎಂಬ ಹೆಸರು ಬಂದಿದೆ. ಹಾಗೆಯೇ ಹಾನಗಲ್ಲು ತಾಲೂಕಿನ

ಸೆಂಬೊಳಲು ಎಂಬ ಗ್ರಾಮದಲ್ಲಿಯ ಶಿಲಾಶಾಸನದಲ್ಲಿಯೂ ಈ ಹೆಸರು ದೊರೆಯುತ್ತಿದೆ. ಇದಾದರೂ ವಿಕ್ರಮಾದಿತ್ಯನ ಕಾಲದಲ್ಲಿ ಹುಟ್ಟಿದ್ದು ಇದೆ. ೧೧೨೨ರಲ್ಲಿ ಹುಟ್ಟಿದ ಬಂಕಾಪೂರ ಶಾಸನದಲ್ಲಿ ಬಸವನೆಂಬ ಹೆಸರು ಇದೆ. ೧೧೬೨ ರಲ್ಲಿ ಮನಗೂಳಿಯ ಶಿಲಾಶಾಸನದಲ್ಲಿಯೂ ಒಬ್ಬ ಬಸವರಸನಿದ್ದಾನೆ. (ಶಿವಾನುಭವ ಸಂಪುಟ ೫ ಪುಟ ೩೫೦ ನೋಡಿರಿ) ಇದೇ ಕಾಲಕ್ಕೆಯೇ ಈ ಅಗರಖೇಡದಲ್ಲಿ ಬೇರೊಬ್ಬ ಬಸವರಸನಿದ್ದಿರ ಬೇಕು.

ಬಸವನ ಮುಖವು ನಂದಿಯ ಮುಖದಂತೆ ಉದ್ದವಾದ್ದರಿಂದ ಹಾಗೆ ಅವನಿಗೆ ಹೆಸರು ಬಂದಿತೆಂದು ಜೈನ ಗ್ರಂಥಗಳಲ್ಲಿ ಹೇಳಲ್ಪಟ್ಟಿರುತ್ತದೆ. ಜೈನ ಗ್ರಂಥಕಾರರು ಬಸವನ ವಿಷಯವಾಗಿ ಕಲುಷಿತ ಮನಸ್ಕರಾಗಿ ಹೇಗೆ ಅವನನ್ನು ವರ್ಣಿಸುತ್ತಾರೆಂಬುದನ್ನು ತೋರಿಸುವದೇ ಈ ಶಿಲಾ ಶಾಸನವನ್ನು ನಾವು ಪ್ರಸಿದ್ಧಿಸಿದ್ದರ ಒಂದು ಉದ್ದೇಶವಾಗಿರುತ್ತದೆ.

ಅಗರಖೇಡವು ತರ್ದವಾಡಿ ನಾಡಿನಲ್ಲಿ ೩೬ ಹಳ್ಳಿಗಳಿಗೆ ರಾಜಧಾನಿ ಯಾಗಿತ್ತೆಂದು ಇದರಲ್ಲಿ ಹೇಳಲ್ಪಟ್ಟಿದೆ. ಈ ಗ್ರಾಮವು ಈಗ ತದ್ದೇವಾಡಿ ಯಿಂದ ೧೮ ಮೈಲಿನ ಮೇಲೆ ಇರುತ್ತದೆ. ಅಗರಖೇಡವು ವಿಜಾಪುರ ಜಿಲ್ಲೆಯಲ್ಲಿ ಒಂದು ಮಹತ್ವದ ಜಹಾಗೀರ ಗ್ರಾಮವಿರುತ್ತದೆ.

## ಮೂಲಶಾಸನವು.

೧. ನಮಃಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇತ್ರೈಲೋಕ ನಗರಾರಂ-

೨. ಭ ಮೂಲಸ್ತಂಭಾಯಶಂಭವೇ ॥ ಸ್ವಸ್ತಿಶ್ರೀ ಶುಭ ತುಂಗದೇವ ಶ್ರೀಪಾದ-

೩. ಪದ್ಮೋಪಜೀವಿ ಶ್ರೀಮನ್ ಮಹಾ ಮಂಡಳೇಶ್ವರಂ ತರ್ದವಾಡಿ ನಾಡ ಕೈಳಾಸಕೇ ?

೪. ಸರಾ? ನಾಡೊಳಗಣ ಮೂವತ್ತಾರುಂಬಾಡದ ರಾಜಧಾನಿ ಶ್ರೀಮತು

೫. ಖೇಡದ (ರಂನಪೆಸರ)? ದಿವ್ಯಲಿಂಗಂ ಶ್ರೀಕೈಳಾಸೇಶ್ವರ ದೇವರ್ಗೆ ವಿಟ್ಟಕೆಯಿಮಾಣಿ ॥

೬. ಕೇಶ್ವರದ ಕಾಲ ಮತ್ತರು ಮೂನೂರಿಪ್ಪತ್ತೈದರೊಳಗೆ

೭. ಶ್ರೀಮತು ಕಳಚುರ್ಯ ಚಕ್ರವರ್ತಿರಾಯ ಮುರಾರಿಸೋಯಿ

೮. ದೇವನ ಸಂನಾಹಂ (ಮಕರ ಚಿಹ್ನ) ಧ್ವಜಾಧಾರವೀರ ಮೂಳಿ ಯನಾ-
೯. ಯಕನ ಮಹಾಪಸಾಯಿತಂ ದಣ್ಡನಾಯಕಂ ಬಸವರಸರುಂ ತಂ
೧೦. ಮ ಕೊಪ್ಪರಸರುಂ ಶ್ರೀಮನು ಮಹಾ ಮಂಡಳೇಶ್ವರಂ ಚೌಡರಸ
೧೧. ರುಂ ಖೇಡದ ಪ್ರಭುಗಾವುಂಡುಗಳುಂ (ಪಂಚಮ......)
೧೨. ದಾಚಾರ್ಯ ಪ್ರಮುಖವಾಗಿ (ದುರ್ಗಜೀಯರ್ಗೆ) ಶ್ರೀಮತು ವಿಕ್ರ
೧೩. ತ ಸಮ್ವತ್ಸರದ ಜೇಷ್ಟಮಾಸದಮಾವಾಸ್ಯೆ ಸೋಮವಾರದಂ
೧೪. ದು (ಗಂಗೆಯು) ಕೆಯೊಳಗೆ ಮಾಣಿಕೇಶ್ವರದ ಕಾಲಲಿಪ್ಪ
೧೫. ತ್ತು ಮತ್ತರು ಸರ್ವ ...ಪರಿಹಾರಂ ಸರ್ವನಮಸ್ಯ (ವಾ)
೧೬. ಗೆ ಬಿಟ್ಟರು ॥ ಮತ್ತಮಾದೇವರ ನಂದಾದೀವಿಗೆಗೆ ದಂಡನಾಯ
೧೭. ಕಂ ಬಸವರಸರು ಸರ್ವ ನಮಸ್ಯವಾಗಿ ಬಿಟ್ಟ ಗಾಣವೊಂದು ॥
೧೮. ಶ್ರೀ ಮಾಂನಂ (ಜ)ಪ್ಪ ಗಾವುಂಡಗಳುಂ ಲಕ್ಷ್ಮಿದೇವಿಯುಂ ಸೂ
೧೯. ರ್ಯ ಗ್ರಹಣದಲು ಧಾರಾಪೂರ್ವಕಂ ಮಾಡಿ ಸರ್ವನಮ
೨೦. ಸ್ಯವಾಗಿ ಬಿಟ್ಟ ಗಾಣವೊಂದು ಆದೇವಸಂಲೋಗರೆಲ್ಲರುಂ
೨೧. ತಂ ತಂಮ ಗಾಣದಲು ಪ್ರತ್ಯೇಕಂ ಬಿಟ್ಟಿಂಣೆ ಪಡಿಗೆಯೊಂದು
೨೨. ಭೀಮರಥಿ

# ಪಾದೋದಕ.

(ಲೇಖಕ:— ಕುಮಾರ ಶಿವಾನಂದ)

೧೯೪೧ನೇ ಮೇ-ಜೂನ ಶಿವಾನುಭವ ಸಂಚಿಕೆಯಲ್ಲಿ ಪಾದೋದಕ ಎಂಬ ಶಿರೋಲೇಖದ ಕೆಳಗೆ ಕೆಲವು ಪದ್ಯಗಳು ಪ್ರಕಟವಾಗಿದ್ದು ಅದಕ್ಕೆ ವಿರುದ್ಧವಾದ ಕೆಲವು ಆಗಮದಲ್ಲಿಯ ಸಂಸ್ಕೃತ ಶ್ಲೋಕಗಳನ್ನು ಬೇರೊಬ್ಬ ಮಹನೀಯರು ಕೊಟ್ಟಿದ್ದು ಸಂಪಾದಕರು ಜನರ ಅಭಿಪ್ರಾಯವನ್ನು ವ್ಯಕ್ತಮಾಡಲು ಕೇಳಿಕೊಂಡಿದ್ದಾರೆ. ಅದಕ್ಕಾಗಿ ನನಗೆ ಹೊಳೆದಷ್ಟನ್ನು ಇಲ್ಲಿ ವಿವೇಚಿಸುವೆನು.

ಮೊದಲು ಪಾದೋದಕ ಅಂದರೇನೆಂಬುದು ತಿಳಿದುಕೊಳ್ಳೋಣ. ಪವಿತ್ರ ಪುರುಷರ ಅರ್ಥಾತ್ ಆತ್ಮಜ್ಞಾನಿಗಳ ತ್ಯಾಗಿಗಳ ವೈರಾಗಿಗಳ ದೇವಮಾನವರ ಪಾದಗಳನ್ನು ತೊಳೆದ ನೀರು. ಅಂಥವರ ಈ ನೀರು ನಿಜವಾಗಿ ಪವಿತ್ರವೇ ಸರಿ. ಅದರಲ್ಲಿ ಶಕ್ತಿ ಇರುವದು. ಆ ದೇವ ಮಾನವನು ಮುಟ್ಟಿದ ಪ್ರತಿಯೊಂದು ಪದಾರ್ಥವು ಪಾವನವಾಗುವದು. ಯಾಕಂದರೆ ಅವನು ಬ್ರಹ್ಮಜ್ಞಾನಿಯಾಗಿರುವನು. ಅವನಲ್ಲಿಯ ಪವಿತ್ರತನವನ್ನು ಭಕ್ತರು ಪಾದಗಳ ಮುಖಾಂತರ ಹೀರಿಕೊಳ್ಳಲು ಇಷ್ಟಬಡುತ್ತಾರೆ. ಯಾಕಂದರೆ ಇದಕ್ಕೆ ಪಾದಗಳೇ ಹೆಬ್ಬಾಗಿಲಗಳು. ಅದಕ್ಕಾಗಿ ಪಾದಗಳಿಗೆ ನಮಸ್ಕರಿಸುವದು, ಧೂಳಪಾದೋದಕ ತಕ್ಕೊಳ್ಳುವದು, ಪಾದೋದಕಗಳನ್ನು ಪಡೆಯುವದು, ಪೂಜಿಸುವದು ಮೊದಲಾದ ಕೆಲಸಗಳನ್ನು ಭಕ್ತರು ಮಾಡುವರು.

ಮನುಷ್ಯನಲ್ಲಿರುವ ಕುಂಡಲಿನಿಯ ಶಕ್ತಿಯು ಮೂಲಾಧಾರದಲ್ಲಿ ಹುದುಗಿಕೊಂಡಿರುವದು. ಅದು ಕೆಲವು ಸಾಧನಗಳಿಂದ ಆಧಾರ ಸ್ವಾಧಿಷ್ಠಾನ ಮಣಿಪೂರಕ ಮೊದಲಾದ ಆರುಚಕ್ರಗಳಲ್ಲಿ ಹಾಯ್ದು ಸಹಸ್ರಾರದಲ್ಲಿ ಸೇರಿ ಮುಂದೆ ತಲೆಯಲ್ಲಿರುವ ಕೆಲವು ಚಕ್ರಗಳಲ್ಲಿ ಬಂದು ತಲೆಯ ಹಿಂಬಾಗದಲ್ಲಿ ಬರಲಾಗಿ ಪೂರ್ಣತ್ವವು ಬರುವದು. ಅದೇ ಶಕ್ತಿಯು ಬೇರೆ ಕೆಲವು ನಾಡಿಗಳಿಂದ ಹಸ್ತಗಳ ಕಡೆಗೆ ವಿಶೇಷವಾಗಿ ಪಾದಗಳ ಕಡೆಗೆ ಹರಿಯುವದು. ಈ ಕಾರಣದ ಸಲುವಾಗಿ ಪೂಜೆಗೆ

ಪಾದಗಳೇ ಶ್ರೇಷ್ಠವೆಂದು ಗಣಿಸಲ್ಪಟ್ಟಿವೆ. ಇಂಥದರಿಂದ ಬಂದ ಉದಕವನ್ನು ಅರ್ಥಾತ್ ಪಾದೋದಕವನ್ನು ಲಿಂಗಕ್ಕೆ ಎರೆಯುಬೇಕೆ ಹೇಗೆ ವಿಚಾರಿಸುವಾ. ಇದರ ಸಲುವಾಗಿ ಲಿಂಗವೆಂದರೇನೆಂಬುದನ್ನು ಮೊದಲು ಅರಿತುಕೊಳ್ಳುವಾ.

ಲಿಂಗ ಈ ಶಬ್ದವು ಬಹು ವ್ಯಾಪಕವಾಗಿದೆ. ಲಿಂಗ ಇದಕ್ಕೆ ಆತ್ಮ, ಬ್ರಹ್ಮ, ಪರಮಾತ್ಮ, ಗುರು, ಸತ್ಯ ಸಾಕ್ಷಾತ್ಕಾರ, ದೇವ ಹೀಗೆ ಅನೇಕ ಅರ್ಥಗಳಿರುವವು. ಈ ಎಲ್ಲವುಗಳ ಕುರುಹು ಇಷ್ಟಲಿಂಗವಾಗಿದೆ. ಆ ದೇವದೇವನಿಗೆ ಸಲ್ಲತಕ್ಕ ಯಾವತ್ತೂ ಗುಣಗಳು ಕೂಡ ಇಷ್ಟಲಿಂಗಕ್ಕೆ ನಾವು ಸಲ್ಲಿಸಿದರೆ ಅದು ಪೂಜೆ ಎನಿಸುವದು. ಇಲ್ಲವಾದರೆ ಅದು ಪೂಜೆಯೇ ಅಲ್ಲ. ಅಂದರೆ ದೇವರಲ್ಲಿ ಇರತಕ್ಕ ಯಾವತ್ತೂ ಅನಂತ ತತ್ವಗಳನ್ನು ನಾವು ಅದಕ್ಕೂ ಕಲ್ಪಿಸಬೇಕು. ಸರ್ವಜ್ಞತ್ವ, ಸರ್ವಜ್ಞತ್ವ, ಸರ್ವಶಕ್ತತ್ವ, ಸರ್ವವ್ಯಾಪಕತ್ವ, ಸರ್ವಾಂತರ್ಯಾಮಿತ್ವ, ಸಚ್ಚಿದಾನಂದತ್ವ, ತ್ರಿಗುಣಾತೀತತ್ವ, ಮೊದಲಾದ ಬ್ರಹ್ಮನಲ್ಲಿಯ ಗುಣಗಳನ್ನು ಇದಕ್ಕೂ ಹೋಲಿಸಿ ಭಾವಿಸಿ ಪೂಜಿಸಬೇಕು. ಅಂದರೆ ನಮಗೆ ಜ್ಞಾನವಾಗುವದು. ಇಲ್ಲವಾದರೆ ಅದು ಪೂಜೆ ಎನಿಸಲಾರದು ಅದು ಭಕ್ತಿಯೂ ಎನಿಸಲಾರದು. ಭಕ್ತಿಯು ಮೇಲಿನ ಸರ್ವ ಗುಣಗಳನ್ನು ಕೂಡಿಕೊಂಡು ಹೋಗಬೇಕು. ಇಲ್ಲವಾದರೆ ಭಕ್ತಿಯಲ್ಲಿ ಅಪೂರ್ಣತ್ವವಿದೆ ಎಂದು ತಿಳಿಬೇಕು. ಇಂಥ ದೇವನ ಕುರುಹು ಎನಿಸಿದ ಇಷ್ಟಲಿಂಗಕ್ಕೆ ಪಾದೋದಕವನ್ನು ಎರೆಯುಬೇಕೇ ಹೇಗೆ ಎಂಬುದನ್ನು ವಿಚಾರಿಸುವದು ಒಳ್ಳೇ ಗಹನ ವಿಷಯವಾಗಿದೆ.

ಮೇಲೆ ವರ್ಣಿಸಿದಂಥ ಗುರುಗಳ ಪಾದೋದಕಕ್ಕಿಂತ ಲಿಂಗವು ಶ್ರೇಷ್ಠವಲ್ಲವೇ ? ಲಿಂಗವು ಶ್ರೇಷ್ಠವೆಂದು ನನ್ನ ತಿಳಿವಳಿಕೆಯಿದೆ. ಲಿಂಗ ಇದರ ಅರ್ಥವನ್ನು ವಿಚಾರಿಸಿದರೆ ಅದು ಪರಿಪೂರ್ಣವಾದದ್ದೇ ಎಂದು ತಿಳಿಯುತ್ತದೆ. ಪರಿಪೂರ್ಣ ವಸ್ತುವನ್ನು ಭಕ್ತಿ ಭಾವದಿಂದ ನಾವು ಪೂಜಿಸಿ ಬೇಡಿಕೊಳ್ಳುವದು ಯೋಗ್ಯವು. ಇದಕ್ಕಿಂತಲೂ ಜಂಗಮನ ಪಾದೋದಕ ಶ್ರೇಷ್ಠವೆಂದು ಏತರ ಮೇಲಿಂದ ಹೇಳಬೇಕು ? ಬರೇ ಆಗಮುಗಳಿಂದ ಹೇಳಬೇಕೆ ? ಅದು ಈಗಿನ ಕಾಲದಲ್ಲಿ ಸರಿ ಎನಿಸದು. ಯಾಕಂದರೆ ಮಾನವನಿಗೆ ಸ್ವತಂತ್ರವಾಗಿ ವಿಚಾರ ಮಾಡಲಿಕ್ಕೆ ಅಧಿಕಾರ ಇದೆ. ಅದಕ್ಕಂತಲೇ ದೇವರು ಮಾನವನಿಗೆ ಮನ ಬುದ್ಧಿ ಚಿತ್ತಗಳನ್ನು

ಕೊಟ್ಟಿದ್ದಾನೆ. ರೂಢಿಯ ದಾಸರಾಗಬಾರದು. ಹಿಂದೆ ಆಗಮದಲ್ಲಿ ಹಾಗೆ ಬರೆದಿದ್ದಾರೆ, ಹೀಗೆ ಬರೆದಿದ್ದಾರೆಂದು ಹೇಳಿ ಜಂಗಮರು ಮಾನಮನ್ನಣೆ ಪಡೆಯಲು ಯತ್ನಿಸುವದು ಒಳಿತಲ್ಲ. ಇದರಿಂದ ಸ್ವತಂತ್ರ ವಿಚಾರಿಸ ಲಿಕ್ಕೆ ಶಕ್ತಿ ಇಲ್ಲವೆಂದು ತಿಳಿಯುತ್ತದೆ. ಹೀಗೆ ಹೇಳುವ ಧರ್ಮದಿಂದ ಹಿತಕ್ಕಿಂತ ಕೇಡಕೇ ಹೆಚ್ಚೆಂಬುದನ್ನು ಯಾರೂ ಮರೆಯಬಾರದು. ಸಿಕ್ಕಿ ದ್ದನ್ನು ಓದಿರಿ. ಸಿಕ್ಕಿದ್ದನ್ನು ಕೇಳಿರಿ. ಇದಕ್ಕೆ ಬೇಡೆನ್ನುವದಿಲ್ಲ. ಆದರೆ ಏಕಾಂತದಲ್ಲಿ ಕುಳಿತು ವಿಚಾರಿಸಿ ಹೊಳೆದಂತೆ ಬಾಳುವದು ಶ್ರೇಷ್ಠವಾದ ಸುಗಮವಾದ ಮಾರ್ಗವು. ಅದಕ್ಕಂತೇ "ಸ್ವಾನುಭವವೇ ಮೇಲಾದ ಗುರುವು" ಎಂದು ಹೇಳಿದ ಶ್ರೀ ನೀಲಕಂಠ ಸ್ವಾಮಿಗಳು ಬರೆದದ್ದು ಸರಿ ಎನಿಸುವದು.

ಜಂಗಮ ಪಾದೋದಕದಲ್ಲಿ ಲಿಂಗವನ್ನು ಇಡುವದು ಒಳಿತಲ್ಲ. ಜಗತ್ತಿನಲ್ಲಿರುವ ಎಲ್ಲ ಲಿಂಗಗಳೂ ಒಂದೇ ಆಗಿವೆ. ಅಂಥ ಲಿಂಗವನ್ನು ಜಂಗಮನೂ ಕೂಡ ಕೊರಳಲ್ಲಿ ಕಟ್ಟಿರುವನು. ತನ್ನ ಲಿಂಗವನ್ನು ತನ್ನ ಪಾದದ ಮೇಲೆ ಇಡುವದು ತನ್ನ ಪಾದೋದಕದಿಂದ ಅದನ್ನು ಎರೆ ಯುವದು ಇದರ ಉದ್ದೇಶವಾದರೂ ಏನು? ಜಂಗಮನು ಮುಕ್ತನು, ಆದರೆ ಲಿಂಗಕ್ಕೆ ಮಾತ್ರ ಇನ್ನೂ ಮುಕ್ತಿಬೇಕಾಗಿದೆ ಎಂದೇ ಇದರ ಅರ್ಥ ವಾಗುವದು. ಜಂಗಮನಿಗೂ ಭಕ್ತರಿಗೂ ಕೂಡಿಯೇ ಮುಕ್ತಿ ಬೇಕಾಗಿದೆ. ಲಿಂಗವು ಯಾವಾಗಲೂ ಮುಕ್ತನೇ ಸರಿ. ಅವನ ಸಹಾಯದಿಂದ ಇವ ರೀರ್ವರು ಮುಕ್ತಿಯನ್ನು ಪಡೆಯುವದಿಲ್ಲವೇ? ಹಾಗಿದ್ದರೆ ಪಾದೋ ದಕವನ್ನು ಲಿಂಗಕ್ಕೆ ಎರೆಯುವ ಉದ್ದೇಶವೇನು? ಯಾರಾದರೂ ಇಲ್ಲಿಯ ವರೆಗೆ ವಿಚಾರಿಸಿರುವರೇನು? ಇದು ವಿರಶೈವರ ಸಾಂಪ್ರದಾಯವೆನಿಸುವ ದಿಲ್ಲ. ಶೈವರ ಸಾಂಪ್ರದಾಯವು ನಮ್ಮಲ್ಲಿ ಮನೆ ಮಾಡಿದೆ. ಕೆಲವು ಶೈವರು ವೀರಶೈವರಾಗಿ ತಮ್ಮ ವಿಚಾರಗಳನ್ನೇ ವಚನರೂಪದಿಂದ ಬರೆ ದಿದ್ದಾರೆಂದು ಕೆಲವು ಶರಣರ ವಚನಗಳ ಮೇಲಿಂದ ನನಗೆ ಕಂಡು ಬರು ತ್ತದೆ ಶಿವಶರಣರ ಯಾವತ್ತೂ ವಚನಗಳೂ ಸರಿ ಇರುತ್ತವೆಂದು ಹೇಳ ಲಿಕ್ಕಾಗುವದಿಲ್ಲ. ಕಾರಣ ಪಾದೋದಕದ ಬಗ್ಗೆ ಇದ್ದ ವಚನಗಳು ಸರಿ ಎನಿ ಸುವದಿಲ್ಲ. ಆಗಮದ ಮಾತೂ ಅದರಂತೆಯೇ ಸರಿ. ಪ್ರತಿಯೊಂದು ಕಾರ್ಯ ದಲ್ಲಿ ವಿಚಾರವು ಅತ್ಯವಶ್ಯವಿದೆ. ಇದು ಕಲಿಯುಗ. ಅಂದರೆ ಕಲಿಯು ವಂಥ ಕಾಲ. ಯಾವದನ್ನೂ ಅಂಥ ಶ್ರದ್ಧೆಯಿಂದ ನಂಬುವ ಕಾಲವು

ಇದಲ್ಲ. ಕಾರಣ ಹಿಂದಿನವರು ಬರೆದದ್ದೆಲ್ಲ ಸತ್ಯವೆಂದು ಹೇಳಲಿಕ್ಕಾಗದು. ನಾವು ಬರೆಯುವವರ ಹೃದಯವನ್ನು ಅರಿತಿದ್ದರೆ, ಅದನ್ನು ಯಾಕೆ ಹಾಗೆ ಬರೆದರೆಂದು ಹೇಳಲಿಕ್ಕೆ ಬರುತ್ತದೆ. ಬರೆದಿದ್ದಾರೆಂದ ಕೂಡಲೇ ತಲೆಯ ಮೇಲೆ ಹೊತ್ತುಕೊಂಡು ಅಕ್ಷರಶಃ ಪಾಲಿಸಲಿಕ್ಕೆ ಹೊರಡಬಾರದು. ವಿಚಾರಿಸಬೇಕು. ಆ ಮೇಲೆ ಸರಿ ತೋರಿದರೆ ನಡೆಯಬೇಕು.

ಇದರ ಮೇಲಿಂದ ಪಾದೋದಕವು ಅಪವಿತ್ರವೆಂದು ನಾನು ಹೇಳಲಿಲ್ಲ! ಇಂಥ ಪಾದೋದಕದಿಂದ ಅಪವಿತ್ರ ವಸ್ತುವು ಪವಿತ್ರವಾಗುವದು. ಇದು ಅಪವಿತ್ರ ವಸ್ತುವಿಗೆ ಬೇಕಲ್ಲವೆ? ಲಿಂಗದಂಥ ಪವಿತ್ರ ಪರಿಪೂರ್ಣ ವಸ್ತುವಿಗೆ ಇದರ ಅವಶ್ಯಕತೆ ಇಲ್ಲ. ಶ್ರೀ ನೀಲಕಂಠ ಸ್ವಾಮಿಗಳು ಬರೆದ ಎರಡೂ ಪದಗಳು ಸರಿ ಅನಿಸುವವು. ಆಗಮದ ಪದ್ಯಗಳು ಮಾತ್ರ ಸ್ವತಂತ್ರ ವಿಚಾರದವರಿಗೆ ಸರಿ ಎನಿಸದೆ ಅಂಧ ಶ್ರದ್ಧೆಯವರಿಗೆ ಸರಿ ಎನಿಸಬಹುದು. ಬರೇ ಪುಸ್ತಕದಲ್ಲಿಯ ಆಧಾರಕ್ಕೆ ಮಹತ್ವ ಕೊಡಬಾರದು. ಸ್ವಾನುಭವಕ್ಕೆ ಮಹತ್ವ ಕೊಡಬೇಕು. ಅಂದರೆ ಎಲ್ಲವೂ ನಿಚ್ಚಳ ಕಾಣುವದು. ಆದರೂ ಈಗಿನ ಕಾಲದಲ್ಲಿ ಮೇಲೆ ವರ್ಣಿಸಿದಂಥ ಉಚ್ಚ ಜಂಗಮರು ಕೂಡ ಎಲ್ಲಿಯೂ ಕಾಣುವದಿಲ್ಲ. ಅಂಥವರ ಪಾದೋದಕವನ್ನು ಭಕ್ತರೂ ಕೂಡ ಸೇವಿಸಬಾರದು. ಲಿಂಗದ ಮಾತು ದೂರೇ ಉಳಿಯಿತು. ಈ ಲೇಖವನ್ನು ವಿಚಾರಿಸಿ ಓದಿರಿ. ಅಂಧ ಶ್ರದ್ಧೆಯಿಂದ ಓದಬೇಡಿರೆಂದು ಬೇಡಿಕೊಳ್ಳುವೆನು.

---

# ಬಸವೇಶ್ವರನ ಚರಿತ್ರೆ

## ಲೇಖಾಂಕ ೩

(ಲೇಖಕ:- ರಾ॥ ಬ॥ ಫ. ಗು. ಹಳಕಟ್ಟಿ. ಬಿ, ಎ, ಎಲ್ ಎಲ್, ಬಿ. ವಿಜಾಪುರ)

---

### ಬಸವೇಶ್ವರನ ಜನನದ ಬಗ್ಗೆ ಇರುವ ದಂತಕಥೆಗಳು.

ಮಹಾ ಪುರುಷರು ಬಾಲ್ಯದಲ್ಲಿ ಅಪ್ರಸಿದ್ಧರಾಗಿರಬಹುದು. ಆದರೂ ಅವರು ಮುಂದೆ ಮಹತ್ವದ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳನ್ನು ಮಾಡಿ ಜನರಲ್ಲಿ ಪ್ರಸಿದ್ಧಿಯನ್ನು ಹೊಂದಲು ಅವರು ಮಹತ್ಮರಾಗಹತ್ತುತ್ತಾರೆ. ಆಗ ಭಾವಿಕ ಜನರು ಅವರಿಗೆ ಒಂದು ಅಲೌಕಿಕ ಶಕ್ತಿಯನ್ನು ಆರೋಪಿಸಿನ ಹತ್ತುತ್ತಾರೆ. ಅವರ ಜನನ ಕಾಲದಲ್ಲಿ ಸಹ ಒಂದು ಅಲೌಕಿಕ ವೈಶಿಷ್ಟ್ಯವು ಅವರಿಗೆ ಸಂಬಂಧಿಸಲ್ಪಡುವದುಂಟು. ಹೀಗೆಯೇ ಬಸವನ ಸ್ಥಿತಿಯಾಗಿರುತ್ತದೆ. ಅವನ ವಿಷಯವಾಗಿ ಅನೇಕ ದಂತಕಥೆಗಳು ಉತ್ಪನ್ನವಾಗಿವೆ. ಅವನೊಬ್ಬ ಅಲೌಕಿಕ ಪುರುಷನು, ಪಂಚಪರುಷಗಳನ್ನು ಸಾಧಿಸಿ ಪವಾಡಗಳನ್ನು ಮಾಡಿದವನು ಎಂದು ಮೊದಲಾಗಿ ಅನೇಕ ಕಥೆಗಳು ಅವನ ಸಲುವಾಗಿ ಹೇಳಲ್ಪಡುತ್ತವೆ.

ಅವನ ಜನನದ ವಿಷಯವಾಗಿ ಹೇಳಲ್ಪಡುವದೇನಂದರೆ:- ಕೈಲಾಸ ಪರ್ವತದಲ್ಲಿ ಪಂಚಮುಖಶಿವನು ಓಲಗಂಗೊಟ್ಟಿರಲು ನಾರದನು ಅಲ್ಲಿಗೆ ಬರುವನು, ಪೃಥ್ವಿಯಲ್ಲಿ ಶಿವಭಕ್ತಿಯು ಮುಸುಕಿಸಿ ಹೋದದ್ದನ್ನು ಹೇಳುವನು, ಆಗ ಶಿವನು ಜನರನ್ನು ಉದ್ಧಾರ ಮಾಡಲು ನಂದಿಗೆ ಆಜ್ಞಾಪಿಸಲು ಅವನು ಬಾಗೇವಾಡಿಗೆ ಬಂದು ಅವತರಿಸುವನು. ಇಂಥ ಕಥೆಗಳು ನಾಡಿನ ಆಗಿನ ಪರಿಸ್ಥಿತಿಯನ್ನು ಸೂಚಿಸುತ್ತವೆಯೇ ಹೊರ್ತು ಬೇರೊಂದಿಲ್ಲವೆಂದು ನಾವು ತಿಳಿಯಬೇಕು. ಹರಿಹರಕವಿಯಾದರೂ ಇದೇ ಬಗೆಯ ಕಥೆಯನ್ನು ತನ್ನ ಬಸವರಾಜ ರಗಳೆಯಲ್ಲಿ ಹೇಳಿದ್ದಾನೆ. ಆದರೆ ಅವನ ಪ್ರಕಾರ ಕೈಲಾಸದಲ್ಲಿ ವೃಷಭನೆಂಬ ಕಸರಿನ ಗಣೇಶ್ವರನು ಕೆಲವೊಂದು ಪ್ರಮಾದವನ್ನು ಮಾಡಲು ಶಿವನು ಅವನಿಗೆ ಶಾಪ ಕೊಡಲು, ಅವನು ಬಾಗೆವಾಡಿಯಲ್ಲಿ ಬಸವನಾಗಿ ಉದಿಸಿದನೆಂದು ಹೇಳುತ್ತಾನೆ. ಮೊದಲಿನ ಕಥೆಗಿಂತಲೂ ಹರಿಹರನ ಈ ಕಥೆಯಲ್ಲಿ ಅವತಾರ ಹೊಂದಿದ ವೃಷಭಗಣೇಶ್ವರನಲ್ಲಿ ಕೆಲವೊಂದು ಪ್ರಮಾದವು ಆರೋಪಿಸಲ್ಪಟ್ಟಿರು

ತ್ತದೆ. ನಂದೀ ಆಗವು ಎಂಬ ಗ್ರಂಥದಲ್ಲಿ ಬಾಗಿದ ಒಂದು ಹೊಡೆಯಿಂದ ಬಸವನು ಹೊರ ಹೊರಟನೆಂದು ಹೇಳಲ್ಪಡುತ್ತಿದೆ. ಅಂದರೆ ಅವನು ಅಯೋನಿಜನೆಂದು ಹೇಳುವದೇ ಈ ಕಥೆಯನ್ನು ರಚಿಸಿದವನ ಅಭಿಪ್ರಾಯವು. ತೋಂಟದಾರ್ಯನು ಆಕಾಶದಿಂದ ಭೂಮಿಗೆ ಇಳಿದು ಬಂದನೆಂದು ಅವನ ಒಂದು ಚರಿತ್ರೆಯಲ್ಲಿ ಹೇಳಲ್ಪಟ್ಟಿರುತ್ತದೆ. ಅವನು ಸ್ತ್ರೀಯಳಿಂದ ಹುಟ್ಟಿದವನಲ್ಲವಂತೆ! ಹೀಗೆ ನಮ್ಮ ದೇಶದಲ್ಲಿ ಜನರ ಭಾವಿಕತನವು ಅಥವಾ ಮೂಢಭಕ್ತಿಯು ಮಹಾ ಪುರುಷರ ಮಹತ್ವದ ಚರಿತ್ರೆಗಳನ್ನು ಮರೆ ಮಾಜಿರುತ್ತದೆ. ಇದರಿಂದ ಅವರ ಕೃತ್ಯಗಳಿಂದ ನಾವು ಕಲಿಯತಕ್ಕ ಸಂಗತಿಗಳು ನಮಗೆ ತಿಳಿಯದಂತೆ ಆಗಿದೆ. ಇದು ಬಹು ಶೋಚನೀಯವಾದದ್ದು

ಬಸವನ ವಿಷಯವಾಗಿ ದಂತಕಥೆಗಳು ಪಾಲ್ಕುರಿಕೆ ಸೋಮ, ಹರಿಹರದೇವ, ಇಂಥ ಪುರಾತನ ಕವಿಗಳ ಗ್ರಂಥಗಳಲ್ಲಿ ಸಹ ಕಂಡು ಬರುತ್ತವೆ. ಚೌಡದಾನಪುರ ಶಿಲಾಶಾಸನವು ೧೨ ನೇ ಶತಮಾನದ ಆರಂಭದಲ್ಲಿಯದು ಇದ್ದು, ಅದರಲ್ಲಿ ಶಿವನು ನಂದಿಯನ್ನು ಶಿವಮತದ ಉದ್ಧಾರಾರ್ಥವಾಗಿ ಪೃಥ್ವಿಯಲ್ಲಿ ಅವತರಿಸಲು ಆಜ್ಞಾಪಿಸಿದ್ದರ ವರ್ಣನೆ ಇದೆ. ಈ ಸಂಗತಿಗಳ ಮೇಲಿಂದ ಬಸವನ ನೆನಪು ಜನರಲ್ಲಿ ಇನ್ನೂ ಪೂರ್ಣವಾಗಿ ಇರುವಾಗಳೇ ಅವನ ವಿಷಯವಾಗಿ ಇಂಥ ಅಲೌಕಿಕ ಸಂಗತಿಗಳೂ ದಂತಕಥೆಗಳೂ ಪ್ರಚಲಿತವಾಗಿದ್ದದ್ದು ಕಂಡು ಬರುತ್ತದೆ. ಇವು ಅವನ ವಿಷಯವಾಗಿ ಆಗಿನ ಜನರಲ್ಲಿ ಎಂಥ ಭಕ್ತಿ ಭಾವವೂ, ಆದರವೂ ವಾಸಿಸುತ್ತಿದ್ದವೆಂಬುದನ್ನು ತೋರಿಸುತ್ತವೆ. ಈಗಲೂ ಧಾರ್ಮಿಕ ಪುರುಷರು ಇನ್ನೂ ಜೀವಂತ ಇದ್ದಾಗ್ಗೆಯೋ ಅನೇಕ ತರದ ಅದ್ಭುತ ಸಂಗತಿಗಳುಳ್ಳ ಕಥೆಗಳು ಉಂಟಾಗುವದನ್ನು ನಾವು ನೋಡುತ್ತೇವೆ. ಆದರೆ ಇಂಥ ಕಥೆಗಳನ್ನು ಅವಲಂಬಿಸಿ ಬರೆದ ಮಹಾಪುರುಷರ ಚರಿತ್ರೆಗಳು ಜನ ಸಾಮಾನ್ಯಕ್ಕೆ ಮಾರ್ಗದರ್ಶಕವಾಗಲಾರವೆಂದು ನಮಗೆ ತೋರುತ್ತದೆ.

ಆದರೆ ಬಸವನು ತಾನು ಅದ್ಭುತ ಕೃತ್ಯ (ಪವಾಡ)ಗಳನ್ನು ಮಾಡ ಬಲ್ಲವನೆಂದು ತನ್ನ ಉಕ್ತಿಗಳಲ್ಲಿ ಎಲ್ಲಿಯೂ ಹೇಳಿಲ್ಲ. ಅವನು ತಾನೊಬ್ಬ ಸಾಮಾನ್ಯ ವ್ಯಕ್ತಿ, 'ಬಚ್ಚ ಬರಿಯ ಬಸವ'ನೆಂದು ಹೇಳಿಕೊಂಡಿದ್ದಾನೆ. 'ನಾನು ಭಕ್ತಿ ಇಲ್ಲದ ಬಡವ'ನೆಂದು ಹೇಳಿಕೊಳ್ಳುತ್ತಾನೆ. ಪ್ರಮಥರು

ತನ್ನನ್ನು ಹೊಗಳಿ ಹೊಗಳಿ ಏರಿಸಿ ನುಡಿವರೆಂದು ದುಃಖಿಸುತ್ತಾನೆ. ಈ 'ಹೊಗಳಿಕೆಗೆ ಅಡ್ಡಬಾರಾ' ಎಂದು ಪರಮಾತ್ಮನನ್ನು ಬೇಡಿಕೊಳ್ಳುತ್ತಾನೆ. ಒಂದು ಕಡೆಯಲ್ಲಿ ಅವನು 'ನನಗೇನು ಷಟ್‌ಸ್ಥಲಗಳು ತಿಳಿಯವು, ಆದರೆ ಪರಮಾತ್ಮನ ವಿಶ್ವಾಸ ಒಂದಿದ್ದರೆ ಸಾಕು' ಎಂದು ಹೇಳಿಕೊಳ್ಳುತ್ತಾನೆ. ತಾನೊಬ್ಬ ಅವತಾರೀ ಪುರುಷನೆಂದು ಅವನು ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಇದಕ್ಕೆ ಅಪವಾದವಾಗಿ ಅವನದೊಂದು ವಚನವು ಈಗ ಪ್ರಚಲಿತವಿರುವ ಅವನ ವಚನಗ್ರಂಥದ ಆರಂಭದಲ್ಲಿದೆ. ಆದರೆ ಅದು ಅವನದೋ ಹೇಗೆಂಬದರ ವಿಷಯವಾಗಿ ಸಂಶಯವು ಉಂಟಾಗುತ್ತದೆ. ಹೇಗೆ ಜೀಸಸ್ ಕ್ರಾಯಿಸ್ತ, ಮಹಮ್ಮದರು ತಾವು ಜನರ ಉದ್ಧಾರಕ್ಕಾಗಿ ದೇವರಿಂದ ಪ್ರೇಷಿತರಾದವರೆಂದು ಹೇಳಿ ಮತಸ್ಥಾಪನೆ ಮಾಡಿರುವರೋ ಹಾಗೆ ಬಸವನು ತಾನು ಅವತಾರೀ ಪುರುಷನೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಅವನಲ್ಲಿ ಹಾಗೆ ಹೇಳಿಕೊಳ್ಳುವ ವೃತ್ತಿಯೂ, ಒಲವೂ ಕೂಡ ಇರುವದಿಲ್ಲ. ಈ ತರದ ವರ್ತನೆಯು ವಚನಕಾರರ ವಿಚಾರಗಳಿಗೆ ಹೊರತಾದದ್ದು. ಅವರು ಭಕ್ತಿ, ಜ್ಞಾನ, ನೀತಿ, ಸದಾಚಾರ ಇವುಗಳಿಗೆ ಮಹತ್ವವನ್ನು ಕೊಟ್ಟಿದ್ದಾರೆ. ಬಸವನ ರೀತಿಯಾದರೂ ಹೀಗೆಯೇ ಇದೆ ಅವನು ಜನತೆಯಲ್ಲೆಲ್ಲ ನೈತಿಕ, ಬೌದ್ಧಿಕ, ಸಾಮಾಜಿಕ ಉಚ್ಚ ನಡೆಯನ್ನುಂಟು ಮಾಡಲು ಆತುರನಾಗಿದ್ದುದು ಅವನ ಉಕ್ತಿಗಳಿಂದ ತಿಳಿದು ಬರುತ್ತದೆ. ವಚನಕಾರರೆಲ್ಲರೂ ಸಿದ್ಧಿಗಳನ್ನು ಬಹಳ ಹಳಿದಿದ್ದಾರೆ. ಅದರಂತೆಯೇ ಬಸವನು ಆಚರಿಸಿರಲಿಕ್ಕೆ ಬೇಕು. ಇಂಥ ಆಚರಣೆಯಿಂದ ಅವನು ಸಮಾಜದಲ್ಲಿ ಸ್ಥಾಯಿಕ ಕ್ರಾಂತಿಯನ್ನುಂಟು ಮಾಡಲು ಶಕ್ತನಾದನು. ಸಿದ್ಧಿಯ ಪರಿಣಾಮಗಳು ಕ್ಷಣಿಕವಾದವುಗಳು. ಈ ತತ್ವದಂತೆ ನಡೆದ ಮಹಾನುಭಾವನು ಯಾವಾಗಲೂ ಮಾರ್ಗದರ್ಶಕನು. ಈ ದೃಷ್ಟಿಯಿಂದಲೇ ನಾವು ಬಸವನ ಚರಿತ್ರೆಯನ್ನು ಕಂಡುಹಿಡಿಯಬೇಕು.

## ಮಾದಲಾಂಬಿಕೆಯು ನಂದಿವ್ರತವನ್ನು ಆಚರಿಸಿದಳೇ ಹೇಗೆ?

ಬಸವನ ಜನನದ ವಿಷಯವಾಗಿ ಒಂದು ಕಥೆಯು ಯಾವಾಗಲೂ ಹೇಳಲ್ಪಡುವದುಂಟು. ಅದೇನಂದರೆ, ಮಾದಲಾಂಬಿಕೆಗೆ ಮಕ್ಕಳಿದ್ದಿಲ್ಲ. ಆದ್ದರಿಂದ ಅವಳು ಬಾಗೇವಾಡಿಯಲ್ಲಿದ್ದ ಶಿವಾಲಯದಲ್ಲಿಯ ನಂದಿ

ಯನ್ನು ಕುರಿತು ನಂದೀವ್ರತವನ್ನು ಆಚರಿಸಿದಳು. ಇದಕ್ಕೆ ಫಲವಾಗಿ ಅವಳು ಬಸವನನ್ನು ಹೆತ್ತಳು. ಹೀಗೆ ಬಸವ ಪುರಾಣವನ್ನು ಬರೆದ ಭೀಮಕವಿಯು ಹೇಳುತ್ತಾನೆ. ಸಿಂಗಿರಾಜ ಪುರಾಣದಲ್ಲಿಯೂ ಅವಳು ೩ ವರ್ಷ ನಂದೀವ್ರತವನ್ನು ಪಾಲಿಸಿದಳೆಂದು ಹೇಳಿದೆ. ಆದರೆ ಇದು ನಿಜವಲ್ಲವೆಂದು ನಮಗೆ ತೋರುತ್ತದೆ. ಕೈಲಾಸದಲ್ಲಿ ನಡೆದ ಸಂದರ್ಭಕ್ಕೆ ಅನುಸರಿಸಿ ನಂದಿಯು ಪೃಥ್ವಿಯಲ್ಲಿ ಅವತರಿಸಿದನೆಂದು ಹೇಳುವದಕ್ಕೋಸ್ಕರ ಈ ತೆರದ ಕಥೆಯು ಹಿಂದುಗಡೆ ಹುಟ್ಟಿರಲಿಕ್ಕೆಬೇಕು. ಯಾಕಂದರೆ ಬಸವನು ಹುಟ್ಟಿದಾಗ ಮಾದಲಾಂಬಿಕೆಗೆ ಮಕ್ಕಳಿದ್ದಿಲ್ಲೆಂಬ ಸಂಗತಿಯು ನಿಜವಾದುದಲ್ಲ. ಅರ್ಜುನವಾಡ ಶಿಲಾಶಾಸನದಿಂದ ಅವಳಿಗೆ ದೇವರಾಜನೆಂಬ ಕುಮಾರನು ಬಸವನಕಿಂತಲೂ ಮೊದಲೇ ಜನಿಸಿದ್ದನೆಂದು ಸಿದ್ಧವಾಗುತ್ತದೆ. ಆದ್ದರಿಂದ ಅವಳು ನಂದೀವ್ರತವನ್ನು ಆಚರಿಸುವ ಸಂಭವವಿಲ್ಲ. ಈ ದೇವರಾಜನು ಮುಂದೆ ಪ್ರಸಿದ್ಧನಾಗಿ 'ಮುನಿಪ' ಎಂಬ ಬಿರುದನ್ನು ಹೊಂದಿದನು. ಇದರಿಂದ ಅವನು ಯೋಗ್ಯತೆಯನ್ನು ಪಡೆದವನಾಗಿದ್ದನೆಂದು ತೋರುತ್ತದೆ. ಮುಂದೆ ಅವನು ಲಗ್ನವಾಗಿ ಅವನಿಂದ ಹುಟ್ಟಿದ ಮಕ್ಕಳೂ ಮೊಮ್ಮಕ್ಕಳೂ ಸಹ ಸಮಾಜದಲ್ಲಿ ಪ್ರಸಿದ್ಧರಾದರು ಆದ್ದರಿಂದ ಮಾದಲಾಂಬಿಕೆಯು ನಂದೀವ್ರತವನ್ನು ಆಚರಿಸಿದ್ದೂ ಅದರ ಪರಿಣಾಮವಾಗಿ ಬಸವನು ಜನಿಸಿದ್ದೂ ಭಾವಿಕ ಜನರಿಗೋಸ್ಕರ ಕಲ್ಪಿಸಿದ ಕಟ್ಟುಕಥೆ ಎಂದು ನಮಗೆ ತೋರುತ್ತದೆ.

ಭೀಮಕವಿಯು ಮಾದಲಾಂಬೆಯು ೩ ವರ್ಷ ಗರ್ಭಧಾರಣ ಮಾಡಿದ್ದಳೆಂದು ತನ್ನ ಕಾವ್ಯದಲ್ಲಿ ಹೇಳುತ್ತಾನೆ. ಬಸವನ ಜನನ ವಿಷಯವಾಗಿ ಹುಟ್ಟಿದ್ದ ಇನ್ನೊಂದು ಅಲೌಕಿಕ ಸಂಗತಿ ಇದು. ಆದರೆ ಹರಿಹರನು ಹಾಗೆ ಹೇಳಿಲ್ಲ. ಅವನ ಪ್ರಕಾರ ಅವಳು ಎಲ್ಲ ಹೆಂಗಳೆಯರಂತೆಯೇ ಬಸವನನ್ನು ಹೆತ್ತಿದ್ದಾಳೆ. ಇದಾದರೂ ಬಸವನು ಅಲೌಕಿಕ ರೀತಿಯಿಂದ ಜನಿಸಿದನೆಂದು ಹೇಳುವ ಉದ್ದಿಶ್ಯವಾಗಿ ಕಲ್ಪಿಸಿದ ಕಥೆ ಎಂದು ನಮಗೆ ತೋರುತ್ತದೆ.

### ಬಸವನ ಜೀವಿತದ ಕಾಲ.

(ಕ್ರಿ. ಶ. ೧೧೩೨ ರಿಂದ ೧೧೬೮ ರ ವರೆಗೆ.)

ಬಸವನು ಯಾವ ವರ್ಷ ಹುಟ್ಟಿದನು, ಎಷ್ಟು ವರ್ಷ ಜೀವಿಸಿದನು, ಮತ್ತು ಯಾವ ವರ್ಷ ಗತಿಸಿದನು, ಎಂಬುದನ್ನು ನಿಶ್ಚಯಿಸು

ವದು ಅವಶ್ಯವು. ಈ ವಿಷಯವು ಶಿವಾನುಭವದ ಸಂಪುಟ ೧ ಸಂಚಿಕೆ ೨ ಪುಟ ೯, ಸಂಪುಟ ೧ ಸಂಚಿಕೆ ೩ ಪುಟ ೨೫ ಮತ್ತು ಸಂಪುಟ ೨ ಸಂಚಿಕೆ ೫ ಪುಟ ೬೧ ಇದರಲ್ಲಿಯ ಲೇಖಗಳಲ್ಲಿ ಸವಿಸ್ತಾರವಾಗಿ ವಿವೇಚಿಸಲ್ಪಟ್ಟಿರುತ್ತದೆ. ಬೇರೆ ಬೇರೆ ಪುರಾತನ ಗ್ರಂಥಗಳಲ್ಲಿ ದೊರೆಯುವ ಬೇರೆ ಬೇರೆ ಸಂವತ್ಸರಗಳು, ಲಕ್ಕಣ್ಣ ದಂಡೇಶನ ಸಂವತ್ಸರ, ಜೈನ ಗ್ರಂಥಕಾರರ ಅಭಿಪ್ರಾಯ ಇವುಗಳೆಲ್ಲವೂ ಈ ಲೇಖಗಳಲ್ಲಿ ಚರ್ಚಿಸಲ್ಪಟ್ಟಿವೆ. ಜೈನ ಗ್ರಂಥಕಾರನ ಅಭಿಪ್ರಾಯವನ್ನು ಸಮರ್ಥಿಸಿ ನಾವು ಬರೆದ ಒಂದು ಲೇಖವೂ ಕೂಡ ಅವುಗಳಲ್ಲಿ ಇದೆ. ಬಿಜ್ಜಳನು ರಾಜ್ಯಪರಿತ್ಯಾಗ ಮಾಡಿದ ಬಳಿಕ ಬಸವನು ೧೨ ವರ್ಷ ಜೀವಿಸಿದ್ದನೆಂದು ಬಿಜ್ಜಣರಾಯ ಪುರಾಣದಲ್ಲಿ ಹೇಳಿದೆ. ಆದರೆ ಅಂತ್ಯದಲ್ಲಿ ವೀರಶೈವರಲ್ಲಿರುವ ಐತಿಹ್ಯಗಳೇ ಎಲ್ಲವುಗಳಿಗಿಂತ ಹೆಚ್ಚಿಗೆ ಸಂಭವನೀಯವೆಂದು ನಮಗೆ ತೋರುತ್ತವೆ. ಅವುಗಳ ಆಧಾರದ ಮೇಲೆ ಬಸವನು ೧೧೩೨ ರಿಂದ ೧೧೬೮ ರ ವರೆಗೆ ಜೀವಿಸಿದ್ದನೆಂದು ನಾವು ಭಾವಿಸಬೇಕಾಗುತ್ತದೆ.

ಬಿಜ್ಜಳನು ರಾಜ್ಯಪರಿತ್ಯಾಗ ಮಾಡದೆ ಘಾತಿಸಲ್ಪಟ್ಟದ್ದೇ ನಿಜವೆಂದು ನಮಗೆ ತೋರುತ್ತದೆ. ಇದು ಬಸವನು ಕಲ್ಯಾಣವನ್ನು ಬಿಟ್ಟು ಕಪ್ಪಡಿಗೆ ಹೋದ ಬಳಿಕ ಮೂರುವರೆ ತಿಂಗಳ ಮೇಲೆ ಸಂಭವಿಸಿತು. ಆದ್ದರಿಂದ ಬಿಜ್ಜಳನು ಮತ್ತು ಬಸವನು ಮರಣಹೊಂದಿದ್ದು ಒಂದೇ ವರ್ಷದಲ್ಲಿ. ಬಿಜ್ಜಳನ ಶಿಲಾಶಾಸನಗಳು ೧೧೬೮ ರ ವರೆಗೆ ಮಾತ್ರ ದೊರೆಯುತ್ತವೆ. ಮುಂದೆ ದೊರೆಯುವದಿಲ್ಲ. ಆದ್ದರಿಂದ ೧೧೬೮ ರಲ್ಲಿ ಬಸವನು ಮರಣಹೊಂದಿರಬೇಕು. ಅವನು ದೇಹವಿಟ್ಟದ್ದು ಅವನ ವಯಸ್ಸಿನ ೩೬ ನೇ ವರ್ಷದಲ್ಲಿ. ಈ ವಿಷಯವಾಗಿ ವೀರಶೈವ ಗ್ರಂಥಗಳಲ್ಲೆಲ್ಲಾ ಐಕ್ಯಮತ್ಯವಿದೆ. ಆದ್ದರಿಂದ ನಿಶ್ಚಿತ ಆಧಾರಗಳು ದೊರೆಯದ ಹೊರ್ತು ಈ ಸಂಗತಿಯನ್ನು ನಾವು ನಂಬಬೇಕು. ಆದ್ದರಿಂದ ಬಸವನು ಹುಟ್ಟಿದ್ದು ೧೧೩೨ ಆಗುತ್ತದೆ. ಹೀಗೆ ಬಸವನ ಜೀವಿತದ ಕಾಲವು ೧೧೩೨ ರಿಂದ ೧೧೬೮ ರ ವರೆಗೆ ಎಂದು ನಾವು ತಿಳಿಯಬೇಕಾಗುತ್ತದೆ.

ಬಸವನು ಹುಟ್ಟಿದ ಸಂವತ್ಸರಗಳು ೬ ಗ್ರಂಥಗಳಲ್ಲಿ ಆರುತರಹವಾಗಿ ಬೇರೆ ಬೇರೆಯಾಗಿ ಹೇಳಲ್ಪಡುತ್ತವೆ. ಅವುಗಳನ್ನು ಶಿವಾನುಭವ ಸಂಪುಟ ೧ ಸಂಚಿಕೆ ೨ ಪುಟ ೯ ಇದರಲ್ಲಿ ವಾಚಕರು ನೋಡಬೇಕು. ಆದರೆ ಅವುಗಳಲ್ಲಿ ಲಕ್ಕಣ್ಣದಂಡೇಶನು ಹೇಳಿದ ಶಕೆಯು

ಮಾತ್ರ ವಿಚಾರಾರ್ಹವಾಗಿದೆ. ಅದನ್ನೊಂದು ನಾವು ಇಲ್ಲಿ ಉಲ್ಲೇಖಿಸುವದು ಅವಶ್ಯವು. ಅವನ ಅಭಿಪ್ರಾಯದಂತೆ ಬಸವನು ಹುಟ್ಟಿದ್ದು ಸಿದ್ಧಾರ್ಥಿಸಂವತ್ಸರದ ಕಾರ್ತಿಕ ಶುದ್ಧ ೧೫ ಸೋಮವಾರ ಮಧ್ಯರಾತ್ರಿ ಎಂದು ಇರುತ್ತದೆ. ಸಿದ್ಧಾರ್ಥಿಸಂವತ್ಸರವು ಕ್ರಿಸ್ತಶಕ ೧೧೩೯ ರಲ್ಲಿ ಬೀಳುವದರಿಂದ ಬಸವನು ಮರಣಹೊಂದಿದಾಗ ಅಂದರೆ ೧೧೬೭ ರಲ್ಲಿ ಅವನ ವಯಸ್ಸು ೨೮ ಆಗುತ್ತದೆ. ಬಸವನ ಜೀವಿತದಲ್ಲಿ ಒದಗಿದ ವಿಶೇಷ ಸ ಗತಿಗಳನ್ನು ನಾವು ನಿರೀಕ್ಷಿಸಿದಲ್ಲಿ ಈ ಸಂವತ್ಸರವಾದರೂ ಸಂಭನೀಯವಾಗಿರುತ್ತದೆ. ಆದರೂ ಇದಕ್ಕಿಂತ ೩೬ ವರ್ಷವು ಹೆಚ್ಚಿಗೆ ಮೇಳಬೀಳುತ್ತವೆ. ಇದನ್ನು ಮುಂದೆ ವಿಸ್ತರಿಸುವೆವು. ಲಕ್ಕಣ್ಣಾದಂಡೇಶನು ಇದ್ದುದು ೧೫ನೇ ಶತಮಾನದ ಪೂರ್ವಾರ್ಧದಲ್ಲಿ. ಅಂದರೆ ಬಸವನ ತರುವಾಯ ೩೦೦ ವರ್ಷಗಳಾದ ಮೇಲೆ. ಇವನು ಆವ ಆಧಾರವನ್ನಿಟ್ಟುಕೊಂಡು ಈ ಸಂವತ್ಸರವನ್ನು ಬರೆದನೆಂಬುದು ನಿಶ್ಚಿತವಾಗಿ ತಿಳಿಯುವವರೆಗೆ ಬಸವನು ಜೀವಿಸಿದ್ದು ೩೬ ವರ್ಷವೆಂದು ನಾವು ಭಾವಿಸಿ ಅವನು ೧೧೩೨ ರಿಂದ ೧೧೬೭ ರ ವರೆಗೆ ಇದ್ದನೆಂದು ತಿಳಿದಲ್ಲಿ ಅದು ಹೆಚ್ಚಿಗೆ ವಿಶ್ವಾಸಾರ್ಹವೆಂದು ನಮಗೆ ತೋರುತ್ತದೆ.

## ಬಸವನೆಂಬ ಹೆಸರು.

'ಬಸವ' ಎಂಬ ಹೆಸರು ೧೧ನೇ ೧೨ನೇ ಶತಮಾನಗಳಲ್ಲಿ ನಮ್ಮ ನಾಡಿನಲ್ಲಿ ವಾಡಿಕೆಯಾಗಿತ್ತೆಂದು ತೋರುತ್ತದೆ. ಈ ಹೆಸರುಳ್ಳ ದಂಡನಾಯಕರು ಕೆಲವು ಶಿಲಾಶಾಸನಗಳಲ್ಲಿ ಉಲ್ಲೇಖಿಸಲ್ಪಟ್ಟಿದ್ದಾರೆ. ಆ ಶಿಲಾಶಾಸನಗಳ ವಿವರಗಳು **ಶಿವಾನುಭವ** ಸಂಪುಟ **೫** ಸಂಚಿಕೆ ೩೫೦ ಪುಟ ಇದನ್ನು ವಾಚಕರು ನೋಡಬೇಕು. ಈ ಹೆಸರು ಬಸವನಿಗೋಸ್ಕರ ಬುಧ್ಯಾ ಕೆಲವೊಂದು ಉದ್ದೇಶದಿಂದ ಇಡಲ್ಪಟ್ಟಿಲ್ಲೆಂದು ತೋರಿಸುವದೇ ಅದನ್ನು ನಾವು ಇಲ್ಲಿ ಉಲ್ಲೇಖಿಸುವದರ ಉದ್ದೇಶವಾಗಿದೆ.

ಮುಂದುವರಿಯುವದು.

---

# ಶಿರಿಯಾಳಶೆಟ್ಟಿ.

( ಲೇಖಕ:- ರಾ|| ಬ|| ಫ. ಗು. ಹಳಕಟ್ಟಿ ಬಿ. ಎ, ಎಲ್, ಎಲ್. ಬಿ. )

ವೀರಶೈವರಲ್ಲಿ ಆಗಿ ಹೋದ ಮಹಾಪುರುಷರಲ್ಲಿ ನಾವು ಸಿರಿಯಾಳ ಶೆಟ್ಟಿಯನ್ನು ಗಣಿಸಬಹುದು. ಇವನು ಪೌರಾಣಿಕ ಪುರುಷನಲ್ಲ. ಅವನು ಐತಿಹಾಸಿಕ ಪುರುಷನಾಗಿದ್ದಾನೆ. ಅವನ ದಿನವು ಮಹಾರಾಷ್ಟ್ರ, ಕೊಂಕಣ ವರ್ಹಾಡಗಳಲ್ಲೆಲ್ಲ ಸಾರ್ವತ್ರಿಕವಾಗಿ ಆಚರಿಸಲ್ಪಡುತ್ತದೆ. ಕರ್ನಾಟಕ ದಲ್ಲಿ ಮಹಾರಾಷ್ಟ್ರದ ಮೇರೆಯಲ್ಲಿದ್ದ ಭಾಗಗಳಲ್ಲಿ ಮಾತ್ರ ಆಚರಿಸ ಲ್ಪಡುತ್ತದೆ. ಆದರೆ ಉಳಿದ ಜಿಲ್ಲೆಗಳಲ್ಲಿ ಮತ್ತು ಮೈಸೂರ ಪ್ರಾಂತದಲ್ಲಿ ಇದರ ಪರಿಚಯವು ಸಹ ಇರುವದಿಲ್ಲ. ಈ ದಿನವು ಪ್ರತಿವರ್ಷ ಶ್ರಾವಣ ಶುದ್ಧ ಷಷ್ಠಿಯ ದಿವಸ ನೆರವೇರಿಸಲ್ಪಡುತ್ತದೆ.

ಕ್ರಿ. ಶ. ೧೩೯೬ ಇಸ್ವಿಯ ಸುಮಾರಕ್ಕೆ ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕದಲ್ಲೆಲ್ಲ ಅತ್ಯುಗ್ರವಾದ ಕ್ಷಾಮಕಾಲವು ಒದಗಿತು. ಅದು ಒಂದೇ ಸವನೆ ೧೨ ವರ್ಷ ನಡೆಯಿತು. ಈ ಅವಧಿಯಲ್ಲಿ ಮಳೆಯು ಸ್ವಲ್ಪಾದರೂ ಬೀಳಲಿಲ್ಲ. ಇದರಿಂದ ಜನರು ಅಪರಮಿತವಾಗಿ ನಾಶ ಹೊಂದಿದರು. ತಲೆ ಡವಿಗೆಗಳು ದೇಶದಲ್ಲೆಲ್ಲ ಉರುಳಾಡುತ್ತಿದ್ದವು. ಗ್ರಾಮಗಳು ನಿರ್ಜನವಾ ದವು. ದನಕರುಗಳು ಮೇವಿಲ್ಲದೆ ಸತ್ತು ಹೋದವು. ಈ ಕ್ಷಾಮಕ್ಕೆ "ದುರ್ಗಾ ದೇವಿಯ ಬರ" ಎಂಬ ಹೆಸರಿದೆ. ಈ ಕಾಲದಲ್ಲಿ ಶಿರಿಯಾಳಶೆಟ್ಟಿಯು ಪ್ರಸಿ ದ್ಧಿಗೆ ಬಂದನು.

ಶಿರಿಯಾಳಶೆಟ್ಟಿಯು ವೀರಶೈವ ವ್ಯಾಪಾರಸ್ಥನು. ಅವನು ಈ ಕಾಲ ದಲ್ಲಿ ಸಾವಿರಾರು ಎತ್ತುಗಳನ್ನಿಟ್ಟು ದೂರ ದೂರ ದೇಶಗಳಿಗೆ ಕಳಿಸಿ ಧಾನ್ಯ ವನ್ನು ತಂದು ಜನರಲ್ಲಿ ಪುಕ್ಕಟೆಯಾಗಿ ಹಂಚಿದನು. ಇದರಿಂದ ಬಹು ಜನರು ಬದುಕಿದರು. ಅವನ ಕೀರ್ತಿಯು ದೇಶದಲ್ಲೆಲ್ಲ ವ್ಯಾಪಿಸಿತು.

ಈ ಕಾಲಕ್ಕೆ ಬಹಾಮನಿ ಬಾದಶಹನು ಈ ಭಾಗವನ್ನು ಆಳುತ್ತಿ ದ್ದನು. ಅವನು ಕಲಬುರ್ಗಿಯನ್ನು ಬಿಟ್ಟು ಬೀದರವನ್ನು ತನ್ನ ರಾಜಧಾ ನಿಯನ್ನಾಗಿ ಮಾಡಿಕೊಂಡಿದ್ದನು. ಇವನು ಬಹುಶಃ ಅಹಮ್ಮದಶಹನಿ ರಬಹುದು. ಅವನು ಶೂರನೂ ದಯಾವಂತನೂ ಆಗಿದ್ದನು. ಆದರೆ ಬಹಾ

ಮನಿ ಬಾದಶಹರಲ್ಲಿ ಬಹು ಜನರು ಬಹುಶಃ ಧರ್ಮಾಂಧರು. ಅವರು ವಿಜಯನಗರದ ರಾಜರೊಡನೆ ಯಾವಾಗಲೂ ಯುದ್ಧದಲ್ಲಿ ತೊಡಗಿರುತ್ತಿದ್ದರು. ಅವರು ಮಹತ್ವದ ಹಿಂದೂ ದೇವಾಲಯಗಳಿಗೆ ಇದ್ದ ಅಸಂಖ್ಯ ಉಂಬಳಿಗಳನ್ನು ಕಸೆದುಕೊಂಡಿದ್ದರು. ಆದರೆ ಅಹಮ್ಮದಶಹನು ಮಾತ್ರ ಬಹು ಮಟ್ಟಿಗೆ ಸಮತಾಭಾವವುಳ್ಳವನಾಗಿದ್ದನು. ಅವನು ಶಿರಿಯಾಳಶೆಟ್ಟಿಯು ಮಾಡಿದ ದಾನಧರ್ಮದ ಕಾರ್ಯಗಳನ್ನು ತಿಳಿದು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡನು. ಆಗ ಅವನು ಅವನಿಗೆ "ನಿನಗೆ ಏನು ಬೇಕು, ಅದನ್ನು ಬೇಡು" ಎಂದೆನ್ನಲು ಅವನು ತನ್ನ ಸಲುವಾಗಿ ಯಾವ ಗ್ರಾಮ, ಸೀಮೆ ಅಥವಾ ಜಹಾಗೀರುಗಳನ್ನು ಬೇಡದೆ ಬರೇ ಮೂರುವರೆ ಗಳಿಗೆ ನಿನ್ನ ಸಿಂಹಾಸನವನ್ನು ಏರುವ ಅಧಿಕಾರವನ್ನೂ ನಿನ್ನ ಮುದ್ರೆಯನ್ನೂ ನನಗೆ ಕೊಡಬೇಕು ಎಂದು ಬೇಡಿಕೊಂಡನು. ಅದನ್ನು ಕೇಳಿ ಬಾದಶಹನಿಗೆ ಅರಿದಾಯಿತು. ಆದರೆ ಅವನು ತಾನು ಕೊಟ್ಟ ವಚನದಂತೆ ತನ್ನ ಗದ್ದುಗೆಯಿಂದ ಇಳಿದು ಸಿರಿಯಾಳ ಶೆಟ್ಟಿಯನ್ನು ಅದರ ಮೇಲೆ ಕುಳ್ಳಿರಿಸಿದನು ಮತ್ತು ತನ್ನ ಮುದ್ರೆಯ ಉಂಗುರವನ್ನೂ ಅವನ ಕಯ್ಯಲ್ಲಿತ್ತನು ! ಆಗ ಸಿರಿಯಾಳನು ಬಾದಶಹನಿಗೆ ನಾನು ಈ ಮೂರುವರೆ ಗಳಿಗೆಯಲ್ಲಿ ಮಾಡಿದ್ದನ್ನು ನೀನು ಒಪ್ಪಿಕೊಂಡು ಅದನ್ನು ನಡಿಸಬೇಕೆಂದು ಕೇಳಿಕೊಂಡನು. ಅದಕ್ಕೆ ಬಾದಶಹನೂ ಒಪ್ಪಿಗೆ ಕೊಟ್ಟನು.

ಆಗ ಸಿರಿಯಾಳ ಶೆಟ್ಟಿಯು ಬಹಾಮನಿ ಬಾದಶಹರು ಆ ವರೆಗೆ ಯಾವ ಯಾವ ದೇವಸ್ಥಾನಗಳ ಆಸ್ತಿಗಳನ್ನು ಸರಕಾರವಶ ಮಾಡಿಕೊಂಡಿದ್ದರೋ ಅವುಗಳನ್ನೆಲ್ಲವನ್ನು ಅವನು ತಿರುಗಿ ಅವರವರಿಗೆ ದಾನಕೊಟ್ಟನು. ಮತ್ತು ಹೊಸದಾಗಿ ಅನೇಕ ದೇವಸ್ಥಾನಗಳಿಗೆ ಉಂಬಳಿ ಹಾಕಿಕೊಟ್ಟನು. ಹೀಗೆ ಮೂರುವರೆ ಗಳಿಗೆಯ ವರೆಗೆ ನಡೆಯಿಸಿ ವೇಳೆಯು ಮುಗಿದ ಕೂಡಲೆ ಗದ್ದುಗೆಯಿಂದ ಕೆಳಗಿಳಿದು ಬಾದಶಹನ ಮುದ್ರೆಯನ್ನು ಅವನ ಮುಂದೆ ಇಟ್ಟು ಅವನೆದುರಿಗೆ ಕೈಮುಗಿದು ನಿಂತುಕೊಂಡನು. ಹೀಗೆ ಶಿರಿಯಾಳ ಶೆಟ್ಟಿಯು ದೇವಸ್ಥಾನಗಳಿಗೆ ದಾನಕೊಟ್ಟನೇ ಹೊರ್ತು ತನ್ನ ಸಲುವಾಗಿ ಏನನ್ನೂ ಇಟ್ಟುಕೊಳ್ಳಲಿಲ್ಲ. ಅವನ ಈ ಧಾರ್ಮಿಕ ಬುದ್ಧಿಯನ್ನು ಬಾದಶಹನು ಕಂಡು ಆಶ್ಚರ್ಯಚಕಿತನಾದನು. ಅವನಾದರೂ ತಾನು ವಚನ ಕೊಟ್ಟಂತೆ ಶಿರಿಯಾಳಶೆಟ್ಟಿಯು ದಾನ ಧರ್ಮಗಳಿಗೆ ಒಪ್ಪಿಗೆ ಕೊಟ್ಟು ಅವುಗಳನ್ನು ನಡಿಸಿದನು. ಇದು ಕಾಲ್ಪನಿಕ ಕಥೆಯಲ್ಲ, ಇದು ನಿಜ

ವಾಗಿ ಘಟಿಸಿದ ಸಂಗತಿ ಎಂದು ಮಹಾರಾಷ್ಟ್ರದಲ್ಲಿಯ ಇತಿಹಾಸ ಸಂಶೋಧಕರು ಒಪ್ಪಿಕೊಂಡಿದ್ದಾರೆ.

ಬಾದಶಹನು ಮುಂದೆ ಶಿರಿಯಾಳಶೆಟ್ಟಿಗೆ ಪ್ರೀತನಾಗಿ ಅವನ ಮಗನಿಗೆ ಸರದಾರನ ಅಧಿಕಾರವನ್ನು ತನ್ನ ಸೈನ್ಯದಲ್ಲಿ ಕೊಟ್ಟನು. ಇವನ ಹೆಸರು 'ನಾಮಶೆಟ್ಟಿ' ಎಂದಿದೆ. ನಾಮಶೆಟ್ಟಿಯು ಸಾತಾರೆಯ ಜಿಲ್ಲೆಯಲ್ಲಿ ಆಗ ಉಂಟಾದ ಒಂದು ಬಂಡನ್ನು ಮುರಿಯಲಿಕ್ಕೆ ಬಾದಶಹನಿಂದ ಕಳುಹಿಸಲ್ಪಟ್ಟನು. ಅವನ ಸೈನ್ಯವು ವರಕುಟಿ ಎಂಬ ಗ್ರಾಮದ ಬಳಿಯಲ್ಲಿದ್ದಿತು. ಅವನು ಅಲ್ಲಿ ಕೆಲವು ದಿವಸ ತಳುವಬೇಕಾದ್ದರಿಂದ ಈಗ್ರಾಮಕ್ಕೆ "ನಾಮಶೆಟ್ಟಿ ವರಕುಟಿ" ಎಂಬ ಹೆಸರು ಬಂದಿರುತ್ತದೆ. ಇದು ಸಾತಾರಾ ಜಿಲ್ಲೆಯಲ್ಲಿ ಈಗಲೂ ಇದೆ. ಮಹಾರಾಷ್ಟ್ರದಲ್ಲಿ ಬಹು ಜನರಿಗೆ ಇದರ ಇತಿಹಾಸವು ಗೊತ್ತಿರದ್ದರಿಂದ "ಮೂರುವರೆ ಗಳಿಗೆಯ ರಾಜ್ಯ" ಎಂಬ ಗಾದೆಯ ಮಾತು ಮರಾಠಿಯಲ್ಲಿ ಬಂದಿದೆ. ಇದರ ಅರ್ಥವು ಕ್ಷಣಿಕ ಕಾಲ ದೊರೆದ ಅಧಿಕಾರ ಎಂದಿರುತ್ತದೆ.

ಶಿರಿಯಾಳಸೆಟ್ಟಿಯ ದಿನದ ಉತ್ಸವಕಾಲದಲ್ಲಿ ಒಂದು ಮಣ್ಣಿನ ದೊಡ್ಡ ಪುರುಷಾಕೃತಿಯನ್ನು ಮಾಡುತ್ತಾರೆ. ಮೂರ್ತಿಯ ಕೊರಳಲ್ಲಿ ವೀರಶೈವರ ಪದ್ಧತಿಯ ಪ್ರಕಾರ ಲಿಂಗಧಾರಣ ಮಾಡುತ್ತಾರೆ. ಇದನ್ನು ಕುಂಬಾರರಿಂದ ತಯಾರಿಸಿ ಮಧ್ಯಾನ್ಹ ೨ ಗಂಟೆಗೆ ಮನೆಯಲ್ಲಿ ಪ್ರತಿಷ್ಠಾಪನೆ ಮಾಡುತ್ತಾರೆ. ಆ ದಿನ ಬಾಂಧವರಿಗೆ ಮಿತ್ರರಿಗೆ ಊಟಕ್ಕೆ ಹೇಳುತ್ತಾರೆ. ಸಾಯಂಕಾಲದಲ್ಲಿ ಮೂರ್ತಿಯ ಸುತ್ತಲೂ ಸಣ್ಣ ದೊಡ್ಡವರು ಶಿರಿಯಾಳಶೆಟ್ಟಿಗೆ ಸಂಬಂಧಿಸಿದ ಪದಗಳನ್ನು ಅನ್ನುತ್ತ ಪ್ರದಕ್ಷಿಣವನ್ನು ಹಾಕುವರು. ಅವುಗಳಲ್ಲಿ ಶಿರಿಯಾಳನ ದಾನ ಗುಣ, ಔದಾರ್ಯ, ಧರ್ಮಶ್ರದ್ಧೆ, ಅವನು ಮೂರುವರೆ ಗಳಿಗೆ ರಾಜ್ಯ ಮಾಡಿದ್ದು, ಈ ವಿಷಯಗಳೇ ಇರುತ್ತವೆ. ಆಗ ನೆರೆದ ಜನರು ವಾದ್ಯಗಳನ್ನು ಬಾರಿಸುತ್ತ ಮೂರ್ತಿಯ ಸುತ್ತಲೂ ಕುಣಿಯುತ್ತ ಅದನ್ನು ಮನೆಯ ಹೊರಗೆ ತಂದು ಅಂಗಳದಲ್ಲಿಡುವರು. ಅಲ್ಲಿ ಮೂರುವರೆ ಗಳಿಗೆ ಇಟ್ಟು ಹೊರಗೆ ಒಯ್ದು ತಾಬೂತದಂತೆ ಮೆರೆಯಿಸಿ ಗ್ರಾಮದ ಹೊರಗೆ ತೆಗೆದುಕೊಂಡು ಹೋಗಿ ವಿಸರ್ಜನ ಮಾಡುವರು. ಈ ಪದ್ಧತಿಯು ಮಹಾರಾಷ್ಟ್ರದಲ್ಲೆಲ್ಲ ಪ್ರತಿವರ್ಷ ನಡೆಯುತ್ತದೆ. ಈ ಉತ್ಸವವು ತಮ್ಮ ಗ್ರಾಮಕ್ಕೆ ಶುಭದಾಯಕವೆಂದು ಅಲ್ಲಿಯವರು ತಿಳಿಯುತ್ತಾರೆ.

ರಿಯು ಕಟ್ಟೆಯನ್ನು ಏರಿಸಬೇಕಾಯಿತು. ಆತನ ಸರ್ವಸ್ವವೂ ನಾಶವಾಗುವ ಪ್ರಸಂಗ ಬಂದಿತು. ಆಗ್ಗೆ ಅವನು ನ್ಯಾಯಾಧಿಕಾರಿಗೆ ಖಾಸಗಿ ರೀತಿಯಿಂದ ಘಿಡೆ ಖರ್ಚು ಮಾಡಿದರೂ ನಡೆಯದಾಯಿತು. ದುಡ್ಡು ಸುರುವಿ ಉಳಿದ-ಕೊಳ್ಳುವದಂತೂ ದೂರೇ ಇತ್ತು. ಯಾಕಂದರೆ ನ್ಯಾಯಾಧೀಶರು ಪ್ರಾಮಾಣಿಕರೂ ಘಿಡೆಗೆ ಒಳಗಾಗದವರೂ ಇದ್ದರು. ಆಗ್ಗೆ ಆ ಹಳ್ಳಿಯ ಸಭ್ಯಗೃಹಸ್ಥರು ನ್ಯಾಯಾಧಿಕಾರಿಯ ಮನೆಗೆ ಹೋಗಿ ಅಂತರಂಗದಲ್ಲಿ ಅಡ್ಡಬಿದ್ದು ಅವರ ಕಾಲುಗಳನ್ನು ಗಟ್ಟಿಯಾಗಿ ಹಿಡಿದನು. ಮತ್ತು ನಿಜಸ್ಥಿತಿಯನ್ನು ಅಧಿಕಾರಿಗೆ ಹೇಳಿಕೊಂಡನು. ಆಗ ಸ್ವಾಭಾವಿಕವಾಗಿ ಅಧಿಕಾರಿಯ ಕರುಳು ಕರಗಿದುದರಿಂದ ಕರುಣ ಜಲವೂ ತಾನೂ ಮಣಿದುದರಿಂದ ವಿನಯಜಲವೂ ತನ್ನಂತೆ ಪರರು ಎಂಬ ಭಾವನೆಯಾದುದರಿಂದ ಸಮತೆಜಲವೂ ಉಕ್ಕಿ ಸಭ್ಯಗೃಹಸ್ಥನ ಶಿರದ ಮೇಲೆ ಅಭಯ ಹಸ್ತವನ್ನಿಟ್ಟನು. ಅದರಂತೆ ನ್ಯಾಯಾಸನದಲ್ಲಿ ಆ ಹಳ್ಳಿಯ ದೊಡ್ಡ ಮನುಷ್ಯನ ಮರ್ಯಾದೆಯನ್ನುಳಿಸಿದನು.

ವಚನ— ನಡೆವವರ (ಅರಸರ) ಅಡಿವಿಡಿದು ಕಡುಜಾಣರೆಂದೆನಿಸಿ ನಡೆವವರೇ ಶಾವಾಗಿ ಸಡಗರದಿ ಮೆರೆವ ಬೆಡಗಿನವರನು ನೋಡದ ಮರಾರು ಸಿದ್ಧೇಶ್ವರಾ ॥

ಹಿರಿಯರ ಅಡಿವಿಡಿದು ಕಿರಿಯರೂ ಒಡೆಯನ ಅಡಿವಿಡಿದು ಅಡಿಯಾಳೂ ಗುರುವಿನ ಅಡಿವಿಡಿದು ಶಿಷ್ಯನೂ ತಮ್ಮ ಇಷ್ಟಾರ್ಥವನ್ನು ಸಾಧಿಸುವರೆಂಬದು ಲೌಕಿಕರಿಗೆ ಗೊತ್ತೇ ಇದೆ. ಲೋಕಾಚಾರದಲ್ಲಿಯೇ ಕಾಲುಗಳ ಮಹತ್ವವು ಇಷ್ಟಿದ್ದ ಬಳಿಕ ಪಾರಮಾರ್ಥಿಕಾಚಾರದಲ್ಲಿ ಪಾದಗಳ ಮಹತ್ವವು ಎಷ್ಟಿರಬಹುದು? ಅಂತೇ ಎಲ್ಲ ಮಠಗಳ ಗುರುಮಠಗಳಲ್ಲಿಯ ತೋಂಗದ್ದಿಗೆಗಳಲ್ಲಿಯೂ ನಿಜಗದ್ದಿಗೆಗಳಲ್ಲಿಯೂ ಅವುಗಳ (ಪಾದಗಳ) ಪೂಜೆಯು ಇಂದಿಗೂ ನಡೆದಿದೆ. ಎರಡೂ ಪಾದಾಂಗುಷ್ಠಗಳನ್ನು ಜೋಡಿಸಿ ನಿರೀಕ್ಷಿಸಿದಲ್ಲಿ ನಯನಾಕಾರವು (ಹರಿನೇತ್ರ ಕಮಲವು) ದೃಷ್ಟಿಗೋಚರವಾಗುವದು. ಹರಿ ಇದ್ದಲ್ಲಿ ವಿಷ್ಣುವಲ್ಲಭನಾದ ಹರನು ಹರಿದು (ಓಡಿ) ಬರುವದು ಸ್ವಾಭಾವಿಕವು. ಅಂತೇ ಪಾದಸ್ಥಳಕ್ಕೆ ಮಹತ್ವ ಬಂದಿದೆ. ಮೂಗು ಹಿಡಿದರೆ ಬಾಯಿ ತೆರೆಯುವಂತೆ ಕೈಹಿಡಿದರೆ ಮೈ ತಾನೆ ಬರ್ಪಂತೆ ಕ್ರಿಯೆಯಲ್ಲಿ ಜಂಗಮ-ಪಾದವಿಡಿದೊಡೆ ಕರುಣರಸ ವಿನಯಜಲ ಸಮತೆಜಲಗಳು (ಗುರುಲಿಂಗಜಂಗಮ ತೀರ್ಥವು)

ವೈದೋರದೆ ಇರವು. ಇದಿನ್ನರಿತು ನಿಜಗುಣಶಿವಯೋಗಿಗಳು "ಹರಿಯ ನಯನದ ಕುರುಹಿಡಿವುದೀಗ ಗುರುಶಂಭುಲಿಂಗ ನಿನ್ನ ದಿವ್ಯಪಾದ" ಎಂದು ಪಾದಸ್ತೋತ್ರ ಮಾಡಿದ್ದಾರೆ. ನಿಚ್ಚಪ್ರಸಾದಿಗಳು ನಿತ್ಯಸ್ವರೂಪ ವಾದ ಪಾದೋದಕವನು (ತೀರ್ಥವನು) ನಿತ್ಯದಲಿ ಸೇವಿಸಿ ತಣಿತಣಿದು ಕುಣಿಕುಣಿದು ಮಣಿಮಣಿದು ರಣರಣಿಸಿ

''ಪ್ರಣವದ ನೆಲೆಮಂತ್ರ ಘನದ ಭವನಗುಣ ಮಣಿಕುಲಜಲ ನಿಧಿ ನಿನ್ನ ಪಾದ
ಅಣಿಮಾದಿಗಳ ಜನನದ ಭೂಮಿ ಸುಖದ ಸಂದಣಿ ಸತ್ಯ ಶುಭದಾಗು ನಿನ್ನ ಪಾದ ॥
ಗಣತತಿಗಳ ಬೀಡು ತಣುವಿನ ತಾಣ ತತ್ವದಣಿ ಮುಕುತಿಯ ಕಣಿ ನಿನ್ನ ಪಾದ ॥
ಫಣಿಪಕಂಕಣ ಕರುಣಾರಸಭರಿತೇಕ್ಷಣ ಗುರುಶಂಭುಲಿಂಗ ನಿನ್ನ ದಿವ್ಯ ಪಾದ ॥

ಎಂದು ಇಂದಿಗೂ ಹಾಡುತಲಿದ್ದಾರೆ.

ಸದ್ರೂಪವಾದ ಗುರುವು ಆನಂದರೂಪನಾದ ಜಂಗಮನು ಇವರೀರ್ವರಲ್ಲಿರುವ ಚಿದ್ರೂಪವಾದ ಲಿಂಗಮಧ್ಯದಲ್ಲಿ ಕ್ರಿಯೆ ನಡೆದು ನಿತ್ಯ ಸ್ವರೂಪವಾದ ಪಾದೋದಕವೂ ಪರಿಪೂರ್ಣವಾದ ಪ್ರಸಾದವೂ ವೈದೋರಲು (ಹುಟ್ಟಲು) ಲಿಂಗಭೋಗೋಪಭೋಗಿಗಳಾದ ಸದ್ಭಕ್ತ ಸುಜ್ಞಾನ ಜಂಗಮರು ನಿತ್ಯಸ್ವರೂಪವಾದ ಪಾದೋದಕದಿಂದ ಇಷ್ಟಲಿಂಗಕ್ಕೆ ಎರೆಯಬಾರದೆಂದು ವಿಧಾನ ಮಾಡುವ ಪಂಡಿತರಿಗೆ ಯಾವ ಆಧಾರವಿದೆ? ಇವರು ಐಕ್ಯಷ್ಟಾವರಣಗಳಲ್ಲಿ ಯಾವದು ಹೆಚ್ಚು ಯಾವದು ಕಡಿಮೆಯೆಂದು ಹೇಳಬಲ್ಲರು? ಶಿವತತ್ವದ ಅನುವನರಿಯದೆ ಶಿವತತ್ವವನು ಭೂಮಿಯೊಳು ಬಿತ್ತಿದ ಬಸವಾದಿ ಪ್ರಮಥರಾಚರಣೆಗೆ ಪತ್ತಗೇಡಿಗಳಾಗಿ ಕತ್ತಲೆಯೊಳು ಎತ್ತಲೋ ಹೋಗಿ ಭವಾರಣ್ಯದೊಳು ಬಾಳುವ ಭವಿಗಳ ಮತತತ್ವಗಳಿಗೆ ಮರುಳಾಗಿ ಬಲೆಬೀಳುವ ಮಹಾತ್ಮರ ಸಮಾಚಾರವನ್ನು ವಾಚಕರು ತಕ್ಕೊಳ್ಳದೆ ಇರಲಾರರೆಂದು ಹಾರೈಸುವೆ.

# ಲಿಂಗಧಾರಣ ಅರ್ಥಾತ್ ಶಿವದೀಕ್ಷೆ.

(ಲೇ— ಶ್ರೀಯುತ ಬಸಪ್ಪ ಚೆನ್ನಪ್ಪ ಪಟ್ಟೇದ ವಂಟಮುರಿ)

---

ಶಿವಾನುಭವದ ಸಪಟೆಂಬರ (೧೯೪೧) ಸಂಚಿಕೆಯಲ್ಲಿ ಶ್ರೀ ಎನ್ ರಾಚೋಟಿಯ್ಯ ಕಾರ್ಯದರ್ಶಿ ಶಿವಾನುಭವ ಸಂಘ ಕಾನಕಾನಹಳ್ಳಿ ಜಿ॥ ಬೆಂಗಳೂರ ಅವರು ಇದೇ ವಿಷಯವಾಗಿ ಬರೆದ ಲೇಖವನ್ನು ಓದಿದೆನು. ಅದರೊಳಗೆ ಅವರು ನನ್ನಲ್ಲಿ ದಯುವಿಟ್ಟು ನನ್ನ ಹೊಲವನ್ನು ಹಸನು ಮಾಡಿಕೊಳ್ಳಲು ಎಚ್ಚರಿಸಿದುದಕ್ಕೆ ನಾನು ಅವರಿಗೆ ಅಂತಃಕರಣಪೂರ್ವಕವಾಗಿ ಆಜನ್ಮ ಋಣಿಯಾಗಿರುವೆನು. "ಎನ್ನ ಮನದ ಕಾಳಿಕೆಯ ಕಳೆಯಯ್ಯ" ಎಂದು ಅನೇಕ ವಿಧವಾಗಿ ಶ್ರೀಬಸವಣ್ಣನವರು ಪ್ರಾರ್ಥಿಸಿಕೊಂಡಿರುತ್ತಾರಷ್ಟೇ! ಅದೇ ಮೇರೆಗೆ ಎಲ್ಲರೂ ತಮ್ಮ ತಮ್ಮ ಮನೋಭೂಮಿಕೆಯನ್ನು ಹಸನ ಮಾಡಿಕೊಳ್ಳುವದು ಅತ್ಯವಶ್ಯವದೆ. ಆದರೆ ಅದು ತತ್ಕಾಲದಲ್ಲಿ ಸಾಧ್ಯವಾಗುವ ವಿಷಯುವಲ್ಲ. ಜೀವಮಾನದಲ್ಲೆಲ್ಲ ಸಾವಧಾನದಿಂದ ಅಭ್ಯಸಿಸಬೇಕಾಗಿದೆ. ಇರಲಿ.

ತುಂಬಿದ ಕೊಡವು ತುಳುಕುವದಿಲ್ಲೆಂಬ ನಾಣ್ಣುಡಿಯನ್ನು ಅರಿಯದವರಿಲ್ಲ. ಪೂರ್ಣಜ್ಞಾನಿಗಳಾದವರು (ಸಮರಸೈಕ್ಯಪಡೆದವರು) ನುಡಿಗವಸರವಿಲ್ಲದೆ, ಮೌನಿಗಳಾಗುವರು. ಅವರಿಗೆ ಎಲ್ಲವೂ ಸರಿಯಾಗಿಯೇ ಕಾಣುವದು. ಸಕಲಾಕ್ಷರಗಳು ಮಂತ್ರಸ್ವರೂಪವಾಗಿ ಬಿಡುವವು. ಖಂಡನಮಂಡನಗಳ ಗೋಜಿಗೆ ಅವರು ಎಂದೂ ಹೋಗುವದಿಲ್ಲ. ಆದರೆ ಅರೆಕೊಡವು ತುಳುಕಾಡಿ ಗಲಾಟೆ ಎಬ್ಬಿಸಿ ತನ್ನಲ್ಲಿ ನೀರಿರುವದನ್ನು ಹೊರಪಡಿಸಲು ಯತ್ನಿಸುತ್ತದೆ. ಅದರಂತೆಯೇ ವಾದದಲ್ಲಷ್ಟೇ ಅಚ್ಚೆಯಿಂದ ಸೇರಿಕೊಳ್ಳುವ ನಾವೆಲ್ಲರು ಅರೆಗೊಡಗಳು. ತುಂಬಿದ ಕೊಡವು ಒಂದೂ ಇಲ್ಲ. ಎಲ್ಲರೂ ಹೆಚ್ಚಾಗಲಿ ಕಡಿಮೆಯಾಗಲಿ ಲೌಕಿಕಕ್ಕೆ ಬಡಿದುಕೊಳ್ಳುವವರೇ. ನಮ್ಮ ನಮ್ಮ ಮತಗಳನ್ನು ಪ್ರಸ್ಥಾಪಿಸಲು ಹೆಣಗುವವರೇ. ಅದರಲ್ಲೇ ಮತ್ತೂ ತನ್ನ ಮತವು ಪ್ರಾಮಾಣಿಕವೆಂದು ತೋರಿದರಂತೂ ಅದರ ಬಗ್ಗೆ ಅಭಿಮಾನದಿಂದ ಆಗ್ರಹ ಧರಿಸುವದು ಸ್ವಾಭಾವಿಕ. ಆಗ ಕೆಲ ಶಬ್ದಗಳು ತಿಳಿದಾಗಲಿ ತಿಳಿಯದಾಗಲಿ, ಕಟುವಾಗಿ ಹೊರಬೀಳದೆ ಬಹುಶಃ ನಿಲ್ಲುವದಿಲ್ಲ. ತಾವು ಇನ್ನೊಬ್ಬರಿಗೆ ಅನ್ನುವಾಗ, ದೋಷಾ

ರೋಪಣೆ ಮಾಡುವಾಗ—ಅದೇನು ಹೆಚ್ಚಿನದೆನಿಸುವದಿಲ್ಲ. ಆದರೆ ಅನ್ಯರು ಅದೇ ರೀತಿ ತಮಗೆ ಅಂದರೆ ಮಾತ್ರ ಬಲು ವಿಷಾದವೆನಿಸುವದು. ಇದು ಎಲ್ಲರ ಸ್ವಭಾವದೋಷ. ಇದಕ್ಕೆ ಅಪವಾದವೆನಿಸುವವರು ತೀರ ಅಪರೂಪ. ಆಗಲಿ. ಇನ್ನು ಶ್ರೀಯುತರು ಕೆಳಗಿನ ಉತ್ತರಣೆಗಳನ್ನು ಲಕ್ಷಿಸಬೇಕಾಗಿ ಬೇಡುವೆನು.

೧ ಶ್ರೀ ಜೀರಗೆ ಕ. ಬಸಪ್ಪನವರು *B. A.* ಬೆಂಗಳೂರಃ— [ಜನವರಿ ೧೯೪೧ ಶಿವಾನುಭವ ಪುಟ ೧೪೯-೧೫೦] "ಶಿಸುದೆಸೆಯಲ್ಲಿ ಮಾಡಿದ ಲಿಂಗಧಾರಣವು ಶಿವದೀಕ್ಷೆಯಲ್ಲೆಂಬ ಭ್ರಾಂತಿಯೇ ಇದಕ್ಕೆ ಕಾರಣವು ಲಿಂಗಕಟ್ಟಿಕೊಂಡವರಿಗೇ ಮತ್ತೊಮ್ಮೆ ಲಿಂಗ ಕಟ್ಟಲಿಕ್ಕೆ ಹೋಗತಕ್ಕ ಈ ಕಾರ್ಯವು ಅರ್ಥವಿಲ್ಲದ ವ್ಯರ್ಥಕಾರ್ಯವಾಗಿದೆ. ತಲೆಶಿರೋಭಾರದಂತೆ ಭಾರವಾಗಿದೆ. ಹಾಡಿದ್ದೇಹಾಡುವ ದಾಸಯ್ಯನ ಕಥೆಯಾಗಿದೆ. ಭಕ್ತರನ್ನೇ ಮತ್ತೊಮ್ಮೆ ಭಕ್ತರನ್ನಾಗಿ ಮಾಡತಕ್ಕ ಈ ಪದ್ಧತಿಯು ಕೆಲವರಿಗೆ ಒಂದು ಪುಣ್ಯದ ಕೆಲಸವಾಗಿಯೇ ಪರಿಣಮಿಸಿದೆ... ಲಿಂಗ ಕಟ್ಟಿಕೊಂಡವರಿಗೆ ಮತ್ತೊಮ್ಮೆ ಲಿಂಗಕಟ್ಟುವ ಅಪಹಾಸ್ಯಕ್ಕೆ ಗುರಿಯಾಗಿದ್ದೇವೆ. ಹೊಟ್ಟೆತುಂಬಿದವರಿಗೆ ಅನ್ನವನ್ನು ಹಾಕುವ ಜಾಣತನಕ್ಕೆ ಪಕ್ಕಾಗಿದ್ದೇವೆ....... ಇದನ್ನು ಶಿವದೀಕ್ಷೆಯೆನ್ನುವದಕ್ಕಿಂತ ವೀರಶೈವರ ಅಶಕ್ತಿಪ್ರದರ್ಶನ ಅಥವಾ ವೀರಶೈವರ ಸಂಸ್ಕೃತಿಯ ಅವರೋಹಣ ಅಥವಾ ಶಿವದೀಕ್ಷೆಯ ಅಥವಾ ಲಿಂಗಧಾರಣೆಯ ಅಪಭ್ರಂಶ ಎಂದು ಕರೆದರೆ ಹೆಚ್ಚು ಒಪ್ಪುವದಿಲ್ಲವೇ?"

೨ ಶ್ರೀ ಕಾನಕಾನಹಳ್ಳಿ ಬಸಪ್ಪ ಬೆಂಗಳೂರ ಅವರುಃ- [ಎಪ್ರೀಲ ೧೯೪೧ ಶಿವಾನುಭವ ಪುಟ ೨೨೧] ಶ್ರೀ ಕ. ಜೀರಿಗೆಯವರ ಶಿವದೀಕ್ಷೆ ಅರ್ಥಾತ್ ಲಿಂಗಧಾರಣವೆಂಬ ಲೇಖಕ್ಕೆ ಶ್ರೀ ಪಟ್ಟೇದ ಮಂಟಮುರಿ ಅವರು.... ಒಂದು ಟೀಕೆಯನ್ನು ಬರೆದಿದ್ದಾರೆ. ಶ್ರೀಯುತರು ವಿಚಾರವನ್ನು ವಿಮರ್ಶಿಸಲಿಕ್ಕೆ ಹೊರಟು ತಾವು ಶಾಸ್ತ್ರಕ್ಕೆ ವಿರುದ್ಧವಾದ ಕೆಲವು ನೂತನ ಸಂಶೋಧನೆಯನ್ನೇ ನಡಿಸಿದ್ದಾರೆ"

(ಬ) "ಹುಟ್ಟಿದ ಶಿಸುವಿಗೆ ಶ್ರೀ ಗುರು ಬಂದು ಹಸ್ತಮಸ್ತಕ ಸಂಯೋಗ ಮಾಡಿ...... ಸಂಬಂಧವನ್ನು ಮಾಡಿಕೊಡುವನು; ಎಂದು ಕ. ಜೀರಿಗೆಯವರು ಹೇಳಿದರೆ, ಶ್ರೀ ಪಟ್ಟೇದ ಅವರು ಇದು ಲಿಂಗ

ಧಾರಣೆಯಲ್ಲ ಲಿಂಗಮುದ್ರೆ" ಎಂದು ಪ್ರತಿಪಾದಿಸಿದ್ದಾರೆ ಹಂಸ ಬೆಳ್ಳಗದೆ ಎಂದರೆ ಇಲ್ಲ ಕರ್‍ರಗದೆ ಎಂದು ಹೇಳಿದ ಹಾಗಾಯಿತು......" ಹೀಗೆ ಅತಿಯಾಗಿ ಎಳೆದಾಡಿ ಟೀಕಿಸಿ ಮನಬಂದಂತೆ ಹಳಿದಿರುತ್ತಾರೆ. [ಅದೇ ಸಂಚಿಕೆ ಪುಟ ೨೨೫]

(ಕ) "ಅಂಥ (೧೦-೧೨ ವರ್ಷದ) ಅನನುಭವಿಬಾಲ ಮಹೇಶ್ವರರನ್ನು ಕರೆತರುವವರು ದಡ್ಡರೋ? ಅಥವಾ ಆ ಬಾಲರೇ ದಡ್ಡರೋ? ದೊಡ್ಡ ವಯಸ್ಸಿನ ಅಯ್ಯನವರಾದರೂ ಅನುಭವವಿಲ್ಲೆಂದ ಮೇಲೆ, ಅವರನ್ನು ಕರೆಯುವದು ಇನ್ನೂ ಹೆಚ್ಚು ದಡ್ಡತನವಲ್ಲವೇ?...... ಕುಣಿಯಲಿಕ್ಕೆ ಬಾರದ ಸೂಳೆ ಮದ್ದಳಿಯವನ ಮೇಲೆ ಬಿದ್ದಂತೆ ಲಿಂಗಧಾರಣ ಕಾರ್ಯಕ್ರಮಗಳು ಮಾಡಲಿಕ್ಕೆ ಬಾರದೆ ಶಾಸ್ತ್ರದ ಮೇಲೆ ಬೀಳುವದು ಹೆಡ್ಡತನ" [ಅದೇ ಸಂಚಿಕೆ ಪುಟ ೨೩೧]

(ಡ) "ಕೂಸಿನ ತಲೆಯ ಮೇಲೆ ಹಸ್ತವಿಡುವದು, ಕಿವಿಯಲ್ಲಿ ಮಂತ್ರೋಪದೇಶ ಮಾಡುವದು ಮುಂತಾದ ವಿಷಯಗಳು ಇತ್ತಕಡೆಯ ಅನುಭವದಿಂದ ನೋಡಿದರೆ ಕೇವಲ ಕಟ್ಟುಕಥೆಗಳಂತೆ ತೋರಹತ್ತುತ್ತವೆ; ಎಂದು ಶ್ರೀ ಪಟ್ಟೇದ ಅವರು ಬಾಯ್ಬಿಟ್ಟಿದ್ದಾರೆ. ಇದು ಆಶ್ಚರ್ಯ." [ಅದೇ ಸಂಚಿಕೆ ಪುಟ ೨೩೨]

೩ ಶ್ರೀ ಮಾ. ನಂ. ನಂಜಪ್ಪ ಬೆಂಗಳೂರ ಅವರು — ಜನ್ಮಲಿಂಗಧಾರಣವು ಲಿಂಗಮುದ್ರೆ ಎಂದು ನಾನು ಬರೆದುದರ ಮೇಲೆ, ಶ್ರೀ ಕಾನಕಾನಹಳ್ಳಿ ಬಸಪ್ಪನವರು ಮೀರಿಯೇ ಟೀಕೆ ಮಾಡಿ ಎಪ್ರೀಲ ಸಂಚಿಕೆಯಲ್ಲಿ ಬರೆದಿರುವರು. ಆದಕ್ಕೆ ನನ್ನ (ಪಟ್ಟೇದ) ಅಭಿಪ್ರಾಯ ಹೊರಬೀಳುವ ಮುನ್ನವೇ, ಗಡಬಿಡಿಮಾಡಿ ಪುನಃ ಮೇ ಜೂನ ತಿಂಗಳ ಸಂಚಿಕೆಯಲ್ಲಿ ಹುಣ್ಣಿನ ಮೇಲೆ ಬರೆಯಳೆದಂತೆ ಇವರು ಯಥೇಚ್ಛವಾಗಿ ತಾಳಗೆಟ್ಟ ಟೀಕೆಯನ್ನು ಮಾಡುವದು ಎಷ್ಟು ಮಾತ್ರವೂ ಅವಶ್ಯವಿದ್ದಿಲ್ಲ. ಅವರು ಬರೆದುದರಲ್ಲಿ ಈಗ ಒಂದೇ ಒಂದು ಮಾತು ಎತ್ತಿ ತೋರಿಸುವೆನು. ಏನಂದರೆ — "ಶ್ರೀಯುತರು (ಪಟ್ಟೇದ ಅವರು) ಯಾವದೋ ಯೋಚನೆಯಲ್ಲಿದ್ದು ಮರವೆಯಲ್ಲಿದ್ದಾಗ ಈ ಹೋಲಿಕೆಯನ್ನು ಮಾಡಿರಬಹುದು." [ಜೂನ ಶಿವಾನುಭವ ಪುಟ ೨೯೬-೯೭]

೪ ಶ್ರೀ ಎನ್. ರಾಚೋಟಯ್ಯ ಕಾನಕಾನಹಳ್ಳಿ ಅವರು- "ಶ್ರೀಮಂಟಮುರಿಯವರು ಶಿವಾನುಭವ ಅಗಸ್ಟ ೧೦-೧೧ನೆಯ ಸಂಚಿಕೆಯಲ್ಲಿ ಕ್ರೂರವಾದ ಶಬ್ದಗಳನ್ನು ಉಪಯೋಗಿಸಿರುವರು. ಅದು ಏನಂದರೆ ನಾನು ಹೆದರುವವನಲ್ಲ, ನಮ್ಮಲ್ಲಿ ಅನೇಕ ಮಠಗಳಿವೆ, ಪುರಾಣಪ್ರಸಿದ್ಧರಿದ್ದಾರೆ, ಎಂತಲೂ ಇನ್ನೂ ಅನೇಕ ಆವೇಶದಿಂದ ಕೈಯೆತ್ತಿ ಹೊರಟಿದ್ದಾರೆ. ಇವರಿಗೇನು ತಮ್ಮ ಹೊಲವನ್ನು ತಾವು ಹಸನು ಮಾಡಿಕೊಳ್ಳಲು ಅವಕಾಶವಿದೆಯೋ ಇಲ್ಲವೋ? ಇಷ್ಟೇಕೆ ಕ್ರೂರಮೃಗಗಳಿಗೆ ಅವಕಾಶವನ್ನು ಕಲ್ಪಿಸಿ, ಗೊಂದಲವನ್ನೇ ಎಬ್ಬಿಸಿ, ಮತ್ತೊಬ್ಬರನ್ನು ಹಳಿಯುವ ಹವ್ಯಾಸದಲ್ಲಿ ನಿಂತಿದ್ದಾರೆಯೋ ತಿಳಿಯದು." ಈ ಮಾತೇನೊ ಸರಿಯೋ ಸರಿ. ಆದರೆ ನಾನೆನ್ನುವದಿಷ್ಟೇ. ಅವರ ಈ ಸೂಕ್ಷ್ಮದೃಷ್ಟಿಗೆ ತಮ್ಮವರು ಮಾಡಿದ (ಮೇಲಿನ ಅವತರಣಿಗಳಲ್ಲಿ ತೋರಿಸಿದ) ದೋಷಗಳು ಅದು ಹೇಗೆ ತಾನೆ ತೋರಲಿಲ್ಲ! ಇದು ನಿಃಪಕ್ಷಪಾತದೃಷ್ಟಿಯಾಗಲಿಲ್ಲ. ಕಾಗೆಗೆ ಅದರ ಮಗು ಗಂಗಾಧರನಂತೆ ತೋರುವ ಸ್ವಾರ್ಥಮಯ ದೃಷ್ಟಿಯಾಯಿತು. 'ಇದು ತಿರುಗಿ ಕಳ್ಳರೇ ಹೂಲಿ ಬೊಬ್ಬೆಯಿಡುವ ರೀತಿಯಾಯಿತು. ನೋಡಿರಿ, ಇವರೇ ತಮ್ಮ ಭೂಮಿಯನ್ನು ಹಸನು ಮಾಡಿಕೊಳ್ಳಲಿಕ್ಕೆ ಅದೆಷ್ಟು ದಕ್ಷತೆ ವಹಿಸಿದ್ದಾರೆ! ಕ್ರೂರಮೃಗಗಳಿಗೆ ಅಲ್ಲಿ ಎನಿತೆನಿತೂ ಅವಸರವಿಲ್ಲ!! ಇರಲಿ, ಅವರು ಜಾಣಾಕ್ಷರು.

## ನನ್ನಲ್ಲಿ ಆರೋಪಿಸಿದ ದೋಷಗಳ ಬಗ್ಗೆ

ಇನ್ನು ತುಸು ಸ್ಪಷ್ಟೀಕರಿಸುವದು ಅವಶ್ಯಕವದೆ. "ನಾನು ಹೆದರುವನಲ್ಲ" ಮುಂದಿನ ವಚನಗಳನ್ನು ಅವಲೋಕಿಸಲಿಕ್ಕೆ ಬಿನ್ನಯಿಸುವೆನು.

೧ ನ್ಯಾಯ ನಿಷ್ಠುರ, ದಾಕ್ಷಿಣ್ಯಪರನಾನಲ್ಲ;
ಲೋಕ ವಿರೋಧಿ ಶರಣನು ಆರಾರಿಗೂ
ಅಂಜುವವನಲ್ಲ; ಕೂಡಲಸಂಗಮದೇವನ
ರಾಜತೇಜದಲ್ಲಿಪ್ಪನಾಗಿ.

೨ ಕಟ್ಟಿದ ಲಿಂಗವ ಬಿಟ್ಟು, ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟಡಿಯಾಗಿ ಬೀಳುವ ಲೊಟ್ಟೆ ಮೂಳರ ಕಂಡು
ಮೆಟ್ಟಿದ ಎಡಪಾದರಕ್ಷೆಯ ತಕ್ಕೊಂಡು,
ಲಟಲಟನೆ ಹೊಡೆಯೆಂದ ಅಂಬಿಗರ ಚವಡಯ್ಯ.

೩ ಪಾದೋದಕ ಪಾದೋದಕವೆಂಬಿರಿ. ಎಲ್ಲರಿಗೆ
ಎಲ್ಲಿಯದೋ ಪಾದೋದಕ !... ಇಂತಪ್ಪ ಪಾದೋದಕ
ಭೇದವ ಅಜಗಣ್ಣ ತಂದೆಗಳು... ಬಲ್ಲರಲ್ಲದೆ ಸತ್ತು ಹೋಗುವ
ಹೇಸಿ ಮೂಳಕತ್ತೆಗಳೆತ್ತ ಬಲ್ಲರು... ಕಾಡಿನೊಳಗಾದ
ಶಂಕರಪ್ರಿಯ ಚನ್ನಕದಂಬ ನಿರ್ಮಾಯ ಪ್ರಭುವೇ.

ಇಲ್ಲಿ ಬಸವಣ್ಣನವರು, ಚೌಡಯ್ಯನವರು, ಕಾಡಸಿದ್ಧೇಶ್ವರರು ಆವೇಶ ತೋರಿಸಿದರೆಂದು, ತಮ್ಮ ಹೊಲ ಹಸನ ಮಾಡಿಕೊಳ್ಳಲು ಅವಕಾಶವಿಟ್ಟುಕೊಂಡಿರಲಿಲ್ಲವೆಂದು ಕಲ್ಪಿಸಬಹುದೇ ? ಕ್ರೂರ ಶಬ್ದ ಪ್ರಯೋಗ ಮಾಡಿದರೆಂದು, ಕ್ರೂರ ಮೃಗಗಳಿಗೆ ಅವಕಾಶ ಕೊಟ್ಟು ಗೊಂದಲವೆಬ್ಬಿಸಿ ಮತ್ತೊಬ್ಬರನ್ನೆ ಪಳಿಯುವ ಹವ್ಯಾಸವಿಡಿದಿರುವರೆನ್ನುವಿರಾ! ಇವರು ಹೇಳುವದು ನಿಜವಾಗಿದ್ದರೂ ಅವರ ಶಬ್ದದೋಷಗಳು ಅವರಿಗೆ ತಿಳಿಯಲಿಲ್ಲವೆನ್ನುವದು ಸಮಂಜಸವೇ ? "ಗಿಳಿಯೋದಿ ಫಲವೇನು" ಎಂದು ಅವರಿಗೆ ಹೊಂದಿಸಬಹುದೇ ? ಅಲ್ಲ. ಸರ್ವಥಾ ಅಲ್ಲ. ಅವರು ಒಂದೊಂದು ಸತ್ಯದ ಕಡೆ ದೃಷ್ಟಿಯನ್ನಿಟ್ಟೇ ಅಷ್ಟು ನಿಷ್ಠುರವಾಗಿ ಹೇಳಿದ್ದಾರೆ. ಅವರು ಮಹಾತ್ಮರು, ನಾನು ಅಲ್ಪನು ಆದರೂ ನಾನು ಕೈಯೆತ್ತಿ ಹೊರಾಡಲಿಕ್ಕಾದರೂ ಅಂತಹದೇ ಒಂದು ಸಂದರ್ಭವು ಕಾರಣವಾಗಿದೆ. ಜನ್ಮಲಿಂಗ ಧಾರಣವು ಶಿವದೀಕ್ಷಾ ತತ್ವವಿಡಿದಿದ್ದರೂ, ಅದು ನಿಷ್ಫಲ ಪರಿಣಾಮಿಯಾಗುವದರಿಂದ, ಅದನ್ನು ಖಂಡಿಸುವದು ಪ್ರಸ್ತುತ ಕರ್ತವ್ಯವಾಗಿರುವದು. ಅಂತೇ ಆ ಪ್ರಕಾರ ಅನಿವಾರ್ಯವಾಗಿ ಬರೆಯಬೇಕಾಯಿತು. ಅದನ್ನೇನು ಅಷ್ಟು "ಬವ್ವು" ಮಾಡಿ ಒಬ್ಬರ ಮೇಲೊಬ್ಬರು ಮುಂದೊಡ್ಡುವ ಅವಶ್ಯವಿದ್ದಿಲ್ಲ. ಇದಲ್ಲದೆ– "ನಮ್ಮಲ್ಲಿ ಅನೇಕ ಮಠಗಳಿವೆ, ಪುರಾಣ ಪ್ರಸಿದ್ಧರಿದ್ದಾರೆ" ಎಂದು ಬರೆದುದೇನು ಅಹಂಕಾರಮೂಲಕವಲ್ಲ. ಇಷ್ಟಿದ್ದರೂ ಸಹ ಹೀನ ದೆಶೆಯಲ್ಲೇ ಇರುವೆವೆಂದು ತೋರಿಸಲಿಕ್ಕೆ ಬೇಕಾದರೆ ಮತ್ತೊಮ್ಮೆ ಓದಿ ನೋಡಿ ಮನಗಾಣಿರಿ ಹೆಸರಿಗೆ ಮಾತ್ರ ದೊಡ್ಡ ದೊಡ್ಡ ಮಠಗಳಿದ್ದರೂ ಅವೆಲ್ಲ ನಿಷ್ಪ್ರಯೋಜಕವೆಂದೂ ಪುರಾಣ ಹೇಳುವದರಲ್ಲಿ ಬಲ್ಲಿದರಿದ್ದರೂ ಕೂಡ ಅವರಿಂದ ಧರ್ಮ ತತ್ವಗಳು ಆಚರಿಸಲ್ಪಡುವದಿಲ್ಲೆಂದೂ ಹೇಳುವದೇ ನನ್ನ ಉದ್ದೇಶ ! ಸುಮ್ಮಸುಮ್ಮನೆ ಅರ್ಥ ವ್ಯತ್ಯಾಸ ಮಾಡಿಕೊಂಡು ಟೀಕಿಸುವದರಲ್ಲೇನು ಫಲ ? ಇದರಲ್ಲಿ ಕ್ರೂರತನವೆಲ್ಲಿದೆ ? ಅದರ ಸಂಬಂಧವೇ ಇಲ್ಲ. ಆದಾಗ್ಯೂ

ನೀವು "ನಿಮ್ಮೂರಲ್ಲಿದ್ದ ಮಠಗಳನ್ನೂ ಪುರಾಣ ಹೇಳುವವರನ್ನೂ ಇದರಲ್ಲಿ ಹಳಿದಂತಾಗಲಿಲ್ಲವೇ? ಎಂದು ಅನ್ನಬಹುದು. ಆದರೆ ಹೀಗೆ ದೋಷಾವಿಷ್ಕರಣ ಮಾಡದೆ ಹೋದರೆ, ಸುಧಾರಣೆಗೆ ಮಾರ್ಗವೇ ಉಳಿಯದು. ದೋಷಗಳನ್ನು ಎತ್ತಿ ಆಡಬಾರದೆಂಬುದೇನೋ ನಿಜ. ಹಾಗೆ ಮಾಡುವದರಲ್ಲಿ ದುಷ್ಟತನಕ್ಕೆ ಇಂಬಿಲ್ಲದಿರಬೇಕು. ಸದ್ಧೇತು ಪ್ರೇರಿತವಾಗಿ ದೋಷಗಳನ್ನು ಹೊರಪಡಿಸದಿದ್ದರೆ ಅವರಿಗೆ ಅವು ತಿಳಿಯುವದೆಂತು? ತಿಳಿಯದಿದ್ದರೆ ಅವು ಹೋಗುವ ಬಗೆ ಹೇಗೆ? ಪ್ರತಿಯೊಬ್ಬರಿಗೆ ಬಹುಶಃ ತಮ್ಮ ದೋಷಗಳು ತಿಳಿಯುವದಿಲ್ಲ ಅವರನ್ನು ಪರರು ಎಚ್ಚರಗೊಳಿಸಿದಾಗಲೇ ಅವು ಅವರ ಲಕ್ಷ್ಯದಲ್ಲಿ ಬರುವವು. ಇದು ಹಳಿಯುವದರಲ್ಲಿ ಬರಲಾರದು. ಸದ್ಬುದ್ಧಿಯಿಂದ ಅವರನ್ನು ತಿದ್ದುವ ಸದಿಚ್ಛೆಯಿದು.

ತರುಣರಲ್ಲಿ ಗಡಬಿಡಿ ಬಹಳ. ವಿಷಯುವನ್ನು ಸರಿಯಾಗಿ ಪೂರಾ ಓದಿ ನೋಡದೆ ಅವಸರದಿಂದ ಏನಾದರೂ ಹೆಸರಿಡುತ್ತ ಹೋಗುವದೊಂದು ಸ್ವಭಾವವು. ಇದು ಎಲ್ಲೆಡೆಗೆ ಕಂಡುಬರುತ್ತದೆ. ಬೆಂಗಳೂರ ಬಂಧುಗಳಲ್ಲಿಯೂ ಅದು ಉಂಟು. ಸಾಂಪ್ರತ ವಾದದಲ್ಲಿ ಮುಂದೆ ಬಂದಿರುವ ಶ್ರೀ ಕಾನಕಾನಹಳ್ಳಿ ಬಸಪ್ಪನವರು, ಶ್ರೀಮಾ. ನಂ. ನಂಜಪ್ಪನವರು, ಶ್ರೀ ಕಾನಕಾನಹಳ್ಳಿ ರಾಚೋಟಯ್ಯನವರು ಇವರೆಲ್ಲರೂ ಆ ದೋಷಕ್ಕೆ ಗುರಿಯಾಗಿರುವದು ಅವರವರ ಬರವಣಿಗೆಗಳಲ್ಲಿ ಕಂಡುಬರುತ್ತದೆ. ಇದೇ ಸಪ್ಟೆಂಬರ ಲೇಖದಲ್ಲಿ ಶ್ರೀ ರಾಚೋಟಯ್ಯನವರು ಎರಡು ಕಡೆ ಇಂತಹ ಪ್ರಮಾದಕ್ಕೆ ಒಳಪಟ್ಟಿರುವರು. (೧) ಶ್ರೀ ವಂಟಮುರಿಯವರು ಹೇಳುವದನ್ನು ನೋಡಿದರೆ, ಘನತೆಯನ್ನು ಹೊಂದಿದ ಮಠಗಳೂ ವಿದ್ಯಾವಂತರೂ ಅನುಭವಿಗಳೂ ಆಚಾರವಂತರೂ ಇನ್ನೆಲ್ಲಿಯೂ ಇಲ್ಲವೆಂತಲೇ ಗೊತ್ತಾಗುತ್ತದೆ." ಇದರ ಬಗ್ಗೆ ನನ್ನ ನಿಜವಾದ ಅಭಿಪ್ರಾಯವೇನೆಂಬುದನ್ನು ಮೇಲೆ ಬರೆದಿರುವೆನು. (೨) 'ಲಿಂಗಕ್ಕೆ ಸಂಬಂಧವಿಲ್ಲದ ಗುರು ಎಲ್ಲಿಯಾದರೂ ಉಂಟೆ?" ಮಠಪತ್ತಿಯು ಹೊಲೆ ತೊಳೆದ ಹುಟ್ಟು ಲಿಂಗವನ್ನು, ಗುರುಗಳೆಂದು ಬಂದ ಸ್ವಾಮಿಗಳ ಕೈಯಲ್ಲಿ ಸಹ ಕೊಡದೆ--ಅವರ ಹಸ್ತ ಸ್ಪರ್ಶಸಹ ಮಾಡಗೊಡದೆ— ತಾನೇ ಪೂಜಿಸಿ ಅತ್ತಿಂದತ್ತೇ ಒಬ್ಬ ಹೆಣ್ಣುಮಗಳ ಕೈಗೆ ಕೊಟ್ಟು, ಕೂಸಿಗೆ ಧಾರಣ ಮಾಡಿಸಿದನೆಂದು ನಾನು ಬರೆದಿರುವೆನು. ಅದಕ್ಕೆ ಶ್ರೀಯುತರು ಮೇಲೆ ಬರೆದಂತೆ ವಿರುದ್ಧಾರ್ಥವನ್ನು ಕಲ್ಪಿಸಿದ್ದಾರೆ.

## ಶ್ರೀ ರಾಚೋಟಿಯ್ಯನವರ ಬೇರೆ ವಿಚಾರಗಳು

'ಕೊಟ್ಟಾತ ಗುರುವೇ ? ತಕ್ಕೊಂಡಾತ ಶಿಷ್ಯನೇ ? ಅಲ್ಲ ಕಾಣಿರಯ್ಯ' ಎಂಬ ಸಿದ್ಧೇಶ್ವರ ವಚನವನ್ನು ಮುಂದಿರಿಸಿದ್ದಾರೆ. ಇಂತಹರನ್ನು ಅದೇಕೆ ಕರೆತಂದಿರಿ ? ಎಂದು ಕೇಳಿದ್ದಾರೆ. ಆದರೆ ಸಾಂಪ್ರದಾಯಕ್ಕೇನು ಮಾಡಬೇಕು? ಅದನ್ನು ಬಿಟ್ಟರೆ ಆಕಾಶ ಪಾತಾಳ ಏಕಾಗುವಂತೆ ಸಮಾಜದಲ್ಲಿ ಗಲಭೆ ಏಳುವದಲ್ಲ! ಅದನ್ನಾರು ನಿಸ್ತರಿಸಬೇಕು? ನೀವು ಬರೇ ತಾತ್ವಿಕ ವಿಚಾರವನ್ನು ಹೇಳುತ್ತ ಹೊರಟಿರುವಿರಿ. ಆದರಂತೆ ವ್ಯವಹಾರವನ್ನು ನೋಡುವದಾದರೂ ಅವಶ್ಯವೆಂಬುದನ್ನು ನೆನೆಯಲೊಲ್ಲಿರಿ. ಎರಡನ್ನೂ ಬೆರಿಸಿ ನಡೆಯುವದೇ ನಮ್ಮ ವೀರಶೈವ ಮಾರ್ಗ. ಅದರ ಯೋಜನೆಯೇ ಈಗ ಬೇಕಾಗಿದೆ. ಭಕ್ತರು ಸದ್ಭಾವನೆಯಿಂದ ಯುಕ್ತರಾಗುವದು ಅವಶ್ಯವಿದ್ದಂತೆಯೇ, ಗುರುಜಂಗಮರೂ ಕೂಡ ತಮ್ಮ ಸ್ಥಾನಮಾನ ಕರ್ತವ್ಯಗಳನ್ನರಿತು ಯೋಗ್ಯರಾಗುವದು ಅದಕ್ಕೂ ಹೆಚ್ಚು ಅವಶ್ಯವಾದುದು. ಚಪ್ಪಾಳೆಗೆ ಎರಡೂ ಕೈಗಳು ಬೇಕಾಗುವಂತೆ ಸಮಾಜ ಕ್ಷೇಮಕ್ಕೆ ಇವೆರಡೂ ವರ್ಗಗಳು ಕರ್ತವ್ಯಪರಾಯಣರಾಗುವದು ಇಷ್ಟವಾಗಿರುವದು. ಈಗ ಗುರುಸ್ಥಲವು ಒಂದು ಜಾತಿಯ ಸೊತ್ತಾಗಿರುವದರಿಂದಲೇ ಬೇಕಾದವರಿಂದ ಬಗೆ ಹರಿಸಿಕೊಳ್ಳಲಿಕ್ಕೆ ಆತಂಕ ಒದಗಿದೆ. ಅಡವಿಯಲ್ಲಿರುವ ಗೋವು ಮನೆಯಲ್ಲಿಯ ಕರುವಿಗೆ ಚಿಂತಿಸಿ ಬಂದು ಸಲಹಬೇಕೆಂಬ ಆತುರವುಳ್ಳುದಾಗಿರುವಂತೆ ಗುರುವರ್ಗದವರಾದರೆ ಸಮಾಜಕ್ಕೇನು ಕೊರತೆ!

ಬೆಂಗಳೂರ ಗುಂಪೆಂದು ನಾನು ಹಿಂದಣ ಲೇಖದಲ್ಲಿ ಬರೆದುದು ಶ್ರೀಯುತರ ಮನಸ್ಸಿಗೆ ನೆಟ್ಟಿರುವದು. ಆದರೆ ಅದಕ್ಕೆ ನನ್ನ ಉಪಾಯವಿಲ್ಲ. ಜನ್ಮಲಿಂಗಧಾರಣ ಒಂದೇ ಸಾಕೆಂದು ಶ್ರೀ ಜೀರಿಗೆ ಕ. ಬಸಪ್ಪನವರಂತೆ ಪ್ರತಿಪಾದಿಸುವವರು ಇದು ವರೆಗೆ ಬರೇ ಬೆಂಗಳೂರವರೇ ಮುಂದೆ ಬಂದಿರುವರು. ಹಾಗೆ ವಂಟಮುರಿಯುವರು ನನ್ನ ಅಭಿಮಾನ ವಿಡಿದು ಬೆಂಬಲಿಗರಾಗಿ ಮತ್ತಾರೂ ಓಡಿಬಂದಿಲ್ಲ. ಆದುದರಿಂದ ವಂಟಮುರಿಯ ಗುಂಪೆನ್ನಲಿಕ್ಕೆ ಬರಲಾರದು. ಧಾರಣ-ದೀಕ್ಷೆಗಳೆರಡೂ ಅವಶ್ಯವೆಂದು ಅನೇಕ ಕಡೆಯವರು ಅಭಿಪ್ರಾಯಪಟ್ಟಿರುವರೆಂಬುದನ್ನು ಲಕ್ಷಿಸಬೇಕು.

"ಬಡವರ ಲಿಂಗಧಾರಣ, ಬಲ್ಲಿದರ ಲಿಂಗಧಾರಣವೆಂದು ನಮ್ಮಲ್ಲಿಲ್ಲ"— ಎಂದು ನೀವು ಬರೆದುದು ವಿಹಿತ. ಲಿಂಗಧಾರಣದ ಶಾಸ್ತ್ರೋಕ್ತ ವಿಧಾನವೂ ಅದರ ಪರಿಣಾಮವೂ ಉದ್ದೇಶವೂ ಒಂದೆಯಾಗಿರುವದು ನಿಜ. ಆದರೂ ವಿಧಿವಿಧಾನಗಳು ಬಡವರಲ್ಲಿ ಸಂಕ್ಷೇಪ-ತಾತ್ಪೂರ್ತಿಕವಾಗಿಯೂ, ಸಿರಿವಂತರಲ್ಲಿ ಸವಿಸ್ತರ—ಆಡಂಬರಯುಕ್ತವಾಗಿಯೂ ನಡೆಯುತ್ತಿರುವದು ವ್ಯವಹಾರಿಕರೀತ್ಯಾ ಅಪರಿಹಾರ್ಯವಾದುದು. ಶ್ರೀ. ಮುನಿವೀರಪ್ಪನವರ ಮನೆಯ ಲಿಂಗಧಾರಣ ಮಹೋತ್ಸವದ ವರ್ಣನೆ ಬರೆದುದು ಒಪ್ಪಾಗಿದೆ, ಅಚ್ಚಾಗಿದೆ, ಮೆಚ್ಚಾಗಿದೆ. ಆದರೂ ಅದು ಎಲ್ಲರಲ್ಲಿಯೂ ಸಾಮಾನ್ಯವಾದುದೆಂಬದನ್ನು ಮಾತ್ರ, ಇತ್ತಣ ಪರಿಸ್ಥಿತಿಯಂತೆ ಯೋಚಿಸಿದರೆ ಮನವು ಒಮ್ಮೆಲೇ ಒಡಂಬಡುವದಿಲ್ಲ. ಇರಲಿ.

ಸೊನ್ನಗಾರ ಕಿವಿ ಚುಚ್ಚಿದರೆ ಮಕ್ಕಳಿಗೆ ನೋವಾಗುವದಿಲ್ಲವಂತೆ. ಶ್ರೀ. ನಂಜಪ್ಪನವರ ಕರೆಗೆ ವಾತ್ಸಲ್ಯದಿಂದ ಮುಂದೆಬಂದು, ಶ್ರೀ ಜಗದ್ಗುರು ಶ್ರೀಮನ್ನಿಡುಮಾಮಿಡ ಶ್ರೀಶೈಲ ಸಂಸ್ಥಾನ ಮಹಾಸ್ವಾಮಿಗಳು, ಆತ್ಮನಿರ್ಣಯವನ್ನು ಪ್ರಕಟಿಸಿದ್ದಾರೆ. ಆ ಸೂರ್ಯಪ್ರಕಾಶದಿಂದ, ತಮ್ಮದೇ ನಿಜವೆಂದು ದುರಾಗ್ರಹಕ್ಕೆ ಒಳಗಾದವರಾರೆಂಬುದು ಜಗಕ್ಕೆ ಸ್ವಚ್ಛವಾಗಿ ತಾನೇ ತೋರಿಬರದೆ ಇರಲಾರದು. ತಾವು ಕರ್ನಾಟಕಕ್ಕೆ ಮಿಗಿಲಾದ ನಗರದವರು, ಹೆಚ್ಚಾಗಿ ಬಲ್ಲವರು ಎಂಬ ಅಹಂಕಾರತ್ರಯದಿಂದ ಪೀಡಿತರಾರೆಂಬುದನ್ನು ಇನ್ನುಮೇಲೆ ಅವರು ತಾವೇ ಆಲೋಚಿಸಬೇಕು.

## ವಾದ ವಿಷಯದ ಪರಿಸಮಾಪ್ತಿ.

ಶ್ರೀ ಜೀರಗೆ ಕ. ಬಸಪ್ಪನವರು ಬೆಂಗಳೂರನಗರ ಅವರ ಮತ್ತೊಂದು ಲೇಖವು ಇದೇ ಸಪ್ಟೆಂಬರಿನ ಅಂಕದಲ್ಲಿ ಪ್ರಸಿದ್ಧವಾಗಿದೆ. ಅದರ ಬಗ್ಗೆ ಇನ್ನುಮೇಲೆ ವಿಚಾರಿಸುವ ಕಾರಣವೇ ಉಳಿಯಲಿಲ್ಲ. ಶ್ರೀಶೈಲ ಸಂಸ್ಥಾನ ಜಗದ್ಗುರುಗಳೇ ನಿರ್ಣಯವಿತ್ತಿದ್ದಾರೆ. ಇನ್ನು ಸಾಮಾನ್ಯರಾರಿಗೂ ಅದರಲ್ಲಿ ಕೈಹಾಕಲಿಕ್ಕೆ ಬರಲಾರದೆಂದು ನನ್ನ ಭಾವನೆ. ಆ ನಿರ್ಣಯವಾದರೂ ಅಷ್ಟು ಬಂಧುರ ಸ್ವರೂಪದಲ್ಲಿಯೋ ಇರುವದು. ಅದು ಸರ್ವಮಾನ್ಯವಾಗಲು ಯೋಗ್ಯವಾದುದೇ ಇರುವದು.

---

# ಲಿಂಗಧಾರಣೆ ಮತ್ತು ಶಿವದೀಕ್ಷೆ.

(ಲೇ:— ಶ್ರೀಯುತ ಜಿ. ಶಾಂತವೀರಪ್ಪ ಬಿ. ಎ. ರಿಟಾಯರ್ಡ ಪೋಲೀಸ ಸುಪರಿಂಟೆಂಡೆಂಟ, ಮು. ಬೆಂಗಳೂರ)

ಈ ವಿಷಯವಾಗಿ ಅನೇಕ ಲೇಖನಗಳು ಶಿವಾನುಭವದಲ್ಲಿ ಪ್ರಕಟಿಸಲ್ಪಟ್ಟು ಲಿಂಗಾಯತ ಸಮಾಜಕ್ಕೆ ಮಹದುಪಕಾರವಾಗಿರುತ್ತೆ. ಈ ರೀತಿಯಾದ ಚರ್ಚೆಯಿಂದ ಹೆಚ್ಚು ಫಲ ಸಮಾಜದಲ್ಲಿ ಉಂಟಾಗುತ್ತೆ. ಇದರಿಂದ ಯಾವ ಹಾನಿಯೂ ಆಗುವಂತಿಲ್ಲ.

೧೨ನೇ ಶತಮಾನದಲ್ಲಿ "ಅನುಭವಮಂಟಪ" ವು ಲಿಂಗಾಯತ ಧರ್ಮದ ಚರ್ಚೆಯ ಆಸ್ಥಾನವಾಗಿತ್ತು. ಆ ಚರ್ಚೆಯ ಫಲವೇ ಪವಿತ್ರ ಶರಣರ ಬಾಯಿಂದ ಬಂದ "ವಚನ" ಗಳಾಗಿರುತ್ತವೆ. ಆಗಿನ ಕಾಲದಲ್ಲಿ ಅಚ್ಚುಕೂಟವಿರಲಿಲ್ಲ. ಒಂದು ಮಂಟಪವು ೮ ಶತಮಾನಗಳವರಿಗೂ ನಾಶವಾಗದಿರುವ— ಕುಂದದಿರುವ ಒಂದು ಧರ್ಮವನ್ನು ನೆಲೆಯಾಗಿ ನಿಲ್ಲಿಸಿತು. ಇಂಥ ನೂರಾರು ಮಂಟಪಗಳು ಮಾಡಬಹುದಾದ ಮಹತ್ಕಾರ್ಯವನ್ನು ಈ ಹೊತ್ತು ಶಿವಾನುಭವದಂತಹ ಮಾಸಪತ್ರಿಕೆಗಳು ಮಾಡಬಲ್ಲವು. ಪತ್ರಿಕ ದ್ವಾರದ ಈ ಚರ್ಚೆಯು ಅತ್ಯವಶ್ಯಕವಾದದ್ದು.

೧೨ನೇ ಶತಮಾನದಲ್ಲಿನ ಲಿಂಗಾಯತ ಸಮಾಜದ ಸಂಖೆಗೂ ಈಹೊತ್ತಿನ ಸಂಖೆಗೂ ತಾರತಮ್ಯವಿಲ್ಲ. ಎಂಟು ನೂರು ವರ್ಷಗಳಿಂದ ಅಪಾರವಾಗಿ ಬೆಳೆಯುತ್ತ ಬಂದಿರುವ ಲಿಂಗಾಯತ ಸಮಾಜವು ಈ ದಿನ ನಾಲ್ವತ್ತು ಲಕ್ಷದ ಹದ್ದುಮೀರಿದೆ. ಈ ನಾಲ್ವತ್ತು ಲಕ್ಷದಲ್ಲಿ ನೂರಕ್ಕೆ ತೊಂಭತ್ತರ ಮೇಲಿನ ಸಂಖ್ಯೆಯು ೧೨ನೆ ಶತಮಾನದ ತತ್ವಾಧಾರದ ಮೇಲೆ ನಿಂತಿದೆ. ಇದಕ್ಕೆ ಪುಸ್ತಕಗಳ ಆಧಾರ ಬೇಕಿಲ್ಲ. ನಮ್ಮ ಕಣ್ಣೆದುರಿಗೆ ನಿಂತಿರುವ ಸಮಾಜವೇ ಸಾಕ್ಷಿ.

ವೇದವು ಅಮಾನುಷ ಕೃತವೆಂದು ಪ್ರತಿಪಾದಿಸುವುದನ್ನೂ ಕೂಡ ಈ ಹೊತ್ತಿನ ಚರ್ಚೆಯು ಪ್ರತಿಭಟಿಸುತ್ತಿದೆ. ಹೀಗಿರುವಲ್ಲಿ ಒಂದು ಸಾವಿರ ವರ್ಷಗಳಿಂದೀಚಿನ ಆಧಾರಗಳನ್ನು ಎದುರಿಸುವುದು ಹೆಚ್ಚಲ್ಲ.

ಇವುಗಳೆಲ್ಲವೂ ಚರ್ಚೆಯಿಲ್ಲದೆ! ಮಾನುಷ ಕೃತಿಯೆಂದು ಎಲ್ಲರೂ ಒಪ್ಪುತ್ತಾರೆ. ಆಯಾಯ ಕಾಲದ ಸ್ಥಿತಿಗಳಿಗನುಸಾರವಾಗಿ ಧರ್ಮಗ್ರಂಥಗಳು ಬರಿಯಲ್ಪಡುತ್ತಾ ಬಂದಿರುತ್ತವೆ.

೧೨ನೇ ಶತಮಾನದಲ್ಲಿ ಒಂದು ಬಗೆಯಾದ ರೂಪನ್ನು ಪಡದ ಲಿಂಗಾಯತ ಮತಕ್ಕೆ ವಚನ ಶಾಸ್ತ್ರವೇ ಮುಖ್ಯಾಧಾರ. ಆ ಕಾಲದ ಹಿಂದಿನ ಪರಿಸ್ಥಿತಿ-ಶಾಸ್ತ್ರ-ಇವುಗಳನ್ನು ಮೀರಿ ನಿರ್ಮಿತವಾದದ್ದು ವಚನ ಶಾಸ್ತ್ರ. ಈ ದಿನ ವಚನಶಾಸ್ತ್ರದ ಮುಖ್ಯಾಧಾರವನ್ನು ಅಂಗೀಕರಿಸದೆ ಇರುವವರು ಕೆಲವರಿರಬಹುದು. ಇದೇ ರೀತಿ ಹಿಂದೆಯೂ ಇದ್ದರು. ೧೨ನೇ ಶತಮಾನದ ಲಿಂಗಾಯತ ಧರ್ಮವನ್ನು ವಿರೋಧಿಸುವವರು ಆಗಲೂ ಇದ್ದರು. ಇವರು ಯಾರೆಂದರೆ ಜನಸಾಮಾನ್ಯರಲ್ಲ– ಕನ್ನಡದ ಬಡಜನರಲ್ಲ–ಇವರು ಪಾಂಡಿತ್ಯದಲ್ಲಿ ನಿಪುಣರಾದವರು—ಕವಿತಾಶಕ್ತರು-ಸಂಸ್ಕೃತ ಭಾಷೆಯನ್ನು ಚನ್ನಾಗಿ ಅರಿತವರು. ಈ ಪಂಗಡವೂ ಬೆಳೆಯುತ್ತಲೇ ಬಂತು. ಆದರೆ ಇದರ ಬೆಳೆವಣಿಗೆಯು ೧೨ನೇ ಶತಮಾನದ ತತ್ವವನ್ನನುಸರಿಸುತ್ತಾ ಬಂದ ವಚನಕಾರರ ಹಿಂಬಾಲಕರಾದ ಜನ ಸಾಮಾನ್ಯದ ಬೆಳವಣಿಗೆಯಂತೆ ಹೆಚ್ಚಾಗಿರಲಿಲ್ಲ. ಈ ಬಹುಜನರ ತತ್ವ ಪ್ರಚಾರವು ಹಿಂದಾದ ಕಾಲವು ಈ ಎಂಟುನೂರು ವರ್ಷಗಳ ಮಧ್ಯ ಮಧ್ಯ ತಲೆದೋರುತ್ತಲೇ ಬರುತ್ತಿತ್ತು. ಆ ಕಾಲಗಳಲ್ಲಿ ಪಂಡಿತರಂಜನೀಯವಾದ ಸಂಸ್ಕೃತ ಗ್ರಂಥಗಳು ಪ್ರಕಟಣೆಗೆ ಬರುತ್ತಿದ್ದವು. ಇದು ಆಶ್ಚರ್ಯವಲ್ಲ. ಇವುಗಳನ್ನು ಓದುವವರು ಮಾತ್ರ ಕೇವಲ ಕಡಿಮೆ ಸಂಖ್ಯೆಯವರು. ಇವರು ಯಾರು? ಒಂದು ಬಗೆಯಾದ ಅಭಿಮಾನಶಾಲಿಗಳು. ಒಂದು ಹಿರಿಯಮತದ ಆಚರಣೆಯನ್ನು ಲಿಂಗಾಯತ ಧರ್ಮದಲ್ಲಿ ಸೇರಿಸಿ ಹಿರಿಯರೆನ್ನಿಸಿಕೊಳ್ಳಬೇಕೆಂಬುವವರ ನಿಜವಾದ—ನಿಸ್ಪೃಹವಾದ ಆಶೆ. ವಚನ ಶಾಸ್ತ್ರವು ಯಾವುದು ಬಾಹಿರ್ಯದ ಆಡಂಬರ, ಶಾರೀರಕವಾದ ಆಚರಣೆ, ಕರ್ಮದ ಅಂಗಾಂಗ ಎಂದು ತಿರಸ್ಕರಿಸಿ, ಯಾವುದು ಸುಲಭ ಮತ್ತು ತತ್ವಭರಿತವಾದ್ದೆಂದೂ, ಕರ್ಮರಹಿತವಾದ್ದೆಂದೂ, ಬಳಕೆಗೆ ತಂದಿದ್ದಿತೋ ಇದು ಮರತು ಹೋಯಿತು.

"ಲಿಂಗಧಾರಣೆ ಮತ್ತು ಶಿವದೀಕ್ಷೆ" ಈ ತತ್ವಕ್ಕೆ ಮೇಲಿನ ಪಿಠಿಕೆಯು ಸಹಾಯಕರವಾಗಿರುತ್ತೆ. ಈ ವರಿಗೂ ಬಂದ ಎರಡು ಕಡೆಯ ಲೇಖನಗಳಲ್ಲಿಯೂ ಹೊರಗಿನ ಆಚರಣೆಗಳಿಗೆ ಹೆಚ್ಚು ಭಾಗ ಚರ್ಚೆ

ಸೇರಿದೆ. ಅದನ್ನು ಎರಡು ಕಡೆಯೂ ಬಿಟ್ಟು ಬಿಟ್ಟರೆ ಉಳಿಯುವುದು ಸ್ವಲ್ಪ ಮಾತ್ರ. ಅದೇನೆಂದರೆ "ಲಿಂಗಧಾರಣೆ" ಇದು ಆಗಲೇಬೇಕು. ಹುಟ್ಟಿದ ಕ್ಷಣವೆ? ಅಥವ ಹತ್ತುದಿವಸದಲ್ಲಿ ಒಂದು ದಿನವೇ? ಲಿಂಗ ಧಾರಿಗೆ ಅಲಿಂಗಿಯ ಕೂಡ ಸಂಸಾರವೆಂಬುದು ನಿಮಿಷ ಮಾತ್ರವೂ ಇರಕೂಡದೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಇದಕ್ಕೆ ಗ್ರಂಥಗಳಿಂದ ಸಂಸ್ಕೃತ ಶ್ಲೋಕಗಳನ್ನು ಹೇಳಿ ಸಮರ್ಥಿಸಬೇಕಾದ್ದಿಲ್ಲ. ಹುಟ್ಟಿದ ದಿನವೇ ಆಗಬೇಕು. ಲಿಂಗ ಕಟ್ಟುವ ಪದ್ಧತಿಗೆ ಮೂರು ಮುಖ್ಯವಾದ್ದು. "ಗುರು — ಲಿಂಗ – ಜಂಗಮ". ಲಿಂಗವನ್ನು ಕೊಡುವ ಗುರು — ಭವಿ ಜನ್ಮವನ್ನು ಕಳೆದುಕೊಳ್ಳಬೇಕಾದ ಲಿಂಗ ಉಪದೇಶ ಮಾಡುವ ಜಂಗಮ. ಲಿಂಗಯುತತತ್ವವೆಲ್ಲವೂ ಈ ಮೂರರಲ್ಲಿ ಅಡಕವಾಗಿದೆ. ಲಿಂಗಧಾರಣ ಕಾಲದಲ್ಲಿ ಗುರು ಮತ್ತು ಜಂಗಮು ಒಂದೇ ಮೂರ್ತಿಯಲ್ಲಿ ಸೇರಿರ ಬಹುದು — ಬೇರೆ ಬೇರೆಯಾಗಿಯೂ ಇರಬಹುದು. ಲಿಂಗಧಾರಣೆಗೆ— ಗುರು-ಲಿಂಗ-ಜಂಗಮ-ದ ಸೇರುವಿಕೆ ಬೇಕು. ಬೇರೆ ಬೇರೆ ವಿಧಾನಗಳು- ಬೇರೆ ಬೇರೆ ಕಡೆಯಲ್ಲಿ-ಆಚರಣೆಯಲ್ಲಿ ಬಂದಿರುತ್ತವೆ. ಅವುಗಳನ್ನು ಬೇಕಾ ದವರು ಹಿಂಬಾಲಿಸಬಹುದು. ಬೇಡವಾದವರು ಬಿಡಬಹುದು. ನಾಲ್ವತ್ತು ಲಕ್ಷ ಜನರೆಲ್ಲರಿಗೂ ಬೇಕಾದ್ದು-ಹುಟ್ಟಿದ ದಿನವೇ ಲಿಂಗಧಾರಣೆ, ಧರಿ ಸುವುದಕ್ಕೆ ಗುರುವು, ಧರಿಸಿಕೊಳ್ಳಬೇಕಾದ ಪವಿತ್ರಲಿಂಗ, ಜ್ಞಾನೋಪ ದೇಶ ಮಾಡಬೇಕಾದ ಜಂಗಮ-ಇದು ಸುಲಭ ಮತ್ತು ಎಲ್ಲರೂ ನೆರ ವೇರಿಸಲಿಕ್ಕೆ ಎಲ್ಲೆಲ್ಲಿ ಲಿಂಗಾಯುತ ಸಮಾಜವೆದೆಯೋ ಅಲ್ಲೆಲ್ಲಾ ಅನು ಕೂಲಗಳುಂಟು. ಇದಕ್ಕಿಂತಲೂ ಹೆಚ್ಚಾಗಿ ಮಾಡಬೇಕೆಂದು ಬಂದಿ ರುವ ಸೂಚನೆಗಳಿಗೆ "ವಿಶೇಷ" ಅನುಕೂಲತೆ ಬೇಕು. ಅವೆಲ್ಲವನ್ನೂ ಬೇಕೆನ್ನುವವರು ಮಾಡುತ್ತೇವೆಂದರೆ ಬೇಡವೆಂದು ಹೇಳುವುದು ಬೇಕಿಲ್ಲ. ಯಾಕಂದರೆ ಮುಖ್ಯ ತತ್ವಕ್ಕೆ ಇವು ಅಡ್ಡಿ ತರುವುದಿಲ್ಲ. ಉಪಯೋಗಿ ಸುವ ಪಾತ್ರೆಗಳು ಚಿನ್ನದವಾಗಿರಲಿ, ಲಿಂಗಧರಿಸುವ ಗುರುಗಳು ಸಂಸ್ಕೃತ ಪಂಡಿತರಾಗಿರಲಿ, ಕೂಸಿನ ಕಿವಿಯಲ್ಲಿ ಜ್ಞಾನೋಪದೇಶವನ್ನು ಮಾಡುವ ಮೂರ್ತಿಯು ಜಗದ್ಗುರುಗಳಾಗಿರಲಿ. ಇವೆಲ್ಲವು ಹೆಚ್ಚು ಶೋಭಿಸು ತ್ತವೆ. ಗೌರವ-ಗಾಂಭೀರ್ಯವನ್ನು ಹೆಚ್ಚಿಸುತ್ತವೆ. ಇದಕ್ಕೆ ಯಾವ ಅಭ್ಯಂ ತರವೂ ಇಲ್ಲ. ಶಾಸ್ತ್ರಘೋಷವೂ ಆಗಬಹುದು. ಆದರೆ ಜನಸಾಮಾನ್ಯ ರಿಗೆ ಇವು ಶಕ್ಯವೂ ಇಲ್ಲ ಬೇಕು ಇಲ್ಲ.

ಶಿವದೀಕ್ಷೆ— ಇದು ಕಠಿಣವಾದ ವಿಷಯ—ಅಥವ ಕಠಿಣವಮಾಡಲ್ಪಟ್ಟಿದೆ. ಬೆರೆಯಲಸಾಧ್ಯವಾದ ಪದಾರ್ಥಗಳನ್ನು ಒಂದುಗೂಡಿಸುವುದು ಬಹಳ ಕಠಿಣ. ಗುರು-ಲಿಂಗ-ಜಂಗಮ ತತ್ವದಲ್ಲಿ ಒಂದರಿಂದೊಂದು ಬೇರೆಯಾಗದಿರುವಲ್ಲಿ. ಒಂದು ಕಾಲದಲ್ಲಿ ಒಂದು, ಮತ್ತೊಂದು ಕಾಲದಲ್ಲಿ ಇನ್ನೊಂದು ಈ ರೀತಿ ಬೇರೆ ಬೇರೆ ಮಾಡುವುದು ವಿಲಕ್ಷಣವಾಗಿ ಕಾಣುತ್ತೆ. ಬೇರೆ ಮತದಿಂದ ಲಿಂಗಧಾರಿಯಾಗುವದರ ವಿಷಯ ಬೇರೆ. ಇದೂ ಲಿಂಗಧಾರಣೆಯೇ. ಇದನ್ನು ಶಿವದೀಕ್ಷೆಯೆಂದು ಹೇಳಬೇಕೆಂದರೆ ಹೇಳಲಿ. ಆದರೆ "ಲಿಂಗಧಾರಣೆ" ಶಬ್ದದಲ್ಲಿ ಅಡಕವಾಗಿರುವ ಮೂರ್ತಿಭಾವನೆಯು 'ಶಿವದೀಕ್ಷೆ' ಶಬ್ದದಿಂದ ಬರಲಾರದು. ಜ್ಞಾನೋಪದೇಶವನ್ನು ತಿಳಿದುಕೊಳ್ಳುವುದು ಶಿಶುವಿಗೆ ಇಲ್ಲವೆಂದು ಹೇಳಿದರೆ ಲಿಂಗಾಯತ ಧರ್ಮದ ಆದಿತತ್ವವನ್ನೇ ನಿರಾಕರಿಸಿದಂತೆ ಆಗುತ್ತೆ. ಅರಿವಿಲ್ಲದ ಭಾಷೆಯ ಘೋಷಕ್ಕೆ ಶಿಶುವಾದರೇನು, ಎಂಟು ವರ್ಷದ ಹುಡುಗನಾದರೇನು. ಬೋಧೆಯ ಅಂತರಂಗ ಶಕ್ತಿ, ಬೋಧಿಸುವ ಜಂಗಮನಲ್ಲಿಯೂ ಕೂಸಿನ ಸಂಸ್ಕಾರದಲ್ಲಿಯೂ ಇದೆಯೇ ಹೊರ್ತು ವಯಸ್ಸಿನಲ್ಲಿಲ್ಲ. ಶಿವದೀಕ್ಷೆ ಶೈವರಾಗಿದ್ದವರಿಗೆ ಇರಬಹುದು. ಲಿಂಗಾಯತರಿಗೆ ಅಲ್ಲ. ಒಂದು ಪ್ರಶ್ನೆ:— ಲಿಂಗಧಾರಣೆ ಇಲ್ಲದವನು ಲಿಂಗಾಯುತ ಅಲ್ಲ – ಎಲ್ಲರೂ ಲಿಂಗಧಾರಣೆಯನ್ನು ಮಾಡಿಸಿಯೇ ಮಾಡಿಸಿಕೊಳ್ಳುತ್ತಾರೆ. ಶಿವದೀಕ್ಷೆ ಇಲ್ಲದವರು ನಾಲ್ವತ್ತು ಲಕ್ಷ ಲಿಂಗಾಯತರಲ್ಲಿ ಮೂವತ್ತೊಂಭತ್ತು ಲಕ್ಷಕ್ಕೆ ಮೇಲೆ ಇದ್ದಾರೆ. ಇವರೂ ಲಿಂಗಾಯತರೆ—ನಿಜವಾಗಿಯೂ ಲಿಂಗಾಯತರು. ಕೆಲವು ಮನೆತನದಲ್ಲಿ ಈ ದೀಕ್ಷೆಕ್ರಮ ನಡದು ಬಂದಿದೆ. ಬಿಟ್ಟರೆ ಅವರು ಲಿಂಗಾಯುತ ತತ್ವಕ್ಕೆ ಬಾಹಿರರಾಗುವುದಿಲ್ಲ. ಇದ್ದರೂ ಅವರು ಲಿಂಗಾಯತರೆ. ಬಿಡುವುದರಿಂದ ಲಿಂಗಾಯುತ ಬಹು ಜನರ ಗುಂಪಿಗೆ ಅವರೂ ಶೇರಿ ಸಮಾನತ್ವ ಸಂತೋಷವನ್ನು ಅನುಭವಿಸಬಹುದು. ಇದರಿಂದ ಕೀಳತ್ವವೇನೂ ಬರುವುದಿಲ್ಲ. ಯಾವದೊ ಒಂದು ಮತದವರು ಮಾಡಿದಂತೆ ಲಿಂಗಾಯತರೂ ಮಾಡಬೇಕೆಂದು ಹೇಳುವುದು ಸರಿ ಅಲ್ಲ-- ಸಾಧ್ಯವೂ ಅಲ್ಲ.

ಶಿವಾನುಭವದಲ್ಲಿ ಶ್ಲಾಘನೀಯವಾದ ಪಾಂಡಿತ್ಯದಿಂದ ಕೂಡಿದ ಮತ್ತು ನಂಬಿಕೆಯನ್ನೊಡಗೊಂಡ ಲೇಖನಗಳು ಬಂದಿರುತ್ತವೆ. ಯೋಗ್ಯವಾದವು. ಯಾವುದನ್ನು ಯಾರೂ ನಿಂದಿಸುವಂತಿಲ್ಲ. ಅವರವರ ನಂಬಿ

ಕೆಯು ದೃಷ್ಟಿಯು ಅವುಗಳಲ್ಲಿ ಹೊರಬಿದ್ದಿರುತ್ತದೆ. "ಶಿವಾನುಭವ" ವು ನಿಜವನ್ನು ಹೊರಕ್ಕೆ ಬರಮಾಡುತ್ತದೆ. ಇದಕ್ಕಾಗಿ ಲಿಂಗಾಯತ ಇಡಿ ಸಮಾಜವೇ ಕೃತಜ್ಞತೆಯನ್ನು ಅರ್ಪಿಸಬೇಕು. ೧೫ ವರ್ಷದಿಂದ ಈ ಲೇಖನಿಗನು ಶಿವಾನುಭವ ಪತ್ರಿಕೆಯನ್ನು ಓದುತ್ತಾ ಬರುತ್ತಿರುವುದೆ ಅವನ ತಿಳುವಳಿಕೆ. ಇದರಿಂದ ಹೆಚ್ಚು ಅವನು ಅರಿಯನು.

ಶ್ರೀಮಾನ್ ಜೀರಗೆ ಬಸಪ್ಪನವರ ಅಭಿಪ್ರಾಯವೇ ಈ ಪತ್ರದವನ ಅಭಿಪ್ರಾಯವಾಗಿದೆ.

---

## ಸ್ಫುಟವಿಷಯಗಳು.

(೧) **ಶಿವಾನುಭವ ಸಂಘಗಳು:**—ಈ ಸಂಘಗಳು ಎಲ್ಲಕಡೆಗೂ ಪಸರಿಸುತ್ತಲೇ ಇರುವದು ತೋರಿಬರುತ್ತಿದೆ. ಅಲ್ಲಲ್ಲಿರುವ ಶಿವಾನುಭವ ಶಾಸ್ತ್ರ ಪ್ರೇಮಿಗಳು ಸ್ವಯಂ ಸ್ಫೂರ್ತಿಯಿಂದ ಇವುಗಳ ಏರ್ಪಾಡನ್ನು ಮಾಡುತ್ತಲಿದ್ದಾರೆ. ಇದು ಇವುಗಳ ಪ್ರಗತಿಯ ಕುರುಹಾಗಿದೆ. ಕಲಘಟಗಿ ತಾಲೂಕಿನಲ್ಲಿಯ ದಾಸ್ತಿಕೊಪ್ಪ ಶಿವಾನುಭವ ಸಂಘದ ಪುನರ್ಘಟನೆಯು ೫-೧೦-೪೧ನೇ ದಿವಸ ಜರುಗಿತು. ಬಾಗಲಕೋಟೆ ತಾಲೂಕಿನಲ್ಲಿ ಚಿಕ್ಕ ಮ್ಯಾಗೇರಿ ಎಂಬ ಗ್ರಾಮವಿದೆ. ಅಲ್ಲಿಯವರು ೨೪.೭-೪೧ನೇ ದಿವಸದಿಂದಲೂ ಪ್ರತಿ ಸೋಮವಾರ ಅಲ್ಲಿಯ ಬಸವೇಶ್ವರ ದೇವಾಲಯದಲ್ಲಿ ನೆರೆದು ಶಿವಾನುಭವದ ಕಾರ್ಯಗಳನ್ನು ನಡಿಸುತ್ತಾ ಇದ್ದಾರೆ. ಅವರು ನಮಗೆ ೧೫-೧೦-೪೧ ನೇ ದಿವಸ ಬರೆದ ಪತ್ರದ ಮೇರೆಗೆ ಅವರಿಗೆ ಅವಶ್ಯದ ಸಲಹೆಗಳು ಕೊಡಲ್ಪಟ್ಟಿವೆ. ತಾ॥ ೩-೧೦-೧೯೪೧ ನೇ ದಿವಸ ಶ್ರೀಯುತ ಭೀಮಪ್ಪ ಸತ್ಯಪ್ಪ ಮುಡಿವಾಳರ ಇವರ ಪ್ರೋತ್ಸಾಹದ ಮೂಲಕ ಕಲಘಟಗಿ ತಾಲೂಕಿನಲ್ಲಿ ಮುತ್ತಿಗಿ ಎಂಬ ಗ್ರಾಮದಲ್ಲಿ ಶಿವಾನುಭವ ಸಂಘವು ಹೊಸದಾಗಿ ಸ್ಥಾಪಿಸಲ್ಪಟ್ಟಿತು. ಈಗ ಕಲಘಟಗಿ ತಾಲೂಕಿನಲ್ಲಿ ಈ ಸಂಘಗಳ ಚಟುವಟಿಕೆಗಳು ಹೆಚ್ಚಾಗಿ ಪಸರಿಸಿರುವದರಿಂದ ಅವುಗಳನ್ನೊಳಕೊಂಡ ಒಂದು ತಾಲೂಕು ಕೇಂದ್ರ ಶಿವಾನುಭವ ಸಂಘವು ಬೇಗನೆ ಸ್ಥಾಪಿಸಲ್ಪಡುವದರಲ್ಲಿದೆ. ಇದೇ ರೀತಿಯಾಗಿ ವೀರಶೈವ ಜನವಸತಿಯುಳ್ಳ ಸಣ್ಣ ದೊಡ್ಡ

ಗ್ರಾಮಗಳಲ್ಲೆಲ್ಲ ಚಟುವಟಿಕೆಗಳು ಅವಶ್ಯವಾಗಿ ನಡೆಯಬೇಕು. ಇವು ಗಳು ಹೆಚ್ಚಾದಲ್ಲಿ ಸಮಾಜದಲ್ಲಿ ಮುಂದೆ ಒಂದು ಬಲವಾದ ಕಟ್ಟ ನ್ನುಂಟುಮಾಡಲು ಅವು ಬಹು ಸಹಾಯವಾಗದೆ ಇರವು.

**(೨) ಗದುಗಿನ ಸಂಸ್ಕೃತಿ ಪ್ರಕಾಶನ ಸಮಿತಿಃ**— ಈ ಸಮಿತಿಯ ವರು ವೀರಶೈವ ಸಾಹಿತ್ಯ ಪರೀಕ್ಷೆಗಳನ್ನು ಏರ್ಪಡಿಸಬೇಕೆಂದು ಅಪೇಕ್ಷಿಸಿ ದ್ದಾರೆ. ಇವರು ಒಂದು ಪರೀಕ್ಷಾಮಂಡಲವನ್ನು ರಚಿಸಲೆಣಿಸಿದ್ದಾರೆ. ವೀರ ಶೈವ ಧಾರ್ಮಿಕ ಗ್ರಂಥಗಳ ಅಭ್ಯಾಸವು ಎಲ್ಲಕಡೆಗೆ ಸಕ್ರಮವಾಗಿ ನಡಿ ಯುವದು ಅತ್ಯಾವಶ್ಯಕವು. ಒಂದು ಕೇಂದ್ರ ಪರೀಕ್ಷೆ ಮಂಡಲದ ಮೂಲಕ ಈ ಧ್ಯೇಯವು ಕೈಗೂಡ ಬಹುದಾಗಿದೆ. ಈಗ ಅನೇಕ ವೀರಶೈವ ಧಾರ್ಮಿಕ ಗ್ರಂಥಗಳು ಪ್ರಕಟವಾಗಿರುತ್ತವೆ. ಅವುಗಳಲ್ಲಿ ಕೆಲವುಗಳನ್ನು ಆರಿಸಿ ಯೋಗ್ಯ ತರಗತಿಗಳನ್ನು ಮಾಡಿದಲ್ಲಿ ಈ ಕಾರ್ಯವು ಸರಿಯಾಗಿ ನೆರವೇರುವದು. ನಮ್ಮಲ್ಲಿ ಅನೇಕ ಧಾರ್ಮಿಕ ಪಾಠ ಶಾಲೆಗಳಿರುತ್ತವೆ. ಅವುಗಳಲ್ಲಿಯೂ ಕೂಡ ಪಠ್ಯ ಪುಸ್ತಕಗಳ ಯೋಗ್ಯ ವ್ಯವಸ್ಥೆ ಮತ್ತು ಮಧ್ಯವರ್ತಿ ಪರೀಕ್ಷಾ ಮಂಡಲ ಇವುಗಳುಂಟಾದಲ್ಲಿ ಅವುಗಳಲ್ಲಿಯೂ ಏಕ ಸೂತ್ರತೆಯು ಉಂಟಾಗದೆ ಇರದು.

**ತಪ್ಪು ತಿದ್ದು ಪಡೆಃ**—ಹೋದ ಸಂಚಿಕೆಯಲ್ಲಿ "ಹಸ್ತಲಿಖಿತ ಗ್ರಂಥ ಗಳ ಸಹಾಯ" ಈ ಶಿರೋ ಲೇಖದ ಕೆಳಗೆ ಶ್ರೀ ಚನ್ನಬಸವ ಸ್ವಾಮಿಗಳು ಬೆಲವಂತರ ಇವರು ಕೆಲವು ಗ್ರಂಥಗಳನ್ನು ಕಳಿಸಿರುವರೆಂದು ಕಾಣಿಸಿ ದ್ದೇವೆ. ಇದು ನಮ್ಮ ತಪ್ಪಾಗಿರುತ್ತದೆ. ಕಳಿಸಿದವರ ಹೆಸರು ಶ್ರೀ ಸಿದ್ಧರಾ ಮೇಶ್ವರಸ್ವಾಮಿ ಚನ್ನಬಸವೇಶ್ವರಸ್ವಾಮಿ ಎಂದಿರತಕ್ಕದ್ದು. ಹಾಗೆ ವಾಚ ಕರು ಅದನ್ನು ಓದಬೇಕೆಂದು ನಾವು ವಿನಂತಿ ಮಾಡಿಕೊಳ್ಳುತ್ತೇವೆ.

**ಕ್ಷಮಾಪಣೆಃ**— ಪ್ರೆಸ್ಸಿನ ವಿಶೇಷ ಕೆಲಸಗಳ ಮೂಲಕ ಈ ಸಂಚಿ ಕೆಯು ತಡವಾಗಿ ಹೊರಟಿದ್ದಕ್ಕೋಸ್ಕರ ವಾಚಕರು ನಮ್ಮನ್ನು ಕ್ಷಮಿ ಸಬೇಕೆಂದು ನಮ್ಮ ವಿನಂತಿ ಇದೆ.

# ಶಿವಾನುಭವ.

ವರ್ಷ ೧೬ | ಅಕ್ಟೋಬರ ೧೯೪೧. | ಸಂಚಿಕೆ ೧


## ವೇಳಾಳರ್


ಲೇ:- ಶ್ರೀ ಜಗದ್ಗುರು ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು,
ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.
( ಮುಕ್ಕಾಮು ಕಾವೇರಿ ಪಟ್ಟಣ )


ತಮಿಳುನಾಡಿನಲ್ಲಿ "ವೇಳಾಳರ್" ಎಂಬುದೊಂದು ಮತವಿದೆ. ಇವರು ಭೂಮಾದೇವಿಯ ಪುತ್ರರೆಂದು ಇವರ ಶಾಸ್ತ್ರ ಹೇಳುತ್ತದೆ. ರಾಮಾಯಣ ಕಾಲದಲ್ಲಿ ಇವರ ಮತ ಹುಟ್ಟಿತಂತೆ. ಇವರ ಜಾತಿಯ ಮೂಲ ಪುರುಷನಾರು ತಿಳಿದು ಬಂದಿಲ್ಲ. ಇವರಲ್ಲಿ ೬೪ ಒಳಪಂಗಡಳುಂಟು. ಅವುಗಳಲ್ಲಿ ತುಷುವ, ಕಾರಿಕಾಟ್, ತೊಂಡೈ ಮಂಡಲ, ತೊಳ್ಳಕಾದ (ಕೆಳಗಿವಿ ಅಗಲಾಗಿರುವವರು) ಕೊಂಗ (ಅರ್ಧನಗ್ನ) ಇವು ಮುಖ್ಯವಾದವು. ಈ ಪಂಗಡಗಳ ಜನರು ಹೆಚ್ಚು ಇರುವರು. ಇವರಲ್ಲಿ ಶಿವೋಪಾಸಕರೆ ಹೆಚ್ಚು. ವಿಷ್ಣು ಪೂಜಕರು ಕಡಿಮೆ. ಷಣ್ಮುಖ, ಗಣಪತಿ, ಕಾಳಿ ಮುಂತಾದ ದೇವಭಕ್ತಿಯೂ ಉಂಟು. ಇವರ ಜಾತಿಯಲ್ಲಿ ವಿವಾಹವಾಗ್ದಾನ ಕಾಲಕ್ಕೆ ಗಂಡನಿಗೆ ಶಿವಗೋತ್ರವನ್ನೂ ಹೆಂಡತಿಗೆ ವಿಷ್ಣುಗೋತ್ರವನ್ನೂ ಹೇಳುವ ವಾಡಿಕೆಯಿದೆ. ಇದಕ್ಕೆ ಇವರಲ್ಲಿ ಗಂಡಸರು ಶಿವಾಂಶಕರೆಂತಲೂ ಹೆಂಗಸರು ವಿಷ್ಣು ಅಂಶಕರೆಂತಲೂ ಅಭಿಪ್ರಾಯವಿರುವುದೇ ಕಾರಣ.

ವೇಳಾಳರ್ ಎಂಬುದು ಒಂದೇ ಜಾತಿಯಾಗಿದ್ದರೂ ತಷುವ, ಕಾರಿಕಾಟ, ಮುಂತಾದ ಒಳಪಂಗಡಗಳು ಪ್ರಾದೇಶವಾಚಕವಾಗಿವೆ. ಇವರಲ್ಲಿ ಒಂದು ಪಂಗಡದವರು ತುಷುವ ವೇಳಾಳರ್ ಎಂಬ ಪಂಗಡದವರು ಲಿಂಗಧಾರಿಗಳಾಗಿದ್ದಾರೆ. ಇವರ ಹೆಂಗಸರಿಗಿಲ್ಲ. ಇತ್ತೀಚೆಗೆ ಕೆಲಕೆಲವು ಹೆಣ್ಣುಮಕ್ಕಳೂ ಲಿಂಗಧಾರಣೆ ಮಾಡಿಕೊಂಡಿರುವರಂತೆ. ಇವರು ವಂಶ ಪರಂಪರೆಯಿಂದಲೂ ನಮ್ಮ ಪಂಗಡದಲ್ಲಿ ಲಿಂಗಧಾರಣೆಯಿದೆಯೆಂದು ಹೇಳುತ್ತಾರೆ. ಇವರು ಅಂಗಿಯನ್ನು ತೆಗೆದು ಮುಡಿಯಿಂದ ಬಂದಾಗ ನೋಡಿದರೆ ಲಿಂಗಧಾರಿಗಳಂತೆ ಕಾಣುವುದೇ ಇಲ್ಲ. ಇದಕ್ಕೆ ಕಾರಣ ವೇನಂದರೆ— ಇವರು ಕರಡಿಗೆಗೆ ಶಿವಧಾರವನ್ನು ಧರಿಸದೆ ಜನಿವಾರವನ್ನು ಹಾಕಿರುತ್ತಾರೆ. ಅದರಲ್ಲಿ ಜನಿವಾರಕ್ಕೆ ಗುಂಡು ಕರಡಿಗೆಯನ್ನು ಪವಣಿಸಿ ನಡದಲ್ಲಿ ಸಿಕ್ಕಿಸಿ ಬಿಡುತ್ತಾರೆ. ನೊಸಲಿಗೆ ಭಸ್ಮವನ್ನು ಧರಿಸಿ ಮೈಗೆ ಗಂಧವನ್ನು ಧರಿಸಿರುತ್ತಾರೆ. ಇದರಿಂದ ಇವರನ್ನು ನೋಡಿದೊಡನೆ ಶೈವ ಬ್ರಾಹ್ಮಣರಂತೆ ತೋರುತ್ತಾರೆ. ಇವರ ಮನೆಗಳಲ್ಲಿ ಜರಗುವ ಮದುವೆ ಮುಂತಾದ ಮಂಗಲ ಕಾರ್ಯಗಳಿಗೆ ಮಾಹೇಶ್ವರರನ್ನೇ ಕರೆಯಿಸುವ ವಾಡಿಕೆಯಿದೆಯಂತೆ. ಒಂದು ವೇಳೆ ಮಾಹೇಶ್ವರರು ದೊರಕದಿದ್ದರೆ ಬ್ರಾಹ್ಮಣರನ್ನು ಕರೆಯುತ್ತಾರಂತೆ. ಲಿಂಗಧಾರಿ ವೇಳಾಳರ್ ಎಲ್ಲರೂ ಶ್ರೀ. ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನಕ್ಕೆ ಶಿಷ್ಯರಾಗಿದ್ದಾರೆ. ಲಿಂಗಧಾರಣೆಯಲ್ಲಿ ಇವರಿಗೆ ಹೆಚ್ಚು ವಿಶ್ವಾಸವಿದೆ. ಗುರುಭಕ್ತಿಯಲ್ಲಿ ತುಂಬಾ ಶ್ರದ್ಧೆಯಿದೆ. ಆಚಾರನಿಷ್ಠರು. ಶಾಖಾಹಾರಪರರು. ಆದರೂ ವೀರಶೈವರೊಡನೆ ಬಳಕೆಯಿಲ್ಲ.

"ವೇಳಾಳರ್" ಎಂಬುದು ತಮಿಳು ಶಬ್ದ. ಇದಕ್ಕೆ ವ್ಯವಸಾಯಗಾರರು ಎಂದರ್ಥ. ವ್ಯವಸಾಯವೇ ಇವರ ಜಾತಿ ವೃತ್ತಿಯಾದ್ದರಿಂದ ಇವರಿಗೆ ಭೂದೇವಿ ಪುತ್ರರೆಂದು ಇವರ ಶಾಸ್ತ್ರದ ಕಲ್ಪನೆಯಂಬೇಕು. ಅಲ್ಲದೆ ಭೂದೇವಿ ಪುತ್ರ ಎಂಬುದೂ ವ್ಯವಸಾಯ ವೃತ್ತಿಜೀವನವನ್ನೇ ಸೂಚಿಸುತ್ತದೆ. ಇತ್ತೀಚೆಗೆ ವ್ಯಾಪಾರ, ವೈದ್ಯ ಮುಂತಾದ ಬೇರೆ ಉದ್ಯೋಗಗಳನ್ನೂ ಮಾಡುತ್ತಿದ್ದಾರೆ. ಇವರ ಮತಕ್ಕೆ "ಅಗಮುಡಿಯರ್" ಎಂಬ ಹೆಸರನ್ನೂ ಹೇಳುವುದು ಕ್ವಚಿತ್ತಾಗಿ ಇದೆಯೆಂದು ಕೇಳುತ್ತೇವೆ.

"ಕಂಬರ್" ಎಂಬವನು ತಮಿಳು ಕವಿ. ಈತನಿಗೆ ಈ ನಾಡಿನಲ್ಲಿ ಕಾಳಿದಾಸನಷ್ಟು ಯೋಗ್ಯತೆಯಿದೆ. "ಕವಿಚಕ್ರವರ್ತಿ" ಎಂಬುದು ಈತನ

ಬಿರುದು. ಈತನು ಕಾವ್ಯಗಳನ್ನು ಕಟ್ಟುವದರಲ್ಲಿ ತುಂಬಾ ಗಟ್ಟಿಗನೆಂದು ಹೇಳುವ ಅರ್ಥದಲ್ಲಿ; ಈತನ ಮನೆಯಲ್ಲಿ ಹಸುಗಳನ್ನು ಕಟ್ಟುವ ಗೂಟುಗಳು ಸಹ ಕವನವನ್ನು ಕಟ್ಟಿ ಹಾಡುತ್ತಿದ್ದವೆಂದು ಹೇಳಿಕೊಳ್ಳುವ ರೂಢಿ ಈ ನಾಡಿನಲ್ಲಿ ಬಂದಿದೆ. ಈತನು ತಮಿಳು ಭಾಷೆಯಲ್ಲಿ ರಾಮಾಯಣವನ್ನು ಬರೆದಿದ್ದಾನೆ. ಅದಕ್ಕೆ "ಕಂಬರ್ ರಾಮಾಯಣ" ಎಂದು ಹೆಸರು. ಅದರಲ್ಲಿ ಮೇಲ್ಕಂಡ ವೇಳಾಳರ್ ಜಾತಿಯ ವಿಚಾರವಿದೆಯೆಂದು ಹೇಳುತ್ತಾರೆ. ಆ ಕಾರಣದಿಂದ ವೇಳಾಳರ್ ಮತವು ರಾಮಾಯಣ ಕಾಲದಲ್ಲಿತ್ತೆಂದು ಹೇಳುವ ವಾಡಿಕೆ ಬಂದಿರಬಹುದು. ಆದರೆ ಇದು ಐತಿಹಾಸಿಕ ತಳಹದಿಯ ಮೇಲೆ ನಿಲ್ಲತಕ್ಕದ್ದಲ್ಲ. ಇದಲ್ಲದೆ ಈ ಕವಿಯು "ಏರಿಷುಬದ್" ಎಂಬ ಮತ್ತೊಂದು ಕಾವ್ಯವನ್ನು ಬರೆದಿದ್ದಾನಂತೆ. ಇದು ವೇಳಾಳರ್ ಮತಕ್ಕೆ ಸಂಬಂಧಪಟ್ಟುದು. ಇದರಲ್ಲಿ ಇವರ ವ್ಯವಸಾಯಕ್ಕೆ ಬೇಕಾಗುವ ೭೦ ಸಾಮಾನುಗಳ ವಿಚಾರವನ್ನು ವಿವರಿಸಿ ಅವನ್ನೆಲ್ಲ ಆಧ್ಯಾತ್ಮಿಕಕ್ಕೆ ಹೋಲಿಸಿದ್ದಾನಂತೆ. ಇದರಿಂದ ಈತನು ವೇಳಾಳರ್ ಕುಲಸ್ಥನಿರಬಹುದೆಂದು ಈ ಮತಸ್ಥರ ಊಹೆ.

ಈ ನಮ್ಮ ತಮಿಳು ನಾಡಿನ ಪ್ರಮಾಣದಲ್ಲಿ ಈ ವಿಷಯವಾಗಿ ಇನ್ನೂ ಹೆಚ್ಚಾಗಿ ಏನಾದರೂ ದಾಖಲೆಗಳು ದೊರಕಿದರೆ ಇನ್ನೊಂದು ಲೇಖನವನ್ನು ಬರೆಯಲಾಗುತ್ತದೆ.

---

# ದೀಕ್ಷಾವಾದ.

ಲೇಖಕ:— ಶ್ರೀ. ಮಾ. ನಂ. ನಂಜಪ್ಪನವರು ಬೆಂಗಳೂರು ನಗರ.

"ದೀಕ್ಷಾವಾದ" ಎಂಬ ವಿಷಯವಾಗಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ನನ್ನ ಲೇಖನವನ್ನು ಕುರಿತು ವಂಟಮುರಿಯ ಶ್ರೀ. ಭ. ಚ. ಪಟ್ಟೇದ ಅವರು ಉತ್ತರವನ್ನು ಬರೆಯಲು ತೊಡಗಿ ಜುಲೈ ಆಗಸ್ಟ ತಿಂಗಳ ಶಿವಾನುಭವಲ್ಲಿ ಕೆಲವು ಅಸಂಬದ್ಧ ವಿಚಾರಗಳನ್ನು ಹೊರ ಗೆಡವಿದ್ದಾರೆ.

ಶ್ರೀಯುತರು ಶಿವದೀಕ್ಷೆ ಅರ್ಥಾತ್ ಲಿಂಗಧಾರಣೆ ಎಂಬ ವಿಷಯ ವನ್ನು ಕುರಿತು ಬರೆಯಲಾರಂಬಿಸಿ ವಿಷಯಾಂತರ ಮಾಡಿಕೊಂಡು ಯಾವ ಯಾವದೋ ವಿಚಾರಗಳನ್ನು ಕುರಿತು ಬರೆಯುತ್ತಾರೆ.

ಅವರು 'ಲಿಂಗಧಾರಣೆ ಶಿವದೀಕ್ಷೆಗಳು ತಾತ್ವಿಕ ದೃಷ್ಟಿಯಿಂದ ಒಂದೇ ಎಂಬ ಮಾತು ಎಲ್ಲರಿಗೂ ಒಪ್ಪಿಗೆಯದೆ. ...ಜನ್ಮ ಲಿಂಗಧಾರಣದ ನಂತರ ಶಿವದೀಕ್ಷೆಯಾದರೆ ಆ ಬಾಲಕನಿಗೆ ಶಿವಾಚಾರ ಸಂಪನ್ನನಾಗ ಲಿಕ್ಕೆ ಹೆಚ್ಚಿಗೆ ಅನುವಾದೀತೇ ಹೊರತು ಘಾತವೇನೂ ಆಗುವದಿಲ್ಲವಲ್ಲ?" ಎಂದು ಕೇಳುತ್ತಾರೆ.

ಶ್ರೀ ಪಟ್ಟೆಯವರು ಈ ವಿಚಾರದಲ್ಲಿಯೇ ಹಾದಿ ತಪ್ಪುತ್ತಿರುವುದು. ಯಾಕೆಂದರೆ:- ಗುರುಹಿರಿಯರ ಸಹವಾಸ ಸಹಚರ್ಯೆಗಳ ಫಲವಾಗಿಯೂ ಗುರುಗಳಿಂದ ಬೋಧಿಸಲ್ಪಡುವ ಕ್ರಮವಾದ ಲಿಂಗಪೂಜಾ ವಿಧಾನದ (ಸೆರೆ ಬಿಡಿಸುವದರ) ಫಲವಾಗಿಯೂ ಬಾಲಕ ಅಥವಾ ಬಾಲಕಿಗೆ ಶಿವಾ ಚಾರ ಸಂಪನ್ನರಾಗಲು ಹೆಚ್ಚು ಅನುಕೂಲವಾದೀತೇ ಹೊರತು ಶ್ರೀ. ಪಟ್ಟೆಯವರು ಹೇಳುದಂತೆ "ಶಿವದೀಕ್ಷೆ" ಎಂದು ಹೆಸರಿಟ್ಟು ಮಾಡುವ ಸಂಸ್ಕಾರದಿಂದ ಕೆಲವು ಡಂಭಾಚಾರಗಳು ಬೆಳೆಯುವುದಕ್ಕೆ ಮಾತ್ರ ಅನುವಾಗುತ್ತದೆ.

ಹೇಗೆಂದರೆ:- "ಶಿವದೀಕ್ಷೆ ಎಂದು ಈಗ ಮಾಡುತ್ತಿರುವ ಉಪದೇಶ ಕಾರ್ಯದ ಕಾಲದಲ್ಲಿ ದೀಕ್ಷೆ ಹೊಂದುವವರಿಗೆ" ಜೋಳಿಗೆಯ (ಭಿಕ್ಷಾ ಪಾತ್ರೆಯನ್ನು ಕೊಡುತ್ತಾರೆ. (ಇದು ಬ್ರಾಹ್ಮಣರ ಅನುಕರಣದಾಚರಣೆ

ಎಂಬುದು ಸ್ಪಷ್ಟವಾಗಿ ಕಾಣುತ್ತದೆ.) ಈ ಜೋಳಿಗೆಯನ್ನು ಪಡೆದು ಭಿಕ್ಷೆಯನ್ನು ಮಾಡುವ ಅಧಿಕಾರವನ್ನು ಹೊಂದಿದ ದೀಕ್ಷಾವಂತರು ಈ ಜೋಳಿಗೆಯನ್ನು ತಮ್ಮ ಜೀವನ ನಿರ್ವಹಣಕ್ಕೆ ಒಂದು ಅತ್ಯಂತ ಸಹಕಾರಿಯಾದ ಸಾಧನವನ್ನಾಗಿ ಪರಿಗ್ರಹಿಸುವರಲ್ಲದೆ ಈ ಜೋಳಿಗೆಯ ಭಿಕ್ಷೆಯಿಂದ ಸಂಪಾದನೆ ಮಾಡುವ ದೈವದತ್ತವಾದ ಅಧಿಕಾರವೊಂದು ತಮಗೆ ದೊರೆಯಿತೆಂದೂ ಈ ಜೋಳಿಗೆಯೇ ದೀಕ್ಷೆಯ ಜೀವಾಳವೆಂದೂ ಇದರಿಂದ ನಾನೇ ವೀರಶೈವರಲ್ಲೆಲ್ಲಾ ಶ್ರೇಷ್ಠವಾದ ಗುಂಪಿಗೆ ಸೇರಿದವನೆಂದೂ ಹೀಗೆಯೇ ಇನ್ನೂ ಅನೇಕವಾದ ಅರ್ಥವಿಲ್ಲದ ಅಹಂಭಾವನೆಗಳನ್ನು ಬೆಳೆಸಿಕೊಂಡು ಸಮಾಜದಲ್ಲಿ ಮೇಲು ಕೀಳುಗಳ ವಿಷ ಬೀಜವನ್ನು ಬಿತ್ತಲು ಕಾರಣರಾಗುತ್ತಿದ್ದಾರೆ.

ಆದರೆ ಶ್ರೀ ಪಟ್ಟೆಯವರು ದೀಕ್ಷೆಯನ್ನುಹೊಂದಿದವರೆಲ್ಲರೂ ಹೀಗಾಗುವರೆ ? ಎಂದು ಕೇಳಬಹುದು. ಎಲ್ಲರೂ ಅಲ್ಲದಿದ್ದರೂ ೧೦೦ಕ್ಕೆ ೯೦ ಜನರು ಇದೇ ಭಾವನೆಯಿಂದಲೇ ದೀಕ್ಷೆಪಡೆದಿರುವ ನಾವೇ ಶ್ರೇಷ್ಠರು, ಇತರರಿಗಿಂತಲೂ ನಮಗೆ ಉನ್ನತ ಸ್ಥಾನವಿರಬೇಕು, ಎಲ್ಲ ವೀರಶೈವರ ಮನೆಗಳಲ್ಲಿಯೂ ನಾವು ಭೋಜನಾದಿಗಳನ್ನು ಮಾಡುವವಿಲ್ಲ, ಶುದ್ಧ ಸನಾತನ ಸಂಪ್ರದಾಯ (?) ದವರಲ್ಲಿ ಮಾತ್ರ ಮಾಡುವೆವು, ಮುಂತಾದ ಅಹಂಬ್ರಹ್ಮದ ಮಾತುಗಳಿಂದ ಮೆರೆಯುತ್ತಿರುವುದು ಪ್ರತ್ಯಕ್ಷ ಪ್ರಮಾಣೀಕರಣವಲ್ಲವೆ ?

ಇದಲ್ಲದೆ ಪುರಾತನರಾದ ಬಸವ ಪ್ರಭು ರೇವಣಸಿದ್ಧಾದಿ ಪ್ರಮಥರ ಕಾಲದಿಂದಲೂ ಯಾವ ಶರಣರ ಚರಿತ್ರೆಯನ್ನು ನೋಡಿದರೂ ಒಮ್ಮೆ ವೀರಶೈವ ದೀಕ್ಷೆಯನ್ನು ಹೊಂದಿ ಪೂರ್ವಜಾತಿಯನ್ನು ಕಳೆದುಕೊಂಡವರು ಪುನಃ ಎರಡನೆಯ ಬಾರಿ ಶಿವದೀಕ್ಷೆಯನ್ನು ಪಡೆದುದು ಎಲ್ಲಿಯೂ ಯಾರ ಜೀವಿತ ಕಥೆಯಲ್ಲಿಯೂ ಕಾಣುವುದಿಲ್ಲ. ಈ ದೃಷ್ಟಿಯಿಂದ ನೋಡಿದರೂ ಸಹ ಜೋಳಿಗೆ ಯ ಅನುಗ್ರಹವೇ ಮೊದಲಾದ ಅನೇಕ ಪರಾನುಕರಣದ ಆಚಾರವಿಚಾರಗಳಿಂದ ಕೂಡಿದ ಈಗಿನ ಕೆಲವು ಕಡೆಯ ದೀಕ್ಷಾ ಪದ್ಧತಿಯು ಅನ್ಯರಾಚರಣೆಯ ಅನುಕರಣವೆಂಬುದು ಸ್ಪಷ್ಟವಾಗಿ ಕಾಣುತ್ತಿದೆ.

ಇತ್ತೀಚೆಗೆ ಹಲವು ಮಹಾನುಭಾವರು ಇದನ್ನು ‘ ದೀಕ್ಷೋಪನಯನ ” ವೆಂತಲೂ ಕರೆಯತೊಡಗಿದ್ದಾರೆ ! ಪರಾನುಕರಣ ಅಥವಾ ಅಂಧಾನುಕರಣವೇ ಇದೆಂಬುದಕ್ಕೆ ಇದಕ್ಕಿಂತ ಬೇರೆ ಸಾಕ್ಷಿಯೇ ಬೇರಿಲ್ಲ.

ಹೀಗಿದ್ದರೂ ಶ್ರೀ ಪಟ್ಟಿಯವರು ತಮ್ಮ ಬರಹದ ಮೂಲಕ ವಿಶೇಷವಾದ ಕೋಪ ತಾಪಗಳಿಗೆ ವಶರಾಗಿದ್ದಾರೆ. ತಮಗೆ ಬಂದ ಕೋಪವನ್ನೆಲ್ಲ ಲೇಖನಿಯ ಮೂಲಕ ಪತ್ರಿಕೆಗೆ ಇಳಿಸಿಬಿಟ್ಟಿದ್ದಾರೆ. ಲೇಖನವನ್ನು ಬರೆದರೆ ಓದುಗರೊಪ್ಪುವಂತೆ ಗಾಂಭೀರ್ಯದಿಂದ ವಿಚಾರ ಪರಿಪ್ಲುತವಾಗಿರಬೇಕು. ಲೇಖನದ ಗುರಿಯಾದ "ವಿಚಾರ" ವನ್ನು ಮಾತ್ರ ಖಂಡಿಸುವ ಅಥವಾ ಮಂಡಿಸುವ ನ್ಯಾಯವಾದ ರೀತಿಯಿರಬೇಕು.

ಶ್ರೀಯುತ ಪಟ್ಟಿಯವರ ಲೇಖನದಲ್ಲಿ ಈಚೆಗೆ ಯಾವದೂ ಇರದೆ "ದೀಕ್ಷಾವಾದ" ಎಂಬ ಲೇಖನದ ಸಂಶಯ ಅಥವಾ ಪ್ರಶ್ನಗಳಿಗೊಂದಕ್ಕೂ ಉತ್ತರವನ್ನೇ ಬರೆಯದೆ ಅನ್ಯಾಯವಾಗಿ ಕೋಪಿಸಿಕೊಂಡಿದ್ದಾರೆ. ಅವರ ಕೋಪಕ್ಕೆ ಅವರ ಲೇಖನದಲ್ಲಿಯ ಈ ಕೆಳಗಿನ ಅವರ ವಾಕ್ಯಗಳೇ ಸಾಕ್ಷಿ—

" ಪುನಃ ಪುನಃ ಅವರ ಗುಂಪಿನ ಬೇರೆ ಬೇರ ಜನರು ಹಾಡುತ್ತ ಹೋಗಿ ದೊಡ್ಡ ಗಲಭೆ ಎಬ್ಬಿಸಬೇಕೆಂದು ಸಂಕಲ್ಪಿಸಿಕೊಂಡಿದ್ದರೆ ನಾನೇನೂ ಹೆದರುವವನಲ್ಲ. ಅದೊಂದು ನಿಮ್ಮ ಭ್ರಮೆ ಮಾತ್ರ. ಲಿಂಗ ಮುದ್ರೆ ಎಂದು ನಾನು ಒಮ್ಮೆಯಲ್ಲ ಎರಡು ಬಾರೆಯಲ್ಲ ನೂರಾರು ಸಾರೆ ಸಹ ಕೈಯತ್ತಿ ಸಾರಿ ಸಾರಿ ಹೇಳಲಿಕ್ಕೆ ಸಿದ್ಧನಿದ್ದೇನೆ." "ಶ್ರೀ ಜೀರಿಗೆಯವರ ಬೆಂಗಳೂರ ಗುಂಪಿನವರು ವ್ಯಾಖ್ಯಾನಕೊಡುವುದಾದರೆ ಲೇಖ ಬರೆಯುವದಾದರೆ ನಮ್ಮ ಕಡೆಯವರಾದರೂ ಗ್ರಂಥಗಳನ್ನು ನೋಡಿ ಒಳ್ಳೇ ಆರ್ಭಟಿಯಿಂದ ಸಾಂಗವಾಗಿ ಹೇಳುವವರು ತುಂಬಿರುವರು" ಮುಂತಾಗಿ ಏನೇನೋ ಬರೆದುಕೊಂಡಿದ್ದಾರೆಯಲ್ಲದೆ ಒಂದೆರಡು ವಚನಗಳನ್ನು ಬಳಿಸಿಕೊಂಡಿದ್ದಾರೆ.

ಪಾಪ ! ಶ್ರೀಯುತರು ಬಳಿಸಿಕೊಂಡಿರುವ ವಚನಗಳು ಅವರ ವಾದಕ್ಕೆ ವಿರುದ್ಧವಾಗಿವೆ ! ವಚನಶಾಸ್ತ್ರಕ್ಕೆ ಅನುಭವಯುಕ್ತವೂ ಹೃತ್ಪೂರ್ವಕವೂ ಆದ ನಿಶ್ಚಲ ಬುದ್ಧಿಯಿಂದ ಮಾಡುವ ಅರ್ಥವೇ ನಿಜವಾದ ಅರ್ಥವೆಂಬುದೂ ವಕೀಲರುಗಳಂತೆ ತಮ್ಮ ವಾದಕ್ಕೆ ಅನುಕೂಲವಾಗಿ ಬಳಿಸಿಕೊಳ್ಳುವ ಅರ್ಥವು ತಾತ್ಕಾಲಿಕವಾಗಿ ಮಾತ್ರ ಫಲದಾಯಕವಾಗಿ ಕಂಡರೂ ಕಾಲಕ್ರಮದಲ್ಲಿ ಅದು ತಪ್ಪರ್ಥವೆಂಬುದು ಎಲ್ಲರಿಗೂ ಮನವರಿಕೆಯಾಗುವದೆಂಬುದೂ ಶ್ರೀ. ಪಟ್ಟೇಯವರಿಗೂ ತಿಳಿದ ವಿಚಾರವೇ ಆಗಿದೆ.

ಪಾಪ! ಶ್ರೀ. ಪಟ್ಟಿಯವರನ್ನು ಹೆದರಿಸಲು ಯಾರು ಹೋಗಿದ್ದರೋ ತಿಳಿಯದು. ದೊಡ್ಡ ಗಲಭೆ ಎಬ್ಬಿಸಲು (ಸದ್ಯಃ ದೊಂಬಿ ಎಂದು ಬರೆಯಲಿಲ್ಲ) ಯಾರು ಬಂದಿದ್ದರೋ ಕಾಣಲಿಲ್ಲ. ಜೀರಗೆಯವರ ಗುಂಪು ಎಂಬ ನಾಮಕರಣ ಬೇರೆ ಮಾಡಿದ್ದಾರೆ. ಇದನ್ನೆಲ್ಲ ನೋಡಿದರೆ ಎಳೆಯಲಾರದ ಎತ್ತು ಮೊಳೆಯ ಮೇಲೆ ಬಿದ್ದಿತು ಎಂಬಂತಾಗಿದೆ.

ಶ್ರೀಯುತರಿಂದ ಸಾಧ್ಯವಿದ್ದಿದ್ದರೆ "ದೀಕ್ಷಾವಾದ" ಎಂಬ ಲೇಖನದಲ್ಲಿದ್ದ ಪ್ರಶ್ನೆಗಳಿಗೆ ಉತ್ತರವನ್ನೂ ತಮ್ಮ ಅಭಿಪ್ರಾಯವನ್ನೂ ಸಮಂಜಸವಾಗಿ ಬರೆಯಬೇಕಾಗಿದ್ದಿತು. ಅವರು ಹಾಗೆ ಮಾಡದೆ ಒಂದು ಪ್ರಶ್ನೆಗೂ ಉತ್ತರವನ್ನೇ ಹೇಳದೆ 'ನಾನು ಹೆದರುವವನಲ್ಲ' ಮುಂತಾಗಿ ಅಸಂಬದ್ಧ ಬರೆಹವನ್ನು ಬರೆಯುವುದು ತರವಲ್ಲ. ಪ್ರಶ್ನೆಗಳಿಗೆ ಉತ್ತರವನ್ನು ಕೊಡಲು ತಮ್ಮಿಂದ ಸಾಧ್ಯವಿಲ್ಲದಿದ್ದರೆ ಸುಮ್ಮನಿರಬಹುದಾಗಿದ್ದಿತು. ಆ ಪ್ರಶ್ನೆಗಳಿಗೆ ಶ್ರೀ. ಪಟ್ಟಿಯವರೇ ಉತ್ತರವನ್ನು ಕೊಡಬೇಕಾಗಿ ಯಾರೂ ಕೇಳಿರಲಿಲ್ಲ. ಮಠಾಧಿಕಾರಿಗಳೂ ಜಿಜ್ಞಾಸುಗಳೂ ಆದ ಯಾರು ಬೇಕಾದರೂ ಅವುಗಳಿಗೆ ಉತ್ತರಗಳನ್ನೂ ಅಭಿಪ್ರಾಯಗಳನ್ನೂ ಪ್ರಕಟಿಸಬಹುದಾಗಿ ಅದರಲ್ಲಿಯೇ ಕೇಳಿಕೊಳ್ಳಲಾಗಿದೆ.

"ದೀಕ್ಷಾವಾದ" ಎಂಬ ಲೇಖನದಲ್ಲಿಯ ಪ್ರಶ್ನೆ ಮಾಲಿಕೆಯಂತಿರುವ ಆ ವಿಷಯಗಳು ಕೇವಲ ಜಿಜ್ಞಾಸು ಬುದ್ಧಿಯಿಂದ ಬರೆದವುಗಳೇ ಹೊರ್ತು ಪಾಂಡಿತ್ಯ ಪ್ರದರ್ಶನಕ್ಕಾಗಿ ಬರೆದವುಗಳಲ್ಲವೆಂಬುದು ಅವುಗಳನ್ನೋದುವ ಸಹೃದಯರೆಲ್ಲರಿಗೂ ಸ್ಪಷ್ಟವಾಗಿ ಗೊತ್ತಾಗುತ್ತಿದೆ. ಹೀಗಿದ್ದರೂ ಶ್ರೀ. ಪಟ್ಟಿಯವರು ಅವುಗಳೊಂದಕ್ಕೂ ಸದುತ್ತರವನ್ನು ಬರೆಯದೆ 'ನಮ್ಮ ಕಡೆಯೂ ಬೇಕಾದಷ್ಟು ಜನರಿದ್ದಾರೆ!' ಮುಂತಾಗಿ ವ್ಯರ್ಥಾಲಾಪವನ್ನು ಮಾಡಿದ್ದಾರೆ. ಶ್ರೀ ಪಟ್ಟಿಯವರನ್ನು ಹೆದರಿಸಲು ಕಾರಣವಾದರೂ ಏನು? ಅವರೇನು ಏನೂ ಅರಿಯದ ಮಕ್ಕಳೆ? ನಮ್ಮ ಕಡೆಯೂ ಬೇಕಾದಷ್ಟು ಜನ ಬರೆಯುವವರಿದ್ದಾರೆ ಎಂದು ಸವಾಲು ಹಾಕುವ ಅವಶ್ಯಕತೆಯಾದರೂ ಏನಿದ್ದಿತು? ಉತ್ತರಕರ್ನಾಟಕದಲ್ಲಿ ವಿದ್ಯಾವಂತರೂ ಅನುಭವಿಗಳೂ ಇಲ್ಲವೆಂದು ಯಾರಾದರೂ ಶ್ರೀ ಪಟ್ಟಿಯವರಿಗೆ ಹೇಳಿದ್ದಾರೆ?

ಉತ್ತರ ಕರ್ನಾಟಕವು ಲಿಂಗಾಯತ ಜನಾಂಗದ ಕೇಂದ್ರಸ್ಥಾನದಂತಿರುವುದೆಂಬುದೂ ಲಿಂಗಾಯತರಲ್ಲಿಯ ವಿದ್ವಾಂಸರೂ ಅನುಭಾವಿ,

ಗಳೂ ಪ್ರತಿಭಾಶಾಲಿಗಳೂ ಉತ್ತರಕರ್ನಾಟಕದಲ್ಲಿಯೂ ಹೆಚ್ಚು ಸಂಖ್ಯೆಯಲ್ಲಿದ್ದಾರೆಂಬುದೂ ಎಲ್ಲರಿಗೂ ತಿಳಿದೇ ಇದೆ.

ಹೀಗಿರುವಾಗ ಶ್ರೀ ಪಟ್ಟೆಯವರು 'ನಮ್ಮ ಕಡೆಯೂ ಇದ್ದಾರೆ' ಎಂದು ಹೊಸದಾಗಿ ಹೇಳಲು ಹೊರಟಿರುವುದನ್ನು ನೋಡಿದರೆ ಇದು ಲೇಖಕರಲ್ಲಿಯೇ ನಮ್ಮ ಕಡೆಯವರು— ನಿಮ್ಮ ಕಡೆಯವರು ಎಂಬ ಭೇದ ಬುದ್ಧಿಯನ್ನು ಕಲ್ಪಿಸಿ ಇಲ್ಲದ ವಿರೋಧ ಭಾವನೆಗಳನ್ನು ಹಬ್ಬಿಸುವ ವೃತ್ತಿ ಎಂದೂ ಶ್ರೀ ಪಟ್ಟೆಯವರಿಗೆ ಅರಿವಾಗದಂತೆಯೇ ಅವರ ಲೇಖನಿಯು ಈ ತೆರದ ವೃತ್ತಿಗೆ ಕೈಹಾಕಿದೆ ಎಂದೂ ಕಂಡು ಬರುತ್ತದೆ.

ಶ್ರೀ. ಪಟ್ಟೆಯವರ ಬರೆಹಕ್ಕೆ ಉತ್ತರವನ್ನು ಬರೆಯುವದೇ ಅನವಶ್ಯಕವಾಗಿದ್ದಿತಾದರೂ ಅವರು ಅನ್ಯಥಾ ಭಾವಿಸಿಕೊಂಡಾರೆಂದು ಈ ಮೂಲಕ ಅವರ ವಿಚಾರಗಳನ್ನು ಖಂಡಿಸಬೇಕಾಯಿತು.

ಶ್ರೀ ಪಟ್ಟೆಯವರಲ್ಲಿ ಈಗಲೂ ವಿನಯಪೂರ್ವಕ ಸೂಚನೆಯೇನಂದರೆಃ—"ದೀಕ್ಷಾವಾದ" ಎಂಬ ಲೇಖನದಲ್ಲಿಯ ಪ್ರಶ್ನೆ ಮಾಲಿಕೆಗೆ ಸಮಂಜಸವಾದ ಉತ್ತರಗಳನ್ನು ಅಥವಾ ಅಭಿಪ್ರಾಯಗಳನ್ನು ಪ್ರಕಟಿಸಲು ತಮ್ಮಿಂದ ಸಾಧ್ಯವಿದ್ದರೆ ಬರೆದು ಪ್ರಕಟಿಸುವವರಾಗಬೇಕು. ಹಾಗಲ್ಲದೆ ವೃಥಾ ಲೇಖಕರುಗಳ ಮೇಲೆ ವೈಯಕ್ತಿಕವಾಗುವಂತಹ ಸವಾಲುಗಳನ್ನು ಹಾಕುವುದು ಅಪ್ರಕೃತ.

ಶ್ರೀಯುತ ಪಟ್ಟೆಯವರು ಇನ್ನು ಮುಂದೆಯಾದರೂ "ವಾದೇ ವಾದೇ ಜಾಯತೇ ತತ್ವಬೋಧಃ" ಎಂಬ ವಾಕ್ಯವನ್ನು ಸಾರ್ಥಕಗೊಳಿಸುವವರಾಗಲಿ.

---

# ಚಂದಾದಾರರಲ್ಲಿ ಅರಿಕೆ.

ಶಿವಾನುಭವ ಮಾಸಪತ್ರಿಕೆಯು ಪ್ರತಿತಿಂಗಳು ೧೫ನೇ ತಾರೀಖಿಗೆ ಪ್ರಕಟವಾಗುತ್ತಿರುತ್ತದೆ. ಅಂದರೆ ಇದೇ ತಾರೀಖಿನ ದಿವಸ ಎಲ್ಲ ಚಂದಾದಾರರಿಗೆ ವಿಜಾಪುರದಲ್ಲಿ ಪೋಷ್ಟಿಗೆ ಹಾಕಲ್ಪಡುವದು. ಆದ್ದರಿಂದ ಈ ಅವಧಿಯಲ್ಲಿ ಎಲ್ಲ ಜನರಿಗೆ ಸಂಚಿಕೆಗಳು ಮುಟ್ಟಲಿಕ್ಕೆಬೇಕು. ಒಂದು ವೇಳೆ ಯಾವದೇ ಕಾರಣದಿಂದ ಈ ಅವಧಿಯಲ್ಲಿ ಮುಟ್ಟದಿದ್ದಲ್ಲಿ ಚಂದಾದಾರರು ಆಗಿಂದಾಗ್ಗೆ ನಮಗೆ ತಿಳಿಸಿದಲ್ಲಿ ಮತ್ತೊಂದು ಸಂಚಿಕೆಯನ್ನು ಕಳಿಸಿಕೊಡುತ್ತೇವೆ. ಎಷ್ಟೋ ಚಂದಾದಾರರು ಸಂಚಿಕೆ ಮುಟ್ಟದಿದ್ದ ಬಗ್ಗೆ ೬—೭ ತಿಂಗಳುಗಳು ಅಥವಾ ಒಂದು ವರ್ಷದ ಮೇಲೆ ನಮಗೆ ತಿಳಿಸಿ ಸಂಚಿಕೆಗಳನ್ನು ಕಳಿಸಿಕೊಡಲಿಕ್ಕೆ ಬರೆಯುತ್ತಾರೆ. ಆದರೆ ಸಂಚಿಕೆಗಳು ಹೊರಟ ಮೇಲೆ ಬಹಳ ದಿವಸಗಳ ತರುವಾಯ ಅವು ಶಿಲ್ಕು ಉಳಿಯುವ ಸಂಭವವಿರುವುದಿಲ್ಲ. ಆದ್ದರಿಂದ ಈ ರೀತಿ ನಮಗೆ ಪತ್ರ ಬರೆದವರಿಗೆ ಸಂಚಿಕೆಗಳು ಶಿಲ್ಕು ಇರುವುದಿಲ್ಲವೆಂದು ಪತ್ರ ಬರೆಯಬೇಕಾಗುತ್ತದೆ. ಆದ್ದರಿಂದ ಎಲ್ಲ ಚಂದಾದಾರರು ಈ ವಿಷಯವನ್ನು ಲಕ್ಷಿಸಿ ಸಂಚಿಕೆಗಳು ಮುಟ್ಟದಿದ್ದಲ್ಲಿ ಆಗಿಂದಾಗ್ಗೆ ನಮಗೆ ಬರೆದು ತರಿಸಿಕೊಳ್ಳಬೇಕೆಂದು ನಮ್ಮ ವಿನಂತಿ ಇದೆ.

ಮ್ಯಾನೇಜರ.

---

ಇದನ್ನು ವಿಜಾಪುರದಲ್ಲಿ ರಾ॥ ಬ॥ ಫ. ಗು. ಹಳಕಟ್ಟಿ ಇವರು ತಮ್ಮ
"ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ ಮುದ್ರಿಸಿದರು.
ಮತ್ತು ಅವರು ವಿಜಾಪುರದಲ್ಲಿ ಉಪಲೀಬುರಜ ಓಣಿಯಲ್ಲಿರುವ ತಮ್ಮ
೧೬೨೦ (ಅ) ಮನೆಯಲ್ಲಿ ಪ್ರಸಿದ್ಧಿಸಿದರು.

ಶ್ರೀ





ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬] ನವ್ಹೆಂಬರ ೧೯೫೧ [ಸಂಚಿಕೆ ೨


## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೬ | ನವ್ಹಂಬರ ೧೯೪೧. | ಸಂಚಿಕೆ ೨ |
|---|---|---|

## ಜಂಗಾಲ್.

(ಲೇಃ— ಶ್ರೀ. ಜ. ಪ. ಚನ್ನಬಸವರಾಜದೇಶಿಕೇಂದ್ರಸ್ವಾಮಿಗಳು, ಜಗದ್ಗುರು ಶ್ರೀ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ, ಮುಕ್ಕಾಂ ಶೇಲಂ.)

ಶೇಲಂ ಜಿಲ್ಲೆಯಲ್ಲಿ 'ಜಂಗಾಲ್' ಎಂಬದೊಂದು ಪಂಗಡವಿದೆ. ಶೇಲಂ ಒಂದರಲ್ಲಿಯೆ ಮುನ್ನೂರಕ್ಕೆ ಮೇಲ್ಪಟ್ಟು ಇವರ ಮನೆಗಳಿವೆ. ತಿರುಚನಾಪಲ್ಲಿಯಲ್ಲಿಯೂ ಇವರ ಜನಾಂಗವಿದೆಯೆಂದು ಹೇಳುತ್ತಾರೆ. ಎಲ್ಲರೂ ಲಿಂಗಧಾರಿಗಳಾಗಿದ್ದಾರೆ. ವೀರಶೈವರೆಂದು ಹೇಳಿಕೊಳ್ಳುತ್ತಾರೆ. ಆದರೆ ಇವರ ಆಚಾರ ಶೈವಾಚಾರ, ಆಹಾರ ಮಾಂಸಾಹಾರ. ಇತ್ತೀಚಿಗೆ ಹಲಕೆಲವರು ಮಾಂಸಾಹಾರವನ್ನು ಬಿಟ್ಟಿರುವೆವೆಂದು ಹೇಳುತ್ತಾರೆ. ಬಿಟ್ಟಂತೆಯೂ ತೋರುತ್ತದೆ. ಇವರ ಲಿಂಗಧಾರಣೆಯಾದರೂ ವೀರಶೈವ ಪದ್ಧತಿಯನ್ನನುಸರಿಸಿಲ್ಲ. ಇವರಲ್ಲಿ ಹುಟ್ಟಿದಾಗಲೆ ಲಿಂಗ ಧಾರಣವಾಗಬೇಕೆಂಬ ನಿಯಮವಿಲ್ಲ. ಶಿವದಾರವೆ ಇರಬೇಕೆಂಬ ಶಾಸ್ತ್ರ ವಿಲ್ಲ. ಏಳೆಂಟು ವರುಷಗಳು ಕಳೆದನಂತರ ಯಾವಾಗಲಾದರೂ ಲಿಂಗ ಧರಿಸುತ್ತಾರೆ. ಅಲ್ಲಿಯ ವರೆಗೂ ಆ ಮಕ್ಕಳು ಬ್ರಾಹ್ಮಣರ ಮಕ್ಕಳಂತೆ ಭವಿಗಳಾಗಿಯೆ ಇರಬೇಕು. ಶಿವದಾರ ಸಿಕ್ಕದಿದ್ದರೆ ಜನಿವಾರಕ್ಕೇನೆ ಒಂದು ಸಣ್ಣ ಬಟ್ಟೆಯಲ್ಲಿ ಲಿಂಗವನ್ನು ಧರಿಸಿ ನಡದಲ್ಲಿ ಸಿಕ್ಕಿಸಿ ಬಿಡುತ್ತಾರೆ. ನೋಡುವವರಿಗೆ ಲಿಂಗಕಾಣದೆ ಬರಿ ಜನಿವಾರವೆ ಕಾಣಿಸುತ್ತದೆ. ಮೇಲಾಗಿ ಮೈಗೆ ವಿಶೇಷವಾಗಿ ಗಂಧವನ್ನು ಧರಿಸಿಬಿಡುತ್ತಾರೆ. ಇದರಿಂದ ನೋಡಿದ ತಕ್ಷಣವೆ ಶುದ್ಧಶೈವರಂತೆ ಭಾಸವಾಗುತ್ತದೆ. ಒಬ್ಬೊಬ್ಬರು ಮಾತ್ರ

ವೀರಶೈವರಂತೆಯೆ ಕರಡಿಗೆಯಲ್ಲಿ ಶಿವದಾರ ಸಹಿತ ಲಕ್ಷಣವಾಗಿ ಎದೆಯ ಮೇಲೆ ಧರಿಸುತ್ತಾರೆ. ಇವರಲ್ಲಿ ಲಿಂಗವು ಶಿಲಾಸಂಬಂಧಿಯಾದುದೆ ಇರಬೇಕೆಂಬ ಕಡ್ಡಾಯವಿಲ್ಲ. ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದಂತೆ ಸ್ಫಟಿಕ, ಚಂದ್ರಕಾಂತ, ಸೂರ್ಯಕಾಂತ, ಶಿಲಾ, ಇಲ್ಲವೆ ಗಾಜು ಇವು ಗಳಲ್ಲಿ ಯಾವುದಾದರೂ ಪರವಾ ಇಲ್ಲ. ಲಿಂಗಕ್ಕೆ ಕಂತೆಯನ್ನು ಇಟ್ಟೆ ತೀರಬೇಕೆಂಬ ನಿಯಮವಿಲ್ಲ. ಲಿಂಗವು ಪಂಚಸೂತ್ರಕ್ಕೆ ಸರಿಯಾಗಿಯೆ ಇರಬೇಕೆಂಬ ಅಪೇಕ್ಷೆಯಿಲ್ಲ. (ಈ ಲೋಪವು ಎಲ್ಲೆಲ್ಲಿಯೂ ಇದೆ.) ರುದ್ರಾಕ್ಷಿಯನ್ನು ಮಾತ್ರ ಪ್ರತಿಯೊಬ್ಬರೂ ಒಂದೊಂದನ್ನು ಶ್ರದ್ಧೆಯಿಂದ ಚಿನ್ನಕಟ್ಟಿ ಇಲ್ಲವೆ ಶಿವದಾರದಲ್ಲಿ ಧರಿಸುತ್ತಾರೆ. ಭಸ್ಮಕ್ಕೆ ಗೌಪ್ಯತೆಯಿಲ್ಲ. ಪಾವಿತ್ರತೆಯಿಲ್ಲ. ಭಂಡಾರದಂತೆ ಎಲ್ಲೆಲ್ಲಿಯೂ ಉಪಯೋಗಿಸುತ್ತಾರೆ. ಬಟ್ಟೆಯ ಒಂದು ಚಿಕ್ಕಚೀಲದಲ್ಲಿ ಭಸ್ಮದ ಹುಡಿಯನ್ನು ತುಂಬಿ ಅದನ್ನು ನಡದಲ್ಲಿಯೆ ಒಬ್ಬೊಬ್ಬರು ಇಟ್ಟುಕೊಂಡಿರುತ್ತಾರೆ. ಜಂಗಾಲ್ ಅಂದರೆ ಜಂಗಮ ಎಂದು ಇವರು ಹೇಳುತ್ತಾರೆ.

ಮೇಲ್ಕಂಡ ಜಂಗಾಲ್‌ರಲ್ಲಿ ಉಪ್ಪಿನವರು, ಮಾಣಿಕ್ಯದವರು, ಹವ ಳದವರು, ಹೂಕಟ್ಟುವವರು ಎಂದು ಐದು ಒಳಭೇದಗಳಿವೆ. ಇವು ಅವರವರ ಉದ್ಯೋಗದಿಂದ ಬಂದ ಭೇದಗಳೆಂದು ಆ ಹೆಸರುಗಳಿಂದಲೆ ಸ್ಪಷ್ಟವಾಗುತ್ತದೆ. ಅವರೂ ಒಪ್ಪುತ್ತಾರೆ. ಇವುಗಳಲ್ಲಿ ಮೊದಲಿನವೆರಡು ಮಾತ್ರ ಅತಿ ಪ್ರಾಮುಖ್ಯವಾದವುಗಳು. ಇವೆರಡು ಭೇದಗಳು ಇವರಲ್ಲಿ ಇಂದಿಗೂ ನಿಂತುಬಂದಿವೆ. ಉಪ್ಪಿನವರು ಪಪ್ಪಿನವರಲ್ಲಿ, ಪಪ್ಪಿನವರು ಉಪ್ಪಿನವರಲ್ಲಿ ಹೀಗೆ ಪರಸ್ಪರ ಬಳಿಕೆ ಭೋಜನ, ಕೊಡತಕ್ಕೊಳ್ಳುವುದು ಎಲ್ಲವೂ ಉಂಟು. ಆದರೆ ಮೇಲ್ಕೀಳುಗಳ ವಿಚಾರದಲ್ಲಿ ಮಾತ್ರ ಭೇದ ವೆಣಿಸುತ್ತಾರೆ.

ಜಂಗಾಲ್‌ರಲ್ಲಿ ರಾಜಮಾಣಿಕ್ಯಭಂಡಾರ, ನಟೀಶಬಂಡಾರ, ಅರು ಣಾಚಲಂ, ಸುಬ್ರಹ್ಮಣ್ಯ, ಸುಂದರಂ, ಮುಂತಾಗಿ ಹೆಸರಿರುತ್ತವೆ. ಅಲ್ಲದೆ ಸಿದ್ಧಪ್ಪಶೆಟ್ಟಿಯಾರ್, ನಂಜಪ್ಪಶೆಟ್ಟಿಯಾರ್, ವೀರಪ್ಪಶೆಟ್ಟಿಯಾರ್ ಎಂತಲೂ ಇರುತ್ತವೆ. ಇವರು ತಮ್ಮ ಹೆಸರುಗಳ ಮುಂದೆ ಅಯ್ಯರ್ ಎಂದು ಬರೆದುಕೊಳ್ಳುತ್ತಾರೆ.

ಇವರು ತಾವು ವೀರಶೈವರೆ ಎಂದು ತಿಳಿದುಕೊಂಡಿದ್ದಾರೆ. ಆದರೆ ವೀರಶೈವಾಚಾರ ವಿಚಾರಗಳನ್ನು ತಿಳಿದುಕೊಂಡಿಲ್ಲ. ಇದು ಅವರ ದೋಷ

ವಲ್ಲ. ವೀರಶೈವ ಗುರುಪೀಠಗಳ ದೋಷ. ಬಹುಕಾಲದಿಂದಲೂ ಈ ಪ್ರಾಂತಕ್ಕೆ ಯಾವ ಗುರುಗಳೂ ಸರ್ಕೀಟು ಬಂದಿಲ್ಲ; ಬೋಧಿಸಿಲ್ಲ. ಜಗದ್ಗುರು ಶ್ರೀನಿಡುಮಾಮಿಡಿ ಶ್ರೀಶೈಲ ಪೀಠದವರು ಮಾತ್ರ ಈ ಪ್ರಾಂತಕ್ಕೆ ಹಿಂದೆ ಹತ್ತುಹದಿನೈದು ವರುಷಕ್ಕೊಮ್ಮೆ ದಯಮಾಡಿಸು ತ್ತಿದ್ದರಾದರೂ ಯಾವ ಕಾರಣವೋ ಶೀಲಂ ಮುಕ್ಕಾಂ ಮಾಡಿರುವ ದಿಲ್ಲ. ಈ ಜನಗಳಿರುವ ಬೇರೆ ಗ್ರಾಮಗಳಿಗೂ ದಯಮಾಡಿರುವದಿಲ್ಲ. ಈ ಭಾಗದಲ್ಲಿರುವ ಶ್ರೀ ಕುಂಭಕೋಣ ಮಠಕ್ಕೆ ಇಲ್ಲಿಯವರೆಗೂ ಮೂರ್ತಿ ಗಳಿರಲಿಲ್ಲ. ಹೀಗಾಗಿ ಈ ಜನಗಳಿಗೆ ವೀರಶೈವರ ಮತ್ತು ವೀರಶೈವ ಗುರುಗಳ ಸಂಪರ್ಕ-ಸದ್ಬೋಧೆಯಿಲ್ಲದೆ ಪಕ್ಕದಲ್ಲಿರುವ ಶೈವರ ಆಚರ ಣೆಗೆ ನಿರುಪಾಯರಾಗಿ ಮಾರುಹೋಗಿದ್ದಾರೆ. ಇಂದಿಗೂ ಇವರಲ್ಲಿ ವೀರ ಶೈವಾಚಾರ ಪದ್ಧತಿಗಳನ್ನು ತಿಳಿದುಕೊಳ್ಳಬೇಕೆಂಬ ತೀವ್ರವಾದ ಆಸಕ್ತಿ ಯಿದೆ. ತಿಳಿಸುವವರಿಲ್ಲ. ಇತ್ತ ವೀರಶೈವ ಮಹಾಸಭೆಯು ಸಂಪೂರ್ಣ ವಾಗಿ ಅದಷ್ಟು ಬೇಗ ಗಮನಿಸಬೇಕು. ತಮಿಳುನಾಡಿನ ವೀರಶೈವರ ಉದ್ಧಾರಕ್ಕಾಗಿಯೆ ಹೋದ ವರುಷ ಕುಂಭಕೋಣದಲ್ಲಿ ಮಹಾಸಭೆಯು ಜರಗಿದ್ದರೂ ಈ ಶೀಲಂ ಸುತ್ತುಮುತ್ತಣ ಈ ಜನಾಂಗಕ್ಕೆ ತಮಿಳುನಾ ಡಿನವರು ತಿಳಿಯಪಡಿಸದಿರುವುದು ತುಂಬಾ ವಿಷಾದದ ಸಂಗತಿಯಾಗಿದೆ.

---

# ದೀಕ್ಷಾವಾದ

ಲೇಖಕರು:— ಶ್ರೀ ಮಾ. ನಂ. ನಂಜಪ್ಪನವರು ಬೆಂಗಳೂರುನಗರ.

[ಶ್ರೀಗುರುಮೂರ್ತಿ ದೇವರಿಗೆ ಉತ್ತರ]

"ಶಿವಾನುಭವ" ದ ಭಾದ್ರಪದ ಮಾಸದ ಸಂಚಿಕೆಯಲ್ಲಿ ಶ್ರೀಜಗದ್ಗುರು ನಿಡುಮಾಮಿಡಿ ಮಠದ ಗುರುಮೂರ್ತಿದೇವರು ಎಂಬ ಹೆಸರಿನಿಂದ ಧಾರಣದೀಕ್ಷೆ' ಎಂಬ ಹೆಸರಿನ ಲೇಖನವು ಪ್ರಕಟವಾಗಿದೆ. ಅದರಲ್ಲಿ ಅವರು ತಮಗೆ ತೋರಿದ ಕೆಲವು ವಿಚಾರಗಳನ್ನು ಹೊರಗೆಡವಿ ವೀರಶೈವರಿಗೆ ಮೊದಲನೆಯ ದೀಕ್ಷಾಪೂರ್ವಕ ಲಿಂಗಧಾರಣೆಯೊಂದೇ ಸಾಲದೆಂತಲೂ ಎರಡನೆಯಬಾರಿ ದೀಕ್ಷೆಯನ್ನು ಹೊಂದಲೇ ಬೇಕೆಂತಲೂ ಬರೆದು 'ಮಗುವಿನ ದೃಷ್ಟಿಯಲ್ಲಿ ದೃಷ್ಟಿಯನ್ನು ಮನಸ್ಸಿನಲ್ಲಿ ಮನಸ್ಸನ್ನು ಭಾವದಲ್ಲಿ ಭಾವವನ್ನು ಬೆರೆಸುವದಕ್ಕೂ ಶಿಷ್ಯನ ಶಿವಕಲೆಯನ್ನು ಬಹಿಷ್ಕರಿಸುವದಕ್ಕೂ (!?) ಶಿಷ್ಯನಲ್ಲಿ ಶಕ್ತಿ ಇರುವದಿಲ್ಲ. ಗುರುವಿಗೆ ಸಾಧ್ಯವಿಲ್ಲ ......ವಯಸ್ಸಾದ ಮೇಲೆ ಶಾಸ್ತ್ರವನ್ನೋದಿ ತಿಳಿದುಕೊಳ್ಳಬಹುದೆಂದು ಹೇಳುವದಾದರೆ "ಗುರು" ತತ್ವವಿದ್ದಲ್ಲಿ ಪ್ರಯೋಜನವೇನು? ಮುಂತಾಗಿ ಬರೆದಿದ್ದಾರೆ.

ಶ್ರೀನಿಡುಮಾಮಿಡಿ ಮಠದ ಗುರುಮೂರ್ತಿಗಳ ಈಬಗೆಯ ಬರೆಹಕ್ಕಾಗಿ ಅತ್ಯಂತ ವಿಷಾದ ಪಡಬೇಕಾಗಿದೆ. ಇವರು ಹೇಳುವ ಪ್ರಕಾರ ಲಿಂಗ ಧಾರಣೆಯನ್ನು ಹೊಂದುವ ಮಕ್ಕಳ ಚಿತ್ತದಲ್ಲಿ ಯಾವ ವಿಧವಾದ ಆಕರ್ಷಣ ಶಕ್ತಿಯಾಗಲಿ ಬೆಳೆದು ಬಲಿತು ಅಭಿವೃದ್ಧಿಯನ್ನೈದುವ ಶಕ್ತಿಯಾಗಲಿ ಸ್ವಲ್ಪವೂ ಇರುವದಿಲ್ಲವೆಂದ ಹಾಗಾಯಿತು.

ನಿಡುಮಾಮಿಡಿ ಮಠದ ಶ್ರೀಗುರುಮೂರ್ತಿಗಳವರು ಶಿಶುಗಳಲ್ಲಿ ಜ್ಞಾನೋದಯ ಶಕ್ತಿಯು ಇರುತ್ತದೆಯೇ? ಇಲ್ಲವೇ? ಇದ್ದರೆ ಯಾವ ಸ್ವರೂಪದಲ್ಲಿರುತ್ತದೆ? ಈ ವಿಷಯದಲ್ಲಿ ಅನ್ಯಧರ್ಮಗಳ ತಿಳುವಳಿಕೆಗೂ ವೀರಶೈವರ ತಿಳುವಳಿಕೆಗೂ ಯಾವ ಮಟ್ಟದ ಅಂತರವಿದೆ? ಎಂಬುದನ್ನು ತಿಳಿದುಕೊಳ್ಳಬೇಕಾದರೆ ಕೇವಲ ಕಾಶೀಪಾಂಡಿತ್ಯಕ್ಕೆ ಮರುಳಾಗದೆ 'ಮಹಾನುಭಾವನಿರತ' ರಾಗಿರುವ ಮಠಾಧಿಪತಿಗಳಲ್ಲಿಯೂ ಶರಣಗಣಂಗಳೊ

ಡನೆಯೂ ಒಡನಾಟವನ್ನಿಟ್ಟುಕೊಂಡರೆ ಮಾತ್ರ ಸುಲಭವಾಗಿ ಸತ್ಯವು ತಿಳಿಯುತ್ತದೆ.

ಶಿಶುವಿನಲ್ಲಿ ಅಲ್ಲ ಪಿಂಡದಲ್ಲಿಯೇ ಬುದ್ಧಿ ಭಾವ ಜ್ಞಾನ ಚೈತನ್ಯಗಳು ಯಾವ ಸ್ವರೂಪದಲ್ಲಿರುತ್ತವೆಂಬುದನ್ನು ಶ್ರೀ ಸಿದ್ಧಲಿಂಗ ಯತೀಂದ್ರರ 'ಏಕೋತ್ತರ ಶತಸ್ಥಲ' ದಿಂದ ಉದಾಹರಣೆಗೋಸುಗ ಒಂದೆರಡು ಪದ್ಯಗಳನ್ನೀ ಕೆಳಗೆ ಎತ್ತಿಕೊಡಲಾಗಿದೆ. ಶ್ರೀಮನ್ನಿಡುಮಾಮಿಡಿ ಮಠದ ಗುರುಮೂರ್ತಿಗಳವರು ಇದನ್ನು ನೋಡಿಯಾದರೂ ಈ ವಿಚಾರವಾಗಿ ಇನ್ನೂ ಹೆಚ್ಚಾಗಿ ಅಧ್ಯಯನ ಮಾಡಲೆಂಬುದೇ ಇದರ ಉದ್ದೇಶ.

## ಪಿಂಡಸ್ಥಲ

ಬಿಂದು ಬಿನ್ನಾಣದೊಳಗಂದವಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನ ಸಿರುತ ॥ಹ॥
ಕ್ಷೀರಮೇಘದೊಳು ಮಿಂಚಡಗಿ ತೋರದ ತೆರದಿ
ನೀರೊಳಡಕಂಗೆಯ್ದು ಕಿಚ್ಚಿನಂತೆ
ಬೀರುತ್ತಿಹ ನವರಸದೊಳಿಪ್ಪ ಫಳರುಚಿಯಂತೆ
ವಾರಣದ ಮಸ್ತಕದ ಮುತ್ತಿನಂತೆ ॥೧॥
ಶಶಿಕಾಂತದೊಳುದಕ ವೊಸರಡಗಿ ನಿಂದಂತೆ
ಹಸುಳೆಯೊಳಗಣ ಸ್ವಪ್ನ ತೋರದಂತೆ
ನಸುನನೆಯೊಳಡಗಿರ್ದ ನವಸುಗಂಧದ ತೆರದಿ
ಉಸಿರೊಳಡಗಿರ್ದ ಚೈತನ್ಯದಂತೆ ॥೨॥
ಕ್ಷೀರದೊಳು ಘೃತವಡಗಿ ನೀರು ಮುತ್ತಿನೊಳಡಗಿ
ಆರೈದು ನೋಡೆ ಬೀಜದೊಳು ವೃಕ್ಷ
ಸಾರಿರ್ದುದವೊಳೆದೋರದಂತಿಪ್ಪ ಮಹಾಘನವ
ನಾರು ಭೇದಿಸಿ ಕಾಣಲರಿದು ನೋಡಾ ॥೩॥
ಪಾಷಾಣದೊಳಗಗ್ನಿ ಸೂಸದೆ ಬೆಡಂಗು ಪ್ರತಿ
ಭಾಷೆದೋರದ ಜಲದ ನಿಲವಿನಂತೆ
ನೇಸರೊಳಡಂಗಿರ್ದ ಮರೀಚನಂದದೊಳು ಲೀ
ಲಾಶಿಶುವ ಪಿಂಡ ವೈದೋರದಿಹುದು ॥೪॥
ರೂಪು ರೂಪಿನೊಳಡಗಿ ರೂಪಿಸದೆ ನಿಂದ ನಿಜ
ರೂಪ ನಿಶ್ಚಲವಾಗಿ ಸಂಚಲಿಸದೆ

ತಾ ಪರಾತ್ಪರವಾಗಿ ನಿಂದ ನಿಜಪದವು ಚಿ
ದ್ರೂಪ ಕೂಡಲ ಚೆನ್ನಸಂಗಯ್ಯನು ॥೫॥

ಈ ಪದ್ಯಗಳ ಟೀಕುವಿನ ಸಾರಾಂಶವೆಂತೆಂದರೆ "ಅಖಂಡ ಶಿವಕಳಾನಂದ ಚೈತನ್ಯ ಸ್ವರೂಪವಾದಂಥ ಪಿಂಡನಾಮಪರ್ಯಾಯುವನುಳ್ಳ ಪರಬ್ರಹ್ಮವು ಜ್ಞಾನೋದಯಕ್ಕೆ ಮೊದಲೇ ಪಿಂಡದಲ್ಲಿ ಪಿಂಡವಾಗಿಹುದು.

ಅಸ್ಮತನುಯುಕ್ತವಾದ ಶರೀರಕ್ಕೆ ಶಿರಃಪ್ರಧಾನವಾದ ಆತ್ಮನಮಧ್ಯದಲ್ಲಿ ಮನೋಜಲ ಆ ಮನೋಜಲ ಮಧ್ಯದಲ್ಲಿ ತತ್ವವಿಪರಿತಜ್ಞಾನ ಆ ತತ್ವವಿಪರಿತಜ್ಞಾನದ ಮಧ್ಯದಲ್ಲಿ ಚಿಛ್ಛಕ್ತಿ ಆ ಚಿಛ್ಛಕ್ತಿಯ ಮಧ್ಯದಲ್ಲಿ ನಿಜಮೋಕ್ಷಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆಮೊದಲೇ ಪಿಂಡದಲ್ಲಿ ಪಿಂಡಸ್ಥಲವಾಗಿಹುದು.

ಅಂಗಮನ ಪ್ರಾಣಂಗಳಲ್ಲಿ ಹೆರೆಹಿಂಗದೆ ಇರ್ದಂಥ ಎಲೆ ಪರಶಿವಲಿಂಗವೇ......"

ಶರಣರ ಅನುಭವಾನುಸಾರವಾಗಿ ಹೀಗೆ ಸುಜ್ಞಾನ ತೇಜೋಯುಕ್ತವಾಗಿರುವ ಶಿಶುವಿಗೆ ಶ್ರೀ ಗುರುವು ಒಮ್ಮೆ ಲಿಂಗಧಾರಣೆಯ ಮೂಲಕ ದೀಕ್ಷೆಯನ್ನನುಗ್ರಹಿಸಿದ ಬಳಿಕ ಆ ಶಿಶುವಿನ ಬುದ್ಧಿಜ್ಞಾನಗಳನ್ನು ನಮ್ಮ ಧರ್ಮ ಸಂಸ್ಕೃತಿಗಳೊಡನೆಯೇ ಹೊಂದಿಕೊಳ್ಳುವಂತೆ ಪ್ರಚೋದನೆಯಿಂದ ಕೆರಳಿಸಿ ವೀರಶೈವಾಚಾರ ವಿಚಾರಗಳನ್ನು ಅವರಲ್ಲಿ ಬೆಳೆಯಿಸಿ ನೆಲೆಗೊಳ್ಳುವಂತೆ ಮಾಡುವ ಮಹತ್ಕರ್ತವ್ಯವು ಗುರುಗಳ ಮತ್ತು ತಂದೆ ತಾಯಿ ಬಂಧು ಬಳಗದವರ ಪ್ರಚಲಿತ ಕರ್ತವ್ಯವೇ ಆಗಿಲ್ಲವೇ? ಗುರುಗಳಾದವರು ಮೇಲಿಂದ ಮೇಲೆ ಅವರ ಮನೆಗೆ ದಯಮಾಡಿಸಿದಾಗಲೆಲ್ಲಾ ಶಿವಾನುಭಾವಗೋಷ್ಠಿಯನ್ನು ನಡೆಸಿ ಶಿವಾನುಭಾವವನ್ನುಂಟು ಮಾಡಿ ಕೊಡಬೇಕಾದುದು (ಆ ಶಿಷ್ಯರು ತಮ್ಮ ಮಠಕ್ಕೆ ಬಂದಾಗಲಾದರೂ) ಗುರುಗಳ ಕರ್ತವ್ಯವಲ್ಲವೇ? ಈಗಿನ ಕೆಲಗುರುಗಳೂ ಜನಗಳೂ ಈ ಪದ್ಧತಿಗೆ ಲೋಪ ತಂದ ಮಾತ್ರಕ್ಕೇ ದೀಕ್ಷೆಯನ್ನೇ ಎರಡುಬಾರಿ ಮಾಡಬೇಕೆಂಬ ವಾದವನ್ನು ಹೂಡುವುದು ( ಈಪದ್ಧತಿಯು ಕೆಲಕಾಲದಿಂದೀಚೆಗೆ ಆಚರಣೆಗೆ ಬಂದಿದ್ದ ಮಾತ್ರಕ್ಕೇ ) ಯುಕ್ತವಾದೀತೆ?

ಈ ಶ್ರೀನಿಡುಮಾಮಿಡಿ ಮಠದ ಗುರುಮೂರ್ತಿಗಳು "ಹೀಗೆ ಮಾಡುವುದಾದರೆ 'ಗುರು'ತತ್ವವಿದ್ದು ಪ್ರಯೋಜನವೇನು?" ಎಂದುಕೇಳಿದ್ದಾರೆ.

ಗುರುಗಳು ಬೇಡವೆಂದು ಯಾರಾದರೂ ಹೇಳಿದ್ದಾರೆಯೇ? ಮೇಲಿಂದ ಮೇಲೆ ಗುರುಗಳು ಮನೆಗಳಿಗೆ ಚಿತ್ತೈಸಿ ಆಚಾರ ವಿಚಾರಗಳನ್ನು ಬೋಧಿಸಿ ಸಂಸ್ಕೃತಿಯನ್ನು ವರ್ಧಿಸಿ ಆಬಾಲವೃದ್ಧರೆಲ್ಲರ ಆತ್ಮೋದ್ಧಾರ ಕಾರ್ಯದ ಮಾರ್ಗದರ್ಶಿಗಳಾಗಿರಬೇಕೆಂದು ಗುರುಗಳ ಅವಶ್ಯಕತೆಯನ್ನು ಎಲ್ಲರೂ ಒತ್ತಿ ಹೇಳುತ್ತಿದ್ದರೂ ಈ ನಿಡುಮಾಮಿಡಿ ಮಠದ ಗುರುಮೂರ್ತಿಗಳು ಗುರುತತ್ವದ ಅವಶ್ಯಕತೆಯೇ ತಪ್ಪಿಹೋದೀತೆಂದು ಹೆದರುತ್ತಿರುವುದು ಆಶ್ಚರ್ಯಕರವಲ್ಲವೆ?

ಇನು ಗುರುಮೂರ್ತಿಗಳು ಗಾರುಡ ಪುರಾಣದ ಒಂದು ಸಂಸ್ಕೃತ ಶ್ಲೋಕವನ್ನು ಉದಾಹರಿಸಿ ಆದನ್ನು ಎರಡಾಗಿ ಭಾಗಿಸಿಕೊಂಡು ಅರ್ಧ ಶ್ಲೋಕದಿಂದ ಲಿಂಗಧಾರಣೆಯಿಂದ "ಭವಿತನ"ವು ಮಾತ್ರ ನಷ್ಟವಾಗುವುದೆಂದೂ ಇನ್ನರ್ಧಶ್ಲೋಕದಿಂದ ಪುನಃ ಮಾಡಿಸಿಕೊಳ್ಳುವ "ದೀಕ್ಷೆ"ಯಿಂದ ಮಂತ್ರ ಪಠಣಾಧಿಕಾರವು ಪ್ರಾಪ್ತವಾಗುವುದೆಂದೂ ಇದರಿಂದ ಎರಡನೇಬಾರಿ ದೀಕ್ಷೆಮಾಡಿಸಿಕೊಳ್ಳುವುದು ಅತ್ಯಾವಶ್ಯಕವೆಂದು ಸಿದ್ಧವಾಗುವುದೆಂದೂ ಪ್ರತಿಪಾದಿಸಿದ್ದಾರೆ. ನಿಡುಮಾಮಿಡಿ ಮಠದ ಗುರುಮೂರ್ತಿಗಳ ಈ ಅರ್ಥ ಪ್ರತಿಪಾದನೆಯನ್ನು ಕಂಡು ಆಶ್ಚರ್ಯ ವಿಷಾದಗಳೆರಡೂ ಉಂಟಾಗುತ್ತಿವೆ.

ಯಾಕೆಂದರೆ:— ಈ ಗುರುಮೂರ್ತಿಗಳು ಉದಹರಿಸುವ ಗಾರುಡ ಪುರಾಣಶ್ಲೋಕದ ನಿಜಾರ್ಥವು 'ದೀಕ್ಷಾಪೂರ್ವಕ ಲಿಂಗಧಾರಣ ಹೊಂದುವುದರಿಂದ ಭವಿತನವು ಬಯಲಾಗಿ ನಮಕ ಚಮಕ ಪಂಚಬ್ರಹ್ಮಾದಿ ವೈದಿಕ ಮಂತ್ರಗಳನ್ನು ಪಠಿಸುವ ಅಧಿಕಾರವು ಪ್ರಾಪ್ತಿಯಾಗುತ್ತದೆ' ಎಂದಾಗುತ್ತದೆ. ಹೀಗಿರುವಾಗ ದೀಕ್ಷೆಯಿಲ್ಲದ ಲಿಂಗಧಾರಣವನ್ನು ಯಾರೂ ಮಾಡುವುದಿಲ್ಲವಾದುದರಿಂದ ಒಮ್ಮೆ ದೀಕ್ಷಾಪೂರ್ವಕ ಲಿಂಗಧಾರಣವಾಗುವುದರಿಂದ ಭವಿತನವು ಹೋದಮೇಲೆ ಮಂತ್ರಾಧಿಕಾರವು ಬಂದೇ ತೀರುವುದಲ್ಲವೆ? ಭವಿತನವು ಕಳೆದಮೇಲೆಯೂ ಮಂತ್ರಾಧಿಕಾರಕ್ಕೆ ಬೇರೆಯವರನ್ನೆಸಗಬೇಕೆಂಬುದು ತಿಳಿವಳಿಕೆಯಿಲ್ಲದ ತಪ್ಪರ್ಥವಲ್ಲವೆ? ಮತ್ತು ಈ ಶ್ಲೋಕದಲ್ಲಿ ಶಿವದೀಕ್ಷಾ ಲಿಂಗಧಾರಣ ಈ ಎರಡು ಶಬ್ದಗಳೂ "ದೀಕ್ಷಾಪೂರ್ವಕ ಲಿಂಗಧಾರಣ" ಎಂಬ ಒಂದೇ ಅರ್ಥದಲ್ಲಿ ಪ್ರಯೋಗಿಸಲ್ಪ

ಟ್ಟಿದೆ. ಹೀಗಿದ್ದರೂ ಈ ಗುರುಮೂರ್ತಿಗಳು ತಪ್ಪರ್ಥವನ್ನು ಮಾಡಿರುವುದರ ಉದ್ದೇಶವಾದರೂ ಏನೋ ತಿಳಿಯಬಾಗಿದೆ.

ಇದಾದ ಬಳಿಕ ಈ ಗುರುಮೂರ್ತಿಗಳು ಶಿದ್ಧಾಂತಶಿಖಾಮಣಿಯನ್ನಾಯಿಸಿದ್ದಾರೆ. ಇವರು ಉದಹರಿಸಿರುವ ಶಿದ್ಧಾಂತ ಶಿಖಾಮಣಿಯ ಆಧಾರವು ಇವರ ತಿಳಿವಳಿಕೆಗೇ ವಿರುದ್ಧವಾಗಿದೆ- ಹೇಗೆಂದರೆ:—

ಶಿದ್ಧಾಂತಶಿಖಾಮಣಿಯ ಆರನೆಯ ಪರಿಚ್ಛೇದದ ಗುರುಕಾರುಣ್ಯಸ್ಥಲದಲ್ಲಿ "ಸಂಸಾರದಲ್ಲಿ ಹೇಯತಾಬುದ್ಧಿಯು ಉತ್ಪನ್ನವಾದನಂತರ ನಿರ್ಮಲಾಂತಃಕರಣನೂ ಶರೀರಾತ್ಮವಿವೇಕವುಳ್ಳವನೂ ವಿರಾಗಿಯೂ ಆದ ಸಾಧಕನು ಸಮಸ್ತ ಸಂಸಾರ ದೋಷಗಳನ್ನು ನಾಶಮಾಡುವ ಮಹಾಲಿಂಗವನ್ನು ತಿಳಿಯಲಿಚ್ಛೆಯುಳ್ಳವನಾಗಿ ...............ಅಂಗಸ್ಥಲ-ಲಿಂಗಸ್ಥಲಾತ್ಮಕಗಳಾದ ನೂರೊಂದು ಸ್ಥಲಗಳ ಭೇದಸ್ವರೂಪವನ್ನು ತಿಳಿದವನೂ ಸದಾ ಮಂಗಲ ವಚನಗಳನ್ನಾಡುವವನೂ ಆದ ಶ್ರೀಗುರುವನ್ನು ಆಶ್ರಯಿಸಿ ಭಯಭಕ್ತಿಗಳಿಂದೊಡಗೂಡಿ ಆರುತಿಂಗಳುಗಳವರೆಗಾಗಲಿ ಒಂದು ವರ್ಷದವರೆಗಾಗಲಿ ಎಲ್ಲಿಯ ವರೆಗೆ ಗುರುವು ಪ್ರಸನ್ನನಾಗುವನೋ ಅಲ್ಲಿಯ ವರೆಗೆ ಆ ಗುರುವರ್ಯನನ್ನು ಸೇವಿಸಿ [ಪಾಪಿಗಳನ್ನು ಅಥವ ಶಿಷ್ಯರನ್ನು ಹುಡುಕಿಕೊಂಡು ಹೋಗಿ ಅವರನ್ನುದ್ಧರಿಸುವುದೇ ಗುರುಗಳ ಕಾರ್ಯದ ರೀತಿ ಮತ್ತು ಹಿಂದಿನ ನಮ್ಮ ಆದ್ಯರುಗಳಾದ ಪ್ರಭುದೇವ ರೇವಣಸಿದ್ಧಾದಿ ಮಹಾಗುರುಗಳೆಲ್ಲರೂ ಹೀಗೆಯೇ ಸಿದ್ಧರಾಮೇಶ್ವರ ಗೋರಕ್ಷಾದಿ ಶಿಷ್ಯರುಗಳನ್ನು ಅವರಿದ್ದ ಸ್ಥಳಕ್ಕೇ ಹುಡುಕಿಕೊಂಡು ಹೋಗಿ ಉದ್ಧಾರ ಮಾಡಿದ್ದಾರೆಯೇ ಹೊರ್ತು ಅವರು ಬಂದು ಇವರು ಪ್ರಸನ್ನರಾಗುವವರೆಗೂ ಕಾದುಕೊಂಡು ಕುಳಿತಿರಲಿಲ್ಲ.] ಅಂಜಲೀಬದ್ಧನಾಗಿ ನಿಂತುಕೊಂಡು ಎಲೈ ಕಲ್ಯಾಣಮೂರ್ತಿಯೇ! ಮಹಾಭಾಗನೇ! ಶಿವಜ್ಞಾನ ಸಮುದ್ರನೇ! ಗುರುವರ್ಯನೇ ಭವರೋಗದಿಂದ ನರಳುತ್ತಿರುವ ನನ್ನನ್ನು ಕಾಪಾಡು ಎಂದು ಶುದ್ಧಾಂತಃಕರಣದಿಂದ ಪ್ರಾರ್ಥಿಸಲು ಆಗ್ಗೆ ಶ್ರೀಗುರುವು ಶಿಷ್ಯನ ಶಕ್ತಿಪಾತವನ್ನು ಪರಾಮರ್ಶಿಸಿ ಅವನಿಗೆ 'ವೀರಶೈವ ದೀಕ್ಷಾವಿಧಿ' ಗನುಸಾರವಾಗಿ ಮೋಕ್ಷದಾಯಕವಾದ 'ಶಿವದೀಕ್ಷೆ' ಯನ್ನನುಗ್ರಹಿಸಲು ಸಮ್ಮತಿಸಿ ದೀಕ್ಷಾಂಗಭೂತವಾದ ಹಲವು ಕ್ರಿಯೆಗಳನ್ನು ನೆರವೇರಿಸಿದ ಬಳಿಕ

(ಗುರುಕಾರುಣ್ಯಸ್ಥಲದ ಮುಂದಿನ "ಲಿಂಗಧಾರಣಸ್ಥಲ"ದಲ್ಲಿ ಹೇಳಿರುವ)

ಸ್ಫಾಟಿಕಂ ಶೈಲಜಂ ವಾಪಿ ಚಂದ್ರಕಾಂತಮಯಂತು ವಾ ।
ಬಾಣಂ ವಾ ಸೂರ್ಯಕಾಂತಂ ವಾ ಲಿಂಗಮೇಕಂ ಸಮಾಹರೇತ್ ॥೨^॥

ಸರ್ವಲಕ್ಷಣ ಸಂಪನ್ನೇ ತಸ್ಮಿನ್ ಲಿಂಗೇ ವಿಶೋಧಿತೇ ।
ಪೀಠಸ್ಥಿತೇಽಭಿಷಿಕ್ತೇಚ ಗಂಧಪುಷ್ಪಾದಿ ಪೂಜಿತೇ ॥೨೨॥

ಮಂತ್ರಪೂತೇ ಕಲಾಂ ಶೈವೀಂ ಯೋಜಯೇದ್ವಿಧಿನಾ ಗುರುಃ ।
ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ॥೨೩॥

ಎಂದರೆ:- ಆಮೇಲೆ ಆಚಾರ್ಯನು ಶಿಷ್ಯನಿಗಾಗಿ ಸ್ಫಟಿಕ ಲಿಂಗ-ಶ್ರೀಶೈಲಲಿಂಗ-ಚಂದ್ರಕಾಂತ ಶಿಲಾಲಿಂಗ-ಸೂರ್ಯಕಾಂತ ಶಿಲಾಲಿಂಗ-ಅಥವ ನರ್ಮದಾಬಾಣಲಿಂಗ ಇವುಗಳಲ್ಲಿ ಯಾವುದಾದರೊಂದು ಲಿಂಗವನ್ನು ತೆಗೆದುಕೊಂಡು ಶಿಲ್ಪಶಾಸ್ತ್ರಾನುಸಾರವಾಗಿ ಸರ್ವಲಕ್ಷಣ ಸಂಪನ್ನವೂ ಜಲಾಧಿವಾಸ-ಧಾನ್ಯಾಧಿವಾಸ-ಅಷ್ಟತ್ರಿಂಶತ್ಕಲಾನ್ಯಾಸ ಷಡಧ್ವ ಶುದ್ಧಿ ಮೊದಲಾದವುಗಳಿಂದ ವಿಶೋಧಿತವೂ ಆದ ಶಿವಲಿಂಗದಲ್ಲಿ ಶ್ರೀಗುರುವು ಶಿಷ್ಯನ ಮಸ್ತಕದಲ್ಲಿರುವ ಶಿವನ ಕಲೆಯನ್ನು ಶಾಸ್ತ್ರವಿಧಿಗನುಸಾರ ವಾಗಿ ಸಂಬಂಧಿಸಬೇಕು..........."

ಈ ಗುರುಮೂರ್ತಿದೇವರ ಶಿದ್ಧಾಂತ ಶಿಖಾಮಣಿಯ ಆಧಾರದಂತೆ ಈ ಶ್ಲೋಕಗಳ ಅರ್ಥಾಭಿಪ್ರಾಯವು "ಭವಿ" ಗಳಾಗಿದ್ದವರ ಪ್ರಾರ್ಥನೆಯನ್ನು ಮನ್ನಿಸಿ ಲಿಂಗಧಾರಣ ಮಾಡುವುದಾಗಿದೆಯೇ ಹೊರ್ತು ಒಮ್ಮೆ ಲಿಂಗಧಾರಿಗಳಾಗಿದ್ದವರಿಗೆ ಪುನಃ ಶಿವದೀಕ್ಷೆಯನ್ನು ಮಾಡಿಸಬೇಕೆಂಬ ಅರ್ಥವು ಇವರು ಉದಹರಿಸಿರುವ ಶ್ಲೋಕಗಳಲ್ಲಿಲ್ಲ. ಹೇಗೆಂದರೆ:— ಸಂಸಾರದಲ್ಲಿ ಹೇಯ ಭಾವವು ಹುಟ್ಟಿದ ಬಳಿಕ ವಯಸ್ಕನಾದ ಶಿಷ್ಯನು ವರ್ಷಗಟ್ಟಲೆಯಾಗಿ ಗುರುವನ್ನಾಶ್ರಯಿಸಿ ಶುಶ್ರೂಷೆ ಮಾಡಿದ ಬಳಿಕ ಗುರುವು ಅವನ ಶಕ್ತಿಪಾತವನ್ನು ಪರೀಕ್ಷಿಸಿ ಯೋಗ್ಯನಾಗಿದ್ದರೆ ಸ್ಫಟಿಕ ಶ್ರೀಶೈಲ ಮುಂತಾದ ಯಾವುದಾದರೊಂದು ಶಿಲೆಯ ಲಿಂಗವನ್ನು ಆಗ ಹೊಸದಾಗಿ ಆರಿಸಿಕೊಳ್ಳುವನು.

ಈ ಶಿದ್ಧಾಂತಶಿಖಾಮಣಿಯ ಪ್ರಕಾರ ಮೊದಲೇ ಲಿಂಗಧಾರಿಯಾಗಿದ್ದ ಶಿಷ್ಯನು ಪುನಃ ಗುರುಗಳ ಬಳಿ ವರ್ಷಗಟ್ಟಲೆ ಕಾಯ್ದು ಶುಶ್ರೂಷೆ ಮಾಡಿ ನೂತನವಾಗಿ ಪುನಃ ನನಗೆ ಲಿಂಗಧಾರಣೆ ಮಾಡಬೇಕೆಂದು ಪ್ರಾರ್ಥಿಸುವುದಿಲ್ಲ. ಅವನಿಗೆ ಒಮ್ಮೆ ಗುರುವಿನಿಂದನುಗೃಹೀತವಾದ ಲಿಂಗಸಾಹಿತ್ಯವೇ ಸಾಕಾಗಿರುತ್ತದೆ.

ಹೀಗಿರುವಾಗ ವಯಸ್ಸನಾದವನ ಪ್ರಾರ್ಥನೆಯ ಪ್ರಕಾರ ದೀಕ್ಷಾಪೂರ್ವಕ ಹೊಸದಾಗಿ ಹುಡುಕಿದ ಲಿಂಗವನ್ನು ಧಾರಣಮಾಡುವ ಈ ಶಿದ್ಧಾಂತ ಶಿಖಾಮಣಿಯ ಆಧಾರದಿಂದಲೂ ಒಮ್ಮೆ ದೀಕ್ಷಾಪೂರ್ವಕ ಲಿಂಗಧಾರಿಗಳಾದವರು ಪುನಃ ದೀಕ್ಷೆಯನ್ನು ಹೊಂದುವುದು ಅನವಶ್ಯಕವೆಂದೂ ಅಶಾಸ್ತ್ರೀಯವೆಂದೂ ಸ್ಪಷ್ಟವಾಗಿ ಸಿದ್ಧವಾಗುತ್ತಿದೆ.

ಹಾಗಲ್ಲದೆ ಹೊಸದಾಗಿ ಲಿಂಗವನ್ನು ಆರಿಸಿ ಧಾರಣಮಾಡುವುದೂ ಮೊದಲು ಲಿಂಗಧಾರಿಗಳಾಗಿದ್ದವರಿಗೇನೇ ಸರಿ ಎಂದು ಸಾಧಿಸುವುದಾದರೆ ಹುಟ್ಟಿದಾಗ ಧಾರಣಮಾಡಿದ್ದ ಲಿಂಗವು ಏನಾಗುತ್ತದೆ. ಅದನ್ನು ತ್ಯಜಿಸಿ ಹೊಸದನ್ನು ಧರಿಸುವರೇನು? ಶ್ರೀನಿಡುಮಾಮಿಡಿ ಮಠದ ಗುರುಮೂರ್ತಿಗಳು ಇದಕ್ಕೇನು ಹೇಳುವರು?

ಈಗ ಎರಡನೆಯ ಬಾರಿ ದೀಕ್ಷೆಯನ್ನು ಮಾಡುವವರು ಯಾವುದನ್ನು ಆಧಾರವಾಗಿಟ್ಟುಕೊಂಡು ದೀಕ್ಷಾಕಾರ್ಯವನ್ನು ನಿರ್ವಹಿಸುತ್ತಿರುವರೋ ಆ "ವೀರಶೈವ ದೀಕ್ಷಾವಿಧಿಯಲ್ಲಿಯೂ ಸಹ ಹೀಗೆಯೇ ಶಿಷ್ಯನು ಪ್ರಾರ್ಥಿಸಿಕೊಂಡ ಬಳಿಕ ಗುರುವು ಹೊಸದಾಗಿ ಆರಿಸಿಕೊಂಡ ಲಿಂಗವನ್ನು ಧಾರಣಮಾಡಬೇಕೆಂದೇ ಹೇಳಲಾಗಿದೆ. ಆದುದರಿಂದ ಹಿಂದೆ ಭವಿಗಳಿಗೆ "ವೀರಶೈವ ದೀಕ್ಷೆ"ಯನ್ನು ಮಾಡುವುದಕ್ಕೆ ಉಪಯುಕ್ತವಾಗುವಂತೆ ಈ "ವೀರಶೈವ ದೀಕ್ಷಾವಿಧಿ"ಯನ್ನು ರಚಿಸಲಾಗಿರುವುದೆಂಬುದೂ ಜನ್ಮತಃ ವೀರಶೈವರ ಶಿಶುಗಳು ಮೊದಲು ಹೊಂದುವ ದೀಕ್ಷಾಪೂರ್ವಕ ಲಿಂಗಧಾರಣೆಯ ಹೊರತು ಪುನಃ ಎರಡನೆಯ ಬಾರಿ ದೀಕ್ಷೆಯನ್ನೇ ಹೊಂದಬೇಕೆಂಬ ವಾದವು ಅಸಂಗತವೆಂಬುದೂ ಶಿದ್ಧಾಂತಶಿಖಾಮಣಿಯ ಮೂಲಕವೂ ಸ್ಪಷ್ಟವಾದ ಹಾಗಾಯಿತಷ್ಟೆ?

ಇನ್ನು "ಗರ್ಭಾಷ್ಟಮೇ" ಎಂಬುದಕ್ಕೆ ಈ ನಿಡುಮಾಮಿಡಿ ಗುರುಮೂರ್ತಿಗಳು ಎಂಟನೆಯ ವರ್ಷವೆಂಬರ್ಥವನ್ನು ತೋರಿಸುತ್ತಾರೆ. ಅದು

ಹೇಗೆ ಸಾಧ್ಯ? 'ವರ್ಷಾ' ಎಂಬ ಶಬ್ದವೇ ಆ ಶ್ಲೋಕದಲ್ಲಿಲ್ಲ ಮತ್ತು ವರ್ಷವೆಂದು ಅರ್ಥ ಮಾಡುವುದಾದರೆ ಎಂಟನೆಯ ತಿಂಗಳಲ್ಲಿ ಶಿಶುವು ಗರ್ಭದಲ್ಲಿದ್ದಾಗಲೇ ಲಿಂಗದೀಕ್ಷೆಯನ್ನೀಯುವ ತಪ್ಪೆನ್ನಬೇಕಾಗುವುದು. ಈ ಪದ್ಧತಿಯು ತಪ್ಪೆನ್ನುವುದಾದರೆ ಹುಟ್ಟಿದ ಮಗುವು ಪ್ರಾಪ್ತವಯಸ್ಕನಾಗಿ ಸಂಸಾರಹೇಯ ಬುದ್ಧಿಯುಂಟಾಗಿ ಹಲವು ವರ್ಷಗಳ ಕಾಲ ಗುರುವನ್ನಾಶ್ರಯಿಸಿ ಕೃಪೆಯನ್ನು ಸಂಪಾದಿಸಿ ನೂತನವಾಗಿ ಲಿಂಗಸಾಹಿತ್ಯವನ್ನು ಪಡೆಯುವವರೆಗೂ ಆ ಮಗುವನ್ನು ಅಥವ ಶಿಷ್ಯನನ್ನು ಭವಿಯೆಂದೇ? ಭಕ್ತನೆಂದೇ? ಏನೆಂದು ಭಾವಿಸಬೇಕು? ಇದಕ್ಕೆಲ್ಲ ಶ್ರೀನಿಡುಮಾಮಿಡಿ ಜಗದ್ಗುರು ಮಠದ ಗುರುಮೂರ್ತಿಗಳೇನು ಹೇಳುವರು?

ಮುಂದೆ ಈ ಗುರುಮೂರ್ತಿಗಳು ಶಿಶುವು ಹುಟ್ಟಿದಾಗ ದ್ವೈತಿಯೆಂದೂ ದೀಕ್ಷಾನಂತರ ಅದ್ವೈತಿಯೆಂದೂ ಹೇಳುತ್ತಾರೆ! ಈ ಯದ್ವಾತದ್ವವನ್ನಿವರು ಯಾವ ವೀರಶೈವ ಶಾಸ್ತ್ರದಲ್ಲಿ ಕಂಡರೋ ತಿಳಿಯದಾಗಿದೆ. ಕೆಲವು ಕಾಲ ದ್ವೈತಿಗಳಾಗಿರಬೇಕೆಂದೂ ಕೆಲವು ಕಾಲ ಅದ್ವೈತಿಗಳಾಗಿರಬೇಕೆಂದೂ ಕೆಲವು ಕಾಲ ಜ್ಞಾನಿಗಳಾಗಿ ಮಾತ್ರ ಇರಬೇಕೆಂದೂ ಕೆಲವು ಕ್ರಿಯೆಯನ್ನು ಮಾತ್ರ ಆಚರಿಸಬೇಕೆಂದೂ ನಮ್ಮ ಆದ್ಯರು ಎಲ್ಲಿಯೂ ಹೇಳಿಲ್ಲ. ಆದರೆ ತಿಳಿದುದನ್ನು ತತ್ಕ್ಷಣದಲ್ಲಿಯೇ ಅಂದರೆ ಜ್ಞಾನಕ್ರಿಯೆಗಳೆರಡನ್ನೂ ಬಿಡದೆ ಆಚರಿಸಿ ನಮ್ಮ ಧರ್ಮವು "ಕ್ರಿಯಾಜ್ಞಾನಸಮಾಯುಕ್ತ"ವಾದುದೆಂಬುದನ್ನು ಸ್ವತಃ ಆಚರಣೆಯಿಂದ ತೋರಿಸಿಕೊಟ್ಟಿದ್ದಾರೆ. ಆದುದರಿಂದ ಕೆಲವು ಕಾಲ ದ್ವೈತಿಗಳೆಂದೂ ಕೆಲವು ಕಾಲ ಅದ್ವೈತಿಗಳೆಂದೂ ಹೇಳುವುದು ತಪ್ಪುತಿಳಿವಳಿಕೆಯ ಫಲವಾಗಿದೆ.

ಮುಖ್ಯವಾಗಿ ಒಮ್ಮೆ ದೀಕ್ಷಾಪೂರ್ವಕ ಲಿಂಗಧಾರಣೆಯನ್ನು ಹೊಂದಿದವರು ಮುಂದೆ ಬೆಳೆಯುವ ಬುದ್ಧಿಜ್ಞಾನಗಳ ಸಹಾಯದಿಂದ ಶ್ರೀಗುರುವಿನ ಮೂಲಕವೂ ಹಿರಿಯರುಗಳಿಂದಲೂ ಸ್ವಧರ್ಮದ ಆಚಾರವಿಚಾರಗಳನ್ನು ಅರಿತುಕೊಂಡು ಮುಂದೆ ವಯೋಮಾನವು ಬೆಳೆದಂತಲ್ಲಾ. ಗುರುಹಿರಿಯರೊಡನೆ ನಡೆಯುವ ಅನುಭಾವಗೋಷ್ಠಿಯ ಫಲವಾಗಿ ತನ್ನ ಶಿವಾನುಭಾವ ಜ್ಞಾನವನ್ನು ಹೆಚ್ಚಿಸಿಕೊಂಡು ಆ ತನ್ನ ತಿಳಿವಿನ ಮಟ್ಟವನ್ನನುಸರಿಸಿಕೊಂಡು ಭಕ್ತಾದ್ಯೈಕ್ಯಾಂತವಾದ ಷಟ್‌ಸ್ಥಲ ಮಾರ್ಗದಲ್ಲಿ ಜೀವನ್ಮುಕ್ತನಾಗಿ ಬಾಳುವನು.

ಹೀಗಲ್ಲದೆ ಒಮ್ಮೆ ದೀಕ್ಷಾಪೂರ್ವಕ ಲಿಂಗಧಾರಣೆಯನ್ನು ಹೊಂದಿದವರೇ ಪುನಃ ವೀರಶೈವ ದೀಕ್ಷೆಯನ್ನು ಪಡೆಯಬೇಕೆಂಬುದು ಕೆಲ

ಕಾಲದಿಂದೀಚೆಗೆ ದ್ವಿಜರ ಉಪನಯನ ಕರ್ಮದ ಅನುಕರಣದ ಮೂಲಕ ನಮ್ಮಲ್ಲಿ ಕೆಲವರಲ್ಲಿ ಆಚರಣೆಗೆ ಬರುತ್ತಿದೆಯೇ ಹೊರತು ಪುರಾತನ ಕಾಲದಿಂದಲೂ ನಮ್ಮಲ್ಲಿ ಈ ನಡವಳಿಕೆಯು ಆಚರಣೆಯಲ್ಲಿದ್ದಂತೆ ಕಂಡುಬರುವುದಿಲ್ಲ. ಬಸವ ಪ್ರಭು ರೇವಣಸಿದ್ಧಾದಿಗಳ ಶರಣಯುಗದಿಂದ ನೋಡಿದರೂ ಕೂಡ ಒಮ್ಮೆ ವೀರಶೈವ ದೀಕ್ಷಾಪೂರ್ವಕ ಲಿಂಗಧಾರಿಗಳಾದವರು ಪುನಃ ವೀರಶೈವ ದೀಕ್ಷೆಯನ್ನು ಪಡೆದುದು ಎಲ್ಲಿಯೂ ಕಾಣುವುದಿಲ್ಲ. ಹಾಗೆ ಪಡೆದಿರುವುದನ್ನು ಯಾರಾದರೂ ಸಿದ್ಧಮಾಡುವವರಿದ್ದರೆ ಅಗತ್ಯವಾಗಿ ಮಾಡಬಹುದು! ಅದು ಸತ್ಯವೆಂದು ಕಂಡುಬಂದರೆ ಯಾರಾದರೂ ಒಪ್ಪಿಕೊಳ್ಳಲೇಬೇಕಾಗುತ್ತದೆ. ಜ. ಶ್ರೀಮನ್ನಿಡುಮಾಮಿಡಿ ಮಠದ ಗುರುಮೂರ್ತಿದೇವರು ಈ ಕಾರ್ಯಕ್ಕೆ ಮುಂದೆ ಬರುವರೆಂದು ನಂಬೋಣವೆ?

ಮತ್ತೊಂದು ವಿಚಾರಃ— ಈ ಶ್ರೀನಿಡುಮಾಮಿಡಿ ಮಠದ ಗುರುಮೂರ್ತಿ ದೇವರು ತಮ್ಮ ಲೇಖನದಲ್ಲಿ ದೀಕ್ಷಾವಾದವನ್ನು ಕುರಿತು ಬರೆಯಲಾರಂಭಿಸಿದವರು ಕೊನೆಯಲ್ಲಿ ವೈಯಕ್ತಿಕವಾಗಿ ನಮ್ಮ ಬುದ್ಧಿಭಾವನೆಗಳನ್ನು ವಿಮರ್ಶಿಸತೊಡಗಿ ಕಟುವಾಗಿ ನಿಂದಿಸಿ ತಮ್ಮಲ್ಲಿದ್ದ ಕೋಪತಾಪಗಳನ್ನೆಲ್ಲ ಹೊರಚೆಲ್ಲಿಬಿಟ್ಟಿದ್ದಾರೆ. ಈ ಗುರುಮೂರ್ತಿಗಳು ನಿಜವಾಗಿಯೂ ವಿಚಾರಶೀಲರಾಗಿದ್ದ ಪಕ್ಷದಲ್ಲಿ ದೀಕ್ಷಾವಾದಕ್ಕೆ ಸಂಬಂಧಿಸಿದ ತಮ್ಮ ವಿಚಾರಗಳನ್ನು ಮಾತ್ರ ಬರೆದು ತಮ್ಮ ಲೇಖನವನ್ನು ಮುಗಿಸಬೇಕಾಗಿದ್ದಿತು. ಹಾಗೆ ಮಾಡದೆ ವಿಷಯಾಂತರ ಮಾಡಿಕೊಂಡು ವೈಯಕ್ತಿಕ ಗುಣಾವಗುಣಗಳನ್ನು ಕುರಿತು ಚರ್ಚೆಯನ್ನಾರಂಭಿಸಿರುವುದೇ ಈ ಗುರುಮೂರ್ತಿಗಳ ಲಘುಬುದ್ಧಿಯ ನಿದರ್ಶನವಾಗಿದೆ.

ಇವರು ವೈಯಕ್ತಿಕವಾಗಿ ಟೀಕಿಸಿರುವ ಒಂದೊಂದೇ ವಿಚಾರಗಳ ಸಾರಾಂಶವನ್ನು ತೆಗೆದುಕೊಂಡು ಸಂಕ್ಷಿಪ್ತವಾಗಿ ಉತ್ತರಗಳನ್ನು ಕೊಡೋಣ.

'ದೀಕ್ಷಾವಾದ' ಎಂಬ ಲೇಖನವನ್ನು ಕುರಿತು ಇವರು ''ಅದನ್ನು ಓದಲು ಪ್ರಾರಂಭಿಸಿದೊಡನೆ ಇದೇನು ದೀಕ್ಷಾವಾದವೊ? ಇಲ್ಲವೆ ಅಯ್ಯನವರ ಮೇಲಿನ ದ್ವೇಷವಾದವೊ? ಎನ್ನುವಂತಿದೆ.......ಇವರ ಲೇಖನವೆಂದರೆ ಜಂಗಮರನ್ನು ನಿಂದಿಸಿ ನುಡಿಯುವ ಸಾಧನ. ಮಾನ ಮರ್ಮಗಳನ್ನಿರಿಯುವ ಕೂರಲಗು. ಇದು ಬಸವಣ್ಣನವರ ತತ್ವಕ್ಕೂ ತಮ್ಮ

ಭೃತ್ಯಾಚಾರಕ್ಕೂ ತೀರ ವಿರೋಧವೆಂಬುದನ್ನೇ ಇವರು ಮೊದಲು ತಿಳಿದುಕೊಂಡಿಲ್ಲ......... ಇವರಿಗೆ ಸಾಮಾಜಿಕೋನ್ನತಿಯ ಪ್ರೇಮವಿರ ಬಹುದು. ಆದರೆ ಅದು ಕಾಳ್ಕಿಚ್ಚಿನಂತಹುದು. ಸಮಾಜವನ್ನು ಸುಧಾ ರಿಸುವ ಸದಾಶೆ ಇದ್ದರೆ ಈ ರೀತಿ ಎಂದಿಗೂ ಮಾಡಬಾರದು. ಎಂದಿದ್ದಾರೆ.

ನಮ್ಮ ಲೇಖನಗಳಲ್ಲಿ ಯಾರಿಗೂ ಕಾಣದ 'ಜಂಗಮ ನಿಂದನೆ'ಯು ಈ ಗುರುಮೂರ್ತಿಗಳ ನೇತ್ರಕ್ಕೆ ಹೇಗೆ ಕಂಡಿತೋ ಕಾಣೆವು. ನಿಜವಾದ ಜಂಗಮರನ್ನು ನಮ್ಮ ಲೇಖನಿಯು ಸ್ತೋತ್ರ ಮಾಡುತ್ತದೆ. ಆದರೆ ಜಂಗಮರ ವೇಷವನ್ನು ಧರಿಸಿಕೊಂಡು 'ಮಂಗನ' ಆಟವನ್ನು ಆಡು ವವರನ್ನು ಮಾತ್ರ ಜನತೆಯ ಕಣ್ಣಿಗೆ ಕಾಣುವಂತೆ ಮಾಡುತ್ತದೆ. ಆದು ದರಿಂದ "ಕಳ್ಳನ ಮನಸು ಹುಳ್ಳುಳ್ಳಗೆ" ಎಂಬ ನಾಣ್ನುಡಿಯಂತೆ ತತ್ಸಂ ಬಂಧಪಟ್ಟವರಿಗೆ ಹುಳಿಹುಳಿಯಾಗಿ ಕಂಡು ನಿಜವಾದ ಗುರುಜಂಗಮ ಮೂರ್ತಿಗಳು ಆ ಬಗೆಯ ಲೇಖನಗಳಿಗಾಗಿ ಹರ್ಷಿಸಿ ಆಶೀರ್ವದಿಸು ತ್ತಿದ್ದಾರೆ.

ಡಂಭಾಚಾರದ ಮತ್ತು ಕೃತಕವಾದ ಮಾನಮರ್ಯಾದೆಗಳನ್ನಾಳಿ ಸಿಕೊಂಡಿರುವ ಧರ್ಮಾಧಿಕಾರಿಗಳ ಪಾಲಿಗೆ ಮಾತ್ರ ನಮ್ಮ ಬರೆಹವು 'ಮಾನಮರ್ಯಾದೆಗಳನ್ನಿರಿಯುವ ಕೂರಲಗಾಗಿ' ಪರಿಣಮಿಸಬಹುದೇ ಹೊರ್ತು ಶರಣರ ನಿಜಾಚರಣೆಯನ್ನು ಅನುಷ್ಠಿಸುತ್ತಾ ಸಮಾಜೋ ದ್ಧಾರ ಕಾರ್ಯದಲ್ಲಿ ನಿರತರಾಗಿರುವ ಪೂಜ್ಯರಾದ ಗುರುಜಂಗಮರ ಪಾಲಿಗೆ ನಮ್ಮ ಬರೆಹವು ಕುಸುಮಗುಚ್ಛವಾಗಿ ಪರಿಣಮಿಸಿ ಆ ಪೂಜ್ಯ ರಿಗೂ ತನ್ಮೂಲಕ ಸಮಾಜಕ್ಕೂ ಸುಗಂಧ ಸೌರಭದ ಸತ್ಫಲವನ್ನು ಪಸರಿಸುತ್ತದೆ.

ಇನ್ನು ಈ ಗುರುಮೂರ್ತಿಗಳು ಹೇಳುವಂತೆ ಇಂತಹ ಲೇಖನಗ ಳನ್ನು ಬರೆಯುವಾಗ ನಾವು ಭೃತ್ಯಾಚಾರವನ್ನು ಪಾಲಿಸುವುದಿಲ್ಲ, ಭೃತ್ಯಾ ಚಾರದ ಲೇಖನಗಳೇ ಬೇರೆ.

'ಶಿವಭಕ್ತರ ಶಿಶುವು ತೊಟ್ಟಿಲಲ್ಲಿರ್ದುದ ಕಂಡು
ಯುಜಮಾನನೆಂದರಿದು ನಮ್ರಭಾವದಿಂ ನಡೆದು
ಕೊಳ್ಳುವುದೇ ಭೃತ್ಯಾಚಾರ'

ಎಂಬ ಶ್ರೀಜಗದ್ಗುರು ಚನ್ನಬಸವಣ್ಣನವರ ನಿರೂಪಣೆಯಂತೆ ಅಂಗದ ಮೇಲೆ ಲಿಂಗ ಉಳ್ಳವರೆಲ್ಲರನ್ನೂ ಸಂಗಯ್ಯನಂತೆ ಕಾಣುವುದ ರಲ್ಲಿ ಮಾತ್ರ ಭೃತ್ಯಾಚಾರವನ್ನು ಆಚರಿಸುತ್ತೇನೆ. ಆದರೆ ಶಿವಧರ್ಮಕ್ಕೆ ವಿರುದ್ಧವಾದ ದುರಾಚರಣೆ ದುಶ್ಚಟಗಳನ್ನು ಖಂಡಿಸುವಾಗ ಆಚರಿಸ ಬೇಕಾದುದು "ಗಣಾಚಾರ".

ಆದುದರಿಂದ ದುಶ್ಚಟ ದುರಾಚಾರಗಳಿಗೆ ಬಲಿ ಬಿದ್ದು ಸ್ವಕರ್ತವ್ಯ ದಿಂದ ವಿಮುಖರಾಗಿರುವ ಕರ್ತವ್ಯ ಶೂನ್ಯರಾದ ಕೆಲಮಠಾಧಿಕಾರಿಗ ಳನ್ನು ಎಚ್ಚರಿಸುವ ಸಂದರ್ಭಬಂದಾಗ ಪ್ರಸಂಗವಶಾತ್ ನಮ್ಮ ಲೇಖ ನಿಯು ಪಾಲಿಸುವುದು ಶ್ರೀನಿಡುಮಾಮಿಡಿಮಠದ ಗುರುಮೂರ್ತಿದೇವರು ತಿಳಿದಿರುವಂತೆ ಭೃತ್ಯಾಚಾರವನ್ನಲ್ಲ ಅದು ''ಗಣಾಚಾರ."

ಕೇವಲ ಭೃತ್ಯಾಚಾರವೊಂದನ್ನೇ ಆಚರಿಸುವುದು ಲಿಂಗಾಯತರ ಲಕ್ಷಣವಲ್ಲ. ಲಿಂಗಾಯತರಾದವರು ಸದಾಕಾಲವು "ಪಂಚ" ಆಚಾರ ಗಳನ್ನೂ ಪಾಲಿಸುವವರಾಗಿರಬೇಕೆಂಬುದನ್ನು ಈ ಗುರುಮೂರ್ತಿಗಳು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಪುರಾತನರ ಪುಣ್ಯ ಜೀವನದ ಫಲದಿಂದ ತಮ್ಮ ಕೈವಶವಾಗಿ ರುವ ಶ್ರೀಮಂತಿಕೆಯನ್ನು ದುರುಪಯೋಗಪಡಿಸಿಕೊಂಡು ಸುಖಸಂಕಥಾ ವಿನೋದ ವಿಲಾಸ ವಿಭ್ರಮಾದಿಗಳಲ್ಲಿಯೇ ಮುಳುಗಿ ತೇಲುತ್ತಾ ಡಾಂಭಿಕ ಜೀವನದಿಂದ ಕರ್ತವ್ಯಚ್ಯುತರಾಗಿರುವ ಇಂದಿನ ಕೆಲವು ಮಠಾಧಿಕಾ ರಿಗಳ ಬಾಳನ್ನು ಜನತೆಯ ಕಣ್ಣಿಗೆ ಕಾಣುವಂತೆ ಮಾಡಬೇಕಾದರೆ ಇನ್ನೂ ಕಟುವಾದ "ಗಣಾಚಾರ" ವನ್ನು ಪಾಲಿಸುವ ಲೇಖನಗಳು ಪ್ರಕಟನಾಗಬೇಕೆಂಬುದನ್ನೂ, ಒಬ್ಬಿಬ್ಬರಲ್ಲ ಲೇಖನಿ ಹಿಡಿಯಬಲ್ಲ ಲಿಂಗಾ ಯತರೆಲ್ಲರೂ ಆ ಬಗೆಯ "ಗಣಾಚಾರ"ವನ್ನು ಪಾಲಿಸುವ ಸ್ಥಿತಿಯು ಮುಂದೆಬರುತ್ತದೆ ಎಂಬುದನ್ನೂ ಅದು ಅತ್ಯಂತ ಅವಶ್ಯಕವೆಂಬುದನ್ನೂ ನಿಡುಮಾಮಿಡಿಮಠದಲ್ಲಿರುವ ಶ್ರೀಗುರುಮೂರ್ತಿದೇವರು ಎಷ್ಟು ಬೇಗ ತಿಳಿದುಕೊಂಡರೆ ಅಷ್ಟು ಒಳ್ಳೆಯದು.

ನಮ್ಮ ಸಾಮಾಜಿಕೋನ್ನತಿಯು ಪ್ರೇಮವು ಸಮಾಜದಲ್ಲಿ ಮೌಢ್ಯ ವನ್ನು ಹೆಚ್ಚಿಸಿ ಮೂಢಭಕ್ತರ ಭಾವುಕತನದ ದುರುಪಯೋಗ ಮಾಡಿ ಕೊಂಡು ವಿಲಾಸ ಜೀವನವನ್ನು ನಡೆಸುತ್ತಿರುವವರ ಡಾಂಭಿಕತನವನ್ನು

ಸುಡುವ ಕಾಳ್ಗಿಚ್ಚೇ ಹೊರ್ತು ಶ್ರೀಗುರುಮೂರ್ತಿದೇವರು ಹೇಳುವಂತೆ ಸಮಾಜವನ್ನೇ ಸುಡುವದಲ್ಲ.

ಇನ್ನು ಈ ಗುರುಮೂರ್ತಿಗಳು ಬರೆದಿರುವ "ಸಾಮಾಜಿಕ ಸುಧಾರಣೆಗಳನ್ನು ಸದುವಿನಯದಿಂದ ಬಸವಣ್ಣನೇ ಮಾಡಲಿಲ್ಲವೆ? ಆಗ ಆತನೂ ಸಹ ನಾನು ಸಮಾಜ ಸುಧಾರಕನೆಂಬ ಹೆಮ್ಮೆಯಿಂದ ಜಂಗಮರನ್ನು ಇವರಂತೆ ಮನಸ್ವಿಯಾಗಿ ಬೈಯುತ್ತ ಕುಳಿತನೆ? ಈಗ ಭಕ್ತರಲ್ಲಿ ಕೆಲವರು ಜಂಗಮ ವೇಷವನ್ನು ಹಾಕಿಕೊಂಡು ಜಂಗಮರಕಿಂತಲೂ ಹೆಚ್ಚಾಗಿ ನಾಚಿಕೆಯಿಲ್ಲದೆ ಜೋಳಿಗೆಯನ್ನು ಒಡ್ಡುತ್ತಿರುವರು. ಭಕ್ತಸ್ಥಲವು ಸರಿಯಾಗಿದ್ದರಲ್ಲವೆ? ಮಹೇಶ್ವರಸ್ಥಲವು ಸರಿಯಾಗಿರುವುದು?......ಹನ್ನೆರಡನೆಯ ಶತಮಾನದಲ್ಲಿ ಜಂಗಮರು ಯಾವ ಯಾವ ಕಾಯಕವನ್ನು ತೊಟ್ಟಿದ್ದರು......ಒಂದು ದೃಷ್ಟಿಯಿಂದ ನೋಡಿದರೆ ಬಸವಣ್ಣನ ಕಾಲದಲ್ಲಿಯೆ ಕೆಲ ಜಂಗಮರಿಗೆ ಸೋಮಾರಿತನ ಬಂದಿತೆಂದು ಹೇಳಲು ಯಾವ ಅಭ್ಯಂತರವಿದೆ? ಈ ದೋಷವು ರೇವಣಸಿದ್ಧರ ಕಾಲದಲ್ಲಿ ಇದ್ದಂತೆ ತೋರುವುದಿಲ್ಲ.......ಶರಣರು ನುಲಿಯ-ಮೋಳಿಗೆಯ-ಆಯ್ದಕ್ಕಿಯ ಮುಂತಾದ ಕಾಯಕಗಳನ್ನು ಹಿಡಿದಂತೆ ಜಂಗಮರು ಹಿಡಿಯಲಿಲ್ಲ (?) ಪಟ್ಟವಕಟ್ಟಿದ ಬಳಿಕ ಲಕ್ಷಣವನರಸುವರೇ? ಎಂದು ಸಾರಿ ಅವರನ್ನು ಮೇಲ್ಪಂಗ್ತಿಯಲ್ಲಿಯೇ ಮನ್ನಿಸುತ್ತಬಂದರು.... ಹಲಕೆಲವು ಭಕ್ತರು "ಪ್ರಸಾದ ವಿಕ್ರಯದ ಶ್ರೇಷ್ಠ ಕಾಯಕ" ತೊಟ್ಟಂತೆ ಮಠಾಧಿಕಾರಿಗಳೂ ತೋಡಲಿಲ್ಲವೆಂದು ಕೋಪವೋ ಏನೋ?" ಎಂಬ ವಾಕ್ಯಗಳನ್ನು ಪರಿಶೀಲಿಸೋಣ.

ಸಮಾಜ ಸುಧಾರಕರೆಂಬ ಹೆಮ್ಮೆಯು ನಮಗಿಲ್ಲ. ಸಮಾಜ ಸುಧಾರಣಾ ಕಾರ್ಯದಂತಹ ಮಹತ್ ಸೌಭಾಗ್ಯವು ನಮ್ಮ ನಿಮ್ಮಂತಹ ಒಬ್ಬಿಬ್ಬರ ಪಾಲಿನದಲ್ಲ. ಅದು ಸಮಸ್ತ ಸದ್ಭಕ್ತಗಣಂಗಳ ಪಾಲಿನ ಸೌಭಾಗ್ಯ.

ಜಂಗಮರನ್ನೇ ಮನಸ್ವೀ ಬಯ್ಯುತ್ತ ಕುಳಿತವರನ್ನು ದಂಡಿಸಲು ರಾಜ್ಯಾಂಗ-ನ್ಯಾಯಾಂಗಗಳಿಲ್ಲವೆ? ಹಾಗೆ ಬಯ್ಯುತ್ತ ಕುಳ್ಳಿರಲು ನಮಗೇನು ಬೇರೆ ಕಾಯಕವಿಲ್ಲವೆ? ಇಲ್ಲದ ದುರಾರೋಪಣೆಯನ್ನು ಹೊರಿಸುವುದರಲ್ಲಿ ಈ ಗುರುಮೂರ್ತಿಗಳು ನಿಸ್ಸೀಮರೆಂದು ಕಾಣುತ್ತದೆ.

ಇನ್ನು ಭಕ್ತರೂ ಜಂಗಮರಂತೆ ನಾಚಿಕೆಯಿಲ್ಲದೆ ಜೋಳಿಗೆಯನ್ನೊಡ್ಡುತ್ತಿರುವರೆಂಬ ಮಾತು:— 'ಭವತೀ ಭಿಕ್ಷಾಂ ದೇಹಿ' ಎಂಬ ದಿವ್ಯ ಮಂತ್ರದೊಡನೆ ಜೋಳಿಗೆಯನ್ನನುಗ್ರಹಿಸಿ ಉಂಡವರಿಗೆ ಉಣಬಡಿಸಲೆಳಸುವಂತೆ ವೀರಶೈವರಿಗೆ ಪುನಃ ವೀರಶೈವ ದೀಕ್ಷೆಯನ್ನೀಯಲೆಳಸಿರುವ— ದ್ವಿಜರ-ಉಪನಯನ ಕರ್ಮದ ಅಂಧಾನುಕರಣ ಪದ್ಧತಿಯ ದುಷ್ಫಲವೇ ಸಮಾಜಕ್ಕೊದಗಿರುವ ಈ ಜೋಳಿಗೆಯ ಕಾಟವೆಂಬುದನ್ನೂ ಈ ದುಷ್ಟ ಪದ್ಧತಿಗೆ ಕೆಲ ಸ್ವಪ್ರತಿಷ್ಠೆಯ ಸ್ವಾರ್ಥಸಾಧಕರಾದ ಕೆಲ ಗುರುಗಳೆಂದು ಹೇಳಿಕೊಳ್ಳುವವರೇ ಕಾರಣರೆಂಬುದನ್ನೂ ಈ ಹಿಂದಿನ ಲೇಖನದಲ್ಲಿಯೇ ವಿವರಿಸಲಾಗಿದೆ.

ಇನ್ನು ಭಕ್ತಸ್ಥಲವು ಸರಿಯಾಗಿದ್ದರಲ್ಲವೆ? ಮಹೇಶ್ವರಸ್ಥಲವು ಸರಿಯಾಗಿರುವುದು? ಎನ್ನುತ್ತಾರೆ. ಇದು ಬೀಜವೃಕ್ಷ ನ್ಯಾಯ. ಒಂದು ಚೆನ್ನಾಗಿದ್ದರೆ ಮತ್ತೊಂದೂ ಚೆನ್ನಾಗಿರುತ್ತದೆ. ಯಾವುದು ಮೊದಲು ಯಾವುದು ನಂತರ ಎಂಬ ವಾದವೀಗ ಅನವಶ್ಯಕ. ಆದರೆ ಭಕ್ತರು ದಾರಿ ತಪ್ಪಿದಾಗ ಮಠಾಧಿಕಾರಿಗಳಾದವರು ಸರಿಗೊಳಿಸಬೇಕು. ಹಾಗೆಯೇ ಮಠಾಧಿಕಾರಿಗಳಾದವರು ದಾರಿತಪ್ಪಿದಾಗ ಭಕ್ತರು ಸರಿಗೊಳಿಸಬೇಕು. ಈ ಸಂದರ್ಭದಲ್ಲಿ ಭಕ್ತರ ತಪ್ಪು ದಾರಿಯನ್ನೂ ಸರಿಗೊಳಿಸುವ ಯೋಗ್ಯತೆಯನ್ನೂ ಕಳೆದುಕೊಂಡು ತಾವೂ ತಪ್ಪು ದಾರಿಯಲ್ಲಿರುವ ಮಠಾಧಿಕಾರಿಗಳೇ ಹೆಚ್ಚಾಗಿರುವುದರಿಂದ ಈಗ ತಿದ್ದುವ ಕಾರ್ಯವನ್ನು ಭಕ್ತರೇ ಕೈಗೊಳ್ಳಬೇಕಾಗಿದೆ. ಮಠಾಧಿಕಾರಿಗಳ ನಿಜಾಚರಣೆಯ ಸ್ವಾಮಿಗಳೂ ಸಮಾಜದ ಪುಣ್ಯದಿಂದ ಅಲ್ಲಲ್ಲಿ ಕೆಲವರು ಮಿನುಗುತ್ತಿದ್ದಾರೆ. ಆದರು ಅವರು ತೀರ ವಿರಳಸಂಖ್ಯಾತರು. ಶ್ರೀಗುರುಮೂರ್ತಿದೇವರಂತಹ ಲೇಖನ ಶಕ್ತಿಯುಳ್ಳವರು ನಿಷ್ಪಕ್ಷಪಾತ ಬುದ್ಧಿಯನ್ನಳವಡಿಸಿಕೊಂಡು ಭಕ್ತರನ್ನು ತಿದ್ದುವ ನ್ಯಾಯುವಾದ ಕಾರ್ಯವನ್ನು ಅವಶ್ಯಕವಾಗಿ ಕೈಗೊಳ್ಳಬೇಕಾಗಿದೆ.

ಇನ್ನು ಈ ಗುರುಮೂರ್ತಿಗಳ ಬರೆಹದ ಶೈಲಿಯಲ್ಲಿ ಕೆಲವು ಕಡೆ ಜಂಗಮರು ಅಥವ ಮಾಹೇಶ್ವರರು ಎಂಬುದೇ ಒಂದು ಬೇರೆ ಜಾತಿ ಎಂದೂ ಲಿಂಗಾಯತರಲ್ಲಿಯ ಅದೊಂದು ಜನ್ಮತಃ ಶ್ರೇಷ್ಠವಾದ ಗುಂಪೆಂದೂ ಅರ್ಥಬರುವಂತೆ ಬರೆದಿದ್ದಾರೆ. ಇದನ್ನಿವರು ಯಾವ

ಗುರುಗಳಿಂದ ಕಲಿತರೋ ಕಾಣಲಿಲ್ಲ. ಲಿಂಗಾಯತರೆಲ್ಲರೂ ತಮ್ಮ ಜೀವಿತ ಕಾಲದಲ್ಲಿ "ಷಟ್‌ಸ್ಥಲ"ಗಳನ್ನೂ ಆಚರಿಸುತ್ತಲೇ ಇರುವರೆಂಬುದು ಈ ಗುರುಮೂರ್ತಿಗಳಿಗೆ ತಿಳಿಯದೆ? ಇವರು ಇರುವ ಮಠಕ್ಕೆ ಭಕ್ತರು ಬಂದಾಗ ಆ ಮಠಾಧಿಕಾರಿಗಳು ಭಕ್ತಸ್ಥಲದ ಆಚರಣೆಯನ್ನೇ ಕೈಕೊಂಡು ಆ ಭಕ್ತರನ್ನ ಜಂಗಮವೆಂದರಿತು ಉಪಚಾರದಿಂದ ಸ್ವಾಗತಿಸಿ ದಾಸೋಹವನ್ನ ಕೈಕೊಳ್ಳುವುದಿಲ್ಲವೆ? ಮಠಾಧಿಕಾರಿಗಳಾದ ಮಾತ್ರಕ್ಕೇ ಅವರಿಗೆ ಭಕ್ತಸ್ಥಲದಾಚರಣೆಯಿಲ್ಲವೇನು? ಜಂಗಮರು ಯಾರು? ಎಂಬ ಪ್ರಶ್ನೆಗೆ ಉತ್ತರರೂಪವಾಗಿ ಶ್ರೀಬಸವಣ್ಣನವರು ನಿರೂಪಿಸಿರುವ ಈ ಕೆಳಗಣ ಸೂತ್ರವನ್ನು ಸರ್ವರೂ ಅವಲೋಕಿಸಬೇಕಾಗಿದೆ.

ಶ್ರೀಬಸವಣ್ಣನವರ ಸೂತ್ರ:—

"ಬಸವ ಬಾರಯ್ಯಾ! ಬಸವ ಬಾರಯ್ಯಾ! ಮರ್ತ್ಯದೊಳಗೆ ಭಕ್ತರಾರುಂಟು
ಹೇಳಯ್ಯಾ? ಆರೂ ಇಲ್ಲವಯ್ಯ ಆರೂ ಇಲ್ಲವಯ್ಯ ನಾನೊಬ್ಬನೇ
ಭಕ್ತ. ಮರ್ತ್ಯದೊಳಗಣ ಉಳಿದ ಭಕ್ತರೆಲ್ಲರೂ ಜಂಗಮ
ಲಿಂಗ ನೀನೇ ಅಯ್ಯಾ ಕೂಡಲಸಂಗಮದೇವಾ.

ಹೀಗೆ ಒಬ್ಬ ಲಿಂಗಾಯತನು ಉಳಿದ ಲಿಂಗಾಯತರೆಲ್ಲರನ್ನೂ ಜಂಗಮವೆಂದೇ ಭಾವಿಸಿ ವ್ಯವಹರಿಸಬೇಕೆಂದು ಜಂಗಮಕ್ಕೇ ಜೀವವಿತ್ತ ಆ ಮಹಾನುಭಾವರೇ ನಿರೂಪಿಸಿರುವಾಗ ಜನ್ಮತಃ ನಾನು ಮಾತ್ರ ಶ್ರೇಷ್ಠನೆಂಬ ಜಾತೀಯ ಶುಷ್ಕವಾದವು ಧರೆಯ ಮೇಲೆ ಕಾಲೂರಿ ನಿಲ್ಲಬಲ್ಲುದೇ? ಅದೂ ಮಠಾಧಿಕಾರಿಗಳೇ ಗುರುದ್ರೋಹವನ್ನೆಸಗುವ ಈ ಕಾಲದಲ್ಲಿ?

ತಮ್ಮನ್ನು ಮಗುವಿನಂತೆ ಸಾಕಿ ವಿದ್ಯೆಬುದ್ಧಿಗಳನ್ನು ಕಲಿಸಿ ಶ್ರೀಮಂತ ಮಠವನ್ನು ಹುಡುಕಿ ಅದಕ್ಕೆ ಪಟ್ಟವನ್ನು ಕಟ್ಟಿ ಮಗನಿಗೆ ಬೋಧಿಸಿದಂತೆ ಗುರುತ್ವವನ್ನು ಬೋಧಿಸಿದ ಮಹಾದೇವ ಸ್ವರೂಪರಾದ ಗುರುಗಳನ್ನೇ "ದರ್ಶನಕ್ಕೆ ಬರಲು ಸಾಧ್ಯವೇನೋ ಕೇಳಿಕೊಂಡು ಬಾ" ಎಂದು ಮತ್ತೊಬ್ಬರ ಮೂಲಕ ಹೇಳಿಕಳುಹಿಸುವ ಮಠಾಧಿಕಾರಿಗಳ ಆಚರಣೆಯನ್ನು ಯಾವ ಸ್ಥಲದ ಆಚರಣೆಯೆಂದು ಹೇಳಬೇಕು? ಅದು ಮಾಹೇಶ್ವರಸ್ಥಲದ ಆಚರಣೆಯೆ? ಅದು ತೀರ ಕೃತಘ್ನತನದ ಆಚರಣೆಯಲ್ಲವೆ? ಅಂಥವರನ್ನು ಜಂಗಮರೆನ್ನಬಹುದೇನು?

ತಮ್ಮ ಲಿಂಗಪೂಜೆಗೆ ಮತ್ತೊಬ್ಬರಿಂದ ಮಂತ್ರವನ್ನು ಹೇಳಿಸುವುದೂ, ತಾವು ಮಾಡುವ ಉಪದೇಶವನ್ನು ತಮ್ಮ ಆಶ್ರಯದಲ್ಲಿರುವ ಶಾಸ್ತ್ರಿಗಳೆಂಬವರಿಂದ ಮಾಡಿಸುವುದೂ ತಾವು ಬರೆದ ಬರಹಗಳನ್ನು ಧೈರ್ಯವಿಲ್ಲದೆ ಆಶ್ರಯದಲ್ಲಿರುವ ಹುಡುಗರ ಹೆಸರಿನಿಂದ ಪ್ರಕಟಿಸುವುದೂ ಜಂಗಮರೆಂದು ಹೇಳಿಕೊಳ್ಳುವವರ ಅಥವ ಮಠಾಧಿಕಾರಿಗಳ ಲಕ್ಷಣವೇನು ?

ಇನ್ನು ಇವರು ಹನ್ನೆರಡನೆಯ ಶತಮಾನದಲ್ಲಿ ಜಂಗಮರು ಯಾವ ಕಾಯಕವನ್ನು ತೊಟ್ಟಿದ್ದರು ? ಬಸವಣ್ಣನ ಕಾಲದಲ್ಲಿಯೇ ಜಂಗಮರಿಗೆ ಸೋಮಾರಿತನ ಬಂದಿದ್ದಿತು ಎನ್ನುತ್ತಾರೆ.

ನುಲಿಯ, ಮೋಳಿಗೆಯ, ಆಯ್ದಕ್ಕಿಯ ಮತ್ತು ಇನ್ನಿತರ ಸತ್ಯ ಶುದ್ಧ ಕಾಯಕವನ್ನಾಚರಿಸಿ ಗುರುಲಿಂಗ ಜಂಗಮದಾಸೋಹವನ್ನೆಸಗದೆ ಶುದ್ಧ ಸೋಮಾರಿತನದಿಂದ ವೈಗಳ್ಳರಾಗಿ ಜೀವಿಸುತ್ತಿದ್ದ ಜಂಗಮರು ಹನ್ನೆರಡನೆಯ ಶತಮಾನದಲ್ಲಿ ಎಷ್ಟು ಜನರಿದ್ದರು ? ಅಂತಹ ಸೋಮಾರಿ ಜಂಗಮರ ನಾಲ್ಕಾರು ಹೆಸರುಗಳನ್ನಾದರೂ ಈ ಗುರುಮೂರ್ತಿಗಳು ಪ್ರಕಟಿಸುವರೆ ?

ಗುರುವಾದಡೂ ಕಾಯಕದಿಂದಲೇ ಮುಕ್ತಿ, ಜಂಗಮವಾದಡೂ ಕಾಯಕದಿಂದಲೇ ಮುಕ್ತಿ ಎಂದು ಸಾರಿದ ಬಸವಮಹಾನುಭಾವನನ್ನು ಜಂಗಮರಿಗೆ ಸೋಮಾರಿತನವನ್ನು ಕಲಿಸಿದವನೆಂದು ಬರೆಯುವುದು ಮಹಾಪಾಪಕರವಲ್ಲವೆ ? ಹೀಗೆ ಬರೆಯಲು ನಾಚಿಕೆಯಾದರೂ ಹುಟ್ಟುವುದಿಲ್ಲವೆ ?

ರೇವಣಸಿದ್ಧರ ಕಾಲದಲ್ಲಿ ಜಂಗಮರಲ್ಲಿ ಈ ಪರಿಸ್ಥಿತಿಯಿರಲಿಲ್ಲವೆನ್ನುತ್ತಾರೆ. ಕಾಯಕರಹಿತರಾಗಿ ಜೀವಿಸುವುದು ಲಿಂಗಾಯತರ ಲಕ್ಷಣವೇ ಅಲ್ಲವೆಂಬುದು ಸ್ವತಃ ಸಿದ್ಧವಾಗಿರುವಾಗ ರೇವಣಸಿದ್ಧರ "ಕಾಲ"ದ ಮಾತನ್ನೇಕೆ ತಂದರೋ ತಿಳಿಯದಾಗಿದೆ. ಆ "ಕಾಲ"ವಾದರೂ ಯಾವುದೆಂಬುದನ್ನಿವರು ಸ್ಪಷ್ಟವಾಗಿ ತಿಳಿಸುವರೆಂದು ನಂಬೋಣವೆ ?

ಪಟ್ಟವ ಕಟ್ಟಿದ ಬಳಿಕ ಲಕ್ಷಣವನರಸುವರೆ ? ಎಂಬ ಶ್ರೀಬಸವಣ್ಣನವರ ವಾಕ್ಯವನ್ನುದಾಹರಿಸಿದ ಈ ಗುರುಮೂರ್ತಿಗಳು "ಲಾಂಛನಕ್ಕೆ

ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆ ಕೂಡಲಸಂಗಮ ದೇವಾ" ಎಂಬ ವಾಕ್ಯವನ್ನೇಕೆ ಮರೆತರೋ ಕಾಣೆವು.

ಇನ್ನು ಪ್ರಸಾದ ವಿಕ್ರಯದ ಶ್ರೇಷ್ಠ ಕಾಯಕದ ವಿಷಯಃ— ದೀಕ್ಷಾವಾದಕ್ಕೆ ಸಂಬಂಧಿಸಿದ ಈ ಗುರುಮೂರ್ತಿಗಳ ಬರೆಹದಲ್ಲಿ ಪ್ರಸಾದ ವಿಕ್ರಯ ಕಾಯಕದ ಸುದ್ದಿಯನ್ನೇಕೆ ತಂದರೆಂಬುದೇ ಅರ್ಥವಾಗುವದಿಲ್ಲ. ಇವರ ಬರೆಹದ ರೀತಿಯನ್ನು ನೋಡಿದರೆ ಪ್ರಸಾದವಿಕ್ರಯ ಕಾಯಕವು ನಿಕೃಷ್ಟವಾದುದೆಂದು ಇವರು ಭಾವಿಸಿರುವಂತೆ ತೋರುತ್ತದೆ. "ನಾನು ಆರಂಭವ ಮಾಡುವೆನಯ್ಯಾ ಗುರುಪೂಜೆಗೆಂದು. ನಾನು ಬೆವಹಾರ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು. ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ ನೀ ಕೊಡುವೆ ಎಂಬುದ ನಾಬಲ್ಲೆನು" ಎಂಬೀ ಭಾವನೆಯಿಂದ ಕೈಗೊಳ್ಳುವ ಸತ್ಯಶುದ್ಧವಾದ ಯಾವ ಕಾಯಕವನ್ನೂ ಶರಣಗಣಂಗಳು ನಿರಾಕರಿಸಿಲ್ಲ. ನಿಕೃಷ್ಟವಾಗಿ ಕಂಡಿಲ್ಲ. ಮೇಲಾಗಿ ಇಂದಿನ ಸ್ಥಿತಿಯಲ್ಲಿ ಉತ್ತಮವಾದ ಪ್ರಸಾದವಿಕ್ರಯ ಮಂದಿರಗಳು ಎಷ್ಟು ಹೆಚ್ಚಿದರೆ ಈ ಕಾಯಕವು ಎಷ್ಟು ಬೆಳೆದರೆ ಅಷ್ಟು ಸಮಾಜಕ್ಕೆ ಒಳ್ಳೆಯದು.

ಲಿಂಗಾಯತರ ಪ್ರಸಾದ ವಿಕ್ರಯ ಮಂದಿರಗಳಿಲ್ಲದ ಊರುಗಳಿಗೆ ವ್ಯಾಪಾರ ವ್ಯವಹಾರಾದಿಗಳಿಗೆ ಹೋಗುವ ಲಿಂಗಾಯತರು ಭವಿಗಳ ಆಹಾರವನ್ನು ಸ್ವೀಕರಿಸಬೇಕಾಗುವುದಲ್ಲವೆ? ಹಿಂದಿನ ದಾಸೋಹದ ಮಠಗಳಂತೆ ಈಗಿನ ಎಲ್ಲ ಮಠಾಧಿಕಾರಿಗಳೇನಾದರೂ ಊರಿಗೆ ಬರುವ ಲಿಂಗಾಯತರಿಗೆ ಪ್ರಸಾದ ಅಥವ ಉಪಾಹಾರದ ವ್ಯವಸ್ಥೆಯನ್ನೇರ್ಪಡಿಸಿರುವರೇನು? ಎಷ್ಟೋ ಊರುಗಳಲ್ಲಿ ಹಿರೇಮಠದವರೆಂಬುವವರೂ ಅಯ್ಯನವರೆಂಬುವವರೂ ಪ್ರಸಾದವನ್ನು ವಿಕ್ರಯಿಸಿಯೇ ಜೀವಿಸುತ್ತಿಲ್ಲವೇನು?

ಹೀಗಿರುವಾಗ ಪ್ರಸಾದ ವಿಕ್ರಯ ಕಾಯಕವು ಇಂದಿನ ಕಾಲದಲ್ಲಿ ನಿಜವಾಗಿಯೂ ಶ್ರೇಷ್ಠವಾದುದಾಗಿಲ್ಲವೆ? ಅನ್ಯ ಧರ್ಮೀಯರು ಈ ಕಾಯಕದಲ್ಲಿ ಎಷ್ಟು ಮುಂದುವರಿದಿರುವರೆಂಬುದನ್ನೂ ಈ ಕಾಯಕದ ಇಂದಿನ ಅತ್ಯಾವಶ್ಯಕತೆಯನ್ನೂ ಕಂಡೂ ಸಹ ಈ ಕಾಯಕವನ್ನು ನಿಕೃಷ್ಟವೆಂದು ಗಣಿಸಿ ಮಾತನಾಡುವವರು ಸಮಾಜದ ಮುಂದೆ ನಾಚಿಕೆಯಿಂದ ತಲೆಯನ್ನು ಬಗ್ಗಿಸಬೇಕಾಗುವುದು.

ಹೀಗೆ ಕಾಯಕಗಳನ್ನು ವಿಡಂಬಿಸಿ ಬರೆಯುವುದು ಯಾರಿಗೂ ತರವಲ್ಲ. ಹಾಗೆ ವಿಡಂಬಿಸಿ ಬರೆಯಬಹುದಾದರೆ ಇಂದಿನ ತಪ್ಪು ನಡೆವಳಿಕೆಯ ಕೆಲವು ಮಠಾಧಿಕಾರಿಗಳನ್ನು ಪಾದೋದಕ ವಿಕ್ರಯ ಕಾಯಕದವರೆಂದೇಕೆ ವಿಡಂಬಿಸಿ ಬರೆಯಬಾರದು ?

ನಿಡುಮಾಮಿಡಿ ಮಠದಲ್ಲಿರುವ ಶ್ರೀಗುರುಮೂರ್ತಿದೇವರು ‘ ದ್ವೇಷದಿಂದ ವಿಷಕಾರುವುದು ದಡ್ಡತನದ ಅನಲಕ್ಷಣ” ಎಂಬ ತಮ್ಮ ಬರೆಹವನ್ನು ತಾವೇ ಚನ್ನಾಗಿ ಮನನಮಾಡಿಕೊಂಡು ಈ ಕೆಳಗಿನ ಆದ್ಯ ಜಗದ್ಗುರು ಶ್ರೀಪ್ರಭುದೇವರ ವಚನವನ್ನು ಆಗಾಗ್ಗೆ ಅಧ್ಯಯನ ಮಾಡುತ್ತಿದ್ದು ಲೇಖನ ಶಕ್ತಿಯ ದುರುಪಯೋಗ ಮಾಡಿಕೊಳ್ಳದೆ ತಮ್ಮ ಲೇಖನಿಯಿಂದ ಸತ್ಯ ತತ್ವಗಳನ್ನೂ ಸಮಾಜೋತ್ಕರ್ಷ ಸಾಧನದ ವಿಚಾರಗಳನ್ನೂ ಮೇಲಿಂದ ಮೇಲೆ ಬರೆಯುತ್ತಿರಲೆಂದು ಗೌರವ ಮತ್ತು ಆದರ ಭಾವನೆಗಳಿಂದ ಈ ಮೂಲಕ ಸೂಚಿಸಲಾಗಿದೆ.

ಆದ್ಯಜಗದ್ಗುರು ಶ್ರೀಪ್ರಭುದೇವರ ವಚನಃ—

“ಅಕ್ಷರವ ಬಲ್ಲೆನೆಂದು ಅಹಂಕಾರವೆಡೆಗೊಂಡು ಲೆಕ್ಕಗೊಳ್ಳರಯ್ಯಾ !
ಗುರುಹಿರಿಯರು ತೋರಿದ ಉಪದೇಶದಿಂದ ವಾಗದ್ವೈತವ ಕಲಿತು
ವಾದಿಪರಲ್ಲದೆ ಆಗುಹೋಗೆಂಬುದನರಿಯರು. ಮುಕ್ತಿಯನರಿಯರು.
ಭಕ್ತಿಯನರಿಯರು. ಮತ್ತು ವಾದಿಗಳೆನಿಸುವರು
ಹೋದರು ಗುಹೇಶ್ವರಾ ಸಲೆ ಕೊಂಡ ಮಾರಿಂಗೆ ”

---

# ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆಯೆಂಬ ಸಾಧನೆ

ಲೇಖಕರು:— ಶ್ರೀಗುರುಮೂರ್ತಿದೇವರು ಶ್ರೀಜಗದ್ಗುರು ನಿಡುಮಾಮಿಡಿ
ಶ್ರೀಶೈಲ ಸಂಸ್ಥಾನ ಮುಕ್ಕಾಂ ಅಂಬೂರು.

ಶ್ರೀ ಜೇರಿಗೆ ಕ. ಬಸಪ್ಪನವರು ಬಿ. ಎ. ಬೆಂಗಳೂರ ಇವರು ಶಿವಾನುಭವದ ಸಪ್ಟಂಬರ ಸಂಚಿಕೆಯಲ್ಲಿ—"ಲಿಂಗಧಾರಣ, ಶಿವದೀಕ್ಷೆಗಳಲ್ಲಿ ವ್ಯವಹಾರಿಕ ರೀತಿಯಿಂದ ಭೇದವುಂಟು, ಇಲ್ಲ ಎಂದು ಭಿನ್ನಾಭಿಪ್ರಾಯಗಳು ಉಂಟಾಗಲು ಆಯಾ ಪ್ರಾಂತ್ಯಗಳಲ್ಲಿರತಕ್ಕ ರೂಢಿಯು ಆಚರಣೆಗಳೇ ಮುಖ್ಯ ಕಾರಣವಾಗಿವೆಯೆ ಹೊರತು ಹಿಂದಿನ ಶಿವಶರಣರ ನಡೆನುಡಿಗಳು ಕಾರಣವಾಗಿಲ್ಲ." ಎಂಬ ತಮ್ಮ ಈ ಮಾತನ್ನು ಸಿದ್ಧಾಂತಗೊಳಿಸಲು ಕೆಲವು ಉದಾಹರಣೆಗಳ ಮೂಲಕ ಹೆಣಗಿದ್ದಾರೆ. ಆದರೆ ಅದು ಸರಿಯಾದ ರೀತಿಯಲ್ಲಿ ಸಫಲಗೊಂಡಿಲ್ಲ; ಸಮಂಜಸವಾಗಿಲ್ಲ. ಅವನ್ನಿಲ್ಲಿ ದಿಟ್ಟಿಸೋಣ!

೧. ಇವರ ಮೊದಲನೆ ಉದಾಹರಣೆ ಮುಂಬೈ ಗೆಜಿಟಿಯರ್. ಇದರಲ್ಲಿ "ಮಗುವಿನ ಲಿಂಗಧಾರಣ ಸಮಯದಲ್ಲಿ ನಡೆಯತಕ್ಕ ವಿಧಿಯು ದೀಕ್ಷೆಯೆಂಬ ಹೆಸರಿನಿಂದಲೂ ಸಹ ಕರೆಯಲ್ಪಡುವದು." ಎಂದು ಹೇಳಿದೆ ಎಂದು ಬರೆದಿದ್ದಾರೆ. ವಿಚಾರಿಸಿದಲ್ಲಿ ಎರಡೂ ಒಂದೇ ಎಂಬ ಅರ್ಥವೆ ಇದರಲ್ಲಿಲ್ಲ. ದೀಕ್ಷೆಯೆಂಬ ಹೆಸರಿನಿಂದಲೂ ಸಹ ಕರೆಯಲ್ಪಡುವದು ಎಂದು ಹೇಳುವದರಿಂದ ಆ 'ಸಹ' ಶಬ್ದದಿಂದ ದೀಕ್ಷೆಯೊಂದು ಬೇರೆಯೆಂದು ಆ ಗೆಜಿಟಿಯರೆ ಒಪ್ಪಿದಂತಿದೆ. ಓದುವವರಿಗೂ ಹಾಗೆಯೇ ಅರ್ಥವಾಗುತ್ತದೆ. ಅಲ್ಲದೆ ಜನ್ಮಲಿಂಗಧಾರಣೆಗೆ 'ಲಘು ದೀಕ್ಷೆ'ಯೆಂದು ಹೇಳುವ ರೂಢಿಯೂ ಉಂಟು. ಹೀಗಿದ್ದರೂ ಹುಟ್ಟಿದಾಗಳೆ ದೀಕ್ಷೆಯೆಲ್ಲವನ್ನೂ ಮಾಡಬೇಕೆಂಬ ಸಮರ್ಥನೆಗೆ ಇದನ್ನು ಉದಹರಿಸಿದ್ದು ತುಂಬಾ ಅಸಮಂಜಸವಾಗಿದೆ.

೧. ಎರಡನೆಯದಾಗಿ ಶ್ರೀಮಾನ್ ಎಡ್ಗರ್ ಥರ್ಸ್ಟನ್‌ನು:— "ಭವಿಗಳನ್ನು ಭಕ್ತರನ್ನಾಗಿ ತಕ್ಕೊಳ್ಳುವಲ್ಲಿ ದೀಕ್ಷೆಯು ಉಪಯೋಸಲ್ಪಡುತ್ತದೆ." ಎಂಬರ್ಥದಲ್ಲಿ ಹೇಳಿದ್ದಾನೆ, ಎಂದು ಬರೆದಿದ್ದಾರೆ. ಈ

ವಿಷಯದಲ್ಲಿ ಯಾರದೂ ಭಿನ್ನಾಭಿಪ್ರಾಯವಿಲ್ಲ. ಇದನ್ನು ಸಮರ್ಥಿಸುವ ಅವಶ್ಯಕತೆಯೇ ಇಲ್ಲ.

೩. "ಹುಟ್ಟಿದ ಮಕ್ಕಳಿಗೆ ಮಾಡತಕ್ಕ ಲಿಂಗಧಾರಣೆಯು ಶಿವದೀಕ್ಷೆಯೆಂದು ಹೇಳಿರುವ (ಇವರ ದೃಷ್ಟಿಯಲ್ಲಿ) ಶಿವಶರಣರ ಕೆಲವು ವಚನಗಳನ್ನು ಉದ್ಧರಿಸಿ ಬರೆಯುತ್ತೇನೆ." ಎಂದು ಹೇಳಿ ಹಲವನ್ನು ಆಯ್ದಿದ್ದಾರೆ. ಆದರೆ ಅವು ಇವರ ಅಭಿಪ್ರಾಯವನ್ನು ಎಳ್ಳನಿತೂ ಸಹ ಎತ್ತಿಹಿಡಿಯುವದಿಲ್ಲ. ಇವರ ವಿಚಾರಕ್ಕೆ ವಿರೋಧವಾದ ಅಭಿಪ್ರಾಯವನ್ನೇ ಅವು ಪ್ರತಿಪಾದಿಸುತ್ತವೆ. ಆದರೂ ಅವನ್ನು ಇವರು ಉದಹರಿಸಿದ್ದು ವಿಚಿತ್ರವೂ ಆಶ್ಚರ್ಯವೂ ಆಗಿದೆ. ಅವನ್ನಿಲ್ಲಿ ಒಂದೊಂದನ್ನಾಗಿ ಹಿಂಜೋಣ!

ಇವರು ಉದಹರಿಸಿದ ವಚನಗಳಲ್ಲಿ ರೆಮ್ಮವ್ವೆಯ ವಚನ ಪ್ರಧಾನವಾದುದು. ಆದರಲ್ಲಿ "......ತನ್ನ ಸತಿಗೆ ಗರ್ಭ ತಲೆದೋಗಿದಲ್ಲಿಯೇ ಮುಖವ ಕಾಂಬುದಕ್ಕೆ ಮುನ್ನವೆ ಲಿಂಗಧಾರಣವಮಾಡಿ ಮತ್ತೆ ಗಣ ಸಾಕ್ಷಿಯಾಗಿ ವಿಭೂತಿಯ ಪಟ್ಟವ ಕಟ್ಟಿ ಇಪ್ಪುದೇ ವ್ರತ ಶೀಲನೇಮ...... ಬುದ್ಧಿಯಾದಂದಿಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು..."

ಈ ವಚನದಲ್ಲಿ 'ಮುಖವ ಕಾಂಬುದಕ್ಕೆ ಮುನ್ನವೆ' ಅಂದರೆ ಶಿಶುವು ಗರ್ಭದಲ್ಲಿರುವಾಗಲೆ ಲಿಂಗಧಾರಣವಾಗಬೇಕೆಂದೂ ಮಕ್ಕಳಿಗೆ ಬುದ್ಧಿ ಬಂದಮೇಲೆ ಲಿಂಗಧಾರಣಮಾಡುವದು ವಿಹಿತವಾದುದಲ್ಲವೆಂದೂ ಹೇಳುತ್ತದೆ. ವಿಚಾರಿಸಿದರೆ ಗರ್ಭದಲ್ಲಿರುವ ಶಿಶುವಿಗೆ ದೀಕ್ಷಾತ್ರಯಗಳನ್ನು ಜೇರಗೆಯುವರ ಅಭಿಪ್ರಾಯದಂತೆ ಮಾಡಲು ಸಾಧ್ಯವೆ? ಅಲ್ಲದೆ ವಚನಕಾರಳು 'ಲಿಂಗಧಾರಣ' ವೆಂದು ಹೇಳುತ್ತಾಳಾದ್ದರಿಂದ ಅವಳ ದೃಷ್ಟಿಯಲ್ಲಿ ದೀಕ್ಷೆಯು ಬೇರೆಯಾಗಿ ಇದ್ದಿರಬೇಕೆಂದು ಅರ್ಥವಾಗುತ್ತದೆ. ಇದಕ್ಕೆ "ಮುಖವ ಕಾಂಬುದಕ್ಕೆ ಮುನ್ನವೆ" ಎಂಬ ವಚನದ ಮಾತು ಉಪಷ್ಟಂಬಕವಾಗುತ್ತದೆ. ಇನ್ನು "ಬುದ್ಧಿಯಾದಂದಿಗಾಗಲಿ ಎಂಬವರ ಅಂಗಣವ ಮೆಟ್ಟಲಾಗದು." ಎಂಬ ಮಾತಿನ ಅರ್ಥವನ್ನು ಸರಿಯಾಗಿ ಆಲೋಚಿಸಿ ನೋಡಬೇಕು. ಅದೇನೆಂದರೆ ಆಗಿನ ಕಾಲದಲ್ಲಿ ಬುದ್ಧಿಬರುವವರೆಗೂ ಮಕ್ಕಳಿಗೆ ಜನ್ಮಲಿಂಗಧಾರಣವೂ ಸಹ ಇರುತ್ತಿರಲಿಲ್ಲವೆಂದು ತೋರುತ್ತದೆ. ಬೆಂಗಳೂರು ಪ್ರಾಂತ್ಯದಲ್ಲಿಯೂ ಸಹ ಇಂದಿಗೂ ಬಹುಮಂದಿ ಮಕ್ಕಳ ಕೊರಳಲ್ಲಿ ಲಿಂಗವೇ ಇರುವದಿಲ್ಲ. ಮಕ್ಕಳನ್ನು ಕೇಳಿದರೆ ನಾವು ಚಿಕ್ಕವರು, ನಮಗೇಕೆ? ಎಂದು ಹೇಳಿಬಿಡುತ್ತವೆ. ಕಟ್ಟಿಯೆ

ತೀರಬೇಕೆಂಬ ದೊಡ್ಡವರ ಕಡ್ಡಾಯವೂ ಇಲ್ಲ. ಮತ್ತು ಚಿತ್ತೂರು, ಶೇಲಂ, ವೇಲೂರು ಜಿಲ್ಲೆಗಳ ವೀರಶೈವ ಮಕ್ಕಳಿಗೂ ಸಹ ಲಿಂಗಧಾರಣವಿರುವದಿಲ್ಲ. ಕೇಳಿದರೆ ಬುದ್ಧಿಯಾದಂದಿಗಾಗಲಿ ಎಂದು ಹೇಳುತ್ತಾರೆ. ಈ ಪದ್ಧತಿಯು ಶಿವಶರಣರ ಕಾಲಕ್ಕೂ ಇದ್ದಿರಬೇಕು. ಇತ್ತು. ಆ ತಪ್ಪು ರೂಢಿಯನ್ನು ತೆಗೆದು ಹಾಕಲು ರೆವ್ಮೊವ್ವೆಯು ಹಾಗೆ ಹೇಳಿರುತ್ತಾಳೆಯೆ ಹೊರ್ತು ಜನ್ಮಲಿಂಗಧಾರಣವಾದರೆ ದೀಕ್ಷೆ ಬೇಡೆಂದು ಹೇಳಿಲ್ಲ. ಹಾಗೆ ಹೇಳುವದಿದ್ದರೆ ಗರ್ಭಸ್ಥಶಿಶುವಿಗೆ ಲಿಂಗಧಾರಣವನ್ನು ಹೇಳುತ್ತಿರಲಿಲ್ಲ. ಅಲ್ಲದೆ ಗರ್ಭಸ್ಥಲಿಂಗಧಾರಣೆಯನ್ನು ಹೇಳುವ ರೆವ್ಮೊವ್ವೆಯು ಗರ್ಭಾಷ್ಟಮ ದೀಕ್ಷೆಯನ್ನು ಒಪ್ಪದಿರಲು ಸಾಧ್ಯವೇ ಇಲ್ಲ. ರೆವ್ಮೊವ್ವೆಯ ಈ ಅರ್ಥದ ವಚನಕ್ಕೆ ಜೀರಗೆಯವರು ಅಪಾರ್ಥವನ್ನು ಬಗೆದದ್ದು ವಿಷದಕಾರಕವಾದುದು.

ನಾವು ಹೇಳುವಂತೆ ಶರಣರ ಕಾಲದಲ್ಲಿಯೆ ಕೆಲವು ಶಿಶುಗಳಿಗೆ ಜನ್ಮಲಿಂಗಧಾರಣವೂ ಸಹ ಇರುತ್ತಿರಲಿಲ್ಲವೆಂಬ ವಿಷಯವನ್ನು ಜೀರಗೆಯವರೆ ಉದಹರಿಸಿದ ಈ ವಚನವೆ ಉತ್ಕೃಷ್ಟವಾಗಿ ಎತ್ತಿ ತೋರಿಸುತ್ತದೆ ದಿಟ್ಟಿಸಿನೋಡಿರಿ!

> ಲಿಂಗಪ್ರಾಣಿಯು ಲಿಂಗವಂತನ ಉದರದಲ್ಲಿ ಒಂದು ಲಿಂಗಪಿಂಡ ನಿಂದು ಉದಿಸಿದಡೆ,
> ಆಕ್ಷಣವೆ ಲಿಂಗಸ್ವಾಯತವಮಾಡಿ, ಆಶಿಶುವ ತನ್ನ ಶಿಶುವೆಂದು ಮುಖವ ನೋಡುವದು ಸದಾಚಾರವಲ್ಲದೆ, ಬರಿಯ ವಿಭೂತಿಯ ಪಟ್ಟವಕಟ್ಟಿಗುರು ಕಾರುಣ್ಯವಾಯಿತ್ತೆಂದು ಅನುಸರಣೆಯಲ್ಲಿ ಆಡಿಕೊಂಬುದು ಕ್ರಮವಲ್ಲ. ಅದೇನು ಕಾರಣವೆಂದಡೆ ತಾಲಿಂಗವೇದಿಯಾದುದಕ್ಕೆ ಕುರುಹು. ಲಿಂಗವುಳ್ಳ
> ವರ ತನ್ನವರೆಂದನಬೇಕಲ್ಲದೆ ಲಿಂಗವಿಲ್ಲದವರ ತನ್ನವರೆಂದರೆ ತನ್ನ ಸದಾಚಾರಕ್ಕೆ ದ್ರೋಹವದು. ಸಮಯಾಚಾರಕ್ಕೆ ಸಲ್ಲದು..."

ಈ ವಚನವು ಸಂಪೂರ್ಣವಾಗಿ ಲಿಂಗಧಾರಣವೂ ಸಹ ಇಲ್ಲದೆ ಭವಿಗಳಂತೆ ಇರುವ ವೀರಶೈವ ಮಕ್ಕಳ ಅನಾಚರಣೆಯನ್ನೆತ್ತಿ ಅದು ತಪ್ಪೆಂದು ತಿದ್ದ ಹೊರಟಿದೆ. ಇದನ್ನು ಈ ವಚನದಲ್ಲಿರುವ "ಬರಿಯ ವಿಭೂತಿಯ ಪಟ್ಟವ ಕಟ್ಟಿ" "ಲಿಂಗವಿಲ್ಲದವರ" ಈ ಎರಡು ಪದಗಳು

ಎಗ್ಗಳವಾಗಿ ಎತ್ತಿ ತೋರಿಸುತ್ತವೆ. • ಹೀಗಿದ್ದರೂ ಇದನ್ನು ಜೀರಗೆಯವರು ಲಿಂಗಧಾರಣ ಶಿವದೀಕ್ಷೆಗಳು ಎರಡು ಒಂದೆಂಬುದನ್ನು ಪ್ರತಿಪಾದಿಸುವ ವಿಷಯದಲ್ಲಿ ಉದಹರಿಸಿರುವುದು ಹೆಚ್ಚು ಆಚ್ಚರಿಯ ಮಾತಾಗಿದೆ.

ಇನ್ನು ಚನ್ನಬಸವಣ್ಣನವರ ವಚನವನ್ನು ವಿಚಾರಿಸೋಣ!

"ಶಿವಭಕ್ತರಲ್ಲಿ ಗರ್ಭೋತ್ಪತ್ತ್ಯವಾದ ಶಿಶುವಿಂಗೆ
ಪಾದೋದಕದಿಂದೆ ಜಳಕವಮಾಡಿಸುವುದು.
ವಿಭೂತಿಯು ಪಟ್ಟವ ಕಟ್ಟಿ, ಕೊರಳಲ್ಲಿ ಲಿಂಗಸಾಹಿತ್ಯವ ಮಾಡಿ,
ಪ್ರಸಾದದ ಎಣ್ಣೆ, ಬೆಣ್ಣೆ, ಹಾಲು, ತುಪ್ಪವನೆರೆದು ಸಲಹುವುದೇ ಆಚಾರ"

ಇದರಲ್ಲಿ ಜನ್ಮಲಿಂಗಧಾರಣ ಕ್ರಮವು ಈಗ ಬಳಕೆಯಲ್ಲಿರುವಂತೆ ಸ್ಪಷ್ಟವಾಗಿ ಉಲ್ಲೇಖಿತವಾಗಿದೆ. ಏನೆಂದರೆ—ಹುಟ್ಟಿದ ಮಗುವಿಗೆ ಪಾದೋದಕ ಸ್ನಾನ, ಹಣೆಗೆ ವಿಭೂತಿಧಾರಣೆ, ಕೊರಳಲ್ಲಿ ಲಿಂಗಧಾರಣ ಮಾತ್ರ ಮಾಡಿ ಹಾಲು ಮೊದಲಾದ ಪ್ರಸಾದವನ್ನುಣ್ಣಿಸಬೇಕೆಂದು ಜನ್ಮಲಿಂಗ ಧಾರಣೆಯ ಕ್ರಮವನ್ನು ಮಾತ್ರ ಹೇಳಿದೆಯೆ ಹೊರ್ತು ದೀಕ್ಷೆಯ ವಿವರವಿಲ್ಲ. ಈ ವಚನದಲ್ಲಿ ಉಕ್ತವಾದಷ್ಟನ್ನು ಮಾತ್ರ ಈಗಲೂ ಜನನ ಕಾಲದಲ್ಲಿ ವೀರಶೈವ ಮಕ್ಕಳಿಗೆ ಲಿಂಗಧಾರಣ ವಿಧಾನವು ಮಾಹೇಶ್ವರರಿಂದ ಮಾಡಲ್ಪಡುತ್ತದೆ. ಈ ವಿಚಾರದಲ್ಲಿ ಎಲ್ಲ ಪ್ರಾಂತಗಳಲ್ಲಿರತಕ್ಕ ಲಿಂಗಧಾರಣ ಆಚರಣೆಯು ಶರಣರ ತತ್ವಕ್ಕೆ, ಶರಣರ ಆಚರಣೆಗೆ ಅನುಗುಣವಾಗಿಯೇ ಇದೆಯೆಂದು ಸಿದ್ಧವಾಗುತ್ತದೆ. ಶ್ರೀಮಾನ್ ಜೀರಗೆಯವರೆ ಶರಣರ ತತ್ವಕ್ಕೆ ಹೊರಗಾಗಿ ಹೋಗುತ್ತಿದ್ದಾರೆಂಬುದು ಈ ವಚನದಿಂದ ವ್ಯಕ್ತವಾಗುತ್ತದೆ. ಅಲ್ಲದೆ ಈಗಿರುವ ಜನ್ಮಲಿಂಗಧಾರಣೆಗೆ ಈ ವಚನವು ಪ್ರಮಾಣಾರ್ಹವಾಗಿದೆ. ಹೀಗಿದ್ದರೂ ಶ್ರೀ ಜೀರಗೆಯವರು ದೀಕ್ಷೆಯು ಪರಮತೀಯರ ಆಚರಣೆಯ ಅನುಕರಣೆಯೆಂದು ಊಹಿಸುವದು, ಆಷ್ಟೊಂದು ಸೂಕ್ತವಾಗಿ ತೋರುವದಿಲ್ಲ; ಅವಕಾಶವೂ ಇಲ್ಲ.

ಜನ್ಮಲಿಂಗಧಾರಣೆಯೆ ಶಿವದೀಕ್ಷೆಯೆಂದು ಸಿದ್ಧಿಸಲು ಶ್ರೀ. ಜೀರಗೆಯವರು ಉದಹರಿಸಿದ ವಚನಗಳು ಇವು ಮೂರೆ. ಇವು ಮೂರರಲ್ಲಿ ಜನನಕಾಲದಲ್ಲಿ ಆಗತಕ್ಕ ವಿಧಾನಕ್ಕೆ ಲಿಂಗಧಾರಣ, ಲಿಂಗಸ್ವಾಯತ, ಲಿಂಗಸಾಹಿತ್ಯ, ಎಂದು ಹೇಳಿದೆ. ಇವುಗಳಲ್ಲಿ ಧಾರಣ ಶಬ್ದವನ್ನೆ ಪರ್ಯಾಯವಾಗಿ ಸ್ವಾಯತ, ಸಾಹಿತ್ಯ ಶಬ್ದಗಳಿಂದ ಹೇಳಿವೆಯೆ ಹೊರ್ತು

"ದೀಕ್ಷೆ"ಯೆಂಬ ಪದವನ್ನು ಉಪಯೋಗಿಸಿಲ್ಲ. ದೀಕ್ಷೆಯನ್ನು ಹೇಳುವದೂ ಅವುಗಳ ಗುರಿಯಲ್ಲಿಲ್ಲ. ಶರಣರಕಾಲದಲ್ಲಿ ಲಿಂಗಧಾರಣಕ್ಕೇನೆ ದೀಕ್ಷೆಯೆಂಬ ವ್ಯವಹಾರವಿದ್ದಿದ್ದರೆ ಜನ್ಮಲಿಂಗಧಾರಣವನ್ನು ಪ್ರತಿಪಾದಿಸುವ ಈ ವಚನಗಳಲ್ಲಿ ಒಮ್ಮೆಯಾದರೂ ಯಾರಾದರೂ ಆ ದೀಕ್ಷಾಶಬ್ದವನ್ನು ಉಪಯೋಗಿಸಬಹುದಾಗಿತ್ತು. ಹಾಗೆ ಎಲ್ಲಿಯೂ ಇಲ್ಲವಾದಕಾರಣ ಆಗಲೂ ಎರಡೂ ಬೇರೆ ಬೇರೆ ಸಮಯಗಳಲ್ಲಿ ಮಾಡತಕ್ಕ ಕ್ರೀಯೆಗಳೆಂದು ಅವರೂ ಸಹ ಭಾವಿಸಿದ್ದರೆಂತಲೂ ಅದರಂತೆಯೆ ನಡೆ ನುಡಿಗಳಲ್ಲಿಯೂ ತಂದುಕೊಂಡಿದ್ದರೆಂತಲೂ ಸ್ಪಷ್ಟವಾಗಿ ನಿರ್ದುಷ್ಟವಾಗಿ ಅವರ ವಚನಗಳಿಂದಲೆ ವ್ಯಕ್ತವಾಗುತ್ತದೆ. ಕಾರಣ ಈ ವಚನಗಳು ಶ್ರೀಮಾನ್ ಜೀರಗೆಯವರ ಅಭಿಪ್ರಾಯವನ್ನು ಎಷ್ಟು ಮಾತ್ರಕ್ಕೂ ಅನುಸರಿಸುವದಿಲ್ಲ. ಅವರು ಹೇಳುವ ಅರ್ಥದ ಲವಲೇಶಗಂಧವೂ ಸಹ ಅವುಗಳಲ್ಲಿಲ್ಲ. ಹೀಗಿದ್ದರೂ ಅವರು ಅವನ್ನು ಬಲಾತ್ಕಾರವಾಗಿ ಎತ್ತಿ ಎತ್ತೊ ಅರ್ಥಮಾಡಿ ಉದಹರಿಸಿದ್ದಾರೆ. ಪ್ರಯೋಜನವೇನು ?

ಇವರು ಮುಂದೆ ಮುಂದೆ ಹೋಗುತ್ತ --"ಅಂಗದಮೇಲೆ ಲಿಂಗವುಳ್ಳವರು ಮಾನವರಲ್ಲವೆಂತಲೂ ಎಂತವನಾದರೇನು ಲಿಂಗವಿಲ್ಲದವ ಭವಿಯೆಂತಲೂ ಪೂರ್ವಾಶ್ರಯವ ಕಳೆದು ಪುನರ್ಜಾತನಾದ ಬಳಿಕ ಆತನಿಗೆ ಕುಲ, ಛಲ, ತನು, ಮನ, ನೆನಹು, ಭಾವ, ಸೂತಕಗಳು ಇಲ್ಲವೆಂತಲೂ ಪ್ರತಿಪಾದಿಸುವ ಕೆಲವು ವಚನಗಳನ್ನು ದೀರ್ಘಸೂತ್ರತೆಗಾಗಿ ಉದಹರಿಸಿದ್ದಾರೆ. ಈ ವಿಚಾರದಲ್ಲಿ ಇಂದಿಗೂ ಯಾರದು ಭಿನ್ನಾಭಿಪ್ರಾಯವಿಲ್ಲವಾದ್ದರಿಂದ ಈ ದೀರ್ಘಬರಹಕ್ಕೆ ಉತ್ತರಿಸುವದರಿಂದ ಪ್ರಯೋಜನವಿಲ್ಲ; ಪ್ರಸ್ತುತವೂ ಅಲ್ಲ.

## ಮತ್ತೊಬ್ಬರ ದೃಷ್ಟಾಂತ

ಎಂಟನೆಯ ವರುಷದಲ್ಲಿ ಮಾಡತಕ್ಕ ದೀಕ್ಷೆಯು ಬ್ರಾಹ್ಮಣರ ಉಪನಯನ ಪದ್ಧತಿಯ ಅನುಕರಣವೆಂಬ ಶ್ರೀಮಾನ್ ಎಡ್ಗರ್ ಥರ್ಸ್ಟನ್‌ರವರು ಹೇಳಿದುದನ್ನು ಶ್ರೀಮಾನ್ ಜೀರಗೆಯವರು ಉಪಯೋಗಿಸಿದ್ದಾರೆ. ಅದು ಭದ್ರವೆಂದು ಅದರ ಮೇಲೆ ಕೈಯ್ಯೂರಿ ನಿಂತಿದ್ದಾರೆ. ಆದರೆ ಅದು ಅಭದ್ರವಾದುದು. ಮತತತ್ವಿಕ ವಿಷಯದಲ್ಲಿ ಬೇರೆ ಜಾತಿಯ ವಿಮರ್ಶಕರ ಬೌದ್ಧಿಕ ಅಭಿಪ್ರಾಯಗಳು ಪ್ರಬಲವಾದ ಆಧಾರಗಳಾಗ

ಲಾರವು. ಉದಾಹರಣೆಗಾಗಿ,—ಇನ್ನೊಬ್ಬನು ವೀರಶೈವರ ಲಿಂಗಮು ಖಂ ಚರಲಿಂಗ" ವೆಂಬ ತತ್ವವು "ಅಗ್ನಿಮುಖೋ ವೈ ದೇವಾ" ಎಂಬ ಬ್ರಾಹ್ಮಣತತ್ವದ ಅನುಕರಣವೆಂದು ಬರೆದರೆ ಅದನ್ನೂ ಬಿಟ್ಟುಬಿಡಬಹುದೆ? ಈ ಕಾರಣದಿಂದ ಇನ್ನೊಬ್ಬರ ಅಭಿಪ್ರಾಯವನ್ನು ಸಾಕಲ್ಯವಾಗಿ ಅಂಗೀಕಾರ ಮಾಡಲು ಸಾಧ್ಯವಾಗುವದಿಲ್ಲ. ಒಂದು ವೇಳೆ ಅಂಗೀಕರಿಸಿಯೆ ಆಗಬೇಕೆಂದು ಹಟತೊಟ್ಟರೆ ಸರ್ಕಾರ ಗೆಜೆಟಿಯರಿನಲ್ಲಿ ವೀರಶೈವರು 'ಶೂದ್ರ' ರೆಂದು ಸಿದ್ಧಮಾಡಿದ್ದನ್ನು ನೀವು ಒಪ್ಪಬೇಕಾಗುತ್ತದೆ. ಆಗಲಿ ಒಪ್ಪಿದರೆ ತಪ್ಪೇನು? ಎಂದು ಕೇಳುವದಾದರೆ—''ಹಾರುವ ಮೊದಲು ಶೂದ್ರಕಡೆಯಾಗಿ ಲಿಂಗವಿಲ್ಲದವರ 'ಭವಿ'ಯೆಂಬೆನು. ವಿಪ್ರಮೊದಲು ಶ್ವಪಚ ಕಡೆಯಾಗಿ ಲಿಂಗವಿದ್ದವರ 'ಭಕ್ತ'ರೆಂಬೆನು.'' ಎಂಬ ಬಸವಾದಿ ಶಿವಶರಣರ ತತ್ವಕ್ಕೆ ಗತಿಯೇನು? ಆಶ್ರಯವಾರು?

## ಧಾರಣೆಯಲ್ಲಿ ಪ್ರಾಂತವ್ಯತ್ಯಾಸದ ವಿಷಯ.

ಶ್ರೀಮಾನ್ ಜೀರಗೆಯವರು ಈ ವಿಷಯವನ್ನು ಎತ್ತಿ ಶರಣರ ಪದ್ಧತಿಯಂತೆ ತಮ್ಮ ಪ್ರಾಂತದಲ್ಲಿ ಶಿಶುವಿಗೇನೆ ತ್ರಿವಿಧ ದೀಕ್ಷೆಗಳನ್ನು ಮಾಡುವ ಆಚರಣೆಯಿದೆಯೆಂದು ಪ್ರತಿಪಾದಿಸಿದ್ದಾರೆ. ನಡೆ ಹೇಗಾದರಿರಲಿ. ನುಡಿಯಲ್ಲಿ ಒಪ್ಪೋಣ! ಆದರೂ ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಏನೆಂದರೆ ಮೋಳ್ಗಿಂಡ ರೆಮ್ಮವ್ವೆಯ ವಚನದಲ್ಲಿ ಲಿಂಗಧಾರಣೆಯು ಗರ್ಭಸ್ಥಶಿಶುವಿಗೇನೆ ವಿಧಿಸಿದೆ. ಲಿಂಗಧಾರಣೆಯೆ ಶಿವದೀಕ್ಷೆಯೆಂದು ಪ್ರತಿಪಾದಿಸುವ ಜೀರಗೆಯವರು, ಆ ಶರಣೆಯ ಅಭಿಪ್ರಾಯದಂತೆ ಗರ್ಭಸ್ಥಶಿಶುವಿಗೇನೆ ತ್ರಿವಿಧ ದೀಕ್ಷೆಗಳನ್ನು ಮಾಡಿಸುವರೊ? ಮಾಡಿಸುವೆವೆಂದು ಒಪ್ಪುವದಾದರೆ ಹೇಗೆ? ಅದರ ಆದ್ಯಂತ ವಿವರವನ್ನು ತಿಳಿಸಬೇಕು. ಇಲ್ಲೆಂದರೆ ಶರಣೆಯ ತತ್ವಕ್ಕೆ ವಿರೋಧಿಸಿದಂತಲ್ಲವೆ?

ಮುಖಪ ಕಾಂಬುದಕ್ಕೆ ಮುನ್ನವೆ ಲಿಂಗಧಾರಣವನ್ನು ರೆಮ್ಮವ್ವೆಯು ಹೇಳಿದ್ದರೂ ಅದು ಸಾಧ್ಯವಿಲ್ಲದೆ ಮಗು ಹುಟ್ಟಿದ ಮೇಲೆ ಮೂರು ದೀಕ್ಷೆಗಳನ್ನು ಮಾಡಿಸುತ್ತೇವೆ ಎಂದು ಶ್ರೀಮಾನ್ ಜೀರಗೆಯವರು ಹೇಳುವದಾದರೆ ಅದನ್ನೂ ಒಪ್ಪೋಣ! ಅಲ್ಲಿಗೂ ಇವರು ಶರಣರ ತತ್ವಕ್ಕೆ ವಿರೋಧಿಸಿದಂತಾಗುತ್ತದೆ. ಹೇಗೆಂದರೆ—ಇವರೆ ಉದಹ

ರಿಸಿದ ಚನ್ನಬಸವಣ್ಣನವರ ವಚನದಲ್ಲಿ ಗರ್ಭೋತ್ಪತ್ತ್ಯದ ಶಿಶುವಿಗೆ ತ್ರಿವಿಧ ದೀಕ್ಷೆಯನ್ನು ಹೇಳದೆ ಸಾಮಾನ್ಯವಾಗಿ ಬಳಕೆಯಲ್ಲಿರುವಂತೆ ಲಿಂಗಧಾರಣವನ್ನು ಹೇಳಿದೆ. ಇವರ ಪ್ರಾಂತದಲ್ಲಿಯೂ ಕಣ್ಣಾರೆ ಕಂಡಿರುವಂತೆ ಜನ್ಮಶಿಶುವಿಗೆ ತ್ರಿವಿಧ ದೀಕ್ಷೆಗಳನ್ನು ನಡೆಯಿಸುವುದೆ ಇಲ್ಲ. ಚನ್ನಬಸವಣ್ಣನವರು ಹೇಳಿರುವಂತೆ ಪಾದೋದಕ ಸ್ನಾನಕ್ಕೆ ಬದಲು ಪಾದೋದಕ ಪ್ರೋಕ್ಷಣ, ಭಸ್ಮಧಾರಣ, ಲಿಂಗಧಾರಣ, ಪಾದೋದಕ ಪ್ರಸಾದಗಳನ್ನು ಶಿಶುವಿಗೆ ಸ್ವೀಕಾರ ಮಾಡಿಸುತ್ತಾರೆ. ಕಳಶಗಳನ್ನು ಐದನ್ನೂ ಸ್ಥಾಪಿಸುವ ನಿಯಮವಿಲ್ಲ. ಒಂದನ್ನಾದರೂ ಒಮ್ಮೊಮ್ಮೆ ಸ್ಥಾಪಿಸಿ ಮುಗಿಸುತ್ತಾರೆ. ಅನಂತರ ಆ ಶಿಶುವಿಗೆ ಧರಿಸಿದ ಲಿಂಗವನ್ನು ಕೆಲವರು ಹಾಗೆಯೆ ಧರಿಸಿರುತ್ತಾರೆ. (ತೀರ ಕಡಿಮೆ) ಮತ್ತೆ ಕೆಲವರು ತಕ್ಷಣ ತೆಗೆದು ಬೇರೆ ಇಟ್ಟುಬಿಡುತ್ತಾರೆ. ಆ ಮಕ್ಕಳು ಏಳೆಂಟು ವರುಷದವುಗಳಾಗುವ ವರೆಗೂ ಲಿಂಗವಿಲ್ಲದೆ ಭವಿಗಳಂತೆ ಅಲೆಯುತ್ತವೆ. ಇದು ಬೆಂಗಳೂರು ಕಡೆಗಿನ ನಿಜವಾದ ಪದ್ಧತಿ. ಒಂದು ಸಮಯ ಈ ವಾದ ನಡೆದನಂತರ ಶ್ರೀಮಾನ್ ಜೀರಗೆಯವರು ಜನ್ಮ ಶಿಶುಗಳಿಗೇನ್ ತ್ರಿವಿಧ ದೀಕ್ಷೆಗಳನ್ನು ಮಾಡಿಸುತ್ತಿದ್ದರೆ ಮೇಲೆ ಹೇಳಿದ ಚನ್ನಬಸವಣ್ಣನವರ ತತ್ವಕ್ಕೆ ವಿರೋಧಿಸಿದಂತೆಯೆ ಅಲ್ಲವೆ? ಅಲ್ಲದೆ ಈ ವಿಷಯದಲ್ಲಿ ಅಲ್ಲಮ ಪ್ರಭುಗಳು:—

"ಪ್ರಣತಿಯು ಇದೆ. ಬತ್ತಿಯು ಇದೆ. ಜ್ಯೋತಿಯು ಬೆಳಗುವರೆ, ತೈಲವಿಲ್ಲದೆ ಎಂತಪ್ಪುದಯ್ಯಾ! ಗುರುವು ಅಯಿದಾನೆ. ಲಿಂಗವು ಅಯಿದಾನೆ. ಶಿಷ್ಯಂಗೆ ಜ್ಞಾನೋದಯವಾಗದನ್ನಕ್ಕ ಭಕ್ತಿ ಎಂತಳವಡವುದಯ್ಯಾ!........"

ಎಂದು ಸ್ಪಷ್ಟವಾಗಿ ನಿರ್ದುಷ್ಟವಾಗಿ ನುಡಿದಿದ್ದಾರೆ. ಜ್ಞಾನೋದಯವಾಗದೆ ಏನು ಮಾಡಿದರೂ ಯಾವ ಪ್ರಯೋಜನವಿಲ್ಲೆಂಬುದಾಗಿ ಶರಣರಿಗೆಲ್ಲ ಅಧ್ಯಕ್ಷನಾದ ಅಲ್ಲಮಪ್ರಭುವಿನ ಅನುಭವಜನ್ಯನುಡಿಯೆ ಹೀಗಿರುವಾಗ ಅದನ್ನನುಸರಿಸಿ ಧಾರಣ—ದೀಕ್ಷೆಗಳು ತತ್ವತಃ ಒಂದಾಗಿದ್ದರೂ ಜ್ಞಾನಾಭಾವದಿಂದ ಎರಡಾಗಿ ವಿಭಾಗಿಸಿ ಲಿಂಗಧಾರಣ—ಶಿವದೀಕ್ಷೆಯೆಂಬುದಾಗಿ ಆಚರಣೆಯಲ್ಲಿ ತಂದಿರುವುದು ಅನುಭವಸಿದ್ಧವೂ ತತ್ವೋದ್ಧಾರಕವೂ ಸಮಾಜಪ್ರಸಿದ್ಧವೂ ಶರಣರಿಗವಿರುದ್ಧವೂ ಆಗಿದೆಯೆಂಬಲ್ಲಿ ಯಾವ ಸಂದೇಹವಿಲ್ಲ.

## ದೀಕ್ಷಾಕಾರಿಗಳು ನಿರಂಜನ ಮೂರ್ತಿಗಳೊ? ಗುರುಗಳೊ?

ಈ ಪ್ರಸ್ತಾಪವು ಮೂಲ ವಾದದಲ್ಲಿಲ್ಲ. ಇತ್ತೀಚೆಗೆ ಒಬ್ಬರು ಹೆಚ್ಚೆಚ್ಚಾಗಿ ಬರೆಯುವ ಭರದಲ್ಲಿ ತಮ್ಮ ಪ್ರಾಂತದಲ್ಲಿರುವ ಈ ದೊಡ್ಡ ದೋಷವನ್ನು ತಿಳಿಯದೆ ನಿರ್ಭಯವಾಗಿ ಎತ್ತಿ ಬರೆದಿದ್ದಾರೆ. ಅವರು ಹಾಗೆ ಬರೆದುದು ಒಂದು ಒಳ್ಳೆಯದೆ. ಅದರಿಂದ ನಿಜವನ್ನು ಇನ್ನಾದರೂ ತಿಳಿದುಕೊಳ್ಳಲು ಅನುವಾಯಿತು. ಇದು ಪ್ರಸ್ತುತವಲ್ಲದಿದ್ದರೂ ಪ್ರಸಕ್ತವಾಗಿರುವದರಿಂದ ಈ ವಿಷಯದಲ್ಲಿ ಒಂದೆರಡು ಮಾತನ್ನು ಇಲ್ಲಿ ಹೇಳದೆ ವಿಧಿಯಿಲ್ಲ.

ಶ್ರೀ ಕಾನಕಾನಹಳ್ಳಿ ರಾಚೋಟಿಯ್ಯನವರು, (ಶಿವಾನುಭವ ಸಂಘದ ಕಾರ್ಯದರ್ಶಿ) ಶಿವಾನುಭವ ಸಪ್ಟಂಬರ ಸಂಚಿಕೆಯಲ್ಲಿಯೆ ಶ್ರೀಯುತ ಪಟ್ಟೇದವರ ತಪ್ಪನ್ನು ತಿದ್ದಲು ಹೊರಟು ತಮ್ಮದೊಂದು ತೂಕದ ತಪ್ಪನ್ನು ತೆರೆಯಿಂದೀಚೆಗೆಳೆದಿದ್ದಾರೆ. ಏನೆಂದರೆ —

ಅವರೂರಿನ ವೀರಶೈವ ಮುನಿವೀರಪ್ಪನವರ ಮನೆಯಲ್ಲಿ ಜನನ ವಾದಾಗ ಆ ಶಿಶುವಿಗೆ ಲಿಂಗಧಾರಣವನ್ನೊ ದೀಕ್ಷೆಯನ್ನೊ ಮಾಡಲು ನಿರಂಜನ ಜಂಗಮ ಮೂರ್ತಿಗಳನ್ನು ಕರೆತಂದು ಮಾಡಿಸಿದರಂತೆ. ಈ ವಿಷಯವನ್ನು ಇಷ್ಟೊಂದು ಧಾರಳವಾಗಿ ಇವರು 'ಹೇಳಬೇಕಾದರೆ ಬಹುಶಃ ಇವರ ಪ್ರಾಂತದಲ್ಲಿ ಇದು ಹೀಗೆಯೆ ಇನ್ನಂತೆ ಎದ್ದುಕಾಣುತ್ತದೆ. ನೋಡಿದಿರಾ! ಇದು ಶರಣರ ತತ್ವಕ್ಕೂ ಸಹ ಎಷ್ಟು ವಿರೋಧವಾದುದು. ಇವರು ಇಂದಿನ ವರೆಗೂ ಧಾರಣವನ್ನಾಗಲಿ, ದೀಕ್ಷೆಯನ್ನಾಗಲಿ ಯಾರು ಮಾಡಬೇಕೆಂಬುದನ್ನೂ ಸಹ ತಿಳಿದುಕೊಂಡಿಲ್ಲ. ಸ್ವತಃ ವೀರಶೈವರಾಗಿ ಅದರಲ್ಲಿ ಶಿವಾನುಭವ ಸಂಘದ ಕಾರ್ಯದರ್ಶಿಗಳಾಗಿ ಈ ವಿಷಯವನ್ನು ತಿಳಿದುಕೊಳ್ಳದಿರುವುದು ತುಂಬಾ ವಿಷಾದದ ಸಂಗತಿ. ಜಂಗಮರೆ ಧಾರಣ ದೀಕ್ಷೆಗಳನ್ನು ಮಾಡುತ್ತ ಹೋದರೆ ಅಷ್ಟಾವರಣದಲ್ಲಿ ಆದಿಯಾಗಿ ಗುರುವಿದ್ದು ಪ್ರಯೋಜನವೇನು? ಇಂತಹ ಜನಜನಿತವಾದ ವಿಷಯವನ್ನೆ ತಿಳಿಯದಿರುವ ಇವರು ಇನ್ನೊಬ್ಬರಿಗೆ ಬುದ್ಧಿವಾದವನ್ನು ಹೇಳಹೊರಟಿದ್ದಾರೆ. ತಾವೆಲ್ಲವನ್ನು ಅರಿದು ಅನಂತರ ಇನ್ನೊಬ್ಬರಿಗೆ ತಿಳಿಹೇಳುವುದು ಭೂಷಣ. ಆದ್ದರಿಂದ ಇನ್ನಾದರೂ ಇವರು ಧಾರಣ ದೀಕ್ಷೆಗಳನ್ನು ಗುರುಗಳೆ ಮಾಡತಕ್ಕವರೆಂಬುದನ್ನು ತಿಳಿಯಲೆಂದು ಒಂದೆರಡು ಶರಣರ ವಚನಗಳನ್ನೆ ಎತ್ತಿ ತೋರುತ್ತೇವೆ.

"ನರಜನ್ಮವ ತೊಡೆದು, ಹರಜನ್ಮವ ಮಾಡಿದ ಗುರುವೆ
ಭವಬಂಧನವ ಬಿಡಿಸಿ, ಪರಮ ಸುಖವ ತೋರಿದ ಗುರುವೆ
ಭವಿಯೆಂಬುದ ತೊಡೆದು, ಭಕ್ತೆಯೆಂದೆನಿಸಿದ ಗುರುವೆ
ಶ್ರೀಚನ್ನಮಲ್ಲಿಕಾರ್ಜುನನ ತಂದೆನ್ನ ಕೈವಶಕ್ಕೆ ಕೊಟ್ಟ ಗುರುವೆ
ಶರಣು."

—ಅಕ್ಕಮಹಾದೇವಿ.

"ಗುರುವಚನವಲ್ಲದೆ, ಲಿಂಗವೆಂದೆನಿಸದು
ಗುರುವಚನವಲ್ಲದೆ, ನಿತ್ಯವೆಂದೆನಿಸದು
ಗುರುವಚನವಲ್ಲದೆ, ನೇಮವೆಂದೆನಿಸದು..."
"ಶಿವಪಥವನರಿವಡೆ ಗುರುಪಥವೇ ಮೊದಲು.
"ಗುರು ಪಥವ ಮೀರಿ ಮಾಡುವ ನೇಮ ಸಲ್ಲವು"
"ಭಕ್ತಿಯೆಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ,
ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು. ಆಚಾರವೆಂಬ ಕಾಯಾಯಿತ್ತು.
ನಿಷ್ಪತ್ತಿಯೆಂಬ ಹಣ್ಣಾಯಿತ್ತು. ನಿಷ್ಪತ್ತಿಯೆಂಬ ಹಣ್ಣು ತೊಟ್ಟುಬಿಟ್ಟು
ಕಳಚಿ ಬೀಳುವಲ್ಲಿ, ಕೂಡಲಸಂಗಮದೇವ ತನಗೆ ಬೇಕೆಂದು ಎತ್ತಿ
ಕೊಂಡ."

— ಬಸವೇಶ್ವರ

"ಕಂಡುದ ಹಿಡಿಯಲೊಲ್ಲದೆ, ಕಾಣದುದ ಹಿಡಿದೆನೆಂದು ಸಿಕ್ಕಡೆಂಬ
ಬಳಲಿಕೆಯ ನೋಡಾ. ಕಂಡುದನೆ ಕಂಡು ಗುರುಪಾದವ ಹಿಡಿವಲ್ಲಿ
ಕಾಣದುದ ಕಾಣಬಹುದು ಗುಹೇಶ್ವರ"

— ಅಲ್ಲಮಪ್ರಭು.

ಹೀಗೆಯೆ ದೀಕ್ಷಾಧಿಕಾರಿ ಗುರುವೆಂಬುದಕ್ಕೆ ಬೇಕಾದಷ್ಟು ವಚನಗಳನ್ನು ಉದಹರಿಸಬಹುದು. ಇಲ್ಲಿ ಅನವಕಾಶ. ಶ್ರೀಕಾನಕಾನಹಳ್ಳಿಯವರು ಈ ವಿಷಯದಲ್ಲಿ ಹೆಚ್ಚಾಗಿ ತಿಳಿಯಬೇಕೆಂದಿದ್ದರೆ ತೋಂಟದ ಮತ್ತು ಸ್ವತಂತ್ರ ಸಿದ್ಧಲಿಂಗೇಶ್ವರರ ವಚನಗಳನ್ನು ನಿಮ್ಮಾಲ ಗುರಿಯಿಂದ ಗಮನಿಸಬೇಕು. ಧಾರಣಕ್ಕೆ ದಯಮಾಡಿದ ಜಂಗಮಮೂರ್ತಿಗಳಾದರೂ ಈ ವಿಷಯವನ್ನು ತಿಳಿಸಬಹುದಾಗಿತ್ತು. ಅಲ್ಲದೆ ಮೊನ್ನೆ ನೇಲೂ

ರಲ್ಲಿ ಕುಂಭಕೋಣದ ನಿರಂಜನ ಮೂರ್ತಿಗಳು ಹಲವರಿಗೆ ದೀಕ್ಷೆಯನ್ನು ಮಾಡಿದರೆಂದು "ಸ್ವತಂತ್ರ ಕರ್ನಾಟಕ" ಪತ್ರಿಕೆಯಲ್ಲಿ ಪ್ರಕಟವಾಗಿದೆ. ಗೊತ್ತಿಲ್ಲದೆ ಇನ್ನೂ ಎಷ್ಟೆಷ್ಟು ಸಾಗಿ ಮುಗಿಯುತ್ತವೆಯೊ ತಿಳಿಯದು. ಹೀಗೆ ಅಲ್ಲಲ್ಲಿ ಶರಣರ ತತ್ವಕ್ಕೆ ವಿರೋಧವಾಗಿ ನಡೆಯುತ್ತಿರುವ ಮುಖ್ಯ ದೋಷಗಳನ್ನು ತಿದ್ದಲು ತಿಳಿಸಲು ತಿಳಿಯಲು ವಾದಿಗಳು ಮುಂದುವರಿದು ಸಮಾಜವನ್ನು ಸುಧಾರಿಸಿ ಸಹೋದರ ಭಾವವನ್ನುಂಟು ಮಾಡಲೆಂದು ಹಾರೈಸಲಾಗಿದೆ.

---

## ಲಿಂಗಧಾರಣೆ ಅರ್ಥಾತ್ ಶಿವದೀಕ್ಷೆ

(ಲೇಖಕ—ಶ್ರೀ ಎನ್. ರಾಚೊಟಿಯ್ಯ ಮು. ಕಾನಕಾನಹಳ್ಳಿ. ಜಿ. ಬೆಂಗಳೂರ.)

ಶ್ರೀ. ಶಿವಮೂರ್ತಿಶಾಸ್ತ್ರಿಗಳು ಪ್ರಾರಂಭಿಸಿದ ಶಿವದೀಕ್ಷೆಯೆಂಬುವ ಲೇಖನದ ವಿಷಯವಾಗಿ ಇಂದಿನವರೆಗು ಶ್ರೀ. ಸಾ. ಸಂಜಪ್ಪನವರು ಜೀರಗೆ ಕ. ಬಸಪ್ಪನವರು, ಕಾ. ಬಸಪ್ಪನವರೂ, ಶ್ರೀಸಿದ್ಧವೀರದೇವರು, ಪಟ್ಟೇದ ಮಂಟಿಮುರಿಯವರು ಇವರುಗಳೆಲ್ಲಾ ಕೊಡುತ್ತಿದ್ದ ಸಲಹೆಗಳ ನೋಡುವುದಾದರೆ ಜನನಕಾಲದಲ್ಲಿಯೇ ದೀಕ್ಷಾತ್ರಯಗಳು ಜರುಗುತ್ತಿರುವುದು ಶಿವಶರಣರ ವಚನಗಳಿಗೂ ರೂಢಿಯಲ್ಲಿ ನಡಿಯುತ್ತಿರುವುದಕ್ಕೂ ಸರಿಯಾಗಿದೆ ಎಂಬುದು ವಾಚಕರಿಗೆಲ್ಲಾ ಕಂಡುಬಂದಿರುವ ಉದ್ದಿಶ್ಯ. ಈ ವಿಷಯವಾಗಿ ಲೇಖನಗಳು ಸಮಾಪ್ತಿಯನ್ನು ಹೊಂದುವವೆಂದು ನಾನು ತಿಳಿದಿದ್ದೆನು. ಅಷ್ಟರಲ್ಲಿಯೆ ಶ್ರೀನಿಡುಮಾಮಿಡಿಯ ಶ್ರೀ ಗುರುಮೂರ್ತಿದೇವರು ಧಾರಣ ದೀಕ್ಷೆ ಎಂದು ಶಿವಾನುಭವದ ಸಪ್ಟಂಬರ ೧೨ ನೇ ಸಂಚಿಕೆಯಲ್ಲಿ ಪ್ರಕಟಿಸಿದ್ದಾರೆ. ಇವರ ಲೇಖನದಲ್ಲಿ ನೋಡಿದರೆ ಲಿಂಗಧಾರಣಕ್ಕೆ ಒಂದು ಕಾಲವೆಂತಲೂ ಶಿವದೀಕ್ಷೆಗೆ ಒಂದ ಕಾಲವೆಂತಲೂ ಕಂಡುಬಂದಿದೆ. ಇವರುಗಳಂಥವರು ಸತ್ಯವಾದ ವಿಷಯವನ್ನು ಬಹಿರ್ಗರಿಸಿ ಸಮಾಜದ ಮುಂದಿಡದೆ ಮಧ್ಯಕಾಳದ ಶಿವದೀಕ್ಷೆಯನ್ನು ಭದ್ರಪಡಿಸುವುದು ಎಂತಹ ಸೋಜಿಗ? ಶ್ರೀಗಳು ಎಲ್ಲೊಮರವೆಯಲ್ಲಿ ಶಿವದೀಕ್ಷೆಯನ್ನು ಗಟ್ಟಿಹಿಡಿದಿದ್ದಾರೆ ಇವರು ಗರ್ಭಾಷ್ಟವು

ಶ್ಲೋಕವನ್ನು ಉಭಯ ಪಾರ್ಟಿಯವರು ಒಪ್ಪಿಕೊಂಡಂತೆ ತೋರುತ್ತ ವೆಂದು ಹೇಳಿರುವರು. ಪಾರ್ಟಿ ಎಂಬದಾಗಿ ಹೇಳಿದರೇ ವಿನಾ ಯಾರಲ್ಲಿ ಏನಿದೆ ಎಂಬುದನ್ನು ತಿಳಿದುಕೊಂಡಿಲ್ಲ. ಹೋಗಲಿ.

ಈ ಗರ್ಭಕಾಲದಲ್ಲಿ ತ್ರಿವಿಧ ದೀಕ್ಷೆಯು ನಡೆಯಲಾರದೆಂಬುದೇ ನನ್ನ ಸಲಹೆಯು. ಶ್ರೀಗಳು ಇದರಮೇಲೆ ಟೀಕಿಸಿರುವುದು ಸರಿಯಾ ಹುದಾಗಿದೆ? ಆದರೆ ಜನನಕಾಲದಲ್ಲಿ ನಡೆಯುವ ಕಾರ್ಯಗಳನ್ನು ಅಲ್ಲ ಗಳೆದು ಶಿವದೀಕ್ಷೆಯನ್ನು ಘಟ್ಟಿಹಿಡಿದಿರುವುದು ಸರಿಯಾಗಿ ತೋರವುದಿಲ್ಲ. ಮತ್ತ ಜನ್ಮಲಿಂಗಧಾರಣದ ಪ್ರಯೋಜನವೇನಂದರೆ ಭವಿತನವ ಕಳೆ ಯುವದೆ ಪ್ರಯೋಜನವೆಂದು ಹೇಳಿದ್ದಾರೆ. ನಮಗೆ ಆಗಬೇಕಾದುದು ಅದೇ ಅಲ್ಲವೆ? ಶಿಲಾಭಾವವ ಗುರುವಿನಿಂದ ಕಳೆದರಲ್ಲವೆ ಲಿಂಗವೆಂಬ ಶಬ್ದವು ಬರುವುದು? ಅಂತಪ್ಪ ಲಿಂಗವನ್ನು ಧರಿಸಿದ ಬಳಿಕ ಭಕ್ತನಾಗು ವನು? ಲಿಂಗವ ಬಿಟ್ಟು ಶಿವದೀಕ್ಷೆಯನ್ನು ನಡೆಸಿರಿ? ಅಥವಾ ನಡೆಸಿ ಭಕ್ತ ನನ್ನು ಮಾಡುವಿರೊ? ಭವಿಯನ್ನು ಮಾಡುವಿರೊ? ಭಕ್ತನ ಮಾಡುವದಕ್ಕ ಲ್ಲವೇ ಎಲ್ಲರೂ ಅಪೇಕ್ಷಿಸುವುದು? ಜನನಕಾಲದಲ್ಲಿ ವೇಧಾ ಮನು ಕ್ರಿಯೆ ವೆಂಬ ದೀಕ್ಷಾಕ್ರಮಗಳು ನಡೆದರೇನೆ ಭಕ್ತನಾಗುವುದು? ಇದಕ್ಕೆ ಕುರುಹು ಲಿಂಗ. ಪದ—"ಲೀ ಯೆನಲು ವಸ್ತು ವಾಗಾ ಯೆನಲು ಶಕ್ತಿ ಯಾಲಿಯು ಮುಂದಿರುವ ನಿಜ ಬಿಂದುಲೀಲೆಯಿಂದಾಯತದೊಳಾಯ್ತು ಚರಲಿಂಗಾ" ಭಕ್ತನಾದಮೇಲೆ ಶಿವದೀಕ್ಷೆಯಿಂದ ಯಾವ ಅಧಿಕಾರ ಉಂಟುಮಾಡು ವರೋ ತಿಳಿಯದು !

ವಂಶಾವಳೀ ಪ್ರಯಾತಾನಾಂ ಲಿಂಗಧಾರಿಣಶಾಲಿನಾಂ
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವ ನೈವ ವಿದ್ಯತೇ
ನಮಕೇ ಚಮಕೇ ಪಂಚಬ್ರಹ್ಮಮಂತ್ರಾದಿ ವೈಎಕೇ ತೇಷಾಮೇವಾ
ಧಿಕಾರೋಸ್ತಿ ಶಿವದೀಕ್ಷಾಪ್ರಭಾವತಃ

ಲಿಂಗವಂತರ ಪರಂಪರಾಗತ ಲಿಂಗಧಾರಿಯಾಗಿಯೂ ಜ್ಞಾನಿಯಾ ಗಿಯೂ ಶಿವಭಕ್ತಿಯನ್ನಾಚರಿಸುವವನಿಗೆ ಶೂದ್ರತ್ವವಿಲ್ಲವು. ನಮಕ ಚಮಕ ಪಂಚಬ್ರಹ್ಮಮಂತ್ರ ಪಠನದ ಅಧಿಕಾರವು ಶಿವದೀಕ್ಷಾ ಪ್ರಭಾವದಿಂದ ಉಂಟಾಗುವದೆಂದು ಹೇಳುವಲ್ಲಿ ಶಿವದೀಕ್ಷೆಯೆಂಬುವದು ಗುರುವಿನಿಂದ ಲಿಂಗವ ಪಡೆಯುವುದು, ನಂತರ ಶೂದ್ರತ್ವ ನಿವಾರಣೆ, ಅಂತಾವನಿಗೆ

ಮಂತ್ರಪಠನಾಧಿಕಾರವು ಇದೆ ಎಂದು ಶ್ಲೋಕದ ತಾತ್ಪರ್ಯವಾದರೂ ಹೀಗೆಯೇ ಸರಿ. ಲೇಖಕರು ಮರವೆಯಿಂದ ಅರ್ಥ ಪುನರುಕ್ತಿಯನ್ನು ಮಾಡಿದ್ದಾರೆ. ಲಿಂಗಧಾರಣವು ಕ್ರಿಯಾದೀಕ್ಷೆಯಿಂದಲೆ ಒದಗುವುದಾಗಿದೆ. ಧಾರಣವಾದಬಳಿಕ ಭಕ್ತನಾಗುವನೆಂದು ಶ್ರೀಗಳವರು ಒಪ್ಪಿಕೊಂಡಿದ್ದಾರೆ. ಶ್ಲೋ॥ "ಲಿಂಗಾಂಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಂ ದೇವೇತ ಪರಮಾಚಾರ್ಯಂ ಶಿಷ್ಯೋಭಕ್ತಿಭಯಾನ್ವಿತಃ. ಲಿಂಗವಂತನಿಗೆ ಆದಿಮಧ್ಯಾವಸಾನಕಾಲವೆಲ್ಲ ಗುರುಸೇವೆಯಲ್ಲಿರುತ್ತದೆಯೇ ಹೊರ್ತು ಅಲಿಂಗಿಗಳ ಹಾಗೆ ಇರುವುದಿಲ್ಲಾ. ಹೇಗೆಂದರೆ ಅಲಿಂಗಿಗಳು ಯಾರೇ ಆಗಲಿ ನೀತಿಧರ್ಮಗಳಲ್ಲಿ ನಡೆಯುತ್ತಿದ್ದು ಲಿಂಗವಂತರಾಗಬೇಕೆಂಬ ಬಯಕೆಯು ಬಂದೊಡನೆ ಗುರುಗಳಲ್ಲಿ ಬೇಡುವದು. ನಂತರ ಅವರ ಪೂರ್ವಾಶ್ರಮವನ್ನು ವಿಚಾರಮಾಡಿ ವರ್ಷವೋ ಅಥವಾ ಆರು ತಿಂಗಳೋ ನೋಡಬೇಕಾಗುವುದು. ನಂತರ ಅವರಿಗೆ ಗುರುಕರುಣದಿಂದ ಶಿವದೀಕ್ಷೆಯಮೂಲಕ ಅವರ ಅಂಗಕ್ಕೆ ಲಿಂಗ ಉಂಟಾಗುವುದು. ಲಿಂಗವಂತರಲ್ಲಿ ಈ ರೀತಿ ಇಲ್ಲ. ಕಾರಣ ಲಿಂಗವಂತನ ಜೀವಿತವೆಲ್ಲವೂ ಗುರುಲಿಂಗ ಜಂಗಮದ ಸೇವೆಯೇ ಆಗಿರುತ್ತದೆ. ಇವರ ಹೊಟ್ಟೆಯಲ್ಲಿ ಮಗುವು ಜನಿಸಿದಕೂಡಲೇ ತಂದೆಯು ಮಠಕ್ಕೆ ಹೋಗಿ ಜನನವಾಗಿದೆ ಬಿನ್ನವಿಸಿಕೊಂಡಿದ್ದೇನೆ ಮಹಾಸ್ವಾಮಿ ಎಂದು ಬೇಡುವನು. ನಂತರ ಗುರುಗಳು ಶಿಷ್ಯನ ಬಿನ್ನಹದಂತೆ ಶಿಶುವಿಗೆ ಲಿಂಗವ ಧರಿಸಿ ಮಂತ್ರವ ಬೋಧಿಸಿ ಹಸ್ತಮಸ್ತಕ ಸಂಯೋಗವ ಪಡೆಯುವರು. ಇದು ತ್ರಿವಿಧದೀಕ್ಷೆಯಿಂದಲ್ಲವೇ ? ಇಷ್ಟು ಆಗಬೇಕಾದರೆ ಇದರಲ್ಲಿ ಸೇವೆಯು ನಡೆಯುವದಿಲ್ಲೇನು? ಇಲ್ಲದಿದ್ದರೆ ನಾನಾಸಂದರ್ಭಗಳಲ್ಲಿ ಭಕ್ತರ-ಮನೆಗಳಿಗೆ ಗುರುಗಳು ಏಕೆ ಹೋಗುವರು? ಅಲ್ಲದೆ ಭವಿಗಳ ಹಾಗೆ ಭಕ್ತರಿಗೂ ವರ್ಷಕ್ಕೊ ಆರು ತಿಂಗಳಿಗೋ ಲಿಂಗಧಾರಣವು ನಡೆಯಬಹುದೆಂದು ಹೇಳುವದೇ ಇಲ್ಲ. ರೂಢಿಯಲ್ಲಿ ಸರಿಯಾಗಿರುವುದನ್ನು ಅಪಾರ್ಥವಾಗಿ ಯೋಜಿಸಿದರೆ ಏನು ಹೇಳುವುದು? ಸತ್ಯವಾದ ವಿಷಯವು ಸತ್ಯವಾಗಿಯೆ ಉಳಿಯುವುದು.

ಸಿದ್ಧಾಂತಶಿಖಾಮಣಿಯ ಆಧಾರದ ಮೇಲಣ ನಿಮ್ಮ ಸಲಹೆಯು ಸರಿಯಾಗಿರುವುದಿಲ್ಲ. ನಾನೇನು ಶ್ರೀಗಳ ಮೇಲಣ ಪ್ರೇಮಾದರಗಳಿಂದಲೆ ಅರಿಕೆಮಾಡಿಕೊಂಡಿರುವೆನು. ಮತ್ತು ಜನನಕಾಲದಲ್ಲಿ ಸಾಮಾನ್ಯ ಲಿಂಗಧಾರಣವೆಂದು ಹೇಳುವದಾದರೆ ಆಗ ಏನಾಗುತ್ತದೆಂದರೆ ಗುರು

ನರ, ಲಿಂಗ ಸಿಲೆ, ಜಂಗಮ ಮಾನವ, ಪಾದೋದಕ ನೀರು, ಪ್ರಸಾದ ಎಂಜಲು, ಮಂತ್ರವು ಜಡವಾಗುತ್ತದೆ. ಇದು ತಪ್ಪುಭಾವನೆ. ಇದು ಹೋಗಲಿ. ಸ್ವಾಮಿಗಳು ಹೇಳುವುದರಲ್ಲಿ ಒಂದು ಸರ್ತಿ ಭಕ್ತನು. ಇನ್ನೊಂದು ಸರ್ತಿ ಭಕ್ತನ ಮಾಡುವದಾದರೆ ಹುಟ್ಟಿದಂದಿನಿಂದ ಎಷ್ಟು ಸಾರಿ ಭಕ್ತನ ಮಾಡಬೇಕೋ ಹೇಳಿರಿ.

ಇವರು ನಿಷೇಕವನ್ನು ಸೂಚಿಸಿರುವರು. ವಾಚಕರೇ ಚನ್ನಾಗಿ ಅವಲೋಕಿಸಿರಿ. ಲೇಖಕರ ಮಾತಿಗೋಸ್ಕರ ಅಳಬೇಕೋ ನಗಬೇಕೋ ತಿಳಿಯದು. ತಮ್ಮ ಹಾದಿಯನ್ನು ತಾವೇ ತಿಳಿದುಕೊಂಡ ಹಾಗಿಲ್ಲ. ಏಕೆಂದರೆ ಲೋಕರೂಢಿಯಲ್ಲಿ ವಧುವಿನ ವಯಸ್ಸು ನೋಡಿ ಲಗ್ನವ್ಯವಹಾರಕ್ಕೆ ವರವನ್ನು ಯೋಜಿಸುವರು. ಪಾರಮಾರ್ಥಿಕ ಹಾದಿಯು ಲಿಂಗಾಯತರಲ್ಲಿ ಲಿಂಗತತ್ವದ ವಿಷಯವು ಹೇಗೆಂದರೆ, ವೀರಶೈವ ಮತವು ಯೌವ್ವನದಿಂದ ಕೂಡಿರುದು. ಅದು ಹೇಗೆಂದರೆ ಲಿಂಗವಂತರಲ್ಲಿ ಮಗುವು ಹುಟ್ಟಲು ಗುರುವೆಂಬ ಗಂಡನ ಹುಡುಕುವರು. ನಂತರ ತ್ರಿವಿಧದೀಕ್ಷೆಯೂ ನಡೆಯುವುದು. ಇದರಲ್ಲಿ ವಿವಾಹವೂ ನಿಷೇಕವೂ ನಡೆಯುವವು. ಲೌಕಿಕ ವಿವಾಹದ ಕುರುಹು ಇದು. ಪಾರಮಾರ್ಥಿಕ ವಿವಾಹದ ಕುರುಹು ಅಂಗದ ಮೇಲಣ ಲಿಂಗ. ಗೋಪ್ಯವಾಗಿ ಮಂತ್ರವ ಶಿಷ್ಯನಾದ ಶಿಶುವಿನ ಶ್ರೋತ್ರವೆಂಬ ಯೋನಿಯಲ್ಲಿ ಗುರುವೆಂಬ ಗಂಡನು ಷಡಕ್ಷರ ಮಂತ್ರವೆಂಬ ರೇತಸ್ಸನ್ನು ಬಿಡುವನು. ಇದಕ್ಕೆ ಕುರುಹು ರೂಢಿಯಲ್ಲಿ ಗುರುಗಳು ವಸ್ತ್ರವ ಕವುಚಿ ಶಿಶುವಿನ ಶ್ರೋತ್ರದಲ್ಲಿ ಪಿಟುಗುಟ್ಟುವುದೇ ಸಾಕ್ಷಿ. ಇದರಲ್ಲಿ ಬಾಲ್ಯಾವಸ್ಥೆ ತೋರಿದರೆ ಇದಕ್ಕೆ ಉದಾಹರಣೆ. ಲೋಕದಲ್ಲಿ ಸಣ್ಣ ವಯಸ್ಸಿನಲ್ಲಿ ಆರಾದರೂ ನಿಷೇಕ ಮಾಡುವರೋ? ಇಲ್ಲ. ಸಣ್ಣ ಕೂಸಿನೊಡನೆ ಸಂಗವ ಮಾಡುವನೆಂದರೆ ಅವನು ವಿವೇಕಿಯಾಗುವನೇ? ಇಲ್ಲ. ಈ ವಿಷಯವಾಗಿ ನೋಡಿದರೆ ಲಿಂಗವಂತರಲ್ಲಿ ಜನನ ಕಾಲದ ಶಿಶುವಿಗೆ ಗುರುಗಳು ಮಾಡುವುದೆಲ್ಲಾ ತಪ್ಪಾಗುತ್ತದೆ. ಚನ್ನಾಗಿ ಯೋಚಿಸಿರಿ. ಇದಕ್ಕೇನು ಮಾಡುವಿರಿ? ಗುರುಗಳು ಶಿಶುವಿಗೆ ಲಿಂಗ ಕಟ್ಟುವುದು ಮಂತ್ರ ಬೋಧಿಸುವುದು ಹಸ್ತಮಸ್ತಕ ಸಂಯೋಗವಾಗುವಾಗ ನಿಷೇಕವು ಉಳಿದಿದೆಯೆ? ಉಳಿಯುವದಾದರೆ ಒಂದು ಸರ್ತಿ ಗಣಸಾಕ್ಷಿಯಾಗಿಯೂ ಅಲಂಕಾರಯುಕ್ತವಾಗಿಯೂ ನಿಷೇಕವು ಜರುಗಿದ ಬಳಿಕ ಪುನಃ ನಿಷೇಕವೆಂದು ಮಾಡುವರಿ? ಆ ರೀತಿ

ಇದ್ದರೆ ಹೇಳಿರಿ? ಲೋಕದಲ್ಲಿ ಯೌವ್ವನದಿಂ ಕೂಡಿದ ವಧುವಿಗೆ ವಿವಾಹ ನಿಷೇಕಗಳೆರಡನ್ನು ಒಂದೇ ಸಾರಿ ಮಾಡುವದಿಲ್ಲವೇ? ಹಾಗೆ ವೀರ ಶೈವ ಮತತತ್ವವೂ ಯೌವ್ವನದಿಂ ಕೂಡಿದುದು ಆಗಿರುವದರಿಂದ ಶಿಶು ವಿನ ದೀಕ್ಷಾತ್ರಯ ಗಳಲ್ಲಿ ವಿವಾಹ ನಿಷೇಕಗಳೆರಡು ನಡೆಯುತ್ತವೆ. ಮುಂದೆ ನಾಗಬೇಕೆಂದರೆ ಜ್ಞಾನಜ್ಯೋತಿ ಎಂಬ ಸುಪುತ್ರನೂ ಆಗಬೇಕು. ಅದಕ್ಕೆ ಸತಿಪತಿಗಳ ಪ್ರೇಮಾದರಗಳೇ ಕಾರಣವಲ್ಲವೇ? ಅಥವಾ ಬಾಲ್ಯಾವಸ್ಥೆ ಎಂದು ಹೇಳುವುದಾದರೆ ಅಂತಹ ಶಿಶುವಿಗೆ ನಿಷೇಕ ಮಾಡಲೂ ಮಾಡಿ ಕೊಳ್ಳಲೂ ಯತ್ನಿಸುತ್ತಿರುವವರು ವಿವೇಕಿಗಳೋ ಅವಿವೇಕಿಗಳೋ ನೀವೇ ಹೇಳಿರಿ. ಈ ಸಂದರ್ಭದಲ್ಲಿ ಮಂತ್ರದ ಬೋಧಿಸುವುದು ಪ್ರಯೋಜನವಿಲ್ಲ ದಂತಾಗುವುದು. ಇಲ್ಲದ ಬಳಿಕ ಅಷ್ಟಾವರಣಗಳ ಸಂಬಂಧವು ಉಳಿ ಯುವುದೋ. ಉಳಿಯದು? ಹಾಗಲ್ಲ. ಈ ಮತದ ಧ್ಯೇಯವೇ ಯೌವನ ದಿಂದ ಕೂಡಿದುದು ನಿಶ್ಚಯವು.

ದೀಕ್ಷಾತ್ರಯುಗಳಲ್ಲಿ ವಿವಾಹ ನಿಷೇಕವು ಜರುಗುವುದು ಸತ್ಯವು. ಮುಂದೇನಾಗಬೇಕೆಂದರೆ ಸತಿಪತಿಗಳ ಸಂತೋಷ ಕೂಟವು ಕ್ರಮ ದಿಂದ ನಡೆಯಬೇಕು. ಅಂದರೆ ಮಠಪತಿಗಳು ದಿನಕ್ಕೊಂದಾವರ್ತಿ ಯಾದರೂ ವಾರಕ್ಕೊಂದಾವರ್ತಿಯಾದರೂ ಭಕ್ತರ ಕೂಡಿಕೊಂಡು ಅಷ್ಟಾವರಣ ಪಂಚಾಚಾರಗಳ ಮಹತ್ವವನ್ನೂ ಷಟ್‌ಸ್ಥಲಜ್ಞಾನಾನು ಭವವನ್ನೂ ಮಾಡಿಕೊಟ್ಟು ಸಮಾಜದಲ್ಲಿ ಜ್ಞಾನದ ಬೆಳವಣಿಗೆಯನ್ನು ಮಾಡಬೇಕು. ಇದು ನಮ್ಮ ತಾಲೂಕಿನ ಮಠಗಳಲ್ಲೆಲ್ಲಾ ಒಂದು ದಿನವಾದರೂ ಭಕ್ತರಿಗೆ ಹಿತಬೋಧೆ ಎಂಬುವುದು ನಡೆದಿದ್ದು ನನ್ನ ಆಯುಷ್ಯದಲ್ಲೆ ಇಂದಿನ ವರಿವಿಗೂ ಕಾಣಲಿಲ್ಲವು. ಐಹಿಕ ಸುಖೋಪ ಭೋಗದಲ್ಲಿ ಮನಮಗ್ನರಾಗಿ ತಪತ್ರಯುಗಳಲ್ಲಿ ಪೇಚಾಡುವವರೇ ಹೆಚ್ಚು. ಮಠಗಳಲ್ಲಿ ಉಪನ್ಯಾಸವು ಜರುಗುತ್ತದೆಂದರೆ ಹೆಂಗಸರ ಮಕ್ಕಳ ಗೊಂದ ಲವೆಂಬ ಉಪನ್ಯಾಸವು ತಪ್ಪದೆ ೨೪ ಗಂಟೆಯೂ ನಡೆಯುವದರಲ್ಲಿ ಏನೂ ಸಂದೇಹವಿಲ್ಲವೆಂದು ಹೇಳಬಹುದು. ಇಂತಹ ಸತಿಪತಿ ಮತ್ತು ಗುರು ಶಿಷ್ಯಭಾವವುಳ್ಳ ಸಮಾಜಕ್ಕೆ ಇನ್ನೆಲ್ಲಿಯ ಸಂತೋಷ ಕೂಟವು? ಜ್ಞಾನ ಜ್ಯೋತಿ ಎಂಬುವದು ಇವರಲ್ಲಿ ಉಂಟಾಗುವ ಬಗೆ ಹೇಗೆ? ಗಂಡನು ವೇಶ್ಯಾಸ್ತ್ರೀಯೊಡನೆ ಲೋಲುಪ್ತನಾಗಿರುವಾಗ ಕಟ್ಟಿಕೊಂಡ ಸತಿಯ ಗತಿ ಏನು?

ವಚನಃ— "ಆಸೆ ಎಂಬ ವೇಸಿ ಆರನಾದಡು ತನ್ನತ್ತ ಕರೆವ ಳಯ್ಯಾ......" ಎಂಬುವ ಹಾಗೆ ಈಷಣತ್ರಯಗಳ ಸಂಗದಿಂದ ಕೊರ ಗುತ್ತಿರುವರು. ಸತಿಯಾದರೋ ಜೀವನಕ್ಕಾಧಾರವಿಲ್ಲದೆ ಪರ ಪುರುಷ ನಲ್ಲಿ ಚೆನ್ನಾಗಿ ಬೆರೆತಿರುವಳು. ಅಂದರೆ ಗುರುವು ಭಕ್ತರಿಗೆ ಜೀವನಾ ಧಾರವಾದ ಲಿಂಗತತ್ವವನ್ನು ಬೋಧಿಸದೆ ಬಿಟ್ಟದ್ದರಿಂದ ಭಕ್ತರು ಹಲವು ದೈವಂಗಳ ಕೊಟಲೆಗೆ ಸಿಕ್ಕಿ ಪಾತಿವ್ರತ್ಯವನ್ನು ಕೆಡಿಸಿಕೊಂಡಿರುತ್ತಾರೆ. ಮತ್ತು ಶ್ರೀಗಳು "ಯಥಾರಾಜಾ ತಥಾಪ್ರಜಾ". ತಂದೆಯಂತೆ ಮಗ ಗುರುವಿನಂತೆ ಶಿಷ್ಯನೆಂಬ ಉದಾಹರಣೆಯನ್ನು ಮರೆತು ಭಕ್ತಸ್ಥಲ ಸರಿ ಯಾಗಿದ್ದರಲ್ಲವೇ ಮಹೇಶ್ವರಸ್ಥಲ ಸರಿಯಾಗಿದ್ದೀತೆಂದು ಹೇಳುತ್ತಾರೆ. ಈಗ ತಾವು ಬುದ್ಧಿಯನ್ನು ಹೇಳುವುದಾದರೆ ಸ್ಥಲಗಳ ಕುರಿತು ಹೇಳು ವರೋ? ವ್ಯಕ್ತಿಗಳ ಕುರಿತು ಹೇಳುವರೋ? ಭಕ್ತಸ್ಥಲವು ಯಾರಿಗೆ ಬೇಕು? ಯಾರಿಗೆ ಬೇಡ? ಎಲ್ಲರೂ ಸರಿಪಡಿಸಿಕೊಂಡರಲ್ಲವೇ?

೧೦-೧೫ನೇ ಪದ— "ಯತಿಯಾದೊಡಾಗಲಿ, ವ್ರತಿಯಾದೊಡಾ ಗಲಿ, ಅತಿಶಯವ ಭಕ್ತಿ ಸ್ಥಲದೊಳಿರ್ದಲ್ಲದೆ ಸಿತಿಕಂಠನೊಲಿಯನವರಂಗೇ."

ಕಂದಃ— "ಸಾರವಾರ್ಥದೊಳು ಇದ ವಿಸ್ತರಿಸೆ ನಿಜ ವೀರಶೈವ ಷಟ್ಸ್ಥಲಯುತಗರಿಂದೆನಿಪ ತ್ರಿವಿಧ ಪಿಕ್ಕಿನ ನೂರಜಂಗಳಿಗಸಾಧ್ಯ. ನಿತ್ಯ ನಿಜಸ ಖದಿರವಿದು ॥

"ಭಸಿತವನು ತಂದಿರಿಸಿ ಹಸಿಯ ಬಿಟ್ಟಿನು ದೇವಾ. ಎನಗಿ ದೀಕ್ಷೆ ಯನು ಕರುಣಿಸಿನಲ ಕ್ಷಣದಿಂದ ಸಗುಲಿಂಗವ ಧರಿಸಿದಾ ॥

"ಗುರುವಾದಡಾಗಲಿ ಹರನಾದಡಾಗಲಿ ಭಕ್ತಿಯಿಂದ ಮೆರೆವುದಾ ದೇವತ್ವ ಬರಿಯ ವಾಗಭ್ರಮೆಯೊಳೆಸಗದು ॥೧೫॥

ವೀರಶೈವರ ಬಾಳ್ವೆ ೧೬...೧೭... "ಲೋಕದಾ ನಡೆಯಲ್ಲ ಲೋಕದಾ ನುಡಿಯಲ್ಲ ಲೋಕಾದಿಲೋಕಗಳ ಮೀರಿ ಪರವೆಂಬ ಲೋಕ ದೊಳು ಬಾಳ್ವರೆಲೆ ದೇವೀ..."

"ಗುರುವೆನಿಸಿಕೊಂಬವನು ಪರತತ್ವವಲ್ಲದೆ ಕರಣಾದಿ ವಿಷಯ ದೊಳು ತೊಳಲಿ ಸಾವವನು ಗುರುವೆನ್ನಿಸಿಕೊಳ್ಳಲರಿಯನು" ॥

ಅಜ್ಞಾನಿ ಬುದ್ಧಿಹೀನನನ್ನು ಅಧಿಕಾರಸ್ಥಾನಕ್ಕೆ ವಹಿಸಿದರೆ ಯಾವ ಆದಾಯವೂ ಸಮಾಜಕ್ಕೆ ಆಗದು.

**ಪದ:**— "ಜ್ಞಾನಗುರುವಿನ ದೀಕ್ಷೆ ಭಾನು ಮಾಡಿದ ಹಾಗೆ ಏನೆಂಬೆನವರ ಗುರುಶಿಷ್ಯರಿರಗಳನು ಜೇನುಸಕ್ಕರೆಯು ಬೆರೆದಂತೆ"

ಕಾನಕಾನಹಳ್ಳಿ ದೇಗುಲಮಠವೆಂಬುದರಲ್ಲಿ ದಾಸೋಹವು ನಡೆಯುತ್ತಿರುವುದು ವಿಶೇಷವಾಗಿದರೂ ಅದರ ಜೊತೆಗೆ ಮಠದಲ್ಲಿ ತತ್ವ ಪ್ರಚಾರವು ನಡೆಯಬೇಕೆಂಬುದೇ ನನ್ನ ಆಸ್ತೆ. ಲೌಕಿಕ ಪಾರಮಾರ್ಥಿಕ ಮತಗಳ ತಾರತಮ್ಯವು ಕೆಳಗೆ ವಿವರಿಸಲ್ಪಟ್ಟಿದೆ.

| **ಲೌಕಿಕ ಮತ** | **ಪರಮಾರ್ಥಿಕ ಮತ** |
|---|---|
| ಶೈವ | ವೀರಶೈವ ಅಥವಾ ಲಿಂಗವಂತ |
| ಬಾಲ್ಯ | ಯೌವನ |
| ಪಾಶಬಂಧ | ಪಾಶಮುಕ್ತ |
| ಪ್ರಾಕೃತ | ಅಪ್ರಾಕೃತ |
| ಪ್ರವೃತ್ತಿ | ನಿವೃತ್ತಿ |
| ಅಂಗಭೋಗ | ಲಿಂಗಭೋಗ |

ಶ್ರೀಜಗದ್ಗುರು, ಶ್ರೀನಿಡುಮಾಮಿಡಿ ಶ್ರೀಗುರುಮೂರ್ತಿದೇವರಿಗೆ ಬಿನ್ನವಿಸಿಕೊಳ್ಳುತ್ತೇನೆ. ತಾವು ಉದಹರಿಸಿರುವ ಮತ್ತು ಮುಂದೆ ಉದಹರಿಸುವ ಶ್ಲೋಕ ಮತ್ತು ವಿಷಯಗಳಲ್ಲಿ ಸತ್ಯವಾದ ಅರ್ಥ ಅಭಿಪ್ರಾಯಗಳನ್ನು ಭಕ್ತಕೋಟಿಗಳಿಗೆಲ್ಲ ಕರುಣಿಸುವರೆಂದು ಬೇಡುತ್ತಿರುತ್ತೇನೆ

---

# ಬಸವೇಶ್ವರನ ಚರಿತ್ರೆ.

[ಲೇಖಾಂಕ- ೪]

(ಲೇಖಕಃ— ರಾ॥ ಬಾ॥ ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

## ಬಸವನಿಗೆ ಯಜ್ಞೋಪವೀತ ಧಾರಣವಾಗಿತ್ತೇ ಹೇಗೆ ?

ಬಸವನು ಯಜ್ಞೋಪವೀತವನ್ನು ತಿರಸ್ಕರಿಸಿ, ತನ್ನ ಕುಟುಂಬವನ್ನು ತ್ಯಜಿಸಿದ್ದು ಅವನ ಜೀವಿತದಲ್ಲಿ ಅತ್ಯಂತ ಕ್ರಾಂತಿಕಾರಕ ಸಮಯವೆಂದು ಹೇಳಬಹುದು. ಆದರೆ ಈ ವಿಷಯವಾಗಿ ಅವನ ಚರಿತ್ರಕಾರರಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳಿರುತ್ತವೆ. ಅವರೆಲ್ಲರೂ ಬಸವನು ಯಜ್ಞೋಪವೀತವನ್ನು ತ್ಯಜಿಸಿದ್ದನ್ನೂ ಮುಂದೆ ಕಪ್ಪಡಿಯಲ್ಲಿಯ ಸಂಗಮಕ್ಷೇತ್ರಕ್ಕೆ ಆಗಮಿಸಿದ್ದನ್ನೂ ಒಪ್ಪಿಕೊಳ್ಳುತ್ತಾರೆ. ಆದರೆ ಅವನಿಗೆ ಲನೆಯ ವರ್ಷದಲ್ಲಿ ಯಜ್ಞೋಪವೀತ ಧಾರಣವು ಉಂಟಾಯಿತೇ ಹೇಗೆ ಎಂಬ ವಿಷಯವಾಗಿ ಅವರಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳಿರುತ್ತವೆ. ಅವುಗಳನ್ನು ಸಮಾಲೋಚಿಸುವದು ನಮ್ಮ ಈ ಲೇಖದ ಉದ್ದೇಶವಾಗಿದೆ.

ಭೀಮಕವಿಯು ವೀರಶೈವ ಕವಿಗಳಲ್ಲಿ ಬಹು ಮಹತ್ವದ ಸ್ಥಾನವನ್ನು ಹೊಂದಿರುತ್ತಾನೆ. ಅವನು ತನ್ನ ಬಸವ ಪುರಾಣದಲ್ಲಿ ಹೇಳಿರುವದೇನೆಂದರೆ — ಬಸವನು ಜನಿಸಿದಾಗಲೇ ಕೂಡಲಸಂಗಮನಾಥನು ಜಂಗಮ ರೂಪವನ್ನು ತಾಳಿ ಅವನಲ್ಲಿಗೆ ಬಂದು ಅವನ ಅಂಗದಲ್ಲಿ ಲಿಂಗಧಾರಣವನ್ನು ಮಾಡಿದನು. ಹೀಗೆ ಅವನು ಲಿಂಗಾಂಗಿಯಾಗಿ ಬೆಳೆಯುತ್ತಿರಲು ಅವನ ಎಂಟನೆಯ ವರ್ಷದಲ್ಲಿ ಅವನ ತಂದೆಯು ಅವನಿಗೆ ಮುಂಜೆಗಟ್ಟಲು ಉದ್ಯುಕ್ತನಾದನು. ಆಗ ಬಸವನು ತಾನು ಜನಿಸಿದಾಗ್ಗೆಯೇ ತನಗ ಕೂಡಲಸಂಗಮನು ಲಿಂಗಧಾರಣವನ್ನು ಮಾಡಿದ್ದರಿಂದ ಕರ್ಮ ಬಂಧನದಲ್ಲಿ ತೊಡಗಿಸುವ ಈ ಮೌಂಜೀ ಬಂಧನವು ತನಗೆ ಒಪ್ಪದೆಂದು ಅವನು ಅದನ್ನು ನಿರಾಕರಿಸುತ್ತಾನೆ. ಈ ವಿವರವನ್ನು ಭೀಮಕವಿಯ ತರುವಾಯ ಆಗಿಹೋದ ಬಹುಶಃ ಎಲ್ಲ ವೀರಶೈವ ಕವಿಗಳು ಅಂಗೀಕರಿಸಿದ್ದಾರೆ.

ಸಿಂಗಿ ರಾಜನು ಈ ವಿಷಯವಾಗಿ ಹೇಳುವ ವಿವರವು ಬೇರೊಂದು ವಿಧವಾಗಿದೆ. ಅವನು ತನ್ನ ಪುರಾಣದಲ್ಲಿ ಹೇಳಿರುವದೇನೆಂದರೆ – ಬಸವೇಶ್ವರನು ಜನಿಸಿದಾಗ ಅವನಿಗೆ ಬಾಲಚೇಷ್ಟೆಗಳಿಲ್ಲದಿರಲು ಅವನ ತಂದೆ ತಾಯಿಗಳು ಚಿಂತಾತುರರಾಗಿದ್ದರು. ಆಗ ಕಪ್ಪಡಿ ಕ್ಷೇತ್ರದಲ್ಲಿದ್ದ ಜಾತವೇದ ಎಂಬ ಹೆಸರಿನ ತಪಸ್ವಿಗಳು ಬಾಗವಾಡಿಯಲ್ಲಿಯ ಶಿವಾಲಯದಲ್ಲಿ ಬಂದಿಳಿದಿದ್ದರು. ಅವರು ಬಸವನು ಹುಟ್ಟಿದ್ದನ್ನು ತಿಳಿದು ಅವನ ಗೃಹಕ್ಕೆ ಬಂದು ಭಸ್ಮವನ್ನು ಕೂಸಿಗೆ ಹೂಸಿ ಷಡಕ್ಷರಮಂತ್ರದಿಂದ ಅಭಿಮಂತ್ರಿಸಲು ಶಿಸುವು ಕಣ್ದೆರೆಯಿತು. ಆಗ ಆ ಮುನಿಗಳು ಬಸವನಿಗೆ ಲಿಂಗಧಾರಣೆಯನ್ನು ಮಾಡಿದರು. ಮುಂದೆ ಬಸವನ ೮ನೆಯ ವರ್ಷದಲ್ಲಿ ಅವನ ತಂದೆಯು ಉಪನಯನ ಮಹೋತ್ಸವನ್ನು ಮಾಡಲು ಅಣಿಯಾಗಲು ಬಸವನು ಅದನ್ನು ತಿರಸ್ಕರಿಸಿ ಸಂಗಮಕ್ಷೇತ್ರಕ್ಕೆ ಹೋದನು.

ಹರಿಹರ ಕವಿಯು ಭೀಮಕವಿ ಮತ್ತು ಸಿಂಗಿರಾಜ ಇವರಕಿಂತಲೂ ಪೂರ್ವಿಕನು. ಅವನು ಹೇಳುವ ವಿವರಗಳು ತೀರ ಭಿನ್ನವಾಗಿವೆ. ಅವನು ತನ್ನ ಬಸವರಾಜ ರಗಳೆಯಲ್ಲಿ ಹೇಳಿರುವದೇನೆಂದರೆ ಬಸವನು ಹುಟ್ಟಿದ ಬಳಿಕ ಅವನ ತಂದೆಯು ಅವನಿಗೆ ಬ್ರಾಹ್ಮಣ ಪದ್ಧತಿಯ ಪ್ರಕಾರ ಜಾತಕರ್ಮಗಳನ್ನು ಮಾಡಿದನು. ಆದರೆ ಅವನ ತಾಯಿತಂದೆಗಳು ಅವನ ಬಾಲ್ಯದಲ್ಲಿ ಮರಣಹೊಂದಲು ಅವನ ಮಾತೃಶ್ರೀಯು ಅವನನ್ನು ಸಂರಕ್ಷಿಸುತ್ತ ಬಂದಳು. ಮುಂದೆ ಬಸವನಿಗೆ ೧೬ನೆಯ ವರ್ಷವು ಪ್ರಾಪ್ತವಾಗಲು "ಕರ್ಮಲತೆಯಂತಿದ್ದ ಜನ್ನಿವಾರಂ ಕಳೆದು ಬಿಸುಟು" ಬಾಗೇವಾಡಿಯನ್ನು ತೊರೆದು ಕೂಡಲಸಂಗಮನಲ್ಲಿಗೆ ಬರುತ್ತಾನೆ. ಇದರಿಂದ, ಬಸವನಿಗೆ ಮೌಂಜೀ ಬಂಧನವಾಗಿತ್ತೆಂತಲೂ ಮುಂದೆ ಅವನಿಗೆ ಜ್ಞಾನೋದಯವಾಗಲು ಅವನು ಯಜ್ಞೋಪವೀತವನ್ನು ತೊರೆದು ಕಪ್ಪಡಿಸಂಗಮ ಕ್ಷೇತ್ರಕ್ಕೆ ಬಂದನೆಂತಲೂ ಆಗ ಅವನ ವಯಸ್ಸು ೧೬ ವರ್ಷ ಆಗಿತ್ತೆಂತಲೂ ಹರಿಹರಕವಿಯು ಹೇಳುತ್ತಾನೆ. ಹರಿಹರನು ಬಸವನ ವಿಷಯವಾಗಿ ಬಹು ಭಕ್ತಿಭಾವವುಳ್ಳವನು, ವೀರಶೈವ ಕವಿಗಳಲ್ಲಿ ಪುರಾತನ ಕವಿಯು, ಬಹು ಪ್ರಸಿದ್ಧನು, ಜ್ಞಾನಿಯು, ಮತ್ತು ಅನೇಕ ಶಿವಶರಣರ ಚರಿತ್ರೆಗಳನ್ನು ಸಂಗ್ರಹಿಸಿ ಬರೆದವನು. ಇಂಥವನು ಬಸವನ ವಿಷಯವಾಗಿ ತೀರ ಭಿನ್ನವಾದ ಇಂಥ ವಿವರಗಳನ್ನು ಕೊಡುತ್ತಿರುವದನ್ನು ನಾವು ಚನ್ನಾಗಿ ಲಕ್ಷಿಸಬೇಕಾಗುತ್ತದೆ.

ಈ ಪ್ರಕಾರ ವೀರಶೈವರಲ್ಲಿ ಬಹು ಪ್ರಸಿದ್ಧರಾದ ಮೂರು ಜನ ಗ್ರಂಥಕಾರರು ಬಸವನ ವಿಷಯವಾಗಿ ಬೇರೆ ಬೇರೆ ವಿಧವಾದ ಕಥೆಗಳನ್ನು ಹೇಳುತ್ತಿರುವದರಿಂದ ಅವುಗಳಲ್ಲಿ ಯಾವುದು ಸತ್ಯವಾದುದೆಂಬುದನ್ನು ನಾವು ಕಂಡುಹಿಡಿಯುವದು ಬಹು ಮಹತ್ವದ ವಿಷಯವಾಗಿರುತ್ತದೆ.

ಶಿವಶರಣರು ರಚಿಸಿದ ವಚನಗಳು ಅತ್ಯಂತ ಮಹತ್ವವಾದವುಗಳು. ಅವುಗಳಲ್ಲಿ ಮಹತ್ವದ ಐತಿಹಾಸಿಕ ವಿಷಯಗಳು ಅಲ್ಲಲ್ಲಿ ಉಲ್ಲೇಖಿಸಲ್ಪಡುವದು ಕಂಡುಬರುತ್ತದೆ. ಈ ಉಕ್ತಿಗಳನ್ನು ವಚನಕಾರರು ಅತ್ಯಂತ ನಿರ್ವಿಕಾರ ಮನಸ್ಸಿನಿಂದ ರಚಿಸಿರುವದರಿಂದ ಅವುಗಳಲ್ಲಿ ಇಂಥ ಉಲ್ಲೇಖಗಳಿದ್ದರೆ, ಅವುಗಳ ಸತ್ಯತೆಯ ವಿಷಯವಾಗಿ ನಾವು ಸಂದೇಹಪಡಬೇಕಾದುದಿಲ್ಲ. ಬಸವೇಶ್ವರನು ರಚಿಸಿದ ವಚನಗಳು ವಚನ ವಾಙ್ಮಯದಲ್ಲಿ ಅತ್ಯಂತ ಮಹತ್ವವಾದವುಗಳು. ಅವುಗಳಲ್ಲಿ ಅವನ ಉಚ್ಚಮನೋಭಾವಗಳು ಅತಿಸ್ಪಷ್ಟವಾಗಿ ಪ್ರತಿಬಿಂಬಿತವಾಗಿರುತ್ತವೆ. ಅವುಗಳಲ್ಲಿ ಅವನ ವ್ಯಕ್ತಿತ್ವದ ನಿದರ್ಶನವು ಚೆನ್ನಾಗಿ ತೋರಿಬರುತ್ತವೆ. ಅವನ ಅಂತರಾಳದಿಂದ ಅವುಗಳು ಹೊರಹೊಮ್ಮುವ ಹಾಗೆ ನಮಗೆ ಭಾಸವಾಗುತ್ತದೆ. ಅವುಗಳಲ್ಲಿ ಕೆಲವು ವಚನಗಳು ಬಸವೇಶ್ವರನ ಜೀವನದಲ್ಲಿ ಒದಗಿದ ಸಂದರ್ಭಗಳನ್ನು ಸೂಚಿಸುವಂಥವಿರುತ್ತವೆಂದು ನಮಗೆ ತೋರುತ್ತದೆ. ಇವುಗಳಲ್ಲಿ ಮೌಂಜೀ ಬಂಧನದ ವಿಷಯವಾಗಿ ಎರಡು ವಚನಗಳು ಮಾತ್ರ ನಮ್ಮ ನಿದರ್ಶನಕ್ಕೆ ಬಂದಿರುತ್ತವೆ. ಅವುಗಳು ಈ ವಿಷಯದಲ್ಲಿ ಬಹು ಮಹತ್ವವಾದವುಗಳು. ಅವು ಯಾವವೆಂದರೆ—

ಮಹೇಶ್ವರನ ಭಕ್ತಸ್ಥಲದಲ್ಲಿಯ ೧೨ನೇ ವಚನವನ್ನು ವಾಚಕರು ನೋಡತಕ್ಕದ್ದು. ಅದು ಕೆಳಗೆ ಕಾಣಿಸಿದಂತೆ ಇದೆ.

"ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆ ಹೋಹ ಕೌತುಕ ಹಾರುವ ನಾನಲ್ಲ. ಹಾರುವೆನಯ್ಯ ಭಕ್ತರ ಬರವ ಗುಡಿಗಟ್ಟಿ. ಹಾರುವೆನಯ್ಯಾ ಶರಣರ ಬರವ ಗುಡಿಗಟ್ಟಿ ಕೂಡಲ ಸಂಗಮದೇವನು "ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ" (ಬಸವೇಶ್ವರನ ವಚನಗಳು ೪ನೇ ಆವೃತ್ತಿ ಪುಟ ೧೩೯.)

ಭಕ್ತನ ಮಹೇಶಸ್ಥಲದೊಳಗಿನ ೧೯ನೇ ವಚನವನ್ನು ಸಹ ವಾಚಕರು ನೋಡತಕ್ಕದ್ದು. ಅದು ಕೆಳಗೆ ಕಾಣಿಸಿದಂತೆ ಇದೆ.

"ಒಡೆಯರು ಬಂದರೆ ಗುಡಿ ತೋರಣವ ಕಟ್ಟಿ ನೆಂಟರು ಬಂದರೆ ಸಮಯವಿಲ್ಲೆಂಬೆ. "ಅಂದೇಕೆ ಬಾರರು ಸೀರಿಂಗೆ ನೇಣಿಂಗೆ ಹೊರಗಾದಂದು" ಸಮಯಾಚಾರಕ್ಕೆ ಒಳಗಾದಂದು? ಪುರುಷ ಮುಟ್ಟಲು ಕಬ್ಬುನ ಸುವರ್ಣವಾಯಿತ್ತು. ಬಳಿಕ ಬಂಧುಗಳುಂಟೇ ಕೂಡಲ ಸಂಗಮ ದೇವಾ?" (ಬಸವೇಶ್ವರನ ವಚನಗಳು ೪ನೇ ಆವೃತ್ತಿ ಪುಟ ೮೪.)

ಮೇಲಿನ ಎರಡು ವಚನಗಳಲ್ಲಿ ಯಜ್ಞೋಪವೀತ ಧಾರಣಕಾಲದಲ್ಲಿ ತನಗುಂಟಾದ ಸಂದರ್ಭಗಳನ್ನು ಕುರಿತು ಬಸವನು ಉಲ್ಲೇಖಿಸುತ್ತಾನೆಂದು ನಮಗೆ ತೋರುತ್ತದೆ. ವಾಚಕರು ನಾವು ಗೆರೆ ಎಳೆದ ವಚನಗಳ ಭಾಗಗಳನ್ನು ಚನ್ನಾಗಿ ಪರಿಶೀಲಿಸಬೇಕೆಂದು ನಮ್ಮ ಸೂಚನೆ ಇದೆ. ಅವುಗಳಲ್ಲಿ ಮೊದಲನೆಯ ವಚನವನ್ನು ಕುರಿತು ನಾವು ಇಲ್ಲಿ ಪ್ರಸ್ತಾಪಿಸುತ್ತೇವೆ.

ಈ ವಚನದಲ್ಲಿ ಬಸವೇಶ್ವರನು ಬ್ರಾಹ್ಮಣ ಧರ್ಮವನ್ನು ಕುರಿತು ತನ್ನ ಆಕ್ಷೇಪಗಳನ್ನು ಮೊದಲು ಹೇಳುತ್ತಾ ಇದ್ದಾನೆ. ಅದು ಕರ್ಮದ ಬಲೆಯಲ್ಲಿ ಸಿಲುಕಿಸುವಂತಹದೆಂದು ಹೇಳಿ ಅದು ತನಗೆ ಬೇಡವೆಂದು ಹೇಳುತ್ತಾನೆ. ಮುಂದೆ ಅವನು ಅನ್ನುವದೇನೆಂದರೆ, ಪರಮಾತ್ಮನು "ವಿಪ್ರಕರ್ಮವ ಬಿಡಿಸಿ ಅಶುದ್ಧನ ಶುದ್ಧನ ಮಾಡಿದನಾಗಿ" ಎಂದು ಹೇಳುತ್ತಾನೆ. ಈ ಶಬ್ದಗಳನ್ನು ವಾಚಕರು ಚನ್ನಾಗಿ ವಿಚಾರಮಾಡತಕ್ಕದ್ದು.

"ವಿಪ್ರಕರ್ಮವ ಬಿಡಿಸಿ" ಎಂಬ ಶಬ್ದಗಳಿಂದ ಬಸವಣ್ಣನಿಗೆ ವಿಪ್ರಕರ್ಮಗಳು ಉಂಟಾಗಿದ್ದವೆಂಬ ಭಾವವು ವ್ಯಕ್ತವಾಗುತ್ತದೆ. ಮೌಂಜೀ ಬಂಧನವಾದ ಬಳಿಕ ವಿಪ್ರಕರ್ಮಗಳು ಒದಗುತ್ತವೆಯೇ ಹೊರ್ತು ಅದಕ್ಕೂ ಮೊದಲು ಬ್ರಾಹ್ಮಣರಲ್ಲಿ ಉಂಟಾಗುವದಿಲ್ಲ. ಆದ್ದರಿಂದ ಬಸವೇಶ್ವರನಿಗೆ ಮೌಂಜೀ ಬಂಧನವು ಆಗಿತ್ತೆಂಬ ಭಾವವು ಇದರಲ್ಲಿ ಇದೆ.

ಈ ಶಬ್ದಗಳ ತರುವಾಯ "ಅಶುದ್ಧನ" ಎಂಬ ಶಬ್ದವಿರುತ್ತದೆ. ಮುಂಜಿಯಾದ್ದರಿಂದಲೇ ತಾನು ಅಶುದ್ಧನಾಗಿದ್ದೇನೆಂದು ಹೇಳುತ್ತಾನೆ. ಭೀಮಕವಿ ಮತ್ತು ಸಿಂಗಿರಾಜ ಇವರು ಹೇಳಿದಂತೆ ಬಸವೇಶ್ವರನು

ಜನಿಸಿದ ಕೂಡಲೆ ಲಿಂಗಧಾರಣವಾಗಿದ್ದರೆ, ಹೀಗೆ ತಾನು ಅಶುದ್ಧನೆಂದು ಬಸವನು ಎಂದೂ ಹೇಳಿಕೊಳ್ಳುತ್ತಿದ್ದಿಲ್ಲ. ಅವನಿಗೆ ಜನ್ನಿವಾರ ಧಾರಣ ವಾದ್ದರಿಂದಲೇ ಅವನು ತಾನು ಅಶುದ್ಧನೆಂದು ಇಲ್ಲಿ ಹೇಳಿಕೊಂಡಿದ್ದಾನೆ.

"ಅಶುದ್ಧನ" ಈ ಶಬ್ದದ ತರುವಾಯು "ಶುದ್ಧನ ಮಾಡಿದನಾಗಿ" ಎಂಬ ಶಬ್ದಗಳು ಬಂದಿರುತ್ತವೆ. ಇವು ಅವನಿಗೆ ಲಿಂಗಧಾರಣ ವಿಧಿಯಾಯಿತೆಂಬುದನ್ನು ಸೂಚಿಸುತ್ತವೆ.

ಈ ಎಲ್ಲ ಶಬ್ದಗಳನ್ನು ನಾವು ಒಟ್ಟಾರೆ ಅರ್ಥ ಮಾಡಿದಲ್ಲಿ ಬಸವೇಶ್ವರನಿಗೆ ಯಜ್ಞೋಪವೀತ ಧಾರಣವಾಗಿತ್ತು. ಅದರಿಂದ ಅವನು ತಾನು ಅಶುದ್ಧವ ದನೆಂದು ಭಾವಿಸಿದ್ದರಿಂದ ಲಿಂಗಧಾರಣ ಕೊಂಡಿ ಶುದ್ಧನೆಂದು ಅವನು ತನ್ನನ್ನು ಕುರಿತು ಇಲ್ಲಿ ಹೇಳಿಕೊಳ್ಳುತ್ತಾನೆ

೨ನೆಯ ವಚನವಾದರೂ ಇದೇ ಭಾವವನ್ನು ಸೂಚಿಸುತ್ತದೆ. ಇಲ್ಲಿ ಅವನು ತನ್ನ ಬಂಧುಬಳಗವನ್ನು ಕುರಿತು ಹೇಳುತ್ತಾನೆ. ಬಸವನು ಯಜ್ಞೋಪವೀತವನ್ನು ತ್ಯಜಿಸಿ ಲಿಂಗಧಾರಣ ಮಾಡುವ ಕಾಲದಲ್ಲಿ ಅವರು ಅವನನ್ನು ಬಹಿಷ್ಕರಿಸಿದ ಹಾಗೆ ಈ ವಚನದಿಂದ ತೋರುತ್ತದೆ. ಅವನು ಅದರಲ್ಲಿ– "ಅಂದೇಕೆ ಬಾರರು, ನೀರಿಂಗೆ ನೇಣಿಂಗೆ ಹೊರಗಾದಂದು, ಸಮಯಾಚಾರಕ್ಕೆ ಒಳಗಾದಂದು ? ಎಂದು ಆವೇಶದಿಂದ ಇಲ್ಲಿ ನುಡಿಯುತ್ತಾನೆ. ಇದರಲ್ಲಿ "ನೀರಿಂಗೆ ನೇಣಿಂಗೆ ಹೊರಗಾದಂದು" ಈ ಶಬ್ದಗಳು ಬಹಳ ಮಹತ್ವವಾದವುಗಳು. ಇದರಿಂದ ಬಸವೇಶ್ವರನು ಯಜ್ಞೋಪವೀತ ಧಾರಣನಾಗಿದ್ದು ಅವನು ಅದನ್ನು ಹಿಂದುಗಡೆ ತ್ಯಜಿಸಿ ಬಿಟ್ಟದ್ದರಿಂದಲೇ ಅವನು ಅದರಿಂದ ದೂರಾದೆನೆಂದು ಇಲ್ಲಿ ಹೇಳುತ್ತಾನೆ. ಹೀಗೆ ದೂರಾಗಿ ತಾನು "ಸಮಯಾಚಾರಕ್ಕೆ" ಅಂದರೆ ವೀರಶೈವ ಧರ್ಮಕ್ಕೆ ಒಳಗಾದೆನೆಂದು ಹೇಳುತ್ತಾನೆ. ಇದರಿಂದ ಅವನಿಗೆ ಜನ್ನಿವಾರವಿತ್ತು ಹೀಗೆ ತೋರುತ್ತದೆ. ಒಂದು ವೇಳೆ ಹುಟ್ಟಿದಾಗಳೇ ಲಿಂಗಧಾರಣವಾಗಿತ್ತೆಂದು ಭಾವಿಸಿದರೆ "ನೇಣಿಂಗೆ ದೂರಾದಂದು" ಈ ಶಬ್ದಗಳು ಬರುತ್ತಿದ್ದಿಲ್ಲ. ಅವನು ಇತರ ಬ್ರಾಹ್ಮಣ ಬಾಲಕರಂತೆಯೇ ಜನನ ಸಂಸ್ಕರವನ್ನು ಹೊಂದಿ ಮುಂದೆ ಯಜ್ಞೋಪವೀತವನ್ನು ಧಾರಣ ಮಾಡಿರಬೇಕು. ಆದ್ದರಿಂದಲೇ ಈ ಯಜ್ಞೋಪವೀತಕ್ಕೆ

ತಾನು ಹೊರಗಾಗಿ ಸಮಾಯಾಚಾರಕ್ಕೆ ಒಳಗಾದೆನೆಂದು ಅಲ್ಲಿ ಹೇಳುತ್ತಾನೆ.

ವಾಚಕರು ಈ ಎರಡೂ ವಚನಗಳನ್ನು ಕೂಡಿಯೇ ಓದಿ ಅರ್ಥ ಮಾಡಬೇಕು. ಬಹಳ ಲಕ್ಷ್ಯಪೂರ್ವಕವಾಗಿ ತಾವೇ ಓದಿ ವಿಚಾರ ಮಾಡಬೇಕೆಂದು ನನ್ನ ಸೂಚನೆ ಇದೆ. ಮೊದಲನೇ ವಚನದಲ್ಲಿ ಕಂಡು ಬಂದ ಸಂಶಯಗಳು ಎರಡನೆಯ ವಚನದಲ್ಲಿ ದೂರಾಗುವವು. ಮತ್ತು ಎರಡನೆಯ ವಚನದಲ್ಲಿ ತೋರುವ ಕೆಲವು ಅಸ್ಪಷ್ಟ ವಿಷಯಗಳು ಮೊದಲನೆಯ ವಚನದಿಂದ ದೂರಾಗುವವು. ಅವುಗಳನ್ನು ಕೂಡಿ ಓದಿದಲ್ಲಿ ಬಸವೇಶ್ವರನಿಗೆ ಅವನು ಹುಟ್ಟಿದ ಕೂಡಲೆ ಲಿಂಗಧಾರಣವಾಗಿದ್ದಿಲ್ಲ, ಆದರೆ ಅವನಿಗೆ ಮುಂದೆ ಉಪನಯನ ಸಂಸ್ಕಾರವು ಉಂಟಾಯಿತು, ಇದರಿಂದ ಅವನು ವಿಪ್ರಕರ್ಮಕ್ಕೆ ಒಳಗಾದನು, ಈ ವಿಪ್ರಕರ್ಮಗಳು ಅಶುದ್ಧವಾದವುಗಳೆಂದು ಅವನಿಗೆ ತೋರಿತು, ಆಗ ಅವನು ಲಿಂಗಧಾರಿಯಾಗಿ ಶುದ್ಧನಾದನು, ಆ ಸಮಯದಲ್ಲಿ ಅವನ ನೆಂಟರಿಷ್ಟರು ಅವನನ್ನು ದೂರೀಕರಿಸಿದರು, ಮತ್ತು ಬಹಿಷ್ಕರಿಸಿದರು. ಈ ಎಲ್ಲ ವಿಷಯಗಳು ಈ ಎರಡು ವಚನಗಳ ಮೂಲಕ ಸಿದ್ಧವಾಗುತ್ತವೆಂದು ವಾಚಕರಿಗೆ ತೋರದೆ ಇರದು.

ಹೀಗಿದ್ದಲ್ಲಿ ಇಂಥ ಮಹತ್ವದ ವಿಷಯವಾಗಿ ವೀರಶೈವ ಪ್ರಸಿದ್ಧ ಗ್ರಂಥಕಾರರಲ್ಲಿ ವಿರುದ್ಧಾಭಿಪ್ರಾಯಗಳು ಹೇಗೆ ನೆಲೆಗೊಂಡವೆಂದು ಅನೇಕರು ಪ್ರಶ್ನೆ ಮಾಡಬಹುದು. ಆದರೆ ಪ್ರಸಿದ್ಧ ಪುರುಷರ ಚರಿತ್ರೆಗಳಲ್ಲಿ ಈ ವಿಧಗಳು ಯಾವಾಗಲೂ ಕಂಡುಬರುವದುಂಟು. ಅವರಿಗೆ ಅಂಥ ಮಿತ್ರರೂ ಕಡುವೈರಿಗಳೂ ಅವರ ಜೀವಿತದ ಕಾಲದಲ್ಲಿ ಯಾವಾಗಲೂ ಉದ್ಭವಿಸುತ್ತಾರೆ ಅಂಥ ಮಿತ್ರರು ಅವರಿಗೋಸ್ಕರ ಶ್ರದ್ಧಾಳುಗಳಾಗಿ ಅವರ ಬಗ್ಗೆ ಅನೇಕ ತರದ ಕಥೆಗಳನ್ನು ರೂಢಗೊಳಿಸುತ್ತಾರೆ. ಅವರ ಜೀವಿತದ ಕಾಲದಲ್ಲಿ ಅನೇಕ ಘಟನೆಗಳಾಗಿರುತ್ತವೆ. ಅವುಗಳನ್ನು ವಾಸ್ತವವಾಗಿ ವಿವರಿಸಿದಲ್ಲಿ ಅವು ನಿಜವಾಗಿ ಬೋಧಪ್ರದವಾಗುತ್ತವೆ. ಆದರೆ ಅವರ ಅಂಧಭಕ್ತಿಯ ಅನುಯಾಯಿಗಳು ಅವುಗಳಿಗೆ ಅಲೌಕಿಕ ಸ್ವರೂಪವನ್ನು ಕೊಡುವದುಂಟು. ಮುಂದೆ ಅವುಗಳನ್ನು ಅವಲಂಬಿಸಿ ತರತರದ ದಂತಕಥೆಗಳೂ ಉದ್ಭವಿಸುತ್ತವೆ. ಇದರಿಂದ ಧಾರ್ಮಿಕ ಮಹಾಪುರುಷರ ಚರಿತ್ರೆಗಳು ಮಸುಳಿಸಿ ಹೋಗಿರುತ್ತವೆ. ಹಾಗೆಯೇ ಅವರಿಗೆ ಅನೇಕ

ವೈರಿಗಳೂ ಉದ್ಭವಿಸಿರುತ್ತಾರೆ. ಅವರು ಅವರನ್ನು ಹಿಂಸಿಸಲು ಯಾವಾಗಲೂ ಉದ್ಯುಕ್ತರಾಗಿರುತ್ತಾರೆ. ಅವರು ಇಂಥ ಮಹಾನುಭಾವರ ಜೀವಿತದಲ್ಲಿ ಅನೇಕ ಹಿಂಸೆಗಳನ್ನು ಮಾಡಿದ್ದುಂಟು. ಇಷ್ಟೇ ಅಲ್ಲ, ಇಂಥವರ ವಿಷಯವಾಗಿ ಅತ್ಯಂತ ಹೇಯವಾದ ಆರೋಪಗಳನ್ನು ಸಹ ಆರೋಪಿಸುವದುಂಟು. ಯಾವ ಮಹಾಪುರುಷರು ಸಮಾಜ ಸಂಸ್ಕರಣದಲ್ಲಿ ಪ್ರವೃತ್ತರಾಗಿ ಸಮಾಜದಲ್ಲಿ ಮಾರ್ಪಾಟುಗಳನ್ನು ಮಾಡಿರುತ್ತಾರೋ ಅವರ ವಿಷಯವಾಗಿ ಹೀಗೆ ವಿರುದ್ಧಾಭಿಪ್ರಾಯಗಳು ತಲೆದೋರುವದುಂಟು. ಆದ್ದರಿಂದ ಮಹಾಪುರುಷರ ಚರಿತ್ರೆಗಳನ್ನು ಐತಿಹಾಸಿಕ ದೃಷ್ಟಿಯಿಂದ ಪರಿಶೋಧಿಸಿ ನಿಜವಾದುದನ್ನು ಹೊರಗೆಡಹುವ ಕಾರ್ಯವು ಯಾವಾಗಲೂ ದುಸ್ತರವಾಗಿರುತ್ತದೆ. ಬಸವನ ಚರಿತ್ರೆಯ ವಿಷಯದಲ್ಲಿಯೂ ಇದೇ ಸ್ಥಿತಿಯುಂಟಾಗಿರುತ್ತದೆ. ಅಂಧ ಶ್ರದ್ಧೆಯುಳ್ಳ ಅವನ ಸಮಕಾಲೀನರಾದ ಅನುಯಾಯಿಗಳು ಅವನನ್ನು ಪೌವಾಡ ಪುರುಷನೆಂದು ಭಾವಿಸಿದ್ದರಿಂದ ಅನೇಕ ದಂತಕಥೆಗಳುಂಟಾದವು. ಹಾಗೆಯೇ ಅವನ ವೈರಿಗಳು ಅವನ ವರ್ತನೆಯ ವಿಷಯವಾಗಿ ಅನೇಕ ಸುಳ್ಳು ಆರೋಪಗಳನ್ನು ಹೊರಿಸಿ ಅವನ ಚರಿತ್ರೆಯನ್ನು ಕೆಡಿಸಲು ಪ್ರಯತ್ನಿಸಿದ್ದಾರೆ. ಮಹಾಪುರುಷರು ತಮ್ಮ ಪೂರ್ವ ವಯಸ್ಸಿನಲ್ಲಿ ತಪ್ಪು ಮಾರ್ಗಗಳನ್ನು ಅನುಸರಿಸಿರಬಹುದು. ಆದರೆ ಅವರ ಜೀವಿತಕಾಲದಲ್ಲಿ ಒದಗಿದ ಕೆಲವೊಂದು ಘಟನೆಯ ಮೂಲಕ ಅವರು ತಮ್ಮ ಮೊದಲಿನ ಮಾರ್ಗಗಳನ್ನು ತೊರೆದು ಶುದ್ಧವಾದ ಮಾರ್ಗವನ್ನು ಮುಂದೆ ಕೈಕೊಂಡು ಸಮಾಜ ಸುಧಾರಣೆಯ ಮಹತ್ವದ ಕಾರ್ಯಗಳನ್ನು ಮಾಡಿದ್ದುಂಟು. ಆರಂಭದಲ್ಲಿಯ ಅವರ ಇಂಥ ವರ್ತನೆಗಳು ಅವರ ಮಹತ್ವಕ್ಕೆ ಎಷ್ಟುಮಾತ್ರವೂ ಕುಂದು ತರಲಾರವು. ಇಷ್ಟೇ ಅಲ್ಲ, ದುರ್ಮಾರ್ಗದಲ್ಲಿ ಪ್ರವೃತ್ತರಾದವರಿಗೆ ಅಂಥವರ ಚರಿತ್ರೆಗಳು ಬೋಧಪ್ರದವಾಗುತ್ತವೆ. ಬಸವೇಶ್ವರನು ಆರಂಭದಲ್ಲಿ ಲಿಂಗಧಾರಿಯಾಗಿರಲಿಕ್ಕಿಲ್ಲ. ಅವನಿಗೆ ಬ್ರಾಹ್ಮಣ ಕರ್ಮದಂತೆ ಮುಂಜಿಯೂ ಆಗಿರಬಹುದು. ಆದರೆ ಆಗ ಅವನು ಚಿಕ್ಕವನು. ಕೇವಲ ಎಂಟು ವರ್ಷದ ಬಾಲಕನು. ಮುಂದೆ ಅವನಿಗೆ ಬ್ರಾಹ್ಮಣ ಕರ್ಮಗಳು ಒಪ್ಪದೆ ಹೋಗಲು ವೀರಶೈವ ಮಾರ್ಗದಲ್ಲಿ ಪ್ರವೃತ್ತನಾಗಿ ಸಮಾಜ ಸಂಸ್ಕರಣ ಕಾರ್ಯದಲ್ಲಿ ತೊಡಗಿದನು. ಬಾಲ್ಯ ಕಾಲದಲ್ಲಿ ಅವನಿಗುಂಟಾದ ಈ ಪರಿಸ್ಥಿತಿಯನ್ನು ನಾವು ಒಪ್ಪಿದರೂ ಕೂಡ ಇದರಿಂದ

ಅವನ ಚಾರಿತ್ರ್ಯಕ್ಕೆ ಯಾವ ತೆರದಿಂದಲೂ ಭಂಗ ಉಂಟಾಗಲಾರದು. ಆದರೆ ಅವನ ಕಾಲದಲ್ಲಿ ಅಥವಾ ಅವನ ತರುವಾಯ ಬಂದ ಅಂಧ ಶ್ರದ್ಧೆಯುಳ್ಳ ಅವನ ಅನುಯಾಯಿಗಳು ಹೀಗೆ ಭಾವಿಸಿದಂತೆ ತೋರುವದಿಲ್ಲ. ಅವನು ಪ್ರಸಿದ್ಧನಾದಾಗ್ಗೆ ಯಾವ ವರ್ತನೆಯುಳ್ಳವನಾಗಿದ್ದನೋ ಅದೇ ವರ್ತನೆಯು ಜನ್ಮದಾರಭ್ಯವೂ ಇದ್ದಿತೆಂದು ಹೇಳುವಲ್ಲಿ ಅವನ ಮಹತ್ವವು ಹೆಚ್ಚುವದೆಂದು ಅವರು ಭಾವಿಸಿದ ಹಾಗೆ ನಮಗೆ ತೋರುತ್ತದೆ. ಆದ್ದರಿಂದ ಅವರು ಅವನು ಹುಟ್ಟಿದ ಕೂಡಲೇ ಪರಮಾತ್ಮನು ಜಂಗಮರೂಪದಿಂದ ಅವನಿದ್ದೆಡೆಗೆ ಬಂದು ಲಿಂಗಧಾರಣ ಮಾಡಿದನೆಂಬ ಕಲ್ಪಿತ ಕಥೆಯನ್ನು ಹುಟ್ಟಿಸಿದ್ದಾರೆ. ಅವನಿಗೆ ಯಜ್ಞೋಪವೀತ ಧಾರಣವಾಯಿತೆಂದು ಹೇಳಿದಲ್ಲಿ ಅವನ ಚರಿತ್ರೆಗೆ ಕುಂದುಂಟಾಗುವದೆಂದು ಅವರು ಭಾವಿಸಿದರು. ಆದ್ದರಿಂದ ಅವನಿಗೆ ಯಜ್ಞೋಪವೀತ ಧಾರಣವೇ ಆಗಲಿಲ್ಲೆಂತಲೂ, ಮುಂಜಿಯ ಕಾಲದಲ್ಲಿ ಅವನು ಅದನ್ನು ತಿರಸ್ಕರಿಸಿ ತಂದೆಯ ಮನೆಯನ್ನು ತ್ಯಜಿಸಿ ಬಿಟ್ಟನೆಂತಲೂ ಬೇರೊಂದು ಕಥೆಯನ್ನು ಹುಟ್ಟಿಸಿದಹಾಗೆ ನಮಗೆ ತೋರುತ್ತದೆ ಆದರೆ ಬಸವನ ವಚನಗಳಲ್ಲಿ ಈ ವಿಧಾನವು ಸಮರ್ಥಿಸಲ್ಪಡುವದಿಲ್ಲ. ತನಗೆ ಮುಂಜಿಯಾಗಿತ್ತೆಂದು ಅವನು ತನ್ನ ವಚನಗಳಲ್ಲಿಯೇ ಹೇಳಿಕೊಂಡಿದ್ದಾನೆ. ತಾನು ವಿಪ್ರಕರ್ಮಕ್ಕೆ ಒಳಪಟ್ಟು ಅಶುದ್ಧನಾಗಿದ್ದೆನೆಂದು ಹೇಳಿಕೊಂಡಿದ್ದಾನೆ. ಹೀಗೆ ಅಶುದ್ಧನಾದವನನ್ನು ಪರಮಾತ್ಮನು ಶುದ್ಧನಾಗಿ ಮಾಡಿದನೆಂದು ಹೇಳುತ್ತಾನೆ. ನೇಣಿಂಗೆ ಅಂದರೆ ಯಜ್ಞೋಪವೀತಕ್ಕೆ ಹೊರಗಾದನೆಂದು ಹೇಳುತ್ತಾನೆ. ಹೊರಗಾದೆನೆಂದು ಅವನು ಹೇಳಬೇಕಾದರೆ, ಅದಕ್ಕೆ ಅವನು ಒಳಗಾಗಿರಲೇಬೇಕು. ಈ ಭಾವವು ಅವನ ವಚನಗಳಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಹೀಗೆ ಅವನು ಯಜ್ಞೋಪವೀತವನ್ನು ತ್ಯಜಿಸುವ ಕಾಲಕ್ಕೆ ಅವನ ಬಂಧುಬಾಂಧವರೂ ನೆಂಟರಿಷ್ಟರೂ ಅವನಿಗೆ ಬಹು ಬಾಧೆಯನ್ನು ಉಂಟುಮಾಡಿರಬಹುದು. ಆದ್ದರಿಂದ ಅವನು ತನ್ನ ವಚನದಲ್ಲಿ "ನೆಂಟರು ಬಂದರೆ ಸಮಯವಿಲ್ಲೆಂಬೆ. ಅಂದೇಕೆ ಬಾರರು ನೇಣಿಂಗೆ ಹೊರಗಾದಂದು ಸಮಯಾಚಾರಕ್ಕೆ ಒಳಗಾದಂದು?" ಎಂದು ಹೇಳುತ್ತಾನೆ. ಇಲ್ಲಿ ಅವನು ನನಗೆ ಬಂಧುಗಳಿಲ್ಲವೆಂದು ನುಡಿಯುತ್ತಾನೆ. ಅವನ ಮನಸ್ಸು ಆಗ ಅತ್ಯಂತವಾಗಿ ನೊಂದಿದ್ದರ ಮೂಲಕವೇ ಈ ನುಡಿಗಳು ಅವನ ಹೃದಯದಿಂದ ಹೊರಟಿರಲಿಕ್ಕೆಬೇಕು. ಈ ಎರಡು ವಚನಗಳು ಅತ್ಯಂತ ಸ್ವಾಭಾವಿಕ ರೀತಿಯಿಂದ ಅವನ ಮುಖದಿಂದ

ಕೊಂಟ ಹಾಗೆ ಅವುಗಳ ರಚನೆ ಇದೆ. ಈ ಸಂಗತಿಯು ವಾಚಕರ ನಿದರ್ಶನಕ್ಕೆ ಬರದೆ ಇರಲಾರದು. ಈ ಬಗ್ಗೆ ಅವನ ವಿಷಯವಾಗಿ ನಮಗೆ ದೊರೆತ ವಚನಗಳು ಎರಡು ಮಾತ್ರ. ಅವುಗಳನ್ನು ವಾಚಕರು ಲಕ್ಷಿಸಿ ಚನ್ನಾಗಿ ಅರ್ಥ ಮಾಡಬೇಕು. ವಚನಕಾರರ ವಚನಗಳು ಯಾವಾಗಲೂ ಸರಳಾರ್ಥವುಳ್ಳವುಗಳು. ಯಾವತರದ ಸಂಶಯವು ಉಂಟಾಗದಂತೆ ಅವರು ತಮ್ಮ ಭಾವವನ್ನು ಬಹು ಸ್ಫುಟವಾಗಿ, ಬಹು ಸ್ಪಷ್ಟ ಶಬ್ದಗಳಿಂದ ವಚನಗಳಲ್ಲಿ ವಿವರಿಸುವದುಂಟು. ಬಸವನ ವಚನಗಳಾದರೂ ಯಾವಾಗಲೂ ಈ ತರದವೇ ಇರುತ್ತವೆ.

ಬಸವನಿಗೆ ಮುಂಜಿಯಾಗಿತ್ತೆಂದು ನಾವು ನಂಬಿದಲ್ಲಿ ಭೀಮಕವಿಯು ತನ್ನ ಬಸವ ಪುರಾಣದಲ್ಲಿ ವರ್ಣಿಸಿದ್ದು ಸತ್ಯವೆಂದು ನಾವು ತಿಳಿಯಲಿಕ್ಕೆ ಬರಲಾರದು. ಹಾಗೆಯೇ ಸಿಂಗಿರಾಜನು ತನ್ನ ಪುರಾಣದಲ್ಲಿ ಈ ವಿಷಯವಾಗಿ ಬರೆದ ವೃತ್ತಾಂತಗಳನ್ನೂ ಕೂಡ ನಾವು ನಂಬಲಿಕ್ಕೆ ಬರಲಾರದು. ಅವರು ಬಸವನ ತರುವಾಯ ೨೦೦—೩೦೦ ವರ್ಷಗಳ ಮೇಲೆ ಜೀವಿಸಿದ್ದರಿಂದ ಅವರ ಕಾಲದಲ್ಲಿ ಸ್ವಾಭಾವಿಕವಾಗಿ ಅನೇಕ ದಂತ ಕಥೆಗಳು ಉದ್ಭವಿಸಿದ್ದವು. ಆದರೆ ಹರಿಹರನ ಕಾಲವು ಬಸವನಿಗೆ ಎಲ್ಲರಗಿಂತಲೂ ಹೆಚ್ಚಿಗೆ ಸಮೀಪವರ್ತಿಯಾಗಿರುತ್ತದೆ. ಆದ್ದರಿಂದ ಅವನು ಹೇಳುವ ಸಂಗತಿಗಳಲ್ಲಿ ಹೆಚ್ಚಿಗೆ ತಥ್ಯಾಂಶವಿರಬೇಕೆಂದು ನಾವು ನಂಬಬೇಕಾಗುತ್ತದೆ. ಅವನ ಕಾಲದಲ್ಲಿಯೂ ಕೂಡ ಅನೇಕ ದಂತಕಥೆಗಳು ಉದಯವಾಗಿದ್ದವೆಂಬುದು ನಿಜವು. ಆದರೆ ಅವು ಅವನ ತರುವಾಯ ರೂಢವಾದ ದಂತಕಥೆಗಳಷ್ಟು ಭಾವನಾಮಯವಾದವುಗಳು ಅಥವಾ ಅಲೌಕಿಕ ಸಂಗತಿಗಳಿಂದ ಕೂಡಿದವುಗಳು ಇರುವದಿಲ್ಲ. ಅವು ಹೆಚ್ಚಿಗೆ ಸಹಜವಾಗಿಯೂ ಸ್ವಾಭಾವಿಕವಾಗಿಯೂ ಇರುವದಾಗಿ ತೋರಿಬರುತ್ತವೆ. ಪಾಲ್ಕುರಿಕೆ ಸೋಮಾರಾಧ್ಯನು ಸಹ ಹರಿಹರ ರಾಘವಾಂಕರಕಿಂತಲೂ ಈಚಿನವನು. ಮತ್ತು ಅವನು ವಿಶೇಷವಾಗಿ ಕರ್ನಾಟಕದಲ್ಲಿರದೆ ಆಂಧ್ರದೇಶದಲ್ಲಿಯೇ ವಾಸವಾಗಿದ್ದನು. ಆದ್ದರಿಂದ ಅವನ ವಿವರಣೆಗಳಿಗಿಂತಲೂ ಹರಿಹರನ ವಿವರಣೆಗಳಿಗೆ ನಾವು ಹೆಚ್ಚಿಗೆ ಮಹತ್ವ ಕೊಡಬೇಕಾಗುತ್ತದೆ.

ಬಸವನಿಗೆ ಮೌಂಜೀ ಬಂಧನವಾಗಿತ್ತೆಂದು ನಾವು ಅಂಗೀಕರಿಸಿದ ಬಳಿಕ ಅವನು ಅದನ್ನು ಎಂದು ತಿರಸ್ಕರಿಸಿದನು ಎಂಬ ಪ್ರಶ್ನೆಯು

ಉಪ್ಪನಿಸುತ್ತದೆ. ಹರಿಹರನು ಬಸವನು ೧೬ನೆಯ ವರ್ಷದವನಾದ ಬಳಿಕ ಈ ಘಟನೆಯು ಒದಗಿತೆಂದು ಹೇಳುತ್ತಾನೆ. ಇದು ಹೆಚ್ಚಿಗೆ ನಂಬಲರ್ಹವಾದುದು. ಈ ಅವಧಿಯಲ್ಲಿ ಬಸವನು ಧಾರ್ಮಿಕ ಗ್ರಂಥಗಳ ಪರಿಚಯುವನ್ನು ವಿಶೇಷವಾಗಿ ಮಾಡಿಕೊಳ್ಳಲು ಶಕ್ಯವಿರುತ್ತದೆ. ಈ ವಯಸ್ಸು ಬುದ್ಧಿವಿಕಾಸದ ಕಾಲವಾಗಿರುತ್ತದೆ ಭೀಮಕವಿ, ಸಿಂಗಿರಾಜ ಮೊದಲಾದವರು ಬಸವನ ೮ನೆಯ ವರ್ಷದಲ್ಲಿ ಅವನಿಗೆ ಈ ಕ್ರಾಂತಿಯೊದಗಿತೆಂದು ಹೇಳುತ್ತಾರೆ. ಆದರೆ ಇಂಥ ಚಿಕ್ಕವಯಸ್ಸಿನಕಿಂತಲೂ ೧೬ನೆಯ ವರ್ಷದ ವಯಸ್ಸಿನಲ್ಲಿ ಈ ಸ್ಥಿತಿಯುಂಟಾಗುವದು ಹೆಚ್ಚಿಗೆ ಸಂಭವನೀಯುವಿರುತ್ತದೆ. ೧೬ನೆಯ ವರ್ಷದ ವಯಸ್ಸಿನಲ್ಲಿ ಬಸವನು ತನ್ನ ಗೃಹವನ್ನು ತೊರೆದು ಸಂಗಮೇಶ್ವರನಲ್ಲಿಗೆ ಹೋಗಿ ವಾಸವಾದನೆಂದು ನಾವು ತಿಳಿದಲ್ಲಿ ಅದು ಅವನ ಮುಂದಿನ ಆಯುಷ್ಯದಲ್ಲಿ ಘಟಿಸಿದ ಘಟನೆಗಳಿಗ ಹೆಚ್ಚಿಗೆ ಸರಿಗೂಡುತ್ತದೆ. ಇದು ಹೇಗೆಂಬುದನ್ನು ನಾವು ಮುಂದೆ ಪ್ರಸ್ತಾಪಿಸುತ್ತ ಹೋಗುವೆವು. ಆದ್ದರಿಂದ ಬಸವನು ಹರಿಹರನು ಹೇಳುವಂತೆ ತನ್ನ ೧೬ನೆಯ ವರ್ಷದ ವಯಸ್ಸಿನಲ್ಲಿ ಯಜ್ಞೋಪವೀತವನ್ನು ತ್ಯಜಿಸಿದನೆಂದು ನಾವು ನಂಬಿದಲ್ಲಿ ಅದರಲ್ಲಿ ಹೆಚ್ಚಿಗೆ ತಥ್ಯಾಂಶವಿದೆಂದು ನಮಗ ತೋರುತ್ತದೆ.

ಹರಿಹರನು ತನ್ನ ಬಸವರಾಜದೇವರ ರಗಳೆಯಲ್ಲಿ ಬಸವನು ಚಿಕ್ಕವನಿರುವಾಗಳೇ ಅವನ ತಂದೆತಾಯಿಗಳು ತೀರಿಕೊಂಡರೆಂತಲೂ ಆಗ ಅವನನ್ನು ಅವನ ಮುತ್ತಜ್ಜಿಯು ಜೋಕೆ ಮಾಡಿದಳೆಂತಲೂ ಹೇಳುತಾನೆ. ಬಸವನ ತಂದೆ ತಾಯಿಗಳು ಬಸವನ ಜೀವಿತಕ್ಕೆ ಬಹಳ ಸಂಬಂಧಪಡುವದಿಲ್ಲ. ಆದ್ದರಿಂದ ಈ ವಿಷಯದ ಸತ್ಯತೆಯನ್ನು ನಾವು ದೃಢಪಡಿಸಲು ಶ್ರಮವಹಿಸುವದು ಅನಾವಶ್ಯಕವಾಗಿದೆ. ಆದರೆ ಬಸವನು ಚಿಕ್ಕವನಿದ್ದಾಗ ತೀರಿಕೊಂಡಿದ್ದರೆ ಅವನು ಆಗ ಏಕಾಕಿಯಾಗಿರಲಿಲ್ಲ. ಅವನಿಗೆ ಒಬ್ಬ ಅಕ್ಕನು ಅಂದರೆ ನಾಗಲಾಂಬಿಕೆಯು ಮತ್ತು ಒಬ್ಬ ಅಣ್ಣನು ಅಂದರೆ ದೇವರಾಜನು ಹೀಗೆ ಇಬ್ಬರು ಇದ್ದುದನ್ನು ನಾವು ಲಕ್ಷಿಸಬೇಕು ಮುತ್ತಜ್ಜಿಯು ಮೇಲೆ ಬಸವನನ್ನು ಸಂರಕ್ಷಿಸುವ ಭಾರವು ಬಿದ್ದರೆ ಹಾಗೆಯೇ ಅವಳ ಮೇಲೆ ಅವನ ಹಿರಿಯರಾದ ನಾಗಲಾಂಬೆ ಮತ್ತು ದೇವರಾಜ ಇವರೂ ಸಹ ಸಣ್ಣವರಿದ್ದ ಮೂಲಕ ಅವರನ್ನೂ ಸಹ ಸಂರಕ್ಷಿಸುವ ಭಾರವು ಬಿದ್ದಿರಬೇಕು.

ಬಸವನು ಯಜ್ಞೋಪವೀತವನ್ನು ನಿರಾಕರಿಸಿದ ಕಾಲದಲ್ಲಿ ಅವನನ್ನು ಪಟ್ಟಣದಲ್ಲಿಯ ಬ್ರಾಹ್ಮಣ ಸಮಾಜದವರೂ ಅವನ ಬಂಧುಗಳೂ ಅತ್ಯಂತವಾಗಿ ಪೀಡೆಗೆ ಒಳಗುಮಾಡಿರಬೇಕೆಂದು ತೋರುತ್ತಿದೆ. ಯಾಕೆಂದರೆ ಬಸವನು ತನ್ನ ವಚನಗಳಲ್ಲಿ ತನ್ನ ಬಂಧುಗಳನ್ನು ಕುರಿತು ಅತ್ಯಂತವಾಗಿ ತನ್ನ ದ್ವೇಷ ಬುದ್ಧಿಯನ್ನು ತೋರಿಸುತ್ತಿದ್ದಾನೆ. ಅವರು ಬಸವನ್ನು ಹೆಚ್ಚಾಗಿ ಪೀಡಿಸಿದ ಕಾರಣದಿಂದಲೇ ಅವರನ್ನು ಕುರಿತು ಅವನು ತನ್ನ ವಚನಗಳಲ್ಲಿ ಬಹು ಕಟುವಾದ ಶಬ್ದಗಳನ್ನು ಉಪಯೋಗಿಸಿದಂತೆ ನಮಗೆ ತೋರುತ್ತದೆ. ಬಸವನು ಯಾವಾಗಲೂ ಬಹು ಕೋಮಲ ಹೃದಯುದವನು. ಆದರೆ ಅವನು ತನ್ನ ನೆಂಟರಿಷ್ಟರ ಮತ್ತು ಜಾತಿಬಾಂಧವರ ವಿಷಯವು ಬಂದ ಕೂಡಲೆ ಬಹು ಉಗ್ರವಾದ ನುಡಿಗಳನ್ನು ನುಡಿಯುವದುಂಟು. ಮನುಷ್ಯನು ಅನುಭವಿಸಿದ ಕಷ್ಟಗಳು ಅವನನ್ನು ಸ್ವಭಾವಿಕವಾಗಿ ಕೆರಳಿಸುತ್ತವೆ. ಆಗ ಅವನು ಬಿರುನುಡಿಗಳನ್ನಾಡುತ್ತಾನೆ. ಬಸವನು ತನ್ನ ಚಿಕ್ಕ ವಯಸ್ಸಿನಲ್ಲಿ ಅತ್ಯಂತವಾಗಿ ಬಾಧಿಸಲ್ಪಟ್ಟವನಾದ್ದರಿಂದ ಅವನು ಹೀಗೆ ಅವರ ವಿಷಯವಾಗಿ ಕಠೋರ ಶಬ್ದಗಳನ್ನು ಆಡುತ್ತಿರಬಹುದೆಂದು ನಮಗೆ ತೋರುತ್ತಿದೆ. ಅವುಗಳಲ್ಲಿ ಕೆಲವು ವಚನಗಳನ್ನು ಮಾತ್ರ ನಾವು ಇಲ್ಲಿಉದಹರಿಸುತ್ತೇವೆ.

"ಅಣ್ಣ ತಮ್ಮ ಹೆತ್ತಪ್ಪ ಗೋತ್ರವಾದಡೇನು? ಲಿಂಗಸಾಹಿತ್ಯವಿಲ್ಲದವರ ಎನ್ನವರೆನ್ನೆನಯ್ಯ ನಂಟು ಭಕ್ತಿ ನಾಯಕನರಕ ಕೂಡಲಸಂಗಮದೇವ."

ಲಿಂಗಾಂಗಿಗಳಲ್ಲದ ಆಪ್ತೇಷ್ಟರ ಮೇಲೆ ಪ್ರೇಮ ಮಾಡುವದು ನಾಯಕನರಕವೆಂದು ಬಸವನು ಮೇಲಿನ ವಚನದಲ್ಲಿ ಹೇಳುತ್ತಾನೆ.

"ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ. ಅಂಜಲೇಕೋ ಲೋಗವಿಗರ್ಭಣೆಗೆ? ಅಂಜಲೇಕೋ ಕೂಡಲ ಸಂಗಮದೇವ ನಿಮ್ಮಾಳಾಗಿ?"

ಪಟ್ಟಣಿಗರು ಬಸವನ ವಿಷಯವಾಗಿ ವಿಶೇಷವಾದ ಕೋಲಾಹಲವನ್ನೆಬ್ಬಿಸಿ, ಅವನನ್ನು ಹಿಂಸಿಸಲು ಉದ್ಯುಕ್ತರಾದ್ದರಿಂದಲೇ ಬಸವನು ಈ ವಚನವನ್ನು ನುಡಿದಿರಬೇಕು. ಲೋಕವಿಗರ್ಭಣೆಗೆ ನಾನು ಒಳಗಾಗುವನಲೆಂದು ಅವನು ಇಲಿ ಅನುತಾನೆ.

"ಆರುಮುನಿದು ನಮ್ಮನೇನ ಮಾಡುವರು? ಊರು ಮುನಿದು ಎಮ್ಮನೆಂತ ಮಾಡುವರು? ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ ಸೊಣಗಂಗೆ ತಳಿಗೆಯಲಿಕ್ಕಬೇಡ. ಆನೆಯ ಮೇಲೆ ಹೋಹವನ ಶ್ವಾನ ಕಚ್ಚ ಬಲ್ಲುದೇ ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನ್ನಕ್ಕ?"

ಈ ವಚನವನ್ನು ಬಸವನು ಸಾಮಾನ್ಯವಾಗಿ ಜನರನ್ನುದ್ದೇಶಿಸಿ ಬೋಧೆಗಾಗಿ ನುಡಿದಂತಹದಲ್ಲೆಂದು ತೋರುತ್ತದೆ. ಇದರಲ್ಲಿ ತನ್ನನ್ನೇ ಕುರಿತು ನುಡಿದಿದ್ದಾನೆಂದು ತೋರುತ್ತದೆ. ಊರೆಲ್ಲ ಅವನ ಮೇಲೆ ಅತ್ಯಂತ ಕೋಪಾವಿಷ್ಟವಾಗಿರಬೇಕು. ಅವನ ಮೇಲೆ ಬಹಿಷ್ಕಾರ ಹಾಕಿರಬೇಕು. ಗ್ರಾಮದಲ್ಲಿ ಅವನ ಅಶನಕ್ಕೆ ಸಹ ಇಲ್ಲದಂತೆ ಮಾಡಿರಬೇಕು, ಅಂಥ ಸಂದರ್ಭದಲ್ಲಿ ನುಡಿದ ವಚನವು ಇದಾಗಿರುತ್ತದೆ. ಇದರಲ್ಲಿ "ನಮ್ಮ ಕುನ್ನಿಗೆ ಕೂಸ ಕೊಡಬೇಡ" ಎಂಬ ಶಬ್ದಗಳಿವೆ. ಇದರಿಂದ ಸ್ವಬಾಂಧವರು ಬಸವ ಮತ್ತು ಅವನ ಮನೆತನದವರೊಡನೆ ಯಾರೂ ಲಗ್ನ ವ್ಯವಹಾರ ಮಾಡಲಿಕ್ಕಿಲ್ಲೆಂಬ ಭೀತಿಯುನ್ನೊಡ್ಡಿರಬೇಕೆಂದು ತೋರುತ್ತದೆ. ಆದ್ದರಿಂದಲೇ ಅವನು ಹೀಗೆ ನುಡಿದಿದ್ದಾನೆ.

ಇನ್ನೊಂದು ವಚನದಲ್ಲಿ ಅವನು ಹೇಳುವದೇನೆಂದರೆ:—

"ನಾಯ ನಿಷ್ಠುರ. ದಾಕ್ಷಿಣ್ಯಪರನಾನಲ್ಲ. ಲೋಕ ವಿರೋಧಿ. ಶರಣನಾರಿಗಂಜುವನಲ್ಲ ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ

ಇಲ್ಲಿ "ಲೋಕ ವಿರೋಧಿ" ಈ ಶಬ್ದಗಳು ಸಾಮಾನ್ಯವಾಗಿ ಜನರ ಬೋಧೆಗೋಸ್ಕರ ನುಡಿದುವಲ್ಲ. ಬಸವನು ಅತ್ಯಂತ ದೀನ ಮನಸ್ಸಿನಿಂದ ಎದೆಗರಗುವಂತೆ ಜನರೊಡನೆ ಆಚರಿಸುವವನು ಇಂಥವನು ಶರಣನು 'ಲೋಕವಿರೋಧಿ' ಎಂದು ಹೇಳುವದು ಶಕ್ಯವಲ್ಲ. ಬಸವನು ತನ್ನ ಗ್ರಾಮದಲ್ಲಿಯ ಬ್ರಾಹ್ಮಣ ಸಮಾಜವು ತನ್ನನ್ನು ಹಿಂಸಿಸಿದಾಗ ಅವನು ತೋರಿಸಿದ ಧೈರ್ಯದ ನುಡಿಯು ಇದಾಗಿ-ಬೇಕು. ಒಟ್ಟಾರೆ ಈ ಎಲ್ಲ ವಚನಗಳ ಮೇಲಿಂದ ಬಸವನುಯಜ್ಞೋಪವೀತವನ್ನು ತ್ಯಜಿಸಲು ಅವನ ಬಂಧುಬಳಗವೆಲ್ಲ ಅವನನ್ನು ಅತ್ಯಂತವಾಗಿ ಹಿಂಸೆ ಮಾಡಿರಬೇಕೆಂಬ ಅನುಮಾನವು ಉಂಟಾಗುತ್ತದೆ.

(ಮುಂದೆ ಸಾಗುವದು.

---

# ಶಿವಾನುಭವ.

| ವರ್ಷ ೧೬ | ಡಿಶಂಬರ ೧೯೪೧. | ಸಂಚಿಕೆ ೩ |
| --- | --- | --- |

## ಕನ್ನಡ ಸಾಹಿತ್ಯಕ್ಕೆ ಬಸವಣ್ಣನವರ ಕಾಣಿಕೆ.

ಉಪನ್ಯಾಸಕರು:—ಜೀರಗೆ ಕ. ಬಸವಪ್ಪ ಬಿ. ಎ. ಅವರು ಬೆಂಗಳೂರು.

ಸಂಗ್ರಾಹಕರು:—ಕಾನಕಾನಹಳ್ಳಿ ಬಸವಪ್ಪನವರು ಬೆಂಗಳೂರು.

[ತಾ॥ ೧೪-೧೦-೧೯೪೧ನೇ ಮಂಗಳವಾರ ಮೈಸೂರು ಧರ್ಮಪ್ರಕಾಶ ಸಾ. ಡಿ. ಬನುಮಯ್ಯನವರ ಹೈಸ್ಕೂಲಿನಲ್ಲಿ ಶ್ರೀಮಾನ್ ಕೆ. ಬಸವರಾಜ ಅರಸ್ ಎಂ. ಎ. ಎಲ್‌ಎಲ್. ಬಿ. ಅವರ ಅಧ್ಯಕ್ಷತೆಯಲ್ಲಿ ಮೈಸೂರು ವಿದ್ಯಾರ್ಥಿ ಸಂಘದ ಪತಿಯಿಂದ ಶ್ರೀಮಾನ್ ಜೀರಗೆ ಕ. ಬಸವಪ್ಪ ಬಿ. ಎ. ಅವರು ಮಾಡಿದ ಭಾಷಣದ ಸಾರಾಂಶ.]

ಬಸವಣ್ಣನವರು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆ ಅಪಾರವಾದದು. ಅವರು ಕನ್ನಡ ಭಾಷಾ ಸೇವೆಯನ್ನು ತಾವೂ ಮಾಡಿದುದಲ್ಲದೆ ತಮ್ಮ ಅನಂತಾನಂತ ಅನುಯಾಯಿಗಳ ಕೈಯಲ್ಲೂ ಮಾಡಿಸಿದರು. ಬಸವಣ್ಣನವರು ವಚನ ಸಾಹಿತ್ಯವೆಂಬ ಒಂದು ನೂತನ ಸಾಹಿತ್ಯವನ್ನು ಸೃಷ್ಟಿಸಿ ರೂಢಿಗೆ ತಂದು, ಬೇರೆ ಬೇರೆ ಶಿವಶರಣರ ಮುಖದಿಂದ ಹೊರಟ ಎರಡೊಂಬತ್ತು ಕೋಟಿ ವಚನಗಳಿಗೆ ಕಾರಣರಾಗಿದ್ದಾರೆ. ಬಸವಣ್ಣನವರು ಕನ್ನಡ ಭಾಷೋದ್ಧಾರಕರಷ್ಟೇ ಅಲ್ಲ ಅವರು ಕನ್ನಡ ಭಾಷಾ ಜನಕರೂ ಹೌದು. ಈ ರೀತಿ ಬಸವಣ್ಣನವರು ಆಗಿನ ಕಾಲದಲ್ಲಿ ಪ್ರಚಾರದಲ್ಲಿದ್ದ ಕ್ಲಿಷ್ಟವಾದ ಶೈಲಿ, ಛಂದಸ್ಸು ಮುಂತಾದವುಗಳನ್ನು

ಬಿಟ್ಟು ಸರಳವಾದ ಕೇವಲ ಕನ್ನಡ ಭಾಷೆಯಲ್ಲಿ ಒಂದು ಹೊಸ ಸಾಹಿತ್ಯ ಮಾರ್ಗವನ್ನು ಕಂಡ ಹಿಡಿದರು. ಇದಕ್ಕೆ ಕಾರಣವೇನೆಂಬುದನ್ನು ನಾವು ಮೊದಲು ವಿಚಾರ ಮಾಡಬೇಕಾಗಿದೆ.

ಬಸವಣ್ಣನವರ ಪೂರ್ವ ಚರಿತ್ರೆಯನ್ನು ನೋಡಿದರೆ ಅವರು ಬ್ರಾಹ್ಮಣರಲ್ಲಿ ಬ್ರಾಹ್ಮಣರು. ಸತ್ಕುಲ ಪ್ರಸೂತರು. ಸಂಸ್ಕೃತ ಭಾಷಾ ಜ್ಞಾನಿಗಳು. ವೇದಾಗಮ ಪುರಾಣೇತಿಹಾಸಗಳಲ್ಲಿ ಅದ್ವಿತೀಯ ಜ್ಞಾನವನ್ನು ಪಡೆದ ಮಹಾಪಂಡಿತರು. ಬ್ರಾಹ್ಮಣ ಸಮಾಜದಲ್ಲಿ ಬಸವಣ್ಣನವರು ಒಂದು ಹಿರಿಯ ಸ್ಥಾನವನ್ನು ಪಡೆದವರಾಗಿದ್ದರು. "ಎನ್ನಯ್ಯಂ ಲೋಕಕೈಯ್ಯನೆನಿಪ್ಪಂ" ಎಂದು ಮಣಿಂಗನಹಳ್ಳಿಯ ಬ್ರಾಹ್ಮಣರು ಬಸವಣ್ಣನವರನ್ನು ಹೊಗಳಿ "ನೊಸಲ್ಗೆಕೈಯ್ಯಂತೆಂದು" ನಮಸ್ಕರಿಸುತಿದ್ದರು. ಇಂಥ ಬಸವಣ್ಣನವರು ತಮ್ಮ ಕುಲ, ಹಿರಿಮೆ, ಸ್ಥಾನ ಇವುಗಳನ್ನು ನಿರ್ಲಕ್ಷಿಸಿ, ಜನಸಾಮಾನ್ಯದ ಉದ್ಧಾರಕ್ಕಾಗಿ ಕಂಕಣತೊಟ್ಟು ನಿಂತು ಕನ್ನಡ ಭಾಷೆಯಲ್ಲಿ ಜನಸಾಮಾನ್ಯವನ್ನು ಸಂಬೋಧಿಸಿದುದನ್ನು ನೋಡಿದರೆ ನಮಗೆ ಅಚ್ಚರಿಯಾಗುತ್ತದೆ. ಬಸವಣ್ಣನವರ ಈ ರೀತಿಯ ಅಚ್ಚರಿಯ ವರ್ತನೆಗೆ ನಾವು ಸ್ಥೂಲವಾಗಿ ಮೂರು ಕಾರಣಗಳನ್ನು ಊಹಿಸಬಹುದಾಗಿದೆ.

೧ ಜನಸಾಮಾನ್ಯಕ್ಕೆ ಅರಿವನ್ನುಂಟುಮಾಡುವುದು. ಇದು ಮೊದಲನೆಯ ಕಾರಣ. ಬಸವಣ್ಣನವರ ಕಾಲದಲ್ಲಿ ಯಾವುದಾದರೂ ಒಂದು ಶಾಸ್ತ್ರದ ವಿಚಾರದಲ್ಲಿಯೇ ಆಗಲಿ, ಒಂದು ಲೋಕಾನುಭವದ ವಿಚಾರದಲ್ಲಿಯೇ ಆಗಲಿ, ಇತಿಹಾಸದ ವಿಚಾರದಲ್ಲಿಯೇ ಆಗಲಿ ಅಷ್ಟೇಕೆ ಒಂದು ವೈದ್ಯದ ವಿಚಾರದಲ್ಲಿಯೇ ಆಗಲಿ ಅರಿವನ್ನು ಪಡೆಯಬೇಕಾಗಿದ್ದರೆ ಸಂಸ್ಕೃತ ಗ್ರಂಥಗಳನ್ನೇ ಆಶ್ರಯಿಸಬೇಕಾಗಿದ್ದಿತು. ಪಂಡಿತರಲ್ಲದೆ ಮತ್ತಾರೂ ಆ ಸಂಸ್ಕೃತ ಗ್ರಂಥಗಳ ಗೋಜಿಗೆ ಹೋಗುವಂತಿರಲಿಲ್ಲ. ಜನಸಾಮಾನ್ಯಕ್ಕೆ ಸಂಸ್ಕೃತ ಬಾರದು. ಇದರಿಂದ ಯಾವುದೇ ವಿಷಯದಲ್ಲಾಗಲಿ ಒಂದು ಅರಿವನ್ನು ಪಡೆಯುವುದು ಜನಸಾಮಾನ್ಯಕ್ಕೆ ದುರ್ಲಭವಾಗಿ ಕಂಡಿತು. ಮೇಲಾಗಿ ಆಗಿನ ಕಾಲದಲ್ಲಿ ನೈತಿಕ ವಿಚಾರಗಳನ್ನು ತಿಳಿಯಹೇಳಲು ಸಹ ಸಂಸ್ಕೃತ ಭಾಷೆಯನ್ನೇ ಉಪಯೋಗಿಸಲಾಗುತ್ತಿದ್ದಿತು. ಜನಸಾಮಾನ್ಯವು ಅರಿವಿನ ಅಭಾವದಿಂದ ನೈತಿಕ ಪ್ರಪಂಚಕ್ಕೆ ಬಹು ದೂರ ಉಳಿದಿದ್ದಿತು. ಜನಸಾಮಾನ್ಯಕ್ಕೆ ನೈತಿಕ ವಿಚಾರಗ

ನನ್ನು ಮನಗಾಣಿಸುವುದು ಎಷ್ಟು ಅವಶ್ಯಕವೆಂಬುದನ್ನು ಬಸವಣ್ಣನವರು ಚೆನ್ನಾಗಿ ತಿಳಿದಿದ್ದರು. ಇದಕ್ಕಾಗಿ ಅವರು ಜನಸಾಮಾನ್ಯಕ್ಕೆ ಅರ್ಥವಾಗತಕ್ಕ ಕನ್ನಡ ಭಾಷೆಯಲ್ಲಿ ಅರುಹನ್ನು ಪ್ರಚಾರ ಮಾಡುವುದಕ್ಕೆ ಉಪಕ್ರಮಿಸಿದರು. ಸಹಜವಾದ, ಸುಲಭವಾದ, ಲಲಿತವಾದ, ಆಬಾಲವೃದ್ಧರಿಗೂ ತಿಳಿಯುವಂತಹ ಕನ್ನಡದಲ್ಲಿ ಮನಮುಟ್ಟುವಂತೆ ಅವರು ನೀತಿಯನ್ನು ಬೋಧಿಸಿದರು. ಅವರು ನೀತಿಬೋಧೆಯನ್ನು ಎಷ್ಟು ಪರಿಣಾಮಕಾರಿಯಾಗಿ ನಡೆಸಿದರೆಂಬುದನ್ನು ಈ ಒಂದು ವಚನದಿಂದ ನಾವು ಅರ್ಥ ಮಾಡಿಕೊಳ್ಳಬಹುದಾಗಿದೆ. ಬಸವಣ್ಣನವರು ಜನರ ಶುಷ್ಕ ಆಚಾರಗಳನ್ನು ಖಂಡಿಸಿ ಅಂತರಂಗ ಶುದ್ಧತೆಯ ಅವಶ್ಯಕತೆಯನ್ನು ಹೀಗೆ ನಿರೂಪಿಸಿದ್ದಾರೆ.

"ತೊರೆಯು ಮೀವ ಅಣ್ಣಗಳಿ
ರಾ, ತೊರೆಯು ಮೀವ ಸ್ವಾಮಿ
ಗಳಿರಾ. ತೊರೆಯಿಂ ಭೋ,
ತೊರೆಯಿಂ ಭೋ, ಪರನಾರಿ
ಯಸಂಗವ ತೊರೆಯಿಂ ಭೋ,
ಪರಧನದಾಮಿಷವ, ತೊರೆ
ಯಿಂಭೋ. ಇವತೊರೆಯದೆ
ಹೋಗಿ ತೊರೆಯ ಮಿಂದರೆ
ಬರುದೊರೆ ಹೋಹುದು ಕೂ
ಡಲಸಂಗಮದೇವಾ"

ಈ ವಚನ ಎಷ್ಟು ನೇರವಾಗಿ ಮನಕ್ಕೆ ತಾಕುವಂತಿದೆಯೆಂಬುದನ್ನು ನಾವು ನೋಡಬಹುದಾಗಿದೆ. ಕನ್ನಡವಾದರೇನು! ಜನಸಾಮಾನ್ಯಕ್ಕೆ ಹಿತವನ್ನು ಕೊಡತಕ್ಕ ಸಾಹಿತ್ಯವೇ ಉತ್ತಮ ಸಾಹಿತ್ಯವಲ್ಲವೇ?

ಇನ್ನು ವಚನ ಸಾಹಿತ್ಯ ನಿರ್ಮಾಣಕ್ಕೆ ಎರಡನೆಯ ಕಾರಣವನ್ನು ನೋಡುವಾ. ಸ್ಫೂರ್ತಿಯನ್ನುಳ್ಳವರೆಲ್ಲರೂ, ಆವೇಶಹೊಂದಿರತಕ್ಕವರೆಲ್ಲರೂ ಉದಾತ್ತವಾದ ಭಾವಗಳನ್ನು ಉನ್ನತವಾದ ಕಲ್ಪನೆಗಳನ್ನು [illegible]ಟ್ಟತಕ್ಕವರೆಲ್ಲರೂ ತಮ್ಮ ಸ್ಫೂರ್ತಿ, ಆವೇಶ, ಭಾವ, ಕಲ್ಪನೆಗಳನ್ನು ವ್ಯಕ್ತಪಡಿಸಲು ಅವಂಗೆ ಆವಕಾಶವನ್ನುಂಟುಮಾಡಿಕೊಡುವುದು. ಇದು ಎರ

ಡನೆಯು ಕಾರಣ. ಭಾಷೆಯ ಕ್ಲಿಷ್ಟತೆಯಿಂದಲೂ, ವ್ಯಾಕರಣ, ಛಂದಸ್ಸು ಮುಂತಾದ ರೂಢಿಯ ಕಟ್ಟುಪಾಡುಗಳ ಕಕ್ಕುಲತೆಯಿಂದಲೂ ಜನಸಾಮಾನ್ಯವು ಸ್ಫೂರ್ತಿ ಇದ್ದರೂ ಅದನ್ನು ವ್ಯಕ್ತಪಡಿಸುವುದಕ್ಕಾಗುತ್ತಿರಲಿಲ್ಲ. ಭಾವವನ್ನು ಹೊಂದಿದ್ದರೂ ಅದನ್ನು ಹೊರಹೊಮ್ಮಿಸುವದಕ್ಕಾಗುತ್ತಿರಲಿಲ್ಲ. ಕಲ್ಪನೆಯುನ್ನು ಉಳ್ಳವರಾಗಿದ್ದರೂ ಅದನ್ನು ಚಿತ್ರಕಟ್ಟುವುದಕ್ಕಾಗುತ್ತಿರಲಿಲ್ಲ. ಭಾಷೆಯ ಕೊರತೆಯಿಂದ ಜನಸಾಮಾನ್ಯವು ತಮ್ಮತಮ್ಮ ಆವೇಶ, ಸ್ಫೂರ್ತಿಗಳನ್ನು ಮೊಟಕು ಮಾಡುವುದು ನ್ಯಾಯವಲ್ಲವೆಂದು ಬಸವಣ್ಣನವರು ಮನಗಂಡು, ಸರಳವಾದ, ಸಹಜವಾದ, ಲಲಿತವಾದ ಕನ್ನಡ ವಚನ ಶೈಲಿಯುನ್ನು ನಿರ್ಮಿಸಿ ಜನಸಾಮಾನ್ಯವು ತಮ್ಮ ತಮ್ಮ ಸ್ಫೂರ್ತಿ, ಆವೇಶ, ಭಾವ, ಕಲ್ಪನೆಗಳನ್ನು ಬರೆದಿಡುವಂತೆ ಜನಸಾಮಾನ್ಯಕ್ಕೆ ಪ್ರೋತ್ಸಾಹ ಕೊಟ್ಟರು. ಬಸವಣ್ಣನವರು ಜನಸಾಮಾನ್ಯಕ್ಕೆ ಹೀಗೆ ಕೈಯಿತ್ತಿ ಹೇಳಿದರು.

"ಅಳಿಗೊಂಡಿಹರೆಂದು ಅಂಜಲ
ದೇಕೆ? ನಾಸ್ತಿಕವಾಡಿಹರೆಂದು
ನಾಚಲದೇಕೆ? ಆರಾದಡಾ
ಗಲಿ ಶ್ರೀಮಹಾದೇವಂಗೆ
ಶರಣೆನ್ನಿ. ಏನೂ ಅರಿಯ
ನೆಂದು ಮೌನಗೊಂಡಿರಬೇಡ.
ಕೂಡಲಸಂಗಮದೇವರ
ಮುಂದೆ ದಂಡಣ, ದತ್ತಣ
ಎನ್ನಿ

ಸಂಸ್ಕೃತ ಭಾಷೆ ಬರುವುದಿಲ್ಲವೆಂದು ಯಾರೂ ಹಿಂಜರಿಯಬೇಕಾದುದಿಲ್ಲ. ಗಣ, ಮಾತ್ರೆ, ಛಂದಸ್ಸುಗಳನ್ನು ಹೊಂದಿಸಿಕೊಂಡು ಕವನಗಳನ್ನು ಬರೆಯುವುದಕ್ಕೆ ಬರುವುದಿಲ್ಲವೆಂದು ಯಾರೂ ವ್ಯಾಕುಲಪಡಬೇಕಾದುದಿಲ್ಲ. ನಿಮ್ಮ ನಿಮ್ಮ ಭಾವಗಳನ್ನು ಕಲ್ಪನೆಗಳನ್ನು ನಿಮಗೆ ಅರ್ಥವಾಗುವ ಮತ್ತು ಎಲ್ಲರಿಗೂ ಅರ್ಥವಾಗುವ ಲಲಿತವಾದ ಸಹಜವಾದ ಕನ್ನಡ ವಚನ ಶೈಲಿಯಲ್ಲಿ ಬರೆಯಿರಿ. ಎಂದು ಬಸವಣ್ಣನವರು ಜನಸಾಮಾನ್ಯರ ಬೆನ್ನಿನ ಮೇಲೆ ಕೈಚಪ್ಪರಿಸಿದರು. ಹಿಂದೆ

ಎಂದೂ ಕಾಣದ, ಕೇಳದ ಇಂತಹ ಪ್ರೋತ್ಸಾಹವನ್ನು ಜನತೆಯು ಕೇಳಿ ಹಿಗ್ಗಿತು. ಕೊಬ್ಬಿತು. ಆವೇಶಹೊಂದಿತು. ಅನಂತ ಶರಣರು ಅನುಭವಮಂಟಪದಲ್ಲಿ ಸೇರಿ ಅನುಭವಗೋಷ್ಠಿಯನ್ನು ನಡೆಸಿ ನೂತನವಾದ ಸಾಹಿತ್ಯವನ್ನು ಸೃಷ್ಟಿಸಿದರು. ಈ ಸಾಹಿತ್ಯವೇ ಇಂದು ನಮ್ಮ ಮುಂದೆ ಜಾಜ್ವಲ್ಯಮಾನವಾಗಿರುವ ವಚನಸಾಹಿತ್ಯ. ಈ ರೀತಿ ತಮ್ಮ ಪ್ರೋತ್ಸಾಹದಿಂದಲೇ ಹುಟ್ಟಿದ ವಚನಸಾಹಿತ್ಯವನ್ನು ಬಸವಣ್ಣನವರು ನೋಡಿ ಅದರ ಪೆರ್ಮೆಯನ್ನು ಮನಗಂಡು, ಹಿಗ್ಗಿ ಈ ರೀತಿಕೊಂಡಾಡಿದ್ದಾರೆ.

"ಹಾಲ ತೊರೆಗೆ ಬೆಲ್ಲದ ಕೆಸರು,
ಸಕ್ಕರೆಯು ಮಳಲು, ತವರಾಜದ
ನೊರೆ ತೆರೆಯಂತೆ ಆದ್ಯರ
ವಚನವಿರಲು, ಬೇರೆ ಬಾವಿಯ
ತೋಡಿ, ಉಪ್ಪನೀರನುಂಬುವನ
ವಿಧಿಯಂತೆ ಆಯಿತ್ತೆನ್ನಮತಿ
ಕೂಡಲಸಂಗಮದೇವಾ"

ಎಂದು ಬಸವಣ್ಣನವರು ವಚನಕಾರರನ್ನು ಪ್ರೋತ್ಸಾಹಿಸಿ, ಆ ಪ್ರೋತ್ಸಾಹದಲ್ಲೇ ತಮ್ಮ ಸ್ವಾಭಾವಿಕವಾದ ಕಿಂಕರತ್ವವನ್ನು ವ್ಯಕ್ತಪಡಿಸಿ ಜನತೆಯನ್ನು ಮತ್ತಷ್ಟು ಹುರಿದುಂಬಿಸಿದರು.

೩. ಇನ್ನು ವಚನಸಾಹಿತ್ಯಕ್ಕೆ ಮೂರನೆ ಕಾರಣ. ಜೀವನಕ್ಕೂ ಎಂದರೆ ಜನಜೀವನಕ್ಕೂ ಸಾಹಿತ್ಯಕ್ಕೂ ನಿಕಟವಾದ ಸಂಬಂಧವನ್ನು ಕಲ್ಪಿಸುವುದು. ಇದು ಮೂರನೆಯ ಕಾರಣ. ಬಸವಣ್ಣನವರ ಕಾಲದಲ್ಲಿ ಸಾಹಿತ್ಯ ಒಂದುಕಡೆ ಹರಿಯುತ್ತಿದ್ದರೆ, ಜನಜೀವನ ಮತ್ತೊಂದು ಕಡೆ ಪ್ರವಹಿಸುತ್ತಿದ್ದಿತು. ಜನಕ್ಕೆ ಸಾಹಿತ್ಯದ ಗಂಧವಿಲ್ಲದಿದ್ದರೆ ಅಂತೆಯೇ ಸಾಹಿತಿಗಳಿಗೆ ಜನಜೀವನ ಗಂಧವೇ ಇರುತ್ತಿರಲಿಲ್ಲ. ಅವರ ಸಾಹಿತ್ಯದಲ್ಲಿ ಕಾಲ್ಪನಿಕ ವಿಚಾರಗಳಿಗೆ ಹೆಚ್ಚಿನ ಎಡೆ ಇತ್ತೇ ವಿನಹ ಜನಜೀವನದ ಚಿತ್ರ ಅವರ ಸಾಹಿತ್ಯದಲ್ಲಿ ಕಂಡುಬರುತ್ತಿರಲಿಲ್ಲ. ಜೀವನದಲ್ಲಿ ಸುಖಶಾಂತಿಗಳನ್ನು ಪಡೆಯಬೇಕೆಂಬುದೇ ಪ್ರತಿಯೊಬ್ಬ ಮಾನವನ ಅಭಿಲಾಷೆಯಾಗಿರುವಲ್ಲಿ ಈ ಸುಖಶಾಂತಿಗಳನ್ನು ಈಡೇರಿಸುವ ಕೆಲಸವನ್ನು ಸಾಹಿತ್ಯ ಕೈಗೊಳ್ಳದಿದ್ದಲ್ಲಿ ಅಂಥ ಸಾಹಿತ್ಯದಿಂದ ಯಾವ ಪ್ರಯೋ

ಜನವೂ ಇಲ್ಲವೆಂದೂ, ಅದು ಅರ್ಥವಿಲ್ಲದ ವ್ಯರ್ಥ ಸಾಹಿತ್ಯವೆಂದೂ ಬಸವಣ್ಣನವರು ಚೆನ್ನಾಗಿ ಮನಗಂಡರು. ಇದಕ್ಕಾಗಿ ಅವರು ಅನುಭವಮಂಟಪವನ್ನು ಸ್ಥಾಪಿಸಿ ಅಲ್ಲಿ ತಮ್ಮ ತಮ್ಮ ಅನುಭವಗಳನ್ನು ಕುರಿತೇ ಸಾಹಿತ್ಯಗಳನ್ನು ನಿರ್ಮಾಣ ಮಾಡಬೇಕೆಂದು ಕಟ್ಟುಮಾಡಿ ಜನಜೀವನಕ್ಕೂ ಸಾಹಿತ್ಯಕ್ಕೂ ಸಂಬಂಧವನ್ನು ಕಲ್ಪಿಸಿದರು.

"ನುಡಿಯಲ್ಲಿ ಎಚ್ಚತ್ತು ನಡೆ
ಯಲ್ಲಿ ತಪ್ಪಿದರೆ ಹಿಡಿದಿರ್ದ
ಲಿಂಗ ಘಟಸರ್ಪವಯ್ಯ"

ಎಂದು ಬಸವಣ್ಣನವರು ಗೀತೆಯನ್ನು ಹಾಡಿ ಸಾಹಿತ್ಯವನ್ನು ಜನಜೀವನಕ್ಕೆ ಸಂಬಂಧಿಸುವುದನ್ನು ಯಾರೂ ಮರೆಯಬಾರದೆಂದು ಒಂದು ಆದರ್ಶಸೂಕ್ತಿಯನ್ನು ಪ್ರಪಂಚದ ಮುಂದಿಟ್ಟರು.

ಈ ರೀತಿ ಮೂರು ಕಾರಣಗಳಿಂದ ಬಸವಣ್ಣನವರು ನಿರ್ಮಿಸಿದ ವಚನ ಸಾಹಿತ್ಯದ ಲಕ್ಷಣಗಳೇನೆಂಬುದನ್ನು ಇನ್ನುಮುಂದೆ ವಿಚಾರ ಮಾಡಬೇಕಾಗಿದೆ. ಉತ್ತಮ ಸಾಹಿತ್ಯದ ಎಲ್ಲ ಲಕ್ಷಣಗಳನ್ನೂ ನಾವು ಬಸವಣ್ಣನವರ ವಚನ ಸಾಹಿತ್ಯದಲ್ಲಿ ನೋಡಬಹುದಾಗಿದೆ. ಅನುಭವದ ಮಥನದಿಂದ ಹುಟ್ಟಿದ ಬಸವಣ್ಣನವರ ವಚನಾಮೃತದ ಸವಿ ಎಂತ ಹುದೆಂಬುದನ್ನು ಸಂಪೂರ್ಣವಾಗಿಯೂ ತೃಪ್ತಿಕರವಾಗಿಯೂ ಮನಗಾಣ ಬೇಕಾದರೆ ಅವರ ವಚನಗಳನ್ನೇ ನಾವು ವಿಮರ್ಶಿಸಿ ನೋಡಬೇಕಾಗಿದೆ. ಸದ್ಯಕ್ಕೆ ಅವರ ಒಂದೆರಡು ವಚನಗಳನ್ನು ಉದಾಹರಣಾರ್ಥವಾಗಿ ಹೇಳಿ, ಅವರ ವಚನಸಾಹಿತ್ಯದ ಮಾಧುರ್ಯವನ್ನು ಕೈಲಾದ ಮಟ್ಟಿಗೆ ನಿರ್ದೇಶಿಸುವುದು ನನ್ನ ಕರ್ತವ್ಯವಾಗಿದೆ. ಸಾಹಿತ್ಯದ ಒಂದು ಮುಖ್ಯ ವಾದ ಗುಣವಿಶೇಷವೆಂದರೆ ಅದರ ರಮಣೀಯತೆ. ನಿಸರ್ಗದ ಒಂದು ಶೋಭೆಯನ್ನು ಪ್ರಕಾಶಗೊಳಿಸುವುದೇ ಆ ರಮಣೀಯತೆ. ನಾವು ಅನೇಕ ವಸ್ತುಗಳನ್ನು ಒಂದು ವಿಶೇಷ ಗುಣವಾಗಲಿ ಅವುಗಳ ಒಂದು ವಿಲಕ್ಷಣ ರಮ್ಯತೆಯಾಗಲಿ ಸಾಮಾನ್ಯವಾಗಿ ನಮ್ಮ ಕಣ್ಣಿಗೆ ಬಿದ್ದಿರುವುದಿಲ್ಲ. ಆದರೆ ಕವಿ ಆ ವಿಶೇಷಗುಣ ಶೋಭೆಗಳನ್ನು ಕಂಡು ಅವನ್ನು ತನ್ನ ಸಾಹಿತ್ಯದಲ್ಲಿ ಚಿತ್ರಿಸುತ್ತಾನೆ. ರವಿಕಾಣದುದ ಕವಿ ಕಂಡನೆಂಬುದರ ಅರ್ಥವಾದರೂ ಇದೇ.

ಹುತ್ತವನ್ನೂ—ಹಾವನ್ನೂ, ನದಿಯನ್ನೂ—ಸಮುದ್ರವನ್ನೂ ನಾವು ಎಷ್ಟೋಸಲ ನೋಡಿದ್ದೇವೆ. ಆದರೆ ಅವುಗಳ ಒಂದು ವೈಶಿಷ್ಟ್ಯವಾಗಲಿ, ಅವುಗಳ ಒಂದು ವೀಕ್ಷಣ ರಮಣೀಯತೆಯಾಗಲಿ ನಮ್ಮ ಕಣ್ಣಿಗೆ ಬಿದ್ದಿರುವುದಿಲ್ಲ. ಬಸವಣ್ಣನವರು ಆ ಹುತ್ತ-ಹಾವು, ನದಿ—ಸಮುದ್ರಗಳನ್ನು ನೋಡಿ ಅವುಗಳ ಗೂಢವಾದ ಸಂಬಂಧವನ್ನೂ, ಅವುಗಳ ಒಂದು ವಿಲಕ್ಷಣ ವೈಶಿಷ್ಟ್ಯವನ್ನೂ ಹೇಗೆ ಚಿತ್ರಿಸಿದ್ದಾರೆಂಬುದನ್ನು ನೋಡೋಣ.

"ಹಾವಿನಡೊಂಕು ಹುತ್ತಕ್ಕೆ
ಸಸಿನ. ನದಿಯಡೊಂಕು
ಸಮುದ್ರಕ್ಕೆ ಸಸಿನ. ನಮ್ಮ
ಕೂಡಲಸಂಗನ ಶರಣರ ಡೊಂಕು
ಲಿಂಗಕ್ಕೆ ಸಸಿನ"

ಈ ವಚನದಲ್ಲಿ ಬಸವಣ್ಣನವರು ನಿಸರ್ಗದ ಮಾರ್ಮಿಕ ಅರ್ಥವನ್ನು ಎಷ್ಟು ಮನೋಹರವಾಗಿ ವರ್ಣಿಸಿ, ಕನ್ನಡ ದೇವಿಯ ಕೊರಳಿಗೆ ಎಂತಹ ಅಮೂಲ್ಯವಾದ ಕಂಠಾಭರಣವನ್ನು ಹಾಕಿರುವರೆಂಬುದನ್ನು ನಾವು ನೋಡಬಹುದಾಗಿದೆ. "*All artistic work must be a revelation*" ಎಂಬುದರ ತತ್ವವನ್ನು ನಾವು ಈ ವಚನದಲ್ಲಿ ಬಹು ಚೆನ್ನಾಗಿ ಮನಗಾಣಬಹುದಾಗಿದೆ.

ಸಾಹಿತ್ಯದ ಲಕ್ಷಣವೆಂದರೆ "*Suggestiveness*" ಸೂಚಕತ್ವ. ಇದನ್ನು ಲಾಕ್ಷಣಿಕರು "ಧ್ವನಿ" ಎಂದು ಕರೆಯುತ್ತಾರೆ. ಈ ಗುಣವಿಶೇಷವು ಬಸವಣ್ಣನವರ ಸಾಹಿತ್ಯದಲ್ಲಿ ತಾಂಡವವಾಡುತ್ತದೆ. ಉದಾಹರಣೆಗೆ ಈ ಒಂದು ವಚನವನ್ನು ತಮ್ಮ ಮುಂದೆ ಇಡುತ್ತೇನೆ.

"ವ್ಯಾಧನೊಂದು ಮೊಲವ ತಂ
ದರೆ ಸಲುಹಾಗಕ್ಕೆ ಬೆಲೆಗೆಯ್ವ
ರಯ್ಯ. ನೆಲನಾಳ್ವನ ಹೆಣನೆಂದ
ರೆ ಒಂದಡಿಕೆಗೆ ಕೊಂಬುವರಿಲ್ಲ
ನೋಡಯ್ಯ. ಮೊಲನಿಂದ ಕರ
ಕಷ್ಟ. ನರನ ಬಾಳುವೆ ಸಲೆ ನಂ
ಬು ನಮ್ಮ ಕೂಡಲಸಂಗಮದೇವನ"

ಈ ವಚನದಲ್ಲಿ "ಮೊಲನಿಂದ ಕರಕಷ್ಟ ನರನ ಬಾಳುವೆ" ಎಂಬ ಚಿಕ್ಕ ಮಾತಿನಲ್ಲಿ ಎಂತಹ ಗಾಢವಾದ ಅರ್ಥವನ್ನು ಬಸವಣ್ಣನವರು ಚಿತ್ರಿಸಿದ್ದಾರೆ! ವಿಶ್ವಕ್ಕೇ ಅನ್ವಯಿಸುವ ಒಂದು ಮಹತ್ತರವಾದ ತತ್ವವನ್ನು ಹೇಳಿದ್ದಾರೆ!

ಕನ್ನಡ ನುಡಿಯ ವಿಚಾರದಲ್ಲಿ ಒಂದು ಆಕ್ಷೇಪಣೆ ಇದ್ದಂತೆ ತೋರುತ್ತದೆ. ಕನ್ನಡ ಸಾಹಿತ್ಯವು ವೀರ್ಯವತ್ತಾದ ಸಾಹಿತ್ಯವಲ್ಲವೆಂದೂ, ಕನ್ನಡಿಗರು ಕನ್ನಡದಲ್ಲಿ ಒಂದು ವಾದವನ್ನು ಸಹ ನಡೆಸಲಾರರೆಂದೂ ಕೆಲವರ ಅಭಿಪ್ರಾಯವಿದ್ದಂತೆ ತೋರುತ್ತದೆ. ಈ ಅಭಿಪ್ರಾಯ ತಪ್ಪೆಂದು ಬಸವಣ್ಣನವರು ಈ ವಚನವನ್ನು ಹಾಡಿ ತೋರಿಸಿಕೊಟ್ಟಿದ್ದಾರೆ.

"ಜಂಬೂದ್ವೀಪ ನವಖಂಡ ಪೃ
ಥ್ವಿಯೊಳಗೆ ಕೇಳಿರಯ್ಯ ಎರಡಾಳಿ
ನಭಾಷೆಯ. ಕೊಲುವೆನೆಂಬ ಭಾ
ಷೆ ದೇವನದು. ಗೆಲುವೆನೆಂಬ ಭಾಷೆ
ಭಕ್ತನದು. ಸತ್ಯವೆಂಬ ಕೂರಲಗ
ನೇ ಹಿಡಿದು ಸದ್ಭಕ್ತರು ಗೆದ್ದರು ಕಣಾ
ಕೂಡಲಸಂಗಮದೇವಾ"

ಈ ವಚನದಲ್ಲಿ ಬಸವಣ್ಣನವರು ಎಂತಹ ಆವೇಶವನ್ನು ಹುಟ್ಟಿಸುವ, ಎಂತಹ ಸ್ಫೂರ್ತಿಯನ್ನು ಉಂಟುಮಾಡುವ, ಎಂತಹ ಹುರುಪನ್ನು ಹೊರಸೂಸುವ ಸಾಹಿತ್ಯವನ್ನು ನಿರ್ಮಿಸಿದ್ದಾರೆಂಬುದನ್ನು ಯಾರು ಬೇಕಾದರೂ ತಿಳಿಯಬಹುದಾಗಿದೆ.

ಬಸವಣ್ಣನವರ ವಚನಸಾಹಿತ್ಯದ ಮತ್ತೊಂದು ವಿಶೇಷ ಕೌಶಲ್ಯವನ್ನು ನಾನು ಇಲ್ಲಿ ವರ್ಣಿಸದೆ ಇರಲಾರೆ. ಅದು ಅವರ ಕಥನ ಕೌಶಲ್ಯ. ಜನರು ಕಂಡು ಕೇಳಿದ, ಅವರ ಮನಸ್ಸಿಗೆ ಹಿಡಿಯುವ ಜನಜೀವನದ ಕೆಲವು ದೃಶ್ಯಗಳನ್ನು ಕಥೆಯ ರೂಪದಲ್ಲಿ ಹೇಳಿ ಆ ಮೂಲಕವೂ ಬಸವಣ್ಣನವರು ನೀತಿಬೋಧೆಯನ್ನು ಮಾಡಿ ಭಾಷೆಯನ್ನು ನುರುಗಿಸಿದ್ದಾರೆ. ಅವರು ಅನೇಕ ಕಥೆಗಳನ್ನು ಹೇಳಿದ್ದಾರೆ. ಆದರೆ ಅವೆಲ್ಲವುಗಳನ್ನೂ ಇಲ್ಲಿ ಹೇಳುವುದಕ್ಕಾಗುವುದಿಲ್ಲ. ಒಂದು ಕಥೆಯನ್ನು ಮಾತ್ರ ಹೇಳುತ್ತೇನೆ. ಅದು ಹಾವಾಡಿಗ ಮೂಕೊರತಿಯರ ಕಥೆ. ಆ ಕಥೆಯನ್ನು ನಾವುಗಳಾ

ಗಿದ್ದರೆ ಹೀಗೆ ಪ್ರಾರಂಭಿಸುತ್ತಿದ್ದೆವೆಂದು ಕಾಣುತ್ತದೆ. "ಒಂದೂರಿನಲ್ಲಿ ಒಬ್ಬ ಹಾವಾಡಿಗನಿದ್ದ. ಅವನು ಒಬ್ಬ ಮೂಗಿಯನ್ನು ಮದುವೆಯಾದ. ಅವರಿಗೊಂದು ಗಂಡು ಮಗು ಆಯಿತು ಆ ಮಗು ಬೆಳೆದು ಪ್ರಾಪ್ತ ವಯಸ್ಕನಾದ. ಮದುವೆಗೆ ನೆರೆದ ಹೆಣ್ಣು ಗೊತ್ತು ಮಾಡುವುದಕ್ಕಾಗಿ ಶಕುನ ಕೇಳುವುದಕ್ಕೆ ಹಾವಾಡಿಗ ಮೂಕೊರತೆಯರು ಹೊರಟರು" ಮುಂತಾಗಿ ಪ್ರಾರಂಭಿಸುತ್ತಿದೆವು. ಆದರೆ ಬಸವಣ್ಣನವರು ಕಥೆಯನ್ನು ಈ ರೀತಿ ಲಂಬಿಸಿ ಹೇಳುವುದಿಲ್ಲ. ಮನಸ್ಸಿಗೆ ಬೇಸರಿಕೆಯನ್ನು ಹಿಡಿಸುವುದಿಲ್ಲ. ಕಥೆಯನ್ನು ನೇರವಾಗಿ ಎರಡೇ ಮಾತುಗಳಲ್ಲಿ ಹೇಳುತ್ತಾರೆ. ಆದರೆ ಅವರು ಹೇಳಿದ ಆ ಎರಡೇ ಮಾತುಗಳಲ್ಲೇ ಒಂದು ಮನೋಹರವಾದ ಚಿತ್ರವನ್ನು ಕಟ್ಟುತ್ತಾರೆ. ಕಥೆಗೆ ಬೇಕಾದ ಎಲ್ಲ ಸನ್ನಿವೇಶಗಳನ್ನೂ, ಎಲ್ಲ ವರ್ಣನೆಗಳನ್ನೂ ಆ ಎರಡೇ ಮಾತುಗಳಲ್ಲಿ ಮುಗಿಸಿ ಒಂದು ಉದಾತ್ತವಾದ ತತ್ತ್ವವನ್ನು ಹೊರಹೊಮ್ಮಿಸುತ್ತಾರೆ. ಇವರ ಕಥೆಗಳನ್ನು ಈಸೋಫನ ಕಥೆಗಳಿಗೆ ಧಾರಾಳವಾಗಿ ಹೋಲಿಸಬಹುದಾಗಿದೆ. ಹಾವಾಡಿಗ ಮೂಕೊರತೆಯರ ಕಥೆಯನ್ನು ಹೀಗೆ ಹೇಳಿದ್ದಾರೆ.

" ಹಾವಡಿಗನು ಮೂಕೊರತಿಯು ತನ್ನ
ಮಗನ ಮದುವೆಗೆ ಶಕುನವ ನೋಡ ಹೋ
ಹಾಗ, ಇದಿರಿಲೊಬ್ಬ ಮೂಕೊರಂತಿಯು
ಹಾವಡಿಗನ ಕಂಡು ಶಕುನ ಹೊಲ್ಲೆಂ
ಬಚದುರನ ನೋಡಾ ! ತನ್ನ ಸತಿಯು
ಮೂಕೊರಿತೆ, ತನ್ನ ಕೈಯುಲು ಹಾವು
ತನ್ನ ಭಿನ್ನವನರಿಯದೆ ಅನ್ಯರನೆಂ
ಬ ಕುನ್ನಿಯನೇ ನೆಂಬೆ ಕೂಡಲ
ಸಂಗಮದೇವಾ "

ಇನ್ನು ಬಸವಣ್ಣನವರ ವರ್ಣನಾಚಾತುರ್ಯದ ವಿಚಾರದಲ್ಲಿ ಒಂದು ಮಾತನ್ನು ಹೇಳಬೇಕಾಗಿದೆ. ಸಾವಿರಾರು ಪದ್ಯಗಳನ್ನು ಮಿಾಸಲಾಗಿರಿಸಿ ಅಷ್ಟಾದಶ ವರ್ಣನೆಯನ್ನು ಮಾಡುವುದು ಮಾತ್ರವೇ ವರ್ಣನೆಯಲ್ಲ. ಸಹಜವಾದ, ಸರಳವಾದ, ಲಲಿತವಾದ ಮಿತಭಾಷೆಯಲ್ಲಿ ಒಂದು ಸಾಮಾನ್ಯ ಸನ್ನಿವೇಶವನ್ನು ಪರಿಣಾಮಕಾರಿಯಾಗಿ ಓದುವವರಲ್ಲಿ, ಕೇಳುವವರಲ್ಲಿ ರಸೋದ್ರೇಕಗೊಳಿಸುವ ರೀತಿಯಲ್ಲಿ ಮಾಡುವ

ವರ್ಣನೆಯೂ ವರ್ಣನೆಯೇ ಎಂಬುದನ್ನು ನಾವು ಈ ವಚನದಲ್ಲಿ ಮನಗಾಣಬಹುದಾಗಿದೆ.

“ ಮನ ಮನ ಬೆರಸಿದಲ್ಲಿ ತನು
ಕರಗದಿದ್ದಡೆ, ಸೋಂಕಿನಲ್ಲಿ ಪುಳ
ಕಂಗಳು ಹೊರ ಸೂಸದಿದ್ದಡೆ ಕಂ
ಡಾಗಳಶ್ರು ಜಲಂಗಳು ಸುರಿಯ
ದಿರ್ದಡೆ ನುಡಿಯಲ್ಲಿ ಗದ್ಗದಂಗಳು
ಪೊಣ್ಮದಿದ್ದಡೆ ಕೂಡಲ ಸಂ
ಗಮ ದೇವರ ಭಕ್ತಿಗಿದು ಚಿಹ್ನ.
ಎನ್ನಲ್ಲಿ ಇಲ್ಲವಾಗಿ ನಾನು ಡಂಭಕ
ಕಾಣಿರೇ ”

ಈ ವಚನದಲ್ಲಿ ಭಕ್ತಿಯ ವರ್ಣನೆಯನ್ನು ಎಷ್ಟು ಹೃದಯಂಗಮವಾಗಿಯೂ, ಎಷ್ಟು ಸಂಪೂರ್ಣವಾಗಿಯೂ, ಎಷ್ಟು ಸಹಜವಾಗಿಯೂ ಮಾಡಿದ್ದಾರೆಂಬುದನ್ನು ನಾವು ನೋಡಬಹುದಾಗಿದೆ. ಈ ವಚನದಲ್ಲಿ ಮತ್ತೊಂದು ವಿಶೇಷವನ್ನು ನಾವು ಕಾಣಬಹುದು. ಬಸವಣ್ಣನವರು ಭಕ್ತಿಯ ಭರದಲ್ಲಿ ಭಕ್ತಿಯ ವಿಚಾರವಾಗಿಯೇ ಬರೆಯುತ್ತಾ ನುಡಿಯಲ್ಲಿ ಗದ್ಗದಂಗಳು ಪೊಣ್ಮದಿದ್ದಡೆ ಎಂದು ಬರೆದು ಅಲ್ಲಿಗೆ ಮೂಕನಾಗಿ ಆ ವಾಕ್ಯವನ್ನು ಪೂರ್ಣಮಾಡದೆಯೇ ಮುಂದಿನ ಹೊಸ ವಾಕ್ಯವನ್ನು ಬರೆದು ಗದ್ಗದಂಗಳನ್ನು ತಾವೇ ಅನುಭವಿಸಿದ್ದಾರೆ.

ಇನ್ನು ಕನ್ನಡದಲ್ಲಿ ಅಧ್ಯಾತ್ಮ ವಿಚಾರಗಳನ್ನು ವಿವೇಚಿಸಲು ಕನ್ನಡ ಭಾಷೆಗೆ ಸಾಮರ್ಥ್ಯವಿದೆಯೇ ? ಎಂದು ಯಾರಾದರೂ ಕೆಣಕಿ ಮಾತನಾಡಬಹುದು. ಬಸವಣ್ಣನವರು ಕೇವಲ ಭಾಷೆಯನ್ನು ಉದ್ಧರಿಸಬೇಕೆಂದು ಉದ್ಯಮಗೊಂಡವರಲ್ಲ. ಅವರು ಜನ ಸಾಮಾನ್ಯಕ್ಕೆ ಅರಿವನ್ನುಂಟು ಮಾಡಬೇಕೆಂದು ಹೊರಟವರು. ಅಧ್ಯಾತ್ಮದ ವಿಚಾರದಲ್ಲಿಯೂ ಸಹ ಅವರು ಜನಸಾಮಾನ್ಯಕ್ಕೆ ಅಖಂಡವಾದ ಜ್ಞಾನವನ್ನುಂಟು ಮಾಡಿಕೊಟ್ಟಿದ್ದಾರೆ. ಇದಕ್ಕೆ ಅವರ ಷಟ್ಸ್ಥಲದ ವಚನಗಳೇ ಸಾಕ್ಷಿ. ಘಂಟೆಗಟ್ಟಲೆ, ದಿನಗಟ್ಟಲೆ ವರುಷಗಟ್ಟಲೆ ಚರ್ಚಿಸಿ ಕೊನೆಗೂ ಜಿಜ್ಞಾಸುಗಳಾಗಿಯೇ ಉಳಿಯುವಂತೆ ಮಾಡುವ ವಿಶ್ವದ ತತ್ವಗಳನ್ನು

ಅವರು ಸುಲಭವಾಗಿ ಎರಡೆಂಡೇ ಮಾತುಗಳಲ್ಲಿ ಸಹಜವಾದ ಸಾಮ್ಯಗಳ ಮೂಲಕ ಜನಸಾಮಾನ್ಯಕ್ಕೆ ಶ್ರುತಪಡಿಸಿದ್ದಾರೆ. ಅವರು ನಿರೂಪಿಸಿದ ಷಡಸ್ಥಲ ವಚನಗಳಲ್ಲಿ ಒಂದೆರಡನ್ನು ಇಲ್ಲಿ ತಮ್ಮ ಅವಗಾಹನೆಗೆ ತರುತ್ತೇನೆ.

"ಬಯುಲರೂಪ ಮಾಡಬಲ್ಲಾತನೇ
ಶರಣನು ಆ ರೂಪ ಬಯುಲ
ಮಾಡಬಲ್ಲಾತನೇ ಲಿಂಗಾನು
ಭಾವಿ. ಈ ಉಭಯ ಒಂದಾದರೆ
ನಿಮ್ಮಲ್ಲಿ ತೆರಹುಂಟೇ ಕೂಡಲ
ಸಂಗಮದೇವಾ"

ಈ ವಚನದಲ್ಲಿ ಬಸವಣ್ಣನವರು ವಿಶ್ವದ ಅತಿ ಮುಖ್ಯವಾದ ತತ್ವವನ್ನು ನಿರೂಪಿಸಿದ್ದಾರೆ. ಬಯುಲನ್ನು ರೂಪ ಮಾಡುವುದು ಲೌಕಿಕ ವ್ಯವಹಾರಕ್ಕೆ ಸಮಂಧ ಪಟ್ಟದು. ಮಾನವನು ತ್ರಿವಿಧ ಸಂಪಾದನೆಗಳನ್ನು ಮಾಡಬೇಕೆಂಬುದೇ 'ಬಯಲರೂಪ ಮಾಡ ಬಲ್ಲಾತನೇ ಶರಣನು' ಎಂಬುದಕ್ಕರ್ಥ. ಆ ರೂಪ ಬಯುಲ ಮಾಡುವುದು ಪಾರಮಾರ್ಥಿಕ ವ್ಯವಹಾರಕ್ಕೆ ಸಂಮಂಧಪಟ್ಟದು. ಸಂಪಾದಿಸಿದ ತನು ಮನ ಧನವೆಂಬ ಸಂಪಾದನತ್ರಯುವನ್ನ ಮಾನವರು ಗುರುಲಿಂಗಜಂಗಮಕ್ಕೆ ಎಂದರೆ ಲೋಕಸೇವೆಗೆ ಸಮರ್ಪಿಸಬೇಕೆಂಬುದು, ಆ ರೂಪ ಬಯುಲ ಮಾಡಬಲ್ಲಾತನೇ ಲಿಂಗಾನುಭಾವಿ, ಎಂಬುದಕ್ಕರ್ಥ. ಈ ರೀತಿ ಬಸವಣ್ಣನವರು ಒಂದು ಚಿಕ್ಕ ಕನ್ನಡ ವಚನದಲ್ಲಿ ಎಂತಹ ದೊಡ್ಡ ಅರ್ಥವನ್ನು ತುಂಬಿದ್ದಾರೆಂಬುದನ್ನು ನಾವು ನೋಡಬಹುದಾಗಿದೆ.

"ಏನನಾದರೆಯೂ ಸಾಧಿಸಬಹುದು
ಮತ್ತೇನನಾದರೆಯೂ ಸಾಧಿಸಬಹುದಯ್ಯ.
ತಾನಾರೆಂಬುದ ಸಾಧಿಸಬಾರದಯ್ಯಾ.
ಕೂಡಲಸಂಗಮದೇವರ ಕರು
ಣವುಳ್ಳವಂಗಲ್ಲದೆ."

ಈ ವಚನದಲ್ಲಿ ಬಸವಣ್ಣನವರು "ತತ್ವಮಸಿ" ಎಂಬ ಮಹಾವಾಕ್ಯದ ಅರ್ಥವನ್ನು ಎಷ್ಟು ಸರಳವಾಗಿ ವಿವರಿಸಿದ್ದಾರೆಂಬುದನ್ನು ನೋಡಬಹುದಾಗಿದೆ.

ಇನ್ನು ಬಸವಣ್ಣನವರ ಶೈಲಿಯ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳಿ ನನ್ನ ಉಪನ್ಯಾಸವನ್ನು ಮುಗಿಸುತ್ತೇನೆ. ಸಾಹಿತಿಗಳ ಶೈಲಿಯನ್ನು ಹೀಗೇ ಇರಬೇಕೆಂದು ಯಾರೂ ನಿರ್ಣಯಿಸುವುದಕ್ಕೆ ಬರುವುದಿಲ್ಲ. ಒಬ್ಬೊಬ್ಬರ ಶೈಲಿ ಒಂದೊಂದು ವಿಧವಾಗಿರುತ್ತದೆ. ನೂರು ಜನ ಬರೆದರೆ ನೂರು ವಿಧದ ಶೈಲಿಯನ್ನು ನಾವು ಕಾಣಬಹುದಾಗಿದೆ. ಎಂದರೆ ಶೈಲಿಯ ವಿಚಾರದಲ್ಲಿ ಯಾವ ಕಟ್ಟುಪಾಡುಗಳೂ ಇಲ್ಲ. ಆದರೆ ಶೈಲಿ ಚನ್ನಾಗಿದೆಯೋ ಇಲ್ಲವೆಂಬದನ್ನು ಮಾತ್ರ ಯಾರು ಬೇಕಾದರೂ ಹೇಳಬಹುದಾಗಿದೆ ಬಸವಣ್ಣನವರ ಶೈಲಿ ಅನುಪಮವಾದ ಶೈಲಿ. ಅವರ ಶೈಲಿಯ ಹಿಂದೆ ಅವರ ಒಂದು ಮುಖ್ಯವಾದ ಗುಣವಿಶೇಷವನ್ನು ನಾವು ನೋಡಬಹುದಾಗಿದೆ. ಆ ಗುಣವಿಶೇಷವನ್ನು ನಾವು ಅರಿತದ್ದೇ ಆದರೆ ಅವರ ಶೈಲಿಯ ಓಜಸ್ಸಿಗೆ ತೇಜಸ್ಸಿಗೆ ಕಾರಣವೇನೆಂಬುದನ್ನು ನಾವು ಅರಿತಂತಾಗುತ್ತದೆ. ಅನುಕಂಪನವೇ ಬಸವಣ್ಣನವರ ಶೈಲಿಯ ತಳಹದಿ ಬಸವಣ್ಣನವರು ಯಾವ ನುಡಿಯನ್ನೇ ತೆಗೆದುಕೊಂಡರೂ ಅದರಲ್ಲಿ ನಾವು ಅನುಕಂಪನವನ್ನು ಕಾಣಬಹುದಾಗಿದೆ. ಅನುಕಂಪನವೆಂದರೆ ಮರುಕ. ಬಸವಣ್ಣನವರಿಗೆ ಮಾನವರ ಮೇಲೆಯೇ ಅಲ್ಲ, ಸಕಲ ಜೀವಕೋಟಿಗಳಮೇಲೂ ಮರುಕವನ್ನು ಉಳ್ಳವರಾಗಿದ್ದರು. ಉದಾಹರಣೆಗೆ ಈ ಒಂದು ವಚನವನ್ನು ತಮಗೆ ಹೇಳುತ್ತೇನೆ.

"ಹಬ್ಬಕ್ಕೆ ತಂದ ಹರಕೆಯ
ಕುರಿ ತೋರಣಕ್ಕೆ ತಂದ ತಳಿರ
ಮೇಯಿತ್ತು. ಕೊಂದಿಹರೆಂಬು
ದನರಿಯದೆ ಬೆಂದೊಡಲ
ಹೊರೆವುತ್ತಲಿದೆ. ಅದಂದೆ
ಹುಟ್ಟಿತ್ತು. ಅದಂದೆ ಹೊಂದಿ
ತ್ತು. ಕೊಂದವರುಳಿದರೇ ?
ಕೂಡಲಸಂಗಮದೇವಾ"

ಈ ವಚನದಲ್ಲಿ ಬಡಕುರಿಯ ಮುಗ್ಧತೆಯನ್ನು (*Innocense*) ವರ್ಣಿಸಿ, ಅದರ ಮುಂದಿನ ಗತಿಯ ಸನ್ನಿವೇಶವನ್ನು ಚಿತ್ರಿಸಿ ಬಸವಣ್ಣನವರು ಆ ಬಡಪ್ರಾಣಿಯ ವಿಚಾರದಲ್ಲಿ ಎಂತಹ ಅನುಕಂಪನವನ್ನು ತೋರಿಸಿದ್ದಾರೆಂಬುದನ್ನು ಮತ್ತು ಈ ವಚನವನ್ನು ಕೇಳಿದವರೂ ಸಹ

ಜೀವಕೋಟಿಗಳಮೇಲೆ ಅನುಕಂಪನವನ್ನು ತೋರಿಸುವಂತೆ ಮಾಡಿರುತ್ತಾರೆಂಬುದನ್ನು ನಾವು ನೋಡಬಹುದಾಗಿದೆ.

ಈ ರೀತಿಯಲ್ಲಿ ಬಸವಣ್ಣನವರು ಕನ್ನಡ ಸಾಹಿತ್ಯಕ್ಕೆ ಮಾಡಿರುವ ಸೇವೆ ಅಪಾರವಾದುದಾಗಿದೆ. ನಾನು ಮೊದಲೇ ಹೇಳಿದಂತೆ ಬಸವಣ್ಣನವರು ಸ್ವತಃ ವಚನಗಳನ್ನು ರಚಿಸಿದುದಲ್ಲದೆ ಅನಂತಾನಂತ ಶಿವಶರಣರ ಕೈಯಲ್ಲೂ ವಚನಗಳನ್ನು ನಿರ್ಮಿಸಿ ಎರಡೆಂಭತ್ತು ಕೋಟಿ ವಚನಗಳಿಗೆ ಕಾರಣರಾಗಿದ್ದಾರೆ. ಇಂತಹ ಮಹಾನುಭಾವರಾದ ಬಸವಣ್ಣನವರು ಕನ್ನಡ ಭಾಷೋದ್ಧಾರಕರಾಗಿರುವುದಲ್ಲದೆ ಕನ್ನಡ ಭಾಷಾ ಜನಕರೂ ಆಗಿದ್ದಾರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

---

## ಲಿಂಗಧಾರಣ—ಲಿಂಗಪ್ರತಿಜ್ಞೆ.

(ಲೇಖಕ:— ಶ್ರೀಯುತ ಜಿ. ಆರ್. ಭಸ್ಮಾಂಗದೇವರು ಶಿಡ್ಲಘಟ್ಟ.)

---

ಈ ಚೀಚಿನ ಮಾಸಪತ್ರಿಕೆಗಳಲ್ಲಿ ಪ್ರಕಟವಾಗುವ ಲೇಖನಗಳು ಸಾಧಕರ ಮನಸ್ಸನ್ನು ಅಲ್ಲೋಲಕಲ್ಲೋಲ ಮಾಡುತ್ತಿವೆ. ವಾದಗಳನ್ನು ಲಿಖಿಸುವರು ಬಹಳ ಬುದ್ಧಿವಂತರಾಗಬೇಕು. ವಿಧಾನವು ಇನ್ನು ಉತ್ತಮತರದ ಮಟ್ಟದಲ್ಲಿ ಬೆಳೆಯಬೇಕು. ಹಾಗಲ್ಲದೆ ವಾದಗಳನ್ನು ಮಾಡುತ್ತಾ ಮಾಡುತ್ತಾ ತಮ್ಮನ್ನು ತಾವು ಮರೆತು ಉತ್ತಮ ವಾದಗಳ ಗೌರವಗಳನ್ನು ಕಾಪಾಡಿಕೊಳ್ಳದೆ ಮನಕ್ಕೆ ಹೊಳೆದದ್ದನ್ನೂ ಲೇಖನಿಗೆ ಬಂದದ್ದನ್ನೂ ಬರೆಯುತ್ತಾ ಭಾಷೆಯ ಗೌರವ, ಓದುಗರ ಗೌರವ, ಸಮಾಜದ ಗೌರವ ಆದಿಗಳಿಗೆ ತೆರೆಯನ್ನು ಒಡ್ಡುವುದು ಯುಕ್ತವಲ್ಲ. ತಪ್ಪು ಮಾರ್ಗಗಳಲ್ಲಿ ಸಾಗುವ ವಾದಗಳಿಂದ ಸಮಾಜದಲ್ಲಿಯೂ ಜನಾಂಗದಲ್ಲಿಯೂ ತಪ್ಪು ಭಾವನೆಗಳು ಪ್ರಚುರ ಹೊಂದಿ ಮಾನವನ ಉನ್ನತಿಗೆ ಧಕ್ಕೆ ಬರುತ್ತಿದೆ ಎಂದು ಅನೇಕ ಅನುಭಾವಿಗಳು ವ್ಯಸನಪಡುತ್ತಾರೆ. "ಬೆಂಗಳೂರಿನವರ ಗುಂಪಂತೆ," "ಉತ್ತರ ದೇಶದವರ ಗುಂಪಂತೆ" ಎನ್ನುವ

ಅರ್ಥವನ್ನು ಸೂಚಿಸುವ ಲೇಖನಗಳು ಸಮಾಜದ ಯಾವ ಅಭಿಮಾನಿ ಯನ್ನು ಸಂಕಟಕ್ಕೆ ಗುರಿ ಮಾಡುವುದಿಲ್ಲ?

ವಿಶಾಲವಾದ ವೀರಶೈವ ಅಥವ ಲಿಂಗಾಯತ ತತ್ವವೆಲ್ಲಿ! ನಾವೆಲ್ಲಿ! ಕ್ರಿಯಾ ಜ್ಞಾನ ಸಂಮಿಳಿತದಿಂದ ಅನುಭವಿಸಿದ ಅನುಭವವನ್ನು ಪ್ರಕಟಿಸಿ ಈ ಲೇಖಕರು ತಮ್ಮ ಧ್ಯೇಯವನ್ನು ಉತ್ತಮೋತ್ತಮದ ಮಟ್ಟದಲ್ಲಿ ಬೆಳಗಬೇಕೆಂದು ಪ್ರತಿಯೊಂದು ಲೇಖನಿಯ ಅಡಿಯಲ್ಲಿನಿಂತು ಬೇಡುತ್ತೇನೆ.

## ಲಿಂಗಧಾರಣ ಮಹೋತ್ಸವ

ಶಿವಶರಣ ಶರಣೆಯರ ಶರೀರಗಳು ಲಿಂಗಶರೀರಗಳು ಎನ್ನುವ ವಿಚಾರಗಳನ್ನು ನಾವು ಪ್ರತಿಯೊಬ್ಬ ಶಿವಾನುಭವಿಯ ಮುಖದಿಂದ ಕೇಳುತ್ತೇವೆ. ಇಂಥವರ ಗರ್ಭದಿಂದ ಒಗೆದ ಶಿಶುವು ಲಿಂಗೋದ್ಭವವೆಂದು ಎಲ್ಲರೂ ಭಾವಿಸಬಹುದು. ವಿಮರ್ಶೆಯನ್ನು ಶಾಂತವಾಗಿ ನಡಿಸಿದರೆ ಶಿಶುವು ಲಿಂಗೋದ್ಭವ ಅಥವಾ ಮಂತ್ರಪಿಂಡ ಎನ್ನುವುದು ಸಹಜವಾಗಿರುತ್ತದೆ. ಆದರೂ ಲಿಂಗಾಂಗಸಾಮರಸ ಅಥವಾ ಲಿಂಗಾಂಗಸಾಮರಸ್ಯವನ್ನು ತಿಳಿದ ಮಾತಾಪಿತೃಗಳಿಗೂ ಬಂಧು ಸಖವರ್ಗದವರಿಗೂ ಆ ಶಿಶುವು ಲಿಂಗೋದ್ಭವವೆಂದೂ ಆ ಶಿಶುವಿನ ಭಾವದಲ್ಲಿ ಲಿಂಗಾಂಗ ಸಮರಸ ಮೊಳಕೆ ಬೆಳೆಯುತ್ತಿರುವುದೆಂದೂ ಭಾವಿಸುತ್ತಾರೆಯೇ ಹೊರತು ಮಿಕ್ಕ ಜನಗಳು ಭಾವಿಸುವುದಿಲ್ಲ. ಆ ಮಗುವಿಗಂತೂ ತಾನು ಲಿಂಗ ಸ್ವರೂಪಿ ಎಂದು ತಿಳಿದು ಕ್ರಿಯಾ ಜ್ಞಾನ ಸಂಮಿಳಿತವಾದ ಭಾವವೂ ಜ್ಞಾನವೂ ಪರಿಪೂರ್ಣವಾಗಿ ತಿಳಿದುಬರುವುದು ದೂರವೇ ಉಳಿಯಿತು. ತಂದೆತಾಯಿಗಳು ತಮ್ಮ ತಮ್ಮ ಧರ್ಮವನ್ನು ಕಾಪಾಡಿಕೊಂಡು ಅದನ್ನು ಬೆಳಿಸುತ್ತಾ ಬರಲು ಗರ್ಭಾಷ್ಟಮಮಾಸದಲ್ಲಿಯೋ ಹುಟ್ಟಿದ ದಿವಸವೋ ಹುಟ್ಟಿದ ಕೆಲವಾರು ದಿನಗಳಲ್ಲಿಯೋ ಲಿಂಗನಿಷ್ಠರ, ಮಹೇಶ್ವರರ, ಅಯ್ಯನವರ, ಜಂಗಮರ, (ಆಯಾ ನಾಡಿನ ಹೆಸರಿಗೆ ತಕ್ಕಂತೆ) ಮೂಲಕ ತಮ್ಮ ತಮ್ಮ ಭಕ್ತ್ಯಾನುಸಾರ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾನುಭವಕ್ಕೆ ತಕ್ಕಂತೆ ಆ ಶಿಶುವಿಗೆ ಲಿಂಗಧಾರಣೆಯನ್ನು ಮಾಡಿಸುವರು. ಒಂದೊಂದು ಪ್ರಾಂತ್ಯದಲ್ಲಿ ಆಚರಣೆಯು ಬೇರೆ ಬೇರೆ ಇದ್ದರೂ ಅದರ ಅನುಭಾವವು ಒಂದೇ. ಅಂತೂ ಇದಕ್ಕೆ ಲಿಂಗಧಾರಣ ಮಹೋತ್ಸವವೆಂದು ಎಲ್ಲಾ ನಾಡಿನವರು ಒಂದೇ ಧ್ವನಿಯಿಂದ ಕರೆಯುತ್ತಾರೆ ಎನ್ನುವುದನ್ನು ಎಲ್ಲರೂ ಒಪ್ಪುವರು ಎಂದು ನಂಬುತ್ತೇನೆ.

ಭವಿಯಾಗಿರುವ ಇತರ ಜನಾಂಗವನ್ನು ಭಕ್ತರನ್ನಾಗಿ ಅಥವಾ ಲಿಂಗಾಯಿತರನ್ನಾಗಿ ಮಾರ್ಪಡಿಸಿ, ಸಮಾಜದವರೆಲ್ಲರೂ ಕೂಡಿ ಅವರನ್ನು ಗೌರವಿಸಿ ಅವರೂ ಸಮಾಜದ ಒಂದು ಅಂಗವೆಂದು ತಿಳಿದು ಬಳಕೆಯನ್ನು ಮಾಡುವ ಸಮಾರಂಭಕ್ಕೆ ಲಿಂಗಧಾರಣ ಸಂಸ್ಕಾರವೆಂದೂ ಲಿಂಗಧಾರಣ ಮಹೋತ್ಸವವೆಂದೂ ವೀರಶೈವ ಸಂಸ್ಕಾರ ದೀಕ್ಷಾಮಹೋತ್ಸವವೆಂದೂ ಬೇರೆ ಬೇರೆ ಹೆಸರಿನಿಂದ ಆಯಾ ದೇಶಕ್ಕೆ ತಕ್ಕಂತೆ ಕರೆದರೂ ಅದರ ಅನುಭಾವವೂ ಒಂದೇ. ಒಟ್ಟಿನಲ್ಲಿ ಲಿಂಗಾಯಿತರಾಗುವ ವ್ಯಕ್ತಿಗಳು ಲಿಂಗಾಧಾರಿಯಾಗಿ ಲಿಂಗಪೂಜೆ ಕ್ರಿಯೆಗಳನ್ನು ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಾನುಭವಕ್ಕೆ ತಕ್ಕಂತೆ ನಡೆದುಕೊಂಡು ತಾವೂ ತಮ್ಮ ಕೈಲಾದಮಟ್ಟಿಗೆ ಧರ್ಮವನ್ನು ಕಾಪಾಡಿಕೊಂಡು ಬರುತ್ತೇವೆ ಎಂದು ಪ್ರತಿಜ್ಞೆಯನ್ನು ಮಾಡುವ ಒಂದು ಸಮಾರಂಭವೆಂದೂ ಕರೆಯಬಹುದು. ಇವರೂ ತಮ್ಮ ತಮ್ಮ ಸಂಸ್ಕಾರಗಳನ್ನು ಬೆಳೆಯಿಸಿಕೊಂಡು ಲಿಂಗಾಂಗಸಮರಸ ಸುಖವನ್ನು ಕ್ರಮೇಣವಾಗಿ ಪಡೆಯುತ್ತಾ ಸಾಗುತ್ತಾರೆ.

ಇನ್ನು ಲಿಂಗಧಾರಿ ಶಿಶುವಿನ ವಿಚಾರವನ್ನು ಮಾಡಿದರೆ ಮಗುವು ಬೆಳೆದ ಹಾಗೆಲ್ಲಾ ತಂದೆತಾಯಿಗಳ ಸಂಸ್ಕೃತಿಯಂತೆ ಲಿಂಗವನ್ನು ಪೂಜಿಸಲು ಸುಮಾರು ತನ್ನ ಒಂದ ವರೆ ವರುಷದ ವಯಸ್ಸಿನಿಂದ ಮೊದಲು ಮಾಡುವುದು. ತಂದೆತಾಯಿಗಳ ಅನುಕರಣವನ್ನೇ ಮಾಡಲಿ, ದೃಢತ ಭಾವನೆಯಿಂದಲೇ ಪೂಜಿಸಲಿ, ಆ ಮಗುವು ತನಗೂ ಲಿಂಗಕ್ಕೂ ಇರುವ ಸಮರಸ ತತ್ವವನ್ನು ಸ್ಪಷ್ಟವಾಗಿ ತಿಳಿದಿರುವುದಿಲ್ಲ. ಆದರೂ ಭಕ್ತಿಯು ಅಂಕುರವಾಗಿ ಬೆಳೆಯುತ್ತಾ ಹೋಗುತ್ತದೆ. ಐದು ಆರು ಹತ್ತು ವಯಸ್ಸಿನ ಹುಡುಗನಾಗುವ ಕಾಲದಲ್ಲಿ ತಾನು ಮಾಡುವ ಲಿಂಗಪೂಜೆಯ ತತ್ವವನ್ನು ಮುಖ್ಯವಾಗಿ ತಿಳಿಯಬೇಕೆಂಬ ಆಸೆಯು ಮೂಡಬಹುದು. ಆಟಪಾಠಗಳಿಂದ ಕೂಡಿರುವ ಚಂಚಲ ಮನಸ್ಸುಳ್ಳ ಹುಡುಗರಿಗೆ ಈ ಆಸೆ ಹುಟ್ಟುವದು ಬಹಳ ವಿರಳ. ತನ್ನ ಕರ್ತವ್ಯವನ್ನು ತಿಳಿಯಬೇಕೆಂದು ಇಚ್ಛೆಪಡುವ ಹುಡುಗರು ಸಿಕ್ಕುವದು ಬಹಳ ಕಡಿಮೆ ಸಂಖ್ಯೆ. ಅಂದಮೇಲೆ ತನಗೆ ಚಿಕ್ಕಂದಿನಲ್ಲಿಯೇ ಶ್ರೀ ಗುರುವಿನ ಉಪದೇಶವಾಗಿದೆ, ನಾನು ಅಷ್ಟಾವರಣ, ಪಂಚಾಚಾರ, ಷಡುಸ್ಥಲಯುಕ್ತವಾಗಿ ಕ್ರಿಯಾಜ್ಞಾನ ಸಂಮಿಳಿತನಾಗಿ ಲಿಂಗಾಂಗ ಸಮರಸವನ್ನು ಹೊಂದಬೇಕು,

ಲಿಂಗಪ್ರಾಣಿಯಾಗಿರಬೇಕು ಎನ್ನುವ ವಿಚಾರವು ಆ ಹುಡುಗನಿಗೆ ದೂರವೇ ಉಳಿಯಿತು. ಆದುದರಿಂದ ಸರಿಯಾದ ಮಾರ್ಗದಲ್ಲಿ ಎಲ್ಲರನ್ನು ನಡಿಸುವ ಹಿಂದಿನ ಉಪದೇಶವನ್ನು ವಿವರಿಸಿ ತಿಳಿಸುವ ಅನುಭಾವ ಮಾಡಿಕೊಡುವ ವೇಳೆಯು ಪ್ರಾರಂಭವನ್ನು ಆ ಹುಡುಗನಿಗೆ ಜ್ಞಾನ ಅನುಭವಗಳನ್ನು ಆಕರ್ಷಣ ಮಾಡಿಕೊಳ್ಳುವ ಶಕ್ತಿ ಬಂದಾಗ ಮೊದಲು ಮಾಡಬೇಕಾಗಿದೆ. ಬೋಧಕನ— ಬೋಧಿಸಿಕೊಳ್ಳುವವನ ಮನಸ್ಸುಗಳು ಒಂದೇ ಮಟ್ಟದಲ್ಲಿದ್ದರೆ ಆ ಬೋಧೆ ಫಲಕೊಂದುವದು. ಬೋಧಕರು ಅರ್ಥಾತ್ ಶ್ರೀಗುರುವು ಲಿಂಗಾಂಗ ಸಮರಸವನ್ನು ವಿಶದವಾಗಿ ತಾನೂ ತಿಳಿದು ಅನುಭವಿಸಿ ಅನುಭಾವ ಮಾಡಿಕೊಳ್ಳುವವನಾಗಿರಬೇಕು. ಆ ಹುಡುಗನ ಮಟ್ಟಕ್ಕೆ ಇಳಿದು ಅನುಭಾವ ಮಾಡಿಕೊಡುವ ವಿಧಾನವು ಸುಲಭವಾದುದಲ್ಲ. ಅನುಭಾವವಿಲ್ಲದೆ ಹಣೆಯಲ್ಲಿ ಧರಿಸಿ ಕೊರಳಲ್ಲಿ ಕಟ್ಟಿ ಕಿವಿಯಲ್ಲಿ ಹೇಳುವ ಕಾರ್ಯವನ್ನು ನಾನೂ ಮಾಡಬಿಟ್ಟೆ, ಕೆಲಸವು ಪೂರೈಸಿತು, ಎಂದು ತಿಳಿಯುವನಾಗಬಾರದು.

ಅಭ್ಯಾಸಿಯು ತನಗೆ ಅಕ್ಷರಾಭ್ಯಾಸವಾಗಿದೆ, ಇಷ್ಟೇ ಸಾಕು, ಮುಂದಿನ ಜ್ಞಾನವು ಇಷ್ಟರಲ್ಲಿಯೇ ತಿಳಿಯಬಹುದು ಎಂದು ತಿಳಿದು ನಿಂತಲ್ಲಿಯೇ ನಿಂತರೆ ಪರಿಪೂರ್ಣ ಜ್ಞಾನವನ್ನು ಸರ್ವಾಂಗಸುಂದರವಾದ ಅನುಭಾವವನ್ನು ಪಡೆಯಲಾರನು ಎನ್ನುವುದು ಅನೇಕರಿಗೆ ಅನುಭಾವಕ್ಕೆ ಬರುತ್ತದೆ. ಶ್ರೀಗುರುವಿನ ವಾಕ್ಯದಲ್ಲಿಯೂ ಗುರುಹಿರಿಯರ ನಿತ್ಯಾಚರಣೆಗಳಲ್ಲಿಯೂ ನಂಬುಗೆಯನ್ನಿಟ್ಟು ತನ್ನ ಸ್ವಾನುಭಾವವನ್ನು ಅವುಗಳಿಗೆ ಹೋಲಿಸುತ್ತಾ ತನ್ನಲ್ಲಿರುವ ತಪ್ಪುಗಳನ್ನು ವಿಚಾರಪೂರ್ವಕವಾಗಿ ತಿಳಿಯುವುದು ಅವುಗಳನ್ನು ಮಾರ್ಪಡಿಸಿಕೊಳ್ಳುವುದು ಅಭ್ಯಾಸಿಯ ಕರ್ತವ್ಯವು.

ಸಾಂಗವಾಗಿ ಅಭ್ಯಾಸ ಮಾಡುವುದು ಹುಟ್ಟಿದವರೆಲ್ಲರಿಗೂ ಸಾಧ್ಯವಿಲ್ಲವೆಂಬುದು ತಿಳಿದ ಸಂಗತಿಯೇ ಆಗಿರುತ್ತದೆ. ಆದುದರಿಂದ ಮೊದಲು ಮೊದಲು ಆಚರಣೆಗಳನ್ನು ಪ್ರಾರಂಭಮಾಡುವರು ತಾನು ಸ್ನಾನವನ್ನು ಮಾಡುವದು, ವಿಭೂತಿಯನ್ನು ಇಟ್ಟು ರುದ್ರಾಕ್ಷಿಗಳನ್ನು ಧರಿಸಿ ಶಿವಪೂಜೆಯನ್ನು ಹೂಪತ್ರೆ ಮೊದಲಾದವುಗಳಿಂದ ಅಲಂಕರಿಸಿ ಶಿವಶಿವಹರ ಮಹಾದೇವ ಎಂದು ಕೈಮುಗಿದು ದೂಪ ದೀಪಗಳು ಬೆಳಗಿ ನಮ

ಸ್ಕಾರಗಳನ್ನು ಮಾಡುವ ವಿಧಾನವನ್ನು ಬೋಧಿಸುವರು. ಇದಕ್ಕೆ "ಸೆರೆಯನ್ನು ಬಿಡಿಸುವುದು" ಎಂದು ಅನೇಕ ಪ್ರಾಂತಗಳಲ್ಲಿ ಹೇಳುತ್ತಾರೆ. ಅಂದರೆ ತನ್ನ ಕರ್ತವ್ಯವನ್ನು ಮರೆತು ಇದ್ದವನನ್ನು ಕರ್ತವ್ಯಪರನನ್ನಾಗಿ ಮಾಡುವುದು. ಅಲ್ಲಿಗೆನೆ ಲಿಂಗಾಂಗ ಸಾಮರಸ್ಯವನ್ನು ಪರಿಪೂರ್ಣವಾಗಿ ಪಡೆದಂತಾಗಲಿಲ್ಲವಾದರೂ ಅನೇಕ ಕಡೆಗಳಲ್ಲಿ ಅನೇಕರು ಮುಂದಿನ ತತ್ವಗಳನ್ನು ಕಾರ್ಯಗಳನ್ನು ಅನುಭವಕ್ಕೆ ತಂದುಕೊಳ್ಳುವುದೇ ಇಲ್ಲ. ಈ ರೀತಿಯಾದ ಅಪರಿಪೂರ್ಣಜ್ಞಾನದಿಂದ ನಮ್ಮ ಸಮಾಜವು ಅಧೋಗತಿಗೆ ಇಳಿಯಲು ಮಾರ್ಗವಾಗುತ್ತದೆ. ಪರಿಪೂರ್ಣಜ್ಞಾನವನ್ನು ಅನುಭವ ಮಾಡಿಸಿಕೊಡಬೇಕು. ಕೆಲಕೆಲವು ಉದಾಹರಣೆಪೂರ್ವಕವೂ ಕ್ರಿಯಾತ್ಮಕವಾಗಿಯೂ ಬೋಧಿಸಿಕೊಂಡು ಲಿಂಗಾಂಗಸಂಗ ಸಮರಸ ಸುಖವನ್ನು ಹೊಂದಬೇಕು.

ಪ್ರತಿಯೊಬ್ಬ ಲಿಂಗಾಧಾರಿಯೂ ಜೀವನ್ಮುಕ್ತನೆಂಬುದು ನಿಜಕ್ಕೂ ಸರಿ. ಆದರೆ ತಾನು ಜೀವನ್ಮುಕ್ತ ಲಿಂಗಶರೀರಿ-ಲಿಂಗಪ್ರಾಣಿಯೆಂಬುದು ಅನುಭಾವಕ್ಕೆ ಬಾರದೆ ಇದ್ದರೆ ಲಿಂಗಾಂಗಸಂಗಸಮರಸ ಸುಖವನ್ನು ಪರಿಪೂರ್ಣವಾಗಿ ಪಡೆಯಲಾರ. ಅವರವರ ಭಾವಕ್ಕೆ ತಕ್ಕಂತೆ ಅವರವರ ಮಟ್ಟಕ್ಕೆ ತಕ್ಕಂತೆ ಶಿವಭಕ್ತಿಸಾಗರದಲ್ಲಿ ಈಜುವರು. ಈ ವಿಶಾಲವಾದ ಲಿಂಗಾಂಗಸಮರಸ ರಹಸ್ಯವನ್ನು ಪುಂಡು ಪೋಕರಿಗಳಿಗೆ ಜೊಳ್ಳು ಮಾತಾಡುವವರಿಗೆ ಹಾಸ್ಯ ಮಾಡುವವರಿಗೆ ಬೋಧಿಸಿ ಸಮಾಜದ ಗೌರವಕ್ಕೆ ಕುಂದು ತರಬಾರದು. ಕುಂತುತರದಂತೆ ನೋಡಿಕೊಳ್ಳಲು ಕೇವಲ ಭಕ್ತಿಯುಳ್ಳವರಿಗೆ ಬೋಧಿಸಬೇಕಾಗುತ್ತದೆ ಅವರು ಹೃದಯಪೂರ್ವಕವಾಗಿ ಸತ್ಕ್ರಿಯ ಸಮ್ಯಜ್ಞಾನಗಳಿಂದ ಧರ್ಮವನ್ನು ಕಾಪಾಡಿಕೊಂಡು ಬರತ್ತೇವೆ ಎಂದು ಶ್ರೀಗುರುವಿನ ಪಾದಸನ್ನಿಧಿಯಲ್ಲಿ ಪ್ರತಿಜ್ಞೆಯನ್ನು ಮಾಡುತ್ತಾರೆ. ಆಗ ಶ್ರೀಗುರುವು ಸಾಂಗವಾಗಿ ವಿವರವಾಗಿ ರಹಸ್ಯವನ್ನು ತಿಳಿಸುತ್ತಾನೆ. ಅಲ್ಲಿಗೆ ಸೆರೆಬಿಡಿಸುವ ಕಾರ್ಯವು ಮುಗಿಯಿತು. ಭಕ್ತಿಯೆಂಬ ಬಳ್ಳಿಯು ಬೆಳೆದು ಸುತ್ತಲೂ ವ್ಯಾಪಿಸುತ್ತಾಹೋಗುತ್ತದೆ.

## ಲಿಂಗಪ್ರತಿಜ್ಞೆ ಅಥವಾ ವೀರಶೈವ ದೀಕ್ಷೆ.

ಈ ಕಾರ್ಯವು ಪ್ರತಿಯೊಬ್ಬ ಭಕ್ತನ ಇಚ್ಛೆಗೆ ಬಿಟ್ಟಿರುವ ಕರ್ತವ್ಯವು. ತಾನು ಇನ್ನೂ ವಿಶದವಾಗಿ ಲಿಂಗಾಂಗಸಂಗಸಮರಸ ಸುಖದ

ತತ್ವವನ್ನು ತಿಳಿದು ಆಚರಿಸುತ್ತಾ ನಡೆನುಡಿಗಳಿಂದ ಸಮಾಜಕ್ಕೆ ಮಾರ್ಗ ದರ್ಶಕನಾಗಿರುವ ದೊಡ್ಡ ಜವಾಬ್ದಾರಿಯನ್ನು ಹೊತ್ತುಕೊಳ್ಳುವನಾಗ ಬೇಕು. ಎಷ್ಟು ಕಷ್ಟಬಂದರೂ ವೀರಶೈವ ತತ್ವವನ್ನೂ ಧರ್ಮವನ್ನೂ ಪಾಲಿಸುವವನಾಗಬೇಕು. ಇನ್ನೂ ಶಿವಾನುಭಾವಿಗಳ ಶ್ರೀಗುರುವಿನ ಸನ್ನಿಧಿ ಯಲ್ಲಿದ್ದು, ತತ್ವಗಳನ್ನು ತಿಳಿದು ತಿಳಿದು ಆಚರಣೆಗೆ ತಾನೂ ತಂದು ಕೊಂಡು ಭಕ್ತ ಮನೆಯಲ್ಲಿ ಮಹಾಪ್ರಸಾದವನ್ನು ಬಿಕ್ಷೆಯಿಂದಲಾದರೂ ಬೇಡಿ ವೀರಶೈವ ತತ್ವವನ್ನು ಪ್ರಚುರಪಡಿಸಿ ಜಗತ್ತನ್ನು ಲಿಂಗಮಯ ವನ್ನಾಗಿ ಮಾರ್ಪಡಿಸಲು ಸರ್ವಪ್ರಯತ್ನವನ್ನು ತನ್ನ ಕೈಲಾದ ಮಟ್ಟಿಗೂ ಮಾಡುತ್ತೇವೆ ಎಂದು ಸಮಾಜದವರ—ಶಿವಾನುಭಾವಿಗಳ—ಸನ್ನಿಧಿಯಲ್ಲಿ ಪ್ರತಿಜ್ಞೆಯನ್ನು ಕೈಕೊಳ್ಳುವ ಸಮಾರಂಭವೇ ಹೊರತು ಕೆಲವರು ವಾದ ಕಾರರು ಹೇಳುವಂತೆಯೂ, ಕೆಲವರು ತಿಳಿದಿರುವಂತೆಯೂ, ತಿರುಪೆಗೆ ಜೋಳಿಗೆಯನ್ನು ಕಟ್ಟಿಗೆಯನ್ನು ಕೊಡುವ ಸಮಾರಂಭವಲ್ಲವೆಂದು ಇಲ್ಲಿ ಸೂಚಿಸುತ್ತೇವೆ. ಕಾಲವು ಹಳೆಯದಾದ ಹಾಗೆಲ್ಲ ಕ್ರಿಯೆಯು ಬದ ಲಾವಣೆಹೊಂದಿದರೆ ಅದು ವಿಶಾಲವಾದ ತತ್ವದ ತಪ್ಪಲ್ಲ. ಚರಿಸಿ ಚರಿಸಿ ಮಾನವ ಕೋಟಿಗೆ ಜ್ಞಾನ ಬೆಳಕನ್ನು ತೋರುವವನೇ ಜಂಗಮದೇವರು. ಪರಿಪೂರ್ಣಾನುಭಾವಿ. ಆತನೇ ಮಹಾತ್ಮನು. ಅಂಥವನ ಸೇವೆಯನ್ನು ಅಭಿನ್ನಭಾವದಿಂದಲೂ ಅಭಿನ್ನಕ್ರಿಯಾಜ್ಞಾನದಿಂದಲೂ ಮಾಡುವವನೇ ಭಕ್ತನು. ಭಕ್ತನೂ ಜಂಗಮನೂ ಒಂದೇ. ವೀರಶೈವರಲ್ಲಿ ಭಕ್ತಕುಲ ಜಂಗಮಕುಲವೆಂದಿಲ್ಲ. ಸಂಪೂರ್ಣ ಶಿವಾನುಭಾವಿಗಳಾದ ಭಕ್ತ ಜಂಗ ಮರು ಯಾವಾಗಲೂ ಸಮರಸವಾಗಿಯೇ ಇರುತ್ತಾರೆ. ಭಕ್ತಪ್ರಾಣ ಜಂಗಮ, ಜಂಗಮ ಪ್ರಾಣ ಲಿಂಗ, ಲಿಂಗದೇಹಿ ಭಕ್ತ. ಭಕ್ತಧರಿಸಿರುವುದೂ ಲಿಂಗ, ಜಂಗಮ ಧರಿಸಿರುವುದೂ ಲಿಂಗ. ಎಲ್ಲರಿಗೂ ಅಷ್ಟಾವರಣವೇ ಅಂಗವಾಗಿ ಪಂಚಾಚಾರವೇ ಪ್ರಾಣವಾಗಿ ಷಟ್‌ಸ್ಥಲವೇ ಸ್ಥಾನವಾಗಿ ಇರುವುದರಿಂದ ಇಬ್ಬರೂ ಒಂದೇ. ಇನ್ನೂರ ಹದಿನಾರು ಸ್ಥಲಗಳನ್ನು ವಿಮರ್ಶನೆ ಮಾಡುವ ಮಹಾತ್ಮರುಗಳು ಕಾಣಬಹುದು.

ಭಕ್ತನ ಐಕ್ಯಸ್ಥಲದಲ್ಲಿ-- ಜಂಗಮವ ಕೂಡಿಕೊಂಡು............ ಭಕ್ತನೊಳಗೆ ಜಂಗಮನಡಗಿ ಆ ಜಂಗಮನೊಳಗೆ ಭಕ್ತನಡಗಿ......... ನಿಮ್ಮ ಕರುಣವೆನಗಾಯಿತ್ತು ಕೂಡಲಸಂಗಮದೇವಾ. (ಬಸವಣ್ಣನ ವಚನ, ಪುಟ-೭೮. ವಚನ ೧೮.) ಆದುದರಿಂದ ಎಲ್ಲರೂ ಒಂದೇ

ಹೊರತು ಭಕ್ತಕುಲ ಬೇರೆ ಜಂಗಮಕುಲ ಬೇರೆ ಎಂದಿಲ್ಲ. ಭಕ್ತನೆಂದರೆ ಸಾಧಕನು. ಜಂಗಮನೆಂದರೆ ಸಾಧನೆಯನ್ನು ಅನುಭಾವಕ್ಕೆ ತಂದು ಕೊಂಡು ವಿವರವಾಗಿ ಬೋಧಿಸುವವನು ಎಂದು ತಿಳಿಯಬಹುದು. ಭಕ್ತನೂ ಜಂಗಮನೂ ಯಾವಾಗಲೂ ಲಿಂಗವಾಗಿಯೇ ಇರುತ್ತಾರೆ.

ದೀಕ್ಷೆ ಮಾಡಿಸಿಕೊಂಡವರಿಗೆ ಮುಕ್ತಿ ಎನ್ನುವವರ ಸಂಪ್ರದಾಯವು ಬಹಳ ದಿವಸಗಳು ನಿಲ್ಲಲಾರವು. ಹುಟ್ಟಿದ ಕೂಡಲೇ ಲಿಂಗಧಾರಣೆ ಯನ್ನು ಹೊಂದಿದ ಬಳಿಕ ಮತ್ತೆ ಗುರುವಿನ ಬಳಿ ಧರ್ಮತತ್ವವನ್ನು ಪಡೆ ಯುವ ಸಮಾರಂಭವನ್ನು ಮಾಡುವುದು ತಪ್ಪೆಂದು ತಿಳಿಯುವವರ ಸಮೋಹವು ಶಿವಾನುಭವಿಗಳ ಎದುರಿನಲ್ಲಿ ಕಾರ್ಯತಹ ತೋರಿಸಲಾರವು.

ಯಾರು ಸಮಾಜಸೇವೆಯನ್ನು ಮಾಡಲು ಆತುರಪಡುವರೋ ಅವರು ಸಮಾಜದವರ ಎದಿರಿನಲ್ಲಿ ವೀರಶೈವ ದೀಕ್ಷೆ–ಅರ್ಥಾತ್ ಲಿಂಗ ಪ್ರತಿಜ್ಞೆಯನ್ನು ಹೊಂದಲೇಬೇಕು. ಸಮಾಜದವರು ಇಂಥವರನ್ನು ಕಾಪಾಡಿಕೊಂಡು ಬರಲು ಭಕ್ತಿಯುಳ್ಳವರಾಗಬೇಕು.

(ಮುಂದುವರಿಯುವುದು.)

---

# ವೀರಶೈವ ಸಂಶೋಧನೆ.

## ಒಂದು ವಿಚಿತ್ರ ವೀರಶೈವ ಸ್ಥಳ

(ಲೇಖಕ- ದೇಸಾಯಿ ಪಾಂಡುರಂಗರಾಯರು. ಎಮ್. ಏ.)

ಮಹಾನುಭಾವ ಅಲ್ಲಮಪ್ರಭುಗಳ ಅವತಾರ ಲೀಲೆಗಳನ್ನು ವರ್ಣಿಸುವ ಪುರಾಣ ಸಾಹಿತ್ಯವು ವಿಪುಲವಾಗಿದ್ದರೂ ಅವರ ಜೀವನ ಮುಖ್ಯ ಸಂನಿವೇಶಗಳ ವಿವರವನ್ನು ನಿಸ್ಸಂದಿಗ್ಧವಾಗಿ ನಿವೇದಿಸುವ ಚಾರಿತ್ರಿಕ ಗ್ರಂಥಗಳ ಕೊರತೆಯೇ ಇದೆ. ಅವರ ಜನ್ಮಸ್ಥಳ, ಬಾಲ್ಯ, ವಿದ್ಯಾಭ್ಯಾಸ. ಅಧ್ಯಾತ್ಮಸಾಧನೆ, ಸಿದ್ಧಾವಸ್ಥೆ ಮೊದಲಾದ ಪ್ರಪಂಚದ ವಿವಿಧ ಅನುಭವದ ಸಮಾಚಾರಗಳು ಸ್ಫುಟವಾಗಿ ತಿಳಿದು ಬಂದಿಲ್ಲ. ಹರೀಶ್ವರನು (೧೨ನೆಯ ಶತಮಾನ) ಹೇಳುವಂತೆ ಅವರು ಜನಿಸಿದುದು ಬಲಿಪುರ ಎಂದರೆ ಬಳ್ಳಿಗಾವೆಯಲ್ಲಿ. ಹರೆಯದ ಬಾಗಿಲಲ್ಲಿ ಮಾಯೆಯೊಡನೆ ಸಂಧಿಸಿದ ಅವರ ಹೋರಾಟಗಳು ನಡೆದುದು ಬನವಾಸಿಯಲ್ಲಿ ಎಂದು ಚಾಮರಸನ (ಸು. ಇ. ಸ. ೧೪೩೦) ನಿವೇದನೆ. ಮುಂದೆ ಅವರು ಸೊನ್ನಲಾಪುರವನ್ನೂ ಕಲ್ಯಾಣಪಟ್ಟಣವನ್ನೂ ಸಂದರ್ಶಿಸಿದರೆಂದು ಬಣ್ಣಿಸಲಾಗಿದೆ. (ಪ್ರಭುಲಿಂಗಲೀಲೆ) ಕೊನೆಗೆ ಅವರು ಐಕ್ಯವಾದ ಸ್ಥಳವು ಶ್ರೀ ಪರ್ವತ ಎಂದು ಕೆಲರು, ಬಳ್ಳಿಗಾವೆ ಎಂದು ಬೇರೆಯವರು, ತಾಳಗುಂದ ಎಂದು ಮತ್ತೆ ಕೆಲರು ಪ್ರತಿಪಾದಿಸಿರುವರು.

ಪ್ರಭುದೇವರ ಜೀವನದ ಸಂನಿವೇಶಗಳೊಡನೆ ನಂಟನ್ನು ಬೀರುವ ಕೆಲವಾರು ಊರುಗಳು ಕನ್ನಡ ನಾಡಿನಲ್ಲಿ ಅವೆ. ಅವರ ಅವತಾರ ಕಾರ್ಯದ ಉಪಸಂಹಾರವನ್ನು ಸೂಚಿಸುವ ನಾಲ್ಕು ಸ್ಥಳಗಳಲ್ಲಿ (ಶ್ರೀಶೈಲ, ಬಳ್ಳಿಗಾವೆ, ತಾಳಗುಂದ ಮತ್ತು ತೇರದಾಳ) ಮೂರು (ಶ್ರೀಶೈಲವನ್ನು ಉಳಿದು) ಕರ್ನಾಟಕದಲ್ಲಿ ನೆಲಸಿವೆ. ಪ್ರಭುದೇವರ ಜೀವನದ ಗತಿಗಮ್ಯಗಳನ್ನು ಸೂಕ್ಷ್ಮವಾಗಿ ವಿಚಾರಿಸಿದರೆ ಈ ಸನ್ಮಾನಕ್ಕೆ ಅವು ಎಷ್ಟರ ಮಟ್ಟಿಗೆ ಅಧಿಕಾರಿಗಳು ಆಗಿವೆ ಎಂಬ ಬಗೆಗೆ ಸಂದೇಹವೇ ತಲೆದೋರುವುದು. ಈ ಮೂರು ಸ್ಥಳಗಳಲ್ಲಿ ಎರಡು (ಬಳ್ಳಿಗಾವೆ ಮತ್ತು ತಾಳಗುಂದ) ದಕ್ಷಿಣ ಕರ್ನಾಟಕದಲ್ಲಿ ಎಂದರೆ ಮೈಸೂರ ಸೀಮೆಯಲ್ಲಿ ಸೇರಿವೆ. ಮೂರನೆಯದು ಉತ್ತರ ಕರ್ನಾಟಕದ ಒಂದು ಸಂಸ್ಥಾನದಲ್ಲಿ ಇದೆ.

ಸಾಂಗಲಿ ಸಂಸ್ಥಾನದ ತೆರದಾಳ (ಜಮಖಂಡಿಗೆ ಹತ್ತಿರ) ಎಂಬ ಊರಲ್ಲಿ ಪ್ರಭುದೇವರ ಗದ್ದುಗೆ ಇದೆ. ಇದು ಅವರು ಐಕ್ಯವಾದ ಸ್ಥಳವಾಗಿರಬೇಕು ಎಂದು ಕೆಲರು ಅಭಿಪ್ರಾಯ ಪಟ್ಟಿರುವರು. ಆದರೆ ಈ ಅಭಿಪ್ರಾಯವು ಸಮರ್ಥನೀಯವಾಗಿಲ್ಲ. ಈ ಪ್ರಭುದೇವರು ಅಲ್ಲಮ ಪ್ರಭುವಲ್ಲ. ಅಲ್ಲಮ ಪ್ರಭುಗಳ ತರುವಾಯ ಅವರ ಪಟ್ಟಕ್ಕೆ ಏರಿದ ವರಲ್ಲಿ ಹನ್ನೆರಡನೆಯವರಾದ ಬಸವಪ್ರಭು ಸ್ವಾಮಿಗಳು ಎನ್ನುವವರು ಬಾಳಿದ್ದರು. ತೆರದಾಳ ಗ್ರಾಮದಲ್ಲಿಯ ಗದ್ದುಗೆಯಿಂದ ಸುಸಂಸ್ಕೃತ ರಾದ ಪ್ರಭುದೇವರು ಈ ಬಸವಪ್ರಭುಸ್ವಾಮಿಗಳು ಎಂದು ಶ್ರೀಮಾನ್ ಎಂ. ಆರ್. ಶ್ರೀನಿವಾಸ ಮೂರ್ತಿಯವರು ಸ್ಪಷ್ಟಪಡಿಸಿದ್ದಾರೆ. (ಪ್ರಭು ಲಿಂಗಲೀಲೆಯ ಸಂಗ್ರಹ, ಪೀಠಿಕೆಯ ಪರಿಶಿಷ್ಟ ಪು. ೬೫-೬೬)

ಆದರೆ ಉತ್ತರ ಕರ್ನಾಟಕದಲ್ಲಿಯ ಇನ್ನೊಂದು ಬಡಕಾದ ಸ್ಥಳವು ಪ್ರಭುದೇವರ ಈ ಸ್ಮಾರಕ ಸಮಾರಂಭದಲ್ಲಿ ಪಾತ್ರವಹಿಸಿದೆ ಎಂಬ ವಿಷಯ ಬಹು ಜನರಿಗೆ ತಿಳಿದುದಿಲ್ಲ ಎಂದು ತೋರುತ್ತದೆ. ಇದಾದರೂ ಒಂದು ಸಂಸ್ಥಾನದಲ್ಲಿಯೇ ಇದೆ. ಜತ್ತ ಸಂಸ್ಥಾನದ ಬಾಲೇಗಾಂವ ಎಂಬ ಊರಲ್ಲ ಪ್ರಭುದೇವರ ಸ್ಮಾರಕವಿದೆ. ಇದು ಅಲ್ಲಮ ಪ್ರಭುಗಳ ಸಮಾಧಿ ಎಂದು ಜನಗಳು ಹೇಳುವರು. ಈ ಸ್ಮಾರಕದ ಬಗೆಗೆ ಹೆಚ್ಚಿನ ಸಂಗ ತಿಗಳನ್ನು ಹೇಳುವ ಮುನ್ನ ಈ ಊರಿನ ಸಂಶೋಧನೆಯಲ್ಲಿ ಕಂಡು ಬಂದ ಪ್ರಾಚೀನ ಶಾಸನ ಮುಂತಾದ ಅವಶೇಷಗಳನ್ನು ಕುರಿತು ವಿವೇ ಚಿಸುವುದು ವಿಹಿತ.

ಜತ್ತ ಸಂಸ್ಥಾನದ ಮುಖ್ಯ ಸ್ಥಳವಾದ ಜತ್ತಿ ಊರಿನಿಂದ ಪೂರ್ವಕ್ಕೆ ಸುಮಾರು ೩೫ ಮೈಲಿನಲ್ಲಿ ಬಾಲೇಗಾಂವ ಎಂಬೀ ಚಿಕ್ಕ ಊರು ನೆಲಸಿದೆ. ಹೆಸರಿನ ರೀತಿಯನ್ನು ನೋಡಿದರೆ ಇದು ಅಷ್ಟು ಹಳೆಯ ಹೆಸರಾಗಿ ತೋರುವದಿಲ್ಲ. ಮೇಲೆ ಮೇಲೆ ಸುತ್ತಿ ಪರೀಕ್ಷಿಸಿದರೂ ಈ ಊರಲ್ಲಿ ಹೆಚ್ಚು ಪ್ರಾಚೀನದ ಕಾಲದ ಕುರುಹುಗಳು ಸಿಕ್ಕುವುದಿಲ್ಲ. ಈಚೆಯ ಕಾಲದ್ದು ಎಂದು ಸ್ಫುಟವಾಗಿ ಗೋಚರಿಸುವ, ಸಾಧಾರಣ ದೊಡ್ಡದಾದ ಮಾರುತಿ ದೇವಾಲಯವೊಂದು ಈ ಊರಲ್ಲಿ ಗಮನಾ ರ್ಹವಾದ ಗುಡಿ ಆಗಿದೆ ಎಂದು ಹೇಳಬಹುದು.

ಈ ಗುಡಿಯನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿರುವಾಗ ಯಾವದೋ ಒಂದು ಹಾಳಾದ ಹಳೆಯ ಗುಡಿಯ ಒಡೆದು ಹೋದ ಮೂರ್ತಿ ಮೊದಲಾದ

ಶಿಲ್ಪಾವಶೇಷಗಳನ್ನು ತಂದು ಇದರಲ್ಲಿ ನೆಟ್ಟಿದುದಾಗಿ ಕಂಡು ಬಂದಿತು. ಒಂದು ಶಾಸನದ ಎರಡು ತುಂಡುಗಳನ್ನು ಗೋಡೆಯಲ್ಲಿ ಕಟ್ಟಿದುದನ್ನು ಗುರುತಿಸಲಾಯಿತು. ಶಾಸನವು ಅಪೂರ್ಣವಾದುದು, ಹರಕು ಮುರಕಾದುದು. ಇದರ ಕಾಲ ೧೨ನೆಯ ಶತಮಾನ. ಕಳಚುರ್ಯ ಅರಸರ ಚಿರಪರಿಚಿತ ಬಿರುದಾವಳಿಗಳು ಇದರಲ್ಲಿ ಬರುವುವು. ಅರಸನ ಹೆಸರು ಪತನವಾಗಿದೆ. ಆದರೂ ಆತನು ಬಿಜ್ಜಳನಾಗಿರಬೇಕು ಎಂದು ಊಹಿಸಬಹುದಾಗಿದೆ. ಇಲ್ಲಿಯ ಹಿರೇಮಠದ ಸ್ವಾಮಿಗಳ ಬಳಿಯಲ್ಲಿ ತಾಡದೋಲೆಯ ಗ್ರಂಥಗಳು ಇವೆ ಎಂಬ ವರ್ತಮಾನ ತಿಳಿಯಿತು. ಆದರೆ ಅವರು ಊರಲ್ಲಿ ಇಲ್ಲದುದರಿಂದ ಅವನ್ನು ಪರೀಕ್ಷಿಸುವುದು ಸಾಧ್ಯವಾಗಲಿಲ್ಲ. ಇಲ್ಲಿ ವೀರಶೈವರ ಸಂಖ್ಯೆ ಸುಮಾರಾಗಿದೆ.

ಮಾರುತಿ ದೇವಾಲಯದಿಂದ ಸ್ವಲ್ಪ ಅಂತರ ನಡೆದು ಹೋದರೆ ಊರ ಹೊರಗೆ ಬಿಳಿಯ ದೊಡ್ಡ ಪ್ರಕಾರದಿಂದಲೂ ಗುಮ್ಮಟಾಕಾರದ ರಚನೆಯಿಂದ ಒಪ್ಪುವ ಒಂದು ಕಟ್ಟಡವು ದೃಷ್ಟಿಯನ್ನು ಎಳೆದುಕೊಳ್ಳುವುದು. ಸ್ಪಷ್ಟವಾಗಿ ಹೇಳಬೇಕಾದರೆ ಇದರ ಹೊರನೋಟವು ಹಿಂದುತ್ವದ ಚಿನ್ಹೆಯಿಂದ ದೂರವಿದ್ದ ಮುಸಲ್ಮಾನರ ಒಂದು ದರ್ಗಾದಂತೆ ಕಾಣುವುದು. ಒಳಗೆ ಹೊಕ್ಕು ನೋಡಿದರೆ ಈ ಪರಿಚಯವು ಇನ್ನಷ್ಟು ದೃಢವಾಗುತ್ತದೆ. ಒಳಗೆ ಮುಸಲ್ಮಾನರ ಗೋರಿಯಂತೆ ತೋರುವ ಒಂದು ಸಮಾಧಿ ಇದೆ. ಇದು ಅಲ್ಲಮಪ್ರಭುಗಳ ಸಮಾಧಿ ಎಂದು ತೋರಿಸುವರು. ಎಲ್ಲಕ್ಕೂ ಸೋಜಿಗವೆಂದರೆ ಹಿಂದುಗಳಂತೆ ಮುಸಲ್ಮಾನರೂ ಭಕ್ತರಾಗಿ ಇದಕ್ಕೆ ನಡೆದುಕೊಳ್ಳುವರು. ಹಿಂದುಗಳಷ್ಟೇ ಮುಸಲ್ಮಾನರಿಗೂ ಇದರ ಮೇಲೆ ಅಧಿಕಾರವಿದೆ. ಉತ್ಸವದ ದಿನಗಳಲ್ಲಿ ಒಂದು ಬದಿಗೆ ಮುಸಲ್ಮಾನರು ತಮ್ಮ ಫಾತಿಯವನ್ನು, ಇನ್ನೊಂದು ಬದಿಗೆ ಹಿಂದುಗಳು ತಮ್ಮ ನೈವೇದ್ಯವನ್ನು ಏಕಕಾಲಕ್ಕೆ ಸಮರ್ಪಿಸುವ ಅಪೂರ್ವವಾದ ದೃಶ್ಯವು ಕಣ್ಣಿಗೆ ಬೀಳುತ್ತದೆ. ಅವರ ಬಾಗಿಲ ಬೇರೆ, ಇವರ ಬಾಗಿಲ ಬೇರೆ. ಇಷ್ಟಾದರೂ ಈ ಬಗೆಗೆ ಹಿಂದು ಮುಸಲ್ಮಾನರಲ್ಲಿ ಜಗಳವಿಲ್ಲ. ನೆರೆಯ ಪ್ರದೇಶದ ಅನೇಕ ಹಿಂದುಗಳು (ವೀರಶೈವರು ಮತ್ತು ಇತರರು) ಮತ್ತು ಮುಸಲ್ಮಾನರು ಈ ಇಬ್ಬರಿಗೂ ಈ ಸ್ಥಳವು ಇಷ್ಟಾರ್ಥಪ್ರದಾಯಕವೂ ಪವಿತ್ರ ಯಾತ್ರಾಸ್ಥಳವೂ ಆಗಿದೆ. ಹಿಂದು ಮುಸಲ್ಮಾನರ ವಿತುಷ್ಟದ ಈ ದಿನಗಳಲ್ಲಿ ಇದೊಂದು ಮಾದರಿಯ ಸ್ಥಳವೆಂದು

ಈ ಭಾಗದ ಅನೇಕ ಸುಶಿಕ್ಷಿತರು ಈ ಊರಿನ ಕಡೆಗೆ ಬೊಟ್ಟು ಮಾಡಿ ತೋರಿಸುವರು.

ವಿಚಿತ್ರವಾದ ಈ ಸ್ಥಳದ ವಿಷಯವಾಗಿ ಹೆಚ್ಚಿಗೆ ಐತಿಹ್ಯಗಳನ್ನು ಹೇಳುವವರು ದೊರೆಯಲಿಲ್ಲ. ಅಲ್ಲಮಪ್ರಭುಗಳ ಸಮಾಧಿ ಕೆಳಗೆ ಇದೆ ಎಂದೂ, ಮುಸಲ್ಮಾನರ ಹಾವಳಿ ಬರಲು ಮೇಲೆ ಮುಸಲ್ಮಾನರ ಗೋರಿಯ ಆಕಾರವನ್ನು ಮಾಡಿ, 'ಇದು ನಿಮ್ಮ ಗೋರಿಯೆ ಆಗಿದೆ' ಎಂದು ಹೇಳಿ ಮೂಲ ಸಮಾಧಿಯನ್ನು ಉಳಿಸಿಕೊಂಡಿದ್ದಾರೆಂದೂ, ಆದುದರಿಂದ ಇದು ಆ ಎರಡೂ ಪಂಗಡದವರಿಗೆ ಪ್ರಿಯವಾಗಿದೆ ಎಂದೂ ಹೇಳಲಾಯಿತು. ಇದು ನಿಜವಿರಬಹುದು. ಇದು ಯಾವ ಪ್ರಭುದೇವರ ಎಂತಹ ಸ್ಮಾರಕ, ತಪಸ್ಸಿನ ಭೂಮಿಯೋ, ಪವಾಡದ ಸ್ಥಳವೋ, ಬಯಲಾದ ನೆಲೆಯೋ ಮುಂತಾದ ವಿವರಗಳನ್ನು ಸ್ಥಳೀಯ ಜನರಿಂದ ತಿಳಿದುಕೊಳ್ಳಲು ಮಾಡಿದ ಪ್ರಯತ್ನವು ಫಲಿಸಲಿಲ್ಲ.

ಈ ಸಮಾಧಿಯ ಪೂಜಾರರು ಇರುವರು. ಅವರ ಜಾತಿ ಹೂಗಾರ. ಪ್ರಭುದೇವರ ವಿಶೇಷ ಉತ್ಸವಗಳೂ ನಡೆಯುತ್ತಿದ್ದು ಆ ಕಾಲಕ್ಕೆ ಪಲ್ಲಕ್ಕಿ ಹೊರಡುವುದು ಎಂಬ ವರ್ತಮಾನವನ್ನು ಕೇಳಿ ಆ ಉತ್ಸವ ಪ್ರತಿಮೆಯನ್ನು ಪರೀಕ್ಷಿಸಲು ಪೂಜಾರ ಮನೆಗೆ ಹೋದೆನು. ವಿಗ್ರಹವು ಬೆಳ್ಳಿಯದಿದ್ದು ಸುಮಾರು ಒಂದು ಅಡಿ ಎತ್ತರವಿದೆ; ಕುದುರೆಯನ್ನು ಏರಿದೆ. ಸ್ಮಶ್ರೂಯುಕ್ತ ಮುಖ; ತಪಸ್ವಿಯಂತೆ ತೋರುವುನು. ಆದರೆ ವಾಹನವಾದ ಕುದುರೆಗೆ ಐದು ಮೋರೆಗಳು !

ಇದು ಯಾವ ಪ್ರಭುದೇವರ ಎಂತಹ ಸ್ಮಾರಕ ಎಂಬ ಬಗೆಗೆ ನನ್ನಲ್ಲಿ ಮೊಳೆತ ಸಂದೇಹಾವಳಿಗೆ ಸಮಾಧಾನ ದೊರೆತಿಲ್ಲ. ನಂಬುವಂತಹ ಐತಿಹ್ಯದ ಅಭಾವಮೂಲಕ ಇದು ಅಲ್ಲಮಪ್ರಭುಗಳಿಗೆ ಸಂಬಂಧಿಸಿದ ಸ್ಥಳವೇ ಎಂದು ಹೇಳಲಾರೆನು. ಪ್ರಸಿದ್ಧಿಯ ಕೊರತೆ ಈ ಸಂದೇಹವನ್ನು ಪೋಷಿಸುತ್ತಲಿದೆ. ಊಹೆಗಳನ್ನು ಮಾಡುವುದಾದರೆ ಇದು ಅಲ್ಲಮಪ್ರಭುಗಳಿಗೆ ಯಾವುದೋ ಒಂದು ವಿಧದಿಂದ ಸಂಬಂಧಪಟ್ಟ—ಕೆಲಕಾಲ ತಂಗಿದ ಇಲ್ಲವೆ ಯಾವುದೋ ಒಂದು ಪವಾಡ ನಡೆದ—ಸ್ಥಳವಾಗಿರಬೇಕು, ಇಲ್ಲವೆ ತೆರದಾಳದಂತೆ ಬೇರೊಬ್ಬ ಪ್ರಭುದೇವರ ಸ್ಮಾರಕವಾಗಿರಬೇಕು; ಈ ಊರು ಸೊಲ್ಲಾಪುರ ಮತ್ತು ಕಲಬುರ್ಗಿ ಕಲ್ಯಾಣಗಳಿಗೆ ಸಮೀಪವಿರುವುದರಿಂದ ಅಲ್ಲಮಪ್ರಭುಗಳ ಸೊನ್ನಲಾಪುರ,

ಕಲ್ಯಾಣ ಪಟ್ಟಣದ ಪ್ರಯಾಣ ಮಾರ್ಗದಲ್ಲಿ ಸಿಕ್ಕುವಂತಹದಾಗಿದೆ. ಆದುದರಿಂದ ಮೇಲಿನ ಊಹೆಗಳಲ್ಲಿ ಮೊದಲನೆಯದು, ಎಂದರೆ ಅಲ್ಲಮಪ್ರಭುಗಳು ಕೆಲಕಾಲ ತಂಗಿದ ಸ್ಥಳವೆಂದು ಇಟ್ಟುಕೊಂಡರೆ ತಪ್ಪಾಗಲಿಕ್ಕಿಲ್ಲ ಎಂದು ಸದ್ಯದ ಮಟ್ಟಿಗೆ ನನ್ನ ಗ್ರಹಿಕೆ.

ಈ ಊರಿನ ಹೆಸರಿನ ಮೇಲಿಂದ ಇನ್ನೊಂದು ಊಹೆ ಸಂಭವನೀಯವಾಗಿದೆ. ಅತಿ ಪ್ರಖ್ಯಾತವಾದ ಯಾವೊಂದು ಮೂಲತೀರ್ಥಸ್ಥಳದ ಅನುಕರಣ ಮಾಡಿ ಅದೇ ಹೆಸರಿನ ಹೊಸ ತೀರ್ಥಸ್ಥಳಗಳು ಹುಟ್ಟುವುದು ವಾಡಿಕೆಯಾಗಿದೆ. ಈ ಮಾತಿಗೆ ಬೇಕಾದಷ್ಟು ಉದಾಹರಣೆಗಳಿವೆ. ಉತ್ತರದಲ್ಲಿ ಕಾಶಿ, ದಕ್ಷಿಣದಲ್ಲಿ ತಮಿಳ ನಾಡಿನಲ್ಲಿ ತೆಂಕಾಶಿ (ತೆನ್=ದಕ್ಷಿಣ). ಸವದತ್ತಿಯಲ್ಲಿ ಹಿರಿಯ ಯಲ್ಲಮ್ಮನ ಗುಡಿಯಿದ್ದರೆ ಕೊಕಟನೂರು, ಜತ್ತಿ, ಉಮರಾಣಿ ಮೊದಲಾದ ಊರುಗಳು ಕಿರಿಯ ಯಲ್ಲಮ್ಮನ ಸ್ಥಾನಗಳಾಗಿವೆ. ಮಂತ್ರಾಲಯದ ರಾಘವೇಂದ್ರ ಸ್ವಾಮಿಯ ಅಣುವೃಂದಾವನಗಳು ಅಣುಮಂತ್ರಾಲಯ ಹುಬ್ಬಳ್ಳಿ, ಧಾರವಾಡ ಮುಂತಾದ ಅನೇಕ ಸ್ಥಳಗಳಲ್ಲಿ ಸ್ಥಾಪಿತವಾಗಿವೆ. ಅದೇ ಮೇರೆಗೆ ಬಳ್ಳಿಗಾವೆಯ ಅಲ್ಲಮಪ್ರಭುಗಳ ನೆನವರಿಕೆಗಾಗಿ ಬಾಲೇಗಾವ (ಬಳ್ಳಿಗಾವೆ) ಎಂಬ ಊರೂ ಅಲ್ಲಿಯ ಈ ಅಲ್ಲಮರ ಸಮಾಧಿಯೂ ಸ್ಥಾಪಿತವಾಗಿರುವುದು ಅಕಲ್ಪಿತವಲ್ಲ.

ಅದೇನೇ ಇರಲಿ, ಬಾಲೇಗಾಂವದ ಅಲ್ಲಮಪ್ರಭುಗಳ ಈ ವಿಚಿತ್ರ ಸ್ಮಾರಕದ ವಿಷಯವಾಗಿ ಇನ್ನೂ ಹೆಚ್ಚಿನ ಸಂಶೋಧನೆಗಳನ್ನು ನಡೆಸುವುದು ಆವಶ್ಯಕ ಎಂದು ಸೂಚಿಸಿ ಇದೀಗ ಇಷ್ಟಕ್ಕೆ ನಿಲ್ಲುವೆ.

---

# ಪಾದೋದಕ.

(ಶ್ರೀಬಸವಲಿಂಗ ಸ್ವಾಮಿಗಳು ಹಿರೇಮಠ ತೆಲಸಂಗ ತಾ. ಅಥಣಿ)



ವೀರಶೈವರಿಗೆ ಅಷ್ಟಾವರಣಗಳು ಪೂಜ್ಯಗಳಾಗಿವೆ. ಅದಿಲ್ಲದ ಪಕ್ಷ ಆತನು ವೀರಶೈವನೆನಿಸನು. ಮುತ್ತೈದೆಯು ಮಂಗಲಸೂತ್ರಬದ್ಧಳಾಗಿರುವಂತೆ ಲಿಂಗವಂತನು ಅಷ್ಟಾವರಣ ಸಂಪನ್ನನಿರಬೇಕು. ಎಂಟು ಆವರಣಗಳಲ್ಲಿ ಆರು ಸಾಧನಗಳಾಗಿದ್ದು ಪಾದೋದಕ ಪ್ರಸಾದವೆರಡು ಸಾಧ್ಯಗಳಾಗಿವೆ. ವೀರಶೈವ ಧರ್ಮಸ್ವರೂಪವನ್ನು ಹೇಳುವಾಗ ವೀರಶೈವ ಎಂಬ ಶಬ್ದಕ್ಕೆ ಅಕ್ಷರಶಃ ನಿರ್ವಚನ ಮಾಡಿ ಹೇಳಿದಂತೆ ಪಾದೋದಕ ಎಂಬಲ್ಲಿಯೂ "ಪಕಾರಂ ಪರಮಂ ಜ್ಞಾನಂ ದೋಕಾರಂ ದೋಷವರ್ಜನಂ। ದಕಾರಂ ದಹತೇ ಜನ್ಮ ಕಕಾರಂ ಕರ್ಮನಾಶನಂ" ಎಂದು ನಿರ್ವಚನ ಮಾಡಿರುವರು. ಪಾದೋದಕ ಎಂಬುದು ಪವಿತ್ರ ತೀರ್ಥ ಎಂಬ ಶಬ್ದಕ್ಕಿಂತಲೂ ವಿಶಿಷ್ಟಾರ್ಥವನ್ನು ಕೊಡುವದು. ಸಾಮಾನ್ಯವಾಗಿ ಪಾದ ಅಂದರೆ ಕಾಲು ಎಂದು ಕನ್ನಡದಲ್ಲಿ ಅರ್ಥವಾದರೂ ಪಾದ ಶಬ್ದವನ್ನು ಮಹಾತ್ಮರ ಅಡಿಗಳಿಗೆ ಉಪಯೋಗಿಸುವ ರೂಢಿಯೇ ಇರುವದು. ಸಿದ್ಧಾಂತಶಿಖಾಮಣಿಕಾರರು ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ ಮುಂತಾದ ಕಡೆಗಳಲ್ಲಿ ಪಾದ ಉದಕ ಶಬ್ದಗಳಿಗೆ ಆನಂದ ಜ್ಞಾನ ಎಂದು ಅರ್ಥ ಮಾಡಿರುವರು. ಪ್ರಕ್ರಿಯೆಯನ್ನನುಸರಿಸಿ ಹಾಗೆ ಅರ್ಥ ಮಾಡಿದರೂ ಪಾದ ಶಬ್ದಕ್ಕೆ ಅಡಿ ಎಂಬುದೇ ಮುಖ್ಯಾರ್ಥವು. ಹಾಗಾದರೆ ಪಾದೋದಕವೆಂದರೆ ಮಹಾತ್ಮರು ಪಾದ ತೊಳೆದ ನೀರು ಎಂದಂತಾಯಿತು.

"ಜಂಗಮ ಪಾದೋದಕದಲ್ಲಿ ಲಿಂಗವನ್ನು ಇಡುವದು ಒಳಿತಲ್ಲ. ಗುರುಗಳ ಪಾದೋದಕಕ್ಕಿಂತ ಲಿಂಗವು ಶ್ರೇಷ್ಠವಲ್ಲವೇ?" ಎಂದು ಪ್ರಶ್ನಿಸಿ "ಲಿಂಗವೇ ಶ್ರೇಷ್ಠವು" ಎಂದು ಮಾರುತ್ತರವನ್ನೂ ಶ್ರೀಕುಮಾರ ಶಿವಾನಂದರು ತಾವೇ ಕೊಟ್ಟಿರುವರು. ಹಾಗಾದರೆ ಇಷ್ಟಲಿಂಗಧಾರಕನಾದ ತಾನು ಗುರುಪೂಜೆಯನ್ನು ಮಾಡುವ ಸಮಯದಲ್ಲಿ ಗುರುಮೂರ್ತಿಯನ್ನು ಲಿಂಗಕ್ಕಿಂತ ಅಧಿಕನನ್ನಾಗಿಯೂ (ಲಿಂಗವಿದ್ದೂ ಗುರುವನ್ನು ಪೂಜಿಸುವ ಕಾರಣದಿಂದ) ಗುರುವಿನಿಂದ ದೊರೆತ ಪಾದತೀರ್ಥವನ್ನು

ಮಾತ್ರ ಲಿಂಗಕ್ಕಿಂತ ಕಡಿಮೆಯನ್ನಾಗಿಯೂ ಭಾವಿಸಬೇಕಾಯಿತು. ಹೀಗೆ ಗುರು ಮತ್ತು ಗುರುಪಾದೋದಕ ಇವುಗಳಲ್ಲಿ ಭೇದ ಮಾಡಬೇಕೆ? ಲಿಂಗವೇ ಪರಿಪೂರ್ಣವಿದ್ದು ಅದುವೇ ಶ್ರೇಷ್ಠವಿದ್ದಲ್ಲಿ ಉಳಿದ ಗುರುಚರರ ಅವಶ್ಯಕತೆಯಾದರೂ ಏನು? ಹಾಗಿದ್ದ ಪಕ್ಷದಲ್ಲಿ ವೀರಶೈವ ಧರ್ಮ ಪ್ರವರ್ತಕರು ಅಷ್ಟಾವರಣಗಳೆಂಬ ಗೌರವಸಾಧನಗಳನ್ನು ದಾಹರಿಸದೆ ಲಾಘವ ಷಷ್ಟ್ಯಾವರಣಗಳನ್ನೇ ಹೇಳಿಬಿಡುತ್ತಿದ್ದರು.

ಗುರುಲಿಂಗ ಚರಾಣಾಂ ಚ ಸಮಾವಾಯೇತು ಭಕ್ತಿಮಾನ್ ॥೩೮॥
ಪಾದೋದಕಂ ಚರಾಲ್ಲಬ್ಧ್ವಾ ಗುರೋರ್ಲಿಂಗಸ್ಯ ಭಕ್ತಿಮಾನ್ ।
ಅಶ್ನೀಯಾದಶನಂ ಭಕ್ತೋಽನ್ಯಥಾನಶನಂ ಭವೇತ್ ॥೩೯॥

ಎಂದು ಶ್ರೀನೀಲಕಂಠಶಿವಾಚಾರ್ಯರು ಕ್ರಿಯಾಸಾರದ ೨೮ನೆಯ ಉಪದೇಶದಲ್ಲಿ ಗುರುಲಿಂಗ ಜಂಗಮರ ತರತಮಭಾವವನ್ನು ಸ್ಪಷ್ಟೀಕರಿಸಿ ಪಾದೋದಕ ಸ್ವೀಕಾರವಿಷಯವನ್ನು ಹೇಳಿರುವರು

ಇನ್ನು ಗುರು ಜಂಗಮರೆಂದರೆ ಸಾಮಾನ್ಯರಲ್ಲ. ಈ ಬಗ್ಗೆ ಸಿದ್ಧಾಂತ ಶಿಖಾಮಣಿಯಲ್ಲಿ 'ಗುಣಾತೀತಂ ಗುಕಾರಂಚ' ಎಂದು ಗುರು ಶಬ್ದಕ್ಕೆ ನಿರ್ವಚನ ಮಾಡಿ "ಜಾನಂತ್ಯತಿಶಯಾದ್ಯೇತು......ಜಂಗಮಾ ಇತಿಕೀರ್ತಿತಾಃ" ಎಂದು ಜಂಗಮ ಶಬ್ದಕ್ಕೂ ನಿರ್ವಚನ ಮಾಡಿರುವರು. ಲಿಂಗವೇ ಶ್ರೇಷ್ಠವೆಂದಲ್ಲಿ ಗುರು ಜಂಗಮರ ಪೂಜೆಯೇಕೆ ಬೇಕು? ಜಂಗಮ ಪಾದೋದಕವನ್ನು ಲಿಂಗಕ್ಕೆ ಎರೆಯುವದು ಅಪವಿತ್ರ ಮೂರ್ತಿಯನ್ನು ಪವಿತ್ರಗೊಳಿಸಲಿಕ್ಕಲ್ಲ ಅಲ್ಲಿರುವ ಶಿವಚೈತನ್ಯವನ್ನು ಉದ್ಭೂತಾವಸ್ಥೆಗೆ ತರುವದಕ್ಕಾಗಿ. ಅಥವಾ ಶಿವಲಿಂಗವನ್ನು ಪ್ರಸನ್ನೀಕರಿಸಿಕೊಳ್ಳುವದಕ್ಕಾಗಿ ದೀಕ್ಷಾಕಾಲದಲ್ಲಿ ಅನೇಕ ಸಂಸ್ಕಾರಗಳಿಂದ ಶಿಲಾಭಾವವು ಅಳಿದು ಶಿವಚೈತನ್ಯವು ಉದ್ಭೂತವಾಗಿದ್ದರೂ ಸಾಧಕನ ಅನೇಕ ಉಪಚಾರಗಳಿಂದ ಮತ್ತೆ ಅದು ವ್ಯಕ್ತವಾಗಬೇಕಾಗುವದು.

ಇನ್ನು ಲಿಂಗಕ್ಕೆ ಷೋಡಶೋಪಚಾರಗಳಿಂದ ಪೂಜೆ ಮಾಡಬೇಕಷ್ಟೇ! ಆಗ ಭಸ್ಮಧಾರಣವಿಧಿಯು ಬರುವದು. ಪಾದೋದಕ ಸಂಸ್ಕೃತ ಭಸ್ಮ ಧರಿಸದಿದ್ದರೆ ಷೋಡಶೋಪಚಾರಗಳು ಇಲ್ಲದಂತಾಗಿ ಪಂಚದಶೋಪಚಾರಗಳಿಂದ ಪೂಜಿಸಿದಂತಾಗುವದು. ಅಥವಾ ಅಸಂಸ್ಕೃತಭಸ್ಮವನ್ನೇ ಧರಿಸಿ ಷೋಡಶೋಪಚಾರಗಳನ್ನು ಪೂರ್ತಿಗೊಳಿಸಬೇಕೆ ಹೇಗೆ?

ದಶವಿಧ ಪಾದೋದಕಗಳು ಪರಿಪೂರ್ಣವಾಗಬೇಕಾದರೆ ಲಿಂಗಕ್ಕೆ ಮೂರು ಸಲ ಎರೆದು ಸ್ವೀಕರಿಸುವ ರೀತಿಯು ಗುರುಪಾದೋದಕವನ್ನು ಸ್ವೀಕರಿಸಬೇಕಷ್ಟೇ? ಅದು ಶಾಸ್ತ್ರಬಾಹ್ಯವೆಂದರೆ ದಶವಿಧಪಾದೋದಕಗಳನ್ನು ಮಾಡುವ ರೀತಿಯಾವದು ?

ನನು ಜಂಗಮಪಾದೋದಂ ಕಥಂ ಲಿಂಗೇಸಮರ್ಪ್ಯತಾಂ ।
ವಿನಿಯುಕ್ತಂಜಲಂತತ್ರ ನನ್ವೈದಿಕ ಮಾಶೀರಯೇತ್ ॥೧೦೪॥
ಪಾರ್ತಣೆ ಹೂತಶಿಷ್ಟಾನ್ನಂ ಬ್ರಾಹ್ಮಣೇಭ್ಯಃಕಥಂ ತ್ವಯಾ ।
ವಿನಿಯೋಜ್ಯಂ ಬ್ರಾಹ್ಮಣೋ ವೈ ಸರ್ವಾಸ್ತಾದೇವತಾ ಇತಿ ॥೧೦೫॥
ಎಂದು ಪೂರ್ವಪಕ್ಷಮಾಡಿಕೊಂಡು ಅಲ್ಲಿಯೇ
"ಗುರುಲಿಂಗ ಚರಣಾಂ ಚಸಮವಾಯೋ ಚರಾರ್ಪಿತಂ ।
ಪ್ರಾಣಲಿಂಗಾರ್ಪಿತಂಕೃತ್ವಾ ಪಿಬೇದ್ಭಕ್ತ ಇತಿಸ್ಥಿತಿಃ ॥೧೦೬॥
೨೮ನೇ ಉಪದೇಶ

ಎಂಬುದಾಗಿ ನಿರ್ಣಯಾರ್ಥವನ್ನೂ ಶ್ರೀ. ನೀಲಕಂಠಶಿವಾಚಾರ್ಯರು ಕ್ರಿಯಾಸಾರದಲ್ಲಿ ಹೇಳಿರುವರು.

ಪಾದೋದಕ ವಿಧಿಯನ್ನು ಆಮೂಲಾಗ್ರವಾಗಿ ನೋಡಿದರೆ ಪಾದದ ಪ್ರತ್ಯಂಗುಲಿಗಳಿಗೂ ಸಂಬಂಧಿಸುವ ಪ್ರಣವ ಆಗ ಜಪಿಸುವ ಜಪ, ಪಾದೋದಕದಲ್ಲಿ ಲಿಖಿಸುವ ಪ್ರಣವ, ಮುಂತಾದ ವಿಧಾನಗಳಿಂದ ಉದಿಸಿದ ಪಾದೋದಕವು ಪ್ರತ್ಯಕ್ಷ ಚಿದ್ರೂಪವಾಗಿರುವದು.

ಇಂಥ ಚಿದ್ರೂಪ ತೀರ್ಥವನ್ನು ಚಿಲ್ಲಿಂಗಕ್ಕೆ ಎರೆವಲ್ಲಿ ಆವ ಸಂದೇಹ?

"ಶಿವಶರಣರ ಯಾವತ್ತು ವಚನಗಳು ಸರಿಇರುತ್ತವೆಂದು ಹೇಳಲಾಗುವದಿಲ್ಲ. ಆಗಮದ ಮಾತುಗಳೂ ಅಂತೆಯೇ ಸರಿ" ಎಂದು ಶ್ರೀಕುಮಾರ ಶಿವಾನಂದರು ಬರೆದಿರುವರು. ಅನುಭವಿಕರ ಅನುಭವೋಕ್ತಿಗಳನ್ನೂ ಆಗಮಕಾರರ ಧರ್ಮನಿರ್ಣಯವನ್ನೂ ಒಪ್ಪದಲ್ಲಿ ಆರ ಉಕ್ತಿಗೆ ಪ್ರಾಮಾಣ್ಯವೀಯಬೇಕು ? ವಿರಶೈವಧರ್ಮವು ತಾಂತ್ರಿಕ ವೈದಿಕವೆಂದು ಕರೆಯಲ್ಪಡುವದರಿಂದ ಆಗಮವಾಕ್ಯಗಳನ್ನು ಅಂಗೀಕರಿಸಬೇಕಾಗುವದು.

ಕ್ರಿಯಾಸಾರ, ವೀರಶೈವ ಸದಾಚಾರಸಂಗ್ರಹ, ಅನುಭವಸೂತ್ರ ಮೊದಲಾದ ಗ್ರಂಥಕರ್ತರು ತಮ್ಮ ತಮ್ಮ ಗ್ರಂಥಗಳಲ್ಲಿ ವೀರಶೈವ ಧರ್ಮವನ್ನು ಮಂಡಿಸುವಾಗ ಆಗಮೋಕ್ತಿಗಳನ್ನು ಪ್ರಮಾಣಗಳನ್ನಾಗಿ ಅಂಗೀ

ಕರಿಸಿರುವರು. ಇಂತು ಶ್ರವಮಾಣತ್ರಿ'ನ ಅಂಗೀಕೃತಗಳಾದ ಆಗವೋಕ್ತಿಗಳನ್ನು ಹಿಂದಿಡಲು ಬಂದೀತೇ ?

ಪ್ರತಿಯೊಂದು ಕಾರ್ಯದಲ್ಲಿ ವಿಚಾರವು ಅತ್ಯವಶ್ಯವು. ಅಂಧ ಶ್ರದ್ಧೆಯಿಂದ ನಂಬುವ ಕಾಲವಿದಲ್ಲ. ಎಂದು ಶ್ರೀ ಕುಮಾರಶಿವಾನಂದರು ಬರೆದಿರುವರು. ಇದು ಒಪ್ಪುವ ಮಾತಾದರೂ ಕೆಲಕೆಲ ಪ್ರಸಂಗದಲ್ಲಿ ವಿಚಾರವು ಕುಂಠಿತವಾಗುವದು. ಜೀವನದ ತುಮುಲ ಯುದ್ಧದಲ್ಲಿ ಕಾಲಿಟ್ಟ ಮುಮುಕ್ಷುವು ವಿಚಾರ ಮಾಡಿ ಮಾಡಿ ಮುಂಗಾಣದ ಹಿಂಗಾಣದ ಸಮಯದಲ್ಲಿ ವಿಶ್ವಾಸಕ್ಕೆ ತಲೆಬಾಗಿಸಲೇ ಬೇಕಾಗುವದು. ಉಪನಿಷತ್ಕಾರರು ಬ್ರಹ್ಮ ವಿಚಾರವನ್ನು ಕೂಲಂಕಷವಾಗಿ ಶಿಷ್ಯರಿಗೆ ಬೋಧ ಮಾಡಿಮಾಡಿ ದಣಿದರಲು ಶಿಷ್ಯನ ಚುರುಕು ಬುದ್ಧಿಯು ಮುಂದೋಡಲು

"ಅಸ್ತೀತ್ಯೇವೋಪಲಬ್ಧಸ್ಯ ತತ್ವಭಾವಃ ಪ್ರಸೀದತಿ" ಎಂದು ವಿಶ್ವಾಸದ ಬರೆಯನ್ನಿತ್ತಿದರು.

"ಯೋಗ್ಯ ಜಂಗಮರು ಎಲ್ಲಿಯೂ ಕಾಣುವದಿಲ್ಲ. ಅಂಥವರ ಪಾದೋದಕವನ್ನು ಸೇವಿಸಬಾರದು" ಎಂದು ಲೇಖಕರು ಬರೆದಿರುವರು ಇದಕ್ಕೆ ಯಾವ ಪ್ರಕಾರದಿಂದಲೂ ಭಿನ್ನಾಭಿಪ್ರಾಯವಿಲ್ಲ. ಸದಾಚಾರ ಭ್ರಷ್ಟನಾದ ಜಂಗಮನ ಪೂಜೆ ಮಾಡಿ ಪಾದೋದಕ ಸಲ್ಲಿಸುವದು ಹಾನಿಕರವು. "ಆಚಾರವಿಲ್ಲದ ಜಂಗಮ ಮಾನವ. ಅಂತವರ ಮುಖ ನೋಡಲಾಗದು" ಎಂದು ವಚನಕಾರರು ಅಂದರುವರು.

ಭಕ್ತಿ ಪುತ್ಥಳಿಯಾದ ಬಸವಣ್ಣನವರಾದರೂ "ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀ ಸಾಕ್ಷಿಯಾಗಿ ಛೀ ಎಂಬೆನು ಕೂಡಲಸಂಗಮದೇವ" ಎಂದು ದುರಾಚಾರಿ ಜಂಗಮರನ್ನು ಖಂಡಿಸಿರುವರು.

ಆದರೆ ಶಿವಯೋಗ ಸಾಮ್ರಾಜ್ಯ ಧುರಂಧರರೂ...ಲಿಂಗಾನುಭಾವಿಗಳೂ ಆದ ಗುರುಚರರ ತೀರ್ಥವನ್ನು ಲಿಂಗಕ್ಕೆ ಸಲ್ಲಿಸುವಲ್ಲಿ ಆವ ಪ್ರತ್ಯವಾಯವೂ ಇಲ್ಲ.

---

# ಪಾದೋದಕ.

ಲೇ- ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ ಮಂಟಮುಂ

ಪಾದೋದಕದ ವಿಷಯವಾಗಿ ಮೊದಲು ಹೂಲಿಯ ಹಿರೇಮಠದ ಚರಮೂರ್ತಿ ಶ್ರೀನೀಲಕಂಠಸ್ವಾಮಿಗಳು ಪದಗಳನ್ನು ರಚಿಸಿ, ಅಪಪ್ರಚಾರಕ್ಕೆ ಇಂಬುಗೊಟ್ಟರು. ಆ ಪದಗಳನ್ನು ಎತ್ತಿ ಶಿವಾನುಭವದಲ್ಲಿ ಪ್ರಸಿದ್ಧಿಸಿ, ಅದು ಸರಿಯಾದದ್ದಲ್ಲವೆಂದು. ಸವದತ್ತಿಯ ಶ್ರೀ. ಮ. ಕ. ಮಾಮನಿಯವರು ನಿರಾಕರಿಸಿದರು. ಬಳಿಕ ರಾ. ಬ ಹಳಕಟ್ಟಿಯವರು ಸಾಧಾರಣವಾಗಿಯೂ ಸವಿಸ್ತಾರವಾಗಿಯೂ ಲೇಖವೊಂದನ್ನು ಬರೆದು, ಶ್ರೀಚರಮೂರ್ತಿಗಳ ಅಭಿಪ್ರಾಯವನ್ನು ಖಂಡಿಸಿ ಅಲ್ಲಗಳೆದರು. ಶ್ರೀ ಗುರುಮೂರ್ತಿದೇವರು ಜಗದ್ಗುರು ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಅವರು ಸಪ್ರಮಾಣವಾಗಿಯೂ ಬಲು ಸೊಗಸಾಗಿಯೂ ಪಾದೋದಕ್ವದ ಮಂಡನ ಮಾಡಿ, ಶ್ರೀಹೂಲಿಯ ಚರಮೂರ್ತಿಯವರನ್ನು ಒಳಿತಾಗಿಯೇ ಎಚ್ಚರಿಸಿದರು. ಶ್ರೀಕುಮಾರ ಶಿವಾನಂದರು ಶ್ರೀಸೀಲಕಂಠಸ್ವಾಮಿಯವರ ಅಭಿಪ್ರಾಯವೇ ಯೋಗ್ಯವೆಂದು ಅದನ್ನು ಎತ್ತಿ ಹಿಡಿದರು. ಶ್ರೀಮಹಾಂತಣ್ಣವರು ಅನೇಕ ಲೌಕಿಕ ಹಾಗು ತಾತ್ವಿಕ ಪ್ರಮಾಣಗಳನ್ನು ತೋರಿಸಿ ಪಾದೋದಕಾವರಣದ ಮಹತ್ವವನ್ನು ಘನವಾಗಿ ಸ್ಥಾಪಿಸಿದರು. ಈ ಎಲ್ಲ ಮಹನೀಯರಂತೆ ಸಮುಚಿತವಾದ ಗ್ರಂಥಪ್ರಮಾಣಗಳನ್ನು ಕೊಟ್ಟು ಬರೆಯಲು ನಾನು ಅಸಮರ್ಥನು. ಆದರೂ ವೀರಶೈವ ಮತದ ವಿಚಾರಗಳಲ್ಲಿ ಯಾವ ಹೆಗ್ಗುರಿಯನ್ನನುಲಕ್ಷಿಸುತ್ತವೆಂಬದನ್ನುಮಾತ್ರ ವಾಚಕಮಹಾಶಯರ ಮುಂದಿಡಲು ಬಯಸುತ್ತೇನೆ

ಅಷ್ಟಾವರಣಗಳೆಲ್ಲವೂ ಸಿಗೂಢವಾದ ವಿಷಯಗಳು. "ಲಿಂಗರೂಪಂ ಜಗತ್ಸರ್ವಂ" ಎಂಬದು ವೀರಶೈವ ಮತದ ಆದಿಸೂತ್ರ. ಗುರು ಲಿಂಗ ಜಂಗಮಗಳಲ್ಲಿ ಭೇದವಿಲ್ಲ. ಭಕ್ತ ಜಂಗಮರಲ್ಲಿ ಭೇದವಿಲ್ಲ. ಅಂಗ ಲಿಂಗಗಳಲ್ಲಿ ಭೇದವಿಲ್ಲ. ಶಿವ-ಶಕ್ತಿಯರಲ್ಲಿ ಅವಿನಾಭಾವ. ಅಷ್ಟಾವರ

ಣಗಳೆಲ್ಲವೂ ಏಕರೂಪ. ಷಟ್‌ಸ್ಥಲಗಳು ಹೆಸರಿಗೆ ಮಾತ್ರವಿರುವವೇ ಹೊರತು ಅವೆಲ್ಲ ಒಂದೇ. ಐಕ್ಯಸಾಧನೆಯೇ ನಮ್ಮ ಗುರಿಯು. ಲಿಂಗಾಂಗ ಸಾಮರಸ್ಯವೇ ನಮ್ಮ ಪರಮಧ್ಯೇಯ. ಈ ಮುಖ್ಯ ಧೋರಣವನ್ನು ಯಾವಾಗಲೂ ನೆನಪಿಟ್ಟೇ ನಾವು ಯಾವ ವಿಷಯವನ್ನಾದರೂ ನಿರೀಕ್ಷಿಸಬೇಕು, ಚರ್ಚಿಸಬೇಕು.

"ಏಕ ಏವ ಶಿವಃ ಸಾಕ್ಷಾತ್‌ಸರ್ವಾನುಗ್ರಾಹಕಃ ಪ್ರಭುಃ।
ಗುರುಜಂಗಮಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ॥"

ಇದರಿಂದ ಗುರು ಲಿಂಗ ಜಂಗಮಗಳ ಏಕರೂಪತೆ ಸಿದ್ಧವಾಗುತ್ತದೆ.

"ಶಿವಭಕ್ತರು ಅಧಿಕರು ನೋಡಯ್ಯ. ಇದಕ್ಕೆ ಅಧಿಕವಾಗಿ ಜಂ
ಗಮವ ಕಂಡೆ. ಈ ದ್ವಿವಿಧವನು ಒಂದೇ ಎಂದು ನಂಬಿದೆ
ಕೂಡಲ ಸಂಗಮದೇವ"

ಇದರಿಂದ ಭಕ್ತಜಂಗಮರ ಅಭೇದವು ತೋರುತ್ತದೆ.

"ಅಂಗಗುಣವರತು ಲಿಂಗವನರಿಯಬೇಕೆಂಬರು. ಅಂಗವರತ
ಮೇಲೆ ಲಿಂಗಕ್ಕೆ ಕುರುಹುಂಟೇ? ಅಂಗವೇ ಲಿಂಗ. ನಿರಂಗವೇ ಸಂಗ
ಈಭಾವದಂಗವನರಿಯಬೇಕೆಂದ, ನಮ್ಮ ಅಂಬಿಗರ ಚೌಡಯ್ಯ"

ಇದರಿಂದ ಅಂಗಲಿಂಗಗಳಲ್ಲಿ ಭೇದವೆಣಿಸಕೂಡದೆಂಬದು ವ್ಯಕ್ತವಾಗುತ್ತದೆ.

"ಯಃಶಿವೋನಾಮರೂಪಾಭ್ಯಾಂ, ಯಾದೇವೀಸರ್ವಮಂಗಳಾ।
ತಯೋಃ ಸಂಸ್ಮರಣಾತ್ ಪುಂಸಾಂ, ಸರ್ವತೋಜಯಮಂಗಲಂ॥"
"ವಾಗರ್ಥಾವಿವ ಸಂಪೃಕ್ತೌ, ವಾಗರ್ಥಪ್ರತಿಪತ್ತಯೇ।
ಜಗತಃಪಿತರೌ ವಂದೇ, ಪಾರ್ವತೀಪರಮೇಶ್ವರೌ॥"

ಇವುಗಳಿಂದ ಶಿವಶಕ್ತಿಯರಲ್ಲಿ ಅವಿನಾಭಾವವು ಹೊರಹೊಮ್ಮುತ್ತದೆ.

"...ಆವಾವಸ್ಥಲವಂಗಂಗೊಂಡಡೂ ಆ ಸ್ಥಲದಲ್ಲಿ ಷಡ್ವಿಧಲಿಂಗದಲ್ಲಿ ಬೆರಸಿ ಬೇರಿಲ್ಲದಿರಬಲ್ಲಡೆ ಸದ್ಭಕ್ತನೆಂಬೆನಯ್ಯ, ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ"

ಇದರಿಂದ ಷಟ್‌ಸ್ಥಲಗಳ ಸಮಾನತೆಯು ಪ್ರಕಟವಾಗುತ್ತದೆ. ಇರಲಿ.

ಈ ಲೋಕದಲ್ಲಿ ಜನ್ಮಿಸಿದಾಗಿನಿಂದ ನಮಗೆ ಭೇದಭಾವನೆಯೇ ಮೈಯ್ಯುಂಡುಹೋಗಿರುತ್ತದೆ. ನಾನು ನೀನು ಅವನು ಅವಳು ಅದು ಇದು ಮುಂತಾದ ಸಜಾತೀಯ-ವಿಜಾತೀಯ-ಸ್ವಗತಾದಿ ಭೇದಗಳಲ್ಲಿಯೇ ಬೆಳೆದಿರುತ್ತೇವೆ. ಆಣವಾದಿ ಮಲತ್ರಯಗಳಿಗೆ ಒಳಗಾಗಿರುತ್ತೇವೆ. ಆದರೆ ಅವೆಲ್ಲ ಸುಳ್ಳು. ಅದನ್ನು ಸಾಂಗಸಾರ ವಿಚಾರಪೂರ್ವಕವಾಗಿ ಸಂಪೂರ್ಣ ತೆಗೆದುಹಾಕಿ, ಮರೆತುಬಿಟ್ಟು, ಶಿರುಗಿ ಅದ್ವೈತ ಸಾಧನೆಯನ್ನೇ ಮಾಡಬೇಕಾಗಿದೆ. ಇದಕ್ಕಾಗಿಯೇ ಲಿಂಗಾಯತ ಮತವು ವೈದೋರಿರುತ್ತದೆ. ನಾವು ಭವಿಗಳಂತೆ ಹುಟ್ಟು ಸಾವುಗಳಿಗೀಡಾಗತಕ್ಕವರಲ್ಲ. ಏಕೇನ ಜನ್ಮನಾ ಮುಕ್ತಿಯನ್ನು (ಲಿಂಗಾಂಗೈಕ್ಯವನ್ನು) ಪಡೆಯತಕ್ಕವರು. ಭೇದಭಾವನೆಯನ್ನು ಕಡೆತನಕ ಸ್ಥಿರಪಡಿಸಿಕೊಂಡು ಹೋಗಲಿಕ್ಕೆ ನಾವೇನು ಲೌಕಿಕರೇ? ಭವಿಗಳೇ? ಅಂಗ (ಸಾಕಾರ ಸಚೇತನ ವಸ್ತು) ಲಿಂಗ (ನಿರಾಕಾರ ನಿರಂಜನ ವಸ್ತು) ಇವೆರಡನ್ನೂ ಒಂದುಗೂಡಿಸುವವರು. ಶ್ರೀಮನ್ನಿಜಗುಣಶಿವಯೋಗಿಗಳು "ಬಳಸದಿರದ್ವೈತವನು ಬಾಹ್ಯದಲಿ ನಿನ್ನೊಳಗೇಕೋ ಭಾವನೆಯೆಡಗೂಡು" ಎಂದು ಹೇಳಿದ್ದಾರೆ ಸರಿ. ಆದರೆ ಅದು ಅಲೌಕಿಕ ನಿತ್ಯವ್ಯವಹಾರಕ್ಕೆ ಮಾತ್ರ ಸಂಬಂಧಿಸಿದುದು. ಲಿಂಗಾಯತರು ತತ್ವಕ್ರಿಯಾಚರಣೆಗೆ (ಇದು ಏಕಾಂತಿಕವಾದುದು-ಬಹಿರ್ಗತವಾದುದಲ್ಲ) ಹತ್ತಲಾರದು. ಭವಿಗಳ ಭೇದದೃಷ್ಟಿಯಿಂದ ನೋಡುವವರಿಗೆ ಪಾದೋದಕವನ್ನು ಲಿಂಗಕ್ಕೆ ಎರೆಯುವದೂ ಸಮರ್ಪಿಸುವದೂ ವಿಚಿತ್ರವಾಗಿ ತೋರಬಹುದು. ಆದರೆ ವೀರಶೈವರ ಐಕ್ಯದೃಷ್ಟಿಯಿಂದ ನಿರೀಕ್ಷಿಸುವವರಿಗೆ ಅದೆಲ್ಲವೂ ಸುಸಂಗತವಾಗಿಯೂ ಸಕ್ರಮವಾಗಿಯೂ ಸುವಿವೇಕಯುಕ್ತವಾಗಿಯೂ ತೋರುವದರಲ್ಲಿ ಅದಾವ ಸಂದೇಹವೂ ಇಲ್ಲೆಂಬುದು ಸ್ಪಷ್ಟವು ಆದುದರಿಂದ ಅಪಪ್ರಚಾರವು ಸಮಂಜಸವಲ್ಲೆಂದು ನನ್ನ ಭಾವನೆ.

---

# ಪಾದೋದಕವು.

(ಲೇಖಕ—ಡಾ. ಪಟ್ಟೇದ ವ್ಹೆಟಿರನರಿ ಅ. ಸರ್ಜನ, ವಿಜಾಪುರ)

---

ಲಿಂಗಾಯತರೆಂದು ಹೇಳಿಸಿಕೊಳ್ಳುವ ಈಗಿನ ವೀರಶೈವರಲ್ಲಿ ತಮ್ಮ ಧರ್ಮದ ಸರಿಯಾದ ಜ್ಞಾನವಿಲ್ಲದೆ ಮನಬಂದಂತೆ ಕ್ರಿಯೆಗಳ ಮೇಲೆ ಟೀಕೆ ಮಾಡುತ್ತಿರುವದರಿಂದ ಎಂಥ ವಿಪರೀತ ಪರಿಣಾಮಗಳಾಗುತ್ತಿರುವದೆಂಬುದು ಶಿವಾನುಭವ ಸಂಚಿಕೆ ಸಪ್ಟಂಬರ ೧೯೪೧ ನೇಯದರಲ್ಲಿಯ 'ಪಾದೋದಕ' ಎಂಬ ವಿಷಯದಕೆಳಗೆ ಖಂಡನಾತ್ಮಕ ಲೇಖವನ್ನು ಓದಿದವರಿಗೆ ಅನಿಸದೆ ಇರಲಾರದು. ಧರ್ಮತತ್ವದಮೇಲೆ ಟೀಕೆ ಮಾಡುವದು ಅಷ್ಟೊಂದು ಹಗುರಾದ ಕೆಲಸವಲ್ಲ. ಹಾಗೂ ಇಂಥ ಟೀಕೆಗಳು ಯಾಕೆ ಆಗುತ್ತಿರುವವೆಂದು ನಾವು ರೇಗಿಗೇಳಕೂಡದು. ಇಂಥ ಟೀಕೆಗಳು ಆಗಹತ್ತಿದರೇನೇ ಅದರ ಸತ್ಯಾಂಶವು ಹೊರಬಿದ್ದು ಅಜ್ಞಾನದ ಕೊಳಚೆಯು ತೊಳೆದುಹೋಗುತ್ತದೆ. ಇಂಥ ಟೀಕೆಗಳು ಏಳಹತ್ತಿದರೆ ಜನರು ಸಾಮಾನ್ಯತಃ ಎಂಥ ಅಜ್ಞಾನದಲ್ಲಿ ಇರುವರೆಂಬುದು ಸಹಜ ತಿಳಿದು ಅದಕ್ಕೆ ಅನುಸರಿಸಿ ಉಪಾಯಗಳನ್ನು ಕಂಡುಹಿಡಿದು ಅವರ ಅಜ್ಞಾನವನ್ನು ಕಳೆಯಲು ಶಕ್ಯವಾಗುತ್ತದೆ.

ಲಿಂಗಧರ್ಮದ ಕ್ರಿಯಾಚಾರವು ಬಹು ಗೂಢವಾದದ್ದು. ಅದನ್ನು ತಿಳಿಯಲು ಸಾಮಾನ್ಯ ಜನರಿಗೆ ಕಷ್ಟವು. ಈಗಿನ ಸ್ವಾರ್ಥಪರಾಯಣರ ವಿಚಾರವೆತ್ತ! ಲಿಂಗಧರ್ಮದ ತತ್ವವೆತ್ತ! ಅದನ್ನು ಸ್ವಾರ್ಥಿಗಳು ಸ್ವಾಧೀನಪಡಿಸಿಕೊಳ್ಳುವದು ಅಶಕ್ಯವು. ಒಮ್ಮೆಲೇ ಲಿಂಗಧರ್ಮದ ಕ್ರಿಯಾಚಾರದಮೇಲೆ ಟೀಕೆ ಮಾಡುವದು ಮಹತ್ತಾದ ತಪ್ಪು. ತಮಗೆ ತಿಳಿಯದಿದ್ದರೆ ಅನುಭವಿಗಳ ಕಡೆಗೆ ಹೋಗಿ ತಿಳಿದುಕೊಳ್ಳಲೆತ್ನಿಸಬೇಕು. ತಮಗೆ ಅದರಿಂದ ಸಮಾಧಾನವಾಗದಿದ್ದರೆ ಪ್ರಸಿದ್ಧ ರೀತಿಯಿಂದ ಸೌಮ್ಯವಾಗಿ ತಮ್ಮ ಶಂಕೆಗಳನ್ನು ಶಿವಾನುಭವದ ಮುಖಾಂತರ ವಿಚಾರಣೆಗಾಗಿ ಬಲ್ಲವರ ಮುಂದೆ ಇಟ್ಟು, ಸಂಶಯಗಳನ್ನು ಪರಿಹಾರ ಮಾಡಿಕೊಳ್ಳುವದು ಹಿತವು. ಆದ್ದರಿಂದ ಶಿವಾನುಭವ ಪತ್ರಿಕೆಯ ಸಂಪಾದಕರು ತಮ್ಮ ಪತ್ರಿಕೆಯಲ್ಲಿ ಇಂಥ ಟೀಕೆಗಳಿಗೆ ಆಸ್ಪದ ಕೊಟ್ಟಿದ್ದು ಹಿತಕಾರಿ ಎಂದು ನಾವು

ಭಾವಿಸಬೇಕು. ಟೀಕೆ ಮಾಡಿದ ಕೆಲವು ವಿಷಯಗಳು ಮನಸ್ಸಿಗೆ ಹತ್ತು ವಂಥವಿರಬಹುದು. ಆದರೆ ಅದಕ್ಕೆ ಯಾರೂ ಸಿಟ್ಟು ಹಿಡಿಯದೆ ಸಮರ್ಪಕ ಉತ್ತರ ಕೊಟ್ಟು ಶಂಕೆಗಳಿಗೆ ಸಮಾಧಾನ ಹೇಳುವದು ತಿಳಿದವರ ಕರ್ತವ್ಯವಾಗಿದೆ. ಅಜ್ಞಾನ ಕೊಳಚೆಯನ್ನು ಹೋಗಲಾಡಿಸಲು ತಕ್ಕ ಉಪಾಯಗಳನ್ನು ಸ್ವತಂತ್ರವಾಗಿ ವಿಚಾರಿಸುವದು ನೆಟ್ಟಗೆಂದು ತಿಳಿದು ಸದ್ಯದ ವಿಷಯದ ಕಡೆಗೆ ಹೊರಳುವಾ.

ಶರಣರ ಕ್ರಿಯೆಗಳೆಂದರೆ ಲಿಂಗದೆಡೆಯಾಟವು. ಅವು ಸಾಮಾನ್ಯ ವಿಚಾರಗಳಿಗೆ ನಿಲುಕವು. ಅವರಾಟಗಳು ಕ್ರಮರೂಪ ವಿಚಾರ ಸರಣಿಯ ಜ್ಞಾನಗಳ ಮೆಟ್ಟಿಲುಗಳನ್ನು ಮೆಟ್ಟಿ ಆಚೆಗೆ ನಿಂತಿರುತ್ತವೆ. ವೈರಾಗ್ಯದ ಮೇಲಾಟಗಳಿಗೂ ಅವು ಸಿಕ್ಕಿಲ್ಲ. ಹೆಚ್ಚು ಅಥವಾ ಶ್ರೇಷ್ಠವೆಂಬ ವಿಚಾರಗಳು ಕೆಳಗೇ ಬಿದ್ದು ಹೋಗುತ್ತವೆ. ಅವು ಅಖಂಡ ಭಕ್ತಿಯ ಜ್ಯೋತಿರ್ಲಿಂಗದ ನಿರ್ಗುಣಭಾವದ ಸಮತಾ ತಳಹದಿಯ ಮೇಲಿನ ಸಹಜ ಲೋಲಾಟದ ಚರಸ್ವರೂಪಗಳಾಗಿವೆ. ಈ ವಿಶಿಷ್ಟ ಜ್ಞಾನದೃಷ್ಟಿಯನ್ನೇ ಕ್ರಿಯಾರೂಪದಿಂದ ಪಾದೋದಕದಲ್ಲಿ ನಿರೂಪಿಸಿರುವರು. ಯಾರಲ್ಲಿ ಈ ವಿಶಿಷ್ಟಜ್ಞಾನದ ಒರೆಗಲ್ಲೋ ಅವರಿಗೇನೇ ಅವುಗಳ ಪರೀಕ್ಷೆಯು. ಅವರಿಗೇನೇ ಅದ್ವೈತದ ಅಖಂಡವಾದ ವಿಶೇಷ ಜ್ಞಾನಾನಂದವು. ಇಂಥ ಅಗೋಚರ ಜ್ಞಾನಾನಂದದ ಒಡಲುಗಳನ್ನು ನಿತ್ಯ ಭಕ್ತಿ ಮಾರ್ಗಕ್ಕೆ ಜೋಡಿಸಿ ವೀರಶೈವರು ಆಚಾರದಲ್ಲಿ ತಂದಿರುವರು. ಆದ್ದರಿಂದಲೇ ಇದು ಸಾಮಾನ್ಯ ಅನ್ಯ ದ್ವೈತ ಕ್ರಿಯಾಮಾರ್ಗಿಗಳಿಗೆ ಮೇಲೆ ಮೇಲೆ ವಿಪರೀತ ತೋರುವದು ಸಹಜ. ಆದರೆ ಒಳಹೊಕ್ಕು ನೋಡುವ ಅದ್ವೈತರಿಗೆ ಸಮಂಜಸವಾಗಿಯೂ ಹೊರಗಿನ ಲೆಕ್ಕಿಗರಿಗೆ ಮೀರಿದುದಾಗಿಯೂ ತಿಳಿಯದಂತಹದಾಗಿಯೂ ಕಂಡುಬರುತ್ತದೆ.

ವೀರಶೈವರ ಇಂಥ ಹಲವು ತರದ ಆಚಾರಗಳಲ್ಲಿ ಪಾದೋದಕ ತೀರ್ಥವು ಒಂದಾಗಿದೆ.

ನಾನು ಗ್ರಂಥಗಳ ಆಧಾರವನ್ನು ಕೊಡದೆ ಬರೇ ಶಿವಾನುಭವದ ವಿಚಾರಗಳನ್ನಷ್ಟೇ ತಮ್ಮ ಮುಂದೆ ಇಡುವೆನು. ಗ್ರಂಥಗಳನ್ನು ಎಷ್ಟೋ ಜನರಿಗೆ ಓದುವದು ಶಕ್ಯವಿರಲಿಕ್ಕಿಲ್ಲ. ಓದಿದರೂ ಅದರೊಳಗಿನ ತಿರುಳು ಕಂಡುಹಿಡಿಯುವದು ಕಷ್ಟ. ಆದರೆ ತಿಳುವಳಿಕೆಯೂ ವಿಚಾರ ಸಾರವೂ

ಶಿವಾನುಭವವೂ ಕಡೆಯಲ್ಲಿ ಎಲ್ಲರಲ್ಲಿ ಮಾಡುವದು ಒಂದೇ ತರದ್ದು. ಅನುಭವದ ನುಡಿಗಳೇ ಆಗಮವಾಕ್ಯ. ಆದ್ದರಿಂದ ಅನುಭಾವವನ್ನೇ ಮುಂದಿಟ್ಟು ವಿಚಾರಿಸುವಾ. ಈ ಅನುಭಾವಗಳನ್ನು ಮುಂದಿಡುವಾಗ ಸೃಷ್ಟಿಜ್ಞಾನದ ವಚನಗಳಲ್ಲಿಯೂ ಇತರೇ ಶಿವಶರಣರ ನುಡಿಗಳಲ್ಲಿಯೂ ಬಂದಿರುವ ಕ್ಲಿಷ್ಟ ಶಬ್ದಗಳನ್ನು ಉಪಯೋಗಿಸದೆ ಭಾವವನ್ನು ಮುಂದಿಡ ಹೋದರೆ ವಿಷಯವು ಹನುಮನ ಬಾಲದಂತೆ ಬೆಳೆಯುಹತ್ತುವದೆಂಬ ಭಯದಿಂದ ಅಂಥ ಶಬ್ದಗಳನ್ನೇ ನಾನಾದರೂ ಕೆಳಗೆ ತೆಗೆದುಕೊಂಡಿರುವೆನು. ಅದಕ್ಕಾಗಿ ಕ್ಷಮಿಸಬೇಕು.

ಮಹಾಲಿಂಗದಲ್ಲಿ ಒಡಮೂಡಿದ ತ್ರಿವಿಧ ಸ್ವರೂಪಗಳಾದ ನಿಷ್ಕಳ ಲಿಂಗ, ಶಿವಲಿಂಗ, ಚರಲಿಂಗಗಳನ್ನು ಸ್ಮರಿಸಿ ಅವನ್ನೇ ಶಿವರೂಪ, ಶಿವ (ಭಾವ) ಲಿಂಗ, ಶಿವಚೈತನ್ಯರೂಪಗಳಾಗಿ ಭಾವಕ್ಕೆ ತಂದು ಪಡಕೊಳ್ಳುವ ಕಾಲಕ್ಕೆ ನಿಜವಸ್ತುವನ್ನು ಇಬ್ಭಾಗಿಸಿ ಪೀಠದಲ್ಲಿ ಮೂರ್ತಗೊಂಡ ಗುರುವಿನಲ್ಲಿ ಶಿವರೂಪ, ಲಿಂಗ, ಚೈತನ್ಯಗಳನ್ನು ಆಹ್ವಾನಿಸಿ ಆ ಮೂರ್ತಿಗೆ "ಗುರುಲಿಂಗಜಂಗಮ"ವೆಂತಲೂ ಪಡಕೊಳ್ಳುವ ಭಕ್ತನಲ್ಲಿ ಲಿಂಗ ಚೈತನ್ಯವನ್ನು ಆಹ್ವಾನಿಸಿ ಲಿಂಗಜಂಗಮವೆಂತಲೂ ತದನಂತರ ಇತರೇ ಪಡಕೊಳ್ಳುವರಲ್ಲಿ ಚೈತನ್ಯರೂಪವನ್ನು ಆಹ್ವಾನಿಸಿ ಶರಣ (ಭಕ್ತ) ಜಂಗಮವೆಂತಲೂ ತಿಳಿಯುವದುಂಟು. ಈ ಮೂವರು ಪಾದತೀರ್ಥ ಪ್ರಸಾದವನ್ನು ಸಲ್ಲಿಸುವ ಜ್ಞಾನಕ್ಕೆ ಪಾದೋದಕ ಎಂಬ ಹೆಸರು. ಈ ಪಾದೋದಕ ಜ್ಞಾನಾನಂದವು ನಿಜವಸ್ತುವಾದ ಮಹಾಲಿಂಗದಲ್ಲಿ ಮೂಡಿದ ಭಾಗಗಳನ್ನು ಸಮರಸಮಾಡಿ ಒಟ್ಟುಗೂಡಿಸಿ ಪಡೆಯುವ ನಿರ್ಗುಣ ಜ್ಞಾನದ ಸಾರವಾಗಿದೆ. ನಿಷ್ಕಳಲಿಂಗ ಶಿವಲಿಂಗಗಳಲ್ಲಿರುವ ಸಂಬಂಧವೇ "ಗುರುಲಿಂಗ ಜಂಗಮ' ಮೂರ್ತಿಗೂ ಪಡಕೊಳ್ಳುವ ಸದ್ಭಕ್ತನಾದ ಲಿಂಗ ಜಂಗಮಕ್ಕೂ ಉಂಟು. ಶಿವಲಿಂಗ ಚರಲಿಂಗಗಳಲ್ಲಿರುವ ನಿಕಟ ಸಂಬಂಧವೇ ಲಿಂಗಜಂಗಮಕ್ಕೂ ಭಕ್ತ ಜಂಗಮಕ್ಕೂ ಉಂಟು. ನಿಷ್ಕಳ, ಶಿವ, ಚರಲಿಂಗಗಳೆಂಬ ಮೂರು ಮಂಡಲಗಳು ಬಿಚ್ಚಿ ಬೇರೆಯಾಗದ ಬೆಸುಗೆಯೇ ಮಹಾಲಿಂಗವು. ಇವನ್ನೇ ಎಳೆದು ಸದ್ಭಾವಕ್ಕೆ ತಂದಲ್ಲಿ ಭಾವ, ಪ್ರಾಣ, ಇಷ್ಟ ಲಿಂಗಗಳೆನಿಸುವವು. ಮಹಾಲಿಂಗದಲ್ಲಿ ಅಡಕಾಗಿ ನಿಂತ ನಿಷ್ಕಳ, ಶಿವ, ಚರಲಿಂಗಗಳ ಇರವಿನಂತೆ 'ಗುರುಲಿಂಗಜಂಗಮ' ಮೂರ್ತಿಯಲ್ಲಿ ಭಾವಪ್ರಾಣೇಷ್ಟ ಲಿಂಗಗಳು ಅಡಗಿವೆ. ಈ ಮೂರ್ತಿಯನ್ನು ಪೂಜಿ

ಗಾಗಿ ಪೀಠದಲ್ಲಿ ಕುಳ್ಳಿರಿಸಿದಾಗ್ಗೆ ಅವರೊಳಡಗಿದ ಲಿಂಗಗಳು ಬಹಿರ್ಮುಖವೆನಿಸಿದಾಗಳೇ ಇಷ್ಟಲಿಂಗವಾಗಿಯೂ, ಕರಲಿಂಗವೇ ಪ್ರಾಣಲಿಂಗವಾಗಿಯೂ, ಜಿಹ್ವೆಯಿಂದ ಪಠಿಸುತ್ತಿರುವ ಮಂತ್ರೋಚ್ಚರಣೆಯು ಭಾವಲಿಂಗವಾಗಿಯೂ ಇದಿರಿಟ್ಟು ಪೂಜಿಸುವ 'ಲಿಂಗಜಂಗಮು'ಕ್ಕೆ ಪೂಜೆಗೋಸುಗ ಮುಂದೆ ಇರುವವು.

ನಿವೃತ್ತಿಯಲ್ಲಿ ಅಂದರೆ "ಭಾಂಡಸ್ಥಲ"ಕ್ಕೆ ಹೋಗಿ ನಿಲ್ಲುವ ವರೆಗೆ "ಚರಲಿಂಗದ" ಕ್ರಿಯಾಜ್ಞಾನೇಚ್ಛೆಗಳು ಶಿವಲಿಂಗದ ಕಳೇಚ್ಛೆಗೆ ಅಧೀನವಾಗಿರುವವು. ಶಿವಲಿಂಗದ ಜ್ಞಾನೇಚ್ಛೆ ಕ್ರಿಯೆಗಳ ಕಳೆಗಳು ನಿಷ್ಕಳ ಲಿಂಗದ ಇಚ್ಛಾಜ್ಞಾನ ಕ್ರಿಯೆಗಳ ಸೂತ್ರ ಕಳೆಗೆ ಅಧೀನವಾಗಿರುತ್ತವೆ. ಹಾಗೂ ಭಾಜನಸ್ಥಳದ ಇರವಿನಲ್ಲಿ ನಿಷ್ಕಳಲಿಂಗದ ಸಹಜ ಝುರಿಯಾಗಿರುವ ಜ್ಞಾನಾಮೃತವು ಸಕಲರೂಪವಾದ ಮಹಾಲಿಂಗವಾಗುವ ವರೆಗೆ ೯ ಬಗೆಯ ಸ್ಥಳಾಂತರವನ್ನು ಹೊಂದುವದುಂಟು. ಈ ಜ್ಞಾನಾಮೃತದ ಸಹಜ ನೆಲೆಗಳು ಮಹಾಲಿಂಗದಲ್ಲಿ ಜ್ಞಾನಾತೀತವಾಗಿ ನೆಲಿಸಿದ ಸಹಜ ಮಾಟದ ಸೂತ್ರದಲ್ಲಿರುವವು. ಈ ಹತ್ತು ರೂಪಾಂತರಗಳೇ ಕ್ರಿಯೆಗಾಗಿ ಪಾದೋದಕದಲ್ಲಿ ಬಂದಿವೆ. ಆ ಪಾದೋದಕ ಜ್ಞಾನಗಳ ಹೆಸರುಗಳು:– ೧ ಗುರುಪಾದೋಕ ೨ ಲಿಂಗಪಾದೋದಕ ೩ ಜಂಗಮುಪಾದೋದಕ ೪ ಸ್ಪರ್ಶನೋದಕ ೫ ಅವಧಾನೋದಕ (ಅವಧಾರಣೋದಕ) ೬ ಆಪ್ಯಾಯನೋದಕ ೭ ಹಸ್ತೋದಕ ೮ ಪರಿಣಾಮೋದಕ ೯ ನಿರ್ನಾಮೋದಕ ೧೦ ಸತ್ಯೋದಕ.

ಜ್ಞಾನಾತೀತವಾದ ಮಹಾಲಿಂಗದ ಮುಕ್ತಕಳೆಯು ಮಹಾಜ್ಞಾನದಲ್ಲಿ ಪ್ರಣದ ರೂಪಗಳಾದ "ಹ ಳ ಕ್ಷ" ಬಿಂದುಗಳ ನಿಷ್ಕಳ ಕಳೆಗೂ "ಬ ಸ ವ" ನಾದದ ಸಕಲ ನಿಷ್ಕಳ ಕಳೆಗೂ 'ಅ ಉ ಮ' ಕಳೆಯ ಸಕಲ ಕಳೆಗೂ ೯ ಪ್ರಕಾರವಾಗಿ ಇಂಬುಗೊಟ್ಟಿದ್ದು ಮುಕ್ತಾವಸ್ಥೆಯ ಸಮರಸಕ್ಕೆ ಬರುವಾಗ್ಗೆ ಈ ಬಿಂದು ನಾದ ಕಳೆಗಳಿಗೆ ಪೂರ್ಣಾವಸ್ಥೆಯಲ್ಲಿ ಈ ೯ ಜ್ಞಾನಗಳೂ ಪರಿಣಮಿಸಬೇಕಾಗಿ ನಂತರ ಅಖಂಡ ಕಳೆಯಾಗಿ ನಿಲ್ಲುವದುಂಟು.

"ಲಿಂಗ" ಈ ಶಬ್ದವು ಸಾಮಾನ್ಯವಾಗಿ ಬಹು ವಿಸ್ತೃತ ಅರ್ಥಗಳಲ್ಲಿ ಉಪಯೋಗ ಮಾಡುವದರಲ್ಲಿ ಬರುತ್ತಿದ್ದು ಅದರ ಕಾರ್ಯಕ್ಷೇತ್ರದ

ವಿಧಾನವಾದರೂ ಬದಲಾವಣೆಯಾಗುತ್ತ ಹೋಗುತ್ತದೆ. ಆದ್ದರಿಂದ ಎಲ್ಲ ಸ್ಥಳಗಳಲ್ಲಿ ಒಂದೇ ಭಾವವನ್ನು ತೆಗೆದುಕೊಳ್ಳದೆ ಆದರ ಸಮಂಜಸ ಕಾರ್ಯರೂಪದಂತೆ ಸ್ಥಳಕುಳಗಳ ತಿಳುವಳಿಕೆಯಾಗಬೇಕು. ಲಿಂಗವು ಶಿವಜೀವರ ನಡುವೆ ಕಟ್ಟಿದ ಸೇತುವೆಯಂತೆ ಇರುವದಲ್ಲದೆ ಶಿವಜೀವರುಗಳು ಅದರ ಆಧಾರದ ಮೇಲೆ ನಿಂತಿರುತ್ತಾರೆ. ಆದ್ದರಿಂದ ಆಯಾ ಸ್ಥಾನಕ್ಕನುಸರಿಸಿ ಅದರ ಅರ್ಥಗಳಲ್ಲಿ ತಾರತಮ್ಯಭೇದವಾಗುವದು. ಇದಲ್ಲದೆ ಶೈವರು ಮಾಡುವ ಇಷ್ಟ ಪ್ರಾಣ ಭಾವಲಿಂಗಗಳ ವಿಂಗಡಣೆಯ ಅರ್ಥಕ್ಕೂ ವೀರಶೈವರು ಆ ಲಿಂಗಗಳನ್ನು (ಅವೇ ಹೆಸರುಗಳನ್ನು) ಉಪಯೋಗಿಸುವಾಗ ಮಾಡುವ ಅರ್ಥಕ್ಕೂ ಮಹದಂತರ ಉಂಟು. ವೀರಶೈವರ ಇಷ್ಟಲಿಂಗದಲ್ಲಿ ಪ್ರಾಣ ಭಾವ ಲಿಂಗಗಳು ಅಡಕವಾಗಿ ಅದು ಅಖಂಡರೂಪವಾದ ಜಗದಾದಿ ಲಿಂಗವಾಗಿದೆ. ಆದ್ದರಿಂದ ಅಲ್ಲಲ್ಲಿ ಯಾರಾರೋ ಕೊಟ್ಟ ಅರ್ಥಗಳ ಪೇಚಾಟದಲ್ಲಿ ಬೀಳದೆ ಬರೀ ಸತ್ಯ ವಸ್ತುಸ್ಥಿತಿಯ ಕಾರ್ಯಕಾರಣ ಭಾವಗಳ ಕಡೆಗೆ ಗುರಿ ಇಟ್ಟು ನೋಡುತ್ತ ಹೋದರೆ ದೋಷ ತಟ್ಟುವದಿಲ್ಲ.

ಪಾದೋದಕಗಳಿಗೆ ಕಾರ್ಯಕಾರಣಾರ್ಥಗಳು:—

ಗುರುರೂಪವನ್ನು ತಾಳಿದ ಕಾರಣ ಆತನ ಪ್ರಾಣಲಿಂಗವು ವಿಂಗಡಿಸಲ್ಪಟ್ಟು ಮುಂದಿರುವ ಭಕ್ತನು "ಲಿಂಗಜಂಗಮ"ವಾಗಿಯೂ ಆತನು (ಗುರುವು) ಕರದಲ್ಲಿ ಧರಿಸಿದ ಲಿಂಗವು ಪ್ರಾಣದ ಚರರೂಪಿನ "ಕ್ರಿಯಾಲಿಂಗ"ವಾಗಿ ತೋರಿತು. ಇವೆರಡನ್ನೂ ಬೆರಿಸಿ ತನ್ನೊಳ್ ಅಭಿನ್ನ ಜಂಗಮತ್ವವನ್ನು ಪಡೆಯಬೇಕೆಂದು ಬಟ್ಟಲದೊಳಗಣ ಜಲಕ್ಕೆ ತನ್ನಂಗವಾದ ಪಾದಸ್ಪರ್ಶದಿಂದ (ಯಾಕೆಂದರೆ ಪಾದದಲ್ಲಿ ನೆಲಿಸಿದ ಗುರುತ್ವವು ಅಖಂಡಸ್ವರೂಪದ್ದಾಗಿರುತ್ತದೆ.) ಕರುಣಾರಸವನ್ನು ಸುರಿದು ಗುರುಪಾದೋದಕವನ್ನು ಮಾಡಿ, ಆ ಪಾದಕ್ಕೆ ಭಕ್ತನ ಕರಾಂಗುಲಿಗಳಿಂದ ಗುರು ಪಾದೋದಕ ಸ್ಪರ್ಶಿಸಿದಲ್ಲಿ ಲಿಂಗ ಪಾದೋದಕವಾಗಿ ಸಿದ್ಧಿಸಿತು. ಆ ಲಿಂಗ ಪಾದೋದಕವನ್ನು ಪಾದಾಂಗುಷ್ಠಗಳಿಂದ ಸುರಿಸಿದಲ್ಲಿ ಜಂಗಮ ಪಾದೋದಕವೆನಿಸಿತು. ಅಂಥ ಜಂಗಮ ಪಾದೋದಕಕ್ಕೆ ಗುರುವು ತನ ಹಸ್ತದಿಂದ ಸ್ಪರ್ಶಮಾಡಿದಲ್ಲಿ ಸ್ಪರ್ಶನೋದಕವಾಯಿತು. ಆತನು ತೀರ್ಥವನ್ನು ಶಕ್ತಿಸ್ವರೂಪದ ತನ್ನ ಕಲಾಂಗುಲಿಗಳಿಂದ ಅವಧರಿಸಿ ಲಿಂಗ

# ಸ್ಫುಟ ವಿಚಾರಗಳು.

**ಪ್ರಕೃತ ಸಂಚಿಕೆಯಲ್ಲಿಯ ಲೇಖಗಳು:**— ಈ ಸಂಚಿಕೆಯಲ್ಲಿ ಲಿಂಗಧಾರಣ, ದೀಕ್ಷೆ, ಪಾದೋದಕ ಈ ವಿಷಯಗಳು ಮುಂದುವರಿಸಲ್ಪಟ್ಟಿರುತ್ತವೆ. ಈ ವಿಷಯಗಳ ಸಂಬಂಧವಾಗಿ ಮಹತ್ವದ ಲೇಖಗಳು ಅನೇಕ ಮಹನೀಯರಿಂದ ಬರೆಯಲ್ಪಡುತ್ತಾ ಬಂದಿವೆ. ಅವೆಲ್ಲವೂ ವಿಚಾರ ಪರಿಪ್ಲುತವೂ ಬೋಧಕವೂ ಆಗಿರುತ್ತವೆಂಬುದರಲ್ಲಿ ಅವ ಸಂದೇಹವೂ ಇರಲಾರದು. ಅವುಗಳಲ್ಲಿ ವಚನಶಾಸ್ತ್ರದ ತತ್ವಗಳು ಆಳವಾಗಿ ವಿವೇಚಿಸಲ್ಪಟ್ಟಿರುವದು ಅವುಗಳ ವೈಶಿಷ್ಟ್ಯವಾಗಿದೆ. ಆದರೆ ಕೆಲವು ಲೇಖಗಳಲ್ಲಿ ಮಾತ್ರ ಕೆಲವು ಮಹತ್ವದ ಸಮಾಜಗಳ ಮೇಲೆ ಕಟುವಾದ ಟೀಕೆಗಳು ಮಾಡಲ್ಪಟ್ಟಿವೆ. ಅವು ಪ್ರಕೃತವಿಷಯಕ್ಕೆ ಸಂಬಂಧಿಸಿದವಲ್ಲ. ಆದ್ದರಿಂದ ಅಂಥ ಟೀಕೆಗಳನ್ನು ಲೇಖಕರು ಮಾಡದಿರಲಿಕ್ಕೆ ನಾವು ಅವರಿಗೆ ನಮ್ರ ಪೂರ್ವಕವಾಗಿ ಸೂಚಿಸುತ್ತೇವೆ.

ಅಷ್ಟಾವರಣಗಳು ಬಹು ಗರ್ಭಿತಾರ್ಥವುಳ್ಳವು. ಆದರೆ ಅವುಗಳಿಗೂ ಮನುಷ್ಯನ ಅಂತರಂಗಕ್ಕೂ ಇರುವ ಸಂಬಂಧವನ್ನರಿಯದೆ ನಾವು ಅವುಗಳನ್ನು ಆಚರಿಸುತ್ತೇವೆ. ಅವುಗಳ ಮರ್ಮದ ತಿಳುವಳಿಕೆಯು ಇರುವದಿಲ್ಲಾದ್ದರಿಂದ ಅವುಗಳ ವಿಷಯವಾಗಿ ಅನೇಕ ತಪ್ಪು ಅಭಿಪ್ರಾಯಗಳುಂಟಾಗಿರುತ್ತವೆ. "ಪಾದೋದಕ" ಈ ಆವರಣಕ್ಕೆ ಈ ಸ್ಥಿತಿಯುಂಟಾಗಿರುತ್ತದೆ. ಶಿವಾನುಭವ ಪತ್ರಿಕೆಯಲ್ಲಿ "ಪಾದೋದಕ" ಈ ವಿಷಯದ ಬಗ್ಗೆ ಕೆಲವು ಟೀಕೆಗಳು ಬಂದಿವೆ. ಈ ಆವರಣದ ನಿಜಸ್ಥಿತಿಯನ್ನರಿತವರಿಗೆ ಇಂಥ ಟೀಕೆಗಳು ನಿಂದೆ ಎಂದೆನ್ನಿಸುವದು. ವೀರಶೈವರಲ್ಲಿ ಪಾದೋದಕ ನಿಂದೆಯು ಮಹಾಪಾಪವೆನಿಸುವದು. ಆದರೆ ಆಧುನಿಕ ಕಾಲದಲ್ಲಿ ವೀರಶೈವ ಆಚರಣೆಗಳ ಮತ್ತು ಷಟ್‌ಸ್ಥಲ ತತ್ವಗಳ ತಿಳುವಳಿಕೆಯು ಇರದ್ದರಿಂದ ಇಂಥ ಸ್ಥಿತಿಯು ಉಂಟಾಗಿರುತ್ತದೆ. ಆದರೆ ಬೇರೆ ಬೇರೆ ಆವರಣಗಳ ತಾತ್ವಿಕವಿಚಾರ ಮಾಡುವದರಿಂದ ಇಂಥ ತಿಳುವಕೆಗಳನ್ನು ದೂರ ಮಾಡುವದು ಶಕ್ಯವಿರುವದರಿಂದ ಈ ದೃಷ್ಟಿಯಿಂದ ಬರೆದ ಲೇಖಗಳಿಗೆ ಶಿವಾನುಭವದಲ್ಲಿ ಸ್ಥಾನ ಕೊಡುತ್ತ ಬಂದಿದ್ದೇವೆ.

ಲಿಂಗಧಾರಣ ದೀಕ್ಷೆ, ಪಾದೋದಕ ಈ ವಿಷಯಗಳ ಸಂಬಂಧ ವಾಗಿ ಹೇಗೆ ತಪ್ಪು ತಿಳುವಳಿಕೆಗಳಾಗಿವೆಯೋ ಹಾಗೆಯೇ ಗುರು-ಜಂಗಮ ಈ ಆವರಣಗಳ ವಿಷಯುವಾಗಿಯೂ ಆಗಿರುತ್ತವೆ ಇನ್ನು ಮುಂದೆ ಶಿವಾನುಭವ ಪತ್ರಿಕೆಯಲ್ಲಿ ಈ ಎರಡು ಆವರಣಗಳ ವಿಷಯುವಾಗಿ ವಿವೇಚನೆಗಳು ಪ್ರಾರಂಭಿಸಲ್ಪಡುವವು. ಗುರು-ಜಂಗಮ ಈ ಶಬ್ದಗಳನ್ನು ಗುರುಸ್ಥಲದವರು, ವಿರಕ್ತರು ಎಂಬುಭಯ ವರ್ಗಗಳಿಗೆ ಸಂಬಂಧಿಸಿ ಅನೇಕರು ಅವರಲ್ಲಿ ಉಚ್ಚ ನೀಚ ಭಾವವನ್ನು ಕಲ್ಪಿಸುವದುಂಟು. ಅಷ್ಟಾವರಣಗಳ ಅರಿವು ಇಲ್ಲದ ಮೂಲಕ ಇಂಥ ವಿವಾದಗಳು ಸಮಾಜದಲ್ಲಿ ಉಂಟಾಗಿರುತ್ತವೆ. ಆದ್ದರಿಂದ ಈ ವಿಷಯಗಳ ವಿವೇಚನೆಯಾದರೂ ಮಹತ್ವದ್ದಾಗಿದೆ. ವಚನಶಾಸ್ತ್ರಸಾರ ಭಾಗ ೩ (ಪೂರ್ವಾರ್ಧ) ಇದರಲ್ಲಿ ಅಷ್ಟಾವರಣಗಳ ತಾತ್ವಿಕ ವಿವೇಚನೆಗಳಿದ್ದು ಅವುಗಳನ್ನು ವಾಚಕರು ಮನವಿಟ್ಟು ಅಭ್ಯಾಸಿಸಿ ತಮ್ಮ ಲೇಖಗಳನ್ನು ಬರೆಯಬೇಕೆಂದು ನಮ್ಮ ಸಮ್ರ ಸೂಚನೆ ಇದೆ.

**ಬಸವೇಶ್ವರನ ಚರಿತ್ರೆ:—** ಬಸವೇಶ್ವನ ಚರಿತ್ರೆಯ ವಿಷಯುವಾಗಿ ನಾವು ಒಂದು ಲೇಖಮಾಲೆಯನ್ನು ಪ್ರಾರಂಭಿಸಿದ್ದೇವೆ. ಪ್ರಕೃತ ಸಂಚಿಕೆಯಲ್ಲಿ ಚನ್ನಬಸವನ ಜನನದ ವಿಷಯುವಾಗಿ ವಿವೇಚಿಸಿದ್ದೇವೆ. ಬಸವೇಶ್ವರನ ಆಯುಷ್ಯದಲ್ಲುಂಟಾದ ಘಟನೆಗಳನ್ನು ಕುರಿತು ನಾವು ಇದೇ ರೀತಿಯಾಗಿ ಸಾಮಾನ್ಯವಾಗಿ ವಿವೇಚಿಸುತ್ತ ಹೋಗುವೆವು. ನಾವು ಮುಂದೆ ಬರೆಯಬಹುದಾದ ವಿಷಯಗಳ ನಮ್ಮ ಟಿಪ್ಪಣಿಗಳನ್ನು ಸ್ಥೂಲವಾಗಿ ನಾವು ನಿದರ್ಶಿಸಲಾಗಿ ಈ ಲೇಖಮಾಲೆಯು ಇನ್ನೂ ವರ್ಷ ಒಂದುವರೆ ವರ್ಷ ನಡಿಯಬಹುದೆಂದು ನಮಗೆ ತೋರುತ್ತದೆ. ಇದರಲ್ಲಿ ಅನೇಕ ಮಹತ್ವದ ಚರ್ಚಾತ್ಮಕ ವಿಷಯಗಳಿವೆ. ವಾಚಕರು ಅವುಗಳನ್ನು ಪರಾಮರ್ಶಿಸಿ ತಮ್ಮ ಅಭಿಪ್ರಾಯಗಳನ್ನು ಕಾಲಕಾಲಕ್ಕೆ ಪ್ರಕಟಿಸುತ್ತ ಹೋಗಬೇಕೆಂದು ನಮ್ಮ ವಿನಂತಿ ಇದೆ.

**ಒಂದು ವಿಚಿತ್ರ ವೀರಶೈವ ಸ್ಥಳ:—** ಈ ಲೇಖವನ್ನು ಶ್ರೀಯುತ ದೇಸಾಯಿ ಪಾಂಡುರಂಗರಾಯರು ಎಮ್. ಏ ಆರ್ಕಿಯೋಲಾಜಿಕಲ್ ಡಿಪಾರ್ಟಮೆಂಟ ಮದ್ರಾಸ ಇವರು ಬರೆದಿದ್ದಾರೆ. ವೀರಶೈವ ಧರ್ಮದ ಚಳವಳಿಯ ಆರಂಭದ ಮುಖ್ಯ ಕ್ಷೇತವು ಬಸವೇಶ್ವರನು ಹುಟ್ಟಿದ ಪ್ರಾಂತ ಅಂದರೆ ತರ್ದವಾಡಿ ನಾಡು ಆಗಿತ್ತೆಂದು ತೋರುತ್ತದೆ. ಈ

ಪ್ರದೇಶವು (ವಿಜಾಪುರ ಜಿಲ್ಲೆಯಲ್ಲಿ ಭೀಮಾ ಕೃಷ್ಣಾ ನದಿಗಳ ಮಧ್ಯ ದೇಶ) ಪ್ರಸ್ತುತ ಕಾಲದಲ್ಲಿ ಬಹಳ ಹಿಂದುಳಿದಿರುವದರಿಂದ ಇಲ್ಲಿಯ ಪುರಾತನ ಅವಶೇಷಗಳು ಬಹು ದುರ್ಲಕ್ಷಿಸಲ್ಪಟ್ಟಿರುತ್ತವೆ. ವೀರಶೈವರ ಇತಿಹಾಸದ ಮೇಲೆ ಪ್ರಕಾಶವನ್ನು ಕೆಡಹುವ ಇಲ್ಲಿಯ ಅನೇಕ ಕುರುಹುಗಳು ಈಚೆಗೆ ಮೆಲ್ಲಮೆಲ್ಲಗೆ ಹೊರಬೀಳಹತ್ತಿವೆ. ಈ ಲೇಖದಲ್ಲಿ ಉಲ್ಲೇಖಿಸಲ್ಪಟ್ಟ ಬಾಲೇಗಾವ ಇಲ್ಲಿ ಕಂಡು ಬರುವ ಸಂಗತಿಗಳಿಂದ ಬಸವೇಶ್ವರರ ಕಾಲದಲ್ಲಿ ಅಲ್ಲಮ ಪ್ರಭುದೇವರ ಮಹತ್ವವು ಎಷ್ಟಿತ್ತೆಂಬುದು ಸ್ಪಷ್ಟವಾಗುತ್ತದೆ. ಮಿ॥ ಪಾಂಡುರಂಗರಾವ ಇವರು ಊಹಿಸಿದಂತೆ "ಬಳ್ಳಿಗಾವಿ" ಈ ಶಬ್ದವು ಹೋಗಿ ಮರಾಠೀ ಭಾಷೆಯ ಸ್ವರೂಪದ ಬಾಲೇಗಾವ ಎಂದಾಗಿರಬಹುದು. ಪ್ರಭುದೇವರು ತಮ್ಮ ಸಂಚಾರದಲ್ಲಿ ಈ ಸ್ಥಳಕ್ಕೆ ಬರಲು ಅವರ ಕುರುಹಿಗಾಗಿ ಇಲ್ಲಿಯ ಈ ದೇವಾಲಯವು ಸ್ಥಾಪಿಸಲ್ಪಟ್ಟಿರಬಹುದು. ವಿಜಾಪುರ ಪ್ರಾಂತದಲ್ಲಿ ಮುಸಲ್ಮಾನ ಬಾದಶಹರ ಆಳಿಕೆಯು ಕೆಲವು ಶತಮಾನಗಳ ವರೆಗೆ ಇದ್ದುದರಿಂದ ಮುಸಲ್ಮಾನರ ಉಪದ್ರವವಾಗಬಾರದೆಂದು ಈ ಭಾಗದಲ್ಲಿಯ ಅನೇಕ ದೇವಾಲಯಗಳು ಮಶೀದೆಯಂತೆ ಕಟ್ಟಲ್ಪಟ್ಟಿದ್ದೂ, ಅವುಗಳ ಮೇಲೆ ಗುಮ್ಮಟಗಳಿದ್ದದ್ದೂ, ಗರ್ಭಗುಡಿಯು ಭೂಮಿಯ ಮೇಲ್ಭಾಗದಿಂದ ೨೦-೩೦ ಫೂಟು ಕೆಳಗೆ ಇದ್ದದ್ದೂ, ಗುಡಿಯ ಸುತ್ತಲೂ ಮಧ್ಯ ಗುಡಿಯು ಕಾಣದಂತೆ ಎತ್ತರವಾದ ಪ್ರಾಕಾರವಿದ್ದದ್ದೂ, ಇಷ್ಟೇ ಅಲ್ಲ ಗರ್ಭ ಗುಡಿಯಲ್ಲಿಯು ಮೂರ್ತಿಯು ಇದಿರಿಗೆ ಯಾರೂ ನೋಡದಂತೆ ಒಂದು ಅಡ್ಡ ಗೋಡೆಯು ಇದ್ದದ್ದೂ ಈಗಲೂ ಕಾಣಬಹುದು. ಈ ಭಾಗದಲ್ಲಿರುವ ಪುರಾತನ ಮಹತ್ವದ ಅವಶೇಷಗಳನ್ನು ನಿರೀಕ್ಷಿಸುವಲ್ಲಿ ಈ ಸಂಗತಿಗಳು ದೃಷ್ಟಿಗೆ ಬೀಳುತ್ತವೆ.

**ಶಿವಾನುಭವ ಸಂಘಗಳು:—** ವೀರಶೈವರ ಇತಿಹಾಸ ಮತ್ತು ವಾಙ್ಮಯ ಇವುಗಳಲ್ಲಿ ಸಂಶೋಧಿಸತಕ್ಕ ವಿಷಯಗಳು ಅನೇಕವಿರುತ್ತವೆಂಬುದು ಈಗ ಹೆಚ್ಚು ಹೆಚ್ಚಿಗೆ ಸ್ಪಷ್ಟವಾಗುತ್ತಲಿದೆ. ಈ ಕಾರ್ಯವು ಇಡೀ ಪ್ರಾಂತದಲ್ಲೆಲ್ಲ ಅವ್ಯಾಹತವಾಗಿ ಸಾಗಬೇಕು. ಹೀಗೆ ಈ ಸಂಶೋಧನ ಕಾರ್ಯವು ನಡೆಯುವದಲ್ಲದೆ ಶಿವಶರಣರ ಉದಾತ್ತ-ತತ್ವಗಳು ಸಮಾಜದ ನಡೆಯಲ್ಲಿಯೂ ತೋರಹತ್ತಬೇಕು. ಅವುಗಳ ಅಭ್ಯಾಸವೂ, ವಿವೇಚನೆಯೂ ಎಲ್ಲ ಕಡೆಯಲ್ಲಿ ನಡೆಯಬೇಕಲ್ಲದೆ ಅವುಗಳಂತೆ ಆಚರಣೆಯೂ ಕೂಡ ಸಮಾಜದಲ್ಲಿ ಉಂಟಾಗಬೇಕು. ಇಂಥ ಪ್ರಯತ್ನಗಳಿಂದಲೇ ಸಮಾ

ಜದಲ್ಲಿಯ ಕೊಳೆಯು ಹೊರಟುಹೋಗುವದು. ಈ ಕೊಳೆಯು ಹೋಗದ ಹೊರತು ಸಾಂಸ್ಕೃತಿಕ, ಸಾಮಾಜಿಕ, ರಾಜಕೀಯ ಸುಧಾರಣೆಗಳುಂಟಾಗಲಾರವು. ಬಸವೇಶ್ವರನ ಶಿವಾನುಭವ ಮಂಟಪದ ಮೂಲಕ ಆಗಿನ ಬಹುಜನ ಸಮಾಜದಲ್ಲಿ ಒಂದು ಮಹತ್ತರವಾದ ಜಾಗ್ರತಿಯುಂಟಾಗಲು ಅಸ್ಪೃಶ್ಯರು ಮೊದಲ್ಗೊಂಡು ಬ್ರಾಹ್ಮಣ ಸಮಾಜದ ವರೆಗೂ ಇರುವ ನಾನಾ ತರದ ಪಂಗಡಗಳಲ್ಲಿ ಐಕ್ಯತೆಯು ಪ್ರಾದುರ್ಭವಿಸಿತು. ಅದರಿಂದ ವೀರಶೈವ ಸಮಾಜದಲ್ಲಿ ವಾಙ್ಮಯಾತ್ಮಕ ಮಾತ್ರವಲ್ಲ, ಸಾಮಾಜಿಕ, ರಾಜಕೀಯ ಚಟುವಟಿಕೆಗಳುಂಟಾಗಿ ಅದು ಆಗ ಅಲ್ಪ ಸಂಖ್ಯಾಕವಾಗಿದ್ದರೂ ಕೂಡ ಒಂದು ಬಲಾಢ್ಯ ರಾಜ್ಯವನ್ನು ಎದುರಿಸುವಷ್ಟು ಸಾಮರ್ಥ್ಯವನ್ನು ಹೊಂದಿತು. ನೀತಿಯ ತಳಹದಿಯ ಮೇಲೆ ನಿಲ್ಲಿಸಲ್ಪಟ್ಟ ಸಮಾಜ ರಚನೆಯಲ್ಲಿ ಇಂಥ ಒಂದು ಅತ್ಯದ್ಭುತ ಸಾಮರ್ಥ್ಯವು ತಲೆದೋರುತ್ತದೆ. ಆದ್ದರಿಂದ ವೀರಶೈವ ಸಮಾಜದವರು ಪ್ರತಿಯೊಂದು ಗ್ರಾಮದಲ್ಲಿಯೂ ಶಿವಾನುಭವ ಮಂಟಪಗಳನ್ನು ಸ್ಥಾಪಿಸಬೇಕು. ಅವುಗಳಲ್ಲಿ ವಚನಶಾಸ್ತ್ರದ ಅಭ್ಯಾಸ, ಅದರ ವಿವೇಚನೆಗಳು, ಅದರ ವಿಮರ್ಶೆಗಳು, ಬೋಧೆಗಳು, ವಾದಗಳು ಜರಗಬೇಕು. ಇವು ಗ್ರಾಮಗಳಲ್ಲಷ್ಟೇ ಅಲ್ಲ, ಪ್ರತಿಯೊಂದು ಕುಟುಂಬದಲ್ಲಿಯೂ ನಡೆಯಬೇಕು. ದೊಡ್ಡ ದೊಡ್ಡ ಪರಿಷತ್ತುಗಳ ಮಹತ್ವವು ಒಂದು ಗ್ರಾಮದಲ್ಲಿ ಹೀಗೆ ಸುವ್ಯವಸ್ಥೆಯಿಂದ ನಡೆದ ಶಿವಾನುಭವ ಮಂಟಪದ ಮಹತ್ವವನ್ನು ಸರಿಗಟ್ಟಲಾರದು. ಶಿವಾನುಭವ ಮಂಟಪಗಳಲ್ಲಿ ಕೂಡುವ ಜನರು ಕೆಲವರು ಅಂದರೆ ಹತ್ತೆಂಟು ಜನರು ಮಾತ್ರ ಇರಬಹುದು. ಆದರೂ ಅವರು ಮಾಡುವ ಕಾರ್ಯವು ಸಾವಿರಾರು ಜನರು ಕೂಡಿ ಮಾಡಿದ ನಿರ್ಣಯಗಳು ಮತ್ತು ಭಾಷಣಗಳು ಇವುಗಳಿಗಿಂತಲೂ ಬಹಳ ಘನತರವಾದವುಗಳು. ಆದರೆ ಶಿವಾನುಭವ ಮಂಟಪದಲ್ಲಿಯ ಸಭಾಸದರು ತಾವು ವಿವೇಚಿಸುವ ವಿಷಯಗಳಂತೆ ನಡೆಯಲು ಮಾತ್ರ ಪ್ರಯತ್ನಿಸಬೇಕು. ಅವರೂ, ಅವರ ಮನೆಯವರೂ ಶಿವಾನುಭವದ ತತ್ವಗಳನ್ನರಿತು ಆಚರಿಸಬೇಕು. ಇದರಿಂದ ಶಿವಾನುಭವ ಮಂಟಪಗಳು ಬಲಗೊಳ್ಳುತ್ತ ಹೋಗುವವು. ಈ ಎಲ್ಲ ವಿಷಯಗಳನ್ನು ಈ ವರೆಗೆ ಸ್ಥಾಪಿಸಲ್ಪಟ್ಟ ಶಿವಾನುಭವ ಮಂಟಪಗಳು ಅವಶ್ಯವಾಗಿ ಗಮನಿಸಬೇಕೆಂದು ನಾವು ಅವುಗಳಿಗೆ ಸೂಚಿಸುತ್ತೇವೆ.

---

ಪರಿಪೂರ್ಣ ಮಾಡಿದಲ್ಲಿ ಅವಧಾನೋದಕವೆನಿಸಿತು. ಅದನ್ನು ತಾನು ಸ್ವೀಕರಿಸಿದಲ್ಲಿ ಆಪ್ಯಾಯನೋದಕವಾಯಿತು. ಈ ಆಪ್ಯಾಯನೋದಕವು ಹೃದ್ಗತವಾದಲ್ಲಿ ಹಸ್ತೋದಕವಾಯಿತು. ಹೃದಯ ಹಸ್ತಗತವಾದ್ದರಿಂದ ಪರಿಣಾಮೋದಕವಾಗಿ ನಿಂತಿತು. ಈ ಪರಿಣಾಮೋದಕವು ಅರಿತು (ಆರಿ) ನಿಂದಲ್ಲಿ ನಿರ್ನಾಮೋದಕವಾಯಿತು. ಇವುಗಳಿಂದಾದ ಆನಂದವೇ ಸತ್ಯೋದಕವೆನಿಸಿತು. ಅದುಕಾರಣ ಗುರುವೆಂಬ ಶಬ್ದ ಬಂಧನ ದೋಷವು ಹರಿದುನಿಂತಿತು. ಅಗ್ಗೆ ಅವನು ನಿರವಯನು. ಹಿಂದೆ ಹರಿದುದು ಹರಿದುನಿಂತುದು ಒಂದೆಮಾಡಿದ ಆನಂದವಿದು.

ಈ ತರದ ಗುರು ಪಡೆದ ಆನಂದವನ್ನು ತಾನೂ ಪಡೆಯಬೇಕೆಂದು "ಲಿಂಗಜಂಗಮ"ನಾದ ಭಕ್ತನು ಇನೆಯದಾದ ಆ ಜಂಗಮ ಪಾದೋದಕವನ್ನು ಸತ್ಯೋದಕದ ಒರೆಗೆ ಪೂರಿಸಿದಲ್ಲಿ ತನ್ನ ಬಹಿಷ್ಕೃತವಾದ ಲಿಂಗಜಂಗಮದ ಸ್ವರೂಪವನ್ನು ಕಳೆದುಕೊಳ್ಳುವನು. ಇದರಂತೆ ಶರಣ (ಭಕ್ತ) ಜಂಗಮರು ಅದೇ ಗದ್ದುಗೆಯ ಮೇಲೆ ತೀರಿಸಿದಲ್ಲಿ ಆ ಶಿವ ಚೇತನ ಚರಸ್ವರೂಪಗಳು ಬಯಲಾಗಿ ನಿಲ್ಲುವವೆಂಬ ಭಾವಗಳು. ಕಡೆಗೆ ಅಖಂಡವಾದ ವಸ್ತುವು ಗುರುಭಕ್ತರ ನಡುವೆ ಸಮಖಂಡಿತವಾಗಿ ನಿಂತ ಮೇಲೆ ಈ ಕ್ರಿಯೆಯು ಮುಗಿಯಿತು. ಈ ಪದ್ಧತಿಯು ಪ್ರಭುಪರಂಪರೆಯು.

---

# ಬಸವೇಶ್ವರನ ಚರಿತೆ.



ಲೇಖಕ— ರಾ. ಬ. ಫ. ಗು. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ

(ಲೇಖಾಂಕ—೫)

## ಚನ್ನಬಸವನ ಜನನ ಎಲ್ಲಿ ಮತ್ತು ಯಾವಾಗ ಆಯಿತು?

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನಿಗೆ ಯಜ್ಞೋಪವಿತಧಾರಣ ವಾಗಿತ್ತೆಂದೂ ಅವನು ತನ್ನ ಹದಿನಾರನೆಯ ವಯಸ್ಸಿನಲ್ಲಿ ಅದನ್ನು ತ್ಯಜಿಸಿ ವೀರಶೈವ ಮತವನ್ನು ಸ್ವೀಕರಿಸಿದನೆಂತಲೂ ವಿವರಿಸಿದ್ದೇವೆ. ಈ ಸಂಗತಿಗಳನ್ನು ನಾವು ಅಂಗೀಕರಿಸಿದಲ್ಲಿ ಹರಿಹರ ಕವಿಯು ತನ್ನ ಬಸವರಾಜ ರಗಳೆಯಲ್ಲಿ ಉಲ್ಲೇಖಿಸಿದ ಸಂಗತಿಗಳೇ ನಿಜವಾದವುಗಳೆಂದು ನಾವು ನಂಬಬೇಕಾಗುತ್ತದೆ. ನಾವು ಹಿಂದೆ ಉಲ್ಲೇಖಿಸಿದ ಬಸವಣ್ಣನವರ ಎರಡು ವಚನಗಳ ಅರ್ಥವು ಅವುಗಳನ್ನು ಸಮರ್ಥಿಸುವದರಿಂದ ಹಾಗೆ ನಾವು ಭಾವಿಸಬೇಕಾಗಿರುತ್ತದೆ. ಬಸವಣ್ಣನವರು ಯಜ್ಞೋಪವೀತವನ್ನು ತ್ಯಜಿಸುವ ಕಾಲದಲ್ಲಿ ಬಾಗೇವಾಡಿಯಲ್ಲಿದ್ದ ಬ್ರಾಹ್ಮಣ ಸಮಾಜದವರು ಸ್ವಾಭಾವಿಕವಾಗಿ ರೋಷಾವೇಶವುಳ್ಳವರಾಗಿ ಅವರು ಅವನನ್ನು ಅತ್ಯಂತವಾಗಿ ಹಿಂಸಿಸಿರಲಿಕ್ಕೆಬೇಕೆಂದು ಅವನ ಬೇರೆ ಕೆಲವು ವಚನಗಳ ಆಧಾರದಿಂದ ನಾವು ವಿವರಿಸಿದ್ದೇವೆ. ಈ ಕಾಲದಲ್ಲಿ ಒದಗಿ ಬಂದ ಇನ್ನೂ ಕೆಲವು ವಿಶೇಷ ಸಂಗತಿಗಳನ್ನು ಕುರಿತು ನಾವು ಇಲ್ಲಿ ವಿವೇಚಿಸಲೆಣಿಸಿದ್ದೇವೆ. ವಾಚಕರು ಅವುಗಳನ್ನು ಚನ್ನಾಗಿ ವಿಚಾರ ಮಾಡಬೇಕೆಂದು ನಮ್ಮ ವಿನಂತಿ ಇದೆ.

ಬಸವನು ಸ್ವಗ್ರಾಮವನ್ನು ಬಿಡುವ ಕಾಲದಲ್ಲಿ ಅವನು ಏಕಾಕಿಯಾಗಿರಲಿಲ್ಲವೆಂದು ನಾವು ಹಿಂದೊಮ್ಮೆ ಹೇಳಿದ್ದೇವೆ. ಅವನೊಡನೆ ಅವನ ಅಕ್ಕನಾದ ನಾಗಲಾಂಬಿಕೆಯೂ ಕೂಡ ಹೊರಡಲುದ್ಯುಕ್ತಳಾದಳೆಂದು ಅಲ್ಲಿ ಉಲ್ಲೇಖಿಸಿದ್ದೇವೆ. ಈ ಕಾಲದಲ್ಲಿ ಆಕೆಗೆ ಲಗ್ನವಾಗಿತ್ತೆಂದು ತೋರುತ್ತದೆ. ಇಷ್ಟೇ ಅಲ್ಲ, ಅವಳಿಗೆ ಚನ್ನಬಸವನೂ ಕೂಡ ಜನಿಸಿದ್ದನೆಂದು ನಮ್ಮ ಅಭಿಪ್ರಾಯವಿದೆ. ಆಗ ಚನ್ನಬಸವನ ವಯಸ್ಸು ೪ ವರ್ಷವಾ

ಗಿರಬೇಕು. ಈ ಸಂಗತಿಗಳನ್ನು ಸಿದ್ಧಪಡಿಸುವದೇ ಪ್ರಕೃತ ಲೇಖದ ಮುಖ್ಯ ವಿಷಯುವಾಗಿರುತ್ತದೆ. ಇದನ್ನು ಕೇಳಿದಾಕ್ಷಣವೇ ವಾಚಕರಿಗೆ ಅರಿದೆನಿಸಬಹುದು. ಇದು ಹೊಸ ಸಂಗತಿಯೆಂದು ಅವರಿಗೆ ತೋರಬಹುದು. ಆದರೆ ಇದು ನಿಜವೆಂದು ನಮಗೆ ತೋರುತ್ತಿದೆ. ವೀರಶೈವರು ಬಹು ಪುರಾತನ ಕಾಲದಿಂದ ನಂಬುಗೆ ಇಟ್ಟ ವಿಷಯಗಳಿಂದಲೇ ಈ ಸಂಗತಿಗಳು ಸಿದ್ಧವಾಗುತ್ತವೆ.

ಬಸವನ ಆಯುಷ್ಯಾವಧಿಯು ೩೬ ವರ್ಷವೆಂತಲೂ ಚನ್ನಬಸವನ ಜೀವಿತಕಾಲವು ೨೪ ವರ್ಷವೆಂತಲೂ ವೀರಶೈವ ಗ್ರಂಥಗಳಿಂದ ತಿಳಿದುಬರುತ್ತದೆ. ಈ ವರ್ಷಗಳೆಲ್ಲವೂ ಸಂಭವನೀಯುವೆಂದು ನಮಗೆ ತೋರುತ್ತದೆ. ಬಸವನ ಕಾಲವನ್ನು ಕುರಿತು ನಾವು ಹಿಂದೆ ವಿವೇಚಿಸುವಲ್ಲಿ ಅವನು ೩೬ ವರ್ಷಗಳಾಗುವ ವರೆಗೆ ಜೀವಿಸಿದ್ದನೆಂಬುದನ್ನು ನಾವು ಗ್ರಹಿಸಬೇಕಾದ ಸಂಗತಿಯು ವಾಚಕರ ಸ್ಮರಣೆಯಲ್ಲಿರಬಹುದು. ಇದನ್ನು ನಾವು ಸತ್ಯವೆಂದು ಗ್ರಹಿಸಿದಲ್ಲಿ ಬಿಜ್ಜಳನ ತಂದೆ ಪೇರ್ಮಾಡಿಯು ೧೧೨೮ರಲ್ಲಿ ಆಳಹತ್ತಿದ್ದೂ, ಅವನ ಮಗನಾದ ಬಿಜ್ಜಳನು ೧೧೪೭ ರಿಂದ ಮುಂದೆ ಕೆಲವುವರ್ಷ ಮಹಾಮಂಡಳೇಶ್ವರನಾಗಿ ತರ್ದವಾಡಿಯಲ್ಲಿದ್ದೂ, ೧೧೫೫ರಲ್ಲಿ ಅವನು ಸ್ವತಂತ್ರನಾಗಿ ಮೊದಲು ತರ್ದವಾಡಿಯಲ್ಲಿ ಆಮೇಲೆ ೧೧೬೨ರಲ್ಲಿ ಕಲ್ಯಾಣದಲ್ಲಿ ಚಕ್ರವರ್ತಿಯಾಗಿ ಆಳಹತ್ತಿದ್ದೂ, ಈ ಪ್ರಕಾರ ೬ ವರ್ಷ ಅವನು ಆಳಿದ ಬಳಿಕ ೧೧೬೮ರಲ್ಲಿ ಅವನ ಆಳಿಕೆಯು ಮುಗಿದದ್ದೂ, ಇವೆಲ್ಲ ಐತಿಹಾಸಿಕ ಸಂಗತಿಗಳಿಗೂ ಬಸವನ ಜೀವಿತಕಾಲವಾದ ೩೬ವರ್ಷಕ್ಕೂ ವಿಸಂಗತಿಯು ಏನೂ ಉಂಟಾಗುವದಿಲ್ಲ. ಬಿಜ್ಜಳನು ಮಹಾ ಮಂಡಳೇಶ್ವರನಾಗಿ ತರ್ದವಾಡಿ ನಾಡಿನಲ್ಲಿ ಆಳುವಾಗ್ಗೆ ರೇವಣಸಿದ್ಧೇಶ್ವರನು ಪ್ರಬಲನಾಗಿದ್ದನು. ಅವನಿದ್ದ ಕಾಲದಲ್ಲಿ ಬಸವೇಶ್ವರನಿರಲಿಲ್ಲ. ಆದುದರಿಂದ ರೇವಣಸಿದ್ಧೇಶ್ವರನು ಪ್ರಸಿದ್ಧಿಗೆ ಬಂದಿದ್ದು ಬಿಜ್ಜಳನ ಆರಂಭದ ಕಾಲದಲ್ಲಿ. ಅಂದರೆ ಇನ್ನೂ ಮಾಂಡಲಿಕನಿದ್ದಾಗ್ಗೆ. ಅಂದರೆ ಬಿಜ್ಜಳನು ೧೧೫೫ ರಲ್ಲಿ ಸ್ವತಂತ್ರಾಧಿಪತ್ಯವನ್ನು ವಹಿಸಿದಾಗ್ಗೆ, ಬಸವನು ತರ್ದವಾಡಿ ನಾಡಿನ ಆಗಿನ ಮುಖ್ಯ ಗ್ರಾಮವಾದ ಮಂಗಳವಾಡಕ್ಕೆ ಬಂದಿರಬೇಕು. ಅಲ್ಲಿಗೆ ಬಂದು ಕರಣಿಕನಾಗಿ ಬಿಜ್ಜಳನ ಸೇವೆಯನ್ನಾರಂಭಿಸಿದನು. ಈ ಕಾಲದಲ್ಲಿ ಅವನು ಚಿಕ್ಕವನಿರಬೇಕು. ಮೊದಲು ಅಂದರೆ ೧೬ ವರ್ಷ ಪಿತೃಗೃಹದಲ್ಲಿ, ಮುಂದೆ ೧೧೪೮ರಿಂದ

೧೧೫೫ರ ವರೆಗೆ ೭ ವರ್ಷ ಸಂಗಮದಲ್ಲಿ ಹೀಗೆ ೨೩ ವರ್ಷದವನಾಗಿರಬೇಕು. ಮುಂದೆ ೧೧೫೫ ರಿಂದ ೧೧೬೮ರ ವರೆಗೆ ಅಂದರೆ ಸುಮಾರು ೧೨-೧೩ ವರ್ಷಗಳ ವರೆಗೆ ಆರಂಭದಲ್ಲಿ ತರ್ದೆವಾಡಿ ನಾಡು ಅಥವಾ ಮಂಗಳವಾಡದಲ್ಲಿ ತರುವಾಯ ಕಲ್ಯಾಣದಲ್ಲಿ, ವೀರಶೈವ ಧರ್ಮೋದ್ಧಾರ ಕಾರ್ಯಗಳನ್ನು ನಡೆಯಿಸಿ ಕಡೆಗೆ ಅವನು ಕಪ್ಪಡಿಸಂಗಮನಾಥನಲ್ಲಿ ತನ್ನ ೩೬ನೆಯ ವಯಸ್ಸಿನಲ್ಲಿ ಐಕ್ಯನಾದನು. ಈ ಎಲ್ಲ ಸಂಗತಿಗಳನ್ನು ವಲೋಕಿಸಿದಲ್ಲಿ ಬಸವನು ಮರಣ ಹೊಂದಿದ ಕಾಲಕ್ಕೆ ಅವನು ಮಧ್ಯವಯಸ್ಕನಾಗಿರಬೇಕೆಂದು ಭಾವಿಸಿದಲ್ಲಿ ಅದು ಸಂಭವನೀಯವಾಗಿ ತೋರುತ್ತದೆ. ವೀರಶೈವ ಗ್ರಂಥಕಾರರು ಅವನು ೩೬ ವರ್ಷದವನಿದ್ದನೆಂದು ಹೇಳುವಲ್ಲಿ ತಥ್ಯಾಂಶವಿರಬೇಕೆಂದು ತೋರುತ್ತದೆ.

ಚನ್ನಬಸವನು ಬಸವನಕಿಂತಲೂ ೧೨ ವರ್ಷ ಸಣ್ಣವನು. ಆದ್ದರಿಂದ ಚನ್ನಬಸವನು ಉಳಿವಿಯಲ್ಲಿ ಮರಣ ಹೊಂದುವ ಸಮಯದಲ್ಲಿ ಅವನಿಗೆ ಕೇವಲ ೨೪ (೩೬—೧೨) ವರ್ಷವಾಗಿರಬೇಕು. ಅವನು ಅಳಿಯ ಬಿಜ್ಜಳನ ದಂಡಿನೊಂದಿಗೆ ಕಾಳಗಗಳನ್ನು ಮಾಡುತ್ತ ಉಳಿವಿಯ ಅರಣ್ಯವನ್ನು ಪ್ರವೇಶಿಸಿ ಕಾದುತ್ತ ಮಡಿದನು. ಅದು ಅವನ ತಾರುಣ್ಯಕಾಲವು. ೨೪ ವರ್ಷ ವಯಸ್ಸು. ಆಗ ಅವನಿಂದ ಈ ಸಾಹಸದ ಕಾರ್ಯವು ಸಂಭವನೀಯವಿದೆ. ಆದ್ದರಿಂದ ಅವನು ೧೧೪೪ನೆಯ (೧೧೬೮—೨೪) ಇಸ್ವಿಯಲ್ಲಿ ಜನಿಸಿದನೆಂದು ಹೇಳಿದಲ್ಲಿ ಅದು ಸಂಭವನೀಯುವದೆ. ಬಸವನು ಹರಿಹರ ಕವಿಯ ಹೇಳಿಕೆಯ ಪ್ರಕಾರ ಯಜ್ಞೋಪವೀತವನ್ನು ತ್ಯಜಿಸಿ ಸಮಯಾಚಾರ ಎಂದರೆ ವೀರಶೈವ ಧರ್ಮವನ್ನು ಹೊಂದಿದಾಗ ಅವನು ೧೬ ವರ್ಷದವನಾದ್ದರಿಂದ ಇದು ೧೧೪೮ರಲ್ಲಿ ಸಂಭವಿಸಿರಬೇಕು. ಇದರಿಂದ ೧೨ವರ್ಷ ಹಿಂದೆ ಅಂದರೆ ೧೧೩೬ರಲ್ಲಿ ಚನ್ನಬಸವನು ಜನಿಸಿದನು. ಆದ್ದರಿಂದ ಬಸವನು ಯಜ್ಞೋಪವೀತವನ್ನು ತಿರಸ್ಕರಿಸಿದಾಗ ಚನ್ನಬಸವನು ೪ ವರ್ಷದವನಿರಬೇಕು. ಬಸವನ ಅಕ್ಕನಾದ ನಾಗಲಾಂಬಿಕೆಯು ಬಸವನನ್ನೊಡಗೊಂಡು ಪಿತೃಗೃಹವನ್ನು ತ್ಯಜಿಸಿ ಹೋಗುವಾಗ ಅವಳು ತನ್ನ ಈ ಚಿಕ್ಕ ಮಗು ಚನ್ನಬಸವನನ್ನೂ ತೆಗೆದುಕೊಂಡು ಕೂಡಲಸಂಗಮ ಸ್ಥಾನಕ್ಕೆ ಹೋಗಿರಲಿಕ್ಕೆಬೇಕು.

ನಾಗಲಾಂಬಿಕೆಗೆ ಈ ಪೂರ್ವದಲ್ಲಿಯೇ ಲಗ್ನವಾಗಿರಲಿಕ್ಕೆಬೇಕೆಂದು ನಮಗೆ ತೋರುತ್ತದೆ. ಯಾಕಂದರೆ ಅವಳು ಒಬ್ಬ ಸನಾತನ ಧರ್ಮ

ವನ್ನು ಪರಿಪಾಲಿಸುತ್ತಿರುವ ಮನೆತನದಲ್ಲಿ ಹುಟ್ಟಿದವಳು. ಆದ್ದರಿಂದ ಆಗ ಅವಳು ಲಗ್ನವಾಗದೆ ಉಳಿಯುವ ಸಂಭವವಿಲ್ಲ. ಮುಂದೆ ಬಸವನು ಯಜ್ಞೋಪವೀತವನ್ನು ತ್ಯಜಿಸಿದಾಗ ಅವನಿಗೆ ೧೬ ವರ್ಷಗಳಾದ್ದರಿಂದ ಆಗ ಅವನ ಅಕ್ಕನಾದ ನಾಗಲಾಂಬಿಕೆಗೆ ೧೮—೨೦ ವರ್ಷಗಗಳಾದರೂ ಆಗಿರಬೇಕು. ಇಷ್ಟು ವಯಸ್ಸಿನ ವರೆಗೆ ಅವಳು ಲಗ್ನವಾಗದೆ ಉಳಿಯುವ ಸಂಭವವಿಲ್ಲ. ಬಹುಶಃ ಆಕೆಯು ೧೨ ವರ್ಷದವಳಿದ್ದಾಗಳೇ ಬ್ರಾಹ್ಮಣ ಪದ್ಧತಿಯ ಪ್ರಕಾರ ಅವಳ ಲಗ್ನವನ್ನು ಆಕೆಯ ತಂದೆತಾಯಿಗಳು ಮಾಡಿರಲಿಕ್ಕೆಬೇಕು. ಆದ್ದರಿಂದ ಬಸವನು ಪಿತೃಗ್ರಹವನ್ನು ತೊರೆದಾಗ ಅವಳಿಗೆ ಒಬ್ಬ ಮಗುವೂ ಹುಟ್ಟಿರಬೇಕು.

ವೀರಶೈವ ಪುರಾಣವಾದ ಸಿಂಗಿರಾಜ ಪುರಾಣದಲ್ಲಿ ನಾಗಲಾಂಬಿಕೆಯ ಗಂಡನು ಶಿವಸ್ವಾಮಿ ಎಂದು ಹೇಳಿದೆ. ಶಿವಸ್ವಾಮಿಯ ಹೆಸರು ಮುಂದೆ ನಾಗಲಾಂಬಿಕೆಯು ಕಲ್ಯಾಣಕ್ಕೆ ಹೋದ ಬಳಿಕ ಎಲ್ಲಿಯೂ ಉಪಲಬ್ಧವಾಗುವದಿಲ್ಲ. ಅವನು ಬಹುಶಃ ಮುಂಚೆ ತೀವ್ರ ತೀರಿರಬೇಕು, ಇಲ್ಲವೇ ಅಪ್ರಸಿದ್ಧನಾಗಿ ಉಳಿದಿರಬೇಕು. ಸಿಂಗಿರಾಜನು ಶಿವಸ್ವಾಮಿಯು ಬಸವನೊಂದಿಗೆ ಕಲ್ಯಾಣಕ್ಕೆ ಹೋದನೆಂದು ಹೇಳುತ್ತಾನೆ. ಈ ಸಂಗತಿಯು ನಾವು ಮೇಲೆ ಹೇಳಿದ ವಿಷಯವನ್ನು ಸಮರ್ಥಿಸುತ್ತದೆ.

ಈ ಎಲ್ಲ ಸಂಗತಿಗಳಿಂದ ಚನ್ನಬಸವನ ಜನನವು ಮನೆತನಸ್ತರಾದ ದಂಪತಿಗಳಿಂದಲೇ ಆಗಿರುತ್ತದೆಂಬದು ಸ್ಪಷ್ಟವಾಗುತ್ತಿದೆ. ಬಹು ಜನರು ಚನ್ನಬಸವನಿಗೆ ತಂದೆಯೇ ಇದ್ದಿಲ್ಲವೆಂದು ಭಾವಿಸಿರುತ್ತಾರೆ. ಇದು ತಪ್ಪು. ಬಹು ಜನರು ಚನ್ನಬಸವನು ಕಲ್ಯಾಣದಲ್ಲಿ ಹುಟ್ಟಿದನೆಂದು ಭಾವಿಸಿರುತ್ತಾರೆ. ಇದೂ ತಪ್ಪು. ಯಾಕಂದರೆ ಚನ್ನಬಸವನು ಕಲ್ಯಾಣದಲ್ಲಿ ಇದ್ದದ್ದು ಕೇವಲ ೬-೭ ವರ್ಷ ಮಾತ್ರ. ಈ ೬ ವರ್ಷಗಳ ತರುವಾಯ ಅವನು ಉಳಿವಿಗೆ ಹೋಗಿ ಅಲ್ಲಿಯೇ ಐಕ್ಯನಾದನು. ಆದ್ದರಿಂದ ಚನ್ನಬಸವನು ಕಲ್ಯಾಣದಲ್ಲಿ ಹುಟ್ಟಿದ್ದು ಸಂಭವನೀಯವಲ್ಲ. ಅವನು ಅಲ್ಲಿ ೨೮ ವರ್ಷಗಳ ವರೆಗೆ ವಾಸಿಸಿರುವದೇ ಇಲ್ಲ. ಆದ್ದರಿಂದ ಈ ಎಲ್ಲ ಸಂಗತಿಗಳನ್ನು ಅವಲೋಕಿಸಿದಲ್ಲಿ ಚನ್ನಬಸವನು ಅವನ ತಾಯಿಯು ಬಾಗೇವಾಡಿಯನ್ನು ಬಿಡುವ ಪೂರ್ವದಲ್ಲಿಯೇ ಹುಟ್ಟಿರಬೇಕು. ಮಾದರಸ ಮಾದಲಾಂಬಿಕೆಯರು ಕರ್ಮಿಷ್ಠರಾದ

ಬ್ರಾಹ್ಮಣರು. ಅವರು ನಾಗಲಾಂಬಿಕೆಯು ಪ್ರೌಢವಯಸ್ಸಿನವಳಾಗುವವರೆಗೆ ಹಾಗೆಯೇ ಇಡದೆ ಅವಳು ಕನ್ನಿಕೆ ಇದ್ದಾಗಳೇ ಆಕೆಯ ಲಗ್ನವನ್ನು ಮಾಡಿರಲಿಕ್ಕೇಬೇಕು. ಆಕೆಯು ಹೀಗೆ ಲಗ್ನವಾಗಿ ಚನ್ನಬಸವನನ್ನು ತನ್ನ ಗಂಡನ ಮನೆಯಲ್ಲಾಗಲಿ ಇಲ್ಲವೆ ತನ್ನ ಪಿತೃ ಗೃಹದಲ್ಲಾಗಲಿ ಹೆತ್ತಿರಲಿಕ್ಕೆಬೇಕು. ಅಷ್ಟರಲ್ಲಿ ಬಸವನು ವೀರಶೈವ ಧರ್ಮವನ್ನು ಸ್ವೀಕರಿಸಲು ಅದರ ಸೋಂಕು ಅವನ ಅಕ್ಕನಿಗೂ ಉಂಟಾಗಿರಬೇಕು. ಆಗ ಬಸವನು ಮನೆಯಿಂದ ಹೊರಗೆ ಹಾಕಲ್ಪಡಲು ಆಕೆಯೂ ಕೂಡ ತನ್ನ ಮಗುವಿನೊಡನೆ ಅವನೊಂದಿಗೆ ಹೊರಟಿರಲಿಕ್ಕೆಬೇಕು. ಸಿಂಗಿರಾಜನ ಹೇಳಿಕೆಯನ್ನು ನಾವು ನಂಬಿದಲ್ಲಿ ಇವರೊಡನೆ ಆಕೆಯ ಗಂಡನಾದ ಶಿವಸ್ವಾಮಿಯೂ ಕೂಡ ಸಂಗಮೇಶ್ವರನಲ್ಲಿಗೆ ಹೋಗಿರಬೇಕೆಂದು ತೋರುತ್ತದೆ. ಯಾಕಂದರೆ ಶಿವಸ್ವಾಮಿಯು ಬಸವನ ಲಗ್ನದ ಕಾಲದಲ್ಲಿ ಕಲ್ಯಾಣಕ್ಕೆ ಅವನೊಡನೆ ಹೋದನೆಂದು ಸಿಂಗಿರಾಜ ಪುರಾಣದಲ್ಲಿ ಹೇಳಿದೆ.

✓ ಈ ಸಂಗತಿಗಳಿಂದ ಚನ್ನಬಸವನು ೧೧೪೪ ರಲ್ಲಿ ಹುಟ್ಟಿರಬೇಕು. ಮುಂದೆ ಅವನು ೧೧೪೮ ರಲ್ಲಿ ಅಂದರೆ ಅವನು ೪ ವರ್ಷದ ಬಾಲಕನು ಇದ್ದಾಗ್ಗೆ ಸಂಗಮೇಶ್ವರನಲ್ಲಿಗೆ ತನ್ನ ತಾಯಿಯ ಕೂಡ ಹೋಗಿರಬೇಕು. ಮುಂದೆ ಬಿಜ್ಜಳನು ಮಂಗಳವಾಡದಲ್ಲಿ ೧೧೫೫ರಲ್ಲಿ ಸ್ವತಂತ್ರನಾಗಿ ಆಳಹತ್ತಲು ಆಗ ಬಸವನು ಅಲ್ಲಿಗೆ ಹೋದನು. ಆದ್ದರಿಂದ ಚನ್ನಬಸವನು ಅವನೊಡನೆ ಸಂಗಮದಲ್ಲಿ ೭ ವರ್ಷ ಕಾಲಕಳೆದಿರಬೇಕು. ಮುಂದೆ ಬಿಜ್ಜಳನು ತರ್ದವಾಡಿ ನಾಡಿನಲ್ಲಿ ೧೧೬೨ ರ ವರೆಗೆ ಆಳಿದನು. ಆಗ ಚನ್ನಬಸವನಿಗೆ ೧೮ ವರ್ಷಗಳಾಗಿದ್ದವು. ಮತ್ತು ಬಸವನಿಗೆ ೩೦ ವರ್ಷ ವಯಸ್ಸು ಮುಂದೆ ಬಸವನು ೧೧೬೨ ರಿಂದ ೧೧೬೮ ರವರೆಗೆ ಕಲ್ಯಾಣದಲ್ಲಿ ಮಂತ್ರಿಯಾದನು. ಈ ಮಹತ್ವದ ಕಾಲದಲ್ಲಿ ಚನ್ನಬಸವನಿಗೆ ೧೮ ರಿಂದ ೨೪ ವರ್ಷಗಳ ವಯಸ್ಸು. ಆಗ ಶಿವಾನುಭವ ಮಂಟಪವು ಕಲ್ಯಾಣದಲ್ಲಿ ಸ್ಥಾಪಿಸಲ್ಪಟ್ಟಿತು. ಅಲ್ಲಿ ಬಸವ ಚನ್ನಬಸವರೀರ್ವರೂ ಮಹತ್ವದ ಭಾಗವನ್ನು ವಹಿಸಿದ್ದರು. ಆಗ ಅವರು ವಯಸ್ಕರಾಗಿ ಪ್ರಬುದ್ಧರಾಗಿಯೇ ಇದ್ದರು. ನಾವು ಈಪ್ರಕಾರ ಭಾವಿಸಬೇಕಾಗುತ್ತದೆ. ಆದ್ದರಿಂದ ಐತಿಹಾಸಿಕ ವಿಷಯಗಳಿಗೂ ವೀರಶೈವ ಗ್ರಂಥಗಳಲ್ಲಿ ಕಂಡು ಬರುವ ಈ ಎಲ್ಲ ಐತಿಹ್ಯಗಳಿಗೂ ಮೇಳ ಬೀಳುತ್ತದೆ.

ಆದರೆ ಬಸವನ ತರುವಾಯ ೨೦೦--೩೦೦ ವರ್ಷಗಳಮೇಲೆ ವೀರಶೈವ ಪುರಾಣಗ್ರಂಥಗಳು ರಚಿಸಲ್ಪಟ್ಟವಿರುವದರಿಂದ ಬಿಜ್ಜಳನು ಯಾವ ಯಾವ ಕಾಲಗಳಲ್ಲಿ ಯಾವ ಯಾವ ಪ್ರದೇಶಗಳಲ್ಲಿ ಆಳಿದನೆಂಬುದರ ತಿಳುವಳಿಕೆಯು ಜನರಲ್ಲಿ ಇರಲಿಲ್ಲ. ಆದ್ದರಿಂದ ಚನ್ನಬಸವನು ಹುಟ್ಟಿದ್ದೂ ಬಿಜ್ಜಳನು ಆಳಿದ್ದೂ ಕಲ್ಯಾಣಪಟ್ಟಣದಲ್ಲಿಯೇ ಎಂಬ ತಿಳುವಳಿಕೆಯು ಉಂಟಾಗಿ ಅವರು ಬರೆದ ಚರಿತ್ರೆಗಳಲ್ಲಿ ಕೆಲವು ತಪ್ಪುಗಳಾಗಿರುತ್ತವೆ. ಆದರೆ ಈಗ ನಮಗೆ ದೊರೆತ ಐತಿಹಾಸಿಕ ಸಂಗತಿಗಳ ಸಹಾಯದಿಂದ ಈ ತಪ್ಪುಗಳನ್ನು ನಾವು ಅವಶ್ಯವಾಗಿ ತಿದ್ದಿಕೊಳ್ಳಬೇಕು. ಹೀಗೆ ಮಾಡಿದ್ದಾದರೆ ಚನ್ನಬಸವನ ತಾಯಿಯಾದ ನಾಗಲಾಂಬಿಕೆಯು ಲಗ್ನವಾಗಿತ್ತು, ಅವಳಿಗೆ ಸರಿಯಾದ ರೀತಿಯಿಂದ ಒಬ್ಬ ಮಗನು ಜನಿಸಿದ್ದನು, ಬಸವನು ಹೊರಗೆ ಹಾಕಲ್ಪಟ್ಟಾಗ ಅವಳು ಅವನೊಂದಿಗೆ ಹೊರಟು, ಅವನು ಪಟ್ಟ ಕಷ್ಟಗಳನ್ನು ತಾನೂ ಅನುಭವಿಸಿದಳು, ಮತ್ತು ಅವಳು ಮುಂದೆ ಮಂಗಳವಾಡಕ್ಕೂ ಆಮೇಲೆ ಕಲ್ಯಾಣಕ್ಕೂ ಹೋದಳು ಎಂದು ನಾವು ಭಾವಿಸಬೇಕಾಗುತ್ತದೆ.

ನಾಗಲಾಂಬಿಕೆಯು ಅಕ್ರಮ ರೀತಿಯಿಂದ ಚನ್ನಬಸವನನ್ನು ಹೆತ್ತಳೆಂದು ಕೆಲವು ಜೈನ ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ಹೇಳುತ್ತಾರೆ. ಹೀಗೆ ಹೇಳುವದು ಅವರ ಕೇವಲ ದ್ವೇಷಬುದ್ಧಿಯಿಂದ ಎಂದು ನಮಗೆ ತೋರುತ್ತದೆ.

## ಕಕ್ಕಯ್ಯನ ಮಿಕ್ಕ ಪ್ರಸಾದ.

ಜೈನರು ಚನ್ನಬಸವನ ವಿಷಯವಾಗಿ ಕಟ್ಟುಕಥೆಯನ್ನು ಹೇಗೆ ಹುಟ್ಟಿಸಿದ್ದಾರೋ ಹಾಗೆಯೇ ವೀರಶೈವರೂ ಕೂಡ ಹುಟ್ಟಿಸಿದ್ದಾರೆ. ಅವರ ಎಲ್ಲ ಗ್ರಂಥಗಳಲ್ಲಿ ಬಹುತರವಾಗಿ ಚನ್ನಬಸವನು ಕಕ್ಕಯ್ಯನ ಮಿಕ್ಕ ಪ್ರಸಾದದಿಂದ ಹುಟ್ಟಿದನೆಂದು ಹೇಳಲ್ಪಟ್ಟಿದೆ. ಇದಾದರೂ ಕಟ್ಟು ಕಥೆಯು. ಇಷ್ಟೇ ಅಲ್ಲ, ವೀರಶೈವ ಧರ್ಮಕ್ಕೆ ಹೊರತಾದದ್ದು. ಈ ಪುರಾಣಗಳಲ್ಲಿ ಹೇಳಲ್ಪಟ್ಟಿರುವದೇನಂದರೆ, ಘೋರರ ಕಕ್ಕಯ್ಯನು ಕಲ್ಯಾಣ ಪಟ್ಟಣದಲ್ಲಿರುವಾಗ್ಗೆ ಅವನ ಭೋಜನದ ಒಂದು ಅನ್ನದ ಅಗುಳನ್ನು ಒಂದು ಇರುವೆಯು ಕಚ್ಚಿಕೊಂಡು ಹೊರಗೆ ಒಯ್ಯುತ್ತಿತ್ತು. ಆಗ ಒಬ್ಬ ಜಂಗಮನು ಅದನ್ನು ಕಂಡು ಆ ಅಗುಳನ್ನು ತೆಗೆದುಕೊಂಡು ಹೋಗಿ ನಾಗಲಾಂಬಿಕೆಯು

ಗೃಹದಲ್ಲಿ ಇಟ್ಟನು. ಅದನ್ನು ನಾಗಲಾಂಬಿಕೆಯು ಅಕಸ್ಮಾತ್ತಾಗಿ ಸ್ವೀಕರಿಸಲು ಅದರಿಂದ ಆಕೆಯು ಗರ್ಭವು ನಿಂತು ಚನ್ನಬಸವನನ್ನು ಹಡೆದಳು. ಈಪ್ರಕಾರ ಈ ಕಥೆಯದೆ. ಆದರೆ ವೀರಶೈವ ಆಚರಣೆಯ ಪ್ರಕಾರ ಆಹಾರವು ಪ್ರಸಾದವಾದಬಳಿಕ ಅದನ್ನು ಸೇವಿಸು ವವನು ಎಂದೂ ಅದನ್ನು ಹೊರಗೆ ಚೆಲ್ಲಲಾರನು. ಜಾಗ್ರತಿಯಿಂದ ಅವನು ಅದನ್ನು ಭುಂಜಿಸಲೇಬೇಕು. ಒಂದುವೇಳೆ ಅದು ಹೊರಗೆ ಬಿದ್ದು ಇರುವೆಯು ಆದನ್ನು ಗ್ರಹಿಸಿದ್ದಾದರೆ ಅದು ಪ್ರಸಾದವೆನಿಸಿಕೊಳ್ಳಲಾರದು. ಅದು ವ್ಯೈಲಿಗೆಯಾಯಿತು. ಇಂಥ ವ್ಯೈಲಿಗೆಯ ಅಗುಳನ್ನು ಯಾವನೋ ಒಬ್ಬನು ತೆಗೆದುಕೊಂಡು ಹೋಗಿ ನಾಗಲಾಂಬಿಕೆಯ ಗೃಹದಲ್ಲಿ ಇಟ್ಟ ಬಳಿಕ ಅದು ಎಲ್ಲಿಂದ ಬಂದಿತು, ಅದು ಯಾರ ಪ್ರಸಾದವು, ಎಂಬುದರ ತಿಳುವಳಿಕೆಯು ಸಹ ಇಲ್ಲದ ನಾಗಲಾಂಬಿಕೆಯು ಅದನ್ನು ಗ್ರಹಿಸಿದಲ್ಲಿ ಆದರ ಪ್ರಭಾವವು ಆಕೆಯಲ್ಲಿ ಉಂಟಾಗುವ ಬಗೆ ಹೇಗೆ? ಶಿವಶರಣರು ಬಾಹ್ಯ ಆಚರಣೆಗೆ ಮಹತ್ವವನ್ನು ಎಂದೂ ಕೊಡುವದಿಲ್ಲ. ಅವರು ಭಾವ, ಮನಸ್ಸು, ಅಂತಃಕರಣ, ತಿಳುವಳಿಕೆ ಇವುಗಳಿಗೆ ಯಾವಾಗಲೂ ಮಹತ್ವ ಕೊಡುವದುಂಟು. ಏನೂ ತಿಳುವಳಿಕೆ ಇಲ್ಲದೆ ಅಕಸ್ಮಾತ್ತಾಗಿ ನಾಗಲಾಂಬಿಕೆಯು ಗ್ರಹಿಸಿದ ಇಂಥ ಅನ್ನದ ಅಗಳಿನಿಂದ ಯಾವದಾ ದರೂ ಪರಿಣಾಮವಾದೀತೆಂದು ಅವರು ಗ್ರಹಿಸಲಾರರು. ಪ್ರಸಾದದ ಮಹತ್ವವನ್ನು ಅಜ್ಞ ಜನರಲ್ಲಿ ಹಬ್ಬಿಸುವ ಸಲುವಾಗಿ ಭೋಜನ ಪ್ರಿಯ ರಾದ ಜಂಗಮರು ಹುಟ್ಟಿಸಿದ ಕಟ್ಟುಕಥೆ ಇದು, ಎಂದು ನಮಗೆ ತೋರುತ್ತದೆ. ಸ್ತ್ರೀಯರಿಗೆ ಮಕ್ಕಳಾಗಬೇಕೆಂಬ ಹಂಬಲವು ಬಹಳವಿ ರುವದರಿಂದ ಅವರಲ್ಲಿ ಜಂಗಮ ಪ್ರಸಾದದ ಸಲುವಾಗಿ ಅಂಧ ಭಕ್ತಿ ಯನ್ನು ಉಂಟು ಮಾಡಲು ಇಂಥ ಕಥೆಯನ್ನು ಜಂಗಮರು ಹುಟ್ಟಿಸಿಯೂ ಇರಬಹುದು. ಇಂಥ ಕಥೆಗಳು ಬಸವನು ಹುಟ್ಟಿದ ಬಳಿಕ ೧೦೦-೧೫೦ ವರ್ಷಗಳ ತರುವಾಯ ಬಹಳ ಉಂಟಾಗಿರುತ್ತವೆ. ಇಷ್ಟೇ ಅಲ್ಲ, ಅವನು ದುರ್ವ್ಯಾಪಾರಗಳಿಗೆ ಪ್ರವೃತ್ತರಾದ ಜಂಗಮರನ್ನು ಸಹ ಪ್ರೋತ್ಸಾಹಿಸು ತ್ತಿದ್ದನೆಂಬ ಅರ್ಥವುಳ್ಳ ಕಥೆಗಳು ಸಹ ಕೆಲವು ಗ್ರಂಥಗಳಲ್ಲಿ ಬಂದಿವೆ. ಬಸವೇಶ್ವರನ ಕಾಲದಲ್ಲಿ ರೂಢವಾದ ಶಿವಶರಣರ ವಿಚಾರಗಳು ಸಮಾಜ ದಲ್ಲಿ ಹಿಂದುಗಡೆ ಲೋಪವಾಗಿ ಅವರು ರಚಿಸಿದ ಶ್ರೇಷ್ಠ ವಾಙ್ಮಯದ ಅಭ್ಯಾ ಸವು ಸಹ ನಿಂತುಹೋಯಿತು. ಆಗ ಅಜ್ಞ ಸಮಾಜದಲ್ಲಿ ತಮ್ಮ ವಿಷಯ ವಾಗಿ ಅಂಧಶ್ರದ್ಧೆಯನ್ನು ಹುಟ್ಟಿಸಲು ಪ್ರಯತ್ನಿಸಿ ತಮ್ಮ ಮನಸ್ಸಿಗೆಬಂದಂತೆ

ರೇವಣಸಿದ್ಧೇಶ್ವರ, ಬಸವ, ಮುಂತಾದವರ ಚರಿತ್ರೆಗಳನ್ನು ಕೆಡಿಸಿದ್ದಾರೆ. ಈ ಉಭಯ ಮಹಾನುಭಾವರು ಸ್ತ್ರೀಲೋಲುಪರಾಗಿದ್ದರೆಂತಲೂ ಅಥವಾ ಅನೀತಿಗೆ ಆಸ್ಪದ ಕೊಟ್ಟಿದ್ದರೆಂತಲೂ ಸಹ ಅವರ ಪುರಾಣಗಳಲ್ಲಿ ಕಥೆಗಳು ಬಂದಿವೆ. ಇವೆಲ್ಲ ಸಂಗತಿಗಳನ್ನು ನಂಬಲು ಶಕ್ಯವಲ್ಲ. ರೇವ ಣಸಿದ್ಧೇಶ್ವರ, ಬಸವ ಚನ್ನಬಸವ, ಸಿದ್ಧರಾಮ, ಪ್ರಭುದೇವ ಇವರೆ ಲ್ಲರೂ ಉದಾತ್ತ ಚರಿತ್ರೆಯುಳ್ಳವರು. ಅವರ ವಚನಗ್ರಂಥಗಳಲ್ಲಿ ಎಂಥ ಮಹತ್ತರವಾದ ವಿಚಾರಗಳಿರುತ್ತವೆಂಬುದು ವಾಚಕರ ನಿದರ್ಶನಕ್ಕೆ ಈಗ ಚನ್ನಾಗಿ ಬಂದಿರುತ್ತದೆ. ಇಂಥ ಗ್ರಂಥಗಳನ್ನು ನಾವು ನಂಬಬಹುದೇ ಹೊರತು ಅವರ ವಿಷಯವಾಗಿ ಹಿಂದುಗಡೆ ಹುಟ್ಟಿದಂಥ ನೀತಿಗೆ ಹೊರ ತಾದಂಥ ಕಥೆಗಳನ್ನೂ ಪುರಾಣಗಳನ್ನೂ ನಾವು ನಂಬಕೂಡದು. ಈ ಕಥೆಗಳಲ್ಲಿ ನಿಜ ಸಂಗತಿಗಳೊಡನೆ ಸುಳ್ಳು ಸಂಗತಿಗಳೂ ಸಹ ಬೆರೆತು ಹೋಗಿವೆ. ಆದರೆ ನಾವು ಈ ಸುಳ್ಳು ಸಂಗತಿಗಳಾವವೆಂಬುದನ್ನು ಚನ್ನಾಗಿ ಪರೀಕ್ಷಿಸಿ ಅಂಥವುಗಳನ್ನು ನಾವು ಸಮಾಜದ ಮುಂದಿಡಬೇಕು. ಈ ವಿಷಯವಾಗಿ ವೀರಶೈವ ಸಮಾಜದವರು ಜಾಗ್ರತೆಪಡುವದು ಈ ಕಾಲ ದಲ್ಲಿ ಬಹು ಅವಶ್ಯವಾಗಿರುತ್ತದೆ. ಇಲ್ಲದಿದ್ದರೆ ವೀರಶೈವ ಸಮಾಜದ ಮಹ ತ್ತರ ಇತಿಹಾಸಕ್ಕೆ ಕುಂದುಂಟಾಗುವದು.

ಢೋರರ ಕಕ್ಕಯ್ಯನ ಮಿಕ್ಕ ಪ್ರಸಾದದಿಂದ ಚನ್ನಬಸವನು ಹುಟ್ಟಿ ದನೆಂಬ ಕಥೆಯು ಎಷ್ಟು ಅಸಂಭಾವ್ಯವಾಗಿದೆಂಬುದು ಕೆಳಗಿನ ಸಂಗ ತಿಯಿಂದಲೂ ತಿಳಿದು ಬರುತ್ತದೆ. ನಾವು ಹಿಂದೆ ಹೇಳಿದಂತೆ ಚನ್ನಬ ಸವನು ಕಲ್ಯಾಣದಲ್ಲಿ ಹುಟ್ಟುವ ಸಂಭವವೇ ಇಲ್ಲವೆಂಬುದನ್ನು ವಾಚ ಕರು ಮೊದಲು ಲಕ್ಷಿಸಬೇಕು. ಹೀಗೆಯೇ ಅವನು ೨೪ ವರ್ಷ ವಯ ಸ್ಸಾಗುವ ವರೆಗೆ ಜೀವಿಸಿದ್ದರಿಂದ ಅವನು ಹುಟ್ಟಿದ್ದು ಬಸವನು ಯಜ್ಞೋ ಪವೀತವನ್ನು ತ್ಯಜಿಸುವ ಪೂರ್ವದಲ್ಲಿಯೇ ಎಂಬುದನ್ನೂ ಕೂಡ ಅವರು ಚನ್ನಾಗಿ ತಿಳಿದು ನೋಡಬೇಕು. ಅಂದರೆ ಅವನೂ ಅವನ ತಂದೆತಾಯಿಗಳೂ ಅವನು ಹುಟ್ಟಿದಾಗ ಬ್ರಾಹ್ಮಣ ಸಮಾಜದಲ್ಲಿದ್ದರು ಎಂದು ತಿಳಿಯಬೇಕಾ ಗುತ್ತದೆ. ಆದರೆ ಅವರು ಸನಾತನಿಗಳು, ಕರ್ಮಠರು. ಇಂಥ ಬ್ರಾಹ್ಮಣರ ಮನೆಯಲ್ಲಿ ಕಕ್ಕಯ್ಯನಂಥ ಢೋರನಿಗೆ ಪ್ರವೇಶ ದೊರೆಯುವದು ತೀರಾ ಅಸಂಭವ. ಮತ್ತು ಇಂಥವನ ಪ್ರಸಾದವನ್ನು ನಾಗಲಾಂಬಿಕೆಯು ಸೇವಿಸುವದಂತೂ ಮತ್ತಿಷ್ಟು ಅಸಂಭವವು. ಬಸವನು ಯಜ್ಞೋಪವೀ

ತವನ್ನು ತೆಗೆದುಹಾಕಿ ಲಿಂಗಧಾರಿಯಾದ ಮಾತ್ರಕ್ಕೆ ಯಾವ ಸಮಾಜ ದವರು ಅವನನ್ನು ಹಿಂಸಿಸಿದರೋ ಅಂಥವರು ಒಬ್ಬ ಘೋರರವನು ಒಬ್ಬ ಬ್ರಾಹ್ಮಣಪ್ರತಿಷ್ಠಿತರ ಮನೆಯಲ್ಲಿ ಹೀಗೆ ಸಂಬಂಧವಿಡಗೊಡಲು ಎಂದಾ ದರೂ ಒಪ್ಪಬಹುದೋ? ಈ ಎಲ್ಲ ಸಂಗತಿಗಳನ್ನು ನಾವು ವಿಚಾರ ಮಾಡಿದಲ್ಲಿ ಚನ್ನಬಸವನು ಘೋರ ಕಕ್ಕಯ್ಯನ ಪ್ರಸಾದದಿಂದ ಹುಟ್ಟಿದ ನೆಂಬುದು ತೀರ ಅಸಂಭಾವ್ಯವಾಗಿ ತೋರುತ್ತದೆ.

## ದೇವರಾಜ.

ಈ ಪ್ರಕಾರ ಬಸವೇಶ್ವರನು ವೀರಶೈವ ಮತವನ್ನು ಸ್ವೀಕರಿಸಿದ ಕಾಲದಲ್ಲಿ, ಅವನೊಡನೆ ಅವನ ಅಕ್ಕನಾಗಲಾಂಬಿಕೆಯು ತನ್ನ ಮಗು ಚನ್ನಬಸವನನ್ನು ತೆಗೆದುಕೊಂಡು ಸಂಗಮಕ್ಕೆ ಹೋಗಲು, ಬಸವನ ಅಣ್ಣ ದೇವರಾಜನ ಗತಿ ಏನಾಗಿರಬಹುದೆಂಬುದನ್ನು ನಾವು ಇಲ್ಲಿ ವಿಚಾರಮಾ ಡುವದು ಅವಶ್ಯವಿದೆ. ಅರ್ಜುನವಾಡ ಶಿಲಾಶಾಸನದಲ್ಲಿ ಬಸವನಿಗೆ ದೇವ ರಾಜನೆಂಬ ಅಣ್ಣನಿದ್ದನೆಂದು ಹೇಳಲ್ಪಟ್ಟದೆಂಬದನ್ನು ನಾವು ಮರೆಯುಕೂ ಡದು. ಈ ಶಿಲಾಶಾಸನದಲ್ಲಿ ದೇವರಾಜನು ''ಮುನಿಪ" ಎಂದು ವರ್ಣಿಸಲ್ಪ ಟ್ಟಿದ್ದಾನೆ. ಅವನಿಗೆ ಒಬ್ಬ ಮಗನಿದ್ದು ಅವನು ''ಜಂಗಮಪುರುಷ" ಎಂದು ಅದರಲ್ಲಿ ಹೇಳಲ್ಪಟ್ಟಿದ್ದಾನೆ. ಅವನ ಮಗನ ಹೆಸರು ಕಲಿದೇವರಸ. ಇವ ನಾದರೂ "ಮುನಿಪ" ಎಂದು ಇದರಲ್ಲಿ ಹೇಳಲ್ಪಟ್ಟಿದ್ದಾನೆ. ಈ ಕಲಿದೇ ವನ ಮಗನು ಹಾಲಬಸವಿದೇವ ಎಂಬವನಿದ್ದು ಇವನಾದರೂ ಮುನೀಶ, ಮಹಾಮಾಹೇಶ್ವರ, ಸುವರ್ಣವೃಷಭಧ್ವಜ, ತ್ರಿಷಷ್ಟಿ ಪುರಾತನ ಪಾ ದಾರ್ಚಕ, ಮಹಾಲಿಂಗಜಂಗಮಪ್ರಸಾದನಿಯತ, ಸಮಯಭಕ್ತಿ ಸಂಪನ್ನ, ಬಸವರಾಜನನ್ವಯಮಪ್ಪ ತಪಚಕ್ರವರ್ತಿ, ವೀರವ್ರತಿ, ಹಾಲಬಸವಿದೇವ ಎಂದು ವರ್ಣಿಸಲ್ಪಟ್ಟಿದ್ದಾನೆ. ಆಗಿನ ವೀರಶೈವ ಸಮಾಜದಲ್ಲಿ ಮಹ ತ್ವವನ್ನು ಹೊಂದಿ ಮಠಾಧೀಶರಾದವರಿಗೆ 'ಮುನಿಪ' ಎಂಬ ಹೆಸರು ಇದ್ದದ್ದು ಕಂಡುಬರುತ್ತದೆ. ಈ ವಿಷಯವಾಗಿ ಹಿಂದೆ ನಾವು ಶಿವಾ ನುಭವ ಸಂಪುಟ ೧೩ ಸಂಚಿಕೆ ೮ ಇವುಗಳಲ್ಲಿ ಕೆಲವು ಲೇಖಗಳನ್ನು ಬರೆ ದಿದ್ದು ಅವುಗಳನ್ನು ವಾಚಕರು ನೋಡಬೇಕು. ಪ್ರಸ್ತುತ ಈ ಸಂಗತಿ ಯನ್ನು ವಿವರಿಸುವ ನಮ್ಮ ಉದ್ದೇಶವು ಬಸವನ ಅಣ್ಣನಾದ ದೇವರಾ ಜನು ''ಮುನಿಪ" ಎಂದು ಹೇಳಲ್ಪಟ್ಟಿರುವದರಿಂದ ಅವನೂ ಸಹ ವೀರಶೈವ ಮಾರ್ಗಾನುವರ್ತಿಯಾಗಿರಲಿಕ್ಕೆ ಬೇಕೆಂಬುದನ್ನು ತೋರಿಸುವದಿರುತ್ತದೆ.

ಬಸವ, ಅವನ ಅಕ್ಕನಾಗಲಾಂಬಿಕೆ, ನಾಗಲಾಂಬಿಕೆಯ ಗಂಡ ಶಿವಸ್ವಾಮಿ, ಇವರು ಹೇಗೆ ವೀರಶೈವ ಧರ್ಮವನ್ನು ಸ್ವೀಕರಿಸಿದರೋ ಹಾಗೆಯೇ ಅದೇ ಮನೆತನದಲ್ಲಿದ್ದ ದೇವರಾಜನೂ ಕೂಡ ಅದೇಕಾಲಕ್ಕೆ ವೀರ ಶೈವ ಧರ್ಮವನ್ನು ಸ್ವೀಕರಿಸಲಿಕ್ಕೆಬೇಕೆಂಬ ಅನುಮಾನವು ಉಂಟಾಗುತ್ತದೆ. ಈ ಕಾಲಕ್ಕೆ ರೇವಣಸಿದ್ಧೇಶ್ವರ, ರುದ್ರಮುನಿ, ಮೊದಲಾದ ಮಹಾತ್ಮರ ಪ್ರಭಾವದ ಮೂಲಕ ಈ ತರ್ದೆವಾಡಿನಾಡಿನಲ್ಲಿ ವೀರಶೈವ ಧರ್ಮದ ಬಗ್ಗೆ ಮಹತ್ತರ ಕ್ರಾಂತಿಯು ಉದ್ಭವಿಸಿರಲಿಕ್ಕೆ ಬೇಕು. ಅದರ ಪರಿಣಾಮವಾಗಿ ಬಸವೇಶ್ವರನೊಡನೆ ಅವನ ಕುಟುಂಬಸ್ತರೆಲ್ಲರೂ ವೀರ ಶೈವ ಧರ್ಮವನ್ನು ಸ್ವೀಕರಿಸಲಿಕ್ಕೆ ಬೇಕು. ದೇಶದಲ್ಲಿಯ ಒಂದು ಪ್ರಸಿದ್ಧ ಬ್ರಾಹ್ಮಣ ಮನೆತನದವರು ಹೀಗೆ ಧರ್ಮಪರಿತ್ಯಾಗಕ್ಕೆ ಸಿದ್ಧವಾಗಲು ಅಲ್ಲಿಯ ಬ್ರಾಹ್ಮಣ ಸಮಾಜದವರೆಲ್ಲ ಅವರನ್ನು ವಿಶೇಷವಾಗಿ ಹಿಂಸಿಸಿರಲಿಕ್ಕೆ ಬೇಕು. ಆದ್ದರಿಂದ ಬಸವನೂ ನಾಗಲಾಂಬಿಕೆಯೂ ಸ್ವಗ್ರಾಮವನ್ನು ಬಿಟ್ಟು ಹೋಗಬೇಕಾಯಿತು. ಹಾಗೆಯೇ ಬಸವನ ಅಣ್ಣನಾದ ದೇವರಾಜನೂ ಕೂಡ ಹಿಂಸೆಗೆ ಗುರಿಯಾಗಲು ಆವನೂ ಕೂಡ ಬಾಗೇವಾಡಿಯನ್ನು ಬಿಟ್ಟು ಸ್ಥಳಾಂತರ ಮಾಡಿ ಈಗ ಹುಕ್ಕೇರಿ ಗ್ರಾಮಕ್ಕೆ ಸಮೀಪವಾಗಿರುವ ಅರ್ಜುನವಾಡ—ಇದಕ್ಕೆ ಆಗ ಕವಿಳಾಸಪುರ ಎಂಬ ಹೆಸರು ಇತ್ತು—ಇಲ್ಲಿಗೆ ಬಂದಿರಬೇಕೆಂದು ತೋರುತ್ತದೆ. ಇವರಲ್ಲಿ ಬಸವನು ಸಂಗಮದಲ್ಲಿ ಬಂದು ನಿಂತನು. ಅಲ್ಲಿ ಅವನು ಕೆಲವು ವರ್ಷ ವಿದ್ದು, ಮುಂದೆ ಮಂಗಳವಾಡದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಒಂದು ನೌಕರಿಯನ್ನು ಸಂಪಾದಿಸಿ ಅಲ್ಲಿ ಘನತೆಗೇರಿದನು. ಆದರೆ ಅವನ ಅಣ್ಣನಾದ ದೇವರಾಜನು ರಾಜ್ಯಕಾರಭಾರದಲ್ಲಿ ಸೇರದೆ ಕೇವಲಧರ್ಮಪರನಾಗಿ ಮುನಿಪನೆಂದೆನಿಸಿಕೊಂಡನು. ದೇವರಾಜನೂ ಅವನ ಮಕ್ಕಳೂ ಮೊಮ್ಮಕ್ಕಳೂ ಸಹ ಸಮಾಜದಲ್ಲಿ ಗಣ್ಯರೆನಿಸಿಕೊಂಡು ಯಾದವ ರಾಜರಿಂದ ಸಹ ಮನ್ನಣೆಯನ್ನು ಹೊಂದಿ ಜೀವಿಸಿದರೆಂದು ಈ ಅರ್ಜುನವಾಡ ಶಿಲಾಶಾಸನದಿಂದ ತಿಳಿದು ಬರುತ್ತದೆ.

ಬಸವನು ವೀರಶೈವ ಧರ್ಮವನ್ನು ಸ್ವೀಕರಿಸಿದ ಕಾಲದಲ್ಲಿ ಮೇಲೆ ವಿವರಿಸಿದಂತೆ ಘಟನೆಗಳಾಗಿರಬೇಕೆಂದು ನಮಗೆ ತೋರುತ್ತದೆ. ಈ ಕಾಲದಲ್ಲಿ ಬ್ರಾಹ್ಮಣ ಸಮಾಜದವರು ಅವನಿಗೂ ಅವನ ಅಣ್ಣ ಅಕ್ಕ ಮೊದಲಾದವರಿಗೂ ಬಹಳ ಹಿಂಸೆಯನ್ನು ಮಾಡಿರಬೇಕು. ಆದ್ದರಿಂ

ದಲೇ ಬಸವನು ತನ್ನ ವಚನಗಳಲ್ಲಿ ತನ್ನ ಬಂಧು ಬಳಗ, ಬ್ರಾಹ್ಮಣರು ಇವರನ್ನು ಉಲ್ಲೇಖಿಸುವ ಪ್ರಸಂಗಗಳು ಬಂದಾಗ್ಗೆ ಬಹಳ ಕಠೋರವಾದ ವಾಕ್ಯಗಳನ್ನು ನುಡಿಯುತ್ತಾನೆ. ಉಳಿದ ವಚನಕಾರರು ಬ್ರಾಹ್ಮಣರ ಕರ್ಮಮಾರ್ಗವನ್ನು ಖಂಡಿಸುತ್ತಿರುವದು ಕಂಡುಬಂದರೂ ಅವರಲ್ಲಿ ಯಾರೂ ಬಸವನಷ್ಟು ಕಠೋರ ನುಡಿಗಳನ್ನಾಡಿಲ್ಲ. ಅವನು ಮುಖ್ಯ ವಾಗಿ ತನ್ನ ಸಮೀಪದವರು ಅಂದರೆ ಕಕ್ಕ, ಬಂಧುಬಳಗ, ತಾಯಿ ತಂದೆ ಇವರ ವಿಷಯವಾಗಿ ಉಲ್ಲೇಖಿಸುವ ಸಮಯ ಬಂದ ಕೂಡಲೆ ಬಹು ಉದ್ರೇಕಗೊಳ್ಳುತ್ತಾನೆ. ಮತ್ತು ಅತ್ಯಂತ ಬಿರುನುಡಿಗಳನ್ನಾಡು ತ್ತಾನೆ. ಈ ತೆರದ ವಚನಗಳು ಬಸವನ ವಚನಗಳಲ್ಲಿ ಅನೇಕವಿರುತ್ತವೆ. ಬಸವನು ತನ್ನ ಆಯುಷ್ಯದ ಆರಂಭಕಾಲದಲ್ಲಿ ತನ್ನ ಆಪ್ತೇಷ್ಟರ ಮೂ ಲಕ ಉಂಟಾದ ಕಟು ಅನುಭವಗಳು ಆಗ ಅವನ ಸ್ಮರಣೆಗೆ ಬಂದು ಹಾಗೆ ಅವನು ನುಡಿದಿರಬೇಕೆಂದು ನಮಗೆ ತೋರುತ್ತದೆ. ಬಸವನು ಸ್ವಾಭಾವಿಕವಾಗಿ ಅತ್ಯಂತ ಮೃದು ಸ್ವಭಾವದವನು ಮತ್ತು ಕೋಮಲ ಹೃದಯನು. ಆದರೆ ಅವನಿಗೆ ತನ್ನ ಬಂಧುಬಳಗದವರು, ಆಪ್ತೇಷ್ಟರು, ಇವರ ನೆನಪು ಆದ ಕೂಡಲೆ ಬಹಳ ಕಠೋರವಾದ ವಾಕ್ಯಗಳನ್ನು ನುಡಿ ಯುತ್ತಾನೆ. ಇದು ಅನವಶ್ಯವೆಂದು ನಮಗೆ ತೋರುತ್ತದೆ. ಆದರೆ ಬಸವನು ಈ ಕಾಲದಲ್ಲಿ ಅವರಿಂದ ಬಹಳ ಪೀಡಿಸಲ್ಪಟ್ಟಿರಬೇಕು. ಅವನು ಯಾವ ಪೀಡೆಗಳನ್ನು ಹೊಂದಿರಬೇಕೆಂಬುದು ನಮಗೆ ಇನ್ನೂ ತಿಳಿದಿಲ್ಲ. ಆದರೆ ವಾಚಕರು ಇಂಥ ವಚನಗಳನ್ನು ಓದುವಾಗ್ಗೆ ಬಸವನು ತಾನು ತೀರ ಚಿಕ್ಕವನಿರುವಾಗ್ಗೆ ಉಂಡ ಕಷ್ಟಗಳ ನೆನಪು ಅವನಿಗೆ ಆಗಿ ಅವನು ಹಾಗೆ ಅಂದಿರಬೇಕೆಂದು ನಾವು ತಿಳಿಯಬೇಕು.

(ಮುಂದೆ ಸಾಗುವದು.)

# ವಿಜಯನಗರ ಸಾಮ್ರಾಜ್ಯದಲ್ಲಿ ವೀರಶೈವ ಸಾಹಿತ್ಯ.

(ಲೇಖಕ:— ಎಸ್. ಷಣ್ಮುಖ ಖೀರಾಪೂರ, ಸೀ. ಬಿ. ಎ.
ಲಿಂಗರಾಜ ಕಾಲೇಜ ಬೆಳಗಾವಿ.)

---

ವಿಜಯನಗರ ಸಾಮ್ರಾಜ್ಯವು ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಸ್ಥಾಪಿತವಾಯಿತು. ಆದರೆ ರಾಜ್ಯಸ್ಥಾಪನೆಯ ಹೋರಾಟದ ಅನಂತರ ರಾಜ್ಯದಲ್ಲಿ ಶಾಂತತೆ ಸುವ್ಯವಸ್ಥೆಗಳು ನೆಲೆಗೊಳ್ಳಲು ಕೆಲವೊಂದು ಅವಧಿ ಬೇಕಾಗುತ್ತದೆ. ಕಲೆಸಾಹಿತ್ಯಗಳ ಪೋಷಣೆಗೆ ಶಾಂತತೆ ಸುವ್ಯವಸ್ಥೆಗಳು ಆವಶ್ಯಕವಷ್ಟೇ? ವಿಜಯನಗರ ಸಾಮ್ರಾಜ್ಯವು ಕಲೆಸಾಹಿತ್ಯಗಳಿಗೆ ಹೆಚ್ಚಾದ ಪೋಷಣೆಯನ್ನಿತ್ತಿದೆ. ವಿದ್ಯಾಪಕ್ಷಪಾತಿಗಳೂ ಕಾವ್ಯಪಕ್ಷಪಾತಿಗಳೂ ಆದ ವಿಜಯನಗರದ ರಾಯರಿಂದ ಕನ್ನಡವು ಬೆಳವಣಿಗೆಯನ್ನು ಪಡೆಯಿತು. ಆದರೆ ವಿಜಯನಗರ ಕಾಲದ ಸು. ೨೦೦ ವರ್ಷಗಳ ಅವಧಿಯಲ್ಲಿ ಹೊರಬಿದ್ದ ವೀರಶೈವ ಸಾಹಿತ್ಯವನ್ನಷ್ಟೇ ಪರಿಶೀಲಿಸಿ ನೋಡುವುದು ಪ್ರಸ್ತುತ ಬರವಣಿಗೆಯ ಉದ್ದೇಶವಾಗಿರುವುದರಿಂದ, ಉಳಿದ ಮತಗಳ ಸಾಹಿತ್ಯವಿವೇಚನೆಗೆ ಇಲ್ಲಿ ಎಡೆಯಿಲ್ಲ. ಹೀಗಿದ್ದರೂ, ಈ ಕಾಲದಲ್ಲಿ ವೀರಶೈವ ಗ್ರಂಥಕಾರರ ಸಂಖ್ಯೆ ಅತ್ಯಧಿಕವಾಗಿರುವುದರಿಂದ ಈ ಪುಟ್ಟ ಲೇಖನದಲ್ಲಿ ವೀರಶೈವ ಸಾಹಿತ್ಯದ ಸಂಪೂರ್ಣ ಇತಿಹಾಸವನ್ನು ಬರೆಯುವುದು ಅಸಾಧ್ಯವೆಂದು ಬಗೆದು, ಅದನ್ನು ಪೃಥಕ್ಕರಿಸಿ, ಅದರ ಒಲವನ್ನು ಮಾತ್ರ ಇಲ್ಲಿ ಹೇಳಲಾಗಿದೆ. ಆದುದರಿಂದ ವಾಚಕರು ಇದಕ್ಕಿಂತ ಹೆಚ್ಚಿಗೆ ನಿರೀಕ್ಷಿಸಬಾರದೆಂದು ನನ್ನ ವಿನಮ್ರ ಸೂಚನೆಯಿದೆ.

ಮೇಲೆ ಕಾಣಿಸಿದಂತೆ ವಿಜಯನಗರ ಸಾಮ್ರಾಜ್ಯವು ಹದಿನಾಲ್ಕನೆಯ ಶತಮಾನದಲ್ಲಿ ಸ್ಥಾಪಿತವಾದರೂ, ಅದು ಯುದ್ಧಕಾಲವಾದುದರಿಂದ ಗ್ರಂಥಕಾರರಿಗೆ ಅನುಕೂಲವಾಗಿರಲಿಲ್ಲ. ಅರಸರಿಂದ ಕವಿಗಳಿಗೆ ದೊರೆಯಬಹುದಾದಷ್ಟು ಆಶ್ರಯವೂ ದೊರೆಯಲಿಲ್ಲ. ಇದರ ಪರಿಣಾಮದಿಂದ ಹೊಗಳಿಸಿಕೊಳ್ಳುವಂತೆ ಗ್ರಂಥಗಳನ್ನು ಕವಿಗಳು ಬರೆಯಲಿಲ್ಲ. ಬಸವಪುರಾಣ, ಧರ್ಮನಾಥ ಪುರಾಣ, ಪದ್ಮರಾಜ ಪುರಾಣಗಳು ಇದಕ್ಕೆ

ಅಪವಾದಗಳು. ಆದರೆ ಮುಂದೆ ೧೫ನೆಯ ಮತ್ತು ೧೬ನೆಯ ಶತಮಾನಗಳಲ್ಲಿ ಶಾಂತಿಯು ನೆಲೆಗೊಂಡ ಬಳಿಕ, ಕವಿಗಳಿಗೆ ಆಶ್ರಯವು ದೊರೆತು, ಲೆಕ್ಕವಿಲ್ಲದಷ್ಟು ಉದ್ಗ್ರಂಥಗಳು ಬರೆಯಲಾದುವು. ಇವುಗಳಲ್ಲಿ ವೀರಶೈವ ಗ್ರಂಥಗಳೇ ಮಿತಿಮೀರಿರುವುದರಿಂದ ಈ ಕಾಲವನ್ನು ವೀರಶೈವ ಯುಗವೆಂದು ಹೇಳಬಹುದು. ಇನ್ನು ಈ ಕಾಲದ ವೀರಶೈವ ಸಾಹಿತ್ಯವನ್ನು ಈ ರೀತಿಯಾಗಿ ವಿಂಗಡಿಸಬಹುದು.

(೧) ಭಾವಗೀತೆಗಳು, (೨) ಟೀಕಾಗ್ರಂಥಗಳು, (೩) ಸಿದ್ಧಾಂತ ಗ್ರಂಥಗಳು. (೪) ವಚನಗ್ರಂಥಗಳು, (೫) ಪುರಾಣಗಳು, (೬) ಶತಕಗಳು, (೭) ವಿಶೇಷ ವಿಷಯಗಳು.

ಭಾವಗೀತೆಗಳು. ದಾಸಕೂಟದ ಕೀರ್ತನೆಗಳು ವಿಜಯನಗರದ ಕಾಲದಲ್ಲಿಯೇ ಪ್ರಚಾರಕ್ಕೆ ಬಂದುವು. ಅವುಗಳಲ್ಲಿ ಪುರಂದರದಾಸ, ಮತ್ತು ಕನಕದಾಸರ ಕೀರ್ತನೆಗಳು ಬಹು ಹೃದಯಂಗಮವಾಗಿವೆ. ಭಕ್ತಿರಸದಿಂದ ತುಂಬಿತುಳುಕುವ, ಮನಸ್ಸನ್ನು ತಲ್ಲೀನಗೊಳಿಸುವ, ಇಂತಹ ಭಾವಗೀತೆಗಳು ಈ ವರೆಗೆ ಕನ್ನಡದಲ್ಲಿರಲಿಲ್ಲ. ಮಾಧ್ವರು ಅವುಗಳನ್ನು ಪ್ರಚಾರಕ್ಕೆ ತಂದುದರಿಂದ ಸಾಹಿತ್ಯ ಪ್ರಪಂಚದಲ್ಲಿ ಅವರಿಗೂ ಒಂದು ಉಚ್ಚಸ್ಥಾನವು ದೊರೆತಿದೆ. ಆ ಕಾಲದ ನಿಜಗುಣಶಿವಯೋಗಿಯಂತಹ ವೀರಶೈವ ಕವಿಗಳೂ, ಅನುಭವವನ್ನು ಹೇಳುವ, ಮತ್ತು ಹೃದಯಸ್ಪರ್ಶಿಯಾದ ಭಾವಗೀತೆಗಳನ್ನು ಬರೆದಿದ್ದಾರೆ. ಇವು ವೀರಶೈವ ಮತಾನುಯಾಯಿಗಳ ಮುಖದಲ್ಲಿ ಈಗಲೂ ಇವೆ.

ಇನ್ನು ಟೀಕಾ ಮತ್ತು ಸಿದ್ಧಾಂತಗ್ರಂಥಗಳ ವಿಚಾರಃ— ಇವು ಧಾರ್ಮಿಕ ಮತ್ತು ತಾತ್ವಿಕ ವಿಷಯಗಳನ್ನು ಪ್ರತಿಪಾದಿಸಿದವುಗಳಾದುದರಿಂದ ಮತಪ್ರಸಾರಕ್ಕೂ, ವಾದವಿವಾದಕ್ಕೂ ಉಪಯುಕ್ತವಾಗಿದ್ದವು. ವೀರಶೈವ ಧರ್ಮವನ್ನು ರೂಢಮೂಲವಾದ ಜೈನಮತಾನುಯಾಯಿಗಳು ವಿರೋಧಿಸುವುದು ಆ ಕಾಲದಲ್ಲಿ ಸ್ವಾಭಾವಿಕವಾಗಿದ್ದಿತು. ಆದುದರಿಂದ ಪರಮತತತ್ವಗಳನ್ನು ಖಂಡಿಸಿ, ತಮ್ಮ ಮತಗಳನ್ನು ಪ್ರಸ್ಥಾಪಿಸಲು ಲಕ್ಕಣ್ಣದಂಡೇಶನಂತಹ ಮಂತ್ರಿಗೂ ಸಹ 'ಶಿವತತ್ವಚಿಂತಾಮಣಿ'ಯಂತಹ ಗ್ರಂಥಗಳನ್ನು ಬರೆಯಬೇಕಾಯಿತು. ವೀರಶೈವ ಪಂಡಿತರೂ ಅಸಾಧಾರಣರಾಗಿದ್ದರು. ನೀಲಕಂಠಾರ್ಯನೆಂಬ ಪಂಡಿತನು "ಪರವಾದಿಗಜಾಂ

ಕುಶ ತಾರಾವಳಿ" ಎಂಬ ಗ್ರಂಥವನ್ನು ಬರೆದನು. ಈತನು ವಾದಿ ಶ್ರೇಷ್ಠನಾದುದರಿಂದ, ಇವನಿಗೆ ಪರಮತವೇಶ್ಯಾಭುಜಂಗನೆಂಬ ಬಿರುದಿದ್ದಿತು.

ಹನ್ನೆರಡನೆಯ ಶತಮಾನದ ಮಧ್ಯದಲ್ಲಿ ಉಂಟಾದ ವೀರಶೈವ ಕ್ರಾಂತಿಯ ಪ್ರಭಾವವು ಹದಿಮೂರು ಹದಿನಾಲ್ಕನೆಯ ಶತಮಾನಗಳಲ್ಲಿ ಅಷ್ಟೊಂದು ಹೆಚ್ಚಾಗಿ ಕಂಡುಬರುವುದಿಲ್ಲ. ಆದರೆ ವಿಜಯನಗರ ರಾಯರ ಕಾಲದಲ್ಲಿ ವೀರಶೈವ ಮಠಗಳ ಪುನರ್ಘಟನೆ, ವಚನಸಾಹಿತ್ಯದ ಸುವ ವಸ್ಥೆಯ ಕಾರ್ಯ ಇವುಗಳು ನಡೆದಿವೆ. ೧೦೧ ವಿರಕ್ತರು ಆಗ ಇದ ರೆಂದೂ ಅವರು ಮೇಲೆ ಸೂಚಿಸಿದ ಕಾರ್ಯಗಳನ್ನು ಆಸ್ಥೆಯಿಂದ ನಡೆಯಿಸಿದರೆಂದೂ ತಿಳಿದುಬರುತ್ತಿದೆ. ಅರಸರು, ಅಧಿಕಾರಿಗಳು, ಧಾರ್ಮಿಕರು ಇವರ ಬೆಂಬಲದಿಂದ ಈ ಕಾಲದ ವೀರಶೈವ ಸಾಹಿತ್ಯವು ಹೆಚ್ಚಾದ ಹೆಚ್ಚಳವನ್ನು ಪಡೆದಿದೆ. ೧೨ನೆಯ ಶತಮಾನದ ಅಂತ್ಯಭಾಗದಲ್ಲಿ ಹೊರಟ ವಚನಗ್ರಂಥಗಳ ಪ್ರವಾಹವು ನಿಂತುಹೋಗಿ, ಅದು ಈ ಅವಧಿಯಲ್ಲಿ ಪುನರುಜ್ಜೀವಿತವಾಗಿ ಧಾರಾಳವಾಗಿ ಹರಿಯುಹತ್ತಿತೆಂದು ಮೇಲೆ ಸೂಚಿಸಿದಷ್ಟೇ! ಅವುಗಳೊಳಗಿನ ಎಷ್ಟೋ ವಚನಗಳ ಅರ್ಥವು ಸಾಮಾನ್ಯರಿಗೆ ತಿಳಿಯುವುದಿಲ್ಲ. ಅವುಗಳನ್ನು ಸುಲಭವಾಗಿ ತಿಳಿದುಕೊಳ್ಳಲಿಕ್ಕೆಂದು ಕೆಲವರು ಟೀಕೆಗಳನ್ನು ಬರೆದರು. ಅವರಲ್ಲಿ ಮೊದಲನೆಯವನು ಮಹಾಲಿಂಗದೇವನು (ಸು. ೧೪೨೫) ಇವನು ಪ್ರಭುದೇವರ ಷಟ್‌ಸ್ಥಲಜ್ಞಾನ ಚಾರಿತ್ರ ವಚನದ ಟೀಕೆಯನ್ನು ಬರೆದಿದ್ದಾನೆ. ಇವನಂತೆಯೇ ಕುಮಾರ ಬಂಕನಾಥನು (ಸು. ೧೪೩೦) ಪ್ರಭುದೇವರ ಟೀಕಿನ ವಚನವನ್ನು ಬರೆದಿದ್ದಾನೆ. ಪ್ರಭುದೇವರ ಮಂತ್ರಗೋಪ್ಯದ ಟೀಕೆಯನ್ನು ಬರೆದವನು ಕಲ್ಲುಮಠದ ಪ್ರಭುದೇವನು. (ಸು. ೧೪೩೦) ಗುಬ್ಬಿಯ ಮಲ್ಲಣ್ಣನು (ಸು. ೧೪೭೫) ವಾತುಲತಂತ್ರದ ಟೀಕೆಯನ್ನು ಬರೆದಿದ್ದಾನೆ. ಸಾನಂದ ಶಿವಯೋಗಿಯು (ಸು. ೧೪೮೦) ವೀರಮಾಹೇಶ್ವರಾಚಾರ ಸಾರೋದ್ಧಾರ ಟೀಕೆಯನ್ನು ಬರೆದನು. ಹೀಗೆ ಟೀಕಾಗ್ರಂಥಗಳು ಹುಟ್ಟುತ್ತಿರುವಾಗ ಇನ್ನೊಂದು ಮಹತ್ವದ ಸಂಗತಿಯು ನಡೆದುಹೋಯಿತು. ಹರಭಕ್ತನು (ಸು. ೧೨೫೦) ವೇದಭಾಷ್ಯವನ್ನು ಬರೆದನೆಂದು ಚೆನ್ನಬಸವ ಪುರಾಣದಲ್ಲಿ ಹೇಳಿದೆ. ಕನ್ನಡಿಗರಲ್ಲಿ ವೇದಭಾಷ್ಯವನ್ನು ಕನ್ನಡದಿಂದ ಬರೆದವರಲ್ಲಿ ಈತನೇ ಮೊದಲನೆಯವನು. ಗುರುನಂಜನು (ಸು. ೧೫೦೦)

ಎರಡನೆಯವನು. ಈತನು ಭಟ್ಟ ಭಾಸ್ಕರಕೃತ ಯಜುರ್ವೇದ ಭಾಷ್ಯಗೆ ಕನ್ನಡ ಟೀಕೆಯನ್ನು ಬರೆದನು. ಇದಕ್ಕೆ ರುದ್ರಭಾಷ್ಯವೆಂಬ ಹೆಸರಿದ್ದಂತೆ ತೋರುತ್ತದೆ.

ಸಿದ್ಧಾಂತ ಗ್ರಂಥಗಳಲ್ಲಿ ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿಯು (ಸು. ೧೪೨೮) ಮೊದಲನೆಯದು. ಜಕ್ಕಣಾರ್ಯನು ನೂರೊಂದು ಸ್ಥಲದ ವ್ಯುತ್ಪತ್ತಿಯನ್ನು ಬರೆದನು. ಶ್ರೀ ಗಿರೀಂದ್ರನು (೧೪೩೦) ಇದಕ್ಕೆ ಟೀಕೆಯನ್ನು ಬರೆದಿದ್ದಾನೆ. ಮಗ್ಗೆಯ ಮಾಯಿದೇವನು (ಸು. ೧೪೩೦) ಅನುಭವಸೂತ್ರವೆಂಬ ಸಿದ್ಧಾಂತ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದನು. ಗುರುಬಸವನ (ಸು. ೧೪೩೦) ಶಿವಯೋಗಾಂಗ ಭೂಷಣ, ತೋಂಟದ ಸಿದ್ಧೇಶ್ವರನ (ಸು. ೧೪೭೦) ಷಟ್ಸ್ಥಲಜ್ಞಾನಸಾರಾಮೃತ, ಗುಬ್ಬಿಯ ಮಲ್ಲಣ್ಣನ (ಸು. ೧೪೭೫) ಗಣ ಭಾಷ್ಯರತ್ನ ಮಾಲೆ, ನಿಜಗುಣಶಿವಯೋಗಿಯ ಪರಮಾರ್ಥ ಗೀತೆ, ಪರಮಾನುಭವ ಬೋಧೆ, ವಿವೇಕಚಿಂತಾಮಣಿ, ಇವೇ ಮುಂತಾದ ಗ್ರಂಥಗಳು, ಆ ಕಾಲದ ಧಾರ್ಮಿಕ ಭಾವನೆಯನ್ನು ಸೂಚಿಸುತ್ತವೆ.

ಬಸವಣ್ಣನವರ ಕಾಲದಲ್ಲಿ ಹುಟ್ಟಿದಂತೆ, ಈ ಅವಧಿಯಲ್ಲಿ ವಚನ ಗ್ರಂಥಗಳು ಹೇರಳವಾಗಿರದಿದ್ದರೂ, ಅನೇಕವಾಗಿದ್ದುವೆಂದು ಎದೆತಟ್ಟಿ ಹೇಳಬಹುದು. ಇವುಗಳಲ್ಲಿ ತೋಂಟದ ಸಿದ್ಧೇಶ್ವರನ (ವು. ೧೪೭೦) ವಚನಗಳು, ಸ್ವತಂತ್ರಸಿದ್ಧಲಿಂಗೇಶ್ವರನ ವಚನಗಳು, ಗುಬ್ಬಿಯ ಮಲ್ಲಣ್ಣನ ವಚನಗಳು, ಎಮ್ಮೆಬಸವನ (ಸು. ೧೫೪೩) ಕಾಲಜ್ಞಾನದ ವಚನಗಳು ಮುಖ್ಯವಾದವುಗಳು.

ಹದಿನೈವನೆಯ ಶತಮಾನವು ಸಿದ್ಧಾಂತಕಾಲವೇ ಹೊರತು ಪುರಾಣ ಕಾಲವಲ್ಲ. ಈ ಶತಮಾನದಲ್ಲಿ ವೀರಶೈವ ಮತಪ್ರಸಾರವು ಸಾಕಷ್ಟು ಆದಮೇಲೆ, ಮುಂದೆ ಹದಿನಾರನೆಯ ಶತಮಾನದಲ್ಲಿ ಅನೇಕ ಪುರಾಣ ಕಾವ್ಯಗಳು ರಚಿತವಾದುವು. ಈ ಹದಿನಾರನೆಯ ಶತಮಾನದಲ್ಲಿ ಸಿದ್ಧಾಂತಗ್ರಂಥಗಳನ್ನು ಯಾರೂ ಬರೆಯಲಿಲ್ಲವೆಂದರೂ ಆಗಬಹುದು. ಆದರೆ ಹದಿನೈದನೆಯ ಶತಮಾನವು ಸಿದ್ಧಾಂತ ಕಾಲವಾಗಿದ್ದರೂ ಕೆಲವು ಕವಿಗಳು ಪುರಾಣ ಚರಿತ್ರೆಗಳನ್ನು ಬರೆದರು. ಅವರಲ್ಲಿ ಚಾಮರಸನು ಅಗ್ರಗಣ್ಯನು, ಉದ್ದಾಮ ಕವಿಯು. ಈತನ ಪ್ರಭುಲಿಂಗಲೀಲೆ

ಯನ್ನು ಓದಿಸಿ ಕೇಳಿ, ಪ್ರೌಢದೇವರಾಯನು ಈತನಿಗೆ ತಕ್ಕ ಮರ್ಯಾದೆ ಮಾಡಿದನು. ಈತನಿಗೆ ವೀರಶೈವಾಚಾರ್ಯ ಸಾರೋದ್ಧಾರ, ಅನ್ಯ ಮತಕೋಲಾಹಳ ಎಂಬ ಬಿರುದುಗಳಿದ್ದವು. ಪ್ರಭುಲಿಂಗಲೀಲೆಯು ಉತ್ಕೃಷ್ಟ ಕಾವ್ಯವಾಗಿರುವುದರಿಂದ ತೆಲುಗಿನಲ್ಲಿಯೂ ಅರವಿನಲ್ಲಿಯೂ ಪದ್ಯ ರೂಪವಾಗಿ ಪರಿವರ್ತಿತವಾಗಿದೆ. ಭೀಮಕವಿಯ (ಸು. ೧೩೬೯) ಬಸವ ಪುರಾಣ, ತಿಮ್ಮರಸನ (ಸು. ೧೪೫೦) ಸೌಂದರ ಪುರಾಣ, ಮಲ್ಲಿಕಾರ್ಜುನನ (ಸು. ೧೪೪೫) ಶ್ವೇತನ ಸಾಂಗತ್ಯ, ಚತುರ್ಮುಖ ಬೊಮ್ಮರಸನ (ಸು. ೧೫೦೦) ರೇವಣಸಿದ್ಧೇಶ್ವರ ಪುರಾಣ, ಸಿಂಗಿರಾಜನ (ಸು. ೧೫೦೦) ಮಲಬಸವ ಚಾರಿತ್ರ, ಮುಂತಾದವು ೧೫ನೆಯ ಶತಮಾನದ ಇತರ ಪುರಾಣ ಗ್ರಂಥಗಳು. ಮುಂದೆ ೧೬ನೆಯ ಶತಮಾನದಲ್ಲಿ ಗುಬ್ಬಿಯ ಮಲ್ಲಣಾ ರ್ಯನ ಭಾವಚಿಂತಾರತ್ನ, ವೀರಶೈವಾಮೃತಪುರಾಣ, ಚೇರಮಾಂಕನ ಚೇರಮಕಾವ್ಯ, ವೀರಭದ್ರರಾಜನ ವೀರಭದ್ರವಿಜಯ, ಬೊಂಬೆಯ ಲಕ್ಕನ ಹರಿಶ್ಚಂದ್ರ ಸಾಂಗತ್ಯ, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ, ಕಿಕ್ಕೇರಿಯಾರಾಧ್ಯನ ಭೈರವೇಶ್ವರ ಕಾವ್ಯ ಮುಂತಾದವುಗಳು ಪುರಾಣ ಕಾವ್ಯಗಳು.

ಈಗಾಗಲೇ ಚಂಪೂಕಾವ್ಯಗಳ ಕಾಲವು ನಿಂತು ಹೋಗಿತ್ತು. ಸಂಸ್ಕೃತ ಕಾವ್ಯಗಳ ಪ್ರಭಾವವು ಅಳಿದಿತ್ತು. ಆಂಡಯ್ಯನ ಅಚ್ಚಗನ್ನಡದ ಚಳವಳಿಯೂ ಈ ಮೊದಲೇ ಬಂದು ಹೋಗಿತ್ತು. ವೀರಶೈವ ಕ್ರಾಂತಿಯ ಮೂಲಕ ಧರ್ಮವು ಸಾರ್ವಜನಿಕವಾದಂತೆ ಸಾಹಿತ್ಯವೂ ಸಾರ್ವಜನಿಕ ವಾಯಿತು. ಹರಿಹರನ ರಗಳೆಗಳು ಕನ್ನಡದ ಜೀವಾಳವಾದ ಷಟ್ಪ ದಿಯ ಹೊಸ ಹಾದಿಯನ್ನು ಹಾಕಿಕೊಟ್ಟಿದ್ದವು. ಆದುದರಿಂದ ಚಂಪೂ ಕಾವ್ಯ ಶತಕಗಳು ಉಳಿದ ಸಾಹಿತ್ಯದ ಮಾನದಿಂದ ಬಹಳ ಕಡಿಮೆಯಾಗಿ ರಚಿತವಾದುವು. ಇದಕ್ಕೆ ಕಾರಣವೆಂದರೆ ಷಟ್ಪದಿಗಳ ಸುಲಭತೆ ಮತ್ತು ಅವುಗಳ ಮೇಲಣ ಜನರ ಪ್ರೀತಿ. ಆರಂಭದ ಚಂಪೂ ಕಾವ್ಯಗಳು ಕುಂದುತ್ತ, ನೈತಿಕ ಮತ್ತು ಧಾರ್ಮಿಕ ಶತಕ ಗಳ ರೂಪಿನಲ್ಲಿ ನಿಂತುವು. ಕೆಳಗಿನ ಕವಿಗಳ ಗ್ರಂಥಗಳನ್ನು ನೋಡಿ ದರೆ ಇದರ ಸತ್ಯವು ಹೊಳೆಯುವುದು.

ಪುಗ್ಗೆಯ ಮಾಯಿದೇವನ ಶಿವಾಧವ ಶತಕ, ಶಿವಾವಲ್ಲಭಶತಕ ಐಪುರೀಶ್ವರ ಶತಕ, ಚಂದ್ರಕವಿಯ ವಿರೂಪಾಕ್ಷ ಸ್ಥಾನ, ಗುರುಮೂರ್ತಿ

ಶಂಕರ ಶತಕ, ಗುಮ್ಮಟಾರ್ಯನ ಅರ್ಧೇಂದುಮೌಳಿ ಶತಕ, ವೀರ ಭದ್ರರಾಜನ ವೀರಭದ್ರ ವಿಜಯ (ಚಂಪೂ), ಪಾರ್ವತೀ ವಲ್ಲಭ ಶತಕ, ಶ್ರೀಕಂಠ ಸೋಮೇಶ್ವರ ಶತಕ ಮುಂತಾದವುಗಳು.

ವಿಶೇಷ ವಿಷಯಗಳಲ್ಲಿ ನಿಘಂಟು, ಲಕ್ಷಣ ಗ್ರಂಥಗಳು ಬರುತ್ತವೆ. ಚೆನ್ನವೀರನು (ಸು. ೧೫೦೦) ಸಾರಸ್ವತ ವ್ಯಾಕರಣಕ್ಕೆ "ಶಬ್ದಮಣಿ" ಎಂಬ ಹೆಸರಿನ ಕನ್ನಡ ಟೀಕೆಯನ್ನು ಬರೆದಿದ್ದಾನೆ. ನಿಘಂಟುಗಳು ಮುಖ್ಯವಾಗಿ ಪದ್ಯರೂಪವಾಗಿವೆ. ಚತುರಾಸ್ಯ ಬೊಮ್ಮರಸನು (ಸು. ೧೪೫೦) ಬರೆದ ಚತುರಾಸ್ಯ ನಿಘಂಟು ಕಂದರೂಪವಾಗಿದೆ. ದೇಶಿ, ತತ್ಸಮ, ತದ್ಭವ ಶಬ್ದಗಳು ಇದರಲ್ಲಿ ಬಂದಿರುವುದರಿಂದ ಭಾಷಾ ಶಾಸ್ತ್ರದ ಅಭ್ಯಾಸಕ್ಕೆ ಇದು ಸಹಾಯವಾಗುವಂತಿದೆ. ಚೆನ್ನವೀರನು (ಸು. ೧೫೦೦) ವ್ಯಾಕರಣಕ್ಕೆ ಟೀಕೆ ಬರೆದದ್ದನ್ನು ಮೇಲೆ ಸೂಚಿಸಿದೆ. ಲಿಂಗಮಂತ್ರಿಯು (ಕ್ರಿ. ಶ. ಸು. ೧೫೩೦) ಕಬ್ಬಿಗರ ಕೈಪಿಡಿ ಎಂಬ ಕೋಶವನ್ನು ಬರೆದಿದ್ದಾನೆ. ಇದರಲ್ಲಿ ಹಳಗನ್ನಡ ಶಬ್ದಗಳ ಅರ್ಥಗಳು ಹೇರಳವಾಗಿರುವದರಿಂದ ಹಳಗನ್ನಡ ಕಾವ್ಯಗಳ ಅಭ್ಯಾಸಕ್ಕೆ ಸಹಾಯವಾಗುವುದು.

ಇಲ್ಲಿಯ ವರೆಗೆ ಹೇಳಿದ ವಿಷಯಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಅವುಗಳನ್ನು ಚರ್ಚಿಸಿದ ಕವಿಗಳೆಲ್ಲರೂ ದೊಡ್ಡ ಪಂಡಿತರಾಗಿದ್ದರೆಂದು ತಿಳಿದುಬರುತ್ತದೆ. ಕೆಲಕೆಲವರ ವಿಷಯವಾಗಿ ಹಾಗೆ ಹೇಳಿಯೂ ಇದೆ. ಚಂದ್ರಕವಿಯು ಅಷ್ಟು ಭಾಷಾಪ್ರವೀಣನೆಂದು ಹೊಗಳಿಸಿಕೊಂಡಿದ್ದಾನೆ. ಭಟ್ಟ ಭಾಸ್ಕರನ ಯಜುರ್ವೇದ ಭಾಷ್ಯಕ್ಕೆ ಕನ್ನಡ ಟೀಕೆ ಬರೆದ ಗುರುನಂಜನು ಸಾಮಾನ್ಯನಲ್ಲ. ಗುಬ್ಬಿಯ ಮಲ್ಲಣಾರ್ಯನು ವೀರಶೈವ ಮಹಾ ಪುರಾಣವನ್ನು ಬರೆದು, ಪಂಡಿತನೆಂದು ಹೊಗಳಿಕೊಂಡನು. ಇದರಂತೆ ಪರವಾದಿ ಗಜಾಂಕುಶ ತಾರಾವಳಿಯನ್ನು ಬರೆದ ನೀಲಕಂಠಾರಾಧ್ಯನು ಅಸಾಮಾನ್ಯ ಪಂಡಿತನಾಗಿದ್ದನೆಂದು ಆತನ ಗ್ರಂಥದಿಂದಲೇ ತಿಳಿದುಬರುವುದು.

---

# ವಿಜಯಪುರ ನಾಡಿನ ಸಾಹಿತಿಗಳು.

(ಬರೆದವ— ಶಿವಮೂರ್ತಿ)

ವಿಜಯಪುರ ನಾಡಿನಲ್ಲಿ ಹಿಂದಕ್ಕೆ ಕೆಲವು ಸಣ್ಣದೊಡ್ಡ ವೀರಶೈವ ಸಾಹಿತಿಗಳಾಗಿ ಹೋದರು, ಈಗ್ಯೂ ಇದ್ದಾರೆ. ಇನ್ನೂ ಮುಂದೆಯೂ ಆಗಬಹುದು. ಹಿಂದಿನ ಸಾಹಿತಿಗಳಲ್ಲಿ ಶ್ರೀ ಬಸವೇಶ್ವರ, ಮಗ್ಗೆಯ ಮಾಯಿದೇವ ಮತ್ತು ಅದ್ರೀಶಕವಿ ಇವರು ಮುಖ್ಯರಾಗಿದ್ದಾರೆ. ಇದಲ್ಲದೆ ವಚನಕಾರನಾದ ಮಡಿವಾಳ ಮಾಚಿದೇವನು ಹಿಪ್ಪರಗೆಯವನು. ಮುಗ್ಧ ಸಂಗಾರ್ಯನೆಂಬ ಇನ್ನೊಬ್ಬ ವಚನಕಾರನು ಉಪ್ಪಲದಿನ್ನಿಯವನು. ಹಾವಿನಾಳ ಕಲ್ಲಯ್ಯನೆಂಬ ಶಿವಶರಣನು ವಿಜಯಪುರ ನಾಡಿನವನೇ. ಈ ಮೇರೆಗೆ ವಿಜಯಪುರ ನಾಡು ಕೆಲವು ಉತ್ತಮ ಸಾಹಿತಿಗಳಿಗೆ ಜನ್ಮಸ್ಥಳವಾಗಿದೆ. ಅವರಲ್ಲಿ ಬಸವೇಶ್ವರ, ಮಗ್ಗೆಯ ಮಾಯಿದೇವ, ಮತ್ತು ಅದ್ರೀಶ ಇವರ ಬಗ್ಗೆ ಇದರಡಿಯಲ್ಲಿ ಸ್ವಲ್ಪ ವಿವೇಚಿಸುತ್ತೇನೆ.

ಬಸವೇಶ್ವರಃ— ಈತನು ಕನ್ನಡ ಸಾಹಿತ್ಯದ ಸ್ವಾತಂತ್ರ್ಯಯುಗದ ಆದಿ ಪುರುಷನು. ಈತನೇ ಆ ಯುಗದ ನಿರ್ಮಾಪಕನು. ಹಿಂದೆ ೯-೧೨ ಶತಮಾನಗಳ ವರೆಗೆ ಆಗಿ ಹೋದ ಕವಿಗಳು ಪರತಂತ್ರರು. ಅವರು ಸಂಸ್ಕೃತ ಮಹಾ ಕಾವ್ಯಗಳನ್ನನುಸರಿಸಿ ಚಂಪೂಕಾವ್ಯಗಳನ್ನು ಬರೆದರು. ಸಂಸ್ಕೃತ ಕಾವ್ಯಗಳಂತೆ ವ್ಯಾಕರಣ, ಅಲಂಕಾರ, ಕವಿಸಮಯ, ಛಂದಸ್ಸು ಮುಂತಾದವುಗಳಿಗೆ ಹೆಚ್ಚು ಮಹತ್ವ ಕೊಟ್ಟರು. ವೃತ್ತಗಳೂ ಶಬ್ದಸಂಗ್ರಹವೂ ಸಂಸ್ಕೃತ ಮಯವಾಗಿದ್ದವು. ರಾಜರ ಆಸ್ಥಾನ ಪಂಡಿತರಿಗೆ ಮಾತ್ರ ಆ ಕಾವ್ಯಗಳು ಗ್ರಾಹ್ಯವಾಗಿದ್ದವು. ಆದಾಗ್ಯೂ ಆ ಕವಿಗಳಲ್ಲಿ ಪ್ರತಿಭೆ, ಸ್ವಯಂಸ್ಫೂರ್ತಿ, ವ್ಯಕ್ತಿತ್ವಗಳಿರಲಿಲ್ಲವೆಂತಲ್ಲ. ಆದರೆ ಬಸವೇಶ್ವರನು ಈ ಯಾವ ತರಹದ ಕಟ್ಟು ಪಾಡುಗಳಿಗೂ ಒಳಗಾಗಲಿಲ್ಲ. ಆತನು ಸ್ವತಂತ್ರಧೀರನು. ತನ್ನ ಸುತ್ತಲಿನ ಸಾಮಾಜಿಕ ಹಾಗು ಧಾರ್ಮಿಕ ವಾತಾವರಣವನ್ನು ಕಣ್ಣಾರೆ ಕಂಡು ಅಂತಃಕರಣವು ಸ್ಫುರಣಗೊಂಡು ತನ್ನಂತರಾಳದಿಂದ ಅತ್ಯುಚ್ಚತಮವಾದ ವಚನ ರತ್ನಗಳನ್ನು ಸಾಮಾನ್ಯ ಜನರಾಡುವ ತಿಳಿಗನ್ನಡದಲ್ಲಿ ಹೊರಹೊಮ್ಮಿಸಿದ್ದಾನೆ.

ಈ ವಚನಗಳು ಸಂಸ್ಕೃತ ಉಪನಿಷತ್ತುಗಳನ್ನು ಹೋಲುವದರಿಂದ ಅವುಗಳಿಗೆ ಕನ್ನಡ ಉಪನಿಷತ್ತುಗಳೆಂದು ಕರೆದಿದ್ದಾರೆ. ಆದರೆ ಬಸವೇಶ್ವರನು ಆಗವೋಪನಿಷತ್ತುಗಳ ಸಾರವನ್ನು ಕನ್ನಡದಲ್ಲಿ ಪರಿವರ್ತಿಸಿ ಹೇಳಬೇಕೆಂದು ಹೊರಟವನಲ್ಲವೆಂಬದನ್ನು ಎಲ್ಲರೂ ಲಕ್ಷಿಸಬೇಕು. ಆತನ ನುಡಿಗಳು ಸ್ವತಂತ್ರವಾದವುಗಳು. ಉಪನಿಷತ್ತುಗಳಿಗೆ ಹೋಲುತ್ತಿರಬಹುದು. ಆದರೆ ಉಪನಿಷತ್ತುಗಳಿಂದ ಆಯ್ದುಕೊಂಡಂಥವುಗಳಲ್ಲ. ಎಷ್ಟೋ ವಚನಗಳು ಬಾಯಬಲ್ ಕುರಾನದ ಮಾತುಗಳನ್ನು ಹೋಲುತ್ತವೆ. ಆದಾಗ್ಯೂ ಅವು ಬಾಯಿಬಲ್ ಕುರಾನ ನೋಡಿ ಬರೆದಂಥವುಗಳಲ್ಲ. ಅಂದ ಬಳಿಕ ವಚನಗಳು ಸ್ವತಂತ್ರವಾದ ಸ್ವಯಂಸ್ಫೂರ್ತಿಯ ನುಡಿಗಳು ಎಷ್ಟೋ ವಚನಗಳು ಉಪನಿಷತ್ತುಗಳನ್ನು ಮೀರಿ ಕೂಡ ಹೋಗಿರುತ್ತವೆ.

ಬಸವೇಶನ ವಚನಗಳು ಸಮಾಜದಲ್ಲಿ ನೀತಿ, ಧರ್ಮ, ಸದಾಚಾರ ಸದ್ಭಕ್ತಿಗಳನ್ನು ನೆಲೆಗೊಳಿಸಿದವು. ರೂಢಿಗತವಾದ ಮೂಢ ಭಾವನೆ ಡಂಭಾಚಾರ, ಜಾತಿಭೇದ, ಅಸ್ಪೃಶ್ಯತೆ, ಯಜ್ಞಯಾಗ ಮೊದಲಾದ ಪದ್ಧತಿಗಳನ್ನು ಬಹು ಮಟ್ಟಿಗೆ ಕಿತ್ತೊಗೆದವು. ಸರಳಗನ್ನಡ ಸಾಹಿತ್ಯದಲ್ಲಿ ಒಳ್ಳೇ ಕ್ರಾಂತಿಯನ್ನುಂಟುಮಾಡಿದವು. ಆತ್ಮನ ಅಂತರಾಳದಿಂದ ಹೊರಟ ದಿವ್ಯ ನುಡಿಗಳೇ ಅತ್ಯಂತ ಪರಿಶುದ್ಧವಾದವುಗಳು. ಸತ್ಯ ಸೌಂದರ್ಯ ಮಾಧುರ್ಯ ಸೌಕರ್ಯಗಳಿಂದ ಕೂಡಿದವುಗಳೇ ಹೊರತು ಬರೇ ಬಾಹ್ಯ ವ್ಯಾಕರಣ, ಅಲಂಕಾರ, ಛಂದಸ್ಸುಗಳ ಕಟ್ಟು ಪಾಡಿಗೆ ಒಳಗಾದ ಶುಷ್ಕ ನುಡಿಗಳು ನಿರರ್ಥಕವಾದವುಗಳೆಂಬ ಮಾತನ್ನು ಸಾಹಿತ್ಯಕ್ಕೆ ಕಲಿಸಿಕೊಟ್ಟವು.

ಇಂಥ ಬಸವಾದಿ ಶಿವಶರಣರ ವಚನಗಳ ಸೊದೆಯನ್ನುಂಡು ತೇಗಿ ಹರಿಹರನು ಸರಳ ರಗಳೆಗಳನ್ನು ಪ್ರಚಾರದಲ್ಲಿ ತಂದು ಶರಣರ ಪವಿತ್ರ ಜೀವನದ ರಹಸ್ಯವನ್ನು ಜನತೆಗೆ ತಿಳಿಸಿಕೊಟ್ಟನು. ಆ ವಚನಗಳ ಸ್ಫೂರ್ತಿಯಿಂದಲೇ ರಾಘವಾಂಕನು ಸರಳಗನ್ನಡ ಛಂದಸ್ಸುಗಳಾದ ಷಟ್ಪದಿಗಳ ಪುರಸ್ಕರ್ತನಾದನು. ರಾಘವಾಂಕನ ಷಟ್ಪದಿ ಕಾವ್ಯಗಳಲ್ಲಿಯೂ ಹರಿಹರನ ರಗಳೆಗಳಲ್ಲಿಯೂ ಬಸವಾದಿ ಶರಣರ ವಚನಗಳ ಪ್ರತಿಬಿಂಬವು ಹೆಜ್ಜೆ ಹೆಜ್ಜೆಗೆ ಒಡಮೂಡಿರುವದೆಂಬದು ವಾಚಕರಿಗೆ ಸಹಜವಾಗಿ ಹೊಳೆಯುವದು. ರಾಘವಾಂಕನ ಷಟ್ಪದಿ ಶೈಲಿಯನ್ನಷ್ಟೇ ಅಲ್ಲ, ಅವನ ಭಾವ ಸ್ಫೂರ್ತಿಗಳನ್ನು ಸಹ ಹಿಂದಿನಿಂದ ಬಂದ ಬ್ರಾಹ್ಮಣ

ವೀರಶೈವ ಷಟ್ಪದಿಕಾರರು ಅನುಸರಿಸಿದರೆಂದು ನಿರ್ವಿವಾದವಾಗಿ ಹೇಳಬಹುದು. ವಚನಗಳ ಪ್ರಭಾವದಿಂದಲೇ ನಿಜಗುಣ ಶಿವಯೋಗಿಯ ತತ್ವಪದಗಳೂ ಸರ್ವಜ್ಞನ ಪದಗಳೂ, ದಾಸಕೂಟದವರ ಹಾಡುಗಳೂ ಬೆಳಕಿಗೆ ಬಂದವು. ವಿಜಯನಗರದ ಪ್ರೌಢರಾಯನ ಆಳಿಕೆಯಲ್ಲಿ ೧೦೧ ಜನ ವಿರಕ್ತರು ಕೂಡಿಕೊಂಡು ಉದಾತ್ತವಾದ ಮತ ತತ್ವಗಳನ್ನು ವಿಚಾರಿಸಿ ಷಟ್ ಸ್ಥಲ ಗ್ರಂಥಗಳನ್ನು ಪ್ರಕಟಿಸಲಿಕ್ಕೆ ಶಿವಶರಣರ ವಚನಗಳೇ ಆಧಾರಗಳು.

ಇನತ್ತು ಎಲ್ಲಿಯಾದರೂ ವೇದಾಂತ ವಿಷಯಗಳ ಚರ್ಚೆಯು ನಡೆಯುತ್ತಿದ್ದರೆ ಅವು ಬಸವೇಶನ ಶಿವಾನುಭವ ಮಂಟಪದ ಅನುಕರಣವೆಂದೇ ಹೇಳಬಹುದು. ಎಲ್ಲಿಯಾದರೂ ಭಜನಾ ಮಂಡಳಗಳೂ ಪ್ರವಚನಗಳೂ ಸಾಗುತ್ತಿದ್ದರೆ ಅವೆಲ್ಲ ಬಸವನ ಭಕ್ತಿ ಪಂಥದ ಕುರುಹುಗಳೆಂದೇ ತಿಳಿಯಬೇಕು. ಇಂಥ ಬಸವೇಶನು ವಿಜಯಪುರ ನಾಡಿನ ಬಾಗೇವಾಡಿಯಲ್ಲಿ ಹುಟ್ಟಿದನು. ಸಂಗಮದಲ್ಲಿ ಬಯಲಾದನು. ಇದು ವಿಜಯಪುರ ನಾಡಿಗೆ ಬಹು ಹೆಮ್ಮೆಯ ಮಾತು.

**ಮಗ್ಗೆಯ ಮಾಯಿದೇವರು:—** ಇವರು ವಿಜಯಪುರ ಜಿಲ್ಲೆಯ ಐಹೊಳ್ಳಿ ಗ್ರಾಮದವರು. ವಿಜಯನಗರದ ಪ್ರೌಢರಾಯನ ಆಳಿಕೆಯಲ್ಲಿ ಅಲ್ಲಿಗೆ ಹೋಗಿ ಪ್ರಸಿದ್ಧಿಗೆ ಬಂದರು. ಅಲ್ಲಿ ಒಳ್ಳೆ ಹೆಸರುವಾಸಿಗಳಾದ ೧೦೧ ವಿರಕ್ತರಲ್ಲಿ ಇವರೊಬ್ಬರು ಪ್ರೌಢರಾಯನ ಆಳಿಕೆಯಲ್ಲಿ ವೀರಶೈವ ಸಾಹಿತ್ಯವು ಘನತೆಯ ಪರಾಕಾಷ್ಠತೆಯನ್ನು ಪಡೆದಿತ್ತು. ಆಗ ಲಕ್ಕಣ್ಣ ದಂಡೇಶ, ಜಕ್ಕಣಾರ್ಯರೆಂಬ ಮಂತ್ರಿಗಳೂ, ಕುಮಾರ ಬಂಕನಾಥ, ಮಹಾಲಿಂಗದೇವ, ಕಲ್ಮಠದ ಪ್ರಭುದೇವ, ಚಾಮರಸ, ಕರಸ್ಥಲದ ನಾಗಿದೇವ, ಗುರುಬಸವ ಮೊದಲಾದ ಕವಿಗಳೂ ಷಟ್‌ಸ್ಥಲದಲ್ಲಿ ಬಲ್ಲಿದರಾಗಿ ಆ ಬಗ್ಗೆ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಮಗ್ಗೆಯ ಮಾಯಿದೇವನು ಈ ವರ್ಗಕ್ಕೆ ಸೇರಿದವನು. ಈತನು ಅನುಭವಸೂತ್ರ, ಪ್ರಭುಗೀತೆ, ಏಕೋತ್ತರಸ್ಥಲ ಷಟ್ಪದಿ, ಷಟ್‌ಸ್ಥಲಗದ್ಯ, ಶತಕತ್ರಯ ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ. ಶತಕತ್ರಯದಲ್ಲಿ ಶಿವಾಧವಾ, ಶಿವಾವಲ್ಲಭಾ, ಮತ್ತು ಮಹದೈಪುರೀಶ್ವರಾ ಎಂಬ ಮುದ್ರಿಕೆಗಳನ್ನಿಟ್ಟುಕೊಂಡು ಭಕ್ತಿ, ಜ್ಞಾನ, ವೈರಾಗ್ಯಗಳನ್ನು ವಿವರಿಸಿದ್ದಾನೆ. ವೀರಶೈವ

ಮತತತ್ವಗಳನ್ನು ಸಂಕ್ಷೇಪವಾಗಿ ತಿಳಿದುಕೊಳ್ಳಬೇಕೆಂದು ಅಪೇಕ್ಷಿಸುವ ವರು ಮಗ್ಗೆಯ ಮಾಯಿದೇವರ ಶತಕತ್ರಯವನ್ನು ಅವಶ್ಯವಾಗಿ ಓದ ಬೇಕು.

**ಅದ್ರೀಶ:—** ಈ ಕವಿಯು ಬೀಳಗಿ ಹತ್ತರಿರುವ ಕೃಷ್ಣಾತೀರದ ಕೋಲಾರ ಗ್ರಾಮದವನು. ಕೋಲಾರ ದೇಸಾಯರ ಮನೆತನದವನು. ವಿಜಯನಗರದ ಪ್ರೌಢರಾಯನ ಆಸ್ಥಾನದಲ್ಲಿ ಒಳ್ಳೆ ಬೆಳಕಿಗೆ ಬಂದನು. ಈತನು "ಪ್ರೌಢರಾಯನ ಕಾವ್ಯ" ಎಂಬ ಒಳ್ಳೆ ಹೆಸರಾದ ಷಟ್ಪದಿ ಕಾವ್ಯವನ್ನು ರಚಿಸಿದ್ದಾನೆ. ಅದರಲ್ಲಿ ಪ್ರೌಢರಾಯನಿಗೆ ಶಿವಶರಣರ ಚರಿತ್ರೆಯನ್ನು ಹೇಳಿದ್ದರಿಂದ ಕಾವ್ಯಕ್ಕೆ ಆ ಹೆಸರು ಕೊಡಲ್ಪಟ್ಟಿದೆ. ಅದರಲ್ಲಿ ಶಿವಶರಣರ ಚರಿತ್ರಗಳು ಬಹು ಸಂಕ್ಷಿಪ್ತವಾಗಿ ಮತ್ತು ಸುಂದರವಾಗಿ ಚಿತ್ರಿಸಲ್ಪಟ್ಟಿವೆ. ಚೆನ್ನಬಸವ ಪುರಾಣದಂತೆ ಪ್ರೌಢರಾಯನ ಕಾವ್ಯವು ಬಹು ಸೊಗಸಾದ ಕಾವ್ಯ. ಶಿವಶರಣ ಚರಿತ್ರೆಗಳನ್ನರಿತು ಆನಂದಬಡಬೇಕೆಂದು ಇಚ್ಛಿಸುವವರು ಅದ್ರೀಶನ ಪೌಢರಾಯನ ಕಾವ್ಯವನ್ನು ಅವಶ್ಯವಾಗಿ ಓದಬೇಕು. ಅದ್ರೀಶ ಕವಿಯ ಹೆಸರನ್ನು ಅಪಭ್ರಂಶಮಾಡಿ ಅದೃಶ್ಯ ಎಂಬ ಹೆಸರಿನಿಂದಲೇ ಪ್ರಕಟಮಾಡಿದ್ದಾರೆ. ಸರ್ಪಭೂಷಣನಿಗೆ ಸಪ್ಪಣ್ಣೆಪ್ಪನೆಂದ ಹಾಗಾಗಿದೆ.

ಹಿಂದಿನ ಸಾಹಿತಿಗಳ ಮಾತು ಮುಗಿಯಿತು. ಇನ್ನು ಇತ್ತೀಚಿನ ವಿಜಯಪುರ ನಾಡಿನ ಸಾಹಿತಿಗಳನ್ನು ಕುರಿತು ಸಂಕ್ಷೇಪವಾಗಿ ವಿವೇಚಿಸುವಾ. ಕೃಷಿಕರ್ಮ ಪ್ರದೀಪಿಕೆಯನ್ನೂ ಕೈವಲ್ಯವನ್ನೂ ಬರೆದ ಘನಮಠಾರ್ಯರು ವಿಶೇಷತಃ ವಿಜಯಪುರ ಜಿಲ್ಲೆಯಲ್ಲಿಯೇ ಸಂಚರಿಸಿ ಒಳ್ಳೆ ಸೊಗಸಾದ ಪದಗಳನ್ನು ರಚಿಸಿದ್ದಾರೆ. ಪುರಾಣ ಹೇಳುವದರಲ್ಲಿ ಒಳ್ಳೆ ನಿಷ್ಣಾತರಾಗಿದ್ದ ಪರರ ಭಿಡೆ ಭಾರಗಳಿಗೆ ಒಳಗಾಗದ ವೈರಾಗ್ಯದ ಮಲ್ಲಣಾರ್ಯರು ಬಾಗಲಕೋಟೆಯವರು. ನಿಜಗುಣಾರ್ಯರ ಆರು ಶಾಸ್ತ್ರಗಳನ್ನು ಬಹು ಚೆನ್ನಾಗಿ ಅಭ್ಯಾಸ ಮಾಡಿ ಅವುಗಳ ತತ್ವಗಳನ್ನು ಒಳ್ಳೆ ವಿವರವಾಗಿ ಶ್ರೋತೃಗಳ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಹೇಳುವ ಭಾಗ್ಯವು ಹಾನಗಲ್ಲ ಕುಮಾರ ಸ್ವಾಮಿಗಳದು. ಅವರು ವಿಜಾಪುರ ಜಿಲ್ಲೆಯ ಶ್ರೀ ಶಿವಯೋಗ ಮಂದಿರದ ಸ್ಥಾಪಕರು. ಬಸವಾದಿ ಪ್ರಮಥರ ವಚನಗಳನ್ನು ಬಹು ಸೊಗಸಾಗಿ, ಮನೋರಂಜಕವಾಗಿ

ಹೇಳುವಂಥವರಾರಾದರೂ ಕರ್ನಾಟಕದಲ್ಲಿದ್ದರೆ ಬಾಗಲಕೋಟೆಯ ಕೈ|| ವಾ|| ಕಿಣಗಿ ಬಸವಲಿಂಗಪ್ಪನವರೊಬ್ಬರೇ. ಗ್ರಂಥಗಳನ್ನು ಬರೆದವರಷ್ಟೇ ಸಾಹಿತಿಗಳಲ್ಲ. ತಾವು ಪಡೆಕೊಂಡ ಜ್ಞಾನವನ್ನು ಜನತೆಗೆ ನೀಡುವವರೂ ಸಾಹಿತಿಗಳೇ.

ಸಂಸ್ಕೃತ ಕನ್ನಡ ಭಾಷಾವಿಶಾರದರಾದ ವೇದಾಗಮೋಪನಿಷತ್ತು ಶಾಸ್ತ್ರ ಪುರಾಣಗಳಲ್ಲಿ ಪಾರಂಗತರಾದ ವಿದ್ಯಾವಾಚಸ್ಪತಿ ಶ್ರೀ ಶಂಭುಲಿಂಗ ಮಹಾಸ್ವಾಮಿಗಳು ವಿಜಯಪುರದವರು. ಅವರು ಧ್ವನಿವಾಹಕ ಯಂತ್ರದ ಸಹಾಯವಿಲ್ಲದೆ ೮-೧೦ ಸಾವಿರ ಜನರಿಗೆ ಮನೋರಂಜಕವಾಗಿ ಒಳ್ಳೆ ರಸಿಕತನದಿಂದ ಪುರಾಣ ಹೇಳಬಲ್ಲ ಧುರೀಣರು. ನಿರರ್ಗಳವಾಗಿ ಸಂಸ್ಕೃತ ಕನ್ನಡ ಭಾಷೆಗಳಲ್ಲಿ ವ್ಯಾಖ್ಯಾನ ಕೊಡಲು ಸಮರ್ಥರಾದವರು.

೧೨ನೇ ಶತಮಾನದ ಬಸವಾದಿ ಶರಣರ ಕಲ್ಯಾಣದ ಸಾಹಿತ್ಯ ವೈಭವವನ್ನೂ ೧೫ನೇ ಶತಮಾನದ ಮಂತ್ರಿವಿರಕ್ತರ ವಿಜಯನಗರ ಸಾಹಿತ್ಯಭಾಂಡಾರವನ್ನೂ ವಚನ ವಾಙ್ಮಯ ಪ್ರಸಾರ ರೂಪದಿಂದ ಈ ೨೦ನೆಯ ಶತಮಾನದಲ್ಲಿ ವಿಜಾಪುರದಲ್ಲಿ ಬೆಳಕಿಗೆ ತಂದ ಶ್ರೇಯಸ್ಸು ರಾ|| ಬ|| ಪಿ. ಜಿ. ಹಳಕಟ್ಟಿಯವರದು. ಅವರು ಈ ಘನತರವಾದ ವಚನ ಸಂಗ್ರಹ ಕಾರ್ಯವನ್ನು ಕೈಕೊಳ್ಳದಿದ್ದರೆ ವೀರಶೈವ ಮತದ ಮಹತ್ವವೂ ಶಿವಶರಣರ ಪ್ರಭಾವವೂ ಕರ್ನಾಟಕದಲ್ಲಿ ನಾಮಶೇಷವಾಗಿ ಹೋಗುವ ಸಂಭವವಿತ್ತು. ಅವರು ಅಪಾರವಾದ ವಚನಸಾಹಿತ್ಯದ ಧ್ವಜವನ್ನೆತ್ತಿ ಹಿಡಿದಿದ್ದಾರೆ. ವಚನಸಾಹಿತ್ಯ ಮಂದಿರಕ್ಕೆ ಕಳಸವನ್ನಿಟ್ಟಿದ್ದಾರೆ. ಅವರು ಶೋಧಿಸಿ ಬರೆದಿಟ್ಟ ೩ ವಚನಶಾಸ್ತ್ರಗ್ರಂಥಗಳೂ ಶೂನ್ಯಸಂಪಾದನೆಯೂ ಚಿರಸ್ಮರಣೀಯವಾಗಿವೆ.

ಬಸವೇಶ್ವರನ ಜೀವನ ಚರಿತ್ರೆಯನ್ನು ಐತಿಹಾಸಿಕ ದೃಷ್ಟಿಯಿಂದ ಬರೆದು, ಶಿವಶರಣರ ಉದಾತ್ತ ಮತ್ತು ಉದಾರ ತತ್ವಗಳನ್ನು ಜನತೆಗೆ ಸುಲಭವಾಗಿ ವ್ಯಾಖ್ಯಾನರೂಪದಿಂದ ತಿಳಿಸಿ ಶರಣಸಂದೇಶದಲ್ಲಿ ಲೇಖನರೂಪದಿಂದ ಪ್ರಕಟಿಸಿ ಬಹುಜನರ ಪ್ರೇಮಾದರಗಳಿಗೆ ಪಾತ್ರರಾದವರು ಶ್ರೀ ಹರ್ಡೇಕರ ಮಂಜಪ್ಪನವರು. ಇವರು ವಿಜಯಪುರ ನಾಡಿನ ಆಲಮಟ್ಟಿ ಗ್ರಾಮದಲ್ಲಿ ನೆಲೆಸಿದ್ದಾರೆ.

ಈಗಿನ ಕವಿಗಳಲ್ಲಿ ಹೆಸರು ವಾಸಿಗಳಾದ ಗೆಳೆಯರ ಗುಂಪಿನ ಮಧುರ ಚನ್ನ, ಹಲಸಂಗಿ, ಸಿಂಪಿ ಲಿಂಗಣ್ಣ ಇವರಾದರೂ ವಿಜಯ ಪುರ ನಾಡಿನವರೇ ಆಗಿದ್ದಾರೆ. ಅವರ ಕವನಗಳು ಆಳವಾದ ವಿಚಾರ ಪರಿಪ್ಲುತವಾದವುಗಳೂ ಸುಲಭ ಸುಂದರ ಶೈಲಿಯಲ್ಲಿ ಬರೆದಂಥವೂ ಆಗಿ ವಾಚಕರ ಮನ್ನಣೆಗೆ ಪತ್ರವಾಗಿರುತ್ತವೆ. ಇದೇ ಮೇರೆಗೆ ಇನ್ನೂ ಅನೇಕ ವೀರಶೈವ ಕವಿಗಳೂ, ಗ್ರಂಥಕರ್ತರೂ, ವ್ಯಾಖ್ಯಾತರೂ ಮತ್ತು ಲೇಖಕರೂ ಕನ್ನಡ ಸಾಹಿತ್ಯಕ್ಕೆ ತಮ್ಮ ಅಳಲಿ ಸೇವೆಯನ್ನು ಸಲ್ಲಿಸು ತ್ತಲಿದ್ದಾರೆ. ವಿಜಯಪುರವು ಸಾಹಿತ್ಯ ಸೇವೆಯಲ್ಲಿ ಹಿಂದುಳಿದಿಲ್ಲ. ಒಳ್ಳೆ ಉದಾತ್ತ ಸೇವೆಮಾಡಿದ ಭಾಗ್ಯವು ಅದಕ್ಕುಂಟು.

ಪ್ರಸಂಗ ಬಂದರೆ ವೀರಶೈವ ಸಾಹಿತಿಗಳು ವಿಜಯಪುರವನ್ನು ಕಲ್ಯಾಣವನ್ನಾಗಿ ಮಾಡಬಹುದು. ಈಶ್ವರೇಚ್ಛೆಯಿದ್ದರೆ ವಿಜಯಪುರವು ವಿಜಯನಗರವೂ ಆಗಬಹುದು. ೧೨ ನೇ ಶತಮಾನದಲ್ಲಿ ಕಲ್ಯಾಣವು ವೀರಶೈವ ಸಾಹಿತ್ಯದ ಕೇಂದ್ರವಾಗಿತ್ತು. ೧೫ ನೇ ಶತಮಾನದಲ್ಲಿ ವಿಜ ಯನಗರಕ್ಕೆ ಆ ಭಾಗ್ಯವು ಪ್ರಾಪ್ತವಾಗಿತ್ತು. ಈ ೨೦ ನೇ ಶತಮಾನದಲ್ಲಿ ಭಗವಂತನ ಇಚ್ಛೆಯಿದ್ದರೆ ವಿಜಯಪುರವು ವೀರಶೈವ ಸಾಹಿತ್ಯ ಕ್ಷೇತ್ರ ವೇಕಾಗಬಾರದು? ಈಗ ವೀರಶೈವ ಸಮಾಜದವರು ವಿಜಾಪುರದಲ್ಲಿ ಶಿವಾನುಭವ ಮಂಟಪದ ಕೇಂದ್ರ, ಧಾರ್ಮಿಕ ಗ್ರಂಥಗಳ ದೊಡ್ಡ ಸಂಗ್ರ ಹಾಲಯ, ವೀರಶೈವ ಸಾಹಿತ್ಯ ಪರೀಕ್ಷೆಯ ವರ್ಗಗಳು ಮುಂತಾವ ವುಗಳನ್ನು ಕ್ರಮಬದ್ಧವಾಗಿ ನಡೆಯಿಸಿಕೊಂಡು ಹೋದರೆ ಹತ್ತೆಂಟು ವರ್ಷಗಳಲ್ಲಿ ವಿಜಯಪುರವು ಸಾಹಿತ್ಯ ರತ್ನಗಳ ಕಣಿಯಾಗಲು ಯಾವ ಸಂದೇಹವೂ ಇಲ್ಲ. ಆದರೆ ಅವೆಲ್ಲವುಗಳನ್ನೆಲ್ಲ ಸರಿಯಾಗಿ ನಡೆಯಿಸಿ ಕೊಂಡು ಹೋಗುವಂಥ ಒಂದು ಯೋಗ್ಯ ಸಂಸ್ಥೆಯು ಬೇಕು. ವಿಜ ಯಪುರ ನಾಡಿನಲ್ಲಿ ಎಷ್ಟೋ ಜನ ಶ್ರೀಮಂತರಿರುವರು, ಉದಾರಿಗ ಳಿರುವರು, ಮತಾಭಿಮಾನಿಗಳಿರುವರು. ಅವರು ಇತ್ತಕಡೆ ಗಮನಿಸಿ ದರೆ ಕಾರ್ಯವು ಸುಲಭ ಸಾಧ್ಯವಾಗುವದೆಂದು ಬೇರೆ ಹೇಳಬೇಕಾ ಗಿಲ್ಲ.

---

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬] ಜನವರಿ. ೧೯೪೨. [ಸಂಚಿಕೆ ೪

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೬ | ಜನವರಿ ೧೯೪೨. | ಸಂಚಿಕೆ ೪ |
|---|---|---|

## ಕಂಚೀ ನಗರಂ.

ಲೇಖಕ— ಜ. ಪ. ಶ್ರೀ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು,
ಜಗದ್ಗುರು ಶ್ರೀ. ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ. ಮುಕ್ಕಾಂ ಕಂಚಿ.

"ನಗರೇಷು ಕಂಚೀ" ಎಂಬ ಸಂಸ್ಕೃತೋಕ್ತಿಯು, ಸತ್ಯದ ಒರೆಗಲ್ಲಿಗೆ ನಿಲ್ಲಬೇಕಾದರೆ ಸ್ವತಃ ಕಂಚಿಗೆ ಬಂದು ಕಣ್ತುಂಬ ನೋಡಿದಾಗ. ಕಂಚಿಯು ಆ ವೈಭವ, ಆ ವಿಸ್ತಾರ, ಆ ದಿವ್ಯ ದೇವಸ್ಥಾನ, ಆ ಭವ್ಯ ರಾಜಾಸ್ಥಾನ, ತುಂಬಿನಿಂತ ಆ ತಿಳಿನೀರ್ಗೊಳಗಳು, ಚುಂಬಿಸಿ ನಿಂತ ಆ ಪರ್ವತ ಶ್ರೇಣಿಗಳು ಇನ್ನೂ ಮುಂತಾದವುಗಳು "ನಗರೇಷು ಕಂಚೀ" ಎಂಬ ಸಕ್ಕದ ನುಡಿಯನ್ನು ಮತ್ತೆ ಮತ್ತೆ ಸ್ಮೃತಿಪಥಕ್ಕೆ ತರುತ್ತವೆ. "ಪುಷ್ಪೇಷು ಜಾಜೀ, ಪುರುಷೇಷು ವಿಷ್ಣುಃ। ನಾರೀಷು ರಂಭಾ, ನಗರೀಷು ಕಂಚೀ" ಎಂದು ಎಂದೂ ಹಾಡಿದವರನ್ನೂ ಹಾಡಹಚ್ಚುತ್ತವೆ. ಒಟ್ಟಿನಲ್ಲಿ ಕಂಚಿಯ ವಿಷಯದಲ್ಲಿ ಆ ಕವಿಯು ಕೊಟ್ಟ ಪ್ರಾಶಸ್ತ್ಯವು ಸತ್ಯವೂ ಸಹಜವೂ ಎಂದು ಇಂದಿಗೂ ಸಿದ್ಧವಾಗುತ್ತದೆ. ಅಲ್ಲದೆ ಕಂಚಿಯು ಈ ಪ್ರೌಢಿಯನ್ನು ಎತ್ತಿ ತೋರುವ "ಕಾಂಚಿಯಿಲ್ ಪಿರಾಕ್ ಮುಕ್ತಿ ಕಾಶಿಯಿಲ್ ಇರಾಕ್ ಮುಕ್ತಿ" ಅಂದರೆ "ಕಂಚಿಯಲ್ಲಿ ಹುಟ್ಟಿದರೆ ಮೋಕ್ಷ ಕಾಶಿಯಲ್ಲಿ ಸತ್ತರೆ ಮೋಕ್ಷ" ಎಂಬರ್ಥದ ತಮಿಳು ನಾಣ್ಣುಡಿಯನ್ನು ನೋಡಿದರೂ ಇದೂ ಸಹ ಆ ಕವಿವಾಣಿಯನ್ನು ಅಮರವಾಣಿಯನ್ನಾಗಿ

# ಶಿವಾನುಭವ.

| ವರ್ಷ ೧೬ | ಜನವರಿ ೧೯೫೨. | ಸಂಚಿಕೆ ೪ |
| --- | --- | --- |

## ಕಂಚೀ ನಗರಂ.

ಲೇಖಕ— ಜ. ಪ. ಶ್ರೀ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು,
ಜಗದ್ಗುರು ಶ್ರೀ. ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ- ಮುಕ್ಕಾಂ ಕಂಚಿ.

---

“ನಗರೇಷು ಕಂಚೀ” ಎಂಬ ಸಂಸ್ಕೃತೋಕ್ತಿಯು, ಸತ್ಯದ ಒರೆಗಲ್ಲಿಗೆ ನಿಲ್ಲಬೇಕಾದರೆ ಸ್ವತಃ ಕಂಚಿಗೆ ಬಂದು ಕಣ್ತುಂಬ ನೋಡಿದಾಗ. ಕಂಚಿಯ ಆ ವೈಭವ, ಆ ವಿಸ್ತಾರ, ಆ ದಿವ್ಯ ದೇವಸ್ಥಾನ, ಆ ಭವ್ಯ ರಾಜಾಸ್ಥಾನ, ತುಂಬಿನಿಂತ ಆ ತಿಳಿನೀರ್ಗೊಳಗಳು, ಚುಂಬಿಸಿ ನಿಂತ ಆ ಪರ್ವತ ಶ್ರೇಣಿಗಳು ಇನ್ನೂ ಮುಂತಾದವುಗಳು “ನಗರೇಷು ಕಂಚೀ” ಎಂಬ ಸಕ್ಕದ ನುಡಿಯನ್ನು ಮತ್ತೆ ಮತ್ತೆ ಸ್ಮೃತಿಪಥಕ್ಕೆ ತರುತ್ತವೆ. “ಪುಷ್ಪೇಷು ಜಾಜೀ, ಪುರುಷೇಷು ವಿಷ್ಣುಃ। ನಾರೀಷು ರಂಭಾ, ನಗರೇಷು ಕಂಚೀ ” ಎಂದು ಎಂದೂ ಹಾಡಿದವರನ್ನೂ ಹಾಡಹಚ್ಚುತ್ತವೆ. ಒಟ್ಟಿನಲ್ಲಿ ಕಂಚಿಯ ವಿಷಯದಲ್ಲಿ ಆ ಕವಿಯು ಕೊಟ್ಟ ಪ್ರಾಶಸ್ತ್ಯವು ಸತ್ಯವೂ ಸಹಜವೂ ಎಂದು ಇಂದಿಗೂ ಸಿದ್ಧವಾಗುತ್ತದೆ. ಅಲ್ಲದೆ ಕಂಚಿಯ ಈ ಮೇಲ್ಮೆಯನ್ನು ಎತ್ತಿ ತೋರುವ “ಕಾಂಚಿಯಿಲ್ ಪಿರಾಕ್ ಮುಕ್ತಿ ಕಾಶಿಯಿಲ್ ಇರಾಕ್ ಮುಕ್ತಿ” ಅಂದರೆ “ಕಂಚಿಯಲ್ಲಿ ಹುಟ್ಟಿದರೆ ಮೋಕ್ಷ ಕಾಶಿಯಲ್ಲಿ ಸತ್ತರೆ ಮೋಕ್ಷ” ಎಂಬರ್ಥದ ತಮಿಳು ನಾಣ್ಣುಡಿಯನ್ನು ನೋಡಿದರೂ ಇದೂ ಸಹ ಆ ಕವಿವಾಣಿಯನ್ನು ಅಮರವಾಣಿಯನ್ನಾಗಿ

ನಿರ್ಮಿಸಿದೆಯೆಂದು ಅರ್ಥವಾಗುತ್ತದೆ. ಏನೆ ಇರಲಿ, ಕಂಚಿಯು ಇಂದಿಗೂ ನೋಡತಕ್ಕ ನಗರ. ಅದನ್ನ ನೋಡಿದ ಮೇಲೆ— ಕಂಚಿಯನ್ನು ಕಾಣದ ಕಣ್ಣು ಕಂಚು, ಇಲ್ಲವೆ ರೊಟ್ಟಿ ಹಂಚು— ಎಂದೆನಿಸುತ್ತದೆ

ಕಂಗೊಳಿಸುವ ಈ ಕಂಚಿಯಲ್ಲಿ 'ಚೇಣಿಗರು' ಎಂಬುದೊಂದು ಪಂಗಡವಿದೆ. ವಾಡಿಕೆಯಲ್ಲಿ ಇವರನ್ನು ಸೈನಿಕರೆಂದು ಕರೆಯುತ್ತಾರೆ. ಸೈನಿಕ ಶಬ್ದವೆ ತಮಿಳಿನಲ್ಲಿ 'ಚೇಣಿಗ' ಎಂದು ಮಾರ್ಪಟ್ಟಿರಬೇಕೆಂದು ಅರ್ಥವಾಗುತ್ತದೆ. ಇವರನ್ನು 'ಕನ್ನಡ ಚೇಣಿಗರ್' ಎಂದೂ ಕರೆಯುವ ರೂಢಿಯಿದೆ. ಇವರು ಕನ್ನಡ ದೇಶದಿಂದ ಇತ್ತ ಬಂದಿದ್ದರಿಂದಲೂ ಕನ್ನಡ ಮಾತನ್ನು ಮಾತಾಡುವದರಿಂದಲೂ ಇವರಿಗೆ ಈ ಹೆಸರನ್ನು ಹೇಳಕೊಳ್ಳುವ ವಾಡಿಕೆ ಬಂದಿರಲು ಸಾಕು. ಇವರನ್ನು ವಿಚಾರಿಸಿದಂತೂ ಸಹ ನಾವು ಪೂರ್ವದಲ್ಲಿ ಕನ್ನಡನಾಡಿನಿಂದಲೆ ಬಂದವರು ಎಂದು ಹೇಳುತ್ತಾರೆ. ವೇಲೂರು, ಆರಣಿ, ಮದ್ರಾಸು ಮುಂತಾದ ಊರುಗಳಲ್ಲಿ ಇವರ ಜನಾಂಗವಿದೆಯೆಂದು ತಿಳಿಯುತ್ತದೆ. ಇಲ್ಲೆಲ್ಲ ಇವರ ನಾಲ್ಕೈದು ಸಾವಿರ ಮನೆಗಳಿವೆಯೆಂದು ಗೊತ್ತಾಗುತ್ತದೆ.

ಚೇಣಿಯರು ಮೊದಲು ಎಲ್ಲರೂ ಲಿಂಗಧಾರಿಗಳಾಗಿ ಲಿಂಗಾಯತಾಚಾರ ಸಂಪನ್ನರಾಗಿಯೆ ಇದ್ದರೆಂದು ಹೇಳುತ್ತಾರೆ ಆದರೆ ಇತ್ತೀಚೆಗೆ ವೀರಶೈವಾಚಾರವೆಲ್ಲ ಲೋಪವಾಗಿದೆ. ಜನಿವಾರವು ಲಿಂಗದ ಜೊತೆಗೆ ಸ್ಥಾನವನ್ನು ಸಂಪಾದಿಸಿದೆ. ಕೆಲವರಿಗೆ ಲಿಂಗಗಳೆ ಇಲ್ಲ. ಇವರಲ್ಲಿ ನಾಲ್ಕಾಂಶ ಜನ ವಿಷ್ಣು ಪೂಜಕರಿರುವರು. ಆದರೂ ಎಲ್ಲರಿಗೂ ಶಿವಾಚಾರದಲ್ಲಿ ಹೆಚ್ಚು ವಿಶ್ವಾಸವುದೆ ಇವರಲ್ಲಿ ನಿಧನರಾದವರನ್ನು ಸಮಾಧಿ ಮಾಡುತ್ತಾರೆ. ಲಿಂಗಗಳನ್ನು ವಿವಾಹಕಾಲಕ್ಕೆ ಕಟ್ಟಿಕೊಳ್ಳುತ್ತಾರೆ. ಗಂಧ-ಭಸ್ಮಗಳೆರಡನ್ನೂ ಧರಿಸುತ್ತಾರೆ. ಆಹಾರದಲ್ಲಿ ಕೆಲವರು ಶಾಖಾಹಾರಿಗಳೂ, ಕೆಲವರು ಮಾಂಸಾಹಾರಿಗಳೂ ಇರುವರೆಂದು ತಿಳಿಯುತ್ತದೆ-

ಇವರ ಮುಖ್ಯೋದ್ಯೋಗ ರೇಷ್ಮೆವ್ಯಾಪಾರ. ಇದರಲ್ಲಿ ಇವರದು ಎತ್ತಿದ ಕೈ. ಇದರಿಂದ ಇವರಲ್ಲಿ ಕೆಲವರು ತುಂಬಾ ಧನವಂತರೂ ಆಗಿದ್ದಾರೆ. ಇವರಲ್ಲಿ ಕೆಲವರು ವಿದ್ಯಾವಂತರಾಗಿ ಸರಕಾರಿ ದೊಡ್ಡ ದೊಡ್ಡ ಉದ್ಯೋಗಗಳಲ್ಲಿದ್ದಾರೆ. ಈ ಪಂಗಡದವರು ತಮಿಳು ಮಿಶ್ರವಾಗಿ

ಕನ್ನಡ ಮಾತಾಡುತ್ತಾರೆ. ಇವರು ಮಾತಾಡುತ್ತಿದ್ದರೆ ಕನ್ನಡವೊ ತಮಿಳವೊ ಅರ್ಥವೆ ಆಗುವದಿಲ್ಲ. ಇವರಲ್ಲಿ ಪೆರಿಮಾಳಶೆಟ್ಟಿ, ಪೊಣಿಸಾಮಿಶೆಟ್ಟಿ, ವರದಪ್ಪಶೆಟ್ಟಿ, ಕಂದಪ್ಪಶೆಟ್ಟಿ, ಷಣ್ಮುಖಶೆಟ್ಟಿ, ಸಾಂಬಶಿವಶೆಟ್ಟಿ ಎಂದು ಮುಂತಾಗಿ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ.

ಚೇಣಿಗರಿಗೆ ವೀರಶೈವ ಗುರುಗಳೆ ಗುರುಗಳು. ಏನಾದರೂ ದಾನ ಧರ್ಮವನ್ನು ಮಾಡಬೇಕಾದರೂ ವೀರಶೈವ ಗುರುಗಳಿಗೇನೆ. ಲಿಂಗವನ್ನು ಎಲ್ಲರೂ ಧರಿಸಿಯೆ ಇರಬೇಕೆಂಬ ನಿಯಮವಿಲ್ಲ. ಇಷ್ಟವುಳ್ಳವರು ಧರಿಸಿರುತ್ತಾರೆ ಇಷ್ಟಪಟ್ಟದವರು ಮನೆಯಲ್ಲಿಂಸಿರುತ್ತಾರೆ. ಮತ್ತೆ ಕೆಲವರಿಗೆ ಇರುವುದೇ ಇಲ್ಲ. ಲಿಂಗಕ್ಕೆ ಭಸ್ಮಾಭಿಷೇಕ ಮಾಡುತ್ತಾರೆಂದು ಕೇಳುತ್ತೇವೆ. ಲಿಂಗಕ್ಕಿಂತಲೂ ಶಿವದೇವಸ್ಥಾನಗಳ ತೀರ್ಥಪ್ರಸಾದಗಳೆಂದರೆ ಇವರಿಗೆ ಹೆಚ್ಚು ಶ್ರದ್ಧೆ. ಲಿಂಗಿಗಳಾಗಿದ್ದರೂ ಶೈವಾಚಾರ ವಿಶೇಷ. ವೀರಶೈವರಲ್ಲಿ ಬಳಕೆಯಿಲ್ಲ.

ಈ ಪಂಗಡದ ಈ ಅಲ್ಪಪರಿಚಯದಿಂದ ಕನ್ನಡನಾಡಿನಲ್ಲಿ ಮೊದಲು ವೀರಶೈವರೊಳಗೇನೆ ಸೈನಿಕರದೊಂದು ತಂಡು ಇತ್ತೆಂದು ಅರ್ಥವಾಗುತ್ತದೆ. ಅವರು ಯಾವಾಗಲೂ ಸೈನಿಕರಾಗಿಯೇ ಕೆಲಸ ಮಾಡುತ್ತಿದ್ದುದರಿಂದ ಅವರನ್ನು ಸೈನಿಕರೆಂದು ಕರೆಯುತ್ತಿರುವ ರೂಢಿಯಿತ್ತೆಂದು ಇದರಿಂದ ತಿಳಿದುಬರುತ್ತದೆ. ಅವರ ಮೇಲೆ ಯಾವುದೋ ಒಂದು ಕಾಲಕ್ಕೆ ಪರಕೀಯರಿಂದ ದಾಳಿಯಾದಾಗ ಓಡಿಹೋಗಿ ತಮಿಳುನಾಡಿನಲ್ಲಿ ಅಲ್ಲಲ್ಲಿ ನೆಲಸಿದರೆಂದು ಊಹೆಯಾಗುತ್ತದೆ. ಇದರಿಂದ ಮೊದಲಿನ ವೀರಶೈವರು ಸೈನಿಕಖಾತೆಯಲ್ಲಿಯೂ ಹೆಚ್ಚುಹೆಚ್ಚಾಗಿ ಇದ್ದು ಕೆಲಸಮಾಡುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಇವರ ಸಂಪೂರ್ಣ ಇತಿಹಾಸವನ್ನು ಶೋಧಿಸಲು ಇತಿಹಾಸಜ್ಞರ ಕೈಗೆ ಬಿಡುತ್ತೇವೆ.

---

# ಧಾರಣ ದೀಕ್ಷೆ.

(ಲೇಖಕರು:— ಜಿ. ಟಿ. ಅಕುಲಯ್ಯ, ಘಟ್ಟ ಜಿಲ್ಲಾ ಚಿತ್ರೂರು.)

---

## ಬೆಂಗಳೂರು ನಂಜಪ್ಪನವರಿಗೆ ಮಾರುತ್ತರ

ಸಪ್ಟಂಬರ ಸಂಚಿಕೆಯಲ್ಲಿ ಬಂದ ಶ್ರೀ. ಜ ನಿ. ಶ್ರೀಗುರುಮೂರ್ತಿ ದೇವರ ಇದೇ ಶಿರೋಲೇಖವನ್ನು ಖಂಡಿಸಬೇಕೆಂದು ಶ್ರೀ ಮಾ. ನಂ. ನಂಜಪ್ಪನವರು ನವ್ಹಂಬರ ಸಂಚಿಕೆಯಲ್ಲಿ ತುಂಬಾ ಸಾಹಸಪಟ್ಟಿದಾರೆ. ಆದರೆ ಅದರಲ್ಲಿ ಒಂದೂ ನ್ಯಾಯವಾದ ವಿಚಾರವಿಲ್ಲ; ಸತ್ಯವಾದ ಸಮಾಚಾರವಿಲ್ಲ ಇಂತಹ ಜೊಳ್ಳು ಲೇಖನಕ್ಕೆ ಉತ್ತರಿಸುವುದು ಬೆಂಕಿಗೆ ತುಪ್ಪವನ್ನು ಹೊಯ್ದಂತೆಯೆ ಸರಿ. ಆದರೂ ಅವರು ಅದರಲ್ಲಿ ಕೆಲವು ವೈಯಕ್ತಿಕ ಸುಳ್ಳುಸುಳ್ಳಾದ ಸಮಾಚಾರಗಳನ್ನು ಲೇಖನಕ್ಕೆ ಸಂಬಂಧವಿಲ್ಲದಿದ್ದರೂ ಬರೆದಿದ್ದಾರೆ. ಈ ಸುಳ್ಳುಸಂಗತಿಗಳು ಸತ್ಯದ ರಂಗಕ್ಕೆ ಬರಲೆಂದು ಬರೆಯಬೇಕಾಗಿದೆ ಬರೆಯದಿದ್ದರೆ ತಾವಾಡಿದ್ದೆ ನಿಜವೆಂದು ಭಾವಿಸುವರು, ಭ್ರಮಿಸುವರು. ಆದರಿಂದ ಅವರ ಆದ್ಯಂತ ಉತ್ತರಗಳನ್ನು ಎತ್ತೆತ್ತಿ ನೋಡೋಣ ಅವಕ್ಕೆ ಜೀವಕಳೆಯಿದೆಯೊ ಇಲ್ಲೊ ಎಂಬುದನ್ನು !

ನಂಜಪ್ಪನವರು:— ...ವೀರಶೈವರಿಗೆ ಮೊದಲನೆಯ ದೀಕ್ಷಾಪೂರ್ವಕ ಲಿಂಗಧಾರಣೆಯೊಂದೆ ಸಾಲದೆಂತಲೂ ಎರಡನೆಯ ಬಾರಿ ದೀಕ್ಷೆಯನ್ನು ಹೊಂದಲೇಬೇಕೆಂತಲೂ ಬರೆದು ಎಂದು ಆರಂಭದಲ್ಲಿಯೇ ದೊಡ್ಡದೊಂದು ಸುಳ್ಳನ್ನು ಕಲ್ಪಿಸಿದ್ದಾರೆ ಶ್ರೀ ಜ. ನಿ. ಗುರುಮೂರ್ತಿಗಳವರ ಲೇಖದಲ್ಲಿ ಆದ್ಯಂತದವರೆಗೂ ಜನನ ಕಾಲದಲ್ಲಿ ಕೇವಲ ಲಿಂಗಧಾರಣೆಯನ್ನು ಮಾಡಿ ಅನಂತರ (ಜ್ಞಾನೋದಯವಾದ ಮೇಲೆ) ದೀಕ್ಷೆಯನ್ನು ಮಾಡಬೇಕೆಂಬ ಅಭಿಪ್ರಾಯವಿದೆಯೆ. ಹೊರತು ದೀಕ್ಷಾಪೂರ್ವಕ ಲಿಂಗಧಾರಣವಾಗಿದ್ದರೂ ಅದು ಸಾಲದೆಂದು ಎಲ್ಲಿಯೂ ಹೇಳಿಲ್ಲ ಇದೆಯೆಂದರೆ ಆ ವಾಕ್ಯವು ಯಾವುದು? ನಂಜಪ್ಪನವರು ಎತ್ತಿ ಉದಹರಿಸುವರೋ? ಉದಹರಿಸದಿದ್ದರೆ ಇದು ಒಂದನೆಯ ಸುಳ್ಳು.

"ಗರ್ಭಸ್ಥ ಶಿಶುವಿಗಾಗಲಿ, ಅದೇ ಜನಿಸಿದ ಮಗುವಿಗಾಗಲಿ ಗುರುವು ತ್ರಿವಿಧದೀಕ್ಷೆಯನ್ನು ಮಾಡಬೇಕಾದರೆ ಮಂತ್ರದೀಕ್ಷೆಯನ್ನು ಮಾಡಲು ಸಾಧ್ಯವೇ ಇಲ್ಲ. ಮತ್ತು ಆ ಮಗುವಿನ ದೃಷ್ಟಿಯಲ್ಲಿ ದೃಷ್ಟಿಯನ್ನೂ ಮನಸ್ಸಿನಲ್ಲಿ ಮನಸ್ಸನ್ನೂ, ಭಾವದಲ್ಲಿ ಭಾವವನ್ನೂ ಬೆರಸುವದಕ್ಕೂ ಶಿಷ್ಯನ ಶಿವಕಲೆಯನ್ನು ಬಹಿಷ್ಕರಿಸುವದಕ್ಕೂ ಶಿಷ್ಯನಲ್ಲಿ ಶಕ್ತಿಯಿರುವದಿಲ್ಲ...." ಎಂದು ಶ್ರೀ. ಜ ನಿ. ಗುರುಮೂರ್ತಿಗಳು ಲಿಖಿಸಿದುದಕ್ಕೆ ನಂಜಪ್ಪನವರು:— ಲಿಂಗಧಾರಣೆಯನ್ನು ಹೊಂದುವ ಮಕ್ಕಳ ಚಿತ್ತದಲ್ಲಿ ಯಾವ ವಿಧವಾದ ಆಕರ್ಷಣ ಶಕ್ತಿಯಾಗಲಿ, ಬೆಳೆದು ಬಲಿತು ಅಭಿವೃದ್ಧಿಯನ್ನೈದುವ ಶಕ್ತಿಯಾಗಲಿ ಸ್ವಲ್ಪವೂ ಇರುವದಿಲ್ಲವೆಂದಹಾಗಾಯಿತು. ಎಂದು ಶ್ರೀಗುರುಮೂರ್ತಿದೇವರು ಪಡದೆ ಇರುವ ಅಭಿಪ್ರಾಯವನ್ನು ಊಹಿಸಿ ಎತ್ತಿದ್ದಾರೆ.

## ಇದಕ್ಕೆ ಸಮಾಧಾನ.

೧ ಲಿಂಗಧಾರಣವನ್ನು ಹೊಂದುವ ಜನ್ಮ ಶಿಶುಗಳ ಚಿತ್ತದಲ್ಲಿ ಆಕರ್ಷಣ ಶಕ್ತಿಯು ಇಲ್ಲವೇಇಲ್ಲವೆಂದು ಶ್ರೀ ಗುರುಮೂರ್ತಿಗಳವರು ಎಲ್ಲಿಯೂ ಹೇಳಿಲ್ಲ; ಹೇಳುವುದೂ ಇಲ್ಲ. ಆದರೆ ಆ ಶಕ್ತಿಯು ಜನನ ಕಾಲದಲ್ಲಿ ಅವ್ಯಕ್ತವಾಗಿರುತ್ತದೆಂದೂ ಅದನ್ನು ಅದೇ ಸಮಯದಲ್ಲಿ ವ್ಯಕ್ತಗೊಳಿಸಲು ಸಾಧ್ಯವಿಲ್ಲವೆಂದೂ ಅವರ ಬರಹದ ಭಾವವು ಕನ್ನೆಯಲ್ಲಿ ಸ್ನೇಹವಿದೆಯೆಂದಾಕ್ಷಣವೆ ಅದು ಆಗಲೆ ಪರಿಸ್ಫುಟವಾಗುತ್ತದೆಯೆ? ಆಗುತ್ತದೆಯೆಂದರೆ "ಕೂಡಲಸಂಗಮದೇವರ ನಿಲವು ಕನ್ನೆಯ ಸ್ನೇಹದಂತಿದ್ದಿತ್ತು. ಎಂಬ ಶ್ರೀಬಸವಣ್ಣನವರ ಈ ಅವ್ಯಕ್ತದ ಉಪಮಾನಕ್ಕೆ ಗತಿಯೇನು? ವೀರಶೈವ ಜನ್ಮಶಿಶುಗಳಿಗೆ ಜ್ಞಾನೋದಯ ಶಕ್ತಿಯು ಅವ್ಯಕ್ತವಾಗಿರುತ್ತದೆ. ಸರ್ವಸಾಮಾನ್ಯವಾಗಿ ಜನನ ಕಾಲದಲ್ಲಿಯೇ ಅದನ್ನು ಉತ್ಥಾನ ಮಾಡಲು ಸಾಧ್ಯವಿಲ್ಲ. ಎಂಬುದಾಗಿ ಬರೆದರೆ ಇದು ಕಾಶೀ ಪಾಂಡಿತ್ಯಕ್ಕೆ ಮರುಳಾದಂತೆಯೊ? ಹಟಸಾಧಿಸುವಲ್ಲಿ ಹದ ತಪ್ಪಿಹೋಗುವ ಸ್ವಪಾಂಡಿತ್ಯದ ಮರುಳು ಹಿಡಿದಂತೆಯೊ? ನೀವೇ ಯೋಚಿಸಿ ನೋಡಿ! ಅದರಲ್ಲಿಯೂ ಶ್ರೀಗುರುಮೂರ್ತಿದೇವರ ಮಾತನ್ನೇ ಘೋಷಿಸುವ 'ಏಕೋತ್ತರ ಶತಸ್ಥಲ' ದ ಒಂದೆರಡು ಪದ್ಯಗಳನ್ನು ಎತ್ತಿ ಎಳೆದು ತಿಳಿಯದೆ ತಮ್ಮದನ್ನಾಗಿ ಮಾಡಿಕೊಳ್ಳ ಹೊರಟಿರುವ ನಂಜಪ್ಪ

ನವರ ಜ್ಞಾನಚಾತುರ್ಯಕ್ಕೆ ಏನನ್ನಬೇಕೊ ನಮಗೆ ಬೇರೆ ತಿಳಿಯದು. ಆವುಗಳ ನಿಜಾರ್ಥವನ್ನು ಕೊಂಚ ವಿಚಾರಿಸೋಣ! ಜ್ಞಾನೋದಯವಾಗುವವರೆಗೂ ಆ ಶಕ್ತಿಯು (ಪಿಂಡವು) ಅವ್ಯಕ್ತವಾಗಿರುತ್ತದೆಯೆಂಬ ಶ್ರೀಗುರುಮೂರ್ತಿಗಳವರ ಅಭಿಪ್ರಾಯವನ್ನೇ ಪ್ರತಿಪಾದಿಸುವ ಮತ್ತು ನಂಜಪ್ಪನವರಿಗೆ ನೇರವಾಗಿ ಅರ್ಥವಾಗುವ ಆ ಪದ್ಯಗಳ ಪಂಕ್ತಿಗಳನ್ನು ಮಾತ್ರ ಎತ್ತಿ ತೋರೋಣ!

"ಬಿಂದು ಬಿನ್ನಾಣದೊಳಗಂದವಿಟ್ಟಿಹ ಕಳಾ
ನಂದ ಪಿಂಡೋದಯದ ಜ್ಞಾನ ನಿರುತ
ನೀರೊಳಡಕಂಗೆಯ್ದು ಕಿಚ್ಚಿನಂತೆ।
ನಸುನನೆಯೊಳಗಡಗಿರ್ದ ನವ ಸುಗಂಧದ ತೆರದಿ
ಲೀಲಾ ಶಿಶುವ ಪಿಂಡ ವ್ಯೆದೋರದಿಹುದು.

ಟೀಕಾ ಸಾರಾಂಶದಲ್ಲಿ:—

ಅಖಂಡ ಶಿವಕಳಾನಂದ ಚೈತನ್ಯ ಸ್ವರೂಪವಾದಂಥ
ಪಿಂಡ ನಾಮಧೇಯವುಳ್ಳ ಪರಬ್ರಹ್ಮವು
ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡವಾಗಿಹುದು.

"......ಚಿಚ್ಛಕ್ತಿಯ ಮಧ್ಯದಲ್ಲಿ ನಿಜಮೋಕ್ಷ ಸ್ವರೂಪವಾದ ಪರಬ್ರಹ್ಮವು ಅಡಗಿರ್ದು ಜ್ಞಾನೋದಯಕ್ಕೆ ಮೊದಲೆ ಪಿಂಡದಲ್ಲಿ ಪಿಂಡಸ್ಥಲವಾಗಿಹುದು.

ನಂಜಪ್ಪನವರು ಉದಹರಿಸಿದ ಈ ಮೂರು ಪದ್ಯಗಳ ಕೊನೆಕೊನೆಯ ಪಂಕ್ತಿಗಳಲ್ಲಿ ನಾವು ಹೇಳುವಂತೆ ಆ ಚೈತನ್ಯವು (ಶಕ್ತಿಯು) ಜ್ಞಾನೋದಯಕ್ಕೆ ಮೊದಲು ಅವ್ಯಕ್ತವಾಗಿರುತ್ತದೆಯೆಂದೂ ಜ್ಞಾನೋದಯವಾದನಂತರ ವ್ಯೆದೋರುತ್ತದೆಯೆಂದೂ ಸ್ಪಷ್ಟವಾಗಿ ನಿರ್ದುಷ್ಟವಾಗಿ ಹೇಳಿರುತ್ತವೆ. ಜ್ಞಾನೋದಯಕ್ಕೆ ಮೊದಲು ಪಿಂಡವು (ಶಕ್ತಿಯು) ಇದೆಯೆಂದೆ ನಾವೂ ಹೇಳುವದು. ಆದರೆ ಅದು ಆಗ ಸುಪ್ತವಾಗಿರುತ್ತದೆ. ಆ ಸುಪ್ತವಾದ ಗುಪ್ತಶಕ್ತಿಯು ವ್ಯಕ್ತವಾಗಲು ಜ್ಞಾನಬೇಕು. ಜ್ಞಾನೋದಯವಾಗಲು ಅವಕಾಶಬೇಕು, ಎಂದು ಹೇಳುವುದೆ ನಮ್ಮ ಮತ್ತು ಈ ಪದ್ಯಗಳ ನಿಜಾರ್ಥವು. ಪಿಂಡಸ್ಥಲದಲ್ಲಿ ಪಿಂಡವು ಅವ್ಯಕ್ತ

ವಾಗಿ ಅಗೋಚರವಾಗಿ ಇರುವದರಿಂದಲೇ ವೀರಶೈವ ಸಿದ್ಧಾಂತದಲ್ಲಿ ಪಿಂಡಜ್ಞಾನೋದಯು"ಸ್ಥಲವೆಂದು ಮತ್ತೊಂದು ಸ್ಥಲವನ್ನು ಪ್ರತ್ಯೇಕವಾಗಿ ಏರ್ಪಡಿಸಿದ್ದಾರೆ. ಈ ಏರ್ಪಾಡವೂ ಸಹ ಶ್ರೀಗುರುಮೂರ್ತಿಗಳವರ ಅಭಿಪ್ರಾಯವನ್ನೇ ಎತ್ತಿ ಹಿಡಿಯುತ್ತದೆ. ಅಲ್ಲದೆ ಬಸವ, ಅಲ್ಲಮ ಮುಂತಾದ ಪ್ರಮಥರ ಜನ್ಮಕಾಲಗಳಲ್ಲಿಯೂ ಸಹ ಆ ಶಕ್ತಿಯು ಸುಪ್ತವಾಗಿತ್ತೆಂದೇ ಅವರವರ ಜೀವನ ಚರಿತ್ರೆಗಳಿಂದ ಚನ್ನಾಗಿ ತಿಳಿದುಬರುತ್ತದೆ. ಆದ್ದರಿಂದ ಇದೇ ವೀರಶೈವರ ಸತ್ಯಸಿದ್ಧಾಂತವಾದ ಮಾರ್ಗ. ಇದನ್ನೇ ಶ್ರೀ ಗುರುಮೂರ್ತಿ ಸ್ವಾಮಿಗಳವರು ಹೇಳುತ್ತಿರುವುದು. ಇದನ್ನು ಬಿಟ್ಟು ನಂಜಪ್ಪನವರು— "ಶಿಶುಗಳಲ್ಲಿ ಜ್ಞಾನೋದಯು ಶಕ್ತಿ ಇರುತ್ತದೆಯೋ? ಇಲ್ಲವೆ? ಇದ್ದರೆ ಯಾವ ಸ್ವರೂಪದಲ್ಲಿರುತ್ತದೆ?..." ಎಂಬುದಾಗಿ ಶಿಶುಗಳ ಜನನಕಾಲದಲ್ಲಿ ಪಿಂಡವು (ಶಕ್ತಿಯು) ವ್ಯಕ್ತವಾಗಿರುತ್ತದೆಂಬಂಶದಲ್ಲಿ ಪ್ರಶ್ನೆಗಳನ್ನ ಮಾಡಿರುವದನ್ನು ನೋಡಿದರೆ ಇವರ ಪಾಂಡಿತ್ಯವು ಮೊಗಲಾಯಿ ಪಾಂಡಿತ್ಯವೋ ಮರ್ಕಾಪಾಂಡಿತ್ಯವೋ ಇಲ್ಲವೆ ಕಚ್ಛಪಾಂಡಿತ್ಯವೋ ತಿಳಿಯುದಾಗಿದೆ

ಶ್ರೀ. ಜ. ನಿ. ಗುರುಮೂರ್ತಿ ಸ್ವಾಮಿಗಳವರು ಉದಹರಿಸಿದ ಗಾರುಡ ಪುರಾಣ ಶ್ಲೋಕಗಳೆರಡಕ್ಕೂ ಏಕಾರ್ಥವನ್ನ ಮಾಡಹೊರಟ ಇವರ ದಿಗ್ದಂತಿ ಪಾಂಡಿತ್ಯಕ್ಕೆ ದಿಕ್ಕುತೋಚದೆ ಹೋಗಿದೆ. ಪಾಪ! ಆ ಶ್ಲೋಕಗಳಿಗೆ ಏಕಾರ್ಥ ಹುಟ್ಟುವಂತೆ ಪ್ರತಿಪದಕ್ಕೆ ಬಿಡಿಬಿಡಿಯಾಗಿ ಟೀಕೆ ಬರೆದಿದ್ದರೆ ಚನ್ನಾಗಿತ್ತು. ಅವರಿಗೆ ಗೊತ್ತಾಗುತ್ತಿತ್ತು ಅವುಗಳ ಮರ್ಮ. ಹಾಗೆ ಮಾಡದೆ ಮರೆತುಬಿಟ್ಟಿದ್ದಾರೆ. ಇನ್ನಾದರೂ ಹಾಗೆ ಮಾಡುವರೆ?

ಇನ್ನು ಸಿದ್ಧಾಂತಶಿಖಾಮಣಿಯಿಂದೆತ್ತಿದ ಶ್ಲೋಕಗಳಿರುವ ಶಿಷ್ಯನ ಪ್ರಾರ್ಥನೆಯು "ಭವಿ"ಯ ಪ್ರಾರ್ಥನೆಯೆಂದು ಸ್ಪಷ್ಟವಾಗಿ ನುಡಿದು ಬಿಟ್ಟಿದ್ದಾರೆ. ಸಿದ್ಧಾಂತಶಿಖಾಮಣಿಯು, ಭವಿಗಳಿಗಾಗಿಯೋ? ಭಕ್ತರಿಗಾಗಿಯೋ? ಭವಿಗಳಿಗಾಗಿಯೆಂದರೆ—

"ವಿಧದತುಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ
ಪಶುಪತಿಮತಸಾರೆ ಪಂಡಿತ ಶ್ಲಾಘನೀಯೇ" ॥೩೨॥
—ಪ್ರಥಮ ಪರಿಚ್ಛೇದ.

ಈ ಶ್ಲೋಕದ ಗತಿಯೇನು?

ಈ ವಿಚಾರದಲ್ಲಿ ಇವರು ಮುಂದುವರಿದು ಲಿಂಗಧಾರಣ ಸ್ಥಲದಲ್ಲಿ ನೂತನವಾಗಿ ಬೇರೊಂದು ಲಿಂಗದ ಸಂಸ್ಕಾರವು ಸಿದ್ಧಾಂತಶಿಖಾಮಣಿಯಲ್ಲಿ ಉಕ್ತವಾಗಿರವದರಿಂದ ಧಾರಣ-ದೀಕ್ಷೆಗಳೆರಡೂ ಈ ಗ್ರಂಥ ದೃಷ್ಟಿಯಿಂದ ಒಂದೇ ಎಂದು ಅರ್ಥವಾಗುತ್ತದೆ; ಎಂದು ಹೇಳಿದ್ದಾರೆ. ಇದು ನ್ಯಾಯಬದ್ಧವಾದ ವಿಮರ್ಶೆ. ಇದನ್ನು ಒಪ್ಪಲೇಬೇಕು. ಆದರೆ ಗುರುಕಾರುಣ್ಯಸ್ಥಲದಲ್ಲಿ ಶಿಷ್ಯನಿಗೆ ಹೇಳಿದ ಪ್ರಾರ್ಥನೆಗಳು ಜನ್ಮ ಶಿಶುವಿಗೆ ಸಾಧ್ಯವೇ? ಇದಕ್ಕೆ ಇವರು ಸಮಂಜಸವಾದ ಸಮಾಧಾನವನ್ನು ಹೇಳಿದಲ್ಲಿ ಅವಶ್ಯವಾಗಿ ಒಪ್ಪುತ್ತೇವೆ. ಆದರೆ ಆ ಪ್ರಾರ್ಥನೆಗಳು ಭವಿಗಳಿಗೆ ಸಂಬಂಧಪಟ್ಟವು ಎಂದು ನಿರಾಧಾರವಾಗಿ ಹೇಳಿದರೆ ಯಾರ ಮನಸ್ಸು ಒಪ್ಪಲಾರದು.

## ಇವರ ಮತ್ತೊಂದು ಪ್ರಶ್ನೆ.

ಇನ್ನು "ಗರ್ಭಾಷ್ಟಮೇ" ಎಂಬುದಕ್ಕೆ ಈ ನಿಡುಮಾಮಿಡಿ ಗುರುಮೂರ್ತಿಗಳು ಎಂಟನೆಯ ವರ್ಷವೆಂಬರ್ಥವನ್ನು ತೋರಿಸುತ್ತಾರೆ. ಅದು ಹೇಗೆ ಸಾಧ್ಯ? "ವರ್ಷಾ" ಎಂಬ ಶಬ್ದವೇ ಈ ಶ್ಲೋಕದಲಿಲ್ಲ......" ಎಂದು ಅಬದ್ಧ ಪ್ರಶ್ನೆ ಮಾಡಿದ್ದಾರೆ.

ಇವರ ಈ ತಿಳವಳಿಕೆಯಿಲ್ಲದ ಕೇಳಿಕೆಯನ್ನು ನೋಡಿದರೆ ಶ್ರೀ ಜ. ನಿ. ಗುರುಮೂರ್ತಿಸ್ವಾಮಿಗಳವರ ಲೇಖನದ ಲವಲೇಶಾರ್ಥವೂ ಸಹ ಇವರಿಗಾಗಿಲ್ಲವೆಂದು ಸ್ಪಷ್ಟವಾಗುತ್ತದೆ. "ಷೋಡಶಾವಧಿ" "ತಮಾರ್ಧ್ವಂ" ಎಂಬ ಪದಗಳಿರುವದರಿಂದ "ಗರ್ಭಾಷ್ಟಮು'' ಪದಕ್ಕೆ ವರ್ಷವೆಂತಲೇ ಅರ್ಥಮಾಡಬೇಕು ಇಲ್ಲವಾದರೆ ಅವೆರಡೂ ವ್ಯರ್ಥವಾಗುತ್ತವೆ. ಎಂದು ಅಚ್ಚಗನ್ನಡದಲ್ಲಿ ಬಿಚ್ಚಿ ಬರೆದಿದ್ದರೂ ನಂಜಪ್ಪನವರು ಅದನ್ನು ನೋಡದೆ ಹಗಲಲ್ಲಿ ಕಣ್ಮುಚ್ಚಿ ಸೂರ್ಯನೆ ಇಲ್ಲೆಂದು ಹೇಳಹೊರಟಿರುವನಂತೆ "ವರ್ಷಾ'' ಶಬ್ದವು ಇಲ್ಲೆಂದು ಹೇಳಹೊರಟಿದ್ದಾರೆ. ''ವರ್ಷಾ'' ಶಬ್ದವು ''ವರ್ಷ' ಈ ಅರ್ಥದಲ್ಲಿ ಯಾವ ಭಾಷೆಯಲ್ಲಿದೆಯೊ ನಾವು ಕಾಣೆವು. ಇದನ್ನು ಇವರು ಯಾವ ಪಾಠಶಾಲೆಯಲ್ಲಿ ಕಲಿತರೋ ತಿಳಿಯೆವು. "ವರ್ಷಾ" ಎಂದರೆ "ಮಳೆ"ಯೆಂದು ಅರ್ಥವಾಗುತ್ತದೆ. ನಂಜಪ್ಪನವರು ಮಳೆಯಿಲ್ಲವೆಂತ ಹೇಳುವುದು ಒಂದು ದೃಷ್ಟಿಯಿಂದ ನ್ಯಾಯವೇ?

ಶ್ಲೋಕದಲ್ಲಿ ವರ್ಷಾಕಾಲವೇಕೆ ಬರುತ್ತದೆ? ಶ್ರೀಗುರುಮೂರ್ತಿ ಸ್ವಾಮಿಗಳಾದರೂ 'ವರ್ಷಾ' ಅಂದರೆ 'ಮಳೆ' ಇದೆಯೆಂದು ಹೇಳಿಲ್ಲ. ವರ್ಷ ಅಂದರೆ ಸಂವತ್ಸರ ಎಂದು ಅರ್ಥವಾಗುತ್ತದೆಯೆಂದು ಹೇಳಿದ್ದಾರೆ. ಈ ವಿಷಯದಲ್ಲಿ ಶ್ರೀಗುರುಮೂರ್ತಿಸ್ವಾಮಿಗಳು ವಿಶದವಾಗಿ ವಿವರವಾಗಿ ಬರೆದಿದ್ದರೂ ನಂಜಪ್ಪನವರು "ಅದು ಹೇಗೆ ಸಾಧ್ಯ?" ಎಂದು ಪ್ರಶ್ನೆ ಕೇಳಿರುವದನ್ನು ನೋಡಿದರೆ ಇವರು ಸತ್ಯವನ್ನು ಮುಚ್ಚಿಕ್ಕಿ ಸುಳ್ಳನ್ನು ಮುಂದು ಮಾಡಲು ಒಳ್ಳೇ ಜಾಣರೆಂದು ಕಾಣಬರುತ್ತದೆ ಆದರೆ ಸತ್ಯವನ್ನು ಮುಚ್ಚಹೋದರೆ ಸಾಧ್ಯವೇ? ತಾವೊಬ್ಬರು ಕಣ್ಮುಚ್ಚಿದ್ದರೆ ನಾಡೆಲ್ಲವೂ ಕಣ್ಮುಚ್ಚಿರುವುದೇ? ಈ ವಿಷಯದಲ್ಲಿ ನಂಜಪ್ಪನವರು ಸತ್ಯವಾದುದನ್ನು ತಿಳಿಯಬೇಕಾಗಿದ್ದರೆ ಶ್ರೀಗುರುಮೂರ್ತಿ ಸ್ವಾಮಿಗಳವರು ಲಿಖಿಸಿದ ಆದೇ ಲೇಖವನ್ನೇ, ಪುನಃ ಸಾವಧಾನ ಚಿತ್ತದಿಂದ ಓದಿ ನೋಡಬೇಕು ಬರದದ್ದನ್ನೇ ಬರೆಯುವುದು ಇಲ್ಲಿ ಅನವಸರ. ಅಥವಾ ವರ್ಷವೆಂದು ಅರ್ಥವಾಗದಿದ್ದರೆ ಇನ್ನೇನೆಂದು ಅರ್ಥವಾಗುತ್ತದೆಯೆಂಬುದನ್ನಾದರೂ ನಂಜಪ್ಪನವರು ಆ ಇಡೀ ಶ್ಲೋಕಕ್ಕೆ ಅರ್ಥ ಬರದು ತೋರಿಸಲು ಮುಂದೆ ಬರುವರೆಂದು ನಂಬೋಣವೆ?

## ಇನ್ನೊಂದು ಇವರ ಪ್ರಶ್ನೆ

ಮುಂದೆ ಈ ಗುರುಮೂರ್ತಿಗಳು ಶಿಶುವು ಹುಟ್ಟಿದಾಗ ದ್ವೈತಿಯೆಂದೂ ದೀಕ್ಷಾನಂತರ ಅದ್ವೈತಿಯೆಂದೂ ಹೇಳುತ್ತಾರೆ. ಈ ಯದ್ವಾತದ್ವವನ್ನಿವರು ಯಾವ ವೀರಶೈವ ಶಾಸ್ತ್ರದಲ್ಲಿ ಕಂಡರೋ ತಿಳಿಯದಾಗಿದೆ. ಎಂದು ಬರೆದಿದ್ದಾರೆ.

## ಉತ್ತರ.

ನಂಜಪ್ಪನವರಿಗೆ 'ಯದ್ವಾತದ್ವಾ' ಶಬ್ದವೆ 'ಯದ್ವಾತದ್ವ' ಆಗಿರುವಾಗ ಇನ್ನು ಗಹನ ವಿಷಯದಲ್ಲಿ ಇವರಿಗೆ ಎಷ್ಟೊಂದು ಯದ್ವಾತದ್ವಾ ಇರಬೇಕೆಂಬುದನ್ನು ಬೇರೆ ಹೇಳುವುದೆ ಬೇಡ ಪಾಪ! ಬಲ್ಲವರನ್ನಾದರೂ ಕೇಳಿ ಬರೆಯಬೇಕಾಗಿತ್ತು. ಅದೇನುಕಾರಣವೋ ಹಾಗೆ ಮಾಡಲಿಲ್ಲ. ಹೋಗಲಿ ವಿಷಯ ನೋಡೋಣ!

ಆ ಅದ್ವೈತನಾದ ಪರಶಿವನೆ ವೀರಶೈವರಲ್ಲಿ ಮೊದಲು ಅಂಗ-ಲಿಂಗವಾಗಿ ಜನಿಸಿದಾಗ ಆ ಅಂಗಲಿಂಗಗಳೆರಡೂ ದ್ವೈತವೋ?" ಅದ್ವೈತವೋ?

ದ್ವೈತಾದ್ವೈತವೊ? ಅದ್ವೈತವೆಂದು ಹೇಳುವದಾದರೆ ದೀಕ್ಷೆ ಯಾತಕ್ಕೆ? ಅಂಗಕ್ಕೊ? ಲಿಂಗಕ್ಕೊ? "ಅನಾದ್ಯವಿದ್ಯಾಸಂಬಧಾತ್ ತದಂಶಾ ಜೀವನಾಮಕಃ" ಎಂಬಂತೆ ಅನಾದಿ ಅವಿದ್ಯಾ ಸಂಬಂಧದಿಂದ ಅಂಗ (ಜೀವ) ವಾಗಿ ದ್ವೈತರೂಪದಲ್ಲಿ ಜನಿಸಿದ್ದರಿಂದಲೇ ಅದರಲ್ಲಿರುವ ಅಂಗವೆಂಬ ದ್ವೈತವನ್ನು ಕಳೆದು ಅವಿದ್ಯೆಯನ್ನು ಹೋಗಲಾಡಿಸಿ ಲಿಂಗವೆಂಬ ಅದ್ವೈತವನ್ನು ಹುಟ್ಟಿಸುವದಕ್ಕಾಗಿಯಲ್ಲವೆ ದೀಕ್ಷೆ? ಕಟ್ಟಿಗೆ ಅಗ್ನಿ ಎರಡು ದ್ವೈತವಲ್ಲವೇ? ಆ ಕಟ್ಟಿಗೆಯನ್ನು ಅಗ್ನಿಯು ಆವರಿಸಿ ಸಂಪೂರ್ಣ ಸುಟ್ಟಾಗಲ್ಲವೇ ಕಟ್ಟಿಗೆಯೆಂಬ ದ್ವೈತವು ಹೋಗಿ ಕಟ್ಟಿಗೆಯೂ ಬೆಂಕಿಯೆಂಬ ಅದ್ವೈತವುಂಟಾಗುವುದು? ಇದಿರಲಿ. ಇನ್ನು ನಂಜಪ್ಪನವರು ವಾದ ಸರಣಿಯಲ್ಲಿಯೇ ಯೋಚಿಸೋಣ!

ನಂಜಪ್ಪನವರು ಕೆಲವು ಕಾಲ ಜ್ಞಾನಿಗಳಾಗಿ ಮಾತ್ರ ಇರಬೇಕೆಂದೂ ಕೆಲವುಕಾಲ ಕ್ರಿಯೆಯನ್ನು ಮಾತ್ರ ಆಚರಿಸಬೇಕೆಂದೂ ನಮ್ಮ ಆದ್ಯರು ಎಲ್ಲಿಯೂ ಹೇಳಿಲ್ಲ. ಎಂದು ಆದ್ಯರ ಮೇಲೆ ಇಲ್ಲದ ಅಪವಾದವನ್ನು ಹೊರಿಸಿದ್ದಾರೆ. ದ್ವೈತಾದ್ವೈತ ಮತ ಹೇಗೆ ಎಂಬುದನ್ನು ಸಿದ್ಧ ಮಾಡಲು ಬಾರದೆ ಯದ್ವಾತದ್ವಾ ಕುಣಿದಿದ್ದಾರೆ ನಾವು ಕೇಳುವದೊಂದಾದರೆ ತಾವು ಹೇಳುವದೊಂದಾಗಿ ಅತೋನಾಸ್ತಿ ಇತೋನಾಸ್ತಿ ಎಂಬ ಮಾತಿಗೆ ಪಕ್ಕಾಗಿದ್ದಾರೆ. ಕೆಲವುಕಾಲ (ಬಹಳ ದಿನ) ಜ್ಞಾನಿಗಳಾಗಿ, ಕೆಲವುಕಾಲ (ಬಹಳದಿನ) ಕ್ರಿಯಾವಂತರಾಗಿಯೆ ಇರಬೇಕೆಂದು ಶ್ರೀಗುರುಮೂರ್ತಿ ಸ್ವಾಮಿಗಳವರೇನೂ ನಿಯಮಮಾಡಿಲ್ಲ. ಜ್ಞಾನಕ್ಕೂ ಕ್ರಿಯೆಗೂ ಕೆಲವು ಕಾಲವಾದರೂ ಅಂತರವಿರಬಹುದು ತುಸುಕಾಲವಾದರೂ ಅಂತರವಿರಬಹುದು. ಆದರೆ ನಿಮ್ಮ ಅಭಿಪ್ರಾಯದಂತೆ ಅವೆರಡೂ ಯಾವ ಅಂತರವೂ ಇಲ್ಲದೆ ಇರಲು ಸಾಧ್ಯವಿಲ್ಲ

ಆದ್ಯರು ಕೈದುವ ಕೊಟ್ಟಿರುವರಲ್ಲದೆ ಕಲಿತನವಕೊಡುವರೇ? ಕ್ರಿಯಾಜ್ಞಾನ ಸಮುಚ್ಚಯವೆ ವೀರಶೈವ ಸಿದ್ಧಾಂತವೆಂದು ಸ್ಥೂಲವಾಗಿ ಹೇಳಿದರೆ ಹೊರತು ಅದರಂತರಾರ್ಥವನ್ನು ಹೇಳಲಿಲ್ಲ. ಹೇಳುವ ಅವಶ್ಯವೂ ಇರಲಿಲ್ಲ. ನಿಮ್ಮಂತಹ ಅಪಕ್ವ ಜ್ಞಾನಿಗಳಿದ್ದರೆ ಮಾತ್ರ ಹೇಳಬಹುದಾಗಿತ್ತು. ಆ ಪರಿಸ್ಥಿತಿ ಆಗ ಇರಲಿಲ್ಲವೆಂದು ತೋರುತ್ತದೆ. ಈಗ

ನಿಮ್ಮಂತಹ ಅಪರಿಪಕ್ವ ಅನುಭವಿಗಳು ಹುಟ್ಟಿದ್ದರಿಂದ ಈಗ ಹೇಳಬೇಕಾದ ಪ್ರಸಂಗ ಒದಗಿತು ಒಳ್ಳೆಯದೆ.

ನಿಮ್ಮ ಅಭಿಪ್ರಾಯದಲ್ಲಿ ನೀವು ಜ್ಞಾನಕ್ರಿಯೆಗಳೆರಡೂ ಏಕಕಾಲದಲ್ಲಿ ಹುಟ್ಟಿಡಗುವದೆ ''ಕ್ರಿಯಾಜ್ಞಾನ ಸಮುಚ್ಚಯ"ವೆಂದು ತಿಳಿದುಕೊಂಡಿರುವಿರಿ. ಈ ತಿಳವಳಿಕೆಯನ್ನು ಯಾವ ಭಾಷೆಯಲ್ಲಿ ಯಾವ ಅನುಭವಿಗಳಲ್ಲಿ ಯಾವ ಮತದಲ್ಲಿ ತಿಳಿದುಕೊಂಡಿರುವಿರೊ ತಿಳಿಯದು. ಕ್ರಿಯಾಜ್ಞಾನ ಸಮುಚ್ಚಯವೆಂದರೆ ನೀವು ಹೇಳುವಂತೆ ಜ್ಞಾನ ಹುಟ್ಟುವದರೊಳಗಾಗಿಯೆ ಕ್ರಿಯೆ ಮಾಗಿಯಬೇಕೆಂದಲ್ಲ ಅದು ಸೃಷ್ಟಿಯ ನಿಯಮವೂ ಅಲ್ಲ. ಜ್ಞಾನ ಹುಟ್ಟುವುದು ಒಂದು ಕಾಲ ಕ್ರಿಯೆಗ ತೊಡಗುವುದು ಮತ್ತೊಂದು ಕಾಲ. ಈ ಅಂತರವು ಬಹುಕಾಲವಿರಬಹುದು ಇಲ್ಲವೆ ತುಸುಕಾಲವಿರಬಹುದು. ಅಥವಾ ತಕ್ಷಣವೇ ಇರಬಹುದು. ಇದು ಸೃಷ್ಟಿಯ ನಿಯಮವು. ಮತ್ತು ವೀರಶೈವರ ಸಾರಸಿದ್ಧಾಂತ ಕ್ರಿಯಾಜ್ಞಾನ ಸಮುಚ್ಚಯದ ಗುಟ್ಟೇನೆಂದರೆ— ಕೇವಲ ಕ್ರಿಯೆಯನ್ನೇ ಹೇಳದಿರುವುದು, ಕೇವಲ ಜ್ಞಾನವನ್ನೇ ಪ್ರತಿಪಾದಿಸದಿರುವುದು. ದ್ವೈತಿಗಳು ಕೇವಲ ಕರ್ಮವನ್ನೇ ಅನುಸರಿಸುತ್ತಾರೆ ಅದು ವೀರಶೈವರಿಗೆ ಸಮ್ಮತವಲ್ಲ. ಅದ್ವೈತಿಗಳು ಕೇವಲ ಜ್ಞಾನವನ್ನೇ ಸಮರ್ಥಿಸುತ್ತಾರೆ ಅದು ವೀರಶೈವರಿಗೆ ಒಪ್ಪಿಗೆಯಲ್ಲ. ಒಂದಾದನಂತರ ಒಂದು ಹುಟ್ಟಿದರೂ ಪರವಾ ಇಲ್ಲ, ಅವೆರಡೂ ಬೇಕೆಂದು ಹೇಳುವುದೆ ಕ್ರಿಯಾಜ್ಞಾನ ಸಮುಚ್ಚಯದ ತಾತ್ಪರ್ಯ. ದ್ವೈತಾದ್ವೈತವೆಂದು ಹೇಳಿದಾಕ್ಷಣವೆ ಕ್ರಿಯಾಜ್ಞಾನ ಸಮುಚ್ಚಯಕ್ಕೆ ಯಾವ ಬಾಧಕವಿಲ್ಲ. ಅಲ್ಲದೆ ದ್ವೈತಾದ್ವೈತವನ್ನೊಳಕೊಂಡಿರುವುದೆ ಕ್ರಿಯಾಜ್ಞಾನ ಸಮುಚ್ಚಯದ ಮುಖ್ಯ ಧರ್ಮ. ಒಬ್ಬರ ತಲೆಯಲ್ಲಿ ಒಂದು ವಿಚಾರ ಮೊದಲು ಹೊಳೆದಾಗ ಅದು ಕ್ರಿಯೆಗೆ ಭಿನ್ನವಾಗಿ ದ್ವೈತವಾಗಿಯೆ ಇರುತ್ತದೆ. ಆಮೇಲೆ ಕ್ರಿಯೆಯಲ್ಲಿ ತೊಡಗಿದಾಗ ಅಥವಾ ಕ್ರಿಯಾ ಪೂರ್ತಿಯಾದಾಗ ಅದು ಎರಡು ಒಂದಾಗಿ ಅದ್ವೈತವಾಗುತ್ತದೆ. ಹಾಗೆ ಅಧ್ಯಾತ್ಮದಲ್ಲಿ ಮೊದಲು ಅಂಗನು ಕ್ರಿಯೆಯಲ್ಲಿರುವಾಗ ದ್ವೈತಿಯಾಗಿ ಜ್ಞಾನೋದಯವಾದಾಗ ಅದ್ವೈತದಲ್ಲಿರುತ್ತಾನೆ. ಇದು ವೀರಶೈವರ ಸತ್ಯದ ಆಚರಣೆ. ಆ ಆಚರಣೆಯಿಂದ ಹುಟ್ಟಿದ ಅನುಭವ. ಈ ವಿಚಾರದಲ್ಲಿ ವೀರಶೈವ ಶಾಸ್ತ್ರವೂ ಕೂಡ ಹೀಗೆ ಹೇಳುತ್ತದೆ.

ಆತ್ಮೈಕತ್ವಾನು ಸಂಧಾನಂ ಜ್ಞಾನಮಿತ್ಯುಚ್ಯತೇ ಬುಧೈಃ ”

ಸಿದ್ಧಾಂತಶಿಖಾಮಣಿಯು ಜ್ಞಾನಪ್ರಕಾಶನ ಸ್ಥಲದಲ್ಲಿ ಈ ಸೂತ್ರವಿದೆ. ಕ್ರಿಯಾಚರಣೆಯಲ್ಲಿ ದ್ವೈತವಾದುದನ್ನೇ ಏಕತ್ವ ಮಾಡುವುದು ಜ್ಞಾನವೆಂದು ಸ್ಪಷ್ಟವಾಗಿ ಹೇಳಿದೆ. ಜ್ಞಾನೋದಯವೇ ದೀಕ್ಷೆ. ದೀಕ್ಷೆಯೇ ಅದ್ವೈತ ಏಕತ್ವವು ಜ್ಞಾನದ ಲಕ್ಷಣವೆಂದಾಗ ದ್ವೈತವು ಕ್ರಿಯೆದ ಲಕ್ಷಣವಲ್ಲವೇ ? ಇದಲ್ಲದೆ ಏಕೋತ್ತರ ಶತಸ್ಥಲದ ಸ್ಥಳಕಟ್ಟವೂ ಸಹ ಇದನ್ನೇ ಪ್ರತಿಪಾದಿಸುತ್ತದೆ ಅವರಲ್ಲಿ ಕ್ರಿಯಾಪ್ರಕಾಶನಸ್ಥಲ, ಭಾವಪ್ರಕಾಶನಸ್ಥಲ, ಜ್ಞಾನಪ್ರಕಾಶನಸ್ಥಳ ಎಂದು ಬೇರೆ ಬೇರೆಯಾಗಿಯೇ ಹೇಳಿದೆಯೇ ಹೊರತು ಕ್ರಿಯಾಜ್ಞಾನ ಪ್ರಕಾಶನಸ್ಥಲವೆಂದು ಒಮ್ಮೆಯೇ ಒಂದೇ ಸ್ಥಲವಮಾಡಿ ಹೇಳಿಲ್ಲ. ಇದರಿಂದಲೂ ಕ್ರಿಯಾಜ್ಞಾನಸಮುಚ್ಚಯವು ದ್ವೈತಾದ್ವೈತವನ್ನೊಳಕೊಂಡಿದೆಯೆಂತಲೇ ಸಿದ್ಧವಾಗುತ್ತದೆ. ಈ ಕಾರಣದಿಂದ ಈ ಮತಕ್ಕೆ ದ್ವೈತಾದ್ವೈತ ಮತವೆಂದು ಹೆಸರುಬಂದಿದೆ. ಈ ವಿಷಯದಲ್ಲಿ ಎಳ್ಳಷ್ಟೂ ಅನುಭವವಿಲ್ಲದೆ ಮತಸಿದ್ಧಾಂತವನ್ನೇ ಬುಡಮೇಲು ಮಾಡಹೋದಟ ನಿಮ್ಮ ಬರಹಕ್ಕೆ ಅಳಬೇಕೋ ನಗಬೇಕೋ ತಿಳಿಯದಾಗಿದೆ. ಯಾರದು ತಪ್ಪು ತಿಳುವಳಿಕೆ ಯಾರದು ಸಹಜ ತಿಳುವಳಿಕೆಯೆಂಬುದನ್ನು ಇನ್ನಾದರೂ ಯೋಚಿಸುವಿರಾ ?

ನಂಜಪ್ಪನವರುಃ— ಬಸವ, ಪ್ರಭು ಮುಂತಾದವರು ದೀಕ್ಷಾಪೂರ್ವಕ ಲಿಂಗಧಾರಿಗಳಾದವರು ಪುನಃ ವೀರಶೈವ ದೀಕ್ಷೆಯನ್ನು ಪಡೆದುದು ಎಲ್ಲಿಯೂ ಕಾಣುವದಿಲ್ಲ. ಪಡೆದಿರುವರೆಂದು ಸಿದ್ಧಮಾಡಲು ಜ. ನಿಡುಮಾಮಿಡಿ ಮಠದ ಗುರುಮೂರ್ತಿದೇವರು ಮುಂದೆ ಬರುವರೆಂದು ನಂಬೋಣವೇ ? ಎಂದು ಆಹ್ವಾನವಿತ್ತಿದ್ದಾರೆ.

## ಎತ್ತುವೆ ಮುಂದಿಗೆಯು.

“ಕೈಯಲಿ ಆಗದ ಮೂಳ ಮೈಯೆಲ್ಲ ಹರಕೊಂಡಿತು. ” ಎಂಬ ನಾಣ್ಣುಡಿಯಂತೆ ನಂಜಪ್ಪನವರು ಸರಿಯಾದ ರೀತಿಯಲ್ಲಿ ಉತ್ತರಿಸಲು ಬಾರದೆ, ಬರೆದುದನ್ನು ತಿಳಿದುಕೊಳ್ಳುವ ಶಕ್ತಿಯು ಸಾಲದೆ ತಪ್ಪು ತಪ್ಪಾದ ಕಲ್ಪನೆಗಳನ್ನು ಮಾಡಿಕೊಂಡು ಉತ್ತರ ಬರೆಯತೊಡಗಿದ್ದಾರೆ. ಏನೆಂದರೆ— ದೀಕ್ಷಾಪೂರ್ವಕ ಲಿಂಗಧಾರಿಗಳಾದವರಿಗೆ ಪುನಃ ದೀಕ್ಷೆ

ಯಾಗಬೇಕೆಂದು ಯಾರು ಪ್ರತಿಪಾದಿಸುವರೋ ತಿಳಿಯದು. ಶ್ರೀಗುರುಮೂರ್ತಿದೇವರ ಲೇಖನದಲ್ಲಿ ಆ ಅಭಿಪ್ರಾಯವೇ ಇಲ್ಲ. ಅವರು ಹೇಳುವುದು ಜನನಕಾಲದಲ್ಲಿ ದೀಕ್ಷೆಯನ್ನು ಮಾಡಲು ಸಾಧ್ಯವಿಲ್ಲವೆ ಇದ್ದುದರಿಂದ ಆಗ ಬರಿ ಲಿಂಗಧಾರಣ ಮಾಡಿ ಎಂಟು ವರುಷ ಕಳೆದನ ತರ ದೀಕ್ಷೆ ಮಾಡಬೇಕೆಂದು ಇದನ್ನು ಬಿಟ್ಟು ಇಲ್ಲದ್ದನ್ನು ಕಲ್ಪಿಸಿ ಬರೆದರೆ ಏನು ಪ್ರಯೋಜನ? ಯಾವ ಸೌಜನ್ಯ? ಬಸವ, ಪ್ರಭು ಮುಂತಾದವರು ಶೈವದಿಂದ ವೀರಶೈವ ಮತ ಸ್ವೀಕಾರಮಾಡಿರುವುದರಿಂದ ಮತ್ತು ೧೫—೧೬ ನೆಯ ತಕ್ಕ ವಯಸ್ಸಿನವರಾಗಿ ಜ್ಞಾನಿಗಳಾಗಿ ದೀಕ್ಷೆ ಧಾರಣಗಳನ್ನು ಹೊಂದಿರುವದರಿಂದ ಈ ಪ್ರಸಕ್ತಿಯು ಅವರಿಗಿಲ್ಲ ಇವರಿಬ್ಬರು ವಯಸ್ಸಾಗಿ ದೀಕ್ಷಿತರಾದುದಕ್ಕೆ ಹರಿಹರನ ರಗಳೆಗಳೇ ಪ್ರಮಾಣ. ಮತ್ತು ಅದೇ ನವೆಂಬರ ಸಂಚಿಕೆಯಲ್ಲಿ ಬಂದ ಶ್ರೀಮಾನ್ ರಾವ್ ಬಹದ್ದೂರ್ ಹಳಕಟ್ಟಿಯವರ ಬಸವೇಶ್ವರನ ಚರಿತ್ರೆಯಲ್ಲಿಯೂ ವಿವರವಾಗಿದೆ. ಇಳುಹುವಿರಾ?

ಇನ್ನೊಂದು ವಿಷಯಃ— ಶ್ರೀಗುರುಮೂರ್ತಿದೇವರು ಪ್ರಸ್ತುತವಾದ ದೀಕ್ಷಾ ವಾದದಲ್ಲಿಯೇ ಇರುವ ದ್ವೇಷ ವಾದವನ್ನು ಎತ್ತಿ ತೋರಿದರೆ ಅದು ನಂಜಪ್ಪನವರಿಗೆ ಲಘು ಬುದ್ಧಿಯಂತೆ "ಕಂಡುದನ್ನಾಡಿದರೆ ಕೆಂಡದಂಥ ಕೋಪ, ಇವರಿಗೆ ಇವರು ಹೇಳಿದ್ದೆಲ್ಲ ವೇದವೆಂದು ತಲೆಹಾಕುತ್ತ ಸುಮ್ಮನಿದ್ದರೆ ಅಥವಾ ವಾದದಲ್ಲಿರುವುದನ್ನು ಬಿಟ್ಟು ಇಲ್ಲದ್ದನ್ನು ಎತ್ತಿದರೆ "ಗೇನಾದರೂ ಇವರು ಮಹಾಬುದ್ಧಿಯೆಂದು ಕರೆಯುವರೋ ಏನೋ? ಹಾಗೆ ಕರೆಯುವದಾದರೆ ಆ ಮಹಾ-ಬುದ್ಧಿಯು ಅವರಿಗೇನೇ ಇರಲಿ. ಹೀಗೆಲ್ಲ ಮಾಡುವುದು ನಂಜಪ್ಪನವರ ಅತಿಬುದ್ಧಿಯ ನಿದರ್ಶನವಲ್ಲವೇ?

ನಮ್ಮ ಲೇಖನಲ್ಲಿ ಯಾರಿಗೂ ಕಾಣದ 'ಜಂಗಮ' ನಿಂದೆಯು ಈ ಗುರುಮೂರ್ತಿಗಳ ನೇತ್ರಕ್ಕೆ ಹೇಗೆ ಕಂಡಿತೋ ಕಾಣೆವು. ಎಂದು ನಂಜಪ್ಪನವರ ಬರೆವಣಿಗೆ. ಮೇ — ಜೂನ ತಿಂಗಳ ಶಿವಾನುಭವ ಸಂಚಿಕೆಯ ನಿಮ್ಮ ದೀಕ್ಷಾವಾದದಲ್ಲಿ—ಭಿಕ್ಷುಕರ ತಂಡ, ಉಪಟಳ, ಉಪದ್ರವ, ಸ್ವಾರ್ಥಿ ಮುಂತಾದ ಶಬ್ದಗಳು ಯಾರನ್ನು ಕುರಿತು? ಮತ್ತು ಜನ್ಮಲಿಂಗಧಾರಿಗಳಾದ ವೀರಶೈವರಿಗೆ ಪುನರ್ದೀಕ್ಷೆಯನ್ನು ಮಾಡಿಸದೆ

ಇರುವ ಉತ್ತಮ ಜಂಗಮರು (ನಿಮ್ಮ ದೃಷ್ಟಿಯಲ್ಲಿ ಮಾತ್ರ) ಯಾರಿರುವರೆಂಬುದನ್ನು ಹೆಸರು ಸಹಿತ ಪ್ರಕಟಿಸುವಿರಾ?

ಜಂಗಮರ ವೇಷವನ್ನು ಧರಿಸಿಕೊಂಡು 'ಮಂಗನ' ಆಟವನ್ನು ಆಡುವವರನ್ನು ಮಾತ್ರ ನಮ್ಮ ಲೇಖನಿಯು ಜನತೆಯ ಕಣ್ಣಿಗೆ ಕಾಣುವಂತೆ ಮಾಡುತ್ತದೆ. ಎಂದು ಒರೆದಿದ್ದೀರಿ ಇಲ್ಲಿಯ ವರೆಗೂ ಅದೆಷ್ಟು ಮಂದಿಯ ಹೆಸರುಗಳನ್ನು ಪ್ರಕಟಿಸಿರುವಿರಿ ಪಟ್ಟಿಯನ್ನು ಕೊಡುವಿರಾ? ಭಕ್ತವೇಷವನ್ನು ತೊಟ್ಟು ಯುಕ್ತಿಗೆಟ್ಟು ಕುಣಿಯುತ್ತಿರುವವರ ವಿಚಾರಗಳನ್ನೇಕೆ ಪ್ರಕಾಶಕ್ಕೆ ತರುವದಿಲ್ಲ? ಶಿವಶರಣರು ಭಕ್ತ-ಜಂಗಮ ಇಬ್ಬರ ಹಲವು ಕೊರತೆಗಳನ್ನು ಕೆಲವು ವಚನಗಳಲ್ಲಿ ಚಿತ್ರಿಸಿಲ್ಲವೇ? ಆ ಸಮತಾವಾದವು ನಿಮ್ಮಲ್ಲಿಲ್ಲಯೇ? ಜಂಗಮರನ್ನು ಮಾತ್ರ 'ಹಳಿಯುವ ನಿಮ್ಮ ಈ ಕೀಳು ಬುದ್ಧಿಗೇನೆ ಭೇದಭಾವವಿದೆಯೆಂದೇ ಸಿದ್ಧವಾಗುವದಿಲ್ಲವೇ?

ನಿಮ್ಮ ಸಮಾಜಕೋನ್ನತಿಯ ಪ್ರೇಮವು, ನೀವೆ ಅಹಂಮನ್ಯತೆಯಿಂದ ಹೇಳಿಕೊಂಡಂತೆ ಸಮಾಜದ ಮೌಢ್ಯತೆಯನ್ನೂ ವಿಲಾಸಿಗಳ ಡಾಂಭಿಕತನವನ್ನೂ ಸುಡುವ ಕಾಳ್ಗಿಚ್ಚಲ್ಲ; ಸುಳ್ಳು ಸಮಾಚಾರಗಳನ್ನು ಜೊಳ್ಳು ವಿಚಾರಗಳನ್ನೂ ಒರೆದು ಶ್ರೀ ಜ. ನಿ ಗುರುಮೂರ್ತಿಸ್ವಾಮಿಗಳು ಹೇಳುವಂತೆ ಸಮಾಜವನ್ನೇ ಸುಡುವ ಕಾಳ್ಗಿಚ್ಚವೇ ನಿಜ.

ನಂಜಪ್ಪನವರು— ಶ್ರೀಗುರುಮೂರ್ತಿಗಳು, ಜಂಗಮರು ಎಂಬುದೆ ಒಂದು ಬೇರೆ ಜಾತಿ ಎಂದೂ ಲಿಂಗಾಯಿತರಲ್ಲಿಯ ಅದೊಂದು ಜನ್ಮತಃ ಶ್ರೇಷ್ಠವಾದ ಗುಂಪೆಂದೂ ಅರ್ಥಬರುವಂತೆ ಬರೆದಿದ್ದಾರೆ. ಎಂದು ಇಲ್ಲದ ಊಹೆಯ ಕಂತೆಯನ್ನೆಬ್ಬಿಸಿದ್ದಾರೆ. ನ್ಯಾಯವಾಗಿ ನೋಡಿದರೆ ಶ್ರೀ. ಜ. ನಿ. ಗುರುಮೂರ್ತಿಗಳ ಲೇಖನದಲ್ಲಿ ಜಾತಿತ್ವವಾದವೂ ಜನ್ಮತಃ ಶ್ರೇಷ್ಠತ್ವವಾದವೂ ಎಳ್ಳಷ್ಟೂ ಇಲ್ಲ ಅಷ್ಟೇ ಅಲ್ಲ ಶ್ರೀಗುರುಮೂರ್ತಿಸ್ವಾಮಿಗಳನ್ನು ನಾನು ಸ್ವತಃ ವಿಚಾರಿಸಿದಲ್ಲಿ ಇಡೀ ವೀರಶೈವ ಮತಕ್ಕೇನೇ ಅವರು ಜಾತಿತ್ವವನ್ನು ಒಪ್ಪುವದಿಲ್ಲ. ಇನ್ನು ಅದರಲ್ಲಿ ಅಂತರ್ಗತವಾದ ಜಂಗಮ ವರ್ಗಕ್ಕೆ ಜಾತಿತ್ವವನ್ನು ಒಪ್ಪುವರೇ? ಜನ್ಮತಃ ಶ್ರೇಷ್ಠತ್ವವಾದವಂತೂ ಅವರ ಕನಸಿನಲ್ಲಿಯೂ ಸಹ ಕಾಣಲಾರೆವು.

ಹೀಗಿದ್ದರೂ ನಂಜಪ್ಪನವರು ಸುಳ್ಳು ಕಲ್ಪನೆಗಳನ್ನು ಕಲ್ಪಿಸಿ ಜೊಳ್ಳು ಉತ್ತರಗಳನ್ನು ಉತ್ತರಿಸುತ್ತಿರುವುದು ವಿಷಾದಜನಕವಾಗಿದೆ.

ಇನ್ನು ಶ್ರೀ ಜ. ನಿ. ಗುರುಮೂರ್ತಿದೇವರ ಲೇಖನದಲ್ಲಿ ಈ ವಿಷಯವನ್ನು ಓದುವಾಗ ಭಕ್ತ, ಜಂಗಮ ಎಂಬುದಾಗಿ ವರ್ಗೀಕರಣವು ಅವರ ಅಭಿಪ್ರಾಯದಲ್ಲಿ ಇದ್ದಂತೆ ತೋರುತ್ತದೆ. ಇದು ಇರಬೇಕಾದುದೂ ಸಹಜ. ವರ್ಗೀಕರಣದಲ್ಲಿ ಭಕ್ತರು ಭಕ್ತರಾಗಿಯೇ, ಜಂಗಮರು ಜಂಗಮರಾಗಿಯೇ ಇರಬೇಕೆಂಬ ನಿಯಮವಿಲ್ಲ. ನ್ಯಾಯವಾಗಿಯೂ ವಿದ್ಯೆಗೆ ವರ್ಗವಿಲ್ಲದಿದ್ದರೂ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ವಿದ್ಯೆಯನ್ನು ವರ್ಗೀಕರಿಸಿರುವಂತೆ, ವೀರಶೈವರಲ್ಲಿ ವೀರಶೈವ ತತ್ವಕ್ಕೆ ವರ್ಗವಿಲ್ಲದಿದ್ದರೂ ವ್ಯಕ್ತಿಗಳ ಮತ್ತು ಸಾಮಾಜಿಕ ವ್ಯವಹಾರಗಳ ಸೌಕರ್ಯಕ್ಕಾಗಿ ವರ್ಗೀಕರಣವು ಅನಿವಾರ್ಯವಾಗಿದೆ ಈ ವಿಚಾರದಲ್ಲಿ ಭಾವ್ಯ ತತ್ವವನ್ನು ಬಾಹ್ಯ ಬಳಕೆಗೆ ತರಲೆತ್ನಿಸುವುದು ತುಂಬಾ ಘಾತಕವಾದುದಾಗಿದೆ. ಈ ವಿಷಯದಲ್ಲಿ ನಂಜಪ್ಪನವರು:—

"ಬಸವಬಾರಯ್ಯ!... ಮರ್ತ್ಯದೊಳಗೆ ಭಕ್ತರಾರುಂಟು?
ನಾನೊಬ್ಬನೆ ಭಕ್ತ. ಮರ್ತ್ಯದೊಳಗಣ ಉಳಿದ ಭಕ್ತರೆಲ್ಲರೂ
ಜಂಗಮ...."

ಹೀಗೆ ಒಬ್ಬ ಲಿಂಗಾಯತನು ಉಳಿದ ಲಿಂಗಾಯತರೆಲ್ಲರನ್ನೂ ಜಂಗಮವೆಂದೇ ಭಾವಿಸಿ ವ್ಯವಹರಿಸಬೇಕೆಂದು ಜಂಗಮಕ್ಕೆ ಜೀವವಿತ್ತ ಆ ಮಹಾನುಭಾವರೇ ನಿರೂಪಿಸಿರುವಾಗ ಎಂದು ಮಂತವಾಗಿ ಕೋಲ ವಿಚಾರವಿಲ್ಲದೆ ಬರೆದಿದ್ದಾರೆ.

ಈ ವಚನವು ಬಸವಣ್ಣನವರ ಮೇರೆ ಮೀರಿದ ಭಕ್ತಿಭಾವವನ್ನು ಹೊರಸೂಸುತ್ತದೆಯೇ ಹೊರತು ನಂಜಪ್ಪನವರು ಕೆಳಗೆ ಲಂಬಿಸಿ ಬರೆದ ಅರ್ಥವನ್ನು ವ್ಯಕ್ತಪಡಿಸುವದಿಲ್ಲ. ಒಬ್ಬ ಲಿಂಗಾಯತನು ಉಳಿದ ಲಿಂಗಾಯತರೆಲ್ಲರನ್ನೂ ಜಂಗಮರನ್ನಾಗಿ ಭಾವಿಸಬೇಕೆನ್ನುವುದು ನ್ಯಾಯವೇ ಹೊರತು ಯಾವೊಂದು ಸಂಸ್ಕಾರವಿಲ್ಲದೆ ವ್ಯವಹರಿಸಬೇಕೆಂಬುದು ಸಮಾಜದ ಕಟ್ಟು ಕೀಲುಗಳನ್ನೇ 'ಕಿತ್ತುಹಾಕಿದಂತೆ ತತ್ವಕ್ಕೇನೇ ದ್ರೋಹ ಬಗೆದಂತೆ ಭವಿ-ಭಕ್ತನೆಂಬ ವರ್ಗೀಕರಣವು ಹೇಗೆ ಜಾತಿ-ಜನ್ಮ ಸಂಬಂಧ

ವಾದುದಲ್ಲವೋ ಹಾಗೆ ಭಕ್ತ-ಜಂಗಮವೆಂಬವು ಜಾತಿಜನ್ಮಸಂಬಂಧವಾದವಲ್ಲ. ಆದರೂ ಭವಿಯು ಎಷ್ಟೇ ಪರಿಶುದ್ಧನಾಗಿದ್ದರೂ ಸಂಸ್ಕಾರವಿಲ್ಲದೆ ಹೇಗೆ ಭಕ್ತನೆಂದೆನಿಸನೋ ವಿದ್ಯಾರ್ಥಿಯು ಎಷ್ಟೇ ಬುದ್ಧಿವಂತನಾದರೂ ಪರೀಕ್ಷೆಯಿಲ್ಲದೆ ಮುಂದಿನ ವರ್ಗಕ್ಕೆ ಹೇಗೆ ಹೋಗನೋ ಹಾಗೆ ಭಕ್ತನು ಒಂದು ಸಂಸ್ಕಾರದಿಂದ ಜಂಗಮನಾದರೆ ವ್ಯವಹರಿಸಲು ಅಡ್ಡಿಯಿಲ್ಲ. ಅದಿಲ್ಲದಿದ್ದರೆ ಆ ಭಕ್ತನನ್ನು ಒಸವಣ್ಣನವರು ಮೇಲಿನ ವಚನದಲ್ಲಿ ಹೇಳಿರುವಂತೆ ಜಂಗಮವೆಂದು ಬರಿಭಾವಿಸಬೇಕೇ ಹೊರ್ತು ನಂಜಪ್ಪನವರು ಹೇಳುವಂತೆ ವ್ಯವಹರಿಸಲು ಬಾರದು. "ಬಳಸದಿರ ದ್ವೈತವನು ಬಾಹ್ಯದಲ್ಲಿ ನೀನೊಳಗೇಕೋ ಭಾವನೆಯೊಡಗೂಡೋ" ಎಂಬ ನಿಜಗುಣರ ನ್ಯಾಯೋಕ್ತಿಯನ್ನಾದರೂ ನಂಜಪ್ಪನವರು ನೆನೆದು ನೆಮ್ಮದಿಗೊಳ್ಳುವರೇ ?

ನಂಜಪ್ಪನವರು ಹೇಳುವಂತೆ ವೀರಶೈವರೆಲ್ಲರೂ ತಮ್ಮ ಜೀವಿತ ಕಾಲದಲ್ಲಿ ಷಟ್‌ಸ್ಥಲಗಳನ್ನು ಆಚರಿಸುವುದೇನೋ ನಿಜ. ಆದರೆ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂದು ಒಂದೆಸಲ ಹೇಳಿದ್ದರೆ ಸಾಕಾಗಿತ್ತು. ಹಾಗಿಲ್ಲದೆ ಭಕ್ತನ ಭಕ್ತ, ಭಕ್ತನ ಮಹೇಶ, ಹೀಗೆ ಒಂದೊಂದರಲ್ಲಿಯೂ ಮತ್ತೆ ಆರಾರಾಗಿ ವಿಂಗಡಿಸಿರುವ ಗುಟ್ಟೇನೆಂಬುದು ನಂಜಪ್ಪನವರ ಒಳನೇತ್ರಕ್ಕೆ ಒಳಕೊಂಡಿಲ್ಲವೇ ?

ಭಕ್ತರು ಮಠಕ್ಕೆ ಬಂದಾಗ ಅವರನ್ನು ಮಠಾಧಿಪತಿಗಳು ಜಂಗಮವೆಂದು ಭಾವಿಸುವದೇನೋ ನಿಜ. ಆದರೆ ಎಲ್ಲ ಕ್ರಿಯೆಗಳಲ್ಲಿಯೂ ಬಳಸುವದಿಲ್ಲವೆಂಬುದನ್ನು ನಂಜಪ್ಪನವರು ತಿಳಿಯರೇ? ನಂಜಪ್ಪನವರು ಎಷ್ಟು ಮಠಗಳಿಗೆ ಹೋಗಿ ತಮ್ಮ ಪೂಜೆಯನ್ನು ಮಾಡಿಸಿಕೊಂಡಿರುವರೋ ನಾವು ಬೇರೆ ಕಾಣೆವು. ಮಾಡಿಸಿಕೊಳ್ಳುವ ಸದಿಚ್ಛೆಯಿದ್ದರೆ ಮೇಲೆ ನಾವು ಹೇಳಿದಂತೆ ಮಾಡಲಿ. ಆವಾಗ ಯಾರು ಬೇಡೆನ್ನುವರು ? ಮಾಹೇಶ್ವರರಿಗೆ ಭಕ್ತಸ್ಥಲವಿದೆ. ಅದು ಮಹೇಶಭಕ್ತಸ್ಥಲವೆಂಬುದನ್ನು ನಂಜಪ್ಪನವರು ಮರೆಯಬಾರದು. ಒಟ್ಟಿನಲ್ಲಿ ನಂಜಪ್ಪನವರಿಗೆ ನಾವೆಲ್ಲಿ ಜಂಗಮರಾಗದೆಯೇ ಹೋಗುತ್ತೆವೆಯೋ ಎಂಬ ಭಯ ವಿಪರೀತವಾಗಿದೆ. ಹಾಗೆ ಅವರೇನೂ ಭಯಪಡಬೇಕಾಗಿಲ್ಲ. ಜಾತಿ ಅಥವಾ ಜನ್ಮ ಜಂಗಮವನ್ನು ನಾವೂ ಹೇಳುವದಿಲ್ಲ. ಅದೊಂದು

ವರ್ಗವೆಂದ ಮೇಲೆ ಆ ವರ್ಗಕ್ಕೆ ನೀವೂ ಬರಬಹುದು. ಆದರೆ ಒಂದು ಕಟ್ಟು ಆವಶ್ಯಕ. ಅದೇ ಸಂಸ್ಕಾರ. ಆ ಸಂಸ್ಕಾರದಿಂದ ಸಂಸ್ಕರಿತರಾಗಿ ನೀವೂ ಸೇರಲು ಇಂದಿಗೂ ಮುಂದಕ್ಕೂ ಯಾರದೂ ಅಭ್ಯಂತರವಿಲ್ಲ. ಇಷ್ಟು ಮಾತ್ರಕ್ಕೇನೆ ಅತಿ ಬುದ್ಧಿಯುಳ್ಳ ಸಾಮಾಜಿಕ ನೇಮ ನಿಬಂಧನೆಗಳನ್ನೆಲ್ಲ ಕಿತ್ತುಹಾಕಿ ಸಮಾಜದಲ್ಲಿ ಸ್ವೈರವೃತ್ತಿಯನ್ನು ಬಿತ್ತಿ ಹತ್ತುವುದು ನಿಮ್ಮಂಥವರಿಗೆ ನ್ಯಾಯುವಾದುದಲ್ಲ. ಸಮಾಜಕ್ಕೆ ಭೂಷಣವಾದುದಲ್ಲ.

ಶ್ರೀ. ನಂಜಪ್ಪನವರುಃ– "ತಮ್ಮನ್ನು ಮಗುವಿನಂತೆ ಸಾಕಿ... ಎಂದು ಮುಂತಾಗಿ ಬರೆಯುತ್ತ ಅದು ತೀರ ಕೃತಘ್ನತನದ ಆಚರಣೆಯಲ್ಲವೇ? ಅಂಥವರನ್ನು ಜಂಗಮರೆನ್ನಬಹುದೇ? ಎಂದು ತಲೆಗೆ ನಂಜೇರಿ ತಿಳಿಗಣ್ಣಿನ ಉಪಯೋಗ ಮಾಡಿಕೊಳ್ಳದೆ, ಯಾರೋ ಒಬ್ಬರು ಬಂದು 'ಗಗನ ಕುಸುಮ' ಎಂದು ಹೇಳಿದರೆ ನಂಜಪ್ಪನವರು ವಿಚಾರಿಸದೆ ಮೂಸಿಸಲು ಮೂಗು ಮುಂದಕ್ಕೆ ಚಾಚಿದ ಅಪಹಾಸ್ಯಕ್ಕೆ ಪಕ್ಕಾಗಿದ್ದಾರೆ. ಈ ಸುಳ್ಳು ಬರಹಕ್ಕೆ ಯಾರು ಗುರಿ? ಕಳಿಸಿದವರಾರು? ಕೇಳಿದವರಾರು? ಕಾಣವಾವುದು? ಇದನ್ನೆಲ್ಲ ಸರಿಯಾಗಿ ಉತ್ತರಿಸಬಲ್ಲರೋ ಮೇಲಾಗಿ ಲೇಖಕರಿಗೂ ಇದಕ್ಕೂ ಯಾವ ಸಂಬಂಧವೂ ಇಲ್ಲವೆಂದು ಕೇಳುತ್ತೇನೆ. ಇಂತಹ ಅಸಂಬಂಧ, ಅಪ್ರಸ್ತುತ, ಅಸತ್ಯ ವಿಷಯುವನ್ನು ಎತ್ತಿ ಅಧಿಕಪ್ರಸಂಗಿಗಳಾಗಿರುವದಲ್ಲದೆ ಇಲ್ಲಿಗೆ ಎರಡನೆಯ ಸುಳ್ಳುಗಾರರೂ ಆಗಿದ್ದಾರೆ. ಇದಕ್ಕೆ ಲಘುಬುದ್ಧಿಯೆನ್ನಬೇಕೋ ಲಘುತರಬುದ್ಧಿಯೆನ್ನಬೇಕೋ?

ತಮ್ಮ ಲಿಂಗಪೂಜೆಗೆ ಮತ್ತೊಬ್ಬರಿಂದ ಮಂತ್ರವನ್ನು ಹೇಳಿಸುವುದೂ ತಾವು ಮಾಡುವ ಉಪದೇಶವನ್ನು ತಮ್ಮ ಆಶ್ರಯದಲ್ಲಿರುವ ಶಾಸ್ತ್ರಿಗಳವರಿಂದ ಮಾಡಿಸುವುದೂ ತಾವು ಬರೆದ ಬರಹಗಳನ್ನು ಧೈರ್ಯವಿಲ್ಲದೆ ಆಶ್ರಯದಲ್ಲಿರುವ ಹುಡುಗರ ಹೆಸರಿನಿಂದ ಪ್ರಕಟಿಸಿರುವುದೂ ಜಂಗಮರೆಂದು ಹೇಳಿಕೊಳ್ಳುವವರ ಮಠಾಧಿಕಾರಿಗಳ ಲಕ್ಷಣವೇನು ಎಂದು ಪಿತ್ಥ ತಲೆಗೇರಿದವರಂತೆ ಎಲ್ಲದನ್ನೂ ಸುಳ್ಳಾಗಿ ಬರೆದಿದ್ದಾರೆ. ಸುಳ್ಳಿಗೆ ಒಂದು ಎಲ್ಲೆ ಬೇಡವೇ? ಅನಾವಶ್ಯಕವಾದ ಸುಳ್ಳುಗಳಲ್ಲಿಯೋ ಇವರ ವಾಣಿಗೆ ನಿರ್ಬಂಧವಿಲ್ಲದಿರುವಾಗ ಅವಶ್ಯಕವಿರುವಲ್ಲಿ ಅದೆಷ್ಟು

ಸರಸುಳ್ಳನ್ನು ನುಡಿಯುತ್ತಾರೆಯೋ ದೇವರಿಗೆಗೊತ್ತು 'ಹುಸಿಯ ನುಡಿಯಲು ಬೇಡ.' 'ಸತ್ಯವ ನುಡಿವುದೆ ಸ್ವರ್ಗಲೋಕ' "ಹಲವೆಲವಿದ್ದ ಬಾಯಲ್ಲಿ ಅಲ್ಲದುದ ನುಡಿದರೆ ಆ ಬಾಯಿ ಆ ಹೊಲೆಯರ ಬಾಯಿಗಿಂತ ಕರಕಷ್ಟ ಕಾಣಾ ರಾಮನಾಥಾ" ಇತ್ಯಾದಿ ಶಿವಶರಣರ ಹಿತೋಕ್ತಿಗಳನ್ನು ನಂಜಪ್ಪನವರು ನೋಡಿರುವರೇ? ಈ ಸುಳ್ಳುಗಳಿಂದ ನಿಮಗೆ ಅನರ್ಥವಿದೆಯೋ ಹೊರತು ನೀವು ಯಾರನ್ನು ಗುರಿಯಿಟ್ಟು ಬರೆದಿರುವಿರೋ, ಅವರಿಗೇನೂ ಬಾಧಕವಿಲ್ಲ. ಅವರು ಆ ರೀತಿ ಮಾಡುತ್ತಿದ್ದರಲ್ಲಿ ನೇ ಬಾಧಕವಾಗುವುದು? ಇಲ್ಲಿಗೆ ಐದು ಸುಳ್ಳುಗಳಾದವು. ಪಿರ್ತೀರಿದವರಿಗೆ ಐದಾದರೇನು? ಐನೂರಾದರೇನು? ಸುಳ್ಳು ಛಿದ್ರಗಳನ್ನು ಎಣಿಸುವ ಕ್ಷುದ್ರಬುದ್ಧಿಯುವರಿಗೆ ಐದು ಸಾವಿರಾದರೇನು?

"ಗುರುವಾದಡೂ ಕಾಯಕದಿಂದಲೇ ಮುಕ್ತಿ. ಜಂಗಮವಾದಡೂ ಕಾಯಕದಿಂದಲೇ ಮುಕ್ತಿ..." ಎಂಬ ವಚನವನ್ನು ಸಂಪೂರ್ಣವಾಗಿ ಎತ್ತಿ ಉದಹರಿಸುವರೇ? ಲಕ್ಷದ ಮೇಲೆ ತೊಂಭತ್ತಾರು ಗಣಂಗಳಲ್ಲಿ ಜಂಗಮದಾಸೋಹವನ್ನೆಸಗಿದವರ ನಾಲ್ಕಾರು ಹೆಸರುಗಳನ್ನು ನಂಜಪ್ಪನವರೇ ಪ್ರಕಟಿಸುವರೋ. ಇಲ್ಲದ್ದು ಇದೆಯೆಂದರೆ ಪಾಪಲ್ಲವೇ? ನಿಮಗೆ ನಾಚಿಕೆಯಿದ್ದರೆ ಸರಿಯಾಗಿ ಸಿದ್ಧಮಾಡದೆ ಹೀಗೆ ಗಾಳಿಗಂಟಿನ ಉತ್ತರ ಬರೆಯುತ್ತಿದ್ದೀರಾ?

"ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ನೀಸಾಕ್ಷಿಯಾಗಿ ಛೀ ಎಂಬೆ ಕೂಡಲಸಂಗಮದೇವ" ಎಂಬ ವಚನವನ್ನು ಉದಹರಿಸಿದ ನಂಜಪ್ಪನವರಾದರೂ "ವೇಷವ ಕಂಡು ನಮಸ್ಕರಿಸುವೆ. ಅವರಂತರಂಗವ ನೀನೇ ಬಲ್ಲಿರಿ ತೊತ್ತಿಂಗೆ ತೊತ್ತು ಗೆಲಸವಲ್ಲದೆ ಅರಸರ ಸುದ್ದಿ ನಮಗೇಕಯ್ಯ?... " ಎಂಬ ಬಸವಣ್ಣನ ಭಕ್ತಿಯ ಒರೆಗಲ್ಲಾದ ವಚನವನ್ನೇಕೆ ಮರೆತರೋ ನಾವು ಬೇರೆ ಕಾಣೆವು. ಅಥವಾ ಬಸವೇಶ್ವರನಿಗೆ ಇರುವಂತೆ ಕೂಡಲಸಂಗಮದೇವ ಸಾಕ್ಷಿಯಾಗಿ ಛೀ ಅನ್ನುವ ಯೋಗ್ಯತೆ ಅಭಿಜ್ಞತೆ ನಂಜಪ್ಪನವರಿಗಿದೆಯೋ? ಇದೆಯೆಂದರೆ ಬಸವಣ್ಣನವರು ತನ್ನ ಪ್ರತಿವಚನನ್ನು ಸಂಗಮನಾಥನಿಗೆ ಸಮರ್ಪಿಸಿದಂತೆ ನಂಜಪ್ಪನವರು ತಮ್ಮ ಬರಹದ ಒಂದು ಶಬ್ದವನ್ನಾದರೂ ಆತನಿಗೆ ಅರ್ಪಿಸದಿದ್ದರೆ ಹೋಗಲಿ – "...ನಮ್ಮ ಬರೆಹವು ...ಪೂಜ್ಯರಾದ ಗುರುಜಂಗ

ಮರ ಪಾಲಿಗೆ ನಮ್ಮ ಬರೆಹವು ಕುಸುಮಗುಚ್ಛವಾಗಿ ಪರಿಣಮಿಸಿ ಆ ಪೂಜ್ಯರಿಗೂ ತನ್ಮೂಲಕ ಸಮಾಜಕ್ಕೂ ಸುಗಂಧಸೌರಭದ ಸತ್ಫಲವನ್ನು ಪಸರಿಸುತ್ತದೆ. ಎಂದು ನಮ್ಮ ಬರೆಹ ನಮ್ಮ ಬರೆಹ ಎಂದು ದ್ವಿರುಕ್ತಿಯಾಗಿ ಅಹಂಮನ್ಯತೆಯ ಬಿಂಕಿನಿಂದ ಬಿಗಿದುಕೊಂಡಿರುವವರಿಗೆ ಆ ಸಂಗಮನಾಥನ ಸಾಕ್ಷಿಯಾಗಿ ಛೀ ಎನ್ನುವ ಯೋಗ್ಯತೆ ಎಂದಾದರೂ ಬಂದೀತೇ? "ಎನ್ನ ನಡೆಯೊಂದು ಪರಿ. ಎನ್ನ ನುಡಿಯೊಂದು ಪರಿ. ಎನ್ನೊಳಗೇನೂ ಶುದ್ಧವಿಲ್ಲ. ನೋಡಯ್ಯ ಎಂದು ಮೊದಲು ತಮ್ಮ ಹೃದಯವನ್ನು ಬಿಚ್ಚುವ ಆ ಶ್ರೇಷ್ಠ ಮಹಾನುಭಾವನೆಲ್ಲಿ? ನಮ್ಮ ಬರೆಹವೇ ವೇದ ಕುಸುಮಗುಚ್ಛ, ಸತ್ಫಲ ಎಂದು ಜಂಭಕೊಚ್ಚಿಕೊಳ್ಳುವ ಈ ಮಹಾ...ನೆಲ್ಲಿ? ವಾಚಕರೇ ವಿಚಾರಿಸಲಿ.

ಮೊದಲು ತಮ್ಮದನ್ನು ಬಿಚ್ಚಿಯಾಡಿ ಅನಂತರ ಅನ್ಯರದನ್ನು ಬಿಚ್ಚಿಯಾಡಿದರೆ ಅದು ದೊಡ್ಡತನ. ಅದಕ್ಕೆ ಯಾರೂ ಪ್ರತಿವಾದಿಸಲಾರರು. ಆದರೆ ನಿಮ್ಮದನ್ನ ನೀವು ಬಚ್ಚಿಟ್ಟುಕೊಂಡು ಇನ್ನೊಬ್ಬರದನ್ನು ಬಿಚ್ಚಿಡಲು ಹೆಣಗುತ್ತಿರುವಿರಿ. ಇದು ನ್ಯಾಯವೇ? ನೀತಿಯೇ? ತನ್ನ ಬಣ್ಣಿಸಬೇಡ. ಇದಿರು ಹಳಿಯಲುಬೇಡ. ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಇದೇ ಸಮಾಜ ಸುಧಾರಿಸುವ ಪರಿ.

ಕಾಯಕ ವಿಚಾರದಲ್ಲಿ ನಂಜಪ್ಪನವರು ಬರೆದಿರುವದೇನೋ ನಿಜ. ಆದರೆ ಅದು ಸತ್ಯ ಶುದ್ಧ ಕಾಯಕವಾಗಬೇಕೆಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಒಳ್ಳೆಯದು.

"ಕೈದುವಿಡಿದಾಡುವರೆಲ್ಲ ಇರಿವರೇ? ಸಾಧನೆಯ ಮಾಡಬಲ್ಲವರೆಲ್ಲರೂ
ಕಾದಬಲ್ಲರೇ? ಅರ್ಥಿಗೆ ಮಾಡಬಲ್ಲ ಕೃತ್ಯವಂತರೆಲ್ಲರು ಭಕ್ತರಪ್ಪರೆ?
ಅದು ಚಂದೇಶ್ವರ ಲಿಂಗಕ್ಕೆ ಮುಟ್ಟದ ಮಾಟ."

ಇದನ್ನು ನಂಜಪ್ಪನವರು ಮನನ ನಿಧಿಧ್ಯಾಸನ ಮಾಡುತ್ತಿರಲಿ

ಬೆಂಗಳೂರು ನಗರ ನಿವಾಸಿಗಳಾದ ನಂಜಪ್ಪನವರು ತಮ್ಮ ಲೇಖನ ಕೊನೆಯಲ್ಲಿ ಉದಹರಿಸಿದ ಪ್ರಭುದೇವರ ವಚನಕ್ಕೆ ಮೊದಲು ಯಾರು ಪಕ್ಕಾಗಿರುವರೆಂಬುದನ್ನು ಅವರೇ ಸರಿಯಾಗಿ ತಿಳಿದುಕೊಂಡು, ಇನ್ನ

ಮುಂದಾದರೂ ಮೊದಲು ಇದಿರ ವಿಚಾರಿಸದೆ ತಮ್ಮಿರವ ವಿಚಾರಿಸಿಕೊಂಡು ತಮ್ಮಲ್ಲಿರುವ ಕೊರತೆಗಳನ್ನು ನಿರ್ಮಲಮನಸ್ಸಿನಿಂದ ಬೈಲಿಗೆಳೆದು ಅನಂತರ ಅನ್ಯರನ್ನು ವಿಚಾರಿಸಬೇಕೆಂದೂ ಇನ್ನೊಬ್ಬರ ಮೇಲೆ ಇಲ್ಲದ ಸಲ್ಲದ ಆರೋಪಣೆಗಳನ್ನು ಮಾಡಿ, ಬರುವ ಬರಹಶಕ್ತಿಯಲ್ಲಿಯೇ ಬಿಮ್ಮನೆ ಬಿರಿದುಕೊಂಡು ಅದನ್ನು ಹುರುಳಿಲ್ಲದ ಅಧಮತರಗತಿಯದನ್ನಾಗಿ ಮಾಡಿಕೊಳ್ಳದೆ ಇದ್ದುದನ್ನು ಇದ್ದಂತೆ ಬರೆದು ಗೌರವವಂತರಾಗಲೆಂದೂ ಹಾರೈಸಿ ವಿರಮಿಸಲಾಗುತ್ತೆ.

---

## ಹರಿಹರನು ಚಿತ್ರಿಸಿದ ಗಿರಿಜಾದೇವಿ.

ಲೇಖಕ:— ಎಮ್. ಎಸ್. ವೀರಾಪುರ. (ಲಿಂಗರಾಜ ಕಾಲೇಜ ಬೆಳಗಾವ)

ಕರ್ನಾಟಕ ಸಾಹಿತ್ಯದೇವಿಯ ಕಂಠಮಾಲೆಯೊಳಗೆ ಕಂಗೊಳಿಸುವ ಕವಿಪುಂಗವರಲ್ಲಿ ಹರಿಹರದೇವನೊಬ್ಬನು. ಇವನು ತನ್ನ ಹಿಂದೆ ಆಗಿಹೋದ ಜೈನ ಕವಿಗಳಂತೆ ಒಂದು ಪರಿಶಿಷ್ಟವಾದ ಸಂಪ್ರದಾಯದ ಕಟ್ಟುಪಾಡುಗಳಿಗೆ ಒಳಗಾದವನಲ್ಲ. ಆದರೆ ತಾನು ಕಂಡುಕೊಂಡ ಮಾರ್ಗವನ್ನು ಕೃತಿರೂಪದಲ್ಲಿ ತಿಳಿಸಿದ ಓರ್ವ ಕ್ರಾಂತಿಕಾರಕ ಕವಿ. ಕಾವ್ಯಪ್ರಪಂಚದಲ್ಲಿ ನವಯುಗ ನಿರ್ಮಾಣಕನು. ಕನ್ನಡಸೊಲ್ಲಿಗೆ ಸರಿಹೋಗುವ ರಗಳೆಯ ಮಟ್ಟಿನಲ್ಲಿ ರಸವತ್ತಾದ ಕಾವ್ಯಗಳನ್ನು ರಚಿಸಿ, ಕನ್ನಡ ಸಾಹಿತ್ಯಕ್ಕೆ ಮಹೋಪಕಾರ ಮಾಡಿದ್ದಾನೆ. ಹೀಗಿದ್ದರೂ ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಪ್ರದಾಯಕ್ಕೆ ಸೆರಿಸಿಕ್ಕ ಗಿರಿಜಾಕಲ್ಯಾಣ' ವೆಂಬ ಚಂಪೂ ಗ್ರಂಥವನ್ನು ರಚಿಸಿರುವನು. ಪ್ರಕೃತ ಆ ಕಾವ್ಯದೊಳಗಿನ 'ಗಿರಿಜೆಯಪಾತ್ರ' ವನ್ನಿಟ್ಟು ಕಲೆಯ ಒರೆಗಲ್ಲಿಗೆ ಹಚ್ಚಿ ನೋಡುವುದೇ ಈ ಬರವಣಿಗೆಯ ಉದ್ದೇಶ

ಈ ಕಾವ್ಯದ ಕಥೆ ಹೊಸದೇನೂ ಅಲ್ಲ. ಹರಿಹರನಿಗಿಂತ ಹಿಂದೆ ಎಷ್ಟೋ ಜನ ಕವಿಗಳು ಈ ವಸ್ತುವನ್ನು ಕುರಿತು ಕಾವ್ಯಗಳನ್ನು ಬರೆದಿದ್ದಾರೆ ಪುರಾಣಗಳಲ್ಲಿಯೂ ಈ ಕಥೆ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಒಂದೊಂದು ಪುರಾಣದಲ್ಲಿ ಒಂದೊಂದು ರೀತಿಯಾದ ಕಥೆ ಕಂಡು ಬರುತ್ತದೆ. ಎಲ್ಲೆಡೆಯೂ ಪಾರ್ವತಿಯ ವಿವಾಹವೇ ಮುಖ್ಯವಾದ ವಿಷಯವಾಗಿದ್ದರೂ ಇತರ ಕೆಲವು ವಿಷಯಗಳಲ್ಲಿ ವ್ಯತ್ಯಾಸಗಳಿವೆ. ಹರಿಹರನು ಯಾವ ಕಥೆಯನ್ನು ಅನುಸರಿಸಿದ್ದಾನೆಂದು ಹೇಳುವುದು ಕಠಿಣ. ಲಿಂಗಮಹಾಪುರಾಣದಲ್ಲಿಯೂ ಶಿವಪುರಾಣದಲ್ಲಿಯೂ ಈ ಕಥೆ ಇದೆ. ಕಾಳಿದಾಸನ 'ಕುಮಾರಸಂಭವ'ವೂ ಉದ್ಭಟದೇವನ 'ಕುಮಾರಸಂಭವ'ವೂ ಹರಿಹರನಿಗಿಂತ ಪ್ರಾಚೀನವಾಗಿದ್ದು, ಇದೇ ಕಥೆಯನ್ನು ನಿರೂಪಿವೆ. ಹರಿಹರನು ಹಳೆಯ ಕಥೆಯನ್ನೇ ತೆಗೆದುಕೊಂಡಿದ್ದರೂ, ತನ್ನವೇ ಆದ ಹಲಕೆಲವು ಮಾರ್ಪಾಡುಗಳನ್ನು ಅಲ್ಲಲ್ಲಿ ಮಾಡಿದ್ದಾನೆ ಇದಕ್ಕೆ ತಾನು ಚಿತ್ರಿಸಿದ ಗಿರಿಜೆಯ ಪಾತ್ರವೇ ಬಲವಾದ ಸಾಕ್ಷಿಯಾಗಿದೆ.

ಹರಿಹರನು ತನ್ನ ಕಾವ್ಯದಲ್ಲಿ ಪಾರ್ವತಿಯನ್ನೇ ಕಥಾನಾಯಿಕೆಯನ್ನಾಗಿ ಮಾಡಿದ್ದಾನೆ. ಆದುದರಿಂದ ಹರಿಹರನ ದೃಷ್ಟಿಯೇ ಬೇರೆಯಾಗಿದೆ. ಕಾಳಿದಾಸನ ಕುಮಾರಸಂಭವದಲ್ಲಿರುವಂತೆ ಇಲ್ಲಿ ಶಿವನು ಪಾರ್ವತಿಯಷ್ಟು ಪ್ರಧಾನವಾಗಿ ಕಂಡು ಬರುವುದಿಲ್ಲ. ಆದರೂ ಶಿವನ ಈ ಲೀಲೆಯನ್ನು ಅವಳ ನೆಪದಿಂದ ವರ್ಣಿಸಬೇಕೆಂಬ ಇಚ್ಛೆ ಹರಿಹರನಿಗಿದೆ. ಹೀಗಿದ್ದರೂ ಕಥೆ ನಡೆಯುವುದು ಪಾರ್ವತಿಗಾಗಿಯೇ. ಪಾರ್ವತಿಯ ಜನನ, ಯೌವನಪ್ರಾಪ್ತಿ, ನಾರದನ ಆಗಮನ, ಶಿವನ ತಪೋವನಕ್ಕೆ ಅವಳು ತೆರಳುವುದು, ತನ್ನ ಇಷ್ಟಾರ್ಥವನ್ನು ನೆರವೇರಿಸಲು ಬಂದ ಮನ್ಮಥರತಿಯರಲ್ಲಿ ಸಹಾನುಭೂತಿ, ಕಾಮದಹನದಿಂದ ಕಂಗೆಟ್ಟ ರತಿಗೆ ಅಭಯಪ್ರಧಾನ ಮಾಡುವುದು, ಶಿವನನ್ನು ತಾನಿದ್ದೆಡೆಗೆ ಬರಿಸುವ ಛಲ, ವಟುವೇಷಧಾರಿಯಾಗಿ ಶಿವ ಬರುವುದು, ಶಿವನಿಂದೆ ಮಾಡಿದ ಆ ಕಪಟ ಬ್ರಹ್ಮಚಾರಿಯ ವೇಷವನ್ನು ವಿಭೂತಿಯಿಂದ ಕಳೆಯುವುದು, ಶಿವನನ್ನು ಮೆಚ್ಚಿಸಿ ಮದುವೆಯಾಗುವುದು — ಇದು ಪಾರ್ವತಿಯ ಜೀವನದ ಕಥೆ.

ಹರಿಹರನ ಗಿರಿಜೆ ಜನ್ಮಾಂತರ ಸ್ಮರಣವುಳ್ಳಾಕೆ; ಇದಲ್ಲದೆ ಆಕೆಗೆ ಶಿವನೊಡನೆ ಸಾಮರಸ್ಯಜ್ಞಾನವುಂಟಾಗಿದೆ ಇದೇ ಈಗ ಶಿವನನ್ನು ಅಗಲಿ

ಬಂದವಳಂತೆ ಆಕೆಗೆ ಅತ್ತ ಕಡೆಯ ಧ್ಯಾನ. ಹುಟ್ಟುವಾಗಲೇ ಅವಳು ಶಿವಭಕ್ತಿಸಂಪನ್ನೆ. ಹುಟ್ಟಿದ ಹುಡುಗೆಯು, ಶಾರೀರಕ ಅಸ್ವಸ್ಥತೆ ಇಲ್ಲದಿದ್ದರೂ ಕಣ್ಣನ್ನೇ ತೆರೆಯಳು. ಇಲ್ಲಿ ಕಾಳಿದಾಸನ ಪಾರ್ವತಿಗೂ ಹರಿಹರನ ಪಾರ್ವತಿಗೂ ಭೇದವುಂಟು ಕಾಲಿದಾಸನ ಪಾರ್ವತಿ "ಸಾನಿರ್ಮಿತಾ ವಿಶ್ವಸೃಜಾ ಪ್ರಯತ್ನಾದೇಕಸ್ಥಸೌಂದರ್ಯದಿದೃಕ್ಷಯೇವ ಎಂಬಂತೆ ಸೌಂದರ್ಯಖನಿ ಎನಿಸಿದವಳಾದರೂ ಸಾಮಾನ್ಯಬಾಲಿಕೆ; ಶಿವನ ಬಳಿಯಲ್ಲಿ ಸೇವೆ ಮಾಡಿಕೊಂಡಿರು ಎಂದು ತಂದೆ ಹೇಳುವವರೆಗೆ ಆಕೆಯಲ್ಲಿ ಶಿವಾನುರಾಗವು ಕಂಡು ಬರುವುದಿಲ್ಲ. ಆದರೆ ಹರಿಹರನ ಪಾರ್ವತಿಗೆ ಬಾಲ್ಯದಲ್ಲಿಯೇ ಕೇವಲ ಶಿವಧ್ಯಾನ.

ಶಿವಲಿಂಗೇಕ್ಷಣ ಲೋಲುಪೆ ।
ಶಿವಪ್ರಸಾದಾತ್ತ ಚಿತ್ತೆ ಶಿವಶಕ್ತಿ ಶಿವೋ ॥
ತವೆ ಶಿವಪುಣ್ಯಾಂಬೋನಿಧಿ ।
ಶಿವನಂ ನೆರೆನಚ್ಚಿ ಮಚ್ಚಿ ಕಣ್ಮುಚ್ಚಿರ್ದಳ್ ॥ ೩. ೪೯

ಶೈಶವ ಬಾಲ್ಯಗಳೂ ಹೀಗೆಯೇ ಪುಲಿಯುಗುರು, ಅರಳೆಲೆ, ಮಾಗಾಯಿ, ಗೆಜ್ಜೆಯ ಕಡಗಗಳನ್ನಿಟ್ಟ ಶಿಶು, ತಾಯ ಮೊಲೆವಾಲನ್ನು ಮರೆತು. ಶಿವಾಲಯಕ್ಕೆ ಪರಿಪರಿದು ಹೋಗುವುದು! ಶಿವಪೂಜೆಯ ಆಟಗಳೇ ಆ ಬಾಲೆಯ ಆಟಗಳು ಆ ಬಾಲೆಯ ಶಿವಭಕ್ತಿಯ ಏಕಾಗ್ರತೆ ಅನಿರ್ವಚನೀಯವಾದುದು. ಆ ಧ್ಯಾನಕಾಲದಲ್ಲಿ ಆ ಅಚಲಪುತ್ರಿ ಬರೆದರೋ ಬೈತರೋ ಕರುವಿಟ್ಟರೊ ಕಂಡರಿಸಿದರೊ ಎಂಬಂತೆ ಅಚಲೆ, ಇದಲ್ಲದೆ

ಬೇಡೆಂದೊಡೆ ಮಾಣಳ್ ನಲಿ ।
ದಾಡುವಳಪ್ಪುವಳಮರ್ಚುವಳ್ ಪುಳಕಿಪ್ಪಳ್ ।
ಮಾಡುವ ಲಿಂಗಾರ್ಚನೆಯೊಳ್ ।
ನೋಡಳ್ ನುಡಿಯಳ್ ಭವಾನಿಯೇನೆಂದರಿಯಳ್ ॥

ಇದೆಂತಹ ಧ್ಯಾನ! ಇದೆಂತಹ ಪೂಜೆ! ಎಂತಹ ಏಕಾಗ್ರತೆ! ಅದೂ ತೀರ ಬಾಲ್ಯದಲ್ಲಿ! ಹೀಗೆ ಭಕ್ತಿಯ ಪೂಜೆಯಲ್ಲಿ ಆಕೆ ನಲಿದು, ಆಡುವಳು, ಅಮರ್ಚುವಳು, ಪುಳಕಿಪ್ಪಳು; ಈ ರೀತಿಯಾಗಿ ಪತ್ನಿಯ ಅನುರಾಗವನ್ನು ತೋರ್ಪಡಿಸುವಳು. ಹರಿಹರನ ದೃಷ್ಟಿಯಲ್ಲಿ ಪಾರ್ವತಿ ಶರ್ವಮ

ನೆಗೆ ಬಂದವಳಂತೆ ಶಿವನಿಂದ ದೂರದಲ್ಲಿದ್ದರೂ ಆಕೆ ಶಿವನಲ್ಲಿಯೇ ತಲ್ಲೀನಳಾದವಳು. ಕಾಳಿದಾಸನ ಪಾರ್ವತಿ ಹಿಮವಂತನ ಪುತ್ರಿ; ಹರಿಹರನ ಪಾರ್ವತಿ ವಿರಹಿಣಿಯಾದ ಶಿವಪತ್ನಿ. ಈ ಭೇದವು ಇನ್ನೂ ಸ್ಫುಟವಾಗಿ ಕಾಣುವುದು ಯೌವನದಲ್ಲಿ ಪಾರ್ವತಿ ಪ್ರಾಯಕ್ಕೆ ಬರಲು, ಒಮ್ಮೆ ನಾರದಮುನಿ ಬಂದು ಮೇನಾದೇವಿಗೂ ಗಿರಿರಾಜನಿಗೂ—"ನಿಮ್ಮ ಮಗಳು ಈಕೆ ಸಾಮಾನ್ಯಳಲ್ಲ. ವಿರೂಪಾಕ್ಷನ ಅರ್ಧಾಂಗಿ! ಆತನಿಗೇ ಈಕೆಯನ್ನು ಸಲಿಸಿರಿ." ಎಂದು ಹೇಳಿಹೋದನು. ಅಷ್ಟಕ್ಕೆಯೆ ಹರಿಹರನ ಪಾರ್ವತಿ ತಂಪೆಯನ್ನು ಮುಂದೆ ಮಾಡಿಕೊಂಡು ವರನು ವಾಸ ಮಾಡಿಕೊಂಡಿದ್ದ ಹೇಮಕೂಟ ಪರ್ವತಕ್ಕೆ ಬರುವಳು. ಇಷ್ಟೇ ಅಲ್ಲ, ಭಾವೀ ಪತಿಯ ಸೇವೆಗಾಗಿ ತಾನೊಬ್ಬಳೇ (ಇಬ್ಬರು ಸಹಚರಿಯರೊಡನೆ) ಅಲ್ಲಿ ನಿಲ್ಲುವಳು. ಈ ಇಪ್ಪತ್ತನೆಯ ಶತಮಾನದಲ್ಲಿಯೂ ಕನ್ನೆಯು ಇಷ್ಟೊಂದು ದಿಟ್ಟತನವನ್ನು ತೋರಿಸುವುದು ಕಾಣಿಸದು.

ಲೋಕದಲ್ಲಿ ವರನು ಕನ್ಯೆಯನ್ನು ನೋಡುವುದಕ್ಕೆ ಹೋಗುವ ವಾಡಿಕೆಯಿದ್ದರೆ ಇಲ್ಲಿ ಕನ್ಯೆಯೇ ವರನನ್ನು ನೋಡುವುದಕ್ಕೆ ಹೋಗುವಳು. ಅಲ್ಲಿ ತಂದೆ ಮಗಳಿಗೆ ವರನನ್ನು ತೋರಿಸುವನು. ಕನ್ಯೆ ವರನ ಪ್ರಥಮ ದರ್ಶನದಲ್ಲಿಯೇ—

ಶಿವನೀತಂ ನಿಜವಲ್ಲಭಂ ಮಮಗುರು ಪ್ರಖ್ಯಾತನತ್ಯೂರ್ಜಿತಂ।
ಭವವೆನ್ನಾಳ್ದನೆನಿಪ್ಪುದಂ ತಿಳಿದೆನಾಂ ನೀಂ ಪೋಗುನಿತ್ಯಾರ್ಚನೋ॥
ತ್ಸವದಿಂ ಸಂತಸದಿಂ ಸದಾತುರತೆಯಿಂ ಸಾನಂದದಿಂದಿರ್ಪೆನಂ।
ದು ವಿಳಾಸಾಭಿ ಭವಾನಿ ನೋಡಿ ನುಡಿದಳ್ ಭೂಭೃತ್ಕುಲಾಧೀಶ
ನೋಳ್ ॥ ೫-೪೪

ತನಗೆ ಗುರ ತು ಸಿಕ್ಕಿತೋ ಎಂಬಂತೆ ನುಡಿಯುತ್ತಾಳೆ.—ಈತಂ ಎನ್ನ ವಲ್ಲಭಂ; ನೀಂ ಪೋಗು, ಆನಂದದಿಂದಿರ್ಪೆಂ ಎಂದು ತಂದೆಗೆ ಹೇಳಿ ಆತನಿಗೆ ಹೋಗಲಪ್ಪಣೆ ಕೊಡುವಳು. ಇದು ದಿಟ್ಟತನವೋ? ವರನೊಡದೆ ಇದ್ದ ಪೂರ್ವಸ್ನೇಹದ ವಿಸ್ರಂಭವೋ?

ಇನ್ನು ವರನನ್ನು ಮದುವೆಗೆ ಹುರಿಗೊಳಿಸುವುದೂ ಈ ಕನ್ಯೆಯ ಕೆಲಸವೇ. ವೈರಾಗ್ಯಮಗ್ನನಾಗಿ ಭಸಿತಕಾಯನಾಗಿ ತಾನೇ ತಾನಿರ್ದ

ವರನನ್ನು ಸಂಸಾರದ ದಾರಿಗೆ ತರುವ ಕೆಲಸವನ್ನು ಕನ್ಯೆ ತಾನೇ ಕೈಕೊಂಡಳು. ಶಿವನ ಒಲವನ್ನು ಆಕೆಯೇ ಬಲ್ಲಳು. ಈ ಕೆಲಸದಲ್ಲಿ ಆಕೆಯ ದಾರಿಯು ವಿಲಕ್ಷಣವಾಗಿಯೇ ಇದೆ. ಆಕೆ ಮನದಲ್ಲಿ—

ಬಗೆವೊಡೆ ಸಾತ್ವಿಕ ಶಿವಭ।
ಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ ೫.೪೯

ಎಂದು ನಿರ್ಣಯಿಸುವಳು. ಮತ್ತೆ ಆಕೆ ಆಲೋಚಿಸುವದೇನೆಂದರೆ—

ಅದು ಕಾರಣದಿಂ ಭಕ್ತಿ।
ಪ್ರದನ ವಿರೂಪಾಕ್ಷನಂಘ್ರಿಗಳನರ್ಚಿಸುವೆಂ।
ಪದಮೇ ಶಿವಸುಖ ಮುಖಪಂ।
ಪದದೊಳ್ ಬಳಿಕಿರ್ಪೆನಪ್ಪಿ ಶರ್ವನ ತನುವಂ ॥೫-೫೦

ಶಿವನನ್ನು ಒಲಿಸಿಕೊಳ್ಳುವದಕ್ಕಾಗಿ ಹೇಮಕೂಟದಲ್ಲಿ ಶಿವಪೂಜಾ ನಿರತೆಯಾದ ಕಾಳಿದಾಸನ ಪಾರ್ವತಿ—

ಅವಚಿತಬಲಿಪುಷ್ಪಾ ವೇದಿಸಮ್ಮಾರ್ಗದಕ್ಷಾ।
ನಿಯಮವಿಧಿ ಜಲಾನಾಂ ಬರ್ಹಿಷಾಂ ಚೋಪನೇತ್ರೀ॥
ಗಿರಿಶಮುಪಚಚಾರ ಪ್ರತ್ಯಹಂ ಸಾ ಸುಕೇಶೀ।
ನಿಯಮಿತಪರಿಖೇದಾ ತಚ್ಛಿರಶ್ಚಂದ್ರಪಾದೈಃ॥

ಹೀಗೆ ಕೇವಲ ಮನೆಯ ತೊತ್ತಿನಂತೆ ಹರನ ಸೇವೆಯನ್ನು ಮಾಡುತ್ತಿರುವಳು. ಮತ್ತು—

ಪರ್ಯಾಪ್ತಪುಷ್ಪಸ್ತಬಕಾವನಮ್ರಾ।
ಸಂಚಾರಿಣೀ ಪಲ್ಲವಿನೀ ಲತೇವ॥ ಎಂಬಂತೆ ತಾನು ಮಾತ್ರ ವಿಪುಲ ಪಲ್ಲವ ಪುಷ್ಪಸ್ತಬಕಾಲಂಕೃತೆ (ಕು. ೩.೫೪) ದೂರದೂರದಲ್ಲಿ ನಿಂತೇ ಪುಷ್ಪಾಂಜಲಿಯನ್ನು ಹರನ ಪಾದಕ್ಕೆ ಅರ್ಪಿಸುವಳು. ಆದರೆ ಹರಿಹರನ ಪಾರ್ವತಿ, ಸೇವೆಗಾಗಿ ಶಿವನ ಬಳಿಗೆ ಬಂದಾಗ ಪ್ರೌಢ ಪತ್ನಿ. ತನ್ನ ಮನೆಗೆ ಬಂದಾಗಳಂತೆ ನಡೆಯುವಳು. ತನ್ನನ್ನು ಕಳುಪ ಬಂದ ತಂದೆಗೆ—'ಶಿವನೀತಂ ನಿಜವಲ್ಲಭಂ, ನೀಂಪೋಗು; ಸಾನಂದದಿಂದಿರ್ಪೆಂ' ಎಂದು ತಂದೆಯನ್ನು ಹೋಗಹೇಳುವಳು. ಶಿವನಿಗೆ ಪುಷ್ಪಮಾಲೆಗಳನ್ನು ಆತನ ತೋಳು, ಕೊರಳು, ಮುಂತಾದ ಅವಯವಗಳನ್ನು ಮುಟ್ಟಿ ಹಾಕುವಳು. ಮತ್ತು—

ತವ ತವಗೆ ಮುಂಚುವಿಂದ್ರಿಯ ।
ನಿವಹಮನೋವುತ್ತೆ ಗಿರಿಜೆ ಹರಕಂಧರದೊಳ್ ॥
ನವಕುಸುಮಮಾಲೆಯಂ ಸಾ ।
ರ್ಜವ ನೆವದಿಂ ಸೋಂಕಿ ಸೋಂಕಿ ಪುಳಕಿಸುತಿರ್ದಳ್ ॥೫-೮೩

ಇಂತು ಮೈಮುಟ್ಟಿ ಪೂಜಿಸುವ ಸಲುಗೆ ಆಕೆಗೆ. ಪತ್ನಿಗೆಪತಿಯ ಹತ್ತಿರ ಹೋಗಲು ಸಂಕೋಚವೆಲ್ಲಿಯದು ?

ಸಾತ್ವಿಕ ಭಕ್ತಿಯಿಂದ ಶಿವನನ್ನು ಒಲಿಸಿಕೊಳ್ಳುವೆನೆಂಬ ಸಂಕಲ್ಪದಿಂದ ಇಂತಹ ಪೂಜೆಯನ್ನು ನಡೆಸಿದರೂ ವರನು ನಿಶ್ಚಲ, ಕೇವಲ ಸ್ಥಾಣು ! ಪಾರ್ವತಿ ವರನನ್ನು ದಾರಿಗೆ ತರುವ ಕೆಲಸದಲ್ಲಿ ಯಶವು ದೊರೆಯದೆ ಇರುವಾಗ ಈ ಕೆಲಸಕ್ಕಾಗಿಯೇ ದೇವತೆಗಳಿಂದ ಪ್ರೇರಿತನಾದ ಕಾಮನು ಅಲ್ಲಿಗೆ ಬಂದು, ಆತನೂ ಕೈಸಾಗದೆ ಇರುವನು. ಪಾರ್ವತಿಯು ತನ್ನ ಕೆಲಸಕ್ಕಾಗಿ ಆತನಿಗೆ ಹೇಗೆ ಉತ್ತೇಜನ ಕೊಡುವಳೆಂಬದನ್ನು ನೋಡಿ.

ನಾನಾವಿಧದಿಂ ರುದ್ರನ ।
ನೂನ ತಪೋಭರದ ಬೆಸುಗೆಯಾ ಬಿಡಿಸೊಲವಿಂ ॥
ಶ್ರೀನಂದನ ನೀನಂಜದಿ ।
ರಾನಿರ್ದಪೆನಾನೆ ರಕ್ಷೆಯಾಗಿ ಸಹಾಯಮಪ್ ॥ ೮-೧೪

ನೀನು ಅಂಜದಿರು, ನಾನು ಇರುವೆನು, ಎಂದು ಆಶ್ವಾಸನವೀಯುವಳು. ತನಗೆ ಬೇಡಾದ ಕೆಲಸದಲ್ಲಿ ಪತಿ ತೊಡಗಿದ್ದರೆ, ಸೇರದೆ ವಿಘ್ನವನ್ನೊಡ್ಡುವ ಪುರುಷಿನ ಹೆಂಡತಿ ಹರಿಹರನ ಗಿರಿಜೆ.

ಕಾಮದಹನಾಂತರದಲ್ಲಿ ಶಿವನು ಪಾರ್ವತಿಯ ಸಮಾಚಾರವನ್ನೇ ಕೇಳದೆ, ಕಣ್ಣೆತ್ತಿಕೂಡ, ನೋಡದೆ, ಹೊರಟು ಹೋಗಲು ಕಾಳಿದಾಸನ ಪಾರ್ವತಿ —

ಶೈಲಾತ್ಮಜಾಪಿ ಪಿತುರುಚ್ಛಿರಸೋಽಭಿಲಾಷಂ ।
ವ್ಯರ್ಥಂ ಸಮರ್ಥ್ಯ ಲಲಿತಂ ವಪುರಾತ್ಮನಶ್ಚ ॥
ಸಖ್ಯೋಃ ಸಮಕ್ಷಮಿತಿ ಚಾಧಿಕಜಾತಲಜ್ಜಾ ।
ಶೂನ್ಯಾ ಜಗಾಮ ಭವನಾಭಿಮುಖೀ ಕಥಂಚಿತ್ ॥

ತನ್ನ ತಂದೆಯ ಅಭಿಲಾಷೆ, ತನ್ನ ಯೌವನ ಇವು ವ್ಯರ್ಥವಾದುವಲ್ಲಾ ಎಂದು ಎದೆಗುಂದುವಳು; ಸಖಿಯರಿದುರಿಗೆ ಈ ತರದ ಅಪಮಾನವೇ ಎಂದು ನಾಚುವಳು, ರುದ್ರನ ಮದನ ದಹನದ ಸಂರಂಭಕ್ಕೆ ಮೈಮರೆವಳು, ಮುಂದೆ ತಂದೆ ಬಂದು ಆಕೆಯನ್ನು ಎತ್ತಿಕೊಂಡು ಹೋಗುವನು. ಆದರೆ ಹರಿಹರನ ಪಾರ್ವತಿ, ತನ್ನ ಪತಿಯ ಸ್ವಭಾವವನ್ನೂ ಆತನ ಪ್ರೇಮದ ಗಾಢತೆಯನ್ನೂ ಬಲ್ಲ ಪತ್ನಿ. ತನ್ನನ್ನು ನೋಡದೆ ಹೊರಟು ಹೋದ ಆತನ ಆಚರಣೆಯಲ್ಲಿ ಕುಂದನ್ನು ಎಣಿಸುವಳೇ ವಿನಾ ಧೈರ್ಯ ಗೆಡುವುದಿಲ್ಲ.

ತಾನಿರ್ದಲ್ಲಿಗೆ ನಡೆತಂ
ದಾನರ್ಚಿಸೆ ಕಾಮವೈರಿ ನುಡಿಯಿಸದಂತ
ರ್ಧಾನರಕ್ಕೆ ಸಂದನದ ಱಿಂ ।
ದಾನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ ॥

ಎಂದು ಸಖಿಯರೊಡನೆ ಹೇಳುತ್ತ ಚಲದ ಲಲನೆ, ಬಲ್ಲಿದ ಭಾವಕಿ, ಏಕ ನಿಷ್ಠಾನಿಧಿ' ಯಾದ ಪಾರ್ವತಿ ಬಿಸಿಲು ಮಳೆ ಶೀತಗಳಲ್ಲಿ, 'ಬೆಟ್ಟ ಕಾಡು ಸರೋವರಗಳಲ್ಲಿ, ತಪಸ್ಸು ಮಾಡಿ ಶಿವನನ್ನು ಮೆಚ್ಚಿಸಲು ತೊಡಗುತ್ತಾಳೆ. ಕಾಲಿದಾಸನ ಪಾರ್ವತಿ ಈ ಸಮಯದಲ್ಲಿ ತನ್ನನ್ನೇ ತಾನು ಕಾಪಾಡಿಕೊಳ್ಳಲಾರದವಳು ದಗ್ಧಪತಿಕಳಾದ ರತಿಯನ್ನೇನು ನೋಡಿಯಾಳು ? ಆದರೆ "ತಾಯೆ, ತವರೇ ಕರುಣಿಸು" ಎಂದು ತನ್ನನ್ನು ಬೇಡಿಕೊಂಡು ಹಂಬಲಿಸುವ ರತಿಗೆ ಹರಿಹರನ ಗಿರಿಜೆ—

ಬೇಡುಡುಗು ಶೋಕರವಮಂ ।
ನೀಡಾಗದೆ ನಿನ್ನವಲಭನನೀಶ್ವರನಂ ॥
ಬೇಡುವೆನಾವರ್ಥದೊಳಂ ।
ಮಾಡುವೆನೆಲೆ ಪರಮಹರ್ಷಮಂ ನಿನಗೆ ರತೀ ॥೮-೮೦

ಎಂದು ವಚನ ಕೊಡುವಳು. ಸ್ಕಾಂಡ (ಸ್ಕಾಂದ) ಪುರಾಣದ ವೃತ್ತಾಂತದಿಂದ ಈ ಮಾರ್ಪಾಡು ಅವನಿಗೆ ಬಂದಿರಬಹುದು. ಕಲೆಯ ದೃಷ್ಟಿಯಿಂದ ಇದು ಸುಂದರವಾಗಿದೆ ತನ್ನ ಹಾಗೆಯೇ ಸಂಕಟಕ್ಕೆ ಒಳಗಾದ ರತಿಗೆ ಪಾರ್ವತಿ ಸಹಾಯ ಮಾಡುವುದು ಸಹಜವಾದದ್ದು. ಸಮಂಜಸವಾದದ್ದು. ಹೀಗೆ ಕಾಲಿದಾಸನ ಪಾರ್ವತಿ ಮದುವೆಯಾಗದ ಕನ್ಯೆಯಾ

ಗಿದ್ದರೆ, ಹರಿಹರನ ಪಾರ್ವತಿ ಪ್ರೌಢಪತ್ನಿ. ಪತಿಯಿಂದ ಬೇಕಾದ ಕೆಲಸವನ್ನು ಮಾಡಿಕೊಳ್ಳುವೆನೆಂಬ ಧೈರ್ಯವುಳ್ಳ ಸ್ವಾಧೀನಪತಿಕೆಯಾದ ಪತ್ನಿ.

ಪಾರ್ವತಿಯು ತಪವು ಅತ್ಯುಗ್ರವಾದುದು. ಶಂಕರನ ಪ್ರೇಮವನ್ನು ಪಡೆಯುವುದೇ ಉದ್ದೇಶವು. ಶಂಕರಪ್ರೇಮರಸೋನ್ಮಾಂಗಿಯ ತಪಸ್ಸು ಶಿವನನ್ನು ಕುರಿತು— ನೀನು ಹೇಗೆ ಬರುವುದಿಲ್ಲವೋ ನೋಡಿ ಬಿಡುವೆ, ನೀನು ಬರದಿದ್ದರೆ ನಾನು ತನುವನ್ನೇ ನೀಗುವೆನು, ಎಂಬಂತೆ ಆಕೆಯ ಹಟವನ್ನು ತೋರಿಸುತ್ತದೆ. ಹೆಂಡತಿಯ ಈ ತಪವು ವಿರೂಪಾಕ್ಷನ ಕರಣಂಗಳಿಗೆ ಹೋಗಿ ಮುಟ್ಟಿತು. ಆತನ ಕೆಚ್ಚುಗಟ್ಟಿದ ಧೈರ್ಯವು ಒಡೆಯಿತು, ಮೊದಲಿನಾಕೆ ತಂದುಕೊಂಡಂತೆ ಈಕೆಯೂ ಅನರ್ಥವನ್ನು ತಂದುಕೊಳ್ಳಬಹುದೆಂದು ಬೆದರಿ, ಆಕೆಯನ್ನು ಮನ್ನಿಸುವುದಕ್ಕೆ ಹೊರಡಲು ಅನುವಾದನು. ಇಲ್ಲಿಯೂ ಪತಿಯು ತಾನಿದ್ದಲ್ಲಿಗೇ ಬರಬೇಕೆಂಬ ತನ್ನ ಮಾತನ್ನು ನಡೆಸಲೇಬೇಕೆಂಬ ಹಟಹಿಡಿಯುವ, ಹಾಗೆ ಆತನಿಂದ ಕೆಲಸ ಮಾಡಿಕೊಳ್ಳುವಾ ಹಸ್ತಗತಪತಿಕಗಳಾದ ಸಲುಗೆಯ ಪ್ರೌಢಭಾರ್ಯೆಯಂತೆ ಹರಿಹರನ ಗಿರಿಜೆಯು ತೋರುವಳು.

ಶಿವನು ಪಾರ್ವತಿಯ ತಪೋವನಕ್ಕೆ ಬಂದು, ಪರಿಪರಿಯಿಂದ ಕಾಡಿ "ಶಿವನು ಪತಿಯಾಗಬೇಕೆಂದು ತನ್ನ ಈ ತಪಸ್ಸು ಎಂಬೀ ಮಾತನ್ನು ಪಾರ್ವತಿಯ ಬಾಯಿಂದ ಹೊರಡಿಸುತ್ತಾನೆ. ಶಿವನಿಗಾಗಿ ತಪವೆಂದರೆ ಇದೊಂದು ನಿನ್ನ ಅನುಚಿತವಾದ ಅವಿಚಾರದ ಕೆಲಸವೆಂದು ಆತನು ನಗೆಯಿಂದ ಸೂಚಿಸಿ, ಶಿವನ ವ್ಯಾಜನಿಂದೆಯನ್ನು ಯಥೇಷ್ಟವಾಗಿ ಮಾಡತೊಡಗುವನು— ಬ್ರಹ್ಮಚಾರಿಯು ಶಿವನಿಂದೆಯನ್ನು ಮಾಡುವ ಈ ಸಂದರ್ಭದಲ್ಲಿ ಶಿವಪುರಾಣದ ಪಾರ್ವತಿ ಅಗ್ನಿಪ್ರವೇಶ ಮಾಡುವಳು. ಬಂದ ಬ್ರಹ್ಮಚಾರಿಯಲ್ಲಿ ಪಾರ್ವತಿಗೆ ಪತಿಸಂದೇಹವನ್ನು ಹುಟ್ಟಿಸುವ ಪುರಾಣಕಾರರಿಗೆ ಇದು ಉಚಿತವೆಂದು ತೋರಿರಬಹುದು. ಕಾಳಿದಾಸನ ಈ ಸಂದರ್ಭದ ಪಾರ್ವತಿಯು ಮುಗ್ಧನಾಯಿಕೆ. ಬ್ರಹ್ಮಚಾರಿಯ ಶಿವನಿಂದೆಗೆ ಕೋಪಕೊಂಡು ಕೊನೆಗೆ ಆ ಸ್ಥಳದಿಂದ ಎದ್ದು ಹೋಗಲು ಆತುರಪಡುವಳು. ಕಾಳಿದಾಸನ ಪಾರ್ವತಿಯು ಸುಕುಮಾರ ಸ್ವಭಾವದವಳಾದುದರಿಂದ ಹೀಗೆ ವರ್ತಿಸುತ್ತಾಳೆ. ಆದರೆ ಈ ಸಂದರ್ಭದಲ್ಲಿ ಹರಿ

ಹರನ ಪಾರ್ವತಿ ಧೀರೆ, ಛಲವನ್ನುಳ್ಳವಳು. ಪತಿಯಲ್ಲಿ ಯಾರ ಸಂಕೋಚವೂ ಇಲ್ಲದ ಬಹಿರಂಗವಾದ ಅನುರಾಗವನ್ನುಳ್ಳವಳು; ಬಂದ ಬ್ರಹ್ಮಚಾರಿಯಲ್ಲಿ ಪತಿ ಸಂಶಯವು ಆಕೆಗೆ ಬಂದಿದೆ. ಕಾಲಿದಾಸನ ಪಾರ್ವತಿ ಎದ್ದು ಹೋದರೆ, ಹರಿಹರನ ಪಾರ್ವತಿ ಕಿನಿಸಿ ಕಿಡಿಕಿಡಿಯಾಗುವಳು. ತನ್ನ ಪತಿಯ ಅಭಿಮಾನದಿಂದ ಬಡಿದಾಟಕ್ಕೆ ನಿಲ್ಲುವಳು. ತಾನು ನಂಬಿದ ಭಸ್ಮವನ್ನು ಆತನಮೇಲೆ ಎರಚುವಳು; ಆಗ:—

ಸರಿದುದು ಪುಸಿವೇಷದ ತೆರೆ ।
ಸರಿದುದು ಕೆಮ್ನೀರ ತೆರದೆ ಹೂವಳೆಸರಿಸಂ ।
ಬರಿದಾದುದು ಜೀರಿಗೆ ಬೆಳ್ದ ।
ಪರಿಯಿಂ ಮುಳಿದಿಟ್ಟ ಭಸಿತಮದೆ ಮದುವೆಯವೊಲ್

ಪಾರ್ವತಿಯ ನಿಷ್ಠೆ ಛಲಗಳು ಇಲ್ಲಿ ಫಲಿಸಿವೆ. ಅಲ್ಲದೆ ಭಸಿತದ ಮಹಿಮೆಯನ್ನೂ ಹೇಳಿದಂತಾಗುತ್ತದೆಂದು ಕವಿಯಭಾವನೆ ಇರಬಹುದು. ಮತ್ತು ಶಿವನ ಲೀಲಾವಿನೋದವು ಚೆನ್ನಾಗಿ ರೂಪುಗೊಂಡಿದ್ದರೂ ಸ್ವಲ್ಪನಯಗೆಲಸ ಹೆಚ್ಚಾಗಿದ್ದರೆ ಈ ನಿರೂಪಣೆ ಇನ್ನೂ ಸೊಗಸಾಗಬಹುದಾಗಿತ್ತಲ್ಲವೆ ?

ಆಗ ವರನು ವಧುವಿನ ಪಾಣಿಗ್ರಹಣಮಾಡಿ—'ಗಿರಿಸುತೆ, ಅಳರಿಂ ನಡೆಯ ತಾರಗಿರೀಂದ್ರ ನಿವಾಸವಲ್ಲಿಗೆ' ಎಂದು ಆಕೆಯನ್ನು ಸ್ವಗೃಹಕ್ಕೆ ಕರೆಯುವನು ಆದರೆ ಪಾರ್ವತಿ—"ದೇವ, ಗಿರೀಶನಲ್ಲಿ ಎನ್ನನಾದರದೊಳೆಬೇಡ! ಊರ್ಜಿತವಿವಾಹಂ ಅದು ಅಚ್ಚರಿಯಪ್ಪ ಸಾಕ್ಷಿಯಂ ಕರುಣಿಪುದು" (೧೮-೫) ಎಂದು ಬೇಡಿಕೊಳ್ಳುವಳು. ಇಂತಹ ಸಂದರ್ಭಗಳಲ್ಲಿ ಶೃಂಗಾರ ಕವಿಗಳ ನಾಯಿಕೆ ಸ್ವತಂತ್ರೆಯಾಗಿ ವರನಿಗೆ ಆತ್ಮಾರ್ಪಣೆ ಮಾಡುವಳು; ಮದುವೆಯಾಗುವಳು. ಕಾಮುಕವಿ ಕಾಲಿದಾಸನ ಶಕುಂತಲೆ, ಗಾಂಧರ್ವವಿಧಿಯ ಮದುವೆಗೆ ಒಪ್ಪಿದಳು. ಆದರೆ ಭಕ್ತಕವಿ ಹರಿಹರನ ಗಿರಿಜೆ ಲೋಕೋಪದೇಶಕ್ಕಾಗಿ ತನ್ನ ತಂದೆಯನ್ನು ಕೇಳಿ ವಿಧಿಪೂರ್ವಕವಾಗಿ ಮದುವೆಯಾಗೆಂದು ಶಿವನನ್ನು ಬೇಡಿಕೊಳ್ಳುತ್ತಾಳೆ. ಇಂತಿದು ಮಹಾಕವಿ ಹರಿಹರನ ಗಿರಿಜೆಯ ಚಿತ್ರ.

---

# ಲಿಂಗಧಾರಣ-ಲಿಂಗಪ್ರತಿಜ್ಞೆ.

(ಲೇಖಕರು:— ಜಿ. ಆರ್ ಭಸ್ಮಾಂಗದೇವರು *L. E. E.*)
ಶಿಡ್ಲಘಟ್ಟ -ಕ್ಯಾಂ

---

( ಮುಂದುವರಿದುದು. )

ಹಿಂದಿನ ಲೇಖನಗಳಲ್ಲಿ ಶಿವಶರಣ ಶಿವಶರಣೆಯರ ಪುತ್ರನು ಲಿಂಗಶರೀರಿ ಎಂದೂ ಸಮ್ಮನೇ ಲಿಂಗವನ್ನು ಅಂಗದಲ್ಲಿ ಧರಿಸಿದ್ದರೂ ಆತನು ಜೀವನ್ಮುಕ್ತ ಅಥವಾ ಲಿಂಗೈಕ್ಯನಾಗಿಯೇ ಇರುವನು ಎಂದು ಬಿನ್ನೈಸಿಕೊಂಡಿದ್ದೇನಷ್ಟೆ. ಆ ಬಗ್ಗೆ ಸ್ವಲ್ಪ ವಿಚಾರಿಸೋಣ ಶ್ರೀಮದಷ್ಟಾವರಣ ಪಂಚಾಚಾರ ಷಟಸ್ಥಲ ಮಾರ್ಗಾನುವರ್ತಿಗಳಾದ ಶರಣ ಶರಣೆಯರ ಅಥವಾ ಭಕ್ತಭಕ್ತೆಯರ ನಿಜಲಿಂಗ ನಿಷ್ಠೆಯಿಂದ ಗುರುವಾಕ್ಯ ಪರಿಪಾಲನೆಯಿಂದ ಜೀವನ ಪೂರ್ವಾಶ್ರಯವು ನಾಶವಾಗಿ ಶಿವನ ಚೈತನ್ಯವು ಈ ಬೆಳಕನ್ನು ಸರ್ವಾಂಗದಲ್ಲಿಯೂ ಬೀರುವದು "ನಾಂ" ಎಂಬ ಮಂತ್ರಸ್ವಾಯತದಿಂದ ಶರೀರದಲ್ಲಿ ಪೃಥ್ವಿಯ ಅಂಶವೆಲ್ಲವೂ ಆಚಾರಲಿಂಗವಾಗಿ ಮಾರ್ಪಡುವದು. 'ಮಾಂ" ಎಂಬ ಮಂತ್ರಸ್ವಾಯತದಿಂದ ನೀರಿನ ಅಂಶವೆಲ್ಲವೂ ಗುರುಲಿಂಗವಾಗಿಯೂ "ಶಿ" ಎಂಬ ಮಂತ್ರ ಸ್ವಾಯತದಿಂದ ಬೆಂಕಿಯ ಅಂಶವೆಲ್ಲವೂ ಶಿವಲಿಂಗವಾಗಿಯೂ, "ವಾಂ" ಎಂಬ ಮಂತ್ರ ಸ್ವಾಯತದಿಂದ ಗಾಳಿಯ ಅಂಶವೆಲ್ಲವೂ ಜಂಗಮಲಿಂಗವಾಗಿಯೂ, ಯಾಂ" ಎಂಬ ಮಂತ್ರಸ್ವಾಯತದಿಂದ ಬಯಲಿನ ಅಂಶವೆಲ್ಲವೂ ಪ್ರಸಾದಲಿಂಗವಾಗಿಯೂ, "ಓಂ' ಎಂಬ ಮಂತ್ರಸ್ವಾಯತದಿಂದ ಆತ್ಮನ ಅಂಶವೆಲ್ಲವೂ ಮಹಲಿಂಗವಾಗಿಯೂ ಮಾರ್ಪಡುವದು, ಎಂದು ಎಲ್ಲ ವಚನಕಾರರೂ ಸಾರಿರುವರು ವೈಜ್ಞಾನಿಕ ದೃಷ್ಟಿಯಿಂದ ನೋಡುವ:— ರಸಾಯನಶಾಸ್ತ್ರಜ್ಞರು ಕೆಲವು ಹೂಗಿಡಗಳ ಬಡ್ಡಿಗೆ ಇಂಜಕ್ಷನ್‌ಗಳನ್ನು ಕೊಟ್ಟು ಆ ಹೂಗಿಡಗಳ ಬಣ್ಣವನ್ನು ತಮಗೆ ಬೇಕಾದ ರೀತಿಯಲ್ಲಿ ಮಾರ್ಪಡಿಸುತ್ತಿರುವುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿರುತ್ತೇವೆ. ಅದೇ ರೀತಿಯಲ್ಲಿ ಹಣ್ಣುಗಳ ರುಚಿಯನ್ನು ಕಸಿ ಮಾಡುವದರ ಮೂಲಕ ಉತ್ತಮ ತರಗತಿಗೆ ತಂದಿರುವರು. ಅವರು ಹೂಗಿಡಗಳನ್ನು

ಹಣ್ಣಿನ ಗಿಡಗಳನ್ನು ನಾಶಮಾಡದೆ ತಮಗೆ ಬೇಕಾದ ರೀತಿಯಲ್ಲಿ ಮಾರ್ಪಡಿಸಿರುವರು. ಅಂದಬಳಿಕ ಪಂಚಭೂತಗಳನ್ನು ಮತ್ತು ಆತ್ಮವನ್ನು ಷಡಕ್ಷರ ಮಂತ್ರಗಳಿಂದ ಲಿಂಗಮಯವಾಗಿ ಶ್ರೀಗುರುವು ಮಾರ್ಪಡಿಸಿರುವುದು ಅನುಭವಸಿದ್ಧವಾಗುತ್ತದೆ. ಪ್ರಪಂಚದಲ್ಲಿರುವ ಯಾವ ಶಕ್ತಿಯನ್ನು ಕೂಡ ಹೊಸದಾಗಿ ಹುಟ್ಟಿಸಲೂ ಅಥವಾ ನಾಶಮಾಡಲು ಸಾಧ್ಯವಿಲ್ಲ. ಆದರೆ ಅವುಗಳನ್ನು ಒಂದು ರೀತಿಯಿಂದ ಮತ್ತೊಂದು ರೀತಿಗೆ ಬದಲಾವಣೆಯನ್ನು ಮಾಡಬಹುದು. ನೀರಿನ ಶಕ್ತಿಯನ್ನು ಕ್ರಿಯಾಶಕ್ತಿಯಾಗಿಯೂ ಕ್ರಿಯಾಶಕ್ತಿಯನ್ನು ವಿದ್ಯುತ್ತ ಶಕ್ತಿಯಾಗಿ ಮಾರ್ಪಡಿಸಿ ಪುನಃ ವಿದ್ಯುತ್ತ ಶಕ್ತಿಯನ್ನು ನಾನಾ ಬಗೆಯಾದ ರೀತಿಯಲ್ಲಿ ಮಾರ್ಪಡಿಸಿ ಮಾನವನು ತನಗೆ ಅನುಕೂಲ ಮಾಡಿಕೊಂಡಿರುವದನ್ನು ನಾವೆಲ್ಲರೂ ಕಣ್ಣಾರೆನೋಡುತ್ತೇವೆ. ಅದೇ ರೀತಿಯಲ್ಲಿಯೇ ಶಿವಶರಣ ಶಿವಶರಣೆಯರ ಕಾಯವು ಇಷ್ಟಲಿಂಗವಾಗಿಯೂ ಮನವು ಪ್ರಾಣಲಿಂಗವಾಗಿಯೂ ಕಾರಣವು ಭಾವಲಿಂಗವಾಗಿಯೂ ಮಾರ್ಪಡಿಸಲ್ಪಟ್ಟಿರುವುದು. ಆದುದರಿಂದಲೇ ಅವರ ವರ್ತನೆಯು ಕೇವಲ ದೈವಿಕವಾಗಿರುತ್ತದೆ. ಜೀವಭಾವವುಳ್ಳ ಮಾನವನು ಬಂದ ಎಲ್ಲ ಪದಾರ್ಥಗಳನ್ನು ಜೀವಭಾವದಿಂದ ಸೇವಿಸಿ ಜೀವಭೋಗೋಪಭೋಗಿಯಾಗಿರುವನು. ಲಿಂಗಧಾರಿಯಾದರೂ ಲಿಂಗಾನುಭಾವಿಯಾದರೂ ಶಿವಶರಣರೂ ಬಂದ ಎಲ್ಲ ವಸ್ತುಗಳನ್ನು ಪರಾತ್ಪರವಸ್ತುವಿಗೆ ಅರ್ಪಿಸಿ ಬಂದ ಪ್ರಸಾದವನ್ನೇ ಸೇವಿಸಿ ಲಿಂಗಭೋಗೋಪಭೋಗಿಯಾಗಿರುವದರಿಂದ ಪ್ರಸಾದಕಾಯ, ಅಥವಾ ಮಂತ್ರಕಾಯವುಳ್ಳವರಾಗಿರುವರು.

ಶ್ರೀಗುರುವಿನ ಶುದ್ಧ ಪ್ರಸಾದವನ್ನು ಕೊಂಡು ಎನ್ನ ತನು ಇಷ್ಟಲಿಂಗವಾಯಿತ್ತು.

ಶ್ರೀಲಿಂಗದ ಸಿದ್ಧಪ್ರಸಾದವನ್ನು ಕೊಂಡು ಎನ್ನ ಮನ ಪ್ರಾಣಲಿಂಗವಾಯಿತ್ತು.

ಶ್ರೀ ಜಂಗಮದ ಪ್ರಸಿದ್ಧ ಪ್ರಸಾದವನ್ನು ಕೊಂಡು ಎನ್ನ ಭಾವ. ಭಾವಲಿಂಗವಾಯಿತ್ತು.

ಎನ್ನುವ ಅರ್ಥ ಬರುವ ವಚನಗಳನ್ನೂ ಶ್ಲೋಕಗಳನ್ನೂ ಏಕದಶ ಪ್ರಸಾದವನ್ನು ವಿವರಿಸುವ ಭಾಗಗಳಲ್ಲಿ ತಿಳಿಸಿರುವರು. ಈ ಬಗ್ಗೆ ಸಿದ್ಧೇಶ್ವರ ವಚನದಲ್ಲಿ ಪುಟ ೭೦ ವಚನ ೨೦೨.

ಆಧಾರ ಚಕ್ರದಲ್ಲಿ ನಕಾರ ಸ್ವಾಯತ ಸ್ವಾದಿಷ್ಠಾನ ಚಕ್ರದಲ್ಲಿ ಮಕಾರ ಸ್ವಾಯತ, ಮಣಿಪೂರಕ ಚಕ್ರನಲ್ಲಿ ಶಿಕಾರ ಸ್ವಾಯತ, ಅನಾಹತ ಚಕ್ರದಲ್ಲಿ ವಕಾರ ಸ್ವಾಯತ, ಅಜ್ಞಾ ಚಕ್ರದಲ್ಲಿ ಓಂಕಾರ ಸ್ವಾಯತ ಇದು ಕಾರಣ ಶರಣನ ಕಾಯ ಷಡಕ್ಷರ ಮಂತ್ರಶರೀರವಾಗಿ ಸರ್ವಾಂಗವೆಲ್ಲವೂ ಜ್ಞಾನಕಾಯ ಕಾಣಾ ಮಹಾಲಿಂಗಗುರುಶಿವ ಸಿದ್ಧೇಶ್ವರ ಪ್ರಭುವೆ.

ವಚನ ೨೦೩ ಓಂಕಾರವೇ ಪಂಚಭೂತಾತ್ಮಮಯ ನೋಡಾ. 'ನ' ಕಾರವೇ ದಶೇಂದ್ರಿಯ ಮಕಾರವೇ ಮನಪಂಚಕಂಗಳು ನೋಡಾ ಶಿಕಾರವೇ ಪ್ರಾಣಸ್ವರೂಪು, ವ ಕಾರವೇ ದಶವಾಯುಂಗಳ ಸ್ವರೂಪು. ಯ ಕಾರವೇ ತ್ರಿಗುಣ ಸ್ವರೂಪು ನೋಡಾ. ಓಂಕಾರವೇ ಪಾದಾದಿ ಮಸ್ತಕ ಪರ್ಯಂತರ ಪೂರ್ಣವಾಗಿ ತ್ವಗುಮಯವಾಗಿಪ್ಪುದು ನ ಕಾರವೇ ರುಧಿರಮಯವಾಗಿಪ್ಪುದು. ಮ ಕಾರವೇ ಮಾಂಸಮಯವಾಗಿಪ್ಪುದು. ಶಿ ಕಾರವೇ ಮೇದೋಮಯವಾಗಿಪ್ಪುದು. ವ ಕಾರವೇ ಅಸ್ಥಿಮಯವಾಗಿಪ್ಪುದು. ಯ ಕಾರವೇ ಮಜ್ಜಮಯವಾಗಿಪ್ಪುದು. ಷಡಕ್ಷರ ಮಂತ್ರವೆಲ್ಲವೂ ಕೂಡಿ ಶುಕ್ಲಮಯವಾಗಿಪ್ಪುದು. ಇದು ಕಾರಣ ಶರಣನ ಸಪ್ತಧಾತು ಸರ್ವೇಂದ್ರಿಯ ವಿಷಯ ಕರಣಂಗಳೆಲ್ಲವೂ ಷಡಕ್ಷರ ಮಂತ್ರಮಯವಾಗಿಪ್ಪುದು ಇದು ಕಾರಣ ಶರಣನ ಶರೀರವೇ ಶಿವನ ಶರೀರ ನೋಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ.

ಈ ಮೇಲಿನ ಎರಡು ಉಪದೇಶ ಮಂತ್ರ ಭಾಗವನ್ನು ವಿವರಿಸಿ ಅನುಭಾವ ಮಾಡಿದಲ್ಲಿ ಶಿವಶರಣ ಶಿವಶರಣೆಯರ ಪುತ್ರನು ಲಿಂಗ ಶರೀರಿಯಾಗಿಯೇ ಇರುವನು ಎನ್ನುವುದು ಸಿದ್ಧವಾಗುತ್ತದೆ. ಶಿಶುವು ಲಿಂಗಧಾರಿಯಾಗುವ ಕಾಲದಲ್ಲಿ ಕೇವಲ ಎಳೆದಾಗಿರುವದರಿಂದ ೨೧ ದೀಕ್ಷೆಗಳನ್ನು ಸಾಂಗೋಪಾಂಗವಾಗಿ ಮಾಡಲು ಸಾಧ್ಯವೇ ಇಲ್ಲ. ಒಂದುವೇಳೆ ಮಾಡಿದರೂ ಮೊದಲನೆದಾದ ಆಜ್ಞಾದೀಕ್ಷೆಯು ವಿಗ್ರಹಕ್ಕೆ ಮಾಡಿದಂತಾಗುತ್ತದೆ. ಯಾವನಾಡಿನಲ್ಲಿಯೂ ಈ ಕಾಲದಲ್ಲಿ ಶಿಶುವಿಗೆ ಲಿಂಗಧಾರಣ ಮಹೋತ್ಸವವನ್ನು ವಿವರವಾಗಿ ಮಾಡುವದೇ ಇಲ್ಲ.ಆದರೆ 'ಶಿಶುವಿನ ಬಾಣಂತಿಯು' ಪ್ರಕೃತಿಯನ್ನು ಅನುಸರಿಸಿ ತಮ್ಮ ತಮ್ಮ ಭಕ್ತಿಗನುಸಾರವಾಗಿ ಈ ಮಹೋತ್ಸವವನ್ನು ನೆರವೇರಿಸುವರು. ಗುರುಗಳೇ ಆಗಲಿ. ಜಂಗಮರೇ ಆಗಲಿ, ಈ

ಕಾರ್ಯವನ್ನು ಮಾಡುವರು. ಗುರುವಿನಲ್ಲಿ ಲಿಂಗ ಜಂಗಮವೂ ಜಂಗಮದಲ್ಲಿ ಗುರುಲಿಂಗವೂ ಲಿಂಗದಲ್ಲಿ ಜಂಗಮ ಗುರುವೂ ಇರುವದರಿಂದ ಸನ್ನಿವೇಶಕ್ಕನುಸರಿಸಿ ಗುರುವೇ ಆಗಲಿ, ಜಂಗಮವೇ ಆಗಲಿ, ಕಾರ್ಯವನ್ನು ಪೂರ್ಣಗೊಳಿಸುವದು ಎಲ್ಲೆಲ್ಲಿಯೂ ರೂಢಿಯಲ್ಲಿರುವುದು ತಪ್ಪೇನು ಅಲ್ಲವೆಂದು ಅನೇಕರು ಹೇಳುತ್ತಿರುತ್ತಾರೆ. ಶಿಶುವಿನ ತಂದೆತಾಯಿಗಳೂ, ಶಿವಶರಣರಾಗಿದ್ದರೆ. ಆ ಶಿಶುವಿನ ಭಾವದಲ್ಲಿ ಲಿಂಗವೊಳಕೆಯು ಅಭಿವೃದ್ಧಿಹೊಂದುವುದು.

ಈಗಿನ ನಮ್ಮ ಸಮಾಜದಲ್ಲಿರುವ ೪೦ ಲಕ್ಷ ಪ್ರಜೆಗಳಲ್ಲಿ ೩ ಲಕ್ಷವಾದರೂ ಅಕ್ಷರಜ್ಞರು ಇಲ್ಲವೆಂದು ಹೇಳುವ ಸಮಯದಲ್ಲಿ ತನು ಮನ ಭಾವವೆಲ್ಲವೂ ಲಿಂಗಮಯವಾಗಿರುವ ಶಿವಶರಣರು ಇರುವ ಸಂಖ್ಯೆ ಬಹಳ ಕಡಿಮೆ. ಅದರಲ್ಲಿಯೂ ವಿದ್ಯೆ ಕಲಿತ ಎಷ್ಟೋ ಸುಶಿಕ್ಷಿತರೂ ಕೂಡ ಇದರಲ್ಲಿ ೧೦೦ಕ್ಕೆ ೯೦ ಮಂದಿ ನಾಲಿಗೆಯ ರುಚಿಗೋಸ್ಕರವಾಗಿ ಭವಿಗಳು ಮಾಡಿದ ಪಾಕವನ್ನು ಯಥೇಚ್ಛವಾಗಿ ಕಂಡ ಕಂಡ ಭವಿಗಳ ಹೊಟೇಲುಗಳಲ್ಲಿ ತಿಂದು ತೇಗಿ ನಾವು ಲಿಂಗಾಯಿತರು ಎಂದು ಹೆಸರಿಗೆ ಮಾತ್ರ ಹೇಳಿಕೊಳ್ಳುತ್ತಿರುವರು ಎಂದು ಎಲ್ಲೆಲ್ಲಿಯೂ ಧ್ವನಿಬರುತ್ತಲಿದೆ. ಎಷ್ಟೋ ಜನ ವಿದ್ಯೆ ಕಲಿತವರೇ ಶಿವಪೂಜೆಯನ್ನೂ ಮಾಡುತ್ತಿರುವದಿಲ್ಲ. ವೀರಶೈವ ತತ್ವದ ಕಡೆಗೆ ಕಣ್ಣೆತ್ತಿ ಕೂಡ ನೋಡುವುದಿಲ್ಲ ಎಂದು ಸೂಚಿಸಲು ನನಗೆ ಬಹಳ ಸಂಕಟವಾಗುತ್ತದೆ. ಇಂಥವರ ಪುತ್ರರು ಎಷ್ಟರ ಮಟ್ಟಿಗೆ ವೀರಶೈವಾಚಾರ ಸಂಪನ್ನರಾಗುತ್ತಾರೆ ಎಂಬುದು ಎಲ್ಲರೂ ಯೋಚನೆ ಮಾಡಬೇಕಾದದ್ದು. ಅಂದಬಳಿಕ ನಕ್ಷಾಸ್ತ್ರಪಾಡೇನು? ಈ ಕಾಲದಲ್ಲಿ ಆಗುವ ದೀಕ್ಷೆಯನ್ನು ಹೊಂದಿದವರು ಕೂಡ ಎಷ್ಟೋ ಜನ ಆಚಾರ ಹೀನರಾಗಿರುವದು ಪ್ರತಿನಾಡಿನಲ್ಲಿಯೂ ನಾವು ನೋಡುತ್ತಿರುತ್ತೇವೆ. ಅಂದ ಬಳಿಕ ಆಟಪಾಟಗಳಿಗೆ ಮನಗೊಡುವ ಬಾಲಕರು ಕ್ರಿಯಾ ಜ್ಞಾನ ಸಂಮಿಳಿತರಾಗಿರುವುದು ಬಹಳ ವಿರಳ. ಅದರೂ ಲಿಂಗವನ್ನು ಸುಮ್ಮನೇ ಅಂಗದಲ್ಲಿ ಧರಿಸಿರುವದರಿಂದ ಲಿಂಗ ಸಾಯುಜ್ಯದಲ್ಲಿರುವುದು ಖಂಡಿತವಾದ ಮಾತು ಎಂದು ಶತಶತ್ರಯದಲ್ಲಿ ಹೇಳಿರುವುದು ನಿಜಕ್ಕೂ ಸರಿ. ಬಾಲಕರು ಮಹಾವಸ್ತುವಿನ ತತ್ವವನ್ನು ತಿಳಿದಿರುವುದಿಲ್ಲವಾದುದರಿಂದ ಲಿಂಗಾಂಗಸಮರಸ ಸುಖವನ್ನು ಅನುಭವಕ್ಕೆ ತರದು ಕೊಳ್ಳುವದು ಸಾಧ್ಯವಿಲ್ಲ. ಅತ್ತಲಿತ್ತ ಹೋಗುವ ಅವರ ಮನವನ್ನು

ತಂದು ಪರಮಾತ್ಮನ ಕಡೆಗೆ ಬಿಡುವುದು ಗುರುಹಿರಿಯರ ಪಾಲಿಗೆ ಬಂದದ್ದು ಎಷ್ಟೋ ಬಾಲಕರು ತಮ್ಮ ಕೂಸಿನ ಅವಸ್ಥೆಯಲ್ಲಿ ಕಟ್ಟಿದ ಲಿಂಗವನ್ನು ಬಿನ್ನ ಮಾಡಿಕೊಂಡೋ ಕಳಕೊಂಡೋ ಇರುವರು. ಇಂಥ ತಪ್ಪುಗಳನ್ನು ತಿದ್ದಿ ಕರ್ತವ್ಯ ಪರರನ್ನಾಗಿ ಮಾಡುವುದು ಗುರುಹಿರಿಯರ ಕರ್ತವ್ಯವಲ್ಲವೇ? ಈ ರೀತಿಯಲ್ಲಿ ಶಿವಪೂಜೆಗೆ ಮೊದಲು ಮಾಡುವ ಕಾರ್ಯಕ್ಕೆ ನೆರೆಬಿಡಿಸುವುದು" ಎಂದು ಎಲ್ಲೆಲ್ಲಿಯೂ ರೂಢಿಯಿರುತ್ತದೆ. ಎಂದು ಹಿಂದಿನ ಸಂಚಿಕೆಯಲ್ಲಿ ವಿನಂತಿ ಮಾಡಿಕೊಂಡಿರುತ್ತೇನೆ. ಈಗಿನವರಲ್ಲಿ ಕೆಲವರು ಈ ಕಾರ್ಯವನ್ನು ಕೂಡ ಸರಿಯಾಗಿ ಮಾಡದೆ ಸಮಾಜದ ತರುಣರಿಗೆ ಉತ್ಸಾಹವಿಲ್ಲದಂತೆ ಮಾಡಿರುತ್ತಾರೆ. ಮೊದಲು ಭಕ್ತಿ ಪ್ರೇಮ ಶ್ರದ್ಧೆಯನ್ನು ತೋರಿಸಿಕೊಟ್ಟನಂತರ ತತ್ವದ ಅಂತಸ್ಥನ್ನು ಅನುಸರಿಸಿ ಬೋಧಿಸಬೇಕು.

ಇನ್ನು ಕ್ರಿಯಾತ್ಮಕ (ಪ್ರಾಕ್ಟಿಕಲ್) ವಾಗಿ ತಿಳಿಯಲೇಬೇಕೆಂದು ಇಚ್ಛೆಯುಳ್ಳವರು ಸದ್ಗುರು ಸೇವೆಯನ್ನು ಮಾಡುತ್ತ ೨೧ ದೀಕ್ಷೆಗಳ ಆಳವಾದ ಗುಟ್ಟನ್ನು ತಿಳಿದು ಲಿಂಗಾಂಗಸಮರಸವನ್ನು ಪಡೆಯಬೇಕಾಗುತ್ತದೆ. ಈ ೨೧ ದೀಕ್ಷೆಗಳನ್ನು ಮಾಡುವ ಶ್ರೀಗುರುವು ಶಿಷ್ಯನ ಆಕರ್ಷಣ ಶಕ್ತಿಗಳನ್ನು ಅನುಸರಿಸಿ ಅನುಭವಕ್ಕೆ ತಂದು ಕೊಡುವವನಾಗಬೇಕು. ಬಾಲಕನೂ ಕೂಡ ಉತ್ಸಾಹದಿಂದ ತಿಳಿದುಕೊಳ್ಳಲು ಆತುರನಾಗಿರಬೇಕು. ಇಬ್ಬರಲ್ಲಿ ಒಬ್ಬರು ದಾರಿತಪ್ಪಿದರೂ ಆ ಕ್ರಿಯೆಯು ಉಪಯೋಗಕ್ಕೆ ಬರುವದೇ ಇಲ್ಲವೆಂದು ಅನೇಕ ಶಿವಾನುಭಾವಿಗಳು ಅಭಿಪ್ರಾಯ ಪಡುತ್ತಾರೆ

ಆಜ್ಞಾದೀಕ್ಷೆ, ಉಪಮಾದೀಕ್ಷೆ. ಸ್ವಸಿಕಾರೋಹಣದೀಕ್ಷೆ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ ಈ ಏಳನು ಕಾಯಕ್ಕುಪದೇಶ ಮಾಡುವರು ಸಮಯನಿಸ್ಸಂಸಾರ, ನಿರ್ವಾಣ, ತತ್ವದಿಕ್ಷೆ ಅಧ್ಯಾತ್ಮ ಅನುಗ್ರಹ, ಸತ್ಯ ಶುದ್ಧ. ಈ ಏಳನು ಪ್ರಾಣಕ್ಕುಪದೇಶ ಮಾಡುವದು. ಏಕಾಗ್ರಚಿತ್ತದೃಢವ್ರತಃ ಪಂಚೇಂದ್ರಿಯಾರ್ಪಿತ, ಅಹಿಂಸೆ, ಲಿಂಗನಿಜ ಮನೋಲಯ ಸದ್ಯೋನ್ಮುಕ್ತಿ, ಮನಕ್ಕುಪದೇಶಮಾಡುವುದು. ಈ ಕ್ರಮವನರಿದು ಮಾಡುವದು ಕೂಡಲ ಚನ್ನಸಂಗಯ್ಯನಲ್ಲಿ ಸಹಜದೀಕ್ಷೆಯಯ್ಯ ಎಂದು ಶ್ರೀಷಡುಸ್ಥಲ ಚಕ್ರವರ್ತಿ ಚನ್ನಬಸವಣ್ಣನವರು ಅಪ್ಪಣೆಕೊಡಿಸಿರುವರು. ಈ ೨೧ ದೀಕ್ಷೆಗಳ ವಿವರವನ್ನು ತಿಳಿದುಕೊಳ್ಳಲು ಸಾಕಾದಷ್ಟು ಜ್ಞಾನವು ದೀಕ್ಷೆಮಾಡಿಸಿಕೊಳ್ಳುವವನಿಗೆ ಇರಲೇ

ಬೇಕು. ಅಂದಬಳಿಕ ಕೂಸಿಗೆ ಎಷ್ಟುಮಟ್ಟಿಗೆ ಅನುಭವವಾಗುವದು ? ಎಂದು ಎಲ್ಲರೂ ಯೋಚನೆ ಮಾಡಬೇಕು. ಆದುದರಿಂದ ಈ ಲೋಕದಲ್ಲಿಯೇ ಲಿಂಗಾಂಗ ಸಮರಸಸುಖವನ್ನು ಕೊಂಡುಕೊಳ್ಳುವವರೂ ಕೂಡ ಶ್ರೀಗುರುವಿನ ಬಳಿ ಸೇವೆಯನ್ನು ಮಾಡುತ್ತ ನಡೆನುಡಿಗಳನ್ನು ಅನುಭವಕ್ಕೆ ತಂದುಕೊಂಡು ಶ್ರೀಗುರುವಿನ ಮೆಚ್ಚಿಗೆಗೆ ಪಾತ್ರರಾಗುತ್ತಾರೆ ಶ್ರೀಗುರುವು ಕರೆಸಿ ಹೇಳಿಸ ತಾಗ ದೀಕ್ಷೆ ಯನ್ನು ಮಾಡಿ ತನ್ನ ಸ್ವರೂಪವನ್ನೇ ಶಿಷ್ಯನಿಗೂ ಕೊಡುತ್ತಾನೆ. ಕೊನೆಗೆ ಶಿಷ್ಯನೂ ತನ್ನ ಸ್ವರೂಪವನ್ನೇ ಹೊಂದಿರುತ್ತಾನೆ ಈತನನ್ನು ನನ್ನನು ಒಂದೇ ಎಂದು ಗೌರವಿಸಿ ತಿಳಿಯಬೇಕು ಎಂದು ಸಮಾಜದವರ ಎದುರಿನಲ್ಲಿ ಶಿಷ್ಯನನ್ನು ಸನ್ಮಾನಿಸುವದು ಒಂದು ಸಮಾರಂಭಕ್ಕೆ ದೀಕ್ಷಾ ಮಹೋತ್ಸವವೆಂದು ಕರೆಯುತ್ತಾರೆ. ಈತನು ವೀರಶೈವ ತತ್ವಗಳನ್ನು ಪರಿಪಾಲಿಸುತ್ತಾ ಜನಗಳಿಗೆ ತನ್ನ ಕೈಲಾದಮಟ್ಟಿಗೆ ಜ್ಞಾನಬೋಧೆಯನ್ನು ಮಾಡುತ್ತ ಸಂಚರಿಸುತ್ತಾನೆ. ಕೆಲವರು ಇದ್ದ ಊರಿನಲ್ಲಿಯೇ ತಮ್ಮ ಜನಾಂಗಗಳಿಗೆ ಬೋಧೆಯನ್ನು ಮಾಡುತ್ತ ವೀರಶೈವ ತತ್ವವನ್ನು ಕಾಪಾಡಿಕೊಂಡು ಬರುತ್ತಾರೆ. ಜನಗಳಿಗೆ ಬೋಧಿಸುವರೇ ತಪ್ಪುದಾರಿಯಲ್ಲಿ ನಡೆದರೆ ಬೋಧಿಸುವ ತತ್ವವು ವಿಶಾಲವಾದ ಬೀಡಿನಲ್ಲಿ ಬೆಳಗುವದಿಲ್ಲ. ಆದುದರಿಂದ ಕಡೆಗೆ ಬೋಧಿಸುವವನಾದರೂ ತತ್ವಕ್ಕೆ ತಕ್ಕಂತೆ ನಡೆಯಬೇಕಾಗುತ್ತದೆ ಜನಗಳೂ ಈತನಲ್ಲಿ ಭಕ್ತಿ ಹುಟ್ಟಿ ತಾವೂ ಆತನಂತೆ ನಡೆಯಲು ಮೊದಲು ಮಾಡುತ್ತಾರೆ.

ನಮ್ಮ ಸಮಾಜದಲ್ಲಿ ಮೊದಲಿನಿಂದಲೂ ಅವರವರ ಅನುಕೂಲಕ್ಕೆ ತಕ್ಕಂತೆ ಶಿವಪೂಜಾದಿಗಳನ್ನು ನಡೆನುಡಿಗಳನ್ನು ಇಟ್ಟುಕೊಂಡಿರುತ್ತಾರೆ. ಲೋಕವ್ಯವಹಾರ ಮಾಡುವವರು ಕಟ್ಟಾಗಿ ಆಚಾರಗಳನ್ನು ಇಟ್ಟುಕೊಳ್ಳಲು ಹೇಗೆ ಸಾಧ್ಯ. ಅವರು ತಮ್ಮ ಅನುಕೂಲಕ್ಕೆ ತಕ್ಕಂತೆ ಶಿವಪೂಜಾದಿಗಳನ್ನು ಮಾಡಿ ತೃಪ್ತರಾಗುತ್ತಾರೆ. ಇಂಥವರನ್ನು ದೀಕ್ಷೆ ಮಾಡಿಕೊಂಡೇ ತೀರಬೇಕು. ಇಲ್ಲದೆ ಹೋದರೆ ನಿಮಗೆ ಮುಕ್ತಿಯಿಲ್ಲವೆಂದು ಹೇಳಿದರೆ ಲಿಂಗದ್ರೋಹ ಬರುವದು. ಅವರು ಲಿಂಗಧಾರಿಗಳಾಗಿರುವುದರಿಂದ ಲಿಂಗಸಾಯುಜ್ಯದಲ್ಲಿಯೇ ಇರುತ್ತಾರೆ. ಆದರೆ ಪರಿಪೂರ್ಣವಾದ ಲಿಂಗಾಂಗ ಸಮರಸ ಸುಖವನ್ನು ಅನುಭವಿಸಲಾರರು. ಅವರಲ್ಲಿಯೂ ಕೆಲವರು ತಮ್ಮ ಜ್ಞಾನಾಭಿವೃದ್ಧಿಯನ್ನು ಹೆಚ್ಚಿಸಿಕೊಂಡು ವೀರಶೈವ ತತ್ವಕ್ಕೆ ತಕ್ಕಂತೆ ನಡೆಯುವವರು ಇದ್ದೇ ಇದ್ದರೂ ಅವರ ನೂರರ ಸಂಖ್ಯೆಯು ಬಹು ಕಡಿಮೆ.

"ಕೂಸಿನಲ್ಲಿಯೇ ದೀಕ್ಷೆಯಾಗಿದೆ. ಯಾರೂ ಪುನಃ ದೀಕ್ಷೆಯನ್ನು ಹೊಂದಕೂಡದು. ಮಾಡಿದ್ದೇ ಮಾಡುವರಲ್ಲಿ ಸುಖವಿಲ್ಲವೆಂದು ಗೊತ್ತಾ ತಪ್ಪು ತಿಳುವಳಿಕೆಗಳನ್ನು ಹೆಚ್ಚಿಕೊಳ್ಳುತ್ತಾ ಹೋದಲ್ಲಿ ಕೆಲವಂದು ವರ್ಷಗಳಲ್ಲಿ ಆಚರಣೆಯೇ ಬೇರೆ ಮಾರ್ಗವನ್ನು ಹಿಡಿಯುವದು ಎಂದು ಹೇಳಿದರೆ ತಪ್ಪೇನೂ ಆಗುವದಿಲ್ಲ. ಆದರೆ ಈಗಿನ ಕಾಲದಲ್ಲಿ ಹೋಮಾದಿಗಳನ್ನು ಮಾಡುತ್ತ ದೀಕ್ಷಾಸಮಾರಂಭವೆಂದು ಹೆಸರಿಟ್ಟುಕೊಂಡು ಒಟ್ಟಾಗಿ ವಟುಗಳನ್ನು ಸೇರಿಸಿ ಮುಂಡನವನ್ನು ಮಾಡಿಸಿ ಹರಿಣದ ಪತ್ತಲವನ್ನು ಉಡಿಸಿ ಒಂದು ಕಪ್ಪಿಗೆಯನ್ನು ಜೋಳಿಗೆಯನ್ನು ಕೊಟ್ಟು ಷಡಕ್ಷರಿಯನ್ನು ಪಂಚಾಕ್ಷರಿಯನ್ನು ಅನುಭವವಿಲ್ಲದೆ ಕಿವಿಯಲ್ಲಿ ಹೇಳಿ ದೀಕ್ಷೆಯಾಯಿತು. ಹೊರಡಿ ಎನ್ನುವ ಸಮಾರಂಭಗಳಿಂದ ಸಮಾಜಕ್ಕೆ ಬಹಳ ತೊಂದರೆಯಾಗುತ್ತೆ. ಈ ತೊಂದರೆಗಳನ್ನು ನಾವು ಕಣ್ಣಾರೆ ನೋಡುತ್ತಿರುತ್ತೇವೆ. ಇಂಥ ದೀಕ್ಷೆಯನ್ನು ಹೊಂದಿದ ಯಾರನ್ನೇ ಆಗಲಿ, ಪ್ರಶ್ನಿಸಿದರೆ ಕಡೆಗೆ ಪಂಚಾಚಾರ, ಷಟ್ಸ್ಥಲಗಳು, ಅಷ್ಟಾವರಣ, ಇವುಗಳ ಹೆಸರುಗಳನ್ನು ತಪ್ಪದೇ ಹೇಳುವುದಾದರೂ ಬರದೇ ಇದ್ದರೂ ತಪ್ಪಿತಪ್ಪಿಯಾದರೂ ಎಣಿಸಲು ಬರುವುದಿಲ್ಲವೆಂಬುದು ಅನುಭವಕ್ಕೆ ಬಂದಿರುತ್ತದೆ. ಕೂಸಿಗೆ ಲಿಂಗಧಾರಣ ಮಾಡುವ ಎಷ್ಟೋ ಅಯ್ಯನವರುಗಳು ಷಡ್ಲಿಂಗಗಳ ಹೆಸರುಗಳನ್ನು ಕೂಡ ತಿಳಿದಿರುವದಿಲ್ಲ. ಆದುದರಿಂದ ವಿವರವಾಗಿ ಶ್ರೀಗುರುವಿನ ಬಳಿ ವೀರಶೈವ ದೀಕ್ಷೆಯನ್ನು ಹೊಂದಬೇಕು. ಕ್ರಿಯಾ ಜ್ಞಾನಗಳ ಮಟ್ಟವನ್ನು ಹೆಚ್ಚಿಸಬೇಕು.

ಒಟ್ಟಿನಲ್ಲಿ ಲಿಂಗಾಂಗ ಸಮರಸ ಸುಖವನ್ನು ಅನುಭವಕ್ಕೆ ತಂದುಕೊಳ್ಳಬೇಕು. ಸಮಾಜಕ್ಕೆ ತನ್ನ ಸೇವೆಯನ್ನು ಸಲ್ಲಿಸಬೇಕು. ಜ್ಞಾನಜ್ಯೋತಿಯನ್ನು ಜಗತ್ತಿನಲ್ಲಿ ಬೆಳಗಬೇಕು ಎನ್ನುವವರು ತಮ್ಮ ಇಚ್ಛೆಯಿಂದಲೇ ದೀಕ್ಷೆಯನ್ನು ವಿವರವಾಗಿ ಪಡೆಯಬೇಕು. ಇಂಥ ಮಹನೀಯರುಗಳನ್ನು ಮಹಾತ್ಮರುಗಳನ್ನು ಸಮಾಜವು ಗೌರವಿಸಿಕೊಂಡು ಬರುತ್ತಿರುವದು ನಮ್ಮ ಕರ್ನಾಟಕದಲ್ಲಿ ರೂಢಿಯಲ್ಲಿಯೇ ಇದೆ. ಹಾಗಲ್ಲದೆ ಮಠದ ಆಸ್ತಿಗಳಿಗಾಗಿಯೋ; ಸೋಮಾರಿಗಳಾಗಿ ಜೀವನ ಹೊರೆಯಲಿಕ್ಕೋ? ಇಚ್ಛೆಯಿಲ್ಲದವರಿಗೆ ದೀಕ್ಷೆಕೊಡುತ್ತಿರುವದು ಒಳ್ಳೇಯದಲ್ಲ. ಇದರಿಂದ ಅವರು ಕೆಡುವದಲ್ಲದೆ ಇತರರನ್ನು ಕೆಡಿಸುವರು. ಆದು ಕಾರಣ ಯಾರಿಗೆ ಇಷ್ಟವಿದೆಯೋ ಅವರು ದೀಕ್ಷೆಯನ್ನು ಶ್ರೀಗುರುವಿನ

ಮೂಲಕ ಪಡೆದು ಸಮಾಜೋನ್ನತಿಗೆ ಕಾರಣರಾಗಬಹುದು. ಸಾಧ್ಯವಿಲ್ಲದವರು ಸಮಾಜದ ಅಂಗವಾಗಿ ನಿತ್ಯಲಿಂಗಾರ್ಚನೆ ಆದಿಗಳನ್ನು ಮಾಡುತ್ತ ತಮ್ಮ ಶಕ್ತ್ಯಾನುಸಾರವಾಗಿ ಸಮಾಜ ಸೇವೆಯನ್ನು ಮಾಡಬಹುದು. ಹಾಗಲ್ಲದೆ ಯಾರೂ ದೀಕ್ಷಾಬದ್ಧರಾಗದೆ ತತ್ವಗಳನ್ನು ತಿಳಿದುಕೊಂಡು ನಡೆಯದೇ ಹೋದರೆ ಯಾರನ್ನು ಅಯ್ಯನವರು ಎಂದು ಕರಿಯಬೇಕು? ಯಾರನ್ನು ಕರೆದುಕೊಂಡು ಬಂದು ಲಿಂಗಧಾರಣಾದಿ ಕಾರ್ಯಗಳನ್ನು ಮಾಡಬೇಕು ಎಂಬ ಪ್ರಶ್ನೆಯು ನಿಲ್ಲುವದು ಕೊನೆಯದಾಗಿ ಇಚ್ಛೆಯುಳ್ಳವರು ಮಾತ್ರ ದೀಕ್ಷಾಬದ್ಧರಾಗಬೇಕು. ದೀಕ್ಷೆಯೆಂದರೆ ಮಲತ್ರಯಗಳನ್ನು ನಾಶಮಾಡಿ ಲಿಂಗತ್ರಯ ಸಂಬಂಧಿಯಾಗಿರುವುದೆಂದೂ ದೀಕ್ಷೆಯೆಂದರೆ ವೀರಶೈವ ಧರ್ಮ ಪರಿಪಾಲನೆ ಮಾಡುತ್ತೇವೆಂದು ಪ್ರತಿಜ್ಞೆ ಮಾಡುವುದೆಂದೂ ಯಾವ ಹೆಸರಿನಿಂದಲಾದರೂ ನಾವು ಕರೆಯಬಹುದು ಭಕ್ತ ಜಂಗಮರು ಒಂದೇ. ಇಬ್ಬರಿಗೂ ಧರ್ಮವು ಒಂದೇ. ಇಬ್ಬರಿಗೂ ಪಾದೋದಕ ಪ್ರಸಾದವೂ ಧರಿಸಿರುವ ಲಿಂಗವೂ ಒಂದೇ. ಅವರವರ ಅನುಭವಕ್ಕೆ ತಕ್ಕಂತೆ ದಾಸೋಹವನ್ನು ಮಾಡುತ್ತಾ ಆನಂದದಲ್ಲಿರುವರು.

> ಶಿವಭಕ್ತರೇ ಅಧಿಕರು ನೋಡಯ್ಯ ಇದಕ್ಕೆ ಅಧಿಕವಾಗಿ ಜಂಗಮವ ಕಂಡೆ. ಈ ದ್ವಿವಿಧ ಒಂದೇ ಎಂದು ನಂಬಿದೆ ಕೂಡಲಸಂಗಮದೇವ.
>
> (ಶ್ರೀ ಬಸವಣ್ಣನವರು)

> ಭವವಿಲ್ಲದ ಭಕ್ತನಪರಿಯ ನೋಡಾ। ಮನ ಪ್ರಾಣ ಮುಕ್ತಿ ಭಾವ ರಹಿತ ಒಡಲಿಲ್ಲದ ಜಂಗಮದಪರಿಯ ನೋಡಾ। ಸಿಡಿಲ ಮಿಂಚಿನ ಬೆಳಗನೊಂದಡೆಯಲ್ಲಿ ಹಿಡಿಯಲುಂಟೆ? ಈ ಉಭಯ ಒಂದಾದವರ ಕಂಡರೆ ನೀನೆಂಬೆ ಕೂಡಲ ಚೆನ್ನಸಂಗಯ್ಯ.
>
> (ಶ್ರೀ ಚೆನ್ನಬಸವಣ್ಣನವರು)

> ಭಕ್ತನು ಭಕ್ತನ ಕಂಡಲ್ಲಿ ಕೈಮುಗಿವುದೇ ಭಕ್ತಸ್ಥಲ ಜಂಗಮನು ಜಂಗಮನು ಕಂಡಲ್ಲಿ ಶರಣೆಂಬುದೇ ಜಂಗಮಸ್ಥಲ. ಭಕ್ತ ಜಂಗಮರೆಂದು ಬೇರುಂಟೆ? ರಸದಂತೆ ಭಕ್ತ. ರುಚಿಯಂತೆ ಜಂಗಮ ಕಾಣಾ ಕಪಿಲಸಿದ್ಧ ಮಲ್ಲಿಕಾರ್ಜುನಾ
>
> (ಶ್ರೀ ಸಿದ್ಧರಾಮದೇವರು)

ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದು ಲೇಸಯ್ಯ ಭಕ್ತಂಗೆ. ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವುದು ಲೇಸಯ್ಯ, ಜಂಗಮಕ್ಕೆ ಆ ಜಂಗಮದ ಕರ್ತವ್ಯವೇ ಜಂಗಮಕ್ಕೆ ದಾಸೋಹ, ಆ ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ, ಆ ಭಕ್ತನೊಳಗೆ ಜಂಗಮನಡಗಿ, ಆ ಜಂಗಮದೊಳಗೆ ಭಕ್ತನಡಗಿ ಇದನೇನೆಂದು ಹವಣಿಸುವೆನಯ್ಯ? ತೆರಹಿಲ್ಲದ ಘನವ ಈ ಎರಡಕ್ಕೆ ಭವವಿಲ್ಲನೆಂದು ಕೂಡಲಸಂಗಯ್ಯ? ನಿಮ್ಮ ಶ್ರುತಿಗಳು ಹೇಳಿದವಾಗಿ ನಿಮ್ಮ ಶರಣವೆನಗಾಯಿತ್ತು. ಶ್ರೀ ಬಸವಣ್ಣನವರು.

ಎಂದು ನಮ್ಮ ಗುರುಹಿರಿಯರು ಅಪ್ಪಣೆ ಕೊಡಿಸುವರು. ಸಮಾಜ ಬಂಧುಗಳೇ ತಮಗೆ ಇಷ್ಟ ಬಂದ ರೀತಿಯಲ್ಲಿ— ವೀರಶೈವ ಧರ್ಮವನ್ನು ಪರಿಪಾಲಿಸಬಹುದು. ಸರ್ವತೋಮುಖವಾಗಿರುವ ಆ ಪರತ್ಪರ ವಸ್ತುವಿನೊಡನೆ ಜಗತ್ತನ್ನು ಮಾಡುತ್ತಿರುವ ಪ್ರತಿಯೊಬ್ಬ ವೀರಶೈವನು ಅಥವಾ ಲಿಂಗಾಯತನು ಒಂದೇ ದೃಷ್ಟಿಯಿಂದ ಇಕ್ಕಟ್ಟಾಗಿರಲು ಸಾಧ್ಯವಿಲ್ಲ. ಕಸಗೂಡಿಸುವವನು ಮೊದಲುಗೊಂಡು ಚಕ್ರವರ್ತಿಯವರೆಗೂ ಇರುವ ಮಾನವರೆಲ್ಲರೂ ಸಾಧಿಸಬಹುದಾದ ಧರ್ಮವಿದು. ಜಗದೇಕ ಧರ್ಮವೆಂದು ಹೇಳಲು ಉಬ್ಬುತ್ತೇನೆ. ಸ್ವಾತಂತ್ರ್ಯ ಧರ್ಮವಿದು. ಆತ್ಮಸ್ವಾತಂತ್ರ್ಯ, ಸಮಾಜ ಸ್ವಾತಂತ್ರ್ಯ, ವ್ಯಕ್ತಿ ಸ್ವಾತಂತ್ರ್ಯ ಮಾತ ಸ್ವಾತಂತ್ರ್ಯ ಯಾವ ಸ್ವಾತಂತ್ರ್ಯ ಬೇಕಾದರೂ ಈ ನಮ್ಮ ಧರ್ಮದಲ್ಲಿರುವುದು. ಇಂಥ ಅಪೂರ್ವವಾದ ಧರ್ಮದಲ್ಲಿ ಭೇದವನ್ನು ಹುಡುಕಿ ಕಲ್ಪಿಸಿ ಗೊಂದಲವನ್ನು ಎಬ್ಬಿಸಿ ಸಮಾಜ ಭೇದಕರಾಗಬಾರದು. ಈಗಾಗಲೇ ಅರ್ಧಮರ್ಧ ಕಲಿತ ಅಪರಿಪೂರ್ಣ ಪಾಂಡಿತ್ಯವನ್ನು ಹೊಂದಿದವರ ದ್ವೇಷ, ಅಸೂಯೆ ಜೊಳ್ಳುವಾದಂಗಳಿಂದ ಸಮಾಜದಲ್ಲಿ ಪಾರ್ಟಿಗಳು ಹುಟ್ಟಿ ಸಮಾಜವು ನೋಯುತ್ತಿರುವುದು ಪ್ರತಿಯೊಬ್ಬನ ಅನುಭವಕ್ಕೆ ಬಂದಿದೆ. ಅವುಗಳ ಜೊತೆಗೆ ಬೇರೆ ಬೇರೆ ಗುಂಪಿನವರೆಂದು ಭೇದಗಳನ್ನು ಹುಡುಕಿ ಸಮಾಜ ಹೆತ್ತಮ್ಮನ ಕಣ್ಣಿನಲ್ಲಿ ರಕ್ತಧಾರೆಯನ್ನು ಸುಬಾರದೆಂದು ಅತಿ ನಂಬ್ರತೆಯಿಂದ ಈ ಲೇಖಕನು ಬೇಡಿಕೊಳ್ಳುತ್ತಾನೆ.

---

# ಕರ್ನಾಟಕದಲ್ಲಿ ಸಿದ್ಧ-ನಾಥರು

(ಲೇ.—ಶ್ರೀ. ದೇಸಾಯಿ ಪಾಂಡುರಂಗರಾಯರು ಎಂ. ಎ.)

ಉತ್ತರ ಕರ್ನಾಟಕದಲ್ಲಿ ಕಲಬುರ್ಗಿ, ವಿಜಾಪುರ, ಸೋಲಾಪುರ ಜಿಲ್ಲೆಯ ಭಾಗಗಳಲ್ಲಿ ಸಂಚರಿಸುವಾಗ ಸಿದ್ಧರ ಗುಡಿಗಳು ಮತ್ತು ನಾಥ ಎಂಬ ಹೆಸರುಗಳು ಹೆಚ್ಚಾಗಿ ಗಮನಕ್ಕೆ ಬರುವವು. ಭೈರವನಾಥನ ದೇವಾಲಯಗಳು ಬಹುವಾಗಿ ಊರೂರಲ್ಲಿ ದೊರಕುವವು. ಇಂದಿನ ಕಾಲದ ವರೆಗೂ ನಡೆದುಬಂದ ನಾಥ ಪರಂಪರೆ ಮರಾಟರಲ್ಲಿ ಹೆಚ್ಚು ಪ್ರಚುರವಾಗಿರುವದರಿಂದಲೂ ನಾಥರ ಭಕ್ತಿ ಮಾರ್ಗವು ಮಹಾರಾಷ್ಟ್ರದ ರೀತಿಯನ್ನು ಅನುಸರಿಸುವದರಿಂದಲೂ ಇದು ಮಹಾರಾಷ್ಟ್ರದ ಒಂದು ವಿಶೇಷವೆಂಬುದಾಗಿ ಹೇಳುವಂತಿದೆ. ಆದರೆ ಚಾರಿತ್ರಿಕ ದೃಷ್ಟಿಯಿಂದ ಪರಿಶೀಲಿಸಿದರೆ ಈ ನಾಥ ಪಂಥವು ಪ್ರಾಚೀನ ಕಾಲದಲ್ಲಿ ಮಹಾರಾಷ್ಟ್ರದಂತೆ ಕರ್ನಾಟಕದಲ್ಲಿಯೂ ಹೆಚ್ಚಾಗಿ ಪ್ರಚುರವಾಗಿತ್ತು ಎಂದು ಗೋಚರಿಸುವುದು.

ವಿಸ್ತಾರವಾದ ಹಿಂದು ಧರ್ಮದ ಅನೇಕ ಪಂಥ ಪಂಗಡಗಳಲ್ಲಿ ನಾಥ ಸಂಪ್ರದಾಯವು ಒಂದಾಗಿದೆ. ಕೇವಲ ಶೈವ ಮತ್ತು ಕೇವಲ ವೈಷ್ಣವ ಎಂಬ ಎರಡು ವಿಭಿನ್ನ ಉಪಾಸನಾ ಮಾರ್ಗಗಳು ಭಾರತದಲ್ಲಿ ಬಹು ಕಾಲದಿಂದ ಬೆಳೆದು ಬಂದುವು. ಶಿವನೇ ಪರದೈವತವೆಂದು ಒಂದು ಪಂಗಡದವರು ನಂಬಿದರು. ವಿಷ್ಣುವೇ ದೇವೋತ್ತಮನೆಂದು ಇನ್ನೊಂದು ಪಂಗಡದವರು ನಚ್ಚಿದರು. ಇವರಿಬ್ಬರಲ್ಲಿ ಪರಸ್ಪರ ದ್ವೇಷಾಸೂಯೆಗಳೂ ಬಲಿತು ಬಿಗಿದುವು. ಮುಂದೆ ದೇವರಲ್ಲಿಯ ಈ ವಿರೋಧ ಕಲ್ಪನೆ ಮತ್ತು ಉಚ್ಚನೀಚ ಭಾವನೆ ಸರಿದೋರದೆ ಹರಿ ಮತ್ತು ಹರರು ಅಭಿನ್ನರು ಎಂಬ ವಿವೇಕವು ಕೆಲವರಲ್ಲಿ ಉದಯಿಸಿತು. ಇಂಥಹ ವಿವೇಕದ ಇನ್ನೊಂದು ಫಲವಾಗಿ ಉಪಾಸ್ಯತೆಯಲ್ಲಿ ಕೆಲಕಾಲ ಹಿಂದುಳಿದವನೂ ಪ್ರಾಚೀನ ಪೌರಾಣಿಕ ದೇವತೆಗಳಲ್ಲಿ ಪ್ರಮುಖನೂ ತ್ರಿಮೂರ್ತಿಗಳಲ್ಲಿ ಒಬ್ಬನೂ ಸೃಷ್ಟಿಕರ್ತನೂ ಆದ ಬ್ರಹ್ಮನನ್ನು ಮುಂದೆ ಮಾಡಿ ಬ್ರಹ್ಮ, ಶಿವ, ವಿಷ್ಣು

ಇವರುಗಳಲ್ಲಿ ಸಮನ್ವಯ ಮಾಡಲು ಪ್ರಯತ್ನಿಸಿದರು. ಈ ವಿಧದ ಮಾರ್ಗದ ಆಂದೋಲನದ ಒಂದು ಅಂಶವು ನಾಥ ಸಾಂಪ್ರದಾಯದಲ್ಲಿ ಸೇರಿಕೊಂಡಿದೆ.

ಈಚೆಯ ಕಾಲದಲ್ಲಿ ಪ್ರಚಲಿತವಾದ ನಾಥ ಪಂಥಕ್ಕೆ ಸೇರಿದವರು ಹರಿ ಮತ್ತು ಹರರಲ್ಲಿ ಭೇದವನ್ನು ಕಲ್ಪಿಸುವದಿಲ್ಲ. ಬ್ರಹ್ಮ, ಶಿವ, ಮತ್ತು ವಿಷ್ಣುವಿನ ಸಂಯುಕ್ತ ಅವತಾರವಾದ ದತ್ತಾತ್ರೇಯನು ಕೆಲವರಿಗೆ ಇಷ್ಟ ದೈವತ. ದ್ವೈತಾದ್ವೈತ ವಿಶಿಷ್ಟ ಭಕ್ತಿ ಮಾರ್ಗದ ಆಚರಣೆ ಅವರದು. ಜಾತೀಯ ನಿರ್ಬಂಧಗಳಿಗೆ ಅವರು ಹೆಚ್ಚು ಪ್ರಾಮುಖ್ಯತೆಯನ್ನು ಕೂಡವುದಿಲ್ಲ

ನಾಥ ಸಾಂಪ್ರದಾಯದ ಪ್ರಮುಖರ ನಡವಳಿ ಮತ್ತು ಅವರ ವಿಷಯವಾಗಿ ಅನುಯಾಯಿಗಳಲ್ಲಿ ಬೆಳೆದು ಬಂದ ನಂಬುಗೆಯನ್ನು ನೋಡಲು ಈ ನಾಥ ಸಂಪ್ರದಾಯವು ಮೊದಲು ಶಿವನಿಷ್ಠವಾಗಿದ್ದು ಬಳಿಕ ಹರಿಹರ ಸಾಮ್ಯವಾದವು ಕೆಲವರಿಂದ ಪುರಸ್ಕಾರ ಪಡೆಯಿತು ಎಂದು ಹೇಳಬೇಕಾಗುತ್ತದೆ. ಉದಾಹರಣಾರ್ಥವಾಗಿ ನಾಥಪಂಥದ ಆದ್ಯಪ್ರವರ್ತಕನಾದ ಆದಿನಾಥನು ಶಂಕರನ ಅವತಾರ ಎಂಬ ನಂಬುಗೆ ಇದೆ. ಈತನ ಶಿಷ್ಯನಾದ ಮತ್ಸ್ಯೇಂದ್ರನಾಥನು ಶಂಕರನಿಂದ ಉಪದೇಶವನ್ನು ಪಡೆದನು ಎಂದು ಐತಿಹ್ಯವಿದೆ. ಗೋರಕ್ಷನಾಥನಿಂದ ಪುರಸ್ಕೃತವಾದ ಕಾನಫಾಟೆ (ಕಿವಿಹರಳ) ಎಂಬ ಬೈರಾಗಿಗಳಲ್ಲಿ ಶೈವಾಚಾರಗಳ ಪ್ರಾಧಾನ್ಯವು ಕಂಡು ಬರುತ್ತದೆ

ನಾಥ ಸಂಪ್ರದಾಯದ ಕಟ್ಟಡವು ಹಠಯೋಗದ ತಳಹದಿಯ ಮೇಲೆ ನಿಂತುದು. ನಾಥ ಪರಂಪರೆಯ ಆದ್ಯ ಪ್ರವರ್ತಕರೂ, ಪ್ರಧಾನ ಪುರಸ್ಕರ್ತರು ಮತ್ತು ನಾಮಾಂಕಿತ ಸತ್ಪುರುಷರು ಎಲ್ಲರು ಉಗ್ರವಾದ ಇಂದ್ರಿಯ ನಿಗ್ರಹದಿಂದ ಅದ್ಭುತವಾದ ಭೌತಿಕ ವಿಜಯವನ್ನು ಸಂಪಾದಿಸಿದ ಸಿದ್ಧರೇ ಆಗಿದ್ದರು ಎಂಬುದು ಅವರ ಚರಿತ್ರೆಯಲ್ಲಿ ಉಕ್ತವಾದ ಅನೇಕ ಪವಾಡಗಳಿಂದ ವ್ಯಕ್ತವಾಗುತ್ತದೆ. ಈ ಸಿದ್ಧರು ರಸ ವಿದ್ಯೆಯಲ್ಲಿ ಪ್ರವೀಣರು. ಕಿಮಯಾ ಕಲೆಯಲ್ಲಿ (ಚಿನ್ನವನ್ನು ಮಾಡುವ) ನಿಷ್ಣಾತರು ಎಂಬ ವಿಶ್ವಾಸವು ಜನಜನಿತವಾದುದು. ಇಂತು ಸಿದ್ಧಿಯನ್ನು ಪಡೆದವರಲ್ಲಿ ಒಂಬಯ್ವರು (ನವ) ನಾಥರು ಮತ್ತು ಎಂಭತ್ತುನಾಲ್ಕು ಸಿಪ್ಪರು. ವಿಶಿಷ್ಟವಾದ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಈ ನವನಾಥರು ಯಾರು? ಎಂಬ ಬಗೆಗೆ ಏಕಾಭಿಪ್ರಾಯ ವಿದ್ದಂತೆ ತೋರುವದಿಲ್ಲ. ಒಂದು ಮಹಾರಾಷ್ಟ್ರೀಯ ಪರಂಪರೆಯಂತೆ ಈ ಮುಂದೆ ಕಾಣಿಸಿದ ಒಂಬಯ್ವರ ಹೆಸರುಗಳನ್ನು ಕೆಲವರು ಹೇಳು ವರು.

೧ ಆದಿನಾಥ
೨ ಮತ್ಸ್ಯೇಂದ್ರನಾಥ
೩ ಗೋರಕ್ಷನಾಥ
೪ ಚೌರಂಗಿನಾಥ
೫ ಜಾಲಂಧರನಾಥ
೬ ಚರ್ಪಟನಾಥ
೭ ಗೌರಾಯಿ
೮ ಗಂಗಾದೇವಿ
೯ ಮುಕ್ತಾಯಿ ಇಲ್ಲವೆ ಮಿರಾಯಿ

ಇವರಲ್ಲಿ ಕೊನೆಯ ಮೂರು ಹೆಂಗಳೆಯರ ಸ್ಥಳದಲ್ಲಿ ಬೇರೆಯ ವರ ಹೆಸರುಗಳನ್ನು ಕೆಲವರು ಹೇಳುವದುಂಟು.

ಈ ಸಂಪ್ರದಾಯದ ಒಂದು ಪ್ರಮಾಣ ಗ್ರಂಥವಾದ ಹಠಯೋಗ ಪ್ರದೀಪಿಕೆಯಲ್ಲಿ ನಾಥರ ಒಂಭತ್ತು ಸಂಖ್ಯೆಗೆ ಪ್ರಾಧಾನ್ಯವಿದ್ದಂತೆ ತೋರು ವುದಿಲ್ಲ. ಈ ಮೇಲೆ ಹೇಳಿದ ಹೆಸರುಗಳಲ್ಲಿ ಕೆಲವರಲ್ಲದೆ ಬೇರೆ ಹಲವು ಹೆಸರುಗಳು ಅಲ್ಲಿಯ ಹಠಯೋಗಿಗಳ ನಾಮ ಮಾಲಿಕೆಯಲ್ಲಿ ಹೇಳ ಲಾಗಿವೆ. ಅದು ಹೀಗೆ—

೧ ಆದಿನಾಥ ೨ ಮತ್ಸ್ಯೇಂದ್ರನಾಥ ೩ ಶಾಬರನಾಥ ೪ ಆನಂದನಾಥ ೫ ಭೈರವನಾಥ ೬ ಚಾರಂಗಿನಾಥ ೭ ಮೀನ ನಾಥ ೮ ಗೋರಕ್ಷನಾಥ ೯ ವಿರೂಪಾಕ್ಷ ೧೦ ಬಿಲೇಶಯ ೧೧ ಮಂಥಾನ ೧೨ ಭೈರವನಾಥ ೧೩ ಯೋಗಿನಾಥ ೧೪ ಸಿದ್ಧನಾಥ ೧೫ ಬುದ್ಧನಾಥ ೧೬ ಕಂಥಡಿ ೧೭ ಕೋರಂಟಕ ೧೮ ಸುರಾ ನಂದ ೧೯ ಸಿದ್ಧಪಾದ ೨೦ ಚರ್ಪಟಿ ೨೧ ಕಾನೇರೀನಾಥ ೨೨ ಪೂಜ್ಯಪಾದ ೨೩ ನಿತ್ಯನಾಥ ೨೪ ನಿರಂಜನ ೨೫ ಕಪಾಲೀ ೨೬ ಬಿಂದುನಾಥ ೨೭ ಕಾಕಚಂಡೀಶ್ವರ ೨೮ ಅಲ್ಲಾಮಪ್ರಭು

೨೯ ಘೋಡಾಚೋಲೀ ೩೦ ಟಿಂಟಿಣಿ ೩೧ ಭಾನುಕೀ ೩೨ ನರದೇವ ೩೩ ಖಂಡನಾಥ ೩೪ ಕಾಪಾಲಿಕ ೩.

ಈ ಮೇಲಿನ ಪಟ್ಟಿ ಪೂರ್ಣವಾಗಿದೆ ಎಂದು ಹೇಳಲಾಗದು. ಏಕೆಂದರೆ ಈ ಮೇಲೆ ಹೇಳಿದ ನವನಾಥರಲ್ಲಿ ಒಬ್ಬನೆಂದು ಹೇಳಲಾದ ಮತ್ತು ಬೇರೆ ಸಾಧನದಿಂದಲೂ ಪ್ರಖ್ಯಾತ ನಾಥಮತ ನಾಯಕನೆಂದು ಪರಿಗಣನೀಯನಾದ ಜಾಲಂಧರನಾಥನ ಹೆಸರು ಇಲ್ಲಿ ಬಂದಿಲ್ಲ. ಇದೇ ಮೇರೆಗೆ ಹಠಯೋಗ ಪ್ರದೀಪಿಕೆಯ ಪಟ್ಟಿಯಲ್ಲಿ ಎರಡುಬಾರಿ ಹೆಸರಿಸಲಾದ ಭೈರವನಾಥನು ಮೇಲ್ಕಂಡ ನವನಾಥರ ಮಾಲಿಕೆಯಲ್ಲಿ ಸೇರ್ಪಡೆ ಆಗಿಲ್ಲ. ಈ ನವನಾಥರ ಮತ್ತು ಹಠಯೋಗಿಗಳ ಕಾಲಾನುಕ್ರಮವು ಅವರ ನಾಮಮಾಲಿಕೆಯಿಂದ ನಿರ್ಧರಿಸಲಾಗುವದಿಲ್ಲ. ಆದುದರಿಂದ ಇವರ ಕಾರ್ಯಕ್ರಮವನ್ನು ಗೊತ್ತುಪಡಿಸಲು ಬೇರೆ ಸಾಧನಗಳ ಸಹಾಯವನ್ನು ಪಡೆಯಬೇಕಾದುದು ಈ ವಿಷಯ ಮುಂದಿನ ವಿವೇಚನೆಯಲ್ಲಿ ಹೆಚ್ಚು ಸ್ಫುಟವಾಗಲಿದೆ.

ಈ ಸಂಪ್ರದಾಯದ ಪ್ರವರ್ತಕನು ಆದಿನಾಥ ಎಂಬ ಬಗೆಗೆ ಏಕಾಭಿಪ್ರಾಯವಿದೆ. ಈತನ ಶಿಷ್ಯಪರಂಪರೆಯಲ್ಲಿ ಕೆಲರಾದರೂ ಕರ್ನಾಟಕಸ್ಥರು ಇಲ್ಲವೆ ಕರ್ನಾಟಕದ ಸಂಸ್ಕಾರವನ್ನು ಪಡೆದವರು ಆಗಿದ್ದರು ಎಂದು ಹೇಳಬಹುದು. ಆದಿನಾಥನ ಮೂಲ ಸ್ಥಳವಾವುದೋ ತಿಳಿದಿಲ್ಲ. ಆತನು ಕ್ಷತ್ರಿಯ. ಚಿಕ್ಕ ಅರಸರ ಇಲ್ಲವೆ ನಾಯಕರ ವಂಶದಲ್ಲಿ ಹುಟ್ಟಿದವನು ಆಗಿರಬೇಕು. ಪೂರ್ವಾಶ್ರಮದಲ್ಲಿ ಆತನಿಗೆ ಅಂಬರಾಜ ಮತ್ತು ನರಹರಿ ಎಂಬ ಹೆಸರುಗಳು ಇದ್ದುವು. ಗುರು ಶ್ರೀರಂಗದೇವ ಆದಿನಾಥನ ನಿರ್ಯಾಣಕಾಲ ಶಕ ೯೦೯ (ಇ. ಸ. ೯೮೭)

ಆದಿನಾಥನ ಶಿಷ್ಯ ಮತ್ಸ್ಯೇಂದ್ರನಾಥ ಇವನ ಮೂಲ ಸ್ಥಳ ಸಾತಾರಾ ಜಿಲ್ಲೆಯಲ್ಲಿಯ ಬತ್ತೀಸಶಿರಾಳೆ. ಈತನು ಮಾಯಾಶಕ್ತಿಶಾಲಿ. ಅನೇಕ ಪ್ರಾಂತಗಳಲ್ಲಿ ಸಂಚಾರ ಮಾಡಿದನು. ಪಂಜಾಬ, ಮಹಾರಾಷ್ಟ್ರ, ಕರ್ನಾಟಕ, ಮಲಯಾಳ ದೇಶಗಳಲ್ಲಿ ನಾಥ ಸಂಪ್ರದಾಯವನ್ನು ಹಬ್ಬಿಸಿದನು. ಈತನು ಭಗವದ್ಗೀತಾ ಭಕ್ತನು. ಈ ಗ್ರಂಥವನ್ನು ತನ್ನ ಪಥದ ಧರ್ಮಗ್ರಂಥವಾಗಿ ಮಾಡಿದನು. ಆದಿನಾಥನಿಗೆ ಜಾಲಂಧರನಾಥ ಎಂಬ ಇನ್ನೊಬ್ಬ ಬಲಿಷ್ಠ ಶಿಷ್ಯನಿದ್ದನು. ಆತನು ಬಂಗಾಲ ಪ್ರಾಂತ್ಯದಲ್ಲಿ ಹೆಚ್ಚಾಗಿ ಈ ಮತವನ್ನು ಉಪದೇಶಿಸಿದನು.

ಮತ್ಸ್ಯೇಂದ್ರನಾಥನ ಶಿಷ್ಯ ಗೋರಕ್ಷ ಇಲ್ಲವೆ ಗೋರಖನಾಥ. ಈತನ ಮೊದಲಿನ ಹೆಸರು ಕಪ್ಪರದೇವ. ಈತನು ಬಲ್ಲಾಳ ವಂಶೀಯ ಕ್ಷತ್ರಿಯನೆಂದು ಹೇಳುವರು. ಈತನು ಭರತಖಂಡದಲ್ಲಿ ಸಂಚರಿಸಿ ನಾಥಮತವನ್ನು ಬಹುವಾಗಿ ಬೋಧಿಸಿದನು. ಈತನು ಗತಿಸಿದ ಕಾಲ ಇ. ಸ. ೧೧೬೩ ಮಾಘ ಶು. ಚತುರ್ದಶಿ. ಈತನ ಸಮಾಧಿ ಮಂಥಿ ಎಂಬ ಊರಲ್ಲಿ ಇದೆ. ಗೋರಕ್ಷನ ಶಿಷ್ಯ ಗಹನೀನಾಥ. ಗಹನೀಯ ಶಿಷ್ಯ ನಿವೃತ್ತಿನಾಥ. ನಿವೃತ್ತಿಯ ಶಿಷ್ಯ ಜ್ಞಾನೇಶ್ವರ. ಈತನು ಮಹಾರಾಷ್ಟ್ರದಲ್ಲಿ ಸುವಿಖ್ಯಾತನಾದ ಸತ್ಪುರುಷ ಮತ್ತು ಪ್ರಥಮ ಗೀತಾ ಪ್ರವಚನಕಾರ. ಈತನಿಂದ ಈ ಮತವು ಮಹಾರಾಷ್ಟ್ರದಲ್ಲಿ ಮುಂದುವರೆಯಿತು. ಗಹನೀನಾಥನ ಸಮಾಧಿ ಮಂಗಳವೇಢೆಯಲ್ಲಿ ಇದ್ದಿತಂತೆ. ಆದರೆ ಅದನ್ನು ಕಿತ್ತೊಗೆದು ಅದರ ಸ್ಥಳದಲ್ಲಿ ಗೈಬಿ ಸಾಹೇಬಂ ದರ್ಗಾ ಈಗ ಸ್ಥಾಪಿತವಾಗಿದೆ.

ಈ ನಾಥ ಸಂಪ್ರದಾಯವು ಕರ್ನಾಟಕದಲ್ಲಿಯೂ ಹೆಚ್ಚಳವನ್ನು ಪಡೆಯಿತು. ಮುಂದೆ ಇದರ ಕೆಲವು ಅಂಶಗಳು ವೀರಶೈವ ಮತದಲ್ಲಿ ಜೀರ್ಣವಾದವು. ಈ ವಿಷಯವನ್ನು ಚರ್ಚಿಸುವ ಮುನ್ನ ಸಿದ್ಧರ ವಿಷಯದಲ್ಲಿ ಕೆಲವೆಡೆ ಪ್ರಚಲಿತವಾಗಿರುವ ಆಖ್ಯಾಯಿಕೆಗಳನ್ನು ಪರಿಶೀಲಿಸುವ. ಉತ್ತರ ಕರ್ನಾಟಕದ ಭಾಗಗಳಲ್ಲಿ ಸಿದ್ಧರ ಮತ್ತು ಅವರ ಅದ್ಭುತ ಕೃತಿಗಳ ವೃತ್ತಾಂತಗಳು ಅಲ್ಲಲ್ಲಿ ಕೇಳಬರುತ್ತವೆ. ಧಾರವಾಡ ಜಿಲ್ಲೆಯ ಅಗಡಿಯ ಬಳಿಯಲ್ಲಿ ನಾಗಾರ್ಜುನನೆಂಬ ಸಿದ್ಧನು ನೆಲಸಿದ್ದನು ಎಂದು ಹೇಳುವರು. ಗದಗ ತಾಲೂಕಿನ ನಾಗಾಯಿ ಎಂಬ ಊರಲ್ಲಿ ನಾಗಾರ್ಜುನನ ಸುಂದರವಾದ ಒಂದು ವಿಗ್ರಹವಿದೆ. ಈ ನಾಗಾರ್ಜುನನು ಪ್ರಖ್ಯಾತ ರಸಸಿದ್ಧನು. ಗದಗ ತಾಲೂಕಿನಲ್ಲಿ ಉದ್ದವಾದ ಗುಡ್ಡದ ಸಾಲೊಂದು ಹಬ್ಬಿದೆ. ಅದಕ್ಕೆ ಕಪ್ಪತಗುಡ್ಡ ಎಂಬ ಹೆಸರು. ಈ ಗುಡ್ಡದಲ್ಲಿ ನೆಲಸಿದ್ದ ಒಬ್ಬ ರಾಸಾಯನಿಕ ಸಿದ್ಧನ ಕತೆಯನ್ನು ಬಣ್ಣಿಸುವರು. ಈತನು ಶಿವನನ್ನು ಕುರಿತು ತಪಸ್ಸು ಮಾಡಿ ಚಿನ್ನವನ್ನು ಸಿದ್ಧಗೊಳಿಸುವ ವಿದ್ಯೆಯನ್ನು ಗಳಿಸಿಕೊಂಡನಂತೆ ಬಳಿಕ ಈ ಗುಡ್ಡಕ್ಕೆ ಗುಡ್ಡವನ್ನು ಸಮಗ್ರವಾಗಿ ಸುವರ್ಣ ಮಾಡುವ ಉದ್ದೇಶದಿಂದ ಈತನು ತಾನು ಪಡೆದಾ ವಿದ್ಯೆಯ ರಹಶ್ಯವನ್ನು ತನ್ನ ಶಿಷ್ಯರಿಗೆ ನಿವೇದಿಸಿ ತಿಳಿಸಿದನಂತೆ. ಚಿನ್ನವನ್ನು ಮಾಡುವ ಮೂರು ವಸ್ತುಗಳಲ್ಲಿ ಅಂಗಡಿಯೊಳಗಿನರಸ, ಹಿತ್ತಲಡೊಳಗಿನ ಕಸ ಎಂದು ಎರಡು

ವಸ್ತುಗಳ ಹೆಸರನ್ನು ನುಡಿದನಂತೆ. ಮೂರನೆಯದನ್ನು ಹೇಳುತ್ತಿರುವಷ್ಟರಲ್ಲಿ ಭಾವೀ ಅನರ್ಥವನ್ನು ಕಂಡ ಶಿವನು ಓಡಿ ಬಂದು ಆತನ ರುಂಡವನ್ನು ಕತ್ತರಿಸಿದನಂತೆ !

ಹಠಯೋಗ ಪ್ರದೀಪಿಕೆಯಲ್ಲಿ ಹೆಸರಿಸಿದ ನಾಮ ಮಾಲಿಕೆಯಲ್ಲಿ ಅಲ್ಲಮಃ ಪ್ರಭು ದೇವಶ್ಚ । ಎಂದು ಸ್ಪಷ್ಟವಾಗಿ ಅಲ್ಲಮಪ್ರಭುಗಳ ಹೆಸರು ಉಕ್ತವಾಗಿರುವುದರಿಂದ ವೀರಶೈವ ಮತದ ಮಹಾಪ್ರವರ್ತಕರಾದ ಅಲ್ಲಮಪ್ರಭುಗಳು ಈ ಹಠಯೋಗಿಗಳ ಪರಂಪರೆಯಲ್ಲಿ ಗಣ್ಯರಾಗಿದ್ದರು ಎಂದು ವೇದ್ಯವಾಗುತ್ತದೆ. ಮುಂದೆ ಇವರು ತಮ್ಮ ಜೀವನವನ್ನು ವೀರಶೈವ ಯೋಗಕ್ಕೆ ಪರಿವರ್ತಿಸಿಕೊಂಡು ಆ ಮತವನ್ನು ಉದ್ಧರಿಸಿದರು ಎಂದು ವ್ಯಕ್ತವಾಗುತ್ತದೆ. ಈ ಅಂಶವು ವೀರಶೈವರ ಸಾಂಪ್ರದಾಯಿಕ ಪುರಾಣ ಸಾಹಿತ್ಯದಿಂದಲೂ ಒಂದು ವಿಧವಾಗಿ ಪೋಷಿತವಾಗುತ್ತದೆ. ಹೇಗೆಂದರೆ ಚಾಮರಸನು ನಿರೂಪಿಸಿದ ಅಲ್ಲಮ-ಗೊಗ್ಗಯ್ಯರ ಸಂದರ್ಭವನ್ನು ಅವಲೋಕಿಸುವುದು. ಅಲ್ಲಮನು ಗೊಗ್ಗಯ್ಯನಿಗೆ ವೀರಶೈವೋಪದೇಶವನ್ನು ನೀಡಿ ತನ್ನ ಮಾತಿಗೆ ನಿದರ್ಶನವಾಗಿ ಅನಿಮಿಷಯ್ಯನೆಂಬ ಯೋಗಿಯ ದೃಷ್ಟಾಂತವನ್ನು ತೋರಿಸಿ ಮನವರಿಕೆ ಮಾಡುವನು.

ಏನಿದೇನೆಂದಿಬ್ಬರೊಳಿದನು
ಮಾನದಿಂದಗುಳಲು ಸಮಾಧಿ
ಸ್ಥಾನದಾದೇಗುಲವ ಕಂಡೊಳಪೊಕ್ಕು ಹರುಷದಲಿ ।
ಮೌನದಲ್ಲಿ ನಿಬ್ಬೆರಗು ಹೊಡೆದವ
ಧ್ಯಾನದ ನಿಮಿಷದಿಷ್ಟಲಿಂಗ
ಧ್ಯಾನದಂಗವ ಕಂಡನಾಗೊಗ್ಗಯ್ಯನಲ್ಲಮನು ॥ ಪದ್ಯ ೨೪೮

ಹೀಗೆ ಇಬ್ಬರು ನೋಡುತ್ತಿರುವಾಗ ಅನಿಮಿಷಯ್ಯನ ಕೈಯಲ್ಲಿದ್ದ ಲಿಂಗವು ಅಲ್ಲಮನ ಕೈಸೇರಿತು. ಆ ಲಿಂಗದೊಡನೆ ಆ ಶಿವಯೋಗಿಯ ಪ್ರಾಣ ಕಳೆಯೂ ಅಲ್ಲಮನಲ್ಲಿ ಬಂದು ಸೇರಿತು

ನೋಟವೇ ಪ್ರಾಣ ಸ್ವರೂಪಿನ
ಮಾಟವಾದ ನಿಮಿತ್ತ ಲಿಂಗದ
ಕೂಡದೊಡನಾದನಿಮಿಷಯ್ಯನ ಜೀವಕಳೆ ಬಂದು ।
ನಾಟಿತೀತನ ದಿವ್ಯದೇಹದ
ಕೋಟರದೊಳು (ಪ. ೨೫೩ ಪ್ರಭುಲಿಂಗಲೀಲೆಯ ಸಂಗ್ರಹ)

ಈ ಅನಿಮಿಷಯ್ಯ ಯಾರು ? ಹಠಯೋಗಿಗಳ ಪರಂಪರೆಗೆ ಸೇರಿದವರಾದ ಅಲ್ಲಮಪ್ರಭುಗಳಲ್ಲಿ ಪ್ರಾಣಪ್ರತಿಷ್ಠೆಯನ್ನು ಬೀರಿದವನಾದ ಅವರ ಗುರು ಅನಿಮಿಷಯ್ಯನಾದರೂ ಅದೇ ಪರಂಪರೆಗೆ ಸೇರಿದವನೆಂದು ಊಹಿಸಿ ಅರಸಿದರೆ ಅಸಮಂಜಸವೇನು ? ಅನಿಮಿಷ ಇದು ಸಂಸ್ಕೃತ ಪದ. ಇದಕ್ಕೆ ಸಮಾನವಾಚಿ ಪದಗಳು ಮೀನ, ಮತ್ಸ್ಯ ಈ ಎರಡೂ ಹೆಸರಿನ ಯೋಗಿಗಳು ಆದಿನಾಥನ ಪರಂಪರೆಯಲ್ಲಿ ಸಿಕ್ಕುವರು. ಇವರಲ್ಲಿ ಹೆಚ್ಚು ಪ್ರಸಿದ್ಧನೂ ಕರ್ನಾಟಕದಲ್ಲಿ ಮತ ಪ್ರಸಾರ ಮಾಡಿದ್ದವನೂ ಆದ ಮತ್ಸ್ಯೇಂದ್ರನಾಥನೇ ಈ ಅನಿಮಿಷಯ್ಯನೆಂದು ಇಟ್ಟುಕೊಳ್ಳುವದು ಸಮರ್ಪಕವಾಗುವುದು. ಮೇಲೆ ಕಾಣಿಸಿದ ಆದಿನಾಥ ಮತ್ತು ಗೋರಕ್ಷನಾಥರ ಕಾಲಮಾನದಿಂದ ಲೆಕ್ಕಹಾಕಿದರೂ ಈ ಸಮೀಕರಣವು ಬಾಧಿತವಾಗುವದಿಲ್ಲ. ಈ ಅನಿಮಿಷಯ್ಯನು ಚಾಲುಕ್ಯ ರಾಜವಂಶೀಯನೆಂದು ಸಿಂಗಿರಾಜಪುರಾಣ ಮತ್ತು ಚನ್ನಬಸವಪುರಾಣದಿಂದ ತಿಳಿದುಬರುತ್ತದೆ.

ಮುಂದೆ ಅಲ್ಲಮರು ಶ್ರೀಪರ್ವತದಲ್ಲಿ ಗೋರಕ್ಷನೆಂಬ ಸಿದ್ಧನನ್ನು ಸಂಧಿಸಿದರೆಂತಲೂ ತಮ್ಮ ವೀರಶೈವ ಸಿದ್ಧಿಯ ಪ್ರಭಾವದಿಂದ ಆತನ ಹಠಯೋಗ ಸಿದ್ಧಿಯನ್ನು ಪರಾಭವಗೊಳಿಸಿ ಅವನನ್ನೂ ತಮ್ಮ ಮತಕ್ಕೆ ತಿರುಗಿಸಿದರೆಂತಲೂ ಕಥೆಯನ್ನು ಹೇಳಿದೆ.

ಆ ಮಹಾ ಶ್ರೀಗಿರಿಯ ಶಿಖರದಿ
ಕಾಮಿತಾರ್ಥವ ಹಡೆವೆನೆಂದು
ದ್ದಾಮತೆಯ ಗೋರಕ್ಷನೆಂಬ ಸಮಸ್ತ ಸಾಧಕನು ॥

(ಪದ್ಯ ಪ್ರ. ಲೀ. ಸಂಗ್ರಹ ೩೮೯)

ಈ ಗೋರಕ್ಷನು ಸೋತು ಅಲ್ಲಮರ ಶಿಷ್ಯನಾಗಿ ವೀರಶೈವ ಮತವನ್ನು ಅನುಸರಿಸುವವನಾದನು

ಪ್ರೀತಿಯಲಿ ಗೋರಕ್ಷಗೆ ಪರಮ
ನಾಥಪದವಿಯನಿತ್ತು ಬಳಿಕಾಲಿ
ದಾತನಲಿ ಗುರುಪೂಜೆಯನು ಕೈಕೊಂಡು ಕರುಣದಲಿ॥

(ಅದೇ ಪ.-೪೧೧)

# ಸ್ಫುಟ ವಿಷಯಗಳು.

**ಲಿಂಗಧಾರಣೆ ಮತ್ತು ದೀಕ್ಷೆ:-** ಲಿಂಗಧಾರಣೆ ಮತ್ತು ಪಾದೋದಕ ಈ ವಿಷಯಗಳ ಸಂಬಂಧವಾಗಿ ಶಿವಾನುಭವ ಪತ್ರಿಕೆಯಲ್ಲಿ ಅನೇಕ ಲೇಖಗಳು ಪ್ರಸಿದ್ಧಿಸಲ್ಪಟ್ಟಿವೆ. ಆದರೆ ಇನ್ನು ಮುಂದೆ ವಿವಾದಾತ್ಮಕವಾದ ಇಂಥ ಲೇಖಗಳು ನಿಲ್ಲಿಸಲ್ಪಡುವವೆಂದು ನಾವು ಇದೇ ಸಂಚಿಕೆಯಲ್ಲಿ ಸೂಚಿಸಿದ್ದೇವೆ. ಈ ಲೇಖಗಳು ಈಚೆಗೆ ತೀಕ್ಷ್ಣಸ್ವರೂಪವನ್ನು ಹೊಂದಹತ್ತಿದ್ದರಿಂದ ನಾವು ಹೀಗೆ ಮಾಡಬೇಕಾಗಿ ಬಂದಿದೆ. ಆದರೂ ವಾಚಕರೂ ಲೇಖಕರೂ ಈ ವರೆಗೆ ಪ್ರಕಟವಾದ ಮಹತ್ವದ ತತ್ವಗಳನ್ನು ಶಾಂತ ಚಿತ್ತದಿಂದ ಪರಿಶೀಲಿಸಲು ಕೆಲವು ವಿರಾಮವೇಳೆಯು ಅವರಿಗೆ ಇದರಿಂದ ದೊರೆಯುವದೆಂದು ಭಾವಿಸಿದ್ದೇವೆ. ಕೆಲವು ದಿವಸಗಳಲ್ಲಿಯೇ ಈ ವಿಷಯಗಳ ಸಂಬಂಧವಾಗಿ ಕೆಲವೊಂದು ನಿಶ್ಚಿತಸ್ವರೂಪವು ಪ್ರಾಪ್ತವಾಗದೆ ಇರಲಾರದು. ಆಗ ನಾವು ಪುನಃ ಈ ಲೇಖಮಾಲೆಯನ್ನು ಪ್ರಾರಂಭಿಸಬೇಕೆಂದು ಬಯಸಿದ್ದೇವೆ. ಆ ಕಾಲದಲ್ಲಿ ನಮ್ಮ ಸಮಾಜದಲ್ಲಿಯ ವಿದ್ವಜ್ಜನರೂ ವಾಚಕರೂ ಲೇಖಮೂಲಕ ಪುನಃ ನಮ್ಮನ್ನು ಸಹಕರಿಸಬೇಕೆಂದು ಅವರಿಗೆ ನಮ್ಮ ಸವಿನಯ ವಿನಂತಿ ಇದೆ.

**ಶಿವಾನುಭವ ಸಂಘಗಳು:—** ಈ ಸಂಘಗಳು ಈಗ ಎಲ್ಲ ಕಡೆಗೂ ಕ್ರಮೇಣ ಪ್ರಾದುರ್ಭವಿಸಹತ್ತಿವೆಂಬದು ಬಹು ಸಂತೋಷಕರವಾದ ಸಂಗತಿಯಾಗಿದೆ. ಇವುಗಳನ್ನು ಸ್ಥಾಪಿಸುವ ಪ್ರಯತ್ನಗಳಿಂದ ವೀರಶೈವ ಸಂಸ್ಕೃತಿಯ ಜ್ಞಾನವು ದೇಶದಲ್ಲಿ ಹೆಚ್ಚೆಚ್ಚು ಪ್ರಸಾರವಾಗದೆ ಇರದು. ತಿಪಟೂರ, ತುಮಕೂರ ಈ ಭಾಗದಲ್ಲಿ, ಧಾರವಾಡ ಜಿಲ್ಹೆಯ ಪಶ್ಚಿಮ ಭಾಗದಲ್ಲಿ ವಿಜಾಪುರ ಜಿಲ್ಹೆಯಲ್ಲಿ ಮತ್ತು ಕೋಲಾರ ಜಿಲ್ಹೆಯ ಕೆಲವು, ಪ್ರದೇಶಗಳಲ್ಲಿ ಇವುಗಳು ಸ್ಥಾಯಿಕವಾಗುವ ಸುಚಿನ್ಹಗಳು ತೋರುತ್ತಲಿವೆ. ದೊಡ್ಡದೊಡ್ಡ ಪರಿಷತ್ತುಗಳನ್ನು ನೆರೆಸುವದಕ್ಕಿಂತಲೂ ಬಹು ಕಠಿಣವಾದ ಕಾರ್ಯವು ಇದಾಗಿರುತ್ತದೆಂದು ನಾವು ಹೇಳದಿರಲಾರೆವು. ಪರಿಷತ್ತುಗಳಲ್ಲಿ ವೈಭವವಿರುತ್ತದೆ. ಆದರೆ ಅಂಥ ದೃಶ್ಯವು ಈ ಶಿವಾನುಭವ ಸಂಸ್ಥೆಗಳನ್ನು ಸ್ಥಾಪಿಸುವ ಕಾರ್ಯದಲ್ಲಿ ತೋರಲಾರದು. ಅಜ್ಞಜನರ ಮನೋಭಾವನೆಯನ್ನು ತಿದ್ದುವ ಕಷ್ಟದ ಕೆಲಸವನ್ನು ಇವುಗಳಲ್ಲಿ ಮಾಡಬೇಕಾ

ಗುತ್ತದೆ. ಕಾರ್ಯನಿರ್ವಾಹಕರಾದವರು ವೈಭವ ಆಡಂಬರಕ್ಕೆ ಮನಗೊಡದೆ ಸಮಾಜಸೇವಾ ಬುದ್ಧಿಯುಳ್ಳವರಾಗಿರಬೇಕಾಗುತ್ತದೆ. ಈ ಕಾರ್ಯಕ್ಕೋಸ್ಕರ ಕೆಲವೊಂದು ಗ್ರಾಮವನ್ನು ಅವರು ತೆಗೆದುಕೊಂಡು ಅಲ್ಲಿ ಎಡೆಬಿಡದೆ ಕಾರ್ಯಗಳನ್ನು ಮುಂದುವರಿಸಬೇಕಾಗುತ್ತದೆ. ಹಲವು ಕಡೆ ಸ್ಥಾನಿಕ ತೊಂದರೆಗಳನ್ನು ಅವರು ಎದುರಿಸುವ ಪ್ರಸಂಗಗಳೂ ಉತ್ಪನ್ನವಾಗಬಹುದು. ಒಮ್ಮೊಮ್ಮೆ ಹಣದ ವೆಚ್ಚಕ್ಕೂ ಕೂಡ ಅವರು ಗುರಿಯಾಗಬೇಕಾಗುತ್ತದೆ. ಈ ತೊಂದರೆಗಳನ್ನು ಎದುರಿಸಲು ಸಿದ್ಧರಾದಂಥವರು ಈ ಕಾರ್ಯದಲ್ಲಿ ಮುಂದಾಗಬೇಕಾಗುತ್ತದೆ. ಅಂಥವರಿಂದಲೇ ಈ ಶಿವಾನುಭವ ಸಂಘಗಳ ಸ್ಥಾಪನೆಯು ಕಾರ್ಯಗಳು ಮುಂದುವರಿಯುವವು. ರಾಜಕೀಯ ಪ್ರಯತ್ನಗಳಂತೆ ಶಿವಾನುಭವ ಸಂಘಗಳನ್ನು ಸ್ಥಾಪಿಸುವ ಕಾರ್ಯಗಳಲ್ಲ. ಅವುಗಳಲ್ಲಿಯೂ ಇವುಗಳಲ್ಲಿಯೂ ಮಹದಂತರವಿದೆ. ರಾಜಕೀಯ ಪ್ರಯತ್ನಗಳ ಉದ್ದೇಶವು ನಿಶ್ಚಿತ ಕಾರ್ಯಕ್ಕೋಸ್ಕರ ಜನತೆಯಲ್ಲಿ ಕೆಲವೊಂದು ಸ್ಫೂರ್ತಿಯನ್ನು ಹುಟ್ಟಿಸುವದಿರುತ್ತದೆ. ಆದರೆ ವಿಧಾಯಕ ಕಾರ್ಯಗಳ ರೀತಿಯೇ ಬೇರೆ. ಇವುಗಳನ್ನು ಮಾಡುವವನಲ್ಲಿ ಸಮಾಜ ಸುಧಾರಣೆಯ ಬಗ್ಗೆ ನಿಷ್ಕಲಂಕ ಪ್ರೇಮವು ಬೇಕಾಗುತ್ತದೆ. ವಿರೋಧಿಗಳನ್ನು ಶಾಂತತೆಯಿಂದ ಕಂಡು ಅವರ ಮನೋಭಾವನೆಗಳನ್ನು ತನ್ನತ್ತ ಸೆಳೆಯುವ ಯೋಗ್ಯತೆಯು ಇರಬೇಕಾಗುತ್ತದೆ. ದೊಡ್ಡ ಪರಿಷತ್ತುಗಳಲ್ಲಿಯಂತೆ ಸ್ಫೂರ್ತಿಯುಳ್ಳ ಭಾಷಣಗಳನ್ನು ಮಾಡುವ ಮಾತ್ರದಿಂದ ಇಂಥ ಕಾರ್ಯಗಳು ಘಟಿಸಲಾರವು. ಕಾರ್ಯತತ್ಪರರು ಕೆಲವು ಗ್ರಾಮಗಳನ್ನು ಆಯ್ದುಕೊಂಡು ಅವುಗಳಲ್ಲಿ ಯೋಗ್ಯ ಜನರು ಯಾರೆಂಬುದನ್ನು ಕಂಡುಹಿಡಿದು ಅವರೊಡನೆ ಸಹಕರಿಸಿ ಸಂಸ್ಕೃತಿ ಪ್ರಸಾರ ಕಾರ್ಯಗಳನ್ನು ಮಾಡಬೇಕಾಗುತ್ತದೆ. ಈ ಸಂಗತಿಯನ್ನು ಪ್ರಯತ್ನ ಮಾಡುವವರು ಲಕ್ಷಿಸಬೇಕೆಂದು ನಾವು ಇಲ್ಲಿ ಸೂಚನೆ ಮಾಡದಿರಲಾರೆವು. ಇಂಥ ಕಾರ್ಯತತ್ಪರರ ಸಂಖ್ಯೆಯು ಸಮಾಜದಲ್ಲಿ ಹೆಚ್ಚುತ್ತಹೋದ ಹಾಗೆ ಅದಕ್ಕೆ ನಿಜವಾದ ಬೆಳವಣಿಗೆಯ ಸ್ಥಿತಿಯು ಪ್ರಾಪ್ತವಾಗದೆ ಇರದು.

**ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು ಧಾರವಾಡ:-**
ಶ್ರೀ ಕುಮಾರಸ್ವಾಮಿಗಳು ಈ ಸಲ ಅಲಿಗಡದಲ್ಲಿ ನೆರೆದಿದ್ದ ೧೭ನೆಯ ಅಖಿಲಭಾರತ ತತ್ವಜ್ಞಾನ ಸಮ್ಮೇಲನದಲ್ಲಿ ವೀರಶೈವ ಮತ ನಿರೂಪ

ಸೆಯನ್ನು ಮಾಡಿದ್ದಕ್ಕೋಸ್ಕರ ನಾವು ಅವರನ್ನು ಅಭಿನಂದಿಸುತ್ತೇವೆ. ವೀರಶೈವ ಧರ್ಮವು ವಿಶಾಲವಾದ ತತ್ವಗಳುಳ್ಳದ್ದಲ್ಲದೆ ಬಹು ಗೂಢವೂ ಆಳವಾದ ವಿಚಾರಗಳುಳ್ಳದ್ದೂ ಇರುತ್ತದೆ. ವಚನಗಳಲ್ಲಿಯ ನಿರೂಪಣೆಗಳು ಅತ್ಯಂತ ಹಗುರು ಶಬ್ದಗಳಿಂದ ಮಾಡಿದವುಗಳಾಗಿದ್ದರೂ, ಅವುಗಳೊಳಗೆ ಅಡಕವಾಗಿರುವ ಅಗಾಧ ವಿಚಾರಗಳು ಈಗಿನ ಕಾಲದಲ್ಲಿ ಜನರಿಗೆ ಅಪರಿಚಿತವಾಗಿರುವದರಿಂದ ಅವು ಅವರಿಗೆ ದುರ್ಬೋಧವಾಗುತ್ತವೆ. ಈ ದೋಷಕ್ಕೆ ಪಾತ್ರರು ಓದುವವರೇ ಎಂದು ನಾವು ಹೇಳಬೇಕಾಗುತ್ತದೆಯೋ ಹೊರತು ವಚನಗಳನ್ನು ರಚಿಸಿದ ಮಹಾನುಭಾವರ ಕಡೆಗೆ ಇರಲಾರದೆಂದು ನಾವು ಹೇಳ ಬಯಸುತ್ತೇವೆ. ನಾವು ಯಾರಿಗಾದರೂ ವಚನಗ್ರಂಥಗಳನ್ನು ಪರಿಶೀಲಿಸಿರೆಂದು ಹೇಳಿದಲ್ಲಿ ಅವರಲ್ಲಿ ಬಹು ಜನರು ಅವುಗಳು ತಮಗೆ ತಿಳಿಯುವದಿಲ್ಲೆಂಬ ನೆವವನ್ನು ಮುಂದು ಮಾಡಿ ಅವುಗಳಿಗೋಸ್ಕರ ಅವಹೇಲನಾಬುದ್ಧಿಯನ್ನು ಸಹ ತೋರ್ಪಡಿಸುವದು ನಮ್ಮ ಲಕ್ಷ್ಯಕ್ಕೆ ಬಂದಿರುವದರಿಂದ ನಾವು ಇದನ್ನು ಇಲ್ಲಿ ಹೇಳಬೇಕಾಗಿರುತ್ತದೆ. ಈ ದುಃಸ್ಥಿತಿಯು ವೀರಶೈವ ಸಮಾಜದಲ್ಲಿ ಇದ್ದರೂ ಪರಮತೀಯ ಪಂಡಿತರು ಮಾತ್ರ ಇವುಗಳಿಗೆ ಬೆಲೆಗೊಡುವ ಪರಿಸ್ಥಿತಿಯುತ್ಪನ್ನವಾಗಹತ್ತಿರುವದು ಬಹು ಸಮಾಧಾನಕರವಾದ ಸಂಗತಿಯಾಗಿದೆ. ಈಚೆಗೆ ಶ್ರೀ ಕುಮಾರಸ್ವಾಮಿಗಳಂಥ ಆಂಗ್ಲ ಭಾಷಾ ವಿಶಾರದರು ಆಧುನಿಕ ಪದ್ಧತಿಯಿಂದ ಶಿವಶರಣರ ವಿಚಾರಗಳನ್ನು ಪರಿಶೀಲಿಸಿ ಮಹತ್ವದ ಪರಿಪತ್ರಗಳಲ್ಲಿ ಅವುಗಳನ್ನು ಪ್ರಸ್ತಾಪಿಸ ಹತ್ತಿದ್ದೇ ಇದಕ್ಕೆ ಮುಖ್ಯ ಕಾರಣವಾಗಿದೆ. ಇಂಥ ಕಾರ್ಯವನ್ನು ಮಾಡುವ ಮಹನೀಯರಿಗೆ ನಾವು ಧನ್ಯವಾದವನ್ನು ಅರ್ಪಿಸುತ್ತೇವೆ. ಅವರು ಇದೇ ರೀತಿಯಾಗಿ ಹಿಂದುಸ್ಥಾನದಲ್ಲೆಲ್ಲ ವೀರಶೈವ ಮತತತ್ವ ಪ್ರಸಾರ ಕಾರ್ಯವನ್ನು ಮುಂದುವರಿಸುವರೆಂದು ನಾವು ಆಶಿಸಿದ್ದೇವೆ.

**ಪುರಾಣನಾಮ ಚೂಡಾಮಣಿ**— ಈ ಗ್ರಂಥವು ಮೈಸೂರ ವಿಶ್ವವಿದ್ಯಾನಿಲಯ ಕನ್ನಡ ಗ್ರಂಥ ಮಾಲೆಯ ೧೫ನೆಯ ಗ್ರಂಥವಿದ್ದು ಇದರ ಪ್ರಧಾನ ಸಂಪಾದಕರು ರಾಜಸೇವಾಸಕ್ತ ಬಿ. ಎಂ. ಶ್ರೀ ಕಂಠಯ್ಯನವರೂ ಇದರ ಲೇಖಕರು ಶ್ರೀಯುತ ಬೆನಗಲ್ಲ ರಾಮರಾಯರೂ ವಿದ್ವಾನ್ ಪಾನ್ಯಂ ಸುಂದರ ಶಾಸ್ತ್ರಿಗಳೂ ಇದ್ದಾರೆ. ಇದು ಕನ್ನಡ ಭಾಷೆಯಲ್ಲಿ ಹೊಸ ತರದ ಮಹತ್ವದ ಗ್ರಂಥವಾಗಿರುತ್ತದೆ. ಸಂಸ್ಕೃತ

ಭಾಷೆಯಲ್ಲಿರುವ ಪುರಾಣೇತಿಹಾಸಗಳಲ್ಲಿ ಉಲ್ಲೇಖವಾಗಿರುವ ದೇವತೆಗಳು, ಋಷಿಗಳು, ಪುಣ್ಯ ಕ್ಷೇತ್ರಗಳು, ಪರ್ವತಗಳು, ನದಿಗಳು, ದೇಶಗಳು, ರಾಜರುಗಳು, ಇವರಿಗೆ ಸಂಬಂಧಿಸಿದವಾದ ಕಥೆಗಳನ್ನು ಈ ಪುಸ್ತಕದಲ್ಲಿ ಅರಿಯಬಹುದಾಗಿದೆ. ಇದು ಅತ್ಯಂತ ಶ್ರಮದಿಂದ ರಚಿಸಿದ ಒಂದು ಬಗೆಯ ಕೋಶ ಗ್ರಂಥವೆಂದು ಹೇಳಬಹುದು. ಇದು ೬೩೬ ಪುಟಗಳುಳ್ಳ ದೊಡ್ಡ ಗ್ರಂಥವಾಗಿದೆ. ವಿಷಯ ವಿವರಣೆಗಳ ಸಂಖ್ಯೆಯು ಕನಿಷ್ಟ ೨೦೦೦ಕ್ಕಿಂತಲೂ ಹೆಚ್ಚಾಗಿರಬಹುದೆಂದು ನಮ್ಮ ನಂಬಿಗೆ ಇದೆ. ನಮ್ಮ ಆರ್ಯ ಸಂಸ್ಕೃತಿಯು ಎಷ್ಟು ವಿಸ್ತೃತವೂ, ಉದಾತ್ತವೂ, ಬಹುವಿಧವೂ, ಆಗಿರುತ್ತದೆಂಬುದನ್ನು ನಾವು ಈ ಗ್ರಂಥದಿಂದ ಕೂಡಲೆ ತಿಳಿಯಬಹುದಾಗಿದೆ. ಪ್ರತಿಯೊಂದು ಪುಟದಲ್ಲಿ ವಾಚಕರ ಮನಸ್ಸನ್ನು ಆಕರ್ಷಿಸುವಂಥ ಪುರಾತನ ಮಹಾಪುರುಷರ ಅನೇಕ ಕಥೆಗಳು ಬಂದಿರುತ್ತವೆ. ಇಂಥ ಮಹತ್ವದ ಗ್ರಂಥವನ್ನು ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆಯ ಸಂಪಾದಕರು ಪ್ರಕಟಿಸಿದ್ದಕ್ಕೋಸ್ಕರ ನಾವು ಅವರನ್ನು ಅಭಿನಂದಿಸುತ್ತೇವೆ. ಇದಕ್ಕೆ ಉತ್ತಮ ತರದ ಕಾಗದ ಮತ್ತು ಬಾಯಿಂಡು ಇದ್ದು ಇದರ ಬೆಲೆ ಕೇವಲ ರೂ ೨-೧೨-೦ ಇರುತ್ತದೆ.

ರೇವಣಸಿದ್ಧೇಶ್ವರ ಪುರಾಣ ಮತ್ತು ಅಲ್ಲಮಪ್ರಭುಮದಲ್ಲಿ ರೇವಣಸಿದ್ಧರು ಇನ್ನೊಬ್ಬ ಗೋರಕ್ಷನನ್ನು ಗೆಲಿದು ಆತನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟ ವೃತ್ತಾಂತವು ಬರುತ್ತದೆ. ಸ್ವತಃ ರೇವಣಸಿದ್ಧರು ಮೊದಲು ಹಠಯೋಗ ಸಿದ್ಧರು ಆಗಿರಬೇಕು ಎಂದು ಅವರ ಹೆಸರಿನ ಮೇಲಿಂದಲೇ ಒಡೆದು ತೋರುತ್ತದೆ. ಸೊನ್ನಲಾಪುರದ ಸಿದ್ಧರಾಮನು ಮೊದಲು ಹಠಯೋಗದ ಸಿದ್ಧಿಯನ್ನು ಪಡೆದ ಸಿದ್ಧನಾಗಿದ್ದನು ಎಂಬ ವಿಷಯವು ಚಾಮರಸನ ಪ್ರಭುಲಿಂಗಲೀಲೆ ಮತ್ತು ರಾಘವಾಂಕನ ಸಿದ್ಧರಾಮ ಚಾರಿತ್ರದಲ್ಲಿಯ ಅಲ್ಲಮ ಸಿದ್ಧರಾಮರ ಸಂದರ್ಶನ ಸಂದರ್ಭವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಸ್ಪಷ್ಟವಾಗುವುದು. ಇದೇ ನೇರಿಗೆ ಆಮುಗಿದೇವ, ಮರುಳನಾಥ, ಅಲೇಖನಾಥ ಮೊದಲಾದ ಇನ್ನೂ ಅನೇಕ ವೀರಶೈವ ಶರಣರು ಮತ್ತು ವಚನಕಾರರು ಮೊದಲು ನಾಥ ಪಂಥಕ್ಕೆ ಸೇರಿದ್ದು ಬಳಿಕ ವೀರಶೈವಕ್ಕೆ ಪರಿವರ್ತಿತರಾದವರು ಆಗಿದ್ದರು ಎಂದು ತಿಳಿಯಬರುತ್ತದೆ.

ಈ ನೇರಿಗೆ ಮತ್ಸ್ಯೇಂದ್ರನಾಥನಿಂದ ಕರ್ನಾಟಕದಲ್ಲಿ ಪ್ರಸೃತವಾದ ಹಠಯೋಗ ಪರಂಪರೆಯ ಅನೇಕ ನಾಮಾಂಕಿತ ಪುರುಷರು ಶಕ್ತಿವಿಶಿಷ್ಟಾದ್ವೈತದ ವೀರಶೈವ ಮತದಲ್ಲಿ ಅಂತರ್ಭೂತರಾದರು. ಇಂತು ಹಠಯೋಗ ಪರಂಪರೆಯನ್ನು ಜೀರ್ಣಿಸಿಕೊಂಡ ಈ ವಿನೂತನ ವೀರಶೈವವು ಈ ಹಠಯೋಗ ಪಂಥವನ್ನು ಪೂರ್ಣವಾಗಿ ನುಂಗಿ ಬಿಟ್ಟಿತೆ? ವೀರಶೈವರಲ್ಲಿ ಸೇರದೆ ಇದ್ದ ಹಠಯೋಗಸಿದ್ಧರು ಮತ್ತು ಅವರ ಶಿಷ್ಯ ಸಂತಾನವು ಸ್ವತಂತ್ರವಾಗಿ ಕರ್ನಾಟಕದಲ್ಲಿ ಬಾಳಿ ಉಳಿಯಿತೆ? ಎಂಬುದನ್ನು ವಿಚಾರಿಸಬೇಕಾದುದು. ೧೨-೧೩ ಶತಮಾನದಲ್ಲಿಯ ವೀರಶೈವಾಭ್ಯುದಯದ ಕಾಲದಿಂದೀಚೆಗೆ ಬಂದು ಕರ್ನಾಟಕದಲ್ಲಿ ಬಾಳಿದ ಮತ ಪಂಥಗಳ ವಿಮರ್ಶೆಯನ್ನು ಮಾಡಿದಲ್ಲಿ ಕಂಡು ಬರುವ ಸಂಗತಿ ಇದು. ವೀರಶೈವವು ಈ ಹಠಯೋಗ ಪರಂಪರೆಯನ್ನು ಪೂರ್ತಿಯಾಗಿ ಅಳಿಯಿಸಲಿಲ್ಲ. ಆ ಪರಂಪರೆಯ ಅನೇಕ ಪ್ರಭಾವಿ ಪುರುಷರು ವೀರಶೈವರಲ್ಲಿ ಸೇರಿದುದರಿಂದ ಆ ಪರಂಪರೆಗೆ ಬಲವಾದ ಪೆಟ್ಟು ತಗಲಿ ಅದರ ತೇಜಸ್ಸು ಬಹುವಾಗಿ ಕುಂದಿತು. ಆದರೆ ವೀರಶೈವರಲ್ಲಿ ಸೇರದಂತಹ ಕೆಲವು ಹಠಯೋಗ ಸಿದ್ಧರು ಬೇರೆಯಾಗಿ ಉಳಿದುಕೊಂಡು ಆ ಪರಂಪರೆಯನ್ನು ಮುಂದೆ ಅನೇಕ ಶತಮಾನಗಳ ವರೆಗೆ ಮುಂದು

ವರಿಸಿದರು. ಆ ಪರಂಪರೆ ಬರುಬರುತ್ತ ಶಿಥಿಲವೂ ನಿಕೃಷ್ಟವೂ ಆಯಿತು. ಈ ಪರಂಪರೆಯ ಇಳಿಗಾಲದ ಅವಶೇಷಗಳನ್ನು ಕರ್ನಾಟಕದ ಅನೇಕ ಊರುಗಳಲ್ಲಿ ಇಂದಿಗೂ ದೊರಕುವ ಸಿದ್ಧರ ಐತಿಹ್ಯಗಳು ಸಿದ್ಧರ ಗವಿಗಳು, ಮಠಗಳು, ಸಿದ್ಧ ಎಂಬ ಹೆಸರನ್ನು ಎತ್ತಿಕೊಂಡು ಬಾಳಿರುವ ಕೆಲವಾರು ವ್ಯಕ್ತಿಗಳು ಮತ್ತು "ಕುಡುಗಾಡಸಿದ್ಧ" ಎಂಬ ಹೀನತಾದ್ಯೋತಕ ಒಂದು ವರ್ಗ ಮುಂತಾದವುಗಳ ಮೂಲಕ ಗುರುತಿಸಬಹುದಾಗಿದೆ.

ವಿಜಾಪುರದ ನೆರೆಯ ಭಾಗದಲ್ಲಿ ಸಂಚರಿಸುವಾಗ ಕೆಲವೆಡೆ ಬಸವೇಶ್ವರರಿಗಿಂತ ಈಚೆಯ ಕಾಲದ, ಸುಮಾರು ೧೪ ರಿಂದ ೧೬ನೆಯ ಶತಮಾನದ್ದು ಎಂದು ಊಹಿಸಬಹುದಾದ ಒಂದು ಸಿದ್ಧರ ಪರಂಪರೆಯ ಅವಶೇಷಗಳನ್ನು ಪರಿಶೀಲಿಸಿದೆನು. ಉಮದಿಯಲ್ಲಿ (ಜತ್ ಸಂಸ್ಥಾನ) ಅಷ್ಟು ಪ್ರಾಚೀನವಲ್ಲದ ಮಲ್ಲಿಕಾರ್ಜುನ ಇಲ್ಲವೆ ಮುತ್ತಪ್ಪಸಿದ್ದ ಮತ್ತು ಅಮಕಸಿದ್ದ ಇವರ ಗುಡಿಗಳು ಇವೆ. ಮುತ್ತಪ್ಪಸಿದ್ದನ ವಿಗ್ರಹವು ಚಿನ್ನದ್ದು. ಈ ಗುಡಿಗಳಲ್ಲಿ ಪೂಜಾ ಉತ್ಸವಗಳು ನಡೆಯುವವು. ಇವುಗಳ ಪೂಜಾರಿಗಳು ಹಂಡೆಕುರುಬ ಜಾತಿಯವರು. ಅವರಿಗೆ ಒಡೆಯರು ಎಂದು ಹೆಸರು. ಉಮದಿಯಿಂದ ಕೆಲ ಅಂತರದಲ್ಲಿ ಹುಲಜಂತಿ (ಜತ್ ಸಂಸ್ಥಾನ) ಎಂಬ ಇನ್ನೊಂದು ಊರು ಇದೆ. ಇಲ್ಲಿ ಇನ್ನೊಬ್ಬ ಸಿದ್ಧನ ದೇವಾಲಯವಿದ್ದು ಅದರ ಖ್ಯಾತಿ ಈ ಭಾಗದಲ್ಲಿ ವಿಶೇಷವಾಗಿದೆ. ಈತನು ಸಿದ್ಧ ಮಾಳಪ್ಪ ಇಲ್ಲವೆ ಮಾಳಿಂಗರಾಯ. ಈತನ ಕಥೆ ಅದ್ಭುತವಾಗಿದೆ. ಈತನ ಹೆಸರಿನಲ್ಲಿ ಇಂದಿಗೂ ಪವಾಡಗಳು ನಡೆಯುವವು. ಈತನ ವಿಷಯವನ್ನು ಇನ್ನೊಮ್ಮೆ ಪ್ರಸ್ತಾಪಿಸಲಿರುವೆ. ಈ ಸಿದ್ಧಮಾಳಪ್ಪನೂ, ಆತನ ವಂಶಜರೂ, ಭಕ್ತರೂ, ಅನುಯಾಯಿಗಳೂ, ಹತ್ತಿಕಂಕಣದ ಹಂಡೆಕುರುಬ ಜಾತಿಯವರು.

ಒಂದೊಂದು ವಸ್ತುವಿಗೂ ಸದುಪಯೋಗದಂತೆ ದುರುಪಯೋಗವೆಂಬುದು ಇರುವುದು. ಶಕ್ತಿ ಇದ್ದಲ್ಲಿ ಅದರ ಅನುಚಿತ ಪ್ರಯೋಗದ ಸಂಭವವು ಹೆಚ್ಚು. ಹಠಯೋಗದಿಂದ ಲಭಿಸುವ ಭೌತಿಕ ಸಿದ್ಧಿಯನ್ನು ಸ್ವಪ್ರತಿಷ್ಠೆಗೂ ಸ್ವಾರ್ಥಸಾಧನೆಗೂ ವಿನಿಯೋಗಿಸಿಕೊಳ್ಳುವ ಪ್ರವೃತ್ತಿ ಸಿದ್ಧರ ಚರಿತ್ರೆಯಲ್ಲಿ ಕಾಣಬರುತ್ತದೆ. ಆತ್ಮಿಕ ಶಕ್ತಿಯ ಅಪವ್ಯಯಗಾ

ರರಾದ ಇಂತಹ ಸಿದ್ಧರಿಗೆ ವಿಕಾರಿ ಸಿದ್ಧರೆಂದು ಕರೆಯುವರು. ಅವಿಕಾರಿ ಸಿದ್ಧರಂತೆ ಈ ವಿಕಾರಿ ಸಿದ್ಧರ ಸಂಪ್ರದಾಯವಾದರೂ ಪ್ರಾಚೀನ ಕಾಲದಿಂದ ನಡೆದು ಬಂದುದು. ರಾಘವಾಂಕನು ವಿಕಾರಿ ಸಿದ್ಧರ ಈ ಸಂಪ್ರದಾಯವನ್ನು ಸಿದ್ಧರಾಮ ಚಾರಿತ್ರದಲ್ಲಿ ಹೀಗೆ ವರ್ಣಿಸಿರುವನು.

ನಾರು ಬೇರಂಜನಂ ಘುಟಿಕೆ ಮೂಲಿಕೆ ಬಿಲ
ದ್ವಾರ ರಸಸಿದ್ಧಿ ಧಾತುವಾದ ವಶ್ಯಕುಟಿ
ಲಾರಾಧನಂ ವಲಿತ ಪಲಿತನಾಶಂ ಕಾಲವಂಚನಾಭ್ಯಾಸ
ಯೋಗಂ ॥

ಮಾರಣಾದಿ ವಿಕರ್ಮ ಮಂತ್ರಯಂತ್ರಂ ತಂತ್ರ
ಸಾರ ಪರಕಾಯ ಪ್ರವೇಶಮಂ ಬಯಸುವ ವಿ
ಕಾರ ಸಿದ್ಧರು ಸರಿಯೆ ಸಿದ್ಧರಾಮಂಗೆ ಶಿವಸಿದ್ಧಕುಲಕಮಲ
ರವಿಗೆ (ಸಿ. ಚಾ. ೧—೯)

ಮೇಲೆ ನಿರ್ದೇಶಿಸಿದ ವೀರಶೈವೋತ್ತರ ಕಾಲೀನ ಕರ್ನಾಟಕದಲ್ಲಿ ಬಾಳಿದ ಸಿದ್ಧರ ಸಂಪ್ರದಾಯದಲ್ಲಿ ಈ ವಿಕಾರಿ ಸಿದ್ಧಿಯ ಅಂಶಗಳು ಹೆಚ್ಚಾಗಿ ಗೋಚರಿಸುತ್ತವೆ. "ಮುಡುಗಾಡಸಿದ್ಧರು" ಈ ವಿಕಾರಿ ಸಿದ್ಧರ ಪಂಗಡದವರಲ್ಲದೆ ಬೇರೆ ಏನು ?

ಈ ಲೇಖನದಲ್ಲಿ ವಿವರಿಸಿದ ಆದಿನಾಥ ಮೊದಲಾದವರ ಜೀವನದ ಕೆಲವು ಸಂಗತಿಗಳ ಬಗೆಗೆ ಅಪ್ರಕಾಶಿತವಾದ ಒಬ್ಬ ಮಹಾರಾಷ್ಟ್ರೀಯ ಸಂಶೋಧಕರ ಸಂಶೋಧನೆಗಳಿಗೆ ಋಣಿಯಾಗಿದ್ದೇನೆ. ಈ ವಿಷಯದಲ್ಲಿ ನನ್ನ ಸಂಶೋಧನಗಳು ನಡೆದಿವೆ. ಅವುಗಳು ಮುಂದುವರಿದಂತೆ ಇನ್ನೂ ಅನೇಕ ಸಂಗತಿಗಳನ್ನು ಪ್ರಕಟಿಸಲಿರುವೆ.

---

# ಅಖಿಲ ಭಾರತ ವೀರಶೈವ ಶಿವಾನುಭವ ಸಂಸ್ಥೆ

ಲೇಖಕ:— ವೀರಭದ್ರಪ್ಪ ಮಹಾಲಿಂಗಪ್ಪ ಮಲ್ಲಾಬಾದಿ ದಾವಣಗೆರೆ.

ಲಿಂಗವಂತರ ಭಾಗ್ಯವೋ! ಕನ್ನಡನುಡಿಯ ಪುಣ್ಯವೋ! ಎಂಬಂತೆ ಕಳೆದ ೧೫ ವರ್ಷಗಳಿಂದ ಸುಪ್ರಸಿದ್ಧ ಸಾಹಿತಿಗಳೂ ಸಂಶೋಧಕರೂ ಆದ ರಾವ್‌ಬಹದ್ದೂರ ಫ. ಗು. ಹಳಕಟ್ಟಿಯವರು ಶಿವಾನುಭವ ಪತ್ರಿಕೆಯ ಮೂಲಕ ವೀರಶೈವ ವಾಙ್ಮಯದ ವಿವಿಧ ಭಾಗಗಳನ್ನು ಪ್ರಸಾರಮಾಡುತ್ತ ಸಂಸ್ಕೃತಿಯ ಹಾಗು ಧರ್ಮೋದ್ಧಾರದ ಮಹತ್ಕಾರ್ಯಕ್ಕೆ ಕಂಕಣಕಟ್ಟಿಕೊಂಡು ತನು ಮನ ಧನಗಳನ್ನರ್ಪಿಸಿ ಸೇವೆಗೆಯ್ಯುತ್ತಿರುವುದಕ್ಕೆ ಇಡೀ ಜನಾಂಗವೇ ಋಣಿಯಾಗಿರಬೇಕಾಗಿದೆ. ಅದರಲ್ಲೂ ವಚನ ವಾಙ್ಮಯದ ಸಾರ್ವತ್ರಿಕ ಪ್ರಚಾರದ ಮೂಲಕ ಪವಿತ್ರವಾದ ಲಿಂಗವಂತ ಸಂಸ್ಕೃತಿಯ ಅರಿವನ್ನು ತೋರುತ್ತಾ ನಮ್ಮ ಸ್ವರೂಪ ಜ್ಞಾನವನ್ನುಂಟು ಮಾಡಿಕೊಟ್ಟಿರುವುದಕ್ಕೆ ತರುಣ ಪೀಳಿಗೆಗೆ ಆದರ್ಶ ವ್ಯಕ್ತಿಗಳಾಗಿರುವುದರಿಂದ ಅವರನ್ನು ಎಷ್ಟು ಅಭಿನಂದಿಸಿದರೂ ನನ್ನ ಮನಸ್ಸು ದಣಿಯದು.

ಕಳೆದ ಎರಡು ವರ್ಷಗಳ ಹಿಂದೆ ವಚನ ವಾಙ್ಮಯದ ಪ್ರಚಾರ ಹಾಗು ಶಿವಶರಣರ ತತ್ವಗಳ ಪ್ರಸಾರದಬಗ್ಗೆ ಒಂದು ವ್ಯವಸ್ಥಿತ ಕಾರ್ಯಕ್ರಮವನ್ನು ಪ್ರತಿಯೊಬ್ಬರೂ ಕೈಕೊಳ್ಳಲು ಒಂದು ಪ್ರಕಟನೆಯನ್ನು ಹೊರಡಿಸಿದರು. ಅದರಂತೆ ಮೊದಲು ಮೊದಲು ಜಾಗ್ರತರಾದ ಜನರು ರಾ॥ ಬ॥ ಹಳಕಟ್ಟಿಯವರು ಕೊಟ್ಟ ಎಚ್ಚರಿಕೆಯನ್ನನುಸರಿಸಿ ಅಲ್ಲಲ್ಲಿ "ಶಿವಾನುಭವಸಂಘ" ಗಳನ್ನು ಸ್ಥಾಪಿಸಿ ವಚನ ಶಾಸ್ತ್ರದ ಪ್ರವಚನಕ್ಕೆ ಒಂದು ಶಿಸ್ತಿಸಂದ ಪ್ರಾರಂಭಿಸಿದರು. ಅಂದರೆ ಈ ಮೊದಲೇ ಅಲ್ಲಲ್ಲೇ ವಚನವಾಙ್ಮಯದ ಅಭ್ಯಾಸವನ್ನು ಸ್ವಮತ ಪರಮತದ ವಿದ್ವಜ್ಜನರೂ ಷಟ್‌ಸ್ಥಲಮೂರ್ತಿಗಳೂ ಅನೇಕ ಭಾಷಾಪಂಡಿತರೂ ಶಾಸ್ತ್ರಿಗಳೂ ಅಭ್ಯಾಸಮಾಡುತ್ತಾ ಇದ್ದು ಒಂದುಬಗೆಯ ಚರ್ಚಾತ್ಮಕ ವಿವೇಚನೆಯಿಂದ ವಿಚಾರಕ್ರಾಂತಿಯುಂಟಾಗಿತ್ತು. ಸಮಾಜವು ಸರ್ವಾಂಗ ಸುಂದರವಾಗಿ ಬೆಳೆಯಬೇಕಾದರೆ ಲಿಂಗಧಾರಿಗಳಾದ ಪ್ರತಿಯೊಬ್ಬರೂ ತಮ್ಮ ತಮ್ಮ ಆತ್ಮಸುಧಾರಣೆ ಕುಟುಂಬಸುಧಾರಣೆ ಮಾಡಿಕೊಂಡು ಮುಂದೆ ಅಡಿ ಇಡ

ಬೇಕಾಗಿದೆ. ಅದನ್ನು ಮರೆತಿರುವುದರಿಂದಲೇ ಭಾರತದಲ್ಲಿರುವ ಅನೇಕ ಸಮಾಜ ಸುಧಾರಣಾ ಧುರೀಣರ ಕಾರ್ಯಗಳು ಜಯಪ್ರದವಾಗಿ ಸಾಗುತ್ತಿಲ್ಲ.

ಈ ತತ್ವವನ್ನು ಅನುಸರಿಸಿಯೇ ಅಣ್ಣ ಬಸವಣ್ಣನವರು ಜಗದ ಕಣ್ಣು ಮದವ ಕಳೆದು ಮುಕ್ಕಣ್ಣನಿಪ್ಪ ಎಡೆಯು ತೋರಲು ನಡೆನುಡಿ, ಉಣುವುದು, ಉಡುವುದು, ಬಾಳಲು, ಬದುಕಲು, ಕಲ್ಯಾಣದಲ್ಲಿ ಶಿವಾನುಭವ ಮಂಟಪವನ್ನು ಸ್ಥಾಪಿಸಿ ತನ್ಮೂಲಕ ಲೋಕೋದ್ಧಾರದ ಕಾರ್ಯವನ್ನೆಸಗಿದರು. ಅವರು ಮಾಡಿದ ಕಾರ್ಯವನ್ನೇ ಅನುಸರಿಸಿ ಅದನ್ನೇ ಪುನರುಜ್ಜೀವನಗೊಳಿಸಲು ರಾ॥ ಬ॥ ಹಳಕಟ್ಟಿಯವರು ಲಿಂಗಧಾರಿಗಳಾದ ಪ್ರತಿಯೊಬ್ಬರೂ ಶಿವಾನುಭವ ಸಂಘವನ್ನು ಸ್ಥಾಪಿಸಿ ಆ ಮೂಲಕ ಆತ್ಮೋದ್ಧಾರ, ಕುಟುಂಬಸುಧಾರಣೆ ಮತ್ತು ಸಮಾಜಸುಧಾರಣೆಗೆ ಸಿದ್ಧರಾಗಿರಿ ಎಂದು ವೀರವಾಣಿಯಿಂದ ಎಚ್ಚರಿಸಿದ್ದಾರೆ. ಅದರಂತೆ ಶಿವಾನುಭವ ಸಂಘಗಳ ಕಾರ್ಯಕ್ರಮಗಳನ್ನು ಬರೆದು ಕಳೆದ ಆರು ತಿಂಗಳ ಹಿಂದೆ ಶಿವಾನುಭವದಲ್ಲಿ ಪ್ರಕಟಿಸಿ ಉಪಕಾರ ಮಾಡಿದ್ದಾರೆ.

ಬರಬರುತ್ತ ಕನ್ನಡ ನಾಡಿನಲ್ಲಿ ಅನೇಕ ಕಡೆಗೆ ಶಿವಾನುಭವ ಸಂಘಗಳು ಸ್ಥಾಪನೆಯಾಗಿ ಕಾರ್ಯಕ್ರಮಗಳನ್ನು ನಡೆಯಿಸುತ್ತ ಇರಲು ಈ ಕಾರ್ಯಕಲಾಪಗಳಿಗೆಲ್ಲ ಒಂದು ಶಿಸ್ತಿನಿಂದ ಬಿಗಿದಪ್ಪಬೇಕೆಂಬ ಹಿರಿದಾಶೆಯಿಂದ ಶ್ರೀಮದ್ ಬಸವಾದಿ ಪ್ರಮಥರ ಕೃಪೆಯಿಂದಲೂ ಶ್ರೀ. ಶಿವಯೋಗೀಶ್ವರರ ಪ್ರೇರಣೆಯಿಂದಲೂ ಧಾರವಾಡದಲ್ಲಿ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಮೃತ್ಯುಂಜಯ ಸ್ವಾಮಿಗಳವರ ನೇತೃತ್ವದಲ್ಲಿ ಅನೇಕ ಹರಗುರು ಚರಮೂರ್ತಿಗಳೂ, ಭಕ್ತ ಮಹೇಶ್ವರರೂ ಪಾಶ್ಚಿಮಾತ್ಯ ವಿದ್ವಾಂಸರೂ, ಶಾಸ್ತ್ರಿಗಳೂ ಮತ್ತು ಈ ಮೊದಲೇ ಅಸ್ತಿತ್ವದಲ್ಲಿದ್ದ ವೀರಶೈವ ಪಂಡಿತ ಮಂಡಳಿಯವರೂ ಕಲೆತು ಒಂದು ನಿರ್ಣಯಕ್ಕೆ ಬಂದು ಯಾವ ಯಾವ ರೀತಿಯಿಂದ ಮಾಡಿದರೆ ಈ ಮಹತ್ಕಾರ್ಯವು ಯಶಸ್ವಿಯಾಗಿ ಜರುಗುವದೆಂಬ ಆಲೋಚನೆಗೆ ಬಂದರು.

ಕಳೆದ ಜೂನ ತಿಂಗಳು ಕೊನೆಯ ವಾರದಲ್ಲಿ ಹಂಸಭಾವಿಯಲ್ಲಿ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಮುಕ್ಕಾಂ ಇದ್ದು ಉತ್ಸವ ವಗೈರೆ ಇಷ್ಟ

ದ್ದರಿಂದಲೂ ಅನೇಕರು ಅಲ್ಲಿಗೆ ಸೇರುವ ಸಂಭವವಿದ್ದುದರಿಂದಲೂ ಮಹಾಸನ್ನಿಧಿಯಲ್ಲಿ ಮೊಟ್ಟಮೊದಲನೇ ಸಭೆಯು ಬೆಳಗಾವಿ ಲಿಂಗರಾಜ ಕಾಲೇಜ ಪ್ರಿನ್ಸಿಪಾಲರೂ ಉಭಯ ಭಾಷಾ ವಿಶಾರದರೂ ಆದ ಡಾ॥ ಶಿವಲಿಂಗಯ್ಯ ಚನ್ನಬಸವಯ್ಯ ನಂದೀಮಠ ಎಂ ಎ ಪಿ. ಎಚ್ ಡಿ ಇವರ ಅಧ್ಯಕ್ಷತೆಯಲ್ಲಿ ನೆರವೇರಿ ಈ ಬಗ್ಗೆ ವಿಪುಲ ಚರ್ಚೆನಡೆದು, ಅಖಿಲ ವೀರಶೈವ ಶಿವಾನುಭವ ಸಂಸ್ಥೆಯು ಅವಶ್ಯಕತೆ ಎಲ್ಲ ವಿಧದಿಂದ ಕಂಡುಬಂದದ್ದರಿಂದ ಅದರ ಘಟನೆ ನಿಯಮಗಳನ್ನು ಉದ್ದೇಶ ಗುರಿಗಳನ್ನು ಕೆಲವನ್ನು ನಿರ್ಣಯಿಸಿ ಪೂರ್ತಿಯಾಗಿ ತಯಾರಿಸಲು ನನ್ನನ್ನು ನೇಮಿಸಿದರು.

ಸೆಪ್ಟೆಂಬರ ತಿಂಗಳಲ್ಲಿ ಧಾರವಾಡ ಹಾವೇರಿ ಪೇಟೆ ಶ್ರೀ ಮುರುಘಾಮಠದಲ್ಲಿರುವ ಶಿವಾನುಭವ ಕಾಲೇಜಿನಲ್ಲಿ ಪುನಃ ಡಾ॥ ನಂದೀಮಠರವರ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಮಂಡಲದ ಸಭೆ ಸೇರಿ ಅಷ್ಟರಲ್ಲಿ ತಯಾರಿಸಿದ ಘಟನೆಯನ್ನು ನಿಯಮಗಳನ್ನು ಓದಿ ಮುಂದೆ ಮಾಘಮಾಸಕ್ಕೆ ಶ್ರೀ ಶಿವಯೋಗೀಶ್ವರ ಜಾತ್ರಾ ಕಾಲಕ್ಕೆ ಜನರಲ್ ಕಮೀಟಿಯ ಕಾಲಕ್ಕೆ ಕೊನೆಯ ನಿರ್ಣಯಕ್ಕಾಗಿ ಈ ಘಟನೆಯ ನಕಲುಗಳನ್ನು ತಿದ್ದುಪಡಿ ಮಾಡಲು ಅನೇಕ ಮಹನೀಯರುಗಳಿಗೆ ಕಳುಹಿಸಿ ಕೊಟ್ಟರು. ಅದರಂತೆ ಅವಧಿಯೊಳಗಾಗಿ ಕೆಲವರು ತಕ್ಕ ಸಲಹೆಗಳನ್ನೂ ಸೂಚನೆಗಳನ್ನೂ ತಿಳಿಸಿದ್ದಾರೆ

ಇದೇ ತಿಂಗಳು ೨೦ನೇ ತಾರೀಖಿಗೆ ಧಾರವಾಡ ಶ್ರೀ ಮುರುಘರಾಜೇಂದ್ರ ಫ್ರೀಬೋರ್ಡಿಂಗಿನ ಬೆಳ್ಳಿಯ ಹಬ್ಬದ ಮಹೋತ್ಸವ ಕಮೀಟಿಯವರು ಅಖಿಲವೀರಶೈವ ಶಿವಾನುಭವ ಸಮ್ಮೇಳನವನ್ನು ನೆರವೇರಿಸಲು ತಮ್ಮ ಕಾರ್ಯಕ್ರಮದಲ್ಲಿ ಇಟ್ಟುಕೊಂಡಿರುವುದಕ್ಕೆ ಹೆಮ್ಮೆ ಪಡಬೇಕಾಗಿದೆ. ಇದಕ್ಕೆ ವಚನ ವಾಙ್ಮಯ ವಿಶಾರದರೂ' ಅಭಿನವ ಅಲ್ಲಮ ಬಿರುದಾಂಕಿತರೂ, ಷಟ್‌ಸ್ಥಲ ದಂಡನಾಯಕರಂತಿರುವ ಬೆಂಗಳೂರು ಸರ್ಪಭೂಷಣ ಶಿವಯೋಗೀಶ್ವರ ಮಠಾಧ್ಯಕ್ಷರಾದ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳೂ ಪ್ರಾಣಸ್ವರೂಪಿಗಳೂ ಆದ ಪಂಡಿತ ಶ್ರೀ ಮಹಾದೇವ ಸ್ವಾಮಿಗಳವರು ಅಧ್ಯಕ್ಷರಾಗುವುದು ಅಮೃತದ ಸಸಿಯು ಮೊಳೆಸವಿಯ ಬಳ್ಳಿಯನ್ನು ಹಬ್ಬಿಸಿದಂತೆಯೂ ಮರುಗದ ಮಡಿಯಲ್ಲಿ ಕಸ್ತೂರಿಯನ್ನು ಚೆಲ್ಲಿದಂತೆಯೂ ಆಗಿದೆ.

ಈ ಅಖಿಲ ವೀರಶೈವ ಶಿವಾನುಭವ ಸಂಸ್ಥೆಯ ಉದ್ದೇಶ ಮತ್ತು ಗುರಿ ಅವುಗಳಸಾಧನೆ ಈ ಕೆಳಗೆ ಕಂಡಂತೆ ಇವೆ.

(೧) ಶಿವಾನುಭವ ಶಾಸ್ತ್ರಾಭ್ಯಾಸ ಮತ್ತು ಪ್ರಸಾರ ಕಾರ್ಯ

(೨) ಶಿವಶರಣರ ತತ್ವಜ್ಞಾನವನ್ನು ನಾನಾಭಾಷೆಗಳಲ್ಲಿ ಪ್ರಚಾರಗೊಳಿಸುವುದು.

(೩) ಲಿಂಗಾಂಗಿ ಧರ್ಮದ ಆಚಾರ ವಿಚಾರಗಳನ್ನು ವಿಮರ್ಶೆಮಾಡಿ ಶಿವಶರಣರ ತತ್ವದಂತೆ ಸಂಸ್ಕೃತಿಯನ್ನು ಏಕರೂಪಗೊಳಿಸುವುದು.

(೪) ವೀರಶೈವ ಪ್ರಾಚೀನ ಕೈಬರಹದ ಗ್ರಂಥಗಳು ಶಿಲಾಶಾಸನಗಳು ಮತ್ತು ತಾಮ್ರ ಶಾಸನಗಳು ಐತಿಹಾಸಿಕ ಕುರುಹುಗಳನ್ನು ಸಂಗ್ರಹಿಸುವುದು ಮತ್ತು ಪ್ರಸಾರಗೊಳಿಸುವುದು.

(೨೧ನೇ ತಾರೀಖಿನಲ್ಲಿ ಕೂಡುವ ಸಮ್ಮೇಳನದಲ್ಲಿ ತಿದ್ದುಪಡಿಯಾಗಿ ನಿರ್ಣಯವಾಗುವ ಘಟನೆಯನ್ನು ಕುರಿತು ಮುಂದಿನ ಸಂಚಿಕೆಗಳಲ್ಲಿ ಬರೆಯುತ್ತೇನೆ)

ಮುಖ್ಯವಾಗಿ ಪ್ರತಿಯೊಬ್ಬ ಲಿಂಗಾಂಗಿಯೂ ವ್ಯಕ್ತಿಗಿಂತ ಸಮಾಜ ದೊಡ್ಡದೆಂಬ ಭಾವನೆಯನ್ನು ತಾಳಬೇಕು. ವೈಯ್ಯಕ್ತಿಕ ಸ್ವಾರ್ಥ ಸಾಧನೆಗೆ ಸುಂದರವಾದ ಸಮಾಜವನ್ನು ಅಲಕ್ಷಿಸಬಾರದಾಗಿರುತ್ತದೆ. ಉಳಿದವರಿಗಿಂತ ಲಿಂಗವಂತರು ಉದ್ಯೋಗಮಾಡುವುದರಲ್ಲೂ ಊಟಮಾಡುವುದರಲ್ಲಿಯೂ ಸಾಹಿತ್ಯರಚನೆಯಲ್ಲಿಯೂ ಶಿಸ್ತ ಬರೆಯುವುದರಲ್ಲಿಯೂ ಕೊನೆಗೆ ಮೋಕ್ಷದ ಕಲ್ಪನೆಯಲ್ಲಿಯೂ ವೈಶಿಷ್ಟ್ಯತೆಯನ್ನು ಪಡದವರೆಂಬ ಹೆಮ್ಮೆ ಹಮ್ಮು ಹುಮ್ಮಸುಗಳು ಹುಟ್ಟಬೇಕು.

ಶಿವಶರಣರ ತತ್ವಗಳಂತೆ ಅನುಸರಿಸುತ್ತ ಬಂದರೆ, ಸತ್ಯ ಶುದ್ಧ ಕಾಯದಿಂದ ಇದ್ದುದ ವಂಚನೆ ಮಾಡದೆ ಇಲ್ಲದುದ ಕಡವ ಮಾಡದೆ ಅರ್ಪಿತ ಅರ್ಚನೆ ಅನುಭವಗಳಿಂದ ಅಂಗಭೋಗೋಪಭೋಗಗಳೆಲ್ಲ ಲಿಂಗಭೋಗೋಪಭೋಗಗಳೆಂದು ಭಾವಿಸಿ ಲಿಂಗ ಭೋಗೋಪಭೋಗಿಗಳಾಗುವುದೇ ಲಿಂಗವಂತನ ಜೀವನದ ಮತ್ತು ತತ್ವದ ಹೆಗ್ಗುರಿಯಾಗಿದೆ. ಅದರಂತೆ ಪರಿಶ್ರಮಪಡುತ್ತ ಬಂದರೆ ಈ ಜೀವ

ಯೋಗ ಮಂದಿರವೇ ಶಿವಯೋಗಮಂದಿರವಾಗುವುದು. ಅದೇ ಶಿವಾನುಭವ ಮಂಟಪ. ಅಂಥ ಅನುಭವವನ್ನು ಪಡೆದವರು ಅಧಿಕವಾಗುತ್ತ ಹೋದರೆ ಶಿವಾನುಭವ ಸಂಘಗಳ ಏಳಿಗೆ, ಅದೇ ಅಖಿಲ ವೀರಶೈವ ಶಿವಾನುಭವ ಸಂಸ್ಥೆಯ ಜೀವಾಳ. ಇದರ ಮೂಲಕ ಧರ್ಮಶಾಂತಿ, ಸ್ವತಂತ್ರತೆಗಳು ಬೇಗನೆ ನೆಲೆಗೊಳಲಿ!

ಹೊನ್ನಿಗಾಗಿ ಸತ್ತವರು ಕೋಟಿ!
ಹೆಣ್ಣಿಗಾಗಿ ಸತ್ತವರು ಕೋಟಿ!
ಮಣ್ಣಿಗಾಗಿ ಸತ್ತವರು ಕೋಟಿ!
ಗುಹೇಶ್ವರಾ,
ನಿನಗಾಗಿ ಸತ್ತವರನೊಬ್ಬರನೂ ಕಾಣೆ.

— ಶ್ರೀ ಪ್ರಭುದೇವರು.

"ಶಿವಶರಣರ ತತ್ವಜ್ಞಾನದ ಬೆಳವಣಿಗೆಯಾಗಲಿ"

---

# ೧೭ನೆಯ ಅಖಿಲ ಭಾರತ ತತ್ವಜ್ಞಾನ ಸಮ್ಮೇಳನದಲ್ಲಿ ವೀರಶೈವ ತತ್ವಜ್ಞಾನದ ಘನತೆ.

ಲೇ:-ಶ್ರೀ ಕೊಪ್ಪಳ ವೀರಭದ್ರಪ್ಪ ಎಂ. ಎ. ಬಿ. ಟಿ. ನವಕಲ್ಯಾಣಮಠ. ಧಾರವಾಡ

ಅಲಿಗಡ ತತ್ವಜ್ಞಾನ ಸಮ್ಮೇಳನದ ಕಾರ್ಯದರ್ಶಿಗಳ ಆಮಂತ್ರಣದ ಮೇರೆಗೆ ವೀರಶೈವ ತತ್ವಜ್ಞಾನ ಅನುಭವಗಳನ್ನು ಕುರಿತು ವ್ಯಾಖ್ಯಾನಕೊಡಲು ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು ಹೋಗಿದ್ದರಷ್ಟೇ! ಸಮ್ಮೇಳನದ ಕಾರ್ಯಕ್ರಮಗಳಲ್ಲಿ ಶ್ರೀಗಳ ವ್ಯಾಖ್ಯಾನವನ್ನು ಸಾರ್ವಜನಿಕ ವ್ಯಾಖ್ಯಾನವೆಂದು ಗೊತ್ತುಪಡಿಸಿ ನಗರದ ಭವ್ಯವಾದ ಲಾಯುನ್ ಲಾಯಬ್ರರಿಯಲ್ಲಿ ಅದನ್ನೇರ್ಪಡಿಸಿದ್ದರು. ಹೋದ ವರ್ಷ ಮದ್ರಾಸಿನಲ್ಲಿ ಕೂಡಿದ್ದ ಈ ತತ್ವಜ್ಞಾನ ಸಮ್ಮೇಳನದಲ್ಲಿ ಶ್ರೀಗಳು ವೀರಶೈವ ದರ್ಶನವನ್ನು (*Virshaiv Weltanshaung*)

ಕುರಿತು ಮಾಡಿದ ಭಾಷಣದ ಪರಿಣಾಮವು ಸಮ್ಮೇಲನದ ಸಂಚಾಲಕರಲ್ಲಿ ವಿಶೇಷವಾಗಿ ಹರಡಿದ್ದರಿಂದ " *His Holiness is a thinker and speaker of all India reputation and the Public of Aligarh is sure to hear a lecture of extro-ardinary merit* ") ಶ್ರೀಗಳು ಅಖಿಲ ಹಿಂದುಸ್ತಾನದಲ್ಲಿ 'ಸುಪ್ರಸಿದ್ಧ ವಿಚಾರವಂತರೂ, ವಾಗ್ಮಿಗಳೂ ಎಂದು ಹೆಸರಾಗಿದ್ದಾರೆ. ಅಲಿಗಡದ ಸಾರ್ವಜನಿಕರು ಅಸಾಮಾನ್ಯ ಪಾಂಡಿತ್ಯದಿಂದ ಕೂಡಿದ ಇವರ ಅಮೋಘವಾದ ಭಾಷಣವನ್ನು ಕೇಳಲಿರುವದು ಖಂಡಿತ. ಎಂದು ಹಸ್ತಪತ್ರಿಕೆಗಳಿಂದ ಪ್ರಕಟಗೊಳಿಸಿದ್ದಲ್ಲದೆ ಛಾಯಾ ಚಿತ್ರಗಳ (*Cenema*) ಮೂಲಕವಾಗಿ ಸತತ ಮೂರು ದಿವಸ ವ್ಯಾಖ್ಯನದ ಬಗ್ಗೆ ಸುದ್ದಿಯನ್ನು ಹರಡಿಸಿದ್ದರು. ವ್ಯಾಖ್ಯಾನದ ಮುನ್ನಾ ದಿವಸ ಶ್ರೀಗಳನ್ನು ಕಾಣುತ್ತಲೆ. ಸಮ್ಮೇಳನಕ್ಕೆ ಬಂದಿದ್ದ ಪರಿಚಿತ ಪ್ರತಿನಿಧಿಗಳು ಹಿಂದಿನ ವರ್ಷದ ವ್ಯಾಖ್ಯಾನ ಮತ್ತು ಅಚ್ಚಾದ ಅದರ ಪ್ರತಿಗಳನ್ನು ನೆನೆಸಿ ಧನ್ಯವಾದಗಳನ್ನು ಅರ್ಪಿಸಿ ಈ ಸಲದ ವ್ಯಾಖ್ಯಾನದ ಬಗ್ಗೆ ಸಮಾಚಾರವನ್ನು ತಮ್ಮ ಇಷ್ಟ ಮಿತ್ರರಲ್ಲಿ ಹಬ್ಬಿಸತ್ತಿದ್ದರು. ಶ್ರೀಗಳ ವ್ಯಾಖ್ಯಾನಕ್ಕೆ ನಿಯೋಜಿತ ಅಧ್ಯಕ್ಷರಾದ ಡಾಕ್ಟರ ಎಸ್. ಹಾದಿ ಹಸನ ಎಂ. ಏ ಪಿ. ಎಚ್ ಡಿ. ಅವರು ಶ್ರೀಗಳನ್ನು ಕಾಣುತ್ತಲೆ ಬಹು ವಿನಯಾದರಗಳಿಂದ ಬರಮಾಡಿಕೊಂಡು. ಕ್ಷೇಮ ಸಮಾಚಾರವನ್ನು ತಿಳಿದುಕೊಂಡು ಅವರ ಬಗ್ಗೆ ಅಭಿಪ್ರಾಯವನ್ನು ಮಾಡಿಕೊಂಡರು. ವ್ಯಾಖ್ಯಾನಕ್ಕೆ ೬೫ ನೂರು ಜನ ಪಂಡಿತರು ಸೇರಿದ್ದರು. ಹಿಂದುಸ್ತಾನದ ಯುನಿವ್ಹರ್ಸಿಟಿಗಳ ಅನೇಕ ಪ್ರತಿನಿಧಿಗಳು ನೆರೆದಿದ್ದರು. ಅವರಲ್ಲಿ ತತ್ವಜ್ಞಾನ ಸಮ್ಮೇಳನದ ನಿಯೋಜಿತ ಅಧ್ಯಕ್ಷರಾದ ಡಾಕ್ಟರ ಜಿ ಸಿ. ಚಟರ್ಜಿ ಎಂ. ಏ. ಪಿ. ಎಚ್ ಡಿ. (ಲಾಹೋರ) ಪ್ರೋ. ಎ. ಆರ್. ವಾಡಿಯಾ ಎಂ ಎ (ಮೈಸೂರ) ಪ್ರೋ. ಪಿ. ವ್ಹಿ. ಶ್ರೀನಿವಾಸ ಮೂರ್ತಿ ಎಂ. ಏ. (ಮೈಸೂರ) ಡಾಕ್ಟರ ಜೆ. ಎನ್. ಸಿಂಹ ಎಂ. ಏ. ಪಿ. ಎಚ್ ಡಿ (ಮಿರತ), ಡಾಕ್ಟರ ಎನ್ ವ್ಹಿ. ಬ್ಯಾನರ್ಜಿ ಎಂ. ಏ. ಪಿ. ಎಚ್. ಡಿ, (ದಿಲ್ಲಿ). ಪ್ರಿನ್ಸಿಪಾಲ ವ್ಹೀ. ಕೆ. ಜೋಗ. ಎಂ. ಏ. (ಪುಣೆ) ಡಾಕ್ಟರ ಎನ್. ಕೇ. ಬ್ರಹ್ಮ ಎಂ. ಏ. ಪಿ. ಎಚ್. ಡಿ. (ಕಲ್ಕತ್ತಾ) ಪ್ರೊ ಎನ್. ಎ. ನಿಕಮ ಎಂ ಏ. (ಕೊಲ್ಹಾಪೂರ) ಪ್ರೊ. ಪಿ. ಎಂ. ಭಂಭಾಣಿ ಎಂ. ಏ. (ಆಗ್ರಾ), ಪ್ರೊ. ಆದಿನಾರಾಯಣ ಎಂ. ಏ. (ಆಗ್ರಾ) ಪ್ರೊ: ಜ್ವಾಲಾ ಪ್ರಸಾದ ಎಂ. ಏ. (ನಾಗಪೂರ.) ಪ್ರೊ. ಎ. ಕೆ. ಸರಕಾರ

ಎಂ. ಎ. (ಛಪ್ರಾ ಬಿಹಾರ) ಪ್ರಿನ್ಸಿಪಾಲ ಎಂ. ಎ. ಗುಪ್ತರ ಎಂ. ಎ. (ಅಗ್ಘನ) ಧರ್ಮ ಸಮಾಜ ಕಾಲೇಜ (ಅಲಿಗಡ) ಪ್ರೊ. ಎಂ. ಎಂ. ಶರೀಫ ಎಂ. ಎ. (ಕ್ಯಾಂಟಬ್) (ಅಲಿಗಡ) ಡಾ॥ ಎಂ. ಎ. ಅಹಮ್ಮದ ಎಂ. ಎ. ಡಾ॥ ಇನ್ ಫಿಲಾಸಫಿ (ಅಲಿಗಡ) ಪ್ರೊ. ಎ. ಬಿ. ಎ. ಹಲೀಮ ಬಿ. ಎ. (ಕ್ಯಾಂಟಬ್) ಪ್ರೊ. ವ್ಹಾಯಿಸ ಚಾನ್ಸಲರ ಅಲಿಗಡ ಯುನಿವ್ಹರಸಿಟಿ ಶ್ರೀ. ಸ್ವಾಮಿದಯಾಲ ಬಿ. ಎ. (ಅಲಿಗಡ) ಅಲಿಗಡ ಯುನಿವ್ಹರಸಿಟಿಯ ಗರ್ಲ್ಸ ಕಾಲೇಜದ ಶಿಕ್ಷಿಕೆಯರು ಮತ್ತು ವಿದ್ಯಾರ್ಥಿನಿಯರು ಮತ್ತು ಶ್ರೀ ಧರ್ಮದೇವಶಾಸ್ತ್ರಿ ಅಧ್ಯಕ್ಷ ಆರ್ಯ ಸಮಾಜ ದಿಲ್ಲಿ ಇವರೇ ಮೊದಲಾದವರು ಪ್ರಮುಖರು.

ವ್ಯಾಖ್ಯಾನಕ್ಕೆ ನಿಯೋಜಿತ ಅಧ್ಯಕ್ಷರಾದ ಡಾ॥ ಎಸ್ ಹಾದಿ ಹಸನ ಎಂ. ಎ. ಪಿ. ಎಚ್. ಡಿ. ಅವರು ಅಲಿಗಡ ಯುನಿವ್ಹರಸಿಟಿಗೆ ಒಂದು ಅಮೌಲ್ಯ ರತ್ನವೆನ್ನಬಹುದು. ಪರ್ಶಿಯನ್ ಭಾಷೆಯಲ್ಲಿ ಅವರು ಅದ್ವಿತೀಯ ಪಂಡಿತರಿದ್ದಂತೆ ಇಂಗ್ಲೀಷ ಭಾಷೆಯಲ್ಲಿಯೂ ತುಂಬಾ ಪ್ರಭುತ್ವವುಳ್ಳವರು. ಅಲೀಗಡದಲ್ಲಿ ವರಿಗೆ ಎರಡನೆಯ ಫಿರ್ದೂಸಿಕವಿ ಎಂದು ಕರೆಯುವದುಂಟು. ಇತಿಹಾಸ ಅರ್ಥಶಾಸ್ತ್ರ, ಸಾಯನ್ಸ, ಗಣಿತ ತತ್ವಜ್ಞಾನ ಈ ವಿಷಯಗಳಲ್ಲಿ ಅವರ ಕೈ ಹಿಡಿಯುವವರಿಲ್ಲ. ಒಳ್ಳೇ ಮೇಧಾವಿಗಳೂ, ಸ್ಮರಣಶಕ್ತಿಯುಳ್ಳವರೂ, ವಾಗ್ಮಿಗಳೂ ಎಂದು ಹೆಸರು ಪಡೆದವರು ಇದೂ ಅಲ್ಲದೆ ಅಧ್ಯಾತ್ಮ ಶಾಸ್ತ್ರದಲ್ಲಿ ಒಳ್ಳೇ ಅನುಭವಿಗಳು ಇವರು ಶ್ರೋತೃವರ್ಗಕ್ಕೆ ಶ್ರೀ ಕುಮಾರ ಸ್ವಾಮಿಗಳ ಪರಿಚಯವನ್ನು ಮಾಡಿಕೊಡುತ್ತ ಅವರ ಬಗ್ಗೆ ತಾವು ಕಂಡು ಹಿಡಿದಿದ್ದ ಸರಳ ಜೀವನ ಮತ್ತು ಸುವಿಚಾರ, ಮನೋಹರವಾದ ವ್ಯಕ್ತಿತ್ವ ಮತ್ತು ದಿವ್ಯ ದೃಷ್ಟಿ ಹಾಗು ಸೌಜನ್ಯ ಸುಶೀಲತೆಗಳ ಬಗ್ಗೆ ಕೊಂಡಾಡಿ ಹೋದ ವರ್ಷದ ತತ್ವಜ್ಞಾನದ ಸಮ್ಮೇಳನದಲ್ಲಿ ಭಾಗ ವಹಿಸಿದವರಿಗೆ ತಮ್ಮ ವ್ಯಾಖ್ಯಾನದಿಂದ ಸುಪರಿಚಿತರು ಎಂಬಿವೇ ಮೊದಲಾದ ಸಂಗತಿಗಳನ್ನು ತಿಳಿಸಿ ಭಾಷಣಗೈಯ್ಯಲು ಬಿನ್ನವಿಸಿಕೊಂಡ ಬಳಿಕ ಗೊತ್ತುಪಡಿಸಿದ ಮೇರೆಗೆ ಒಂದು ತಾಸಿನ ವರೆಗ ಸುಶ್ರಾವ್ಯವಾದ ಗಹನ ವಿಷಯ ನಿರೂಪಣೆಯಿಂದ ಕೂಡಿದ ವ್ಯಾಖ್ಯಾನವಾಯಿತು. ಅದರಲ್ಲಿ ಶ್ರೀಗಳು ಐತಿಹಾಸಿಕ ಸಂಗತಿಗಳ ಸಮನ್ವಯದಿಂದಲೂ ಪಾಶ್ಚಿಮಾತ್ಯ ಪೌರ್ವಾತ್ಯ ತತ್ವಜ್ಞಾನಗಳ ತುಲನಾತ್ಮಕ ವಿವೇಚನೆಯಿಂದಲೂ ಅನುಭವ ದೃಷ್ಟಿಯಿಂದಲೂ, ವೀರಶೈವರ ಇಷ್ಟಲಿಂಗ

ಮತ್ತು ಆದರ ಪೂಜೆಯ ಮರ್ಮ ಇವನ್ನು ತಿಳಿಯಪಡಿಸಿದರು. ವಿಚಾರ ಗಹನತೆಯೊಡನೆ ಭಾಷಾಗಹನತೆಯು ಬೆರೆತುದರಿಂದ ಎಷ್ಟೋ ಜನರಿಗೆ ಭಾಷಣವು ತಿಳಿಯದೇ ಹೋಗಿರಬೇಕು. ಅಲ್ಪ ವೇಳೆಯಲ್ಲಿ ಅನೇಕ ಸಂಗತಿಗಳನ್ನು ತಿಳಿಸಬೇಕಾಗಿದ್ದುದರಿಂದ ಹಲವರಿಗೆ ಬೆನ್ನುಹತ್ತುವದೂ ಆಗಿರಲಿಕ್ಕಿಲ್ಲ. ಆದರೆ ಆಧಾರವೆಂದು ಆಗಾಗ್ಗೆ ರಾಗಯುಕ್ತವಾಗಿ ಅನ್ನುತ್ತಿದ್ದ ಕನ್ನಡ ವಚನ ಪದಗಳನ್ನು ಕೇಳಿ ಅನೇಕರಿಗೆ ಬೆರಗುಂಟಾಗಿರಬೇಕು (ವ್ಯಾಖ್ಯಾನದ ಸಾರಾಂಶವನ್ನು ಹಿಂದಿನಿಂದ ಕೊಡಲಾಗುವದು.)

ವ್ಯಾಖ್ಯಾನದ ಕೊನೆಗೆ ಡಾ॥ ಎಸ್. ಹಾದಿಹಸನ ಅವರು ಸಮಾರೋಪಗೊಳಿಸುತ್ತ ನಿರೂಪಿಸಿದ ಸಂಗತಿಗಳು ಅತ್ಯಂತ ಪರಿಣಾಮಕಾರಿಯಾದವುಗಳು ಒಳ್ಳೇ ಮಾರ್ಮಿಕವಾದವುಗಳು ಮತ್ತು ಮನನೀಯವಾದವುಗಳು ಅದರಲ್ಲಿ ಮುಖ್ಯವಾದ ಮಾತುಗಳಿವು.

ಶ್ರೀ ಕುಮಾರ ಸ್ವಾಮಿಗಳು ತಮ್ಮ ಅದ್ವಿತೀಯ ಭಾಷಣದಲ್ಲಿ ಹೇಳಿದ ಸಂಗತಿಗಳಲ್ಲಿ ಸುಮಾರು ೧೦೦ಕ್ಕೆ ೯೦ ಪಾಲು ನನಗೆ ಹೊಸವು; ಅದರಂತೆ ಇಲ್ಲಿ ನೆರೆದ ಶ್ರೋತೃವೃಂದಕ್ಕೂ ಹೊಸವು. ಅವರ ಭಾಷಣವು ಉದ್ಬೋಧಕವಾಗಿದ್ದಂತೆ ಉಜ್ವಲವಾದ ಬೆಳಕನ್ನು ಬೀರುವಂಥಾದ್ದೂ ಇಹುದು ಅತಿಶಯ ಸುಲಲಿತವಾದ ಶೈಲಿಯಲ್ಲಿ ಮನೋಹರವಾದ ಅವರ ವಿಷಯಪ್ರತಿಪಾದನೆಯು ಹಿಂದುಸ್ತಾನದಲ್ಲಿ ಅವರೊಬ್ಬ ಪ್ರಸಿದ್ಧ ವಕ್ತೃಗಳೆಂಬುದನ್ನು ಸಿದ್ಧಪಡಿಸುತ್ತದೆ. ಗಡುಚಾದ ವಿಷಯವನ್ನು ಸುಲಭವಾಗಿ ಅಚ್ಚೊತ್ತಿದಂತೆ ತಿಳಿಸುವ ಅವರ ಸಾಮರ್ಥ್ಯವು ಹೊಗಳುವಂತಹದು. ತತ್ವಜ್ಞಾನದಲ್ಲಿ ಅವರಿಗಿರುವ ಗತಿ. ಅವರಿಗಿರುವ ಪ್ರಭುತ್ವ, ಅನುಭವ ವಿದ್ಯೆಯಲ್ಲಿ ಅವರಿಗಿರುವ ಲಾಲಸೆ ಅವರಿಗಿರುವ ಆಳ ಇವನ್ನು ಬಗೆದರೆ ಇಷ್ಟುಚಿಕ್ಕ ಮಿದುಳಿನಲ್ಲಿ ಅದೆಷ್ಟು ವಿಶಾಲವಾದ ಜ್ಞಾನ, ಅನುಭವಗಳು ಹುದುಗಿವೆಯಲ್ಲ ಎಂದು ಆಶ್ಚರ್ಯವಾಗುತ್ತದೆ. ಸಾಮಾನ್ಯವಾಗಿ ಗಣಿತಶಾಸ್ತ್ರವನ್ನು ತತ್ವಜ್ಞಾನಕ್ಕೆ ತಳುಕು ಹಾಕುವದಿಲ್ಲ. ಆದರೆ ಶ್ರೀಕುಮಾರಸ್ವಾಮಿಗಳು ತತ್ವಜ್ಞಾನಕ್ಕೆ ಗಣಿತ ಶಾಸ್ತ್ರವನ್ನೂ ಅನುಭವ ವಿದ್ಯೆಗೆ ಭೂಮಿತಿಯನ್ನೂ ಹೊಂದಿಸಿ ತಿಳಿಸಿದ ಸಂಗತಿಗಳು ತುಂಬಾ ಗಮನಾರ್ಹವಾಗಿವೆ ವಿಷಯ ಪ್ರತಿಪಾದನೆಗಾಗಿ ಅವರು ಆರಿಸಿಕೊಂಡ ಆಕೃತಿಗಳು ಭೂಮಿತಿ ಶಾಸ್ತ್ರದಲ್ಲಿ ಸುಲಭ ಮತ್ತು ಸಾಮಾನ್ಯವಾದವುಗಳಾದರೂ ಅವುಗಳಲ್ಲಿ ಅಪಾರವಾದ ಅನುಭವವು ಅಡಗಿದೆ

ಎಂಬುದು ಸ್ಪಷ್ಟವಾದುದು. ಲಿಂಗದಲ್ಲಿ ಅಡಗಿದ ತತ್ವಜ್ಞಾನ ಅನುಭವಗಳು ವಿವೇಚನೆಯು ಐತಿಹಾಸಿಕ ದೃಷ್ಟಿಯ ವಿವರದಲ್ಲಿ ಉಗಮಗೊಂಡು ಪಾಶ್ಚಿಮಾತ್ಯ ಪೌರ್ವಾತ್ಯ ತತ್ವಜ್ಞಾನಗಳಲ್ಲಿ ಸ್ಥಾನವನ್ನು ಪಡೆದು ಭೂಮಿತಿಶಾಸ್ತ್ರದ ತ್ರಿಕೋಣದ ಹೊದಿಕೆಯಲ್ಲಿ ಹೊರಹೊಮ್ಮಿ ಕೊನೆಗೆ ಇಷ್ಟಲಿಂಗದ ಮನೋಹರವಾದ ರೂಪದಲ್ಲಿ ಪರಿಪೂರ್ಣತೆಗೊಂಡು ಕೊನೆಗಂಡಿತೆಂಬುದನ್ನು ನೆನೆದರೆ ಈವರೆಗೂ ಸುವಿಚಾರಗಳ ಮತ್ತು ಪಂಡಿತರ ಗಮನಕ್ಕೆ ಬಾರದೆ ಇದ್ದ ಈ ತತ್ವಜ್ಞಾನ ಅನುಭವದ ವಿದ್ಯೆಗಳು ಜಗತ್ತಿಗೆ ಹೊಸವಾಗಿ ತೋರುತ್ತಿವೆ. ಈದಿನ ಇಂಥ ವಿಷಯವನ್ನು ನಮಗೆ ಅರುಹಿ ಕೊಟ್ಟಿದಕ್ಕೆ ಶ್ರೀಕುಮಾರ ಸ್ವಾಮಿಗಳಿಗೆ ನಾವು ತುಂಬಾ ಉಪಕೃತರು. ಅವರಿಗಿರುವ ಅತ್ಯದ್ಭುತ ಸ್ಮರಣಶಕ್ತಿ, ತಡೆಯಿಲ್ಲದೆ ಸಾಗುತ್ತಿರುವ ವಾಕ್ ಪ್ರವಾಹ, ಓತಪ್ರೋತವಾಗಿ ಹರಿಯುವ ಹೊಸಹೊಸ ಉದ್ಬೋಧಕ ವಿಚಾರ ಮಾಲಿನಿ ಇವೆಲ್ಲವುಗಳಿಗಿಂತ ಮಿಗಿಲಾಗಿ ಅಚ್ಚ ಅನುಭವಿಗಳಿಗೆ ಸಲ್ಲುವ ಸ್ಫುರಣೆಗೊಳ್ಳುವ ಅವರ ದಿವ್ಯದೃಷ್ಟಿ ಮತ್ತು ಅವರ ಭವ್ಯ ವ್ಯಕ್ತಿತ್ವ ಇವು ಅವರನ್ನು ಅತಿ ಮಾನವರ ಪಂಕ್ತಿಯಲ್ಲಿ ನಿಲ್ಲಿಸುತ್ತವೆ. ಕೋರಿದಂತೆ ಸ್ಪಷ್ಟವಾಗಿ ತಿಳಿಸಿ ಹೇಳಿದ ಶ್ರೀಗಳ ಮಾತುಗಳು ಈ ಶ್ರೋತೃವೃಂದದ ಕಿವಿಗಳಲ್ಲಿ ಧ್ವನಿಗುಡುತ್ತಲಿವೆ. ಆ ಮಾತುಗಳ ಉಪಯೋಗವು ಜನಸಮೂಹಕ್ಕೆ ಹೆಚ್ಚಾಗಿ ಆಗುವದು ಅವಶ್ಯವಿರುವದರಿಂದ ಈ ವ್ಯಾಖ್ಯಾನದಲ್ಲಿಯ ವಿಚಾರಗಳನ್ನು ಬೇಗನೆ ಅಚ್ಚುಗೊಳಿಸಿ ಪ್ರಚಾರಗೊಳಿಸುವರೆಂದು ನಂಬುತ್ತೇನೆ. ಈ ನಮ್ಮ ವಿಶ್ವ ವಿದ್ಯಾಲಯಕ್ಕೆ ಶ್ರೀಗಳ ದರ್ಶನವು ಇದೇ ಕೊನೆಯ ಸಾರಿಯಾಗದೆ ವರುವರುಷವೂ ನಮ್ಮ ಆಮಂತ್ರಣದ ಮೇರೆಗೆ ಅವರು ಬಂದು ತಮ್ಮ ಅಮೌಲ್ಯ ವಿಚಾರಗಳ ಲಾಭವನ್ನು ನಮಗೆ ಮಾಡಿಕೊಡಬೇಕೆಂದು ಅರಿಕೆ ಮಾಡಿಕೊಳ್ಳುತ್ತೇನೆ. ಶ್ರೀಗಳವರಿಗೆ ನನ್ನ ಮತ್ತು ಈ ಅಲಿಗಡ ವಿಶ್ವವಿದ್ಯಾಲಯದ ಧನ್ಯವಾದಗಳು.

ಎಂದು ಸಮಾರೋಪಗೊಳಿಸಿದ ತರುವಾಯ ಅಲಿಗಡ ತತ್ವಜ್ಞಾನ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದ ಡಾಕ್ಟರ ಜಿ. ಸಿ. ಚಟರ್ಜಿ ಅವರು ಮುಗುಳ್ನಗೆ ಬೀರುತ್ತ ಹಸ್ತಾಂದೋಲನಗೆಯ್ದು ಮುಂದಿನ ಸಲ ಲಾಹೋರಿಗೆ ಬನ್ನಿ ಎಂದು ಆಗಲೇ ಆಮಂತ್ರಣವಿತ್ತರು.

---

ಶ್ರೀ




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೪—೬—೦

ಸಂಪುಟ ೧೬] ಫೆಬ್ರುವರಿ ೧೯೪೨ [ಸಂಚಿಕೆ ೫

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೬ | ಫೆಬ್ರುವರಿ ೧೯೪೨. | ಸಂಚಿಕೆ ೫ |
| --- | --- | --- |

## ಧಾರಣ-ದೀಕ್ಷೆ.

(ಸಂಪಾದಕ)

ಈ ವಿಷಯದ ಚರ್ಚೆಯು ಇನ್ನು ಮುಂದೆ ಶಿವಾನುಭವ ಪತ್ರಿಕೆಯಲ್ಲಿ ನಿಲ್ಲಿಸಲ್ಪಡುವದೆಂದು ನಾವು ವಾಚಕರಿಗೆ ಅರಿಕೆಮಾಡಿಕೊಳ್ಳುತ್ತೇವೆ. ಈ ಸಂಚಿಕೆಯಲ್ಲಿ ಬಂದಿರುವ ಲೇಖಗಳೇ ಕಡೆಯವೆಂದು ಅವರು ಭಾವಿಸಬೇಕು. ಈ ವಿಷಯದ ಸಂಬಂಧವಾಗಿ ಅನೇಕ ಮಹತ್ವದ ಲೇಖಗಳು ಶಿವಾನುಭವ ಪತ್ರಿಕೆಯಲ್ಲಿ ಬಂದಿವೆಂಬುದು ನಿರ್ವಿವಾದವಾದುದು. ಅವುಗಳಲ್ಲಿ ವೀರಶೈವ ಮತದ ಅನೇಕ ಮಹತ್ವದ ತತ್ವಗಳು ಆಳವಾಗಿ ಚರ್ಚಿಸಲ್ಪಟ್ಟಿರುತ್ತವೆ ಅವೆಲ್ಲವುಗಳು ವಚನಶಾಸ್ತ್ರವನ್ನು ಮುಖ್ಯ ಆಧಾರವಾಗಿಟ್ಟುಕೊಂಡು ಚರ್ಚಿಸಲ್ಪಟ್ಟವುಗಳೆಂಬುದು ಬಹು ಮಹತ್ವವಾದದ್ದು. ಈ ಲೇಖಗಳ ಮೇಲಿಂದ ವಚನಶಾಸ್ತ್ರದಲ್ಲಿ ಎಂಥ ಘನತರವಾದ ತತ್ವಗಳು ಅಡಕವಾಗಿರುತ್ತವೆಂಬುದು ಸ್ಪಷ್ಟವಾಗುತ್ತದೆ.

ವೀರಶೈವ ಧರ್ಮದಲ್ಲಿ ಹಿಂದೆ ಒಂದು ಕಾಲದಲ್ಲಿ ಬ್ರಾಹ್ಮಣ ಮತದ ರೀತಿ ನಡೆಗಳೂ ಆಚಾರಗಳೂ ಕ್ರಿಯೆಗಳೂ ಸಮ್ಮಿಶ್ರವಾಗಿದ್ದುದು ತೋರಿಬರುತ್ತದೆ. ಒಂದು ಕಡೆಗೆ ವರ್ಣಾಶ್ರಮ ಧರ್ಮಾನುಯಾಯಿಗಳಾದ ಬ್ರಾಹ್ಮಣರು ಮತ್ತೊಂದು ಕಡೆಗೆ ಅವುಗಳನ್ನನುಸರಿಸದೆ ವ್ಯಾಪಕ ಭಾವವುಳ್ಳ ಆಗಮಾನುಯಾಯಿಗಳು ಇವರಲ್ಲಿ ಪರಸ್ಪರ ಘರ್ಷ-

ಣಗಳು ಒಂದು ಕಾಲದಲ್ಲಿ ನಡೆದಂತೆ ತೋರುತ್ತದೆ. ಇದರ ಪರಿಣಾಮವಾಗಿ ವೀರಶೈವ ಸಮಾಜದಲ್ಲಿ ಮಧ್ಯದಲ್ಲಿ ಒಂದು ಮಿಶ್ರ ಧರ್ಮವು ಪ್ರಾದುರ್ಭವಿಸಿತು. ಹೀಗೆ ಉಂಟಾದ ಧರ್ಮದಲ್ಲಿಯು ಕೇವಲ ಬ್ರಾಹ್ಮಣ ಕರ್ಮಗಳನ್ನು ಬಸವೇಶ್ವರನ ಕಾಲದಲ್ಲಿ ಶಿವಶರಣರು ಪೂರ್ಣವಾಗಿ ತೆಗೆದುಹಾಕಿದರು. ಇದು ಕರ್ನಾಟಕದಲ್ಲಿ ಶಿವಾನುಭವ ಮಂಟಪದಲ್ಲಿ ನಡೆಯಿತು. ಆದರೆ ಕರ್ನಾಟಕದ ಪೂರ್ವದಿಕ್ಕಿನಲ್ಲಿರುವ ಆಂಧ್ರದೇಶದಲ್ಲಿ ಮಾತ್ರ ಮಿಶ್ರ ಮಾರ್ಗವು ಪ್ರಚಾರದಲ್ಲಿ ಉಳಿಯಿತು. ಅದು ಈಗಲೂ ಅಲ್ಲಿ ಅಸ್ತಿತ್ವದಲ್ಲಿರುವದು ಕಂಡುಬರುತ್ತದೆ. ಇದರಿಂದ ಬ್ರಾಹ್ಮಣ ಧರ್ಮವನ್ನು ಅನುಸರಿಸುವ ಅನೇಕ ಆಚಾರ ವಿಚಾರಗಳನ್ನು ಪುಷ್ಟೀಕರಿಸುವ ವೀರಶೈವ ಧರ್ಮ ಗ್ರಂಥಗಳು ನಮ್ಮಲ್ಲಿ ಉಪಲಬ್ಧವಿರುತ್ತವೆ. ಇದರಿಂದ ದೀಕ್ಷಾವಿಧಿ, ಲಿಂಗಪೂಜಾವಿಧಿ, ಮೊದಲಾದ ವಿಧಿಗಳಲ್ಲಿ ಬ್ರಾಹ್ಮಣ ಪದ್ಧತಿಗಳು ಸೇರ್ಪಡೆಯಾಗಿರುವದು ತೋರಿಬರುತ್ತದೆ. ಆದರೆ ಅವುಗಳು ಶಿವಶರಣರ ಮಾರ್ಗಕ್ಕೆ ಹೊಂದಿದವುಗಳಾಗಲಾರವು. ಅವುಗಳನ್ನು ಪುಷ್ಟೀಕರಿಸುವ ಗ್ರಂಥಗಳೂ ಕೂಡ ಆಧಾರ ಗ್ರಂಥಗಳೆಂದು ಹೇಳಲ್ಕು ಬರಲಾರದು.

ವಚನ ಶಾಸ್ತ್ರದ ಅಭ್ಯಾಸವು ತೋಂಟದಾರ್ಯರ ಕಾಲದ ವರೆಗೆ ಪ್ರಚಾರದಲ್ಲಿದ್ದು ಮುಂದೆ ಅದರ ಅಭ್ಯಾಸವು ಕಡಿಮೆಯಾಗುತ್ತ ಬಂದಿದ್ದರಿಂದ ಅದರ ತತ್ವಗಳ ಪರಿಚಯವಾದರೂ ಜನರಲ್ಲಿ ಉಳಿಯದೆ ಹೋಯಿತು. ಆದರೂ ಶಿವಶರಣರ ಪದ್ಧತಿಗಳೂ ಆಚಾರಗಳೂ ಕೇವಲ ಅಂಧತೆಯಿಂದ ಅನುಸರಿಸಲ್ಪಡುತ್ತ ಬಂದವು. ಅವುಗಳ ಮರ್ಮಗಳ ಜ್ಞಾನವು ಹೊರಟುಹೋಯಿತು. ಈ ಸ್ಥಿತಿಯು ಈಗಲೂ ಕೂಡ ಬಹುಮಟ್ಟಿಗೆ ಇರುತ್ತದೆ.

೪೦-೫೦ ವರ್ಷಗಳಿಂದೀಚೆಗೆ ವೀರಶೈವ ಧರ್ಮಜ್ಞಾನ ಮಾಡಿಕೊಳ್ಳಬೇಕೆಂಬ ಅಭಿಲಾಷೆಯು ವೀರಶೈವ ಸಮಾಜದಲ್ಲಿ ಪ್ರಬಲವಾಯಿತು. ಆದರೆ ಆಗ ಆವ ಕಾರಣದಿಂದಲೋ ಏನೋ ಬಹು ಜನರು ಕಾಶಿಯಲ್ಲಿ ಅಭ್ಯಾಸ ಮಾಡಲಿಕ್ಕೆ ಹೋಗಹತ್ತಿದರು. ಆ ಭಾಗದಲ್ಲಿ ವೀರಶೈವ ಧರ್ಮಗ್ರಂಥಗಳು ಪ್ರಚಾರದಲ್ಲಿರದೆ ಅವುಗಳನ್ನು ತಿಳಿಸಿ ಹೇಳುವ ವ್ಯವಸ್ಥೆಯೇ ಇರುವದಿಲ್ಲ. ಆದರಿಂದ ಕೇವಲ ಬ್ರಾಹ್ಮಣ ಧರ್ಮ ಗ್ರಂಥಗಳ ಅಭ್ಯಾಸವು ನಮ್ಮ ಸಮಾಜದ ಧಾರ್ಮಿಕ ವರ್ಗದವರಲ್ಲಿ ನಡೆಯುಹತ್ತಿತು.

ಇದು ತಪ್ಪು ಮಾರ್ಗವೆಂದು ನಾವು ಹೇಳದೇ ಇರಲಾರೆವು. ಈ ಸ್ಥಿತಿಯು ಇನ್ನೂ ಕೂಡ ಸರಿಪಡಿಸಲ್ಪಟ್ಟಿಲ್ಲ. ಕರ್ನಾಟಕದಲ್ಲಿ ನಡಿಸಲ್ಪಡುವ ವೀರಶೈವ ಧರ್ಮ ಪಾಠಶಾಲೆಗಳಲ್ಲೆಲ್ಲ ಬ್ರಾಹ್ಮಣ ಪದ್ಧತಿಯ ಗ್ರಂಥಗಳನ್ನೇ ಅಭ್ಯಾಸ ಮಾಡುವದು ಕಂಡುಬರುತ್ತಿದೆ. ನಮ್ಮಲ್ಲಿಯ ಎಲ್ಲ ಪಾಠಶಾಲೆಗಳಲ್ಲಿ ಬಹುಶಃ ಕಲಕತ್ತಾ ಕೇಂದ್ರದಲ್ಲಿ ಏರ್ಪಡಿಸಲ್ಪಟ್ಟ ಶಿಕ್ಷಣ ಕ್ರಮವು ರೂಢವಾಗಿದೆ. ಅವುಗಳಲ್ಲಿ ಕೆಲವುಗಳಲ್ಲಿ ಈ ಕೇಂದ್ರದ ಪರೀಕ್ಷೆಗಳೇ ನಡೆಯುತ್ತಿದ್ದು, ಪ್ರಶಸ್ತಿ ಪತ್ರಗಳಾದರೂ ಅವುಗಳವೇ ಇರುತ್ತವೆ. ಇದು ದುರವಸ್ಥೆಯಾಗಿದೆ. ಇದನ್ನು ಆದಷ್ಟು ತೀವ್ರ ನಾವು ಸರಿಪಡಿಸಬೇಕು. ಮತ್ತು ಪಾಠಶಾಲೆಗಳಲ್ಲಿ ವೀರಶೈವ ಸಮಾಜ ಸಂಸ್ಕೃತಿಯ ಪೋಷಣೆಗೆ ಸಹಾಯಕಾರಿಯಾಗುವಂಥ ಗ್ರಂಥಗಳ ಅಭ್ಯಾಸವು ನಡೆಯುವಂತೆ ವ್ಯವಸ್ಥೆಯಾಗಬೇಕು.

ಈ ಶೋಚನೀಯ ಪರಿಸ್ಥಿತಿಯ ಮೂಲಕ ಲಿಂಗಧಾರಣ, ದೀಕ್ಷೆ ಈ ಮಹತ್ವದ ವಿಷಯದಲ್ಲಿ ಸಹ ಮತಭೇದಗಳುಂಟಾಗಿವೆ. ನಮ್ಮ ಪತ್ರಿಕೆಯಲ್ಲಿ ಬಂದ ಬೇರೆ ಬೇರೆ ಲೇಖಗಳನ್ನು ಸೂಕ್ಷ್ಮವಾಗಿ ನಿದರ್ಶಿಸಿದರೆ ಈ ಸಂಗತಿಯು ತಿಳಿದುಬರದೆ ಇರಲಾರದು. ಆದರೆ ಅವುಗಳನ್ನೆಲ್ಲ ನಾವು ಸ್ವತಂತ್ರವಾಗಿ ಶಿವಾನುಭವ ಪತ್ರಿಕೆಯಲ್ಲಿ ವಿವೇಚಿಸದೆ ಮುಂದೆ ತೀವ್ರವಾಗಿ ಪ್ರಕಟವಾಗಲಿರುವ ವಚನಶಾಸ್ತ್ರಸಾರ ಭಾಗ ೨ (ಉತ್ತರಾರ್ಧ) ಇದರಲ್ಲಿ ವಿವೇಚಿಸುವೆವು. ಈ ಗ್ರಂಥದ ಪೂರ್ವ ಭಾಗದಲ್ಲಿ ಗುರು, ಲಿಂಗ, ಜಂಗಮ ಈ ವಿಷಯಗಳು ಮಾತ್ರ ಚರ್ಚಿಸಲ್ಪಟ್ಟವೆ. ಆದರ ಉತ್ತರ ಭಾಗದಲ್ಲಿ ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಈ ವಿಷಯಗಳಲ್ಲದೆ ವೀರಶೈವರಲ್ಲಿರುವ ಆಚಾರಗಳೂ ವಿಧಿವಿಧಾನಗಳೂ ವಿವೇಚಿಸಲ್ಪಡುವವು. ಈ ವಿಷಯಗಳನ್ನು ನಾವು ನಿರೀಕ್ಷಿಸುತ್ತಾ ಇರುವಲ್ಲಿ ಅವುಗಳಲ್ಲಿ ಅನೇಕ ಮತಭೇದಗಳಿರುವದು ನಮಗೆ ಕಂಡುಬಂದಿತು. ಅವುಗಳ ನಿಜಸ್ಥಿತಿಯನ್ನು ತಿಳಿಯುವ ಉದ್ದಿಶ್ಯವಾಗಿ ನಾವು ಶಿವಾನುಭವ ಪತ್ರಿಕೆಯಲ್ಲಿ 'ದೀಕ್ಷಾವಾದ' ಈ ವಿಷಯವನ್ನು ಪ್ರಾರಂಭಿಸಿದೆವು. ಇದೇ ಮೇರೆಗೆ 'ಪಾದೋದಕ' ಈ ವಿಷಯವಾಗಿಯೂ ಭಿನ್ನಮತಗಳಿದ್ದು ಈ ವಿಷಯವಾಗಿಯೂ ನಾವು ಪತ್ರಿಕೆಯಲ್ಲಿ ಚರ್ಚೆಗೆ ಸ್ಥಾನವನ್ನು ಕೊಟ್ಟೆವು. ಇತರ ಆವರಣಗಳ ವಿಷಯವಾಗಿಯೂ ಕೂಡ ಹೀಗೆಯೇ ಮತಭೇದಗಳಿವೆ. ವೀರಶೈವರಿಗೆ ಅತಿ

ಮುಖ್ಯವಾಗಿರುವ ಮಂತ್ರ ಇದರಲ್ಲಿಯೂ ಕೂಡ ಕೇವಲ ಶೈವ ಪದ್ಧತಿಗಳು ಕೂಡಿವೆ. ರುದ್ರಾಕ್ಷಿ, ವಿಭೂತಿ, ಲಿಂಗ ಪೂಜೆ ಇವುಗಳಲ್ಲಿಯೂ ಇದೇ ಸ್ಥಿತಿಯು! ಹೀಗೆ ಮಿಶ್ರವಾಗಿ ಹೋಗಿರುವಂಥ ಮತ್ತು ವೀರಶೈವ ಮತಕ್ಕೆ ಸಂಬಂಧವಲ್ಲದಂಥ ವಿಷಯುಗಳನ್ನು ನಾವು ದೂರಪಡಿಸಿ ನಿಜವಾದ ಶಿವಶರಣರ ಮಾರ್ಗವನ್ನು ಬಹಿರಂಗಗೊಳಿಸಬೇಕಾಗಿರುತ್ತದೆ. ಈ ಕಾರಣ ಕ್ಕೋಸ್ಕರವೇ ನಾವು ವಚನಶಾಸ್ತ್ರಸಾರಭಾಗ ೩ ಇದರ ಉತ್ತರಭಾಗವನು ಪೂರ್ತಿಗೊಳಿಸುವಲ್ಲಿ ನಮಗೆ ಕಾಲವಿಲಂಬವಾಗಿರುತ್ತದೆ. ಆದರೆ ಇನ್ನು ಮೇಲೆ ಈ ಭಾಗವನ್ನು ಬಹು ಶೀವ್ರವಾಗಿಯೇ ಮುಗಿಸಬೇಕೆಂದು ಸಂಕಲ್ಪಿಸಿದ್ದೇವೆ.

ಈ ದೀಕ್ಷಾ ವಾದದಲ್ಲಿ ಅನೇಕ ಲೇಖಕರು ಅನಾವಶ್ಯಕವಾಗಿ ಕಟುವಾದ ಶಬ್ದಗಳನ್ನು ಉಪಯೋಗಿಸಿದ್ದಾರೆ- ಅವರೆಲ್ಲರೂ ಶಿವಶರಣರ ವಚನಶಾಸ್ತ್ರವನ್ನು ಮನಃಪೂರ್ವಕವಾಗಿ ನಂಬುವವರೂ ಆದರಿಸುವವರೂ ಇದ್ದಾರೆಂಬುದು ಸ್ಪಷ್ಟವದೆ. ಅವರಲ್ಲಿ ಪ್ರಾಮಾಣಿಕ ಮತಭೇದಗಳು ಮಾತ್ರ ಆಗಿವೆಯೇ ಹೊರ್ತು ಆವು ಬುದ್ಧಿಪುರಸ್ಸರವಾಗಿ ಅಥವಾ ಉದ್ದೇಶಪೂರ್ವಕವಾಗಿ ಆದವುಗಳಲ್ಲ. ಅವರೆಲ್ಲರೂ ತಮ್ಮ ಲೇಖಗಳ ಮೂಲಕ ಮಹತ್ವದ ವಿಚಾರಗಳನ್ನು ಹೊರಗೆಡವಿದ್ದಕ್ಕೋಸ್ಕರ ಸಮಾಜವು ಅವರಿಗೆ ಋಣಿಯಾಗಿರುತ್ತದೆ.

---

# ಧಾರಣ, ದೀಕ್ಷೆ.

(ಲೇ:– ಶ್ರೀಗುರುಮೂರ್ತಿದೇವರು, ಶ್ರೀಜಗದ್ಗುರು ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ.)

(ಮಾ. ನಂ. ನಂಜಪ್ಪನವರಿಗೆ ಪ್ರತ್ಯುತ್ತರ)

ಸಪ್ಟಂಬರ ಸಂಚಿಕೆಯಲ್ಲಿ ಇದೇ ತಲೆಕಟ್ಟಿನ ಲೇಖನವನ್ನು ಬರೆದಿದ್ದೆವು. ಅದನ್ನು ನವ್ಹಂಬರ ಸಂಚಿಕೆಯಲ್ಲಿ ನಂಜಪ್ಪನವರು ವಿಮರ್ಶಿಸಿದ್ದಾರೆ. ವಿಮರ್ಶೆಯೆಂದರೆ ನ್ಯಾಯಾನ್ಯಾಯ ವಿಚಾರ. ನ್ಯಾಯವಾದುದನ್ನು ಒಪ್ಪಿ, ಅಪ್ಪಿ ಅನ್ಯಾಯವಾದುದನ್ನು ಅಲ್ಲಗಳೆದರೆ ಅದು ಸರಿಯಾದ ವಿಮರ್ಶೆ. ಇದಿಲ್ಲದೆ ಪಕ್ಷದ ಅಥವಾ ಜಯದ ಹಟದಿಂದ ನ್ಯಾಯಾನ್ಯಾಯಗಳೆರಡನ್ನೂ ಖಂಡಿಸುವುದು ವಿಮರ್ಶೆಯೆನಿಸಲಾರದು. ಅದೊಂದು ಸಾಧನೆ. ಇಂತಹ ಸಾಧನೆಯಲ್ಲಿ ಒಮ್ಮೊಮ್ಮೆ ಸಿದ್ಧಾಂತವೂ ತಲೆಕೆಳಗಾಗುವದುಂಟು. ನಂಜಪ್ಪನವರ ಕಣ್ಣೋಜಲ ಬರಹದಲ್ಲಿ ಆಗಿಯೂ ಇದೆ

ನಂಜಪ್ಪನವರು ಕಟುವಾಗಿ ಬರೆದುದಕ್ಕೆ ನಮಗೇನೂ ನೋವಿಲ್ಲ. ಆದರೆ ಅವರು ವ್ಯಕ್ತಿದ್ವೇಷಕ್ಕಾಗಿ ಸತ್ಯವನ್ನೂ ತತ್ವವನ್ನೂ ಸುಳ್ಳುಮಾಡಲು ಹೊರಟಿರುವುದು ಹೆಚ್ಚು ನೋವನ್ನುಂಟು ಮಾಡಿದೆ ನಂಜಪ್ಪನವರ ಆ ಹೊಲಬಿಲ್ಲದ ಬರಹಕ್ಕೆ ಜಿ. ಟಿ. ಅಕ್ಕುಲಯ್ಯ ಘಟ್ಟಿ ಎಂಬವರು, ನಿಷ್ಠುರವಿದ್ದರೂ ನ್ಯಾಯನಿಷ್ಠುರವಾದ ಸಮಂಜಸವಾದ ಉತ್ತರವನ್ನು ಕೊಟ್ಟಿದ್ದಾರೆ. ಇನ್ನೂ ಒಂದೆರಡು ವಿಷಯಗಳು ಅವಶ್ಯವಾಗಿ ಅಗತ್ಯವಾಗಿ ನಂಜಪ್ಪನವರಿಗೆ ತಿಳಿಸಬೇಕಾಗಿರುವದರಿಂದ ಪುನಃ ಬರೆಯೋಣವಾಗಿದೆ.

ಜಿ. ಟಿ. ಅಕ್ಕುಲಯ್ಯನವರು ಸಿದ್ಧಾಂತ ಶಿಖಾಮಣಿಯ ಪ್ರಶ್ನೆಗೆ ಮಾರುತ್ತರವೀಯುವಾಗ ಕೊಂಚ ಅಧರ್ಾಂಗೀಕಾರವನ್ನು ತೋರಿದ್ದಾರೆ. ಅದೂ ನ್ಯಾಯವಾದುದಲ್ಲ. ಕಾರಣವೇನೆಂದರೆ ಸಿದ್ಧಾಂತ ಶಿಖಾಮಣಿಯ ಲಿಂಗಧಾರಣಸ್ಥಲದಲ್ಲಿ ಹೊಸದಾಗಿ ಲಿಂಗವನ್ನು ಆಯ್ದು ಸಂಸ್ಕ

ರಿಸುವ ವಿಷಯವು ಇದ್ದ ಮಾತ್ರಕ್ಕೇನೆ ವಾದಿಗಳು ಪಡುವ ಆ ಅಭಿಪ್ರಾಯವು ಎಂದೂ ಉಂಟಾಗುವದಿಲ್ಲ. ಏಕೆಂದರೆ ಸಂಸ್ಕೃತಗ್ರಂಥಗಳಲ್ಲಿ ಪ್ರಕರಣಸ್ಥ ವಿಷಯಗಳನ್ನು ಏನಿದ್ದರೂ ಚಾಚೂ ಬಿಡದೆ ನಿಸ್ತರಿಸುವುದು ಶಾಸ್ತ್ರೀಯ ಪದ್ಧತಿಯಾಗಿದೆ. ಆ ಪದ್ಧತಿಯನ್ನನುಸರಿಸಿ ಲಿಂಗಧಾರಣ ಪ್ರಕರಣದಲ್ಲಿ ಲಿಂಗಕ್ಕೆ ಸಂಬಂಧ ಪಟ್ಟ ಎಲ್ಲ ವಿಷಯಗಳನ್ನೂ ಅಲ್ಲಿಯೇ ಹೇಳಲಾಗಿದೆ. ಭವಿಗಳಿಗೆ ದೀಕ್ಷೆ ಮಾಡುವಾಗ್ಗೆ ಆಗಲಿ ಹೊಸ ಲಿಂಗವನ್ನು ತಕ್ಕೊಳ್ಳಬಹುದು. ವೀರಶೈವರ ಮಕ್ಕಳಿಗೆ ದೀಕ್ಷೆಯಿಲ್ಲದೆ ಲಿಂಗಧಾರಣವಾಗಿದ್ದರೆ ಎಂಟನೆಯ ವರ್ಷದಲ್ಲಿ ದೀಕ್ಷೆ ಮಾಡುವಾಗ್ಗೆ ಬೇರೆ ಲಿಂಗವನ್ನು ತೆಗೆದುಕೊಳ್ಳುವ ಅವಸರವಿಲ್ಲ. ಲಿಂಗವು ಪಂಚಸೂತ್ರಾತ್ಮಕವಾಗಿದ್ದರೆ ಅದೇ ಲಿಂಗಕ್ಕೇನೆ ಸಕ್ರಮ ಸಂಸ್ಕಾರಗಳನ್ನು ಮರಳಿ ಮಾಡಬಹುದು. ಮರಳಿ ಸಂಸ್ಕಾರದ ಅವಶ್ಯಕತೆಯುಳ್ಳದಿದ್ದರೂ ಶಿಶುದಶೆಯಲ್ಲಿ ಲಿಂಗಧಾರಣ ಮಾಡುವಾಗ್ಗೆ ಮಾಡಿದವರು ಸರಿಯಾಗಿ ಸಂಸ್ಕಾರ ಮಾಡಿರುವರೊ ಇಲ್ಲೊ ಎಂಬ ಸಂಶಯವು ಬರಕೂಡದೆಂದು ಮಾಡುವ ರೂಢಿ ಬಂದಿದೆ. ಜನ್ಮ ಲಿಂಗಧಾರಣವನ್ನು ಮಾಡಿದವರೇ ದೀಕ್ಷೆಯನ್ನು ಮಾಡಲು ಬಂದಿದ್ದರೆ ಪುನಃ ಸಂಸ್ಕಾರದ ಅವಶ್ಯಕತೆಯಿಲ್ಲ.' ಇದು ಸಿದ್ಧಾಂತ ಶಿಖಾಮಣಿ ಲಿಂಗಧಾರಣ ಸ್ಥಲದ ನಿಜವಾದ ಹೃದಯ. ಇಲ್ಲದಿದ್ದರೆ ವಾದಿಗಳು ಹೇಳುವಂತೆಯೆ ಅರ್ಥಮಾಡುವದಾದರೆ ಭಸ್ಮಧಾರಣ ಸ್ಥಲದಲ್ಲಿಯೂ ಸಹ ಉಕ್ತವಾದ-

"ಯಥಾ ಶಾಸ್ತ್ರೋಕ್ತವಿಧಿನಾ ಗೃಹೀತ್ವಾ ಗೋಮಯಂ ನವಂ ॥
ಸದ್ಯೋನ ವಾಮದೇವೇನ ಕುರ್ಯಾತ್ಪಿಂಡಮನುತ್ತಮಂ ।
ಶೋಷಯೇತ್ಪುರುಷೇಣೈವ ದಹೇದ್ಘೋರಾಚ್ಛಿವಾಗ್ನಿನಾ ॥

ಈ ಭಸ್ಮ ಮಾಡುವ ವಿಧಾನವನ್ನು ಸಹ ದೀಕ್ಷಾಕಾಲದಲ್ಲಿಯೆ ಪ್ರಾರಂಭಿಸಬೇಕಾಯಿತು? ದೀಕ್ಷೆಯ ಮಂಟಪದಲ್ಲಿ ಗೋವುಗಳನ್ನು ತಂದು ಗೋಮಯ ತಕ್ಕೊಂಡು ಪಿಂಡ ಮಾಡಿ, ಆಗಲೆ ಒಣಗಿಸಿ, ಆಗಲೆ ಸುಟ್ಟು, ಆಗಲೆ ಶೋಧಿಸಿ, ಆಗಲೆ ಘಟ್ಟಿಮಾಡಿ ಶುದ್ಧಮಾಡಿ ಶಿಷ್ಯನಿಗೆ ಧರಿಸಬೇಕೆಂದು ಅರ್ಥ ಮಾಡುವದಾದರೆ ಅದು ಎಷ್ಟು ಅಸಮಂಜಸವೂ ಅಸಾಧ್ಯವೂ ಅಪಹಾಸ್ಯಕರವೂ ಆಗುವದೋ ಇದೂ ಅಷ್ಟೆ. ಪ್ರಕರಣ ಪ್ರಸಕ್ತವಾಗಿರುವದರಿಂದ ಭಸ್ಮ ನಿರ್ಮಾಣ ವಿಧಾನವನ್ನು ಅಲ್ಲಿಯೇ ಹೇಳಿರುವಂತೆ, ಲಿಂಗಧಾರಣ ಸ್ಥಲದಲ್ಲಿಯೇ ಹೊಸ ಲಿಂಗವನ್ನು ತಕ್ಕೊಂಬುವ

ವಿಚಾರವೂ ಅಲ್ಲಿಯೇ ಉಕ್ತವಾಗಿದ್ದೆ. ಇಷ್ಟು ಮಾತ್ರಕ್ಕೇನೆ ದೀಕ್ಷೆಯನ್ನು ಜನ್ಮದಿನದಲ್ಲಿಯೆ ಮಾಡಬೇಕೆಂದು ಎಂದೂ ಅರ್ಥವಾಗುವದಿಲ್ಲ. ಮೊದಲು ಬರೀ ಲಿಂಗಧಾರಿಗಳಾದ ವೀರಶೈವ ಮಕ್ಕಳಿಗೆ ಎಂಟು ವರ್ಷದ ಮೇಲೆ ದೀಕ್ಷೆಯಾಗುವಾಗ ಪುನಃ ಬೇರೆ ಲಿಂಗವನ್ನು ತರುವದಾಗಬೇಕೆಂದು ಸಾಧಿಸಿದಂತಾಗುವದಿಲ್ಲ. ಅಲ್ಲದೆ ಸ್ಥಲಕಟ್ಟಿನ ಮೇಲೆ ಹೊಡದಾಡುತ್ತ ನಾವು ಜನ್ಮ ಶಿಶುಗಳಿಗೇನೆ ದೀಕ್ಷೆ ಮಾಡುವದಾದರೆ ದೀಕ್ಷೆಯಾಗಿ ಲಿಂಗಧಾರಣವಾಗಿ ಅನಂತರ ಭಸ್ಮ-ರುದ್ರಾಕ್ಷಿಗಳನ್ನು ಧರಿಸಬೇಕಾದೀತು ? ಈ ವಿಚಾರದಲ್ಲಿ ವಾದಿಗಳು ಇನ್ನೂ ಆಳವಾಗಿ ನಿಷ್ಪಕ್ಷಪಾತದೃಷ್ಟಿಯಿಂದ ದಿಟ್ಟಿಸಿನೊಡಲಿ.

ಎರಡನೆಯದಾಗಿ "ಗರ್ಭಾಷ್ಟಮ" ಶ್ಲೋಕಕ್ಕೆ ವರ್ಷವೆಂದು ಅರ್ಥ ಮಾಡುವದಾದರೆ ಆರನೆಯ ತಿಂಗಳಲ್ಲಿ ಶಿಶುವು ಗರ್ಭದಲ್ಲಿದ್ದಾಗಲೇ ಲಿಂಗ ದೀಕ್ಷೆಯನ್ನೀಯುವುದು ತಪ್ಪೆನ್ನಬೇಕಾಗುವದು. ತಪ್ಪೆನ್ನುವದಾದರೆ ಆ ಮಗುವನ್ನು ಭವಿಯೆಂದೆ ? ಭಕ್ತನೆಂದೆ ? ಏನೆಂದು ಭಾವಿಸಬೇಕು ? ಎಂದು ನಂಜಪ್ಪನವರ ಕೇಳಿಕೆ.

## ಇದಕ್ಕೆ ಹೇಳಿಕೆ

'ಗರ್ಭಾಷ್ಟಮ' ಶ್ಲೋಕಕ್ಕೆ ವರ್ಷವೆಂದರ್ಥಮಾಡದಿದ್ದರೆ ಇನ್ನೇನೆಂದು ಅರ್ಥವಾಗುತ್ತವೆ ಎಂದು ಜಿ. ಟಿ ಅಕ್ಕಲಯ್ಯನವರು ಕೇಳಿದಂತೆ ನಂಜಪ್ಪನವರು ಸಂಪೂರ್ಣ ಶ್ಲೋಕಾರ್ಥವನ್ನು ಪ್ರಕಟಿಸಿ ತೀರಬೇಕು. ತಮಗೆ ತಿಳಿಯದಿದ್ದರೆ ಸಂಸ್ಕೃತ ಬಲ್ಲಿದರನ್ನಾದರೂ ಕೇಳಿ ತಿಳಿದುಕೊಳ್ಳಬೇಕು. ಅಲ್ಲದೆ ಎಂಟನೆಯ ತಿಂಗಳಿನ ಗರ್ಭಕ್ಕೆ ದೀಕ್ಷೆ ಮಾಡಬೇಕೆಂದು ನಂಜಪ್ಪನವರ ಬಲವಾದ ವಾದ. ಗರ್ಭದ ಒಳಗಿರುವ ಆ ಶಿಶುವಿಗೆ ತ್ರಿವಿಧದೀಕ್ಷೆಯನ್ನು ಹೇಗೆ ಮಾಡಬೇಕೆಂದು ವಿಧಾನವನ್ನು ವಿಸ್ತಾರವಾಗಿ ವಿಶದವಾಗುವಂತೆ ಬರೆದು ಬೇಗ ಪ್ರಕಟಿಸಲು ಮುಂದೆಬರುವಿರಾ ?

ಗರ್ಭಸ್ಥ ಶಿಶುವಿಗಾಗಲಿ, ಜನನ ಶಿಶುವಿಗಾಗಲಿ ದೀಕ್ಷೆಯನ್ನು ನಾವು ಒಪ್ಪದಿದ್ದರೂ ಲಿಂಗಧಾರಣವನ್ನು ಒಪ್ಪುತ್ತೇವೆ. ಸಾಧಾರಣವಾಗಿ ಲಿಂಗಧಾರಿಯಾದ ಮಗುವು ಭವಿಯಲ್ಲ; ಭಕ್ತನೂ ಅಲ್ಲ; ಶುದ್ಧ ಶೈವ. ಈ ವಿಷಯದಲ್ಲಿ ಶ್ರೀಚನ್ನಮಲ್ಲಿಕಾರ್ಜುನಪ್ಪನವರು ಬರೆದ ಸದ್ಧರ್ಮ

ಗ್ರಂಥಮಾಲಾ ೧೯ನೆಯ "ವೀರಶೈವ" ಎಂಬ ಪುಸ್ತಕದ ೨೨ನೆಯ 'ಶುದ್ಧಶೈವ' ದ ಪ್ರಕರಣವನ್ನು ಸಾದ್ಯಂತವಾಗಿ ಓದಬೇಕು.

ಮೂರನೆಯದಾಗಿ ವಾದಿಗಳು ರೇವಣಸಿದ್ಧರ ಕಾಲವನ್ನು 'ಶಿವಾನುಭವ' ವಾಚಕರಿಗಾಗಿಯೂ ಕೇಳುವುದು ಆಶ್ಚರ್ಯಜನಕವಾಗಿದೆ. ಶ್ರೀಮಾನ್ ರಾ ಬ. ಹಳಕಟ್ಟಿಯವರು ಅದೇ ಶಿವಾನುಭವದಲ್ಲಿ ಈ ವಿಷಯವಾಗಿ ಬರೆದ ಲೇಖವನ್ನು ನೀವು ಓದಿಲ್ಲವೊ? ಹಾಗಿದ್ದರೆ ಮರಳಿ ಓದಿನೋಡಿ. ಅದೇ ನಮ್ಮ ಅಭಿಪ್ರಾಯ. ಅದೇ ನಾವು ಹೇಳುವ ಕಾಲ. ಸತ್ಯವಾದ ಐತಿಹ್ಯವನ್ನು ಸುಳ್ಳುಮಾಡುವುದು ನಮ್ಮ ನಿಮ್ಮಂತಹರಿಂದ ಸಾಧ್ಯವೆ?

ನಾಲ್ಕನೆಯದಾಗಿ —

ನಾನು ಆರಂಭ ಮಾಡುವೆನಯ್ಯಾ ಗುರುಪೂಜೆಗೆಂದು
ನಾನು ಬೇಹಾರವ ಮಾಡುವೆನಯ್ಯಾ ಜಂಗಮ ದಾಸೋಹಕ್ಕೆಂದು
ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ
ನೀಕೊಡುವೆ ಎಂಬುದ ನಾಬಲ್ಲೆನು.

ಎಂಬೀ ಭಾವನೆಯಿಂದ ಕೈಗೊಳ್ಳುವ ಸತ್ಯಶುದ್ಧವಾದ ಯಾವ ಕಾಯಕವನ್ನೂ ಶರಣಗಣಂಗಳು ನಿರಾಕರಿಸಿಲ್ಲ. ನಿಕೃಷ್ಟವಾಗಿ ಕಂಡಿಲ್ಲ ಎಂದು ನಂಜಪ್ಪನವರು ಹೇಳುತ್ತಾರೆ ಮತ್ತು ಮೇಲಾಗಿ ಇಂದಿನ ಸ್ಥಿತಿಯಲ್ಲಿ ಉತ್ತಮವಾದ ಪ್ರಸಾದ ವಿಕ್ರಯಮಂದಿರಗಳು ಎಷ್ಟು ಹೆಚ್ಚಿವರೆ ಈ ಕಾಯಕವು ಎಷ್ಟು ಬೆಳೆದರೆ ಅಷ್ಟೂ ಸಮಾಜಕ್ಕೆ ಒಳ್ಳೆಯದು ಎಂದು ಬರೆಯುತ್ತಾರೆ ನಿಜ ಆದರೆ,

"ಭವವಿರಹಿತ ಭಕ್ತನಾದ ಬಳಿಕ, ಭಕ್ತಿ ಭಾಜನದಲ್ಲಿ
ಮಾಡಿ ಭವಿಗಿಕ್ಕಲಾಗದಯ್ಯಾ.
ಯುಕ್ತಿಶೂನ್ಯರಿಗೆ ಮುಂದೆ ಪ್ರಸಾದ ದೂರ; ಮುಕ್ತಿಯಿಲ್ಲ.
ಮುಂದೆ ನಾಯಿ ಬಸಿರಲ್ಲಿ ಬಪ್ಪುದು ತಪ್ಪದು.
ಪೃಥ್ವಿಯೊಳಗೆ ಕೂಡಲಸಂಗಮದೇವ,
ನಿಮ್ಮ ಶರಣರಿಗಲ್ಲದೆ ಅನಾಚಾರಕ್ಕೆಲ್ಲಿಯದೋ?"
"......ಕೂಡಲಸಂಗಮದೇವ, ನಿಮ್ಮ ವಚನ ವಿಂತೆಂದುದು,
ಭವಿನೋಡಿದ ಓಗರ ಲಿಂಗಾರ್ಪಿತವಾಗದೆಂದು."

ಅಣ್ಣನ ಈ ಕಾಯಕದ ಕಟ್ಟು ಮತದ ರೀತಿ ನೀತಿ ಎತ್ತ ಹೋಗ ಬೇಕು ? ಇತರರ ಉದ್ಯೋಗಕ್ಕೂ ವೀರಶೈವರ ಕಾಯಕಕ್ಕೂ ಬಹಳ ವ್ಯತ್ಯಾಸವಿದೆ. ಶರಣಂ ಒಂದು ತತ್ವವನ್ನು ಬಿಗಿ ಹಿಡಿದು, ಇನ್ನೊಂದು ತತ್ವವನ್ನು ಹರಿ ಬಿಟ್ಟರೆ ಅದು ಶರಣ ಮಾರ್ಗಕ್ಕೆ ಸಲ್ಲತಕ್ಕದ್ದಲ್ಲ. ನೂಲಿಯ ಚಂದಯ್ಯಗಳು, – 'ಅರ್ಥಕ್ಕೆ ಮಾಡಬಲ್ಲ ಕೃತ್ಯವಂತರೆಲ್ಲರು ಭಕ್ತರಪ್ಪರೆ? ಅದು ಚಂದೇಶ್ವರ ಲಿಂಗಕ್ಕೆ ಮುಟ್ಟದ ಮಾಟ ಎಂದು ಹೇಳುವಂತೆ ಅದು ಲಿಂಗತತ್ವಕ್ಕೆ ಮುಟ್ಟದ ಮಾಟ ಎಂದು ಆ ಶರಣರ ಜಾಡಿನಲ್ಲಿ ಹೇಳದರೆ ಸಮಾಜದ ಮುಂದೆ ಯಾರು ನಾಚಿ ತಲೆತಗ್ಗಿಸಬೇಕಾಗು ವದೆಂಬುದನ್ನು ನೀವೇ ಯೋಚಿಸಿ ಯೋಚಿಸಿ ನೋಡಿ. ಅಲ್ಲದೆ ಸತ್ಯ ಶುದ್ಧವಲ್ಲದ ಕಾಯಕವನ್ನು ಶರಣರೂ ಹಳದಿರುವದರಿಂದ ನಿಮ್ಮ ಅರಿ ವಿಲ್ಲದ ಬಿರುನುಡಿಯು ಶರಣರಿಗೂ ತಾಕಬೇಕಾದೀತು? ಇಂತಹ ವಿಚಾರ ದಲ್ಲಿ ನಾಲಿಗೆಯನ್ನೂ ಲೇಖನಿಯನ್ನೂ ಬಿಗಿಹಿಡಿಯುವುದು ಮೇಲೆಂದು ತಿಳಿದುಕೊಂಡರೆ ಲೇಸಾದೀತು.

ಒಟ್ಟಿನಲ್ಲಿ ನಂಜಪ್ಪನವರೆ, ನೀವು ನಮ್ಮ ಬರಹಗಳನ್ನು ಆಳವಾಗಿ ಆಲೋಚಿಸಿ ಬದ್ಧ ಮುಷ್ಠಿಯಿಂದ ಶುದ್ಧ ಬರಹಗಳನ್ನು ಬರೆದು ಉತ್ತ ರಿಸುವದಾದರೆ ಪ್ರತಿವಾದಿಗಳಾಗಿ ಪ್ರತ್ಯುತ್ತರಗಳನ್ನು ಕೊಡಬಲ್ಲೆವು ಇಲ್ಲವಾದರೆ—

" ಒಂದಕೆಯ್ಕಂಬತ್ತ ನುಡಿದು, ಕಣ್ಣು ಕೆಂಚನೆಮಾಡಿ
ಗಂಡುಗೆದರಿ, ಮುಡುಹಿಕ್ಕಿ ಕೆಲವರ ಕಂಡಂಜುವೆ;
ಓಸರಿಸುವೆ. ಓಡಿದೆನೆಂಬ ಭಂಗವಾದಡಾಗಲಿ
ನಮ್ಮ ಕೂಡಲ ಸಂಗನ ಶರಣರನುಭಾವವಿಲ್ಲದವರ
ಹೊಲಮೋರೆಯ ಹೊದ್ದೆ. ಹೊಲನ ಬಿಟ್ಟೋಡುವೆ "

ಎಂದು ಅಂಣನ ವಾಣಿಯಲ್ಲಿ ದನಿಗೂಡಿಸಿ ಹಾಡಿ, ಹೇಳ ಇಲ್ಲಿ ಗೇನೆ ನಿಲ್ಲಿಸಿ ಬಿಡುವೆವು.

# ಜಂಗಾಲ್

(ಲೇಖಾಂಕ ೨)

(ಲೇ:— ಶ್ರೀ. ಜ. ಷ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು,
ಜಗದ್ಗುರು ಶ್ರೀನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಮುಕ್ಕಾಂ ಪುಂಗನೂರು)

ಈ ವಿಷಯದಲ್ಲಿ ಇದೇ ಶಿವಾನುಭವ ಇದೇ ಸಂಪುಟ ಸಂಚಿಕೆ ಎರಡರಲ್ಲಿ ಒಂದು ಲೇಖವನ್ನು ಬರೆಯಲಾಗಿದೆ. ಅದು ಹೆಚ್ಚು ತಮಿಳು ನಾಡಿನ ಜಂಗಾಲ್ ಜನಾಂಗಕ್ಕೆ ಸಲ್ಲುತ್ತದೆ. ಇದರಂತೆ ತೆಲುಗು ನಾಡಿನಲ್ಲಿಯೂ ಜಂಗಾಲ್ ಜನಾಂಗವಿದೆ ಇವರ ಒಳಭೇದಗಳೂ ಉದ್ಯೋಗಗಳೂ ತಮಿಳು ನಾಡಿನವರಿಗಿಂತ ಬೇರೆಯಾಗಿವೆ. ಇವರ ಉತ್ಪತ್ತಿಯನ್ನು ಕುರಿತು ಈ ನಾಡಿನಲ್ಲಿ ಕೆಲವು ಅಂಶಗಳು ದೊರೆಯುತ್ತವೆ. ಆಂಧ್ರ ಭಾಷೆಯಲ್ಲಿ "ಶ್ರೀವೀರಶೈವ ಬ್ರಾಹ್ಮಣ ಕುಲದೀಪಿಕ" (ಭಾಗ—೧) ಎಂಬ ಗ್ರಂಥವನ್ನು ಕೃಷ್ಣಾ ಜಿಲ್ಲಾ ಏಲೂರುಕೊಂಡ ಗುಂಟೂರಿ ನಾಗಭೂಷಣ ಎಂಬವರು ಬರೆದು ಕ್ರಿ. ೧೯೧೮ ರಲ್ಲಿ ಅಚ್ಚು ಹಾಕಿಸಿದ್ದಾರೆ. ಈ ಪ್ರತಿಯು ಘಟ್ಟದ ಅಕ್ಕುಲಪ್ಪಯ್ಯನವರಲ್ಲಿ ಇರುತ್ತದೆ. ಇದರಲ್ಲಿ ತೆಲುಗು ಜಂಗಾಲರ ಉತ್ಪತ್ತಿಯನ್ನು ಕುರಿತು ಹೀಗೆ ಬರೆಯುತ್ತಾನೆ.

ಬಿಜ್ಜಳನಿಗೆ 'ಚಿತ್ರಕನ್ಯ' ಎಂಬ ಒಬ್ಬ ಮಗಳಿದ್ದಳು. ಅವಳು ವಯಸ್ಕಳಾಗಿ ಅರಮನೆಯ ಕುದುರೆ ಕಾಯುವವನಿಗೆ ಮನಸೋತು ಅನ್ನು ವಿವಾಹವಿಲ್ಲದೆ ಗರ್ಭಿಣಿಯಾಗುವಳು. ಇದರಿಂದ ಬಿಜ್ಜಳ ಭೂಪನು ಭೀತನಾಗಿ ಅವಳ ಎರಡೂ ಕೈಗಳನ್ನು ಕಡಿಸುವನು. ಆಗ ಆ ಚಿತ್ರಕನ್ನೆಯು ಆ ವೇದನೆಯಿಂದ 'ಬಸವಾ' ಎಂದು ಬಸವನ ನೆನೆಯುವಳು. ಅವಳ ಧ್ಯಾನಕ್ಕೆ ಬಸವೇಶ್ವರನು ಒಲಿದು ಅಲ್ಲಿಗೆ ಬರುವನು. ಅವಳ ಮತ್ತು ಮಿಂಡಜಂಗಮರ ಕೋರಿಕೆಯಂತೆ ಅವಳ ಕೈಗಳನ್ನು ಮೊದಲಿದ್ದ ರೀತಿಯಲ್ಲಿ ಮಾಡುವನು. ಅನಂತರ ಆ ಅರಸುಗುವರಿಯ ಅಸದೃಶವಾದ ಸುಂದರ ರೂಪಕ್ಕೆ ಮಿಂಡಜಂಗಮರು ಮೋಹಿಸಿ ಮನಸೋಲುವರು. ಇದನರಿತು ಬಸವಣ್ಣನು ಊರ್ಧ್ವ

ರೇತಯ್ಯನಿಂದ ಆ ಹೆಣ್ಣು ಮಗಳಿಗೆ ದೀಕ್ಷೆಯು ಮಾಡಿಸಿ, ಬಸವಿಯೆಂಬ ಹೆಸರನ್ನಿಟ್ಟು ಆ ಜಂಗಮರಿಗೆ ಅವಳನ್ನು ಅವರ ಮನದಭಿಲಾಷೆಗಾಗಿ ಒಪ್ಪಿಸುವನು. ದೀಕ್ಷಿತಳಾದ ಆ ಬಸವಿಯ ಗರ್ಭೋತ್ಪನ್ನರೇ 'ಜಂಗಾಲ್' ರಾದರೆಂದೂ ಈ ವಿಷಯವು ಅತ್ತಲೂರಿ ಪಾಪಯ್ಯನವರಿಂದ ರಚಿತವಾದ 'ಚನ್ನಬಸವಪುರಾಣ' ದಲ್ಲಿದೆಯೆಂದೂ ಉಲ್ಲಿಖಿತವಾಗಿದೆ. ಆಂಧ್ರ ಸಾಹಿತ್ಯದಲ್ಲಿ ಪಾಪಯಾಮಾತ್ಯಪ್ರಣೀತ 'ಚನ್ನಬಸವಪುರಾಣ' ಇರುವುದೂ ನಿಜ. ಅದನ್ನೂ ನೋಡಿದ್ದೇವೆ. ಅದರ ಕೊನೆಯಲ್ಲಿ ಕವಿಯು—ಶ್ರೀಮಚ್ಚನ್ನಮಲ್ಲಿಕಾರ್ಜುನ ಕರುಣಾಕಟಾಕ್ಷಲಬ್ಧ ಕವಿತಾಮಾಧುರೀ ಧುರೀಣ-ಕೌಶಿಕಗೋತ್ರಪವಿತ್ರ ಸುಕವಿಜನಸ್ತುತ್ಯ-ಎಂಬುದಾಗಿ ತನ್ನನ್ನು ಈ ವಿಶೇಷಣಗಳಿಂದ ಹೇಳಿಕೊಂಡಿದ್ದಾನೆ. ಈತನ ಕಾಲವಾವುದು ನಮಗೆ ತಿಳಿಯದು. ಈತನು ರಚಿಸಿದ ಮೇಲ್ಕಂಡ 'ಚನ್ನಬಸವಪುರಾಣ' ದಲ್ಲಿ ಚಿತ್ರಕನ್ನೆಯ ಕಥೆಯು ಕಥಿತವಾಗಿದೆ.

ಆ ಮೇಲೆ ಅದೆ ವೀರಶೈವ ಬ್ರಾಹ್ಮಣ ಕುಲದೀಪಿಕಾಕಾರನು ಜಂಗಾಲ್ ಜನಾಂಗದ ವೃತ್ತಿ-ನೃತ್ತಿಗತಭೇದಗಳನ್ನು ಹೀಗೆ ಬರೆಯುತ್ತಾನೆ. ಅರವ ಜಂಗಾಲ್‌ರಲ್ಲಿ ಇವಿಲ್ಲ.

೧ ಶಂಖು— ಘಂಟೆಗಳನ್ನು ಹಿಡಿಯುವುದು, ಸ್ಥಲದವರಾಗಿ ಸಮಾಧಿಕ್ರಿಯೆಗಳನ್ನು ಮಾಡುವುದು, ವಿಧವೆಯರಾದ ಹೆಣ್ಣುಮಕ್ಕಳ ಮಂಗಳ ಸೂತ್ರಗಳನ್ನು ಹರಿದು ಬಳೆಗಳನ್ನು ಒಡೆಯುವದು, ನಿಧನರಾದವರ ಸಮಾಚಾರವನ್ನು ಅವರ ಬಂಧುಬಾಂಧವರಿಗೆ ಪತ್ರಮುಖನಾಗಿ ಒಯ್ದು ತಿಳಿಸುವದು, ಅರಿವೆ ಹೊಲಿಯುವದು. ಡೊಳ್ಳು, ಮದ್ದಳೆ ಸಮ್ಮೇಳ, ಕರಡಿ, ಮುಂತಾದ ಚರ್ಮವಾದ್ಯಗಳನ್ನು ಬಾರಿಸುವದು, ಕಹಳೆ ಊದುವುದು. ಪಂಜು ಹಿಡಿಯುವದು, ಮೊದಲಾದ ವೃತ್ತಿಗಳಿರುವವು. ಇವು ಅಖಂಡವಾಗಿ ನಡೆದು ಬರುವದಕ್ಕೆ ಇವರಿಗೆ ಮಾನ್ಯಗಳೂ ಇರುವವು. ಹೈದರಾಬಾದ ಪ್ರಾಂತದಲ್ಲಿ ಶಂಖು, ಘಂಟೆ ಹಿಡಿಯುವವರಿರುವರು. ಆದರೆ ಅವರು ಜಂಗಾಲರಲ್ಲ. ಶುದ್ಧವೀರಶೈವರು. ಅವರಿಗೆ ವೀರಶೈವರಂತೆ ಅಷ್ಟಾವರಣ-ಪಂಚಾಚಾರಗಳುಂಟು.

ಇನ್ನು ಜಂಗಾಲರ ಭೇದಗಳು. ಚಾಪೆಜಂಗಾಲ್, ವೇಷಜಂಗಾಲ್ ವೆರ್ರಿ (ಹುಚ್ಚು) ಜಂಗಾಲ್, ಬುಡುಬುಡಿಜಂಗಾಲ್, ಬೊಗ್ರಿಜಂಗಾಲ್, ಮಂದುಲ (ವೈದ್ಯ) ಜಂಗಾಲ್, ಮಾಯಿಜಂಗಾಲ್, ವಿಭೂತಿಜಂಗಾಲ್

ವಿಭುದಜಂಗಾಲ್, ಉದ್ಯೋಗಜಂಗಾಲ್, ಊರಜಂಗಾಲ್, ಮಾಲಜಂಗಾಲ್, ಮಹಿಮಜಂಗಾಲ್, ಮುಂತಾದ ಶಾಖೆಯುವರಿರುವರು. ಇವರಿಗೆ ಅಷ್ಟಾವರಣ ಪಂಚಾಚಾರವಿಲ್ಲ. ಶೀಲವಿಲ್ಲ. ಆದ್ದರಿಂದ ಇವರನ್ನು ವೀರಶೈವರು ಬಳಕೆಯಲ್ಲಿ ತೆಗೆದುಕೊಂಡಿಲ್ಲ ಎಂದು ಮುಂತಾಗಿ ಬರೆದಿರುವರು.

ಇದನ್ನು ಐತಿಹಾಸಿಕವಾಗಿ ನಂಬಲು ಸಾಧ್ಯವೆ? ವೀರಶೈವರಲ್ಲಿ ದೀಕ್ಷೆಯಾದ ನಂತರ ಜಾತಿಭೇದವಾಗಲಿ, ಪಂಕ್ತಿಭೇದವಾಗಲಿ, ಇಲ್ಲೆಂಬುದು ಜನಜನಿತವಿದ್ದಾಗ್ಯೂ ಜಂಗಾಲ್‌ಜನಾಂಗವು ಬಳಕೆಯಿಲ್ಲದೆ ಬೇರೆಯಾಗಿ ನಿಂತುದೇಕೆ? ಇತ್ಯಾದಿ ಪ್ರಶ್ನೆಗಳು ಎದುರಿಸುತ್ತವೆ. ಆದರೆ ಇದರಲ್ಲಿ ಹುರುಳಾವುದೋ, ಹುರುಡಾವುದೋ! ಶೋಧಕರು ಸಂಶೋಧಿಸಬೇಕು.

## ತಂಬಳ್

ತಂಬಳ್ ಎಂಬುದು ಶುದ್ಧ ತೆಲುಗು. ಅರ್ಚಕ ಅಥವಾ ಪೂಜಾರಿ ಎಂಬುದು ಅದರರ್ಥ. ತೆಲುಗುನಾಡಿನಲ್ಲಿ ಈ ತಂಬಳ್ ಪಂಗಡವು ವಿಶೇಷವಾಗಿದೆ ಇವರಲ್ಲಿ ವೀರಶೈವರು ಮತ್ತು ಭವಿಗಳೂ ಸಹ ಇರುವರು. ಭವಿಗಳು ಸಣ್ಣ ಸಣ್ಣ (ಚಿಲ್ಲರೆ) ದೇವರುಗಳನ್ನು ಪೂಜಿಸುತ್ತಾರೆ. ವೀರಶೈವ ತಂಬಳ್‌ರು ದೊಡ್ಡ ದೊಡ್ಡ ದೇವರುಗಳನ್ನು ಅರ್ಚಿಸುತ್ತಾರೆ.

ಮಲ್ಲೈಕೊಂಡ, ರಾಯಚೋಟಿ, ಚೇಳೂರು ಮುಂತಾದ ಗ್ರಾಮಗಳಲ್ಲಿ ವೀರಶೈವ ಪಂಗಡದ ತಂಬಳ್‌ರು ಇರುವರೆಂದು ತಿಳಿಯುತ್ತದೆ. ಇವರು ವೀರಶೈವ ಪಂಗಡದವರಾದರೂ ವೀರಶೈವರಲ್ಲಿ ಬಳಕೆಯಿಲ್ಲ. ಭವಿಪಂಗಡದ ತಂಬಳ್‌ರು ಅಲ್ಲಲ್ಲಿ ವ್ಯಾಪಿಸಿರುವರು. ಇವರದು ಇದರಿಂದಲೇ ಜೀವನ. ಈ ಭವಿತಂಬಳ್‌ರಲ್ಲಿ ಜನಿವಾರವುಳ್ಳವರು, ಇಲ್ಲದವರು ಎಂಬುದಾಗಿ ಎರಡು ಪಂಗಡಗಳಿವೆ. ಇವರಲ್ಲಿ ಪರಸ್ಪರ ಊಟ ಉಪಚಾರಗಳಿವೆ. ಕೊಡತಕ್ಕೊಳ್ಳುವದಿಲ್ಲ.

---

# ಪಾದೋದಕ.

(ಲೇಖಕ:— ಎಂ. ಸಿದ್ಧವೀರಯ್ಯ ವ್ಯವಸ್ಥಾಪಕ ಶಿವಾನುಭವ ಸಂಘ
ಶಾಂತಿವರ್ಧಕ ಶಾಲಾ ಸಂಗಮ ಜಿ. ಬೀದರ್)

ಪಾದೋದಕದ ಬಗ್ಗೆ ಶಿವಾನುಭವದ ಮೇ ತಿಂಗಳ ಸಂಚಿಕೆಯಿಂದ ಇಲ್ಲಿಯವರಿಗೂ ಖಂಡನಮಂಡನಾತ್ಮಕ ಲೇಖನಗಳು ಅಚ್ಚಾಗುತ್ತ ಬಂದಿವೆ. ಈ ವಾದವನ್ನು ಮೊದಲು ಶ್ರೀ ಮ. ಕ. ಮಾಮನಿಯವರು ಹೂಲಿ ಚರಮೂರ್ತಿಗಳಾದ ನೀಲಕಂಠಸ್ವಾಮಿಗಳ ಎರಡು ಪದ್ಯಗಳನ್ನು ಅಲ್ಲಗಳೆಯುತ್ತ ಪ್ರಾರಂಭಿಸಿದರು. ಅಲ್ಲಿಂದ ಅನಂತಾನಂತ ವಿದ್ವಾಂಸರೂ ಅನುಭಾವಿಗಳೂ ಆಗಮಗಳ ಮತ್ತು ಶರಣರ ಉಕ್ತಿಗಳೊಂದಿಗೆ ಪಾದೋದಕದ ಮಹತ್ವದ ಬಗ್ಗೆ ಮುಂದಿನ ಸಂಚಿಕೆಗಳಲ್ಲಿ ಪ್ರಸ್ತಾಪಿಸಿದರು. ಮಧ್ಯದಲ್ಲಿ ಶ್ರೀ ಕುಮಾರ ಶಿವಾನಂದ ಎಂಬ ಓರ್ವ ವ್ಯಕ್ತಿಯು ಹಾರಿ ಬಂದು ಈ ವಾದಜ್ವಾಲೆಯಲ್ಲಿ ಕೆಲವು ಶುಷ್ಕ ಸೌದೆಯನ್ನು ಎಸೆದು ಇದನ್ನು ಮತ್ತಷ್ಟು ಪ್ರಜ್ವಲಿಸುವಂತೆ ಮಾಡಿದರು.

ಇದನ್ನೆಲ್ಲಾ ಶಿವಾನುಭವ ಸಂಚಿಕೆಗಳಲ್ಲಿ ಓದಿ ನನ್ನ ಮನಸ್ಸಿನಲ್ಲಿ ಪಾದೋದಕದ ಬಗ್ಗೆ ಉಂಟಾದ ಕೆಲವು ವಿಚಾರಗಳನ್ನು ನಾನು ಈ ಸಂಚಿಕೆಯಲ್ಲಿ ಮಂಡಿಸಬೇಕೆಂದು ಸಾಹಸಪಟ್ಟಿದ್ದೇನೆ.

ಇಂದಿನ ವಾತಾವರಣದಲ್ಲಿ ಅಷ್ಟಾವರಣದ ಪೈಕಿ ಪಾದೋದಕಾವರಣದ ಬಗ್ಗೆ ಅನಂತ ಸ್ವಸಮಾಜ ತರುಣರೇ ಸಂಶಯಗ್ರಸ್ತರಾಗಿದ್ದಾರೆ. ಇಂಥಾ ಸಂಶಯವುಳ್ಳವರಲ್ಲಿ ಪಾದೋದಕ ಬಗ್ಗೆ ಭಕ್ತಿಯಿಲ್ಲದ ಅನಂತ ಜನರನ್ನೂ ಕಾಣುತ್ತಲಿದ್ದೇನೆ ಇಂಥಾ ಸಂಶಯಗಳಿಗೆ ಇಂದಿನ ಹಲವು ಶಾಸ್ತ್ರಿಗಳೂ ಮಠದ ಅಯ್ಯನವರೂ ಸಮರ್ಪಕ ಉತ್ತರ ಕೊಡದೆ ಹೋತಿದ್ದಾರೆ ಈ ಎಲ್ಲಾ ಅನರ್ಥಗಳಿಗೆ ಪಾದೋದಕದ ಬಗ್ಗೆ ನಿಜವಾದ ತತ್ವವನ್ನು ತಿಳಿಯದೇ ಇದ್ದುದೇ ಕಾರಣವೆಂದು ಧಾರಾಳವಾಗಿ ಹೇಳಬೇಕಾಗಿದೆ. ಯಾಕಂದರೆ ಪಾದೋದಕವೆಂದರೇನು? ಅಷ್ಟಾವರಣದಲ್ಲಿ ಇದರ ಮಹತ್ವವೇನಿದೆ? ಇದರಿಂದ ಮಾನವನ ಐಹಿಕ ಮತ್ತು

ಪಾರಮಾರ್ಥಿಕ ಜೀವನ ಸುಖ ಲಭಿಸುವ ಬಗೆ ಹೇಗೆ? ಎಂಬುದನ್ನು ತಿಳವಾಗಿ ತಿಳಿದರೆ ಈ ತರದ ಸಂಶಯ ಮತ್ತು ತಿರಸ್ಕಾರಗಳಿಗೆ ಅವಕಾಶ ದೊರೆಯಲಾರದೆಂಬುದೇ ನನ್ನ ಸರಳವಾದ ಅಭಿಪ್ರಾಯ.

ಶ್ರೀ ಕುಮಾರ ಶಿವಾನಂದರು ಪಾದೋದಕದ ಪವಿತ್ರತೆಯನ್ನು ಒಪ್ಪಿದ್ದಾರೆ. ಆದರೆ ಅವರು ಕಂಡ ಅದರ ಉಪಯೋಗದ ರೀತಿ ಮಾತ್ರ ಬೇರೆ ಇದ್ದಂತೆ ಕಾಣುತ್ತದೆ. "ಜಂಗಮನಿಗೂ ಭಕ್ತನಿಗೂ ಕೂಡಿಯೇ ಮುಕ್ತಿ ಬೇಕಾಗಿದೆ. ಲಿಂಗವು ಯಾವಾಗಲೂ ಮುಕ್ತನೇ ಸರಿ. ಅವನ ಸಹಾಯದಿಂದ ಇವರೀರ್ವರು ಮುಕ್ತಿ ಪಡೆಯಲಿಲ್ಲವೇ?" ಎಂದು ಪ್ರಶ್ನಿಸಿದ್ದಾರೆ. ಇವರ ದೃಷ್ಟಿಯಲ್ಲಿ ಗುರುಲಿಂಗಜಂಗಮ ಮತ್ತು ಭಕ್ತ ಈ ಚತುರ್ಮೂರ್ತಿಗಳು ಭಿನ್ನವಾಗಿ ತೋರುವಂತೆ ಕಾಣುತ್ತದೆ ಅಂತರಂಗದ ಅದ್ವೈತ ತತ್ವದ ಕಡೆ ಇವರು ಲಕ್ಷ ಕೊಟ್ಟಂತೆ ತೋರುವದಿಲ್ಲ. ದ್ವೈತ ಭಾವನೆಯಿಂದ ಶೋಧಿಸಿದರೆ ಪಾದೋದಕದ ಮೂಲವು ಎಂದೆಂದು ಸಿಗಲಾರದೆಂಬುದೇ ನನ್ನ ಅಭಿಪ್ರಾಯ. ಯಾಕಂದರೆ ಗುರುಲಿಂಗಜಂಗಮರಲ್ಲಿ ತಿಲಾಂಶವಾದರೂ ಭೇದವಿಲ್ಲ. ಏಕಮೂರ್ತಿತ್ರಯೋಭಾಗಂ ಗುರೋರ್ ಲಿಂಗಾಂತು ಜಂಗಮಃ ಎಂಬ ಆಗಮೋಕ್ತಿಯಂತೆ ಒಂದೇ ಪರಬ್ರಹ್ಮವಸ್ತುವೇ ಪ್ರವೃತ್ತಿಮಾರ್ಗವನ್ನನುಸರಿಸಿ ಗುರುಲಿಂಗಜಂಗಮವೆಂದು ಮೂರು ತೆರನಾಗಿದೆ. ಸಾಕಾರ ಸ್ವರೂಪವಾದದ್ದೇ ಗುರು, ಸಾಕಾರ ನಿರಾಕಾರ ಸ್ವರೂಪವಾದದ್ದೇ ಲಿಂಗ, ನಿರಾಕಾರ ಸ್ವರೂಪವಾದದ್ದೇ ಜಂಗಮ. ಇದಕ್ಕೆ ವಚನ ಆಧಾರ:— 'ಗುರುಲಿಂಗವು ಸಕಲನು, ಶಿವಲಿಂಗವು ಸಕಲ ನಿಃಕಲನು, ಜಂಗಮ ಲಿಂಗವು ನಿಃಕಲನು ಕಾಣಾ ಅಪ್ರಮಾಣ ಕೂಡಲಸಂಗಮದೇವ' ವಸ್ತುಗಳು ಭಿನ್ನವಾಗಿ ತೋರಿ ಅವುಗಳ ಪ್ರಕ್ರಿಯೆಗಳಲ್ಲಿ ತಾರತಮ್ಯ ಕಂಡರೂ ತತ್ವತಃ ಆ ವಸ್ತುಗಳಲ್ಲಿ ಏನೂ ಭೇದವಿಲ್ಲ. ಹಣ್ಣು, ಹೂ ಮತ್ತು ಗಿಡವು ದೃಷ್ಟಿಗೆ ಬೇರೆ ಕಂಡಾಗ್ಯೂ ತತ್ವತಃ ಈ ಮೂರು ಪದಾರ್ಥಗಳು ಒಂದೇ ಆಗಿವೆ. ಬಹಿರಂಗ ರೂಪ ರುಚಿ ಆಕಾರಗಳಲ್ಲಿ ಭಿನ್ನತ್ವ ಕಂಡರೂ ಅವು ಮೂಲತಃ ಒಂದೇ ಇದ್ದು ಮೂಲ ಬೀಜದ ಭಿನ್ನಭಿನ್ನ ಅವಸ್ಥಾರೂಪಕಗಳಾಗಿವೆ. ಇದೇ ರೀತಿ ಗುರುಲಿಂಗಜಂಗಮಗಳ ಸ್ಥಿತಿಯಿದೆ. 'ಚರಿಸಿ ಜಂಗಮವೆನಿಸಿತ್ತಯ್ಯಾ ಲಿಂಗವು, ನೆಲಿಸಿ ಲಿಂಗವೆನಿಸಿತ್ತಯ್ಯಾ ಲಿಂಗವು, ಇದರವ ಅರಿದಲ್ಲಿ ಗುರುವೆನಿಸಿತ್ತಯ್ಯಾ ಲಿಂಗವು-ಗುರುಲಿಂಗಜಂಗಮಕ್ಕೆ

ತಿಲಾಂಶ ಭೇದವಿಲ್ಲ ನೋಡಾ. ಭೇದಿಸಿದವರಿಗೆ ಭವಬಾಧೆ ತಪ್ಪುವುದೇ ದೇವರದೇವ ಕಪಿಲಸಿದ್ಧಮಲ್ಲಿಕಾರ್ಜುನದೇವ' ಎಂದು ಸಿದ್ಧರಾಮ ಶಿವಯೋಗಿಗಳು ಸಾಮಾನ್ಯ ಜನರಿಗೂ ಸಹ ತಿಳಿಯುವ ಹಾಗೆ ಗುರುಲಿಂಗ ಜಂಗಮದ ಏಕತ್ವದ ಬಗ್ಗೆ ಸ್ಪಷ್ಟವಾಗಿ ತಿಳಿಸಿದ್ದಾರೆ.

ಇನ್ನು ಜಂಗಮಭಕ್ತರ ಏಕತ್ವದ ಸ್ವರೂಪವನ್ನು ವಿಚಾರಿಸುವಾ; ನಿತ್ಯನಿರಂಜನ ಪರಶಿವತತ್ವವು ತನ್ನ ಶಕ್ತಿಯ ಚಲನಮಾತ್ರದಿಂದ ಅಂಗ ಮತ್ತು ಲಿಂಗ ಎಂದು ಎರಡು ತೆರನಾಯಿತ್ತು. ಅನಾದಿ ಮೂಲಶಕ್ತಿಯು ಪ್ರವೃತ್ತಿಮುಖವಾಗಿ ಎರಡು ಭೇದವಾಯಿತು, ಒಂದು ಲಿಂಗವನ್ನಾಶ್ರಯಿಸಿ ಶಕ್ತಿ ಎನಿಸಿತ್ತು ಇನ್ನೊಂದು ಅಂಗವನ್ನಾಶ್ರಯಿಸಿ ಭಕ್ತಿ ಎನಿಸಿಕೊಂಡಿತು. ಲಿಂಗವು ಇಷ್ಟ, ಪ್ರಾಣ, ಭಾವವೆಂದು ಮೂರ ತೆರನಾಯಿತು. ಈ ಇಷ್ಟಲಿಂಗವೇ ಗುರುದ್ಯೋತಕವಾದದ್ದು, ಪ್ರಾಣಲಿಂಗವೇ ಲಿಂಗದ್ಯೋತಕವಾದದ್ದು, ಭಾವಲಿಂಗವೇ ಜಂಗಮದ್ಯೋತಕವಾದದ್ದಾಗಿದೆ. ಈ ರೀತಿ ಅಂತರಂಗ ಬಹಿರಂಗಗಳಲ್ಲಿ ತಳ್ಳೈಸಿರುವ ವಸ್ತುಗಳಲ್ಲಿ ಹಿರಿದುಕಿರಿದೆಂದೆಣಿಸಲಿಕ್ಕೆ ಬಾರದಂತಿವೆ. ಯಾಕಂದರೆ "ಪಾದೋದಕವು ಲಿಂಗದ ಮೇಲೆ ಎಂದಲ್ಲಿ ಜಂಗಮ ಘನವಾಯಿತ್ತು ಆ ಲಿಂಗೋದಕ ಸ್ವೀಕರಿಸಿದಲ್ಲಿ ಜಂಗಮಕ್ಕೆ ಲಿಂಗವೇ ಘನವಾಯಿತ್ತು ಲಿಂಗದ ಕಳೆಯೇ ಜಂಗಮ, ಜಂಗಮದ ಕಳೆಯೇ ಲಿಂಗ, ಆವುದು ಘನವೆಂಬೆ, ಆವುದು ಕಿರಿದೆಂಬೆ, ಲಿಂಗಜಂಗಮವು ನೇತ್ರದಲ್ಲಿಯ ಪ್ರಕಾಶದಂತೆ ತಿಳಿದೆ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನ" ಎಂದು ಸಿದ್ಧರಾಮ ಶಿವಯೋಗಿಗಳು ಪುನಃ ಲಿಂಗಜಂಗಮದ ನಿಕಟಸಂಬಂಧವನ್ನು ವ್ಯಕ್ತಗೊಳಿಸಿದ್ದಾರೆ.

ದೇಹವಗಲಿದ ಪ್ರಾಣವು ಬಯಲು, ಪ್ರಾಣವಗಲಿದ ದೇಹವು ಜಡ, ಲಿಂಗಕ್ಕೆ ಜಂಗಮವೇ ಪ್ರಾಣ, ಜಂಗಮಕ್ಕೆ ಲಿಂಗವೇ ದೇಹ, ಒಂದನ್ನಗಲಿ ಒಂದು ಕಾರ್ಯ ಮಾಡವು. ಅರುಹೇ ಗುರು, ಆಚಾರವೇ ಲಿಂಗ, ಅನುಭಾವವೇ ಜಂಗಮ. ಇಂತಪ್ಪ ಭಾವಭೇದವಿಲ್ಲದ ಗುರುಲಿಂಗಜಂಗಮರಲ್ಲಿ ಭೇದವನ್ನು ಕಲ್ಪಿಸುವದು ಶುದ್ಧತಪ್ಪು

ಇನ್ನು ಭಕ್ತಜಂಗಮರ ಅಭೇದವನ್ನು ವಿಚಾರಿಸುವ; ಇವರೀರ್ವರಲ್ಲೂ ಭೇದವಿಲ್ಲೆಂಬುದೂ ಅನುಭಾವಸಿದ್ಧವಾದ ಮಾತಾಗಿದೆ. ಅದು ಹೇಗಂದರೆ; ಮಾಯಾಮಲವಿಮುಕ್ತನಾದ ಶುದ್ಧ ಜೀವಿಯೇ ಅಂಗವೆಂಬ

ಅಭಿದಾನದಿಂದ ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರು ತೆರನಾಗಿ ಭಾವ, ಪ್ರಾಣ, ಇಷ್ಟಲಿಂಗಗಳಲ್ಲಿ ಕ್ರಮವಾಗಿ ಬೆರೆಯಲು ಸಾಧಿಸುತ್ತದೆ ಇದೇ ಪ್ರಕ್ರಿಯೆಯೇ ಮುಂದೆ ಷಡ್‌ಲಿಂಗ ಷಡಾಂಗಗಳಾಗಿ ಪ್ರವೃತ್ತಿಲತೆಯನ್ನು ಹಬ್ಬಿಸುತ್ತದೆ ಇಲ್ಲಿ ಈಗ ಅದು ಪ್ರಸ್ತುತ ವಿಷಯವಲ್ಲ. ಈ ಅಂಗವಿಭಾಗವೇ ಭಕ್ತಿಯನ್ನಾಶ್ರಯಿಸಿ ಭಕ್ತನಾಗಿದೆ. ಚಿದ್ಘನಲಿಂಗ ವಿಭಾಗವೇ ಶಕ್ತಿಯನ್ನಾವಿರ್ಭವಿಸಿಕೊಂಡು ಲಿಂಗವಾಗಿದೆ. ಈ ಲಿಂಗದ ಪ್ರಾಣಕಳೆಯೇ ಜಂಗಮವಾಗಿದೆ. ಇಂತಪ್ಪ ಪ್ರಾಣದೊಳಗಿನ ಎಚ್ಚರವೇ ಗುರುವಾಗಿದೆ. ಕೆಳಗಿನ ವಚನದಿಂದ ಲಿಂಗಜಂಗಮ ಭಕ್ತರ ಅವಿನಾಭಾವ ಸಂಬಂಧವು ಚನ್ನಾಗಿ ವ್ಯಕ್ತವಾಗುತ್ತದೆ. 'ನಿತ್ಯ ನಿರಂಜನ ಪರಶಿವನು ಲಿಂಗಜಂಗಮ ಭಕ್ತನೆಂದು ಮೂರು ತೆರನಾದ ನೋಡಿರೆ, ಸದ್‌ರೂಪಲಿಂಗ, ಚಿದ್ರೂಪಭಕ್ತ ಆನಂದ ರೂಪವೇ ಜಂಗಮ ನೋಡಾ ಆ ಚಿತ್‌ಸ್ವರೂಪವಪ್ಪ ಭಕ್ತಂಗೆ ಸದ್ರೂಪವಪ್ಪ ಲಿಂಗವೇ ಅಂಗ, ಜಂಗಮವೇ ಪ್ರಾಣ. ಇದು ಕಾರಣ ಲಿಂಗವೇ ಅಂಗ ಜಂಗಮವೇ ಪ್ರಾಣ ಗ್ರಾಹಕನಾದ ಚಿನ್ಮಯನಯ್ಯ ಭಕ್ತನು. ಲಿಂಗಜಂಗಮಭಕ್ತ ಮೂರೊಂದಾಗಿ ಪರಶಿವ ತತ್ವದಲ್ಲಿ ಅಡಗಿದ ಅದ್ವೈತ ಪರಬ್ರಹ್ಮವು ತಾನೇ ಭಕ್ತನು ನೋಡಾ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.'

ಪಾದೋದಕವನ್ನು ಲಿಂಗದ ಮೇಲೆ ಎರೆಯುವ ಉದ್ದೇಶವು ಗುರುಲಿಂಗಜಂಗಮದ ಏಕತ್ವವನ್ನೂ ಸೂಚಿಸುತ್ತದೆ. ಅಲ್ಲದೆ ಭಕ್ತಭಕ್ತರಲ್ಲಿ ಭಕ್ತಜಂಗಮರಲ್ಲಿ ಸಂಘಟನೆಯನ್ನು ಸೂಚಿಸುತ್ತದೆ. ಭಕ್ತಜಂಗಮ ಇರ್ವರೂ ತಾದಾತ್ಮ್ಯ ಭಕ್ತಿಕಾಮುಕರಾಗಿ ಅದ್ವೈತಾವಸ್ಥೆಯಲ್ಲಿ ಪಡೆದ ಈ ಪಾದೋದಕವು ಶಿಶುವಿನೋಪಾದಿಯಲ್ಲಿ ಸರ್ವರ ಸುಖಮಯ ಪ್ರೇಮಾಲಿಂಗನಕ್ಕೆ ಕಾರಣವಾಗಿರುತ್ತದೆ. ಇದು ಮಾನವ ಜೀವನದ ಸುಖಾಭಿವೃದ್ಧಿಯ ಸುಜ್ಞಾನ ಝರಿಯಾಗಿದೆ. ಇದು ಹೊರಹೊಮ್ಮುವ ದ್ವಾರವು ತಾದಾಂಗಸ್ಪದ್ವಯದಲ್ಲಿದೆ— "ಭಾವ ಬಲಿದಲ್ಲಿ ಲಿಂಗವಾಯಿತ್ತು, ಭಾವ ಅಭಾವವಾದಲ್ಲಿ ಪಾಷಾಣವೆನಿಸಿತ್ತು, ಭಾವನಿರ್ಭಾವವಾದಲ್ಲಿ ಏನೊಂದೆನಿಸದು ಕಪಿಲಸಿದ್ಧಮಲ್ಲಿಕಾರ್ಜುನ" ಎಂಬ ಸಿದ್ಧರಾಮಶಿವಯೋಗಿಗಳ ಅನುಭವೋಕ್ತಿಯಂತೆ ಭಾವನಾವಿಶಿಷ್ಟವಾದ ತತ್ವಗಳನ್ನು ತರ್ಕಕ್ಕೆ ಹಚ್ಚಿ ನಿಕ್ಕಾಡುವದು ಸರಿಯಲ್ಲ. ತರ್ಕವು ಶಂಕಾಸ್ಪದವಾದದ್ದು. ಬುದ್ಧಿಯು ಸಂಶಯ ಭ್ರಮಿಷ್ಟವಾದದ್ದು. ಜ್ಞಾನ ಅರ್ಥಾತ್ ಬುದ್ಧಿಯ ಪರಿಪಾಕ

ಸ್ಥಿತಿಯೇ ಭಾವನೆಯು. ಯಾವುದು ಬುದ್ಧಿಗೆ ಸಿಕ್ಕುವದಿಲ್ಲವೋ ಅದು ಪ್ರೇಮಕ್ಕೆ ಸಿಗುತ್ತದೆ ಆದುದರಿಂದ ಸದ್ಭಾವನೆಯಿಂದ ಪಾದೋದಕದ ಮಹತ್ವವನ್ನು ಕಂಡು ಹಿಡಿಯ ತಕ್ಕದ್ದು. ಸಾಧಕರ ಕರ್ತವ್ಯವಾಗಿದೆ. ಇದು ಅಂಧಶ್ರದ್ಧೆಯಲ್ಲ, ವಿಚಾರ ಪ್ರೌಢತೆಯು. ಎಲ್ಲಿ ವಿಚಾರ ಸೋಲುತ್ತದೆಯೋ ಅಲ್ಲಿ ಭಾವನೆಯು ಒಳಹೊಕ್ಕು ಕೆಲಸ ಮಾಡುತ್ತದೆ.

ಪಾದೋದಕದ ಅಂತರಂಗ ಜ್ಞಾನ ಸ್ವರೂಪವನ್ನು ನಾವು ಮುಖ್ಯವಾಗಿ ಗ್ರಹಿಸಬೇಕಾಗಿದೆ; ವೀರಶೈವ ಶರಣರು ಜ್ಞಾನ ಕ್ರಿಯೆಗಳೆರಡಕ್ಕು ಮಹತ್ವ ಕೊಟ್ಟಿದ್ದಾರೆ. ಅಂತರಂಗದ ಸಮ್ಯಜ್ಞಾನವನ್ನು ಬಹಿರಂಗ ಕ್ರಿಯೆಗಳಲ್ಲಿ ಬಿಂಬಿಸುವದೇ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತದ ಸಾರವಾಗಿದೆ. ಶುದ್ಧ ಜೀವನ ಶಿವಯೋಗಾನಂದ ಪರಿಣಾಮಾವಸ್ಥೆಯೇ ಅಂತರಂಗ ಅಷ್ಟಾವರಣವು. ಇಂತಪ್ಪ ಜ್ಞಾನಮಯ ಅಂತರಂಗ ಅಷ್ಟಾವರಣದ ನೆಲೆ ಕಲೆಗಳನ್ನು ತಿಳಿಯುವದೇ ಸತ್ಯಾನ್ವೇಷಣೆಗಳ ಕರ್ತವ್ಯವಾಗಿದೆ.

ಇನ್ನು ಜಂಗಮ ಮೂರ್ತಿಯು ತನ್ನ ಅಧೋವೀರ್ಯನಾಳವನ್ನು ಬತ್ತಿಸಿ ತನ್ನಂತರ ಶಕ್ತಿಯಿಂದ ಕುಂಡಲಿನಿಯನ್ನು ಊರ್ಧ್ವಮುಖ ಮಾಡಿ ಬ್ರಹ್ಮರಂಧ್ರದಿಂದಿಳಿಯುವ ಪ್ರಭುವಿನ ಕಾರುಣ್ಯವನ್ನು ಹೃದಯ ಸ್ಥಾನದಲ್ಲಿ ಹೊಂದಿ ಸ್ಥಿರಸೌಖ್ಯವನ್ನು ಸುಖಿಸುವನು. ಇಂತಪ್ಪ ಸೌಖ್ಯಾನಂದದಲ್ಲಿ ಆ ಜಂಗಮಮೂರ್ತಿಯು ಷಡಕ್ಷರಿ ಮಹಾಮಂತ್ರವನ್ನು ಅತ್ಯಂತ ಭಕ್ತಿಯಿಂದ ಪಠಿಸುವನಾದ ಕಾರಣ ಆ ಪಠಿಸುವ ಸಮರಸಾನಂದದ ನಾಲಿಗೆಯು ಷಡಕ್ಷರಿಯ ಶಿವರುಚಿಯಿಂದ ದ್ರವಿಸುವದು. ಅದೇ ಅಂತರಂಗ ಪಾದೋದಕವು; ಅದು ಸುಷುಮ್ನನಾಳದಿಂದ ಪಾದಾಂಗುಷ್ಟದ ವರಿಗೂ ವಿದ್ಯುತ್ತಿನ ಪರಿಯಲ್ಲಿ ಹಬ್ಬಿರುತ್ತದೆ. ಇಂಥ ಜ್ಞಾನಾನಂದ ಜನಕವಾದ ಪಾದೋದಕವನ್ನು ಸರ್ವರೂ ಸಾಮೂಹಿಕವಾಗಿ, ಮೇಲು ಕೀಳು ಭಾವನೆಯನ್ನು ನೀಗಿ, ಸಮತಾಭಾವನೆಯಿಂದ ಜಂಗಮವನ್ನು ಯಾಚಿಸಿ ಪಾದಾಂಗುಷ್ಟದ್ವಯಗಳಿಂದ ಪಡೆಯುವದು ವಿಚಾರ ಪ್ರೌಢತೆಯ ಕಾರ್ಯವಲ್ಲದೆ ಮತ್ತೇನು? ಮನುಷ್ಯನ ಐಹಿಕ ಜೀವನವು ಸುಖಮಯವಾಗಿ ಸಾಗಬೇಕಾದರೆ ಅವನು ಹುಟ್ಟಿದ ಕುಟುಂಬ, ಕಟ್ಟಿದ ಸಮಾಜಗಳಲ್ಲಿ ಸಾಮೂಹಿಕ ಸಂಘಟನೆಯು ಬಹಳ ಅವಶ್ಯವಿದೆಯಲ್ಲವೇ? ಇಂಥ ಕರುಣಾಮಯ ಆನಂದ ಸೌಖ್ಯಗಳನ್ನು ಪಡೆಯುವದಕ್ಕಾಗಿಯೇ ಭಕ್ತರೆಲ್ಲರೂ (ವೀರಶೈವರು) ಜಂಗಮ ಪಾದವೆಡೆಯಲ್ಲಿ

ನಿತ್ಯದಲ್ಲೂ ಬಂಧುಭಾವ್ಯದಿಂದ ಸಂಘಟಿತರಾಗುವದು ಸಮಾಜಶಾಸ್ತ್ರದ ಉಚ್ಚತಮ ಸೂತ್ರವಲ್ಲವೇ? ಈ ರೀತಿ ಪರಸ್ಪರ ಪ್ರೇಮ, ವಿಶ್ವಾಸ, ದಾಸೋಹ ಭಾವನೆಗಳು ಪಾದೋದಕದಿಂದ ಪ್ರಾಪ್ತವಾಗುವದಿಲ್ಲವೇ? ಇಂಥ ಉಚ್ಚತಮ ವಿಚಾರಗಳು ಇಲ್ಲದಕ್ಕಾಗಿಯೇ ಸದ್ಯದ ವೀರಶೈವರು ವಿಘಟಿತರಾಗಿ ವೈಯ್ಯಕ್ತಿಕ ಕಷ್ಟನಷ್ಟಗಳನ್ನು ಅನುಭವಿಸ-ತ್ತಿರುವರಲ್ಲವೇ? ಇಂದಿನ ಭಾರತ ರಾಷ್ಟ್ರದ ಡಿಂಬನಾಳದಲ್ಲಿ ಐಕ್ಯತೆಯು ಜೀವಾಳವು ಚಲಿಸಲಾರದಕ್ಕಾಗಿ ಅದು ಈಗ ಪಾರತಂತ್ರ್ಯದ ಘೋರಯಾತನೆಯನ್ನು ಸಹಿಸುತ್ತಿರುವದಿಲ್ಲವೇ?

ಕಾರಣ ಪಾದೋದಕ ಸೇವನೆಯಿಂದ ಐಹಿಕ ಸೌಖ್ಯಾಸ್ಪದವಾದ ಭಕ್ತಿ, ವಿಶ್ವಾಸ, ಸಂಘಟನೆ, ಬಾಂಧವ್ಯ ಪ್ರೇಮ, ಸಮತಾವಾದಗಳ ಸಮೃದ್ಧಿಯಾಗಿ ಪಾರಮಾರ್ಥಿಕ ಜೀವನವು ಪೌಷ್ಟಿಗೊಳ್ಳುತ್ತದೆ. ಇಂಥ ಪುಣ್ಯಮಯ ಪಾದೋದಕವು ಜೀವನದ ಅಂತಿಮ ಗುರಿಗೆ ತಾಕಲು ಅದೆಷ್ಟು ಶುಲಭಸಾಧನವಾಗಿದೆಂಬುದು ವಿಚಾರ ಪರರಿಗೆ ಹೊಳೆಯದೆ ಇರಲಾರದು. ಇಂಥ ಕರುಣಾಮೃತವನ್ನು ಸುರಿದವನು ಅಜರಾಮರನಾಗುವನೆಂಬಲ್ಲಿ ಸಂದೇಹವೇನಿದೆ? ಕಾರಣ ತಾತ್ವಿಕವಾಗಿ ಲಿಂಗ, ಭಕ್ತ, ಜಂಗಮರಲ್ಲಿ ಭೇದವಿಲ್ಲವಾಗಿ ಲಿಂಗಮುಕ್ತನು ಭಕ್ತಬದ್ಧನು ಎನಲಕ್ಕಾಗುವದಿಲ್ಲ. ಭಕ್ತನಾದರೂ ಲಿಂಗಜಂಗಮರಂತೆ ಮುಕ್ತಸ್ವರೂಪನೇ ಸರಿ. ಭಕ್ತ ಜಂಗಮರು ಲಿಂಗಭೋಗೋಪಭೋಗಿಗಳಾದ ಕಾರಣ ಸಕಲ ಭೋಗಗಳನ್ನು ಲಿಂಗಕರ್ಪಿಸಿ ಭೋಗಿಸುವರು. ಭಕ್ತ ಜಂಗಮರು ಪಾದೋದಕವನ್ನು ಗ್ರಹಿಸುವ ಕಾಲಕ್ಕೆ ಗುರು, ಲಿಂಗ, ಜಂಗಮ, ಭಕ್ತ ಚತುರ್ವಿಧ ಮೂರ್ತಿಗಳಲ್ಲಿ ಸಮರಸ ಅಭಿನ್ನತ್ವದಿಂದ ಅದನ್ನು ಲಿಂಗದ ಮೇಲೆ ಎರೆದು ಆ ಲಿಂಗದ ಕಳೆಯನ್ನು ಅದರಲ್ಲಿ ತುಂಬಿ ಅತ್ಯಂತ ಭಕ್ತಿಯಿಂದ ಸ್ವೀಕರಿಸುವರು. ಪಾದೋದಕವನ್ನು ಲಿಂಗದ ಮೇಲೆ ಎರೆದು ಸ್ವೀಕರಿಸುವ ತತ್ವವು ಇಷ್ಟು ಗೂಢ ವ್ಯಾಪಕಾರ್ಥವುಳ್ಳದ್ದಾಗಿದೆಂಬುದನ್ನು ಶೈವ ಸಾಂಪ್ರದಾಯ ಭ್ರಮಿಷ್ಟರಾದ ಕೆಲ ವೀರಶೈವರು ವಿಚಾರಿಸಿ ತಿಳಿದುಕೊಳ್ಳಲೆಂಬುದೇ ನನ್ನ ಬಯಕೆ.

---

# ವೀರಶೈವ ಸಂಶೋಧನೆ.

## ದಾನಮ್ಮನ ಗುಡ್ಡಾಪುರ.

(ಲೇ: — ಶ್ರೀ. ದೇಸಾಯಿ ಪಾಂಡುರಂಗರಾಯರು ಎಂ. ಎ.)

ವಾಮಲೋಚನೆ ಹೋಗು ಗುಡ್ಡಾಪುರಕೆ ನಿನ್ನ ।
ಸೋಮಸಾಮ್ಯದ ರೂಹು ರಚಿಸಿ ಮರ್ತ್ಯದೊಳಗೆ ಮ ।
ನೋ ಮುದದೊಳೀಕ್ಷಿಸಲ್ ಜನಿಸು ಹೋಗಲ್ಲಿ ಸೋಮೇಶ ಲಿಂಗಾ
ಲಯವದೆ ॥

ಸೋಮ ಕಳೆಗಳು ಬೆಳೆವ ತೆರದೆ ಗಳಗಳನೆ ಬೆಳ ।
ದಾ ಮಹಾಲಿಂಗ ಸೇವೆಯೊಳೆ ನೀನಲ್ಲಿರು ।
ಪ್ರೇಮದಿಂದಪ್ಪಿ ಹೋಗೆಂದ ಗಿರಿಜಾವರನ ಚರಣಾಂಬುಜಕ್ಕೆ
ಶರಣು ॥

ಶಿವತತ್ತ್ವ ಚಿಂತಾಮಣಿ, ಸಂಧಿ ೩೫.

ಮಲ ಮತ್ತು ವಿಮಲ ಈ ಎರಡು ವಸ್ತುಗಳಿಂದ ಮಾನವ ಮೂರ್ತಿ ನಿರ್ಮಾಣವಾಗಿರುವುದು. ತಾತ್ವಿಕ ಪರಿಭಾಷೆಯಲ್ಲಿ ಜಡ ಮತ್ತು ಚಿತ್ ಇಲ್ಲವೆ ಚೈತನ್ಯ ಎಂದು ಇವುಗಳಿಗೆ ಹೆಸರು. ಜಡ ವಸ್ತುಗಳಿಂದಲೂ ಇತರ ಪ್ರಾಣಿಗಳಿಂದಲೂ ಬೇರ್ಪಡಿಸಿ ಮಾನವನನ್ನು ಮೇಲು ಮೆಟ್ಟಲಿಗೆ ಏರಿಸುವ ಅದ್ಭುತ ಶಕ್ತಿ **ಚಿತ್ ಎಂಬುದು.** ಇದರ ಬಲವು ಹೆಚ್ಚಿದಂತೆ ಮಾನವನ ತೇಜಸ್ಸು ಹೆಚ್ಚುವುದು. ಭಿನ್ನ ಭಿನ ಪ್ರಭೆಯ ಜ್ಯೋತಿಗಳಂತೆ ಮಾನವರಾದರೂ ಭಿನ್ನ ಭಿನ್ನ ಶಕ್ತಿ ಸಾಮರ್ಥ್ಯಗಳಿಂದ ಈ ಪ್ರಪಂಚದಲ್ಲಿ ಪ್ರಕಾಶಮಾನರಾಗುವರು. ಜಡ ದೇಹಕ್ಕೆ ಚ್ಯುತಿ ಉಂಟಾದರೂ ಈ ಚೈತನ್ಯಕ್ಕೆ ಚ್ಯುತಿ ಇಲ್ಲ. ಅದು ಚಿರಪ್ರಕಾಶಿ. ಅಂತೆಯೇ ಮಹಾನುಭಾವರಾದವರು ಮರಣಾಧೀನರಾದರೂ ಅವರ ಅಂತಃಸತ್ವದ ದಿವ್ಯ ಜ್ಯೋತಿ ಅನಂತರದಲ್ಲಿಯೂ ಬಹು ಕಾಲ ಬೆಳಗುತ್ತ ಜನಾಂಗವನ್ನು ಸ್ಫೂರ್ತಿಸುತ್ತಲಿರುತ್ತದೆ. ಇಂತಹ

ಅಮರ ಚಿನ್ಮಯ ಶಕ್ತಿಯನ್ನು ಸಂಪಾದಿಸುವುದೇ ಪ್ರತಿವಂತ ಮಾನವನ ಮಿಗಿಲಾದ ಗುರಿ. ಉಪನಿಷತ್ತಿನ ೧೦

ಮೃತ್ಯೋಃ ಅಮೃತಂ ಮಾ ಗಮಯ ।

ಎಂಬ ಪ್ರಾರ್ಥನೆಯ ರಹಸ್ಯವಾದರೂ ಇದುವೆ.

೧೨ ನೆಯ ಶತಮಾನದಲ್ಲಿ ವೀರಶೈವ ಮಹೋದಯದ ಪುರಸ್ಕಾರಿಗಳಾದ ಅನೇಕ ಜೀವಜ್ಯೋತಿಗಳು ಕರ್ನಾಟಕದಲ್ಲಿ ಬೆಳಗಿದುವು. ಉನ್ನತ ಜ್ಞಾನ, ಪರಿಶುದ್ಧ ಭಾವನೆ, ಅಚಲಶ್ರದ್ಧೆ, ಅಪಾರ ತಪಸ್ಸು, ಅಧ್ಯಾತ್ಮ ಸಂಪತ್ತಿ ಮುಂತಾದ ಅಲೌಕಿಕ ಸದ್ಗುಣ ಸಮುಚ್ಚಯದ ಮೂಲಕ ಈ ವ್ಯಕ್ತಿಗಳು ಅಲ್ಪಕಾಲದಲ್ಲಿಯೇ ಮಾನುಷ ಕೋಟಿಯನ್ನು ಹಿಂದುಳಿಸಿ ಅತಿ ಮಾನುಷ ಕೊಟಿಯಲ್ಲಿ ಸೇರುವಂತಹವಾದುವು. ಮಹಾ ಮಹಿಮರು, ಕಾರಣ ಪುರುಷರು, ದೇವಾಂಶರು ಮುಂತಾದ ಭಾವನೆಗಳು ಅವರ ಒಗೆಗೆ ಜನಗಳಲ್ಲಿ ಹರಡಿ ಅವರು ಗತಿಸಿದ ಸ್ವಲ್ಪಕಾಲದಲ್ಲಿಯೇ ಅವರ ಭಜನ ಪೂಜನಾದಿಗಳು ವಿಶೇಷವಾಗಿ ನಡೆಯುತ್ತ ಅವರ ಹೆಸರಿನಲ್ಲಿ ಗುಡಿ, ಗೋಪುರ, ಮಠ ಗದ್ದುಗೆಗಳು ಏರ್ಪಟ್ಟವು ಇಂತಹರಲ್ಲಿ ಅಲ್ಲಮಪ್ರಭು, ಬಸವೇಶ್ವರ, ಸಿದ್ಧರಾಮ, ಮೊದಲಾದ ಪುರುಷರು ಅಕ್ಕಮಹಾದೇವಿ ಮೊದಲಾದ ಸ್ತ್ರೀಯರು ಅಗ್ರಗಣ್ಯರಾಗಿರುವರು.

ಇಂತು ಕೀರ್ತಿಶೇಷರಾದ ಮಹಿಳೆಯರಲ್ಲಿ ಶಿವಶರಣೆ ದಾನಮ್ಮನು ಒಬ್ಬಳು. ಈಕೆಯ ಜೀವನ ಚರಿತ್ರೆಯ ಕೆಲವು ಸಂಗತಿಗಳು ತಿಳಿಯು ಬಂದಿವೆ. ಈಕೆಯ ತವರೂರು ಉಮರಾಣಿ; ಅತ್ತೆಯ ಮನೆ ಸಂಖ; ಕಾಲವಶವಾದ ಸ್ಥಳ ಗುಡ್ಡಾಪುರ. ಉಮರಾಣಿ ವಿಜಾಪುರ ಜಿಲ್ಲೆಯ ಇಂಡೀ ತಾಲೂಕಿಗೆ ಮತ್ತು ಮಿಕ್ಕ ಎರಡು ಊರುಗಳು ಈಗಿನ ಜತ್ತ ಸಂಸ್ಥಾನಕ್ಕೆ ಸೇರಿವೆ. ಈಕೆಯ ಇಟ್ಟ ಹೆಸರು ಲಿಂಗಮ್ಮ ಎಂದು ಈಚೆಯ ಕಾಲದ ಒಂದು ಪುರಾಣದಿಂದ ತಿಳಿಯುತ್ತದೆ. ಈಕೆ ಧೈರ್ಯಶಾಲಿನಿ. ಈಕೆಯ ಶೌರ್ಯದ ಕೃತಿಗಳನ್ನು ಕೆಲವು ಪುರಾಣಗಳಲ್ಲಿ ಬಣ್ಣಿಸಿದೆ. ಪರವಾದಿಗಳನ್ನು ಸೋಲಿಸಿ ವೀರಶೈವಮತವನ್ನು ಬಲವಾಗಿ ಪ್ರತಿಪಾದಿಸಿದಂತೆ ಕೆಲವು ವೃತ್ತಾಂತಗಳಿಂದ ತಿಳಿದುಬರುತ್ತದೆ. ಬಸವೇಶ್ವರರಿಗೆ ಕೊಂಚ ಈಚೆಯ ಕಾಲದವಳು ಆಗಿರಬಹುದೆಂದು ಎಂದು

ವಿಜಾಪುರ ಮ್ಯುಜಿಯುಮದಲ್ಲಿಯ ಒಂದು ಶಿಲಾಶಾಸನದ ಆಧಾರದಿಂದ ಊಹಿಸಬಹುದಾಗಿದೆ. (*Inscriptions in the Northern Karnalaka and the Kolhapur State by prof. Kundangar No. 210*). ಜೈನರ ಅತ್ತಿಮಬ್ಬೆಯಂತೆ ಈಕೆ ದಾನ ಧುರಂಧರೆಯಾಗಿದ್ದಳು. ಆ ಮೂಲಕ ಈಕೆಗೆ ವರದಾನಿ ದಾನಮ್ಮ, ಮೊದಲಾದ ಹೆಸರುಗಳು ಬಂದಂತೆ ತೋರುತ್ತದೆ. ಈಕೆ ಶಿವೈಕ್ಯವಾದ ಸ್ಥಳ ಗುಡ್ಡಾಪುರ. ಆದರಿಂದಾಗಿಯೊ ಈಕೆಗೆ ಗುಡ್ಡವ್ವೆ, ಗುಡ್ಡಮ್ಮ ಗುಡ್ಡಾದೇವಿ ಎಂಬ ಹೆಸರುಗಳೂ ಅನ್ವಯಿಸಿರಬೇಕು. ಈಕೆ ವಚನ ಮುಂತಾದ ಕೃತಿಯನ್ನು ರಚಿಸಿದಂತೆ ತೋರುವುದಿಲ್ಲ. ಆದರಿಂದ ಈಕೆಯ ಮಾನ್ಯತೆಗೆ ಕುಂದೇನೂ ಇಲ್ಲ.

ಈಕೆಯು ಗಂಡನೂರು ಎಂದು ತಿಳಿದ ಸಂಖದಲ್ಲಿ ಈಕೆಯ ಬಗೆಗೆ ಐತಿಹ್ಯವೇ ಮೊದಲಾದ ಯಾವ ಸಾಮಗ್ರಿಯೂ ದೊರೆಯಲಿಲ್ಲ. ಚಾಲುಕ್ಯ ರೀತಿಯ ದೇವಾಲಯಗಳು, ಶಿಲಾಶಾಸನಗಳು, ಮುಂತಾದ ಅವಶೇಷಗಳು ಇಲ್ಲಿ ಹೆಚ್ಚಾಗಿ ದೊರೆಯುತ್ತಿದ್ದರೂ ಈಕೆಯನ್ನು ಕುರಿತ ಸಾಧನಸಾಮಗ್ರಿಯು ಒಡೆದು ಕಾಣುವ ಅಭಾವವು ಆಶ್ಚರ್ಯಕರವಲ್ಲವೇ? ಇಲ್ಲಿ ಬಸವೇಶ್ವರ, (ನಂದಿ), ನೀಲಮ್ಮ, ಮೊದಲಾದ ಗುಡಿಗಳು ಇವೆ ಕಳಚುರ್ಯರ ಒಂದು ಮಹತ್ವಾದ ಶಾಸನವೂ ಸಿಕ್ಕಿದೆ. ಆದರೆ ದಾನಮ್ಮನ ವಿಷಯವಾಗಿ ಚಾರಿತ್ರಿಕ ಸಾಧನವೇನೂ ದೊರೆಯಲಿಲ್ಲ!

ಹೆಸರಿಗೆ ತಕ್ಕಂತೆ ಗುಡ್ಡಾಪುರವು ಗುಡ್ಡಗಾಡಿನ ಒಂದು ದಿನ್ನೆಯ ಮೇಲೆ ನೆಲಸಿದೆ. ಇದೊಂದು ಚಿಕ್ಕಹಳ್ಳಿ. ಜತ್ತಿಯಿಂದ ಪೂರ್ವಕ್ಕೆ ಸುಮಾರು ೧೫ ಮೈಲಿಯಲ್ಲಿ ಆದೆ ದಾನಮ್ಮನು ಈ ಸ್ಥಳದಲ್ಲಿ ಶಿವೈಕ್ಯವಾದ ಬಳಿಕ ಈ ಊರು ಬೆಳೆಯಿತು ಎಂದು ಹೇಳಿದರೆ ಹೆಚ್ಚು ಸರಿಯಾದೀತು. ದಾನಮ್ಮನ ಗುಡಿಯನ್ನು ಉಳಿದರೆ ಈ ಹಳ್ಳಿಯಲ್ಲಿ ಹೇಳುವಂತಹದು ಏನೂ ಇಲ್ಲ. ಈ ಗುಡಿಯ ಎಲ್ಲ ವ್ಯವಸ್ಥೆ ಜತ್ ಸರಕಾರದ ಸ್ವಾಧೀನವಿದೆ ಈ ಗುಡಿಗೆ ಬರುವ ಆದಾಯವನ್ನು ಅವರು ದೇವಾಲಯದ ಕಟ್ಟಡ, ಸೇವಾದಿ ವ್ಯವಸ್ಥೆ, ಯಾತ್ರಿಕರ ಸೌಕರ್ಯ ಮೊದಲಾದ ಕಾರ್ಯಗಳಿಗೆ ವಿನಿಯೋಗಿಸುವರು ಎಂದು ತಿಳಿಯುತ್ತದೆ.

ವಿಸ್ತಾರವಾದ ಪ್ರಾಕಾರದಿಂದಲೂ ಉನ್ನತವಾದ ಗೋಪುರಗಳಿಂದಲೂ ಶೋಭಿಸುವ ದಾನಮ್ಮನ ದೇವಾಲಯವು ಭವ್ಯತೆಯಿಂದ ಕೂಡಿದೆ. ಪ್ರಾಕಾರದೊಳಗೆ ದಾನವ್ವನದಲ್ಲದೆ ಸೋಮೇಶ್ವರ, ಮಲ್ಲಿಕಾರ್ಜುನ ಮತ್ತು ವೀರಭದ್ರರ ಗುಡಿಗಳು ಇವೆ. ಇದಲ್ಲದೆ ನಂದೀಕೋಲು ಮತ್ತು ಗುರುಪಾದುಕಾಸ್ಥಾನಗಳೂ ಅವೆ. ಸೋಮೇಶ್ವರ ಗುಡಿಯ ಪ್ರವೇಶದ್ವಾರದ ಕಲ್ಲಚೌಕಟ್ಟಿನ ಮೇಲೆ ಮೂರು ಆಕೃತಿಗಳನ್ನು ಕಂಡರಿಸಿರುವರು. ಇವರು ಮೂವರೂ ಸ್ತ್ರೀಯರು ಎಂದು ಗುರುತಿಸಬಹುದು. ಇವರಲ್ಲಿ ನಡುವಿನವಳು ಪ್ರಮುಖಳಾಗಿದ್ದು ಅವಳ ಇಕ್ಕೆಲದವರು ಪರಿಚಾರಿಕೆಯರು ಆಗಿರಬೇಕು.

ದಾನವ್ವನ ಗುಡಿ ಮಿಕ್ಕ ಗುಡಿಗಳಿಗಿಂತ ವಿಸ್ತಾರ ಮತ್ತು ಎತ್ತರದ ಗೋಪುರಗಳುಳ್ಳುದು ಆಗಿದೆ. ಒಟ್ಟಿನಲ್ಲಿ ಈ ಎಲ್ಲ ಗುಡಿಗಳು ಈಚೆಯ ಕಾಲದಲ್ಲಿ ಎಂದರೆ ಸು. ೧೫-೧೬ ನೆಯ ಶತಮಾನದಲ್ಲಿ ಜೀರ್ಣೋದ್ಧಾರ ಪಡೆದವುಗಳು ಆಗಿವೆ. ಆದರೆ ಈ ಜೀರ್ಣೋದ್ಧಾರದ ತಳಹದಿಯಾದ ಸು. ೧೨ನೆಯ ಶತಮಾನದ ದೇವಾಲಯಗಳ ಕುರುಹುಗಳು ವ್ಯಕ್ತವಾಗದೆ ಇಲ್ಲ.

ದಾನವ್ವನ ದೇವಾಲಯದಲ್ಲಿಯ ದಾನವ್ವನ ವಿಗ್ರಹವು ಶಿಲೆಯದಾಗಿದ್ದು ಮನುಷ್ಯಾಕೃತಿ ಸುಮಾರು ನಾಲ್ಕು ಅಡಿ ಎತ್ತರವಾಗಿದೆ. ಕಾಲುಗಳನ್ನು ಮಡಚಿಕೊಂಡು ಕುಳಿತುದ. ಎಡಗೈಯಲ್ಲಿ ಇಷ್ಟಲಿಂಗ ಬಲಗೈಯಲ್ಲಿ ಜಪಮಾಲೆ ಮತ್ತು ಚಕ್ರವನ್ನು(?) ಧರಿಸಿದೆ. ಅವಯವಗಳು ತುಂಬಿಕೊಂಡು ಸ್ವಲ್ಪ ಗಾತ್ರವಾಗಿಯೇ ಇವೆ. ಎದ್ದು ಕಾಣುವಂತಹ ಗುಳ್ಳೆಕಣ್ಣುಗಳು ತಲೆಗೆ ಬಿಗಿಯಾಗಿ ಕಟ್ಟಿದ ಚೆಂದದಿಂದ ಹೆಣೆದ ಕುಲಾಯಿಯಂತಿರುವ ಆವರಣವಿದೆ. ದಾನವ್ವನ ತರುವಾಯ ಸ್ವಲ್ಪಕಾಲದಲ್ಲಿಯೇ ಆಕೆಯ ದೇವಾಲಯಗಳನ್ನು ಕಟ್ಟಲು ಆರಂಭವಾದ ಸಂಗತಿಯನ್ನು (ಮೇಲೆ ಕಂಡ ವಿಜಾಪುರ ಶಾಸನ, ಇ. ಸ. ೧೨೭೮) ಆಲೋಚಿಸಿದರೆ ದಾನವ್ವನ ವಿಗ್ರಹವು ಆಕೆಯ ಪಾರ್ಥಿವ ರೂಪಕ್ಕೆ ಸಮೀಪವರ್ತಿ ಆಗಿರಬಹುದೇನೋ ಎನಿಸುತ್ತದೆ.

ವಿಗ್ರಹಕ್ಕೆ ಸಲ್ಲುವಂತಹ ವಿವಿಧ ವಸ್ತ್ರಾಭರಣಗಳಿದ್ದು ಅವುಗಳನ್ನು ಆ ಆ ಸಂದರ್ಭಗಳಿಗೆ ಉಚಿತವಾಗಿ ತೊಡಿಸುವರು. ಹೀಗೆ ವಸ್ತ್ರ

ಲಂಕಾರ ವಿಭೂಷಿತೆಯಾದ ದಾನವ್ವನು ಮುಂಜಾವದಲ್ಲಿ ಕುಮಾರಿಯಾಗಿ, ನಡುಹಗಲಲ್ಲಿ ಪ್ರೌಢೆಯಾಗಿ, ಇರುಳಲ್ಲಿ ವಯಸ್ಕಳಾಗಿ, ಹೀಗೆ ನಿತ್ಯವೂ ಮೂರು ಅವಸ್ಥೆಗಳ ರೀತಿಯನ್ನು ಬೀರುವಳು ಎಂದು ಭಾವಿಕರು ಹೇಳುವರು.

ಗುಡಿಯ ಪ್ರಾಕಾರದಲ್ಲಿ ಇನ್ನೊಂದು ಕಡೆ ಹರವಾದ ಒಂದು ಶಿಲಾಶಾಸನವನ್ನು ಇರಿಸಿದ್ದಾರೆ. ಇದರ ಮೊಲ್ಬದಿಗೆ ಕಂಡರಿಸಿದ ಚಿತ್ರಗಳು ಲಕ್ಷಣೀಯವಾಗಿವೆ. ನಡುವೆ ವಿಮಾನದಾಕಾರದ ದೇವಾಲಯದಲ್ಲಿ ಶಿವಲಿಂಗವು ಪ್ರತಿಷ್ಠಿತವಾಗಿದೆ. ಇದರ ಎಡಗಡೆ ಭಕ್ತಿಭಂಗಿಯಲ್ಲಿ ಕುಳಿತ ಮೂರು ಆಕೃತಿಗಳು ಇವೆ. ಇವುಗಳಲ್ಲಿ ಒಂದಂತೂ ನಿಶ್ಚಿತವಾಗಿ ಸ್ತ್ರೀವಿಗ್ರಹವು. ಬಲಗಡೆ ನಿಲ್ಲಿಸಿದ ಕತ್ತಿ, ಆಕಳು-ಕರು ಮುಂತಾದ ಆಕೃತಿಗಳು ಇವೆ. ಶಾಸನವು ಬಹಳ ಹಾಳಾಗಿದೆ. ಆದುದರಿಂದ ಹೆಚ್ಚಿನ ವಿವರಗಳು ತಿಳಿಯುವಂತೆ ಇಲ್ಲ. ಇದರ ಕಾಲ ಸು. ೧೨ನೆಯ ಶತಮಾನ. ಇದರಲ್ಲಿ ಸೋಮನಾಥನೆಂಬ ಈಶ್ವರನ ಮಹಿಮಾ ಪ್ರಭಾವವನ್ನು ಬಹುವಾಗಿ ವರ್ಣಿತವಾದಂತೆ ತೋರುತ್ತದೆ. ಇದರಲ್ಲಿ ದಾನವ್ವನ ಸಮಾಚಾರ ಉಕ್ತವಾಗಿದೆಯೋ ಇಲ್ಲವೋ ಎಂಬುದನ್ನು ಕಂಡು ಹಿಡಿಯಲು ಮಾರ್ಗವಿಲ್ಲ. ಆದರೆ ಮೋಳ್ಕಂಡ ಸೋಮೇಶ್ವರ ಗುಡಿಯ ಬಾಗಿಲ ಮೇಲಿನ ಮತ್ತು ಪ್ರಸ್ತುತ ಶಿಲಾಶಾಸನದ ಮೇಲಿನ ಸಹೇತುಕ ಸ್ತ್ರೀವಿಗ್ರಹಗಳನ್ನು ಪರಿಶೀಲಿಸಿದರೆ ಇವು ಯಾವಳೋ ಒಬ್ಬ ಭಕ್ತೆಯ ಪ್ರಾಯಃ ದಾನವ್ವನ ವಿಷಯವನ್ನೇ ಸೂಚಿಸುವವು ಎಂದು ಊಹಿಸಬಹುದು

ಬೇರೊಂದು ಆಧಾರದ ಬಲದಿಂದ ಈ ವಿಗ್ರಹಗಳು ಶಿವಶರಣೆ ದಾನವ್ವನನ್ನೇ ಸೂಚಿಸುವುವು ಎಂದೂ ಮೋಳ್ಕಂಡ ಶಿಲಾಶಾಸನದಲ್ಲಿ ದಾನವ್ವನ ವಿಷಯವು ಉಕ್ತವಾಗಿರಬೇಕು ಎಂದೂ ಸಾಧಿಸುವಂತಿದೆ. ಈ ಲೇಖನದ ಶಿರ್ಷಕದಲ್ಲಿ ಲಕ್ಕಣ್ಣ ದಂಡೇಶನ (೧೫ನೆಯ ಶ.) ಶಿವತತ್ವ ಚಿಂತಾಮಣಿಯಿಂದ ಉದ್ಧರಿಸಿದ ಪದ್ಯದಿಂದ ದಾನವ್ವನು ಅವತರಿಸುವ ಪೂರ್ವ ಗುಡ್ಡಾಪುರದಲ್ಲಿ ಸೋಮನಾಥನ ದೇವಾಲಯವಿದ್ದಿತೆಂಬ ಸಂಗತಿ ಧ್ವನಿತವಾಗುತ್ತದೆ. ಇದೇ ಪದ್ಯದ ಆಧಾರದಿಂದ ಶ್ರೀಶೈಲ ಮಲ್ಲಿಕಾರ್ಜುನನು ಅಕ್ಕಮಹಾದೇವಿಗೆ ಇಷ್ಟದೈವತವೂ ಆರಾಧ್ಯ

ಮೂರ್ತಿಯೂ ಆಗಿದ್ದಂತೆ ಗುಡ್ಡಾಪುರದ ಸೋಮನಾಥನು ದಾನವ್ವನ ಇಷ್ಟದೈವತವೂ ಆರಾಧ್ಯ ಮೂರ್ತಿಯೂ ಆಗಿದ್ದನು ಎಂದು ಬಹು ಸಯುಕ್ತಿಕವಾಗಿ ಪ್ರತಿಪಾದಿಸಬಹುದಾಗಿದೆ. ದಾನವ್ವನು ತನ್ನ ಜೀವನದ ಬಹು ಭಾಗವನ್ನು ಗುಡ್ಡಾಪುರದ ಈ ಸೋಮನಾಥನ ಆರಾಧನೆಯಲ್ಲಿ ಕಳೆದು ಕೊನೆಗೆ ಇಲ್ಲಿಯೇ ಶಿವೈಕ್ಯವಾದಳು ಎಂದು ಹೇಳಬೇಕಾಗುತ್ತದೆ. ಬಳಿಕ ಆಕೆಯ ಸ್ಮಾರಕಾರ್ಥವಾಗಿ ಈ ದೇವಾಲಯವನ್ನು ಆ ಶಾಸನವನ್ನು ಮತ್ತು ಸೋಮೇಶ್ವರ ದೇವರ ಬಾಗಿಲ ಮೇಲಿನ ಮತ್ತು ಶಾಸನದ ಮೇಲಿನ ಶಿವಶರಣೆಯ ಚಿತ್ರಗಳನ್ನು ರಚಿಸಿದರು ಎಂದು ಗೋಚರವಾಗುತ್ತದೆ.

ದಾನವ್ವೆ ಮಹಿಮಾಶಾಲಿನಿ ಎಂದು, ಬೇರೆ ಹೇಳಬೇಕಾಗಿಲ್ಲ ತನ್ನ ಆತ್ಯಂತಿಕ ನಿಷ್ಠೆ ಸಾಹಸಳಿಂದ ಜೀವನಾವಧಿಯಲ್ಲಿಯೇ ಅಕ್ಕಮಹಾದೇವಿ ಮೊದಲಾದವರಂತೆ ಲೋಕ ಮಾನ್ಯತೆಯನ್ನು ಪಡೆದಳು ಎಂದು ತೋರುತ್ತದೆ. ತರುವಾಯ ಕ್ಷಿಪ್ರದಲ್ಲಿಯೇ ಅವಳ ಮಹಿಮೆ ಇನ್ನಿಷ್ಟು ಹೆಚ್ಚಿತು. ಪಾರ್ವತಿಯ ಅವತಾರವೆಂದು ಜನಗಳು ಆಕೆಯನ್ನು ಆರಾಧಿಸಲಾರಂಭಿಸಿದರು. ಸು ೧೨೭೮ ನೆಯ ಇಸ್ವಿಯಲ್ಲಿ ದೇವಗಿರಿಯ ಯಾದವವಂಶದ ಮಹಾದೇವ ನೃಪತಿಯ ಮಾಂಡಲಿಕನಾದ ಶಿವಭಕ್ತ ಸಾಯಿದೇವನು ವಿಜಾಪುರ ನಾಡಿನಲ್ಲಿ ಆಕೆಯ ದೇವಾಲಯವೊಂದನ್ನು ಕಟ್ಟಿಸಿ ಅದರ ವಿನಿಯೋಗಕ್ಕಾಗಿ ದತ್ತಿಯನ್ನು ಬಿಟ್ಟನು. (ಮೋಲ್ಕಂಡ ವಿಜಾಪುರದ ಶಿಲಾಶಾಸನ) ಅವಳನ್ನು ಕುರಿತು ಪುರಾಣ ರಚನೆ ನಡೆಯಿತು. ೧೫ನೆಯ ಶತಮಾನದಲ್ಲಿ ಬಾಳಿದ ವಿಜಯನಗರದ ಮಹಾಮಂತ್ರಿ ಲಕ್ಕಣ್ಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿ ಎಂಬ ಗ್ರಂಥದಲ್ಲಿ ಶಿವಶರಣೆಯಾದ ಈಕೆಯ ಅಲಂಪುರದಲ್ಲಿ ಶಿವಲಿಂಗ ಪುನಃ ಸ್ಥಾಪನೆ ಮೊದಲಾದ ಕಾರ್ಯಗಳನ್ನು ಸವಿಸ್ತಾರವಾಗಿ ವರ್ಣಿಸಿದ್ದಾನೆ. ಈ ಕಾಲದಲ್ಲಿ ದಾನವ್ವನು ಪಾರ್ವತಿಯ ಅವತಾರ ಎಂಬ ನಂಬುಗೆ ಜನಗಳಲ್ಲಿ ಎಷ್ಟು ದೃಢಮೂಲವಾಗಿದ್ದಿತು ಎಂಬುದಕ್ಕೆ ಲಕ್ಕಣ್ಣನು ನಿರೂಪಿಸಿದ ಉಮಾ-ಭೃಂಗಿಯ ಕಲಹ ಮತ್ತು ಪಾರ್ವತೀ ಶಾಪದ ಪೌರಾಣಿಕ ವೃತ್ತಾಂತವು ನಿದರ್ಶನವಾಗಿದೆ

ಅಂದಿಲ್ಲ ಇಂದಿಗೂ ದಾನವ್ವನು ಅನೇಕ ಜನಗಳಿಗೆ ಪ್ರಿಯ ದೈವತವಾಗಿದ್ದಾಳೆ. ಭಕ್ತರ ಇಷ್ಟಾರ್ಥಗಳನ್ನು ಪೂರಯಿಸಿ ಅವರಿಂದ

ಭಕ್ತಿಯ ಕಾಣಿಕೆಗಳನ್ನು ಸಲ್ಲಿಸಿಕೊಳ್ಳುತ್ತಿದ್ದಾಳೆ. ಮುಂಬಯಿ ಕರ್ನಾಟಕ, ಮಹಾರಾಷ್ಟ್ರ, ಹೈದ್ರಾಬಾದ ಮೊದಲಾದ ಗೂರ ದೂರದ ಪ್ರಾಂತದಿಂದ ಅನೇಕ ಭಾವಿಕರು ಈಕೆಯ ದರ್ಶನ, ಸೇವಾದಿಗಳಿಂದ ಕೃತಾರ್ಥರಾಗುತ್ತಿದ್ದಾರೆ. ಗುಡ್ಡಾಪುರದ ಗುಡ್ಡದ ಮೇಲೆ ಉನ್ನತವಾಗಿ ಪ್ರಕಾಶಿಸುತ್ತಲಿರುವ ದಾನಮ್ಮನ ದೇವಾಲಯದ ಉತ್ತುಂಗವಾದ ಆ ಶಿಖರವು ಮರ್ತ್ಯನಾದ ಮಾನವನು ಅಮೃತತ್ವದ ಗಗನಮಂಡಲದಲ್ಲಿ ಭದ್ರವಾಗಿ ಪ್ರಸ್ಥಾಪಿಸಿರುವ ತಾರಾಂಗಣದಲ್ಲಿ ಮಿನುಗುವ ಒಂದು ತಾರಿಕೆ !

---

# ವೀರಶೈವವು ಎತ್ತಸಾಗಿದೆ.

(ಸಂಗ್ರಾಹಕರು: ಶ್ರೀ ವೀ. ರು ಕೊಪ್ಪಳ, ಎಮ್. ಏ. ಬಿ. ಟಿ ಧಾರವಾಡ.)

[ಧಾರವಾಡ ನವಕಲ್ಯಾಣ ಮಠದ ಶ್ರೀ. ಕುಮಾರಸ್ವಾಮಿಗಳವರು ಅಲೀಗಡದಲ್ಲಿ ನೆರೆದಿದ್ದ ೧೯ನೇಯ ಅಖಿಲಭಾರತ ತತ್ವಜ್ಞಾನ ಸಮ್ಮೇಳನದಲ್ಲಿ ಇಂಗ್ಲೀಷಿನಲ್ಲಿ ಮಾಡಿದ ಭಾಷಣದ ಸಾರಾಂಶವಿದು.]

ಐತಿಹಾಸಿಕ ದೃಷ್ಟಿಯ ವಿವೇಚನೆಯಲ್ಲಿ ವೀರಶೈವ ಧರ್ಮವು ಶೈವಧರ್ಮದ ಒಂದಂಗವಾಗಿ ಸುಮನೋಹರವಾಗಿ ಸಂಪೂರ್ಣವಾಗಿ ಅರಳಿ ಸದ್ವಾಸನೆ ಬೀರುವ ಹೂವಾಗಿ ಕಂಗೊಳಿಸುತ್ತದೆ. ಕ್ರಿಸ್ತಶಕಕ್ಕಿಂತ ಮೊದಲು ೩೦೦೦ ವರ್ಷಗಳ ಆಚೆಯಿಂದಲೇ ಶೈವಧರ್ಮವು ಈ ನಮ್ಮ ಹಿಂದೂ ದೇಶದಲ್ಲಿ ರೂಢವಾಗಿತ್ತೆಂದು ಇತ್ತೀಚೆಗೆ ಶೋಧವಾಗಿರುವ ಮೊಹೆಂಜೋ ದಾರೋ ಹರಪ್ಪ ಸಂಸ್ಕೃತಿಗಳ ಅವಶೇಷಗಳನ್ನು ಕುರಿತು ಸ್ವತಂತ್ರವಾಗಿ ಅಭ್ಯಾಸ ಮಾಡಿದ ಸರ್ ಜಾನ್ ಮಾರ್ಶಲ ಮತ್ತು ಡಾಕ್ಟರ ಪ್ರಾಣನಾಥ ಅವರ ಅಭಿಪ್ರಾಯಗಳಿಂದ ತಿಳಿದುಬರುತ್ತದೆ. ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿಯೇ ಈ ದೇಶದ ಮೂಲನಿವಾಸಿಗ

ಳಾಗಿದ್ದ ದ್ರಾವಿಡರಿಗೆ ಶಿವನು ಇಷ್ಟದೇವತೆಯಾಗಿದ್ದನೆಂದೂ ಮತ್ತು ಅವನಿಗೆ ಲಿಂಗೋದ್ಭವ ಮೂರ್ತಿಯೆಂದು ಅವರು ಕರೆಯುತ್ತಿದ್ದರೆಂದೂ ಫಾದರ ಹೆರಾಸ್ ಮೊದಲಾದ ವಿದ್ವನ್ಮಣಿಗಳ ನಿರಾಕಾರ ಶಿವನನ್ನು ಸಾಕಾರಗೊಳಿಸಿ ಶಿವಲಿಂಗವೆಂದು ಕರೆದು ಗುಡಿಗಳಲ್ಲಿ ಪೂಜಿಸುವದು ಶೈವ ಧರ್ಮದ ಹೆಗ್ಗುರುತು. ಈ ತರಹದ ಪೂಜೆಗೆ ಸ್ಥಾವರಲಿಂಗದ ಪೂಜೆಯೆಂದು ಹೆಸರು. ಆದರೆ ವೀರಶೈವ ಧರ್ಮದ ವಿಶಿಷ್ಟವಾದ ಗುರುತು ಇಷ್ಟಲಿಂಗದ ಪೂಜೆಯಲ್ಲಿ ವ್ಯಕ್ತವಾಗುತ್ತದೆ. ದೇಹವನ್ನು ದೇವಾಲಯಗೊಳಿಸಬೇಕು. ಅದು ದೇವನ ವಾಸಕ್ಕೆ ತಕ್ಕುದಾಗಬೇಕು ಎಂದು ವೀರಶೈವನು ಅನಾದ್ಯನಂತ ಪರಶಿವನ ಪ್ರತೀಕವಾದ ಆ ಇಷ್ಟಲಿಂಗವನ್ನು ಎಂದೆಂದೂ ಅಗಲದಂತೆ ಅಂಗದ ಮೇಲೆ ಇರಿಸಿಕೊಳ್ಳುವನು. ಹೀಗೆ ಧರಿಸಿದ ಲಿಂಗವು ಕಾಣದ ಶಿವನು ಕೈಲಾಸದಲ್ಲಿಲ್ಲ. ಅವನು ಕಾಯದಲ್ಲಿಹನು, ಎಂಬುವದನ್ನು ಕುರುಹಿಟ್ಟು ಹೇಳುವದಲ್ಲದೆ ವೇದಾಂತಿಗಳು ಹೇಯವೆಂದು ಹೀಯಾಳಿಸಿಬಿಟ್ಟ ಮಾನವದೇಹದ ಮಹತ್ವವನ್ನು ಹೇಳುವದು. ಮಾನವನ ದೇಹವು ದೇವಾಲಯವಾಗಬೇಕು ಅದು ಮಹಾಕಾಯವಾಗಬೇಕು. ಇಷ್ಟಕ್ಕೇ ತೀರಲಿಲ್ಲ. ವಿಶ್ವಕಾಯದ ಸಿದ್ಧತೆಗೆ ಅದರಿಂದ ಅನುಕೂಲತೆ ಒದಗಬೇಕು ಎಂಬುದು ವೀರಶೈವನ ಹಂಬಲ. ಇದರಿಂದ ಜೀವನವು ಅಧ್ಯಾತ್ಮಜೀವನವಾಗಬೇಕು. ಜೀವ ಪ್ರಪಂಚವೆಲ್ಲ ಶಿವಪ್ರಪಂಚವಲ್ಲಿ ಮಾರ್ಪಾಡುಗೊಳ್ಳಬೇಕು. ಇಷ್ಟೇ ಅಲ್ಲ ದೇವನ ದಿವ್ಯಜ್ಞಾನದ ಪ್ರಾಪ್ತಿಗೆಯೊಂದಕ್ಕೆ ಮಾತ್ರವಲ್ಲ. ವಿಶ್ವಕ್ಕೆಲ್ಲ ಗಮನದ ಗುರಿಯಾದ ದಿವ್ಯಾನುಭವದ ಸೇವೆಯೂ ಉಂಟಾಗಬೇಕೆಂಬುದು ವೀರಶೈವನ ಹವಣಿಕೆ. ಇಂಥ ಜ್ಞಾನಾನುಭವವನ್ನೇ ಲಕ್ಷ್ಯವಾಗಿಟ್ಟುಕೊಂಡು ಕಲೆ, ವಾಙ್ಮಯ, ತತ್ವಜ್ಞಾನ ಮೊದಲಾದವುಗಳಲ್ಲಿ ಮೇಲ್ತರಗತಿಯನ್ನು ಪಡೆದುಕೊಂಡಿರುವ ವೀರಶೈವ ಸಮಾಜವು ಜೀವನದ ನಾನಾ ಮುಖಗಳಲ್ಲಿ ಮುಕುಟವಾಗಿರುವ ಅನೇಕ ಮಹಾ ಮಹಾ ವ್ಯಕ್ತಿಗಳನ್ನು ಇಂದಿಗೂ ಪಡೆಯುತ್ತಿರುವದೆಂಬುದು ಹೆಮ್ಮೆಯ ಮಾತಾಗಿದೆ. ಶಿವಧರ್ಮ ಸಾಧನೆಯೇ ಧ್ಯೇಯವಾಗಿದ್ದ ದ್ರಾವಿಡರ ಸಂಸ್ಕೃತಿಯಲ್ಲಿ ಸಿಗುವ ಆನ್, ಆನಿಲ್, ಅಮ್ಮಾ, ಆತಮ್ ಎಂಬ ಅರ್ಥಗರ್ಭಿತವಾದ ಶಬ್ದಗಳು ಶಿವ, ಶರಣ, ಶಕ್ತಿ, ಸೃಷ್ಟಿ ಎಂಬ ಪದಗಳಿಗೆ ಸಮಾನಾರ್ಥವುಳ್ಳವುಗಳು ಇವೆಲ್ಲ ವೀರಶೈವರ ಇಷ್ಟಲಿಂಗದ ಕಲ್ಪನೆಗೆ ಸಂಪೂರ್ಣತೆಯನ್ನು ಕೊಡು

ತ್ತವೆ. 'ಲಿಂಗ' ಪದದ ವಿಷಯವಾಗಿ ಅನೇಕ ವಿದ್ವನ್ಮಣಿಗಳು ಅನೇಕ ತೆರನಾದ ಸಿದ್ಧಾಂತಗಳನ್ನು ಮಾಡಿರುವರು. ಇವರಲ್ಲಿ ಫ್ರಾನ್ಸದೇಶದ ಶ್ರೀಜೀನ್‌ಪ್ರಿಲಿಸ್ಕಿ ಎಂಬವರು ಲಾಂಗಲಿ (ನೇಗಿಲು ಶಬ್ದದ ಉತ್ಪತ್ತಿಯಾ ಯಿತೆಂದೂ ಅದು ಆಸ್ಟ್ರೋಏಷಿಯಾಟಿಕ್ ಕೋಲಮುಂಡರ ಸಂಸ್ಕೃತಿಯಲ್ಲಿ ಒಡಮೂಡಿದುದೆಂದೂ ಅಭಿಪ್ರಾಯಪಡುತ್ತಾರೆ. ಆರ್ಯ ಸಂಸ್ಕೃತಿಗೆ ಮಾರುಹೋದ ಪಂಡಿತರಲ್ಲನೇಕರು ಲಿಂಗವು ಯಜ್ಞದ ಅಗ್ನಿಯನ್ನೂ ಗುಡಿ ಗಳು ಯಜ್ಞದ ಮಂಟಪವನ್ನೂ ಸೂಚಿಸುತ್ತವೆಂದು ಹೇಳುವರು ಬೇರೆ ಕೆಲವರು ಲಿಂಗ ಶಬ್ದವು ಲಿಖ್ ಎಂದರೆ ರೂಪಿಸು ಎಂಬ ಶಬ್ದದಿಂದ ಬಂದಿ ತೆಂದೂ ದೇವನು ವಿಶ್ವವನ್ನು ರೂಪಿಸುವನಾದುದರಿಂದ ಅವನೇ ಲಿಂಗ ಎಂದೂ ಊಹಿಸಿರುವರು. ಆಗಮಕಾರರಿಗೆ ಅಡಗಿಸುವ ಮತ್ತು ಅರ ಳಿಸುವ ದ್ವಿವಿಧ ಸಾಮರ್ಥ್ಯವುಳ್ಳ ಮಾಯಾಶಕ್ತಿಗೆ ಆಧಾರಭೂತವಾದ ತತ್ವವು ಲಿಂಗವು. ಆದರೆ ವೀರಶೈವರ ಕಲ್ಪನೆಯಲ್ಲಿ ಲಿಂಗವು ಕೇವಲ ಒಂದು ಗುರುತು ಅದು ಶುದ್ಧವೂ ಪರಿಪೂರ್ಣವೂ ಆದ ಅರುಹಿನ ಕುರುಹು. ಅರುಹಿನಲ್ಲಿ ಅಡಕವಾದ ಕಾಣುವ ಮತ್ತು ಕಾಣದ ಸಂಗ ತಿಗಳನ್ನು ಕುರಿತು ತತ್ವಜ್ಞಾನವು ಚನ್ನಾಗಿ ವಿವರಿಸುತ್ತದೆ. ಮತ್ತೂ ದೇವಜ್ಞಾನವು (*Theosophy*) ಪ್ರತಿಯೊಂದು ಸ್ಪಷ್ಟವಾದ ವಿಚಾರವು ತನಗೆ ತಕ್ಕುದಾದ ಒಂದು ಸ್ವರೂಪದಿಂದ ಕೂಡಿಕೊಂಡಿರುವದೆಂಬ ದನ್ನು ನಿಶ್ಚಿತವಾಗಿ ಸಿದ್ಧಿಸುತ್ತದೆ. ಆದುದರಿಂದ ದೇವರ ವಿಷಯವಾಗಿ ಸುಸಂಬದ್ಧವಾದ ಮತ್ತೂ ಸಮ್ಮಿಶ್ರಿತವಾದ ವಿಚಾರಕ್ಕೆ ತಕ್ಕುದಾದ ಒಂದು ಆಕಾರದ ಕುರುಹು ಈ ಲಿಂಗವೆಂದು ವೀರಶೈವರ ತಿಳುವಳಿಕೆ

ಆನ್ ಅಥವಾ ಶಿವನು ಪ್ರಸನ್ನ ಪರಿಪೂರ್ಣ ಅರಿವು ಎಂದು ಹೇಳಿದೆ. ಅವನಿಗೇ ಪರಾಸಂವಿತ್ ಎಂದು ಹೆಸರು ಪಾಶ್ಚಿಮಾತ್ಯ ತತ್ವಜ್ಞಾನಿಗಳಿಗೆ ಬರ್ಗಸಾನ್‌ನನ್ನು ಹೊರ್ತುಪಡಿಸಿ ಅರಿವು. ಮನ. ಇವುಗಳಲ್ಲಿ ಭಿನ್ನತೆಯಿಲ್ಲ. ಮನವು ಜಡವು. ಅರಿವು, ಸೂಕ್ಷ್ಮವು ಅದು ಮನ ಮತ್ತು ಆದರಂತೆ ಜಡವಾಗಿರುವ ಇಂದ್ರಿಯ ಗಳನ್ನೂ ಮತ್ತು ಇವುಗಳ ಕಾರ್ಯಗಳಿಗೂ ಜೀವಕಳೆ ತುಂಬಲು ಸಾಮರ್ಥ್ಯ ವುಳ್ಳದು. ಅರಿವಿನಾಶ್ರಯದಲ್ಲಿ ಬೆಳೆದ ಆತ್ಮನು ಸ್ವಯಂಪ್ರಕಾಶಮಯನು. ಅರಿವಿನ ಪ್ರಕಾಶದಿಂದ ಆತ್ಮನು ಮನದ ವ್ಯವಹಾರಗಳನ್ನು ಕಾಣು ತ್ತಾನೆ. ಕಲ್ಪಿಸುವದಿಲ್ಲ. ಈ ಅರಿವಿನ ಪ್ರಕಾಶವಿಲ್ಲದಿರೆ ಎಲ್ಲವೂ ಅಸತ್ ಅರಿವಿನ ಸಂಪಾದನೆಯು ಮಾನವನ ಅನುಭವದ ಆತ್ಯಂತಿಕ ಗುರಿಯು.

"ನಾನು ವಿಚಾರಿಸುತ್ತೇನೆ! ಆದ್ದರಿಂದ ನಾನು ಇದ್ದೇನೆ" ಎಂಬ ಡೆಕಾರ್ಟನ ಉಕ್ತಿಯು ಒಡಲಲ್ಲಿ ಅರಿವಿನ ಸಂಪಾದನೆಯಲ್ಲಿ "ನಾನು ಇದ್ದೇನೆ! ಆದ್ದರಿಂದ ನಾನು ಇದೇನೆ" ಎಂಬ ಮಾತಿನ ಮರೆಯ ತತ್ವವನ್ನು ಕಾಣುವಲ್ಲಿ ಅರಿವಿನ ಸಂಪಾದನೆಯುದೆ.

ಅರಿವು ಅನುಭವಕ್ಕೆ ಸಾಧನವು. ಅನುಭವದಿಂದ ಅರಿವು ಕರಗೊಳ್ಳುವದು. ಅರಿವು ಕೇವಲವಾಗಿ ತೋರಿದರೂ ಸ್ವಾನುಭವಗೊಳ್ಳುವಾಗ ನಾನಾ ಮುಖದ ವ್ಯವಹಾರಕ್ಕೆ ಅನುಕೂಲವನ್ನು ಕಲ್ಪಿಸುವದು. ಈ ವ್ಯವಹಾರಕ್ಕೆ ಸೃಷ್ಟಿ ಅಥವಾ ಆತವರ್ ಎಂದು ಹೆಸರು. ಸೃಷ್ಟಿಯ ಕರ್ತನು ತನ್ನ ಇರುವಿನ ಅರಿವಿನಿಂದ ಕೂಡಿದವನು. ಈ ಅರಿವಿನಿಂದ ಹೊರಹೊಮ್ಮುವ ಸೃಷ್ಟಿಯು ಶಿವನ ಶಕ್ತಿಯು ಮುಖಾಂತರ ಶಿವನ ಈ ಶಕ್ತಿಗೆ ಚಿತ್+ಶಕ್ತಿ ಅಥವಾ ಅಮ್ಮಾ ಎಂತಲೂ ಹೆಸರು. ಅಗ್ನಿಯಲ್ಲಿ ದಾಹಕ ಶಕ್ತಿಯೂ, ಸೂರ್ಯನಲ್ಲಿ ಪ್ರಕಾಶ ಶಕ್ತಿಯೂ, ಚಂದ್ರನಲ್ಲಿ ಶೈತ್ಯಶಕ್ತಿಯೂ, ನೈಜವಾಗಿರುವಂತೆ ಶಿವನಲ್ಲಿ ವಿಮರ್ಶ ಶಕ್ತಿಯು ನೈಜವಾದುದು. ಶಿವನ ಇಚ್ಛಾಮಾತ್ರದಿಂದಲೇ ನಾನಾ ಮುಖವಾದ ಸೃಷ್ಟಿಯ ವ್ಯವಹಾರವೆಲ್ಲ ಸಾಗುವದು. ವಿಶ್ವಪ್ರೇರಕವಾದುದು ಈ ಶಕ್ತಿಯೇ! ಇದಕ್ಕೆ ಜಾತವೇದಸ್ ಎಂತಲೂ ಕರೆಯುವರು.

ಈ ನಾನಾ ಮುಖದ ಸೃಷ್ಟಿಗೆ ಆಧ್ಯಾತ್ಮಿಕ ತಳಹದಿಯು ಉಂಟಾಗಬೇಕಾದರೆ ಅನ್ ಅಥವಾ ಶಿವನು ತನ್ನ ಶಕ್ತಿಯ ಮುಖಾಂತರವಾಗಿ ಅನಿಲ್ ಅಥವಾ ಶರಣನಾಗಬೇಕು. ಶರಣನು ನಾನಾ ಮುಖ ವ್ಯವಹಾರಕ್ಕೆ ಸಾಕ್ಷೀಭೂತನು. ಅವನು ಅರಿವಿನಲ್ಲಿ ಶಿವನಾಗಿಯೂ, ಇರುವಿನಲ್ಲಿ ತಪ್ಪನ್ನಾಗಿಯೂ ತೋರುವನು. ಶರಣನು ಜೀವನಲ್ಲ. ಜೀವನು ಶರಣನಲ್ಲ. ಜೀವನು ಕ್ಷರಪುರುಷನಾದರೆ ಶರಣನು ಅಕ್ಷರ ಪುರುಷನು. ನಾನು ಜೀವನಲ್ಲಿ ಶರಣ ನಾನು ಕ್ಷರಪುರುಷನಲ್ಲಿ ಅಕ್ಷರ ಪುರುಷ ಎಂಬುದನ್ನು ಅಳವಡಿಸಿಕೊಂಡಾಗಲೇ ಬಂಧನದಿಂದ ಬಿಡುಗಡೆಯುಂಟಾಗುವದು. ತಂದೆಯೇ ತಾಯಿಯಿಂದ ಮಗನಾಗಿ ಜನಿಸುವನೆಂಬುದೊಂದು ಅನುಭವವುಂಟು. ಅಂತೆಯೇ ಶಿವನೇ ಶಕ್ತಿಯಿಂದ ಶರಣನಾಗುವನು. ವೀರಶೈವರು ಈ ಶರಣನಿಗೇ ಅಂಗವೆಂದೂ, ಶಿವನಿಗೆ ಲಿಂಗವೆಂದೂ, ಕರೆಯುವರು. ಶಿವ, ಶರಣ, ಲಿಂಗ, ಅಂಗ, ಇವರ ಅವಿನಾಭಾವ ಸಂಬಂಧಕ್ಕೆ ವೀರಶೈವ ಪಾರಿಭಾಷೆಯಲ್ಲಿ ಸಾಮರಸ್ಯವೆಂಬ ಹೆಸರು.

ಶಿವನ ಲೀಲೆಗೆ ಸಾಧನವಾಗಿ ಶಿವನ ವ್ಯಕ್ತತೆಗೆ ಮಹಾಧನವಾಗಿ ಶಕ್ತಿಯು ಅಪಾರವಾದ ಅರಿವಿನಿಂದ ಅತವರ್ ಅಥವಾ ಸೃಷ್ಟಿಯಾಗುವದು. ಅರ್ಥಾತ್ ಶಿವನ ನೆನಹೇ ರೂಹಿಸಿ ಹೊರಹೊಮ್ಮುವದು ಶಕ್ತಿ ಸೃಷ್ಟಿಗಳು ಶಿವನ ಅಂತರಂಗ ಬಹಿರಂಗದ ಕುರುಹು ಆದ್ದರಿಂದ ಸೃಷ್ಟಿಯು ಸಟೆಯಲ್ಲ. ದಿಟ. ಅಸತ್ಯವಲ್ಲ. ಸತ್ಯ. ಆದರಂತೆ ಶಕ್ತಿಯೂ ಸತ್ಯವಾದದ್ದು. ನಾವು ಸಾಗುವದು ಅಸತ್ಯದಿಂದ ಸತ್ಯಕ್ಕಲ್ಲ. ಅಲ್ಪ ಸತ್ಯದಿಂದ ಮಹಾಸತ್ಯಕ್ಕೆ. ಸೃಷ್ಟಿಯು ಶಿವನ ಕೇವಲ ಇಚ್ಛಾಮಾತ್ರದಿಂದ ಜನಿಸಿದುದೆಂಬ ವೀರಶೈವನ ತಿಳುವಳಿಕೆಯು ವೇದಾಂತಿಗಳ ದೃಷ್ಟಿಯನ್ನೇ ಅಳುಕಿಸುವದು. ಮರ್ತ್ಯವೆಂಬುದು ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು ಎಂಬ ಉದಾತ್ತಭಾವನೆಯು ಅಸತ್ಯಕ್ಕೆ ಅಸ್ಪದವೀಯದಂತೆ ಬೆಳಕಿನಿಂದ ಬೆರೆದುದು.

ಹೀಗೆ ವಿವರಿಸಿದ ಅನ್, ಅನಿಲ್, ಅವ್ಯಾಕ್ತ, ಮತ್ತು ಅತವರ್, ಅಥವಾ ಶಿವ-ಶರಣ, ಶಕ್ತಿ ಮತ್ತು ಸೃಷ್ಟಿ ಇವುಗಳ ಸಂಗಮವು ಇಷ್ಟಲಿಂಗದಲ್ಲಿ ಹೇಗೆ ದೊರಕೊಳ್ಳುವದು ಎಂಬುದನ್ನು ಸಿದ್ಧಿಸುವದೇ ಈ ವ್ಯಾಖ್ಯಾನದ ಗುರಿ. ವೀರಶೈವವು ಎತ್ತಸಾಗಿತೆ ಎಂಬುದನ್ನು ತಿಳಿದುಕೊಳ್ಳುವ ಬಗೆ ಅತವರ್ ಅಥವಾ ಸೃಷ್ಟಿಗೆ ಗೀತೆಯು ಅಪರಾಪ್ರಕೃತಿಯೆಂದೂ ಆಗಮವು ಅಧೋ ಸೃಷ್ಟಿಯೆಂದೂ ಕರೆಯುವವು. ಸೃಷ್ಟಿಯು ಪ್ರಕೃತಿ. ಜೀವ, ಮನಗಳ ಇರುವಿಕೆಯಲ್ಲಿ ವ್ಯಕ್ತಗೊಳ್ಳುವದು. ಹಿಂದುಗಳು ಇದಕ್ಕೇನೇ ಸತ್ವ - ರಜ - ತಮಗಳೆಂದು ಹೇಳುವರು. ತ್ರಿಗುಣಾತ್ಮವಾದ ಈ ಸೃಷ್ಟಿಯನ್ನೂ ಇಲ್ಲವೆ ಪ್ರಕೃತಿ ಜೀವಮನಗಳ ತೋರಿಕೆಯಲ್ಲಿ ಕಾಣುವ ಈ ಸೃಷ್ಟಿಯನ್ನೂ ಸಮತೂಕದ ದೃಷ್ಟಿಗಿಳಿಸಿ, ರೂಪಕ್ಕೆ ನಿಲ್ಲಿಸುವದಾದರೆ ಅಥವಾ ಅದನ್ನು ಚಿತ್ರದಿಂದ ವಿವರಿಸುವದಾದರೆ △ ಹೀಗೆ ಸಮಭುಜ ತ್ರಿಕೋಣದಿಂದ ಅದನ್ನು ಹೇಳಬಹುದು.

ಈ ಅಪರಾ ಪ್ರಕೃತಿಯನ್ನು ಪರಾಪ್ರಕೃತಿಗೆ ಇಲ್ಲವೆ ಈ ಅಧೋ ಸೃಷ್ಟಿಯನ್ನು ಊರ್ಧ್ವಸೃಷ್ಟಿಗೆ ಮಾರ್ಪಡಿಸಲು ಸಮ್ಯಕ್ ದೃಷ್ಟಿಯು ಬೇಕು. ಶಕ್ತಿಯು ವಿಲಾಸದಿಂದ ಅಪಾರವಾಗಿ ತೋರಿದರೂ, ಅದು ಒಂದು ದೃಷ್ಟಿಯಲ್ಲಿ ಕರಿಯು ಕನ್ನಡಿಯೊಳಡಗುವಂತೆ ಅಡಗುವದು. ಸೃಷ್ಟಿಯನ್ನು ಮಾರ್ಪಡಿಸಲು ಸರಿಯಾದ ದೃಷ್ಟಿಯೊಂದಿದ್ದರೆ ಸಾಕು.

ಇಂಥ ಸಮ್ಯಕ್ಕ ದೃಷ್ಟಿಯು ಅಚ್ಚ ಅರಿವಿನ ವ್ಯವಹಾರದಿಂದ ದೊರೆಕೊಳ್ಳುವ ಅನುಭವದಲ್ಲಿ ಒಡಮೂಡುವದು. ಇಂಥ ಸಮ್ಯಕ್ ದೃಷ್ಟಿಸಂಪಾದಕನಿಗೆ ಶರಣನೆಂದು ಹೆಸರು. ಶರಣನು ಸತ್ವ ರಜಸ್ತಮೋಮಯಿಯಾದ ಸೃಷ್ಟಿಯನ್ನು ತನ್ ಸಮ್ಯಕ್ ದೃಷ್ಟಿಯಿಂದ ಸಚ್ಚಿದಾನಂದಮಯಿಯಾದ ಆತ್ಮಾ ಅಥವಾ ಶಕ್ತಿಯಲ್ಲಿ ಮಾರ್ಪಡಿಸಿಕೊಳ್ಳುವನು. ಮೂಪಾರ್ಟಾದ ಸೃಷ್ಟಿಯನ್ನು ಚಿತ್ರಿಸಲು ಇನ್ನೊಂದು ಸಮಭುಜ ತ್ರಿಕೋಣವು ಬೇಕು. ಹೀಗೆ ಶಕ್ತಿಯಲ್ಲಿ ರೂಪಾಂತರಗೊಳ್ಳುವ ಸೃಷ್ಟಿ ಮತ್ತು ಆ ಶಕ್ತಿ ಚಿತ್ರವು X ಇಂತಾಗುವದು.

ಸಮ್ಯಕ್ ದೃಷ್ಟಿಸಂಪಾದಕನಾದ ಅನಿಲ್ ಅಥವಾ ಶರಣನು ಜನನ ಮರಣಾತ್ಮಕ ಸಂಸಾರ ಚಕ್ರಕ್ಕೆ ಮತ್ತೂ ಪೂರ್ವಾಶ್ರಯದ ಹುರುಳಿಲ್ಲದ ಪೂರ್ಣತೆಗೆ ಎದುರಾಗಿ ನಿಲ್ಲುವನು. ಇಂಥವನಲ್ಲಿ ಸಮ್ಯಕ್ ದೃಷ್ಟಿಯು ಭಾವನೆ ಬಲಗೊಳುವದು. ಶರಣನ ವ್ಯವಹಾರದಲ್ಲಿ ಬುದ್ಧಿ ಪ್ರಧಾನತೆ ಇಲ್ಲ. ಭಾವನಾ ಪ್ರಧಾನವಿದೆ. ಭಕ್ತಿಯು ಬೇಕಿದೆ. ಅವನ ಕ್ರಿಯೆಗಳು ಹೊರಹೊಮ್ಮುವದು. ಈ ಭಾವನಾ ದೃಷ್ಟಿಯಿಂದ ಶರಣನು ಭಾವನಾ ಪೂರ್ಣವಾಗಿ ದೃಷ್ಟಿ ಶಕ್ತಿಗಳನ್ನು ಕಾಣುವನು. ಅವುಗಳ ಬಗ್ಗೆ ಕಲ್ಪಿಸುವದಿಲ್ಲ. ಹೀಗೇ ಸಾಮ್ಯಕ್ ದೃಷ್ಟಿಯು ಭಾವನೆ ಬಲಗೊಂಡು ಅವನ ಇರುವಿಕೆಯಲ್ಲಿ ಹೊರಹೊಮ್ಮುವದರಿಂದ ಸತ್ ಇದನ್ನು ರೂಪಿಸುವ ಗೆರೆಗೆ ಸರಿಯಾಗಿ ಬೆಳಸಿ ಇದನ್ನು ತೋರಿಸಬೇಕು. ಎಂದರೆ ಇಷ್ಟಲಿಂಗದ ರೂಪದಲ್ಲಿ ಅದು X ಈ ಆಕಾರವನ್ನು ತಾಳುವದು.

ಆನ್ ಅಥವಾ ಶಿವನು ಸತ್ಯ ಅನಾದಿ ಅನಂತನು. ಇವನಿಗೆ ಆಸ್ತಿಕ ಮತವಾದಿಗಳು ಪ್ರಕಾಶವೆಂದೂ ಕ್ರೈಸ್ತ ಅನುಭವಿಗಳು ದಿವ್ಯ ಕತ್ತಲೆಯೆಂದೂ ವೀರಶೈವರು ಅಮಿತ ಪ್ರಕಾಶ ಮಯುಸ್ಥಿರನೆಂದು ಸೂಫೀ ಅನುಭವಿಗಳೂ ಏನೂ ಇಲ್ಲದ ಬಚ್ಚಬರಿಯ ಬೆಳಕು ಎಂದು ಕರೆಯುತ್ತಾರೆ. ಇವರಿಗೆ ಎರಡೆಂಬುದಿಲ್ಲಾ. ತನಗೆ ತಾನೇ ತೊಟ್ಟಿಲವಾಗಿ, ತಾನೇ ಕೂಸಾಗಿ, ತಾನೇ ಮಲಗಿ, ತಾನೇ ಎಚ್ಚತ್ತು, ತಾನೇ ಆಡುವನು. ಇಂಥ ಪರಶಿವನ ಸ್ವರೂಪನ್ನು ತಿಳಿಯಬೇಕೆಂಬ ಮಾನವನ ಪ್ರಯತ್ನಗಳೆಲ್ಲ ಶೂನ್ಯವಾಗುವವು. ಪೂಜೆಯಲ್ಲಿ ಪರಿಣಮಿಸುವವು. ಇವನು ಎಲ್ಲವನ್ನು ಮೀರಿ ಆಚೆ ಇರುವದರಿಂದ, ಮತ್ತೂ ಎಲ್ಲವುಗಳ ಶಿರದಮೇಲಿರುವದರಿಂದ ಇವನಿಗೆ ಉಚ್ಚಸ್ಥಾನವುಂಟು. ಇಷ್ಟಲಿಂಗದ ರಹಸ್ಯದಲ್ಲಿ

ಇಲ್ಲದಿದ್ದರೆ ಪೂರ್ಣತೆಯಿಲ್ಲ. ಆದ್ದರಿಂದ ಈ ಪರಶಿವಸೂಚಕವಾದ ಈ ಕುರುಹಿನಿಂದ ಇಷ್ಟಲಿಂಗದ ರೂಪವು $\dot{x}$ ಹೀಗೆ ವ್ಯಕ್ತವಾಗುವದು.

ಇಂಥ ಇಷ್ಟ ಲಿಂಗದ ತತ್ವವನ್ನು ವೀರಶೈವರು ಹೊಂದಿಹರು. ಹೊಂದಲಿರುವರು.

---

# ಕವಿ ಷಡಕ್ಷರಿ.

( ಲೇಖಕ:— ಎಸ್. ಷಣ್ಮುಖ ವೀರಾಪೂರ, ಸೀ. ಬಿ. ಎ.
ಲಿಂಗರಾಜ ಕಾಲೇಜ ಬೆಳಗಾವಿ )

---

ತಲೆಕಟ್ಟನ್ನು ನೋಡಿದ ಕೂಡಲೇ ಕೆಲವರಿಗೆ ಅಚ್ಚರಿಯಾಗುವುದು ಸಹಜ. ಏಕೆಂದರೆ ಸುಪ್ರಸಿದ್ಧನಾದ ಷಡಕ್ಷರ ದೇವನನ್ನು ಅನಾವಶ್ಯಕವಾಗಿ ಕವಿಯೆಂದು ನಾವು ಕರೆದಿದ್ದೇವೆ. ಆದರೆ ಒಂದಿಷ್ಟು ಕೂಲಂಕಷವಾಗಿ ವಿಚಾರಮಾಡಿ ನೋಡಿದರೆ 'ಕವಿ' ಎಂಬ ಶಬ್ದವನ್ನು ನಾವು ಯಾವದೇ ತರದ ಔಚಿತ್ಯಹಾನಿಯನ್ನುಂಟು ಮಾಡದೆ, ಉದ್ದೇಶಪೂರ್ವಕ ಉಪಯೋಗಿಸಿದ್ದೇವೆಂಬುದು ತಮಗೆ ಹೊಳೆಯದೆ ಇರಲಾರದು. ಕನ್ನಡ ಸಾಹಿತ್ಯನಭೋಮಂಡಲದಲ್ಲಿ ಒಟ್ಟಿಗೆ ಮೂರು ಮಂದಿ ಷಡಕ್ಷರಿಗಳು ಮಿನುಗುತ್ತಲಿದ್ದಾರೆ. ಅಸಂಖ್ಯ ಭಕ್ತಿಪರ ಪದಗಳನ್ನು ಬರೆದ ಮುಪ್ಪಿನ ಷಡಕ್ಷರಿ, ಕೆಳದಿಯ ಬಸವನ ವಚನ ಬರೆದ ಮಂತ್ರಿಷಡಕ್ಷರಿ, ಮತ್ತು ರಾಜಶೇಖರವಿಳಾಸವೇ ಮೊದಲಾದ ಅಸಂಖ್ಯಗ್ರಂಥಗಳ ಕರ್ತೃವಾದ ಕವಿ ಷಡಕ್ಷರಿ. ಈ ಮೂವರು ಷಡಕ್ಷರಿಗಳೊಳಗೆ ಕಡೆಯವನಾದ ಕವಿ ಷಡಕ್ಷರಿಯನ್ನಷ್ಟೇ ಕುರಿತು ಇಲ್ಲಿ ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ. ಈ ಪ್ರಬಂಧವು ಈ ಮಹಾಕವಿಯ ಸ್ಥೂಲ ಪರಿಚಯವೇ ಹೊರತು, ಸಂಪೂರ್ಣ ವಿವೇಚನೆಯಲ್ಲವೆಂಬುದನ್ನು ಸಹೃದಯರಾದ ವಾಚಕರು ಮೊದಲು ಜ್ಞಾಪಕದಲ್ಲಿಟ್ಟುಕೊಳ್ಳಲಿ. ಇಲ್ಲಿ ಅವನ ಕಾವ್ಯಗಳ ವಿಮರ್ಶೆಗೆ ಕೈಹಾಕದೆ, ಕವಿಯ ಕಾಲ, ದೇಶ, ಮನೆತನ, ವಿದ್ಯಾಭ್ಯಾಸ ಕನ್ನಡ ಸಾಹಿತ್ಯದಲ್ಲಿ ಅತನ ಸ್ಥಾನ ಮೊದಲಾದವುಗಳನ್ನು ಕುರಿತು, ಅವನ ಕೃತಿಗಳಿಂದಲೇ ದೊರೆಯುವ ಹಲವು ಅಂಶಗಳನ್ನು ಕಲೆಹಾಕಬಹುದು.

ಯಾವ ದೇಶದಲ್ಲಿಯಾದರೂ ಕವಿಗೆ ಪ್ರಾಶಸ್ತ್ಯ ಹೆಚ್ಚು. ದೇಶದ ಜನರ ಯೋಗ್ಯತೆಯನ್ನು ಅಲ್ಲಿನ ಕವಿಗಳಿಂದ ತಿಳಿದುಕೊಳ್ಳಬಹುದು. 'ಕವಿಯೇ ಲೋಕದ ಕಣ್ಣು' ಎಂದರೂ ಸಲ್ಲುತ್ತದೆ. ನಮ್ಮ ನಾಡಿನಲ್ಲಿ ಕವಿಗೆ ಒಳ್ಳೆಯ ಮರ್ಯಾದೆ ಇತ್ತು. ರಾಜರೂ ಕವಿಗಳಿಗೆ ಸನ್ಮಾನ ಮಾಡುತ್ತಿದ್ದುದು ಕನ್ನಡ ಸಾಹಿತ್ಯ ಚರಿತ್ರೆಯಿಂದ ತಿಳಿದುಬರುವುದು. ಎಷ್ಟೋ ಕವಿಗಳು ರಾಜಕಾರಣ ಪಟುಗಳಾಗಿ ದಂಡನಾಯಕರಾಗಿದ್ದರು. ಕವಿಯು ಜನಾಂಗದ, ಸಂಸ್ಕೃತಿಯ, ನಾಡಿನ ಉದ್ಧಾರಕ. ಎಲ್ಲರೂ ಕವಿಯನ್ನು ಒಂದಿಲ್ಲೊಂದು ಕಾರಣದಿಂದ ಗೌರವಿಸಲೇ ಬೇಕು. ಜನರ ಮನ್ನಣೆಯಲ್ಲಿ ಕವಿಗೆ ಪ್ರಥಮಸ್ಥಾನ ಸಲ್ಲಲಿ. ಮಿಂಚಿ ಹೋದ ಕವಿಗಳ ನೆನಪು ಮಾಡಿಕೊಳ್ಳುವು ಇಂದು ಅಗತ್ಯವು.

ಷಡಕ್ಷರದೇವನು ಪ್ರಸಿದ್ಧ ಕವಿಯು. ಕೇವಲ ವೀರಶೈವ ಸಾಹಿತ್ಯದಲ್ಲಿ ಮಾತ್ರ ಪ್ರಸಿದ್ಧನೆಂದು ತಿಳಿಯುವುದು ತಪ್ಪು. ಕನ್ನಡ ಸಾಹಿತ್ಯ ಸಂಸ್ಕೃತ ಸಾಹಿತ್ಯಗಳೆರಡರಲ್ಲಿಯೂ ಅವನಿಗೆ ಹೆಮ್ಮೆಯ ಹಿರಿಮೆಯ ಸ್ಥಾನವನ್ನು ಕೊಡಬಹುದು. ಉಭಯ ಭಾಷಾಪಂಡಿತನೂ, ಉಭಯ ಕವಿತಾ ವಿಶಾರದನೂ ಆದುದರಿಂದ ಉಭಯ ಭಾಷೆಗಳಲ್ಲಿ ಬರೆದಿರುವನು. ಕವಿಯ ಅಸಾಧಾರಣ ಸಂಸ್ಕೃತಭಾಷಾಜ್ಞಾನದಿಂದಲೇ ಈತನ ಕರ್ನಾಟಕ ಗ್ರಂಥಗಳಲ್ಲಿ ಸಂಸ್ಕೃತ ಪದಪ್ರಯೋಗಗಳು ಹೇರಳವಾಗಿವೆ. ಕೆಲವರಿಗೆ ಈ ಸಂಸ್ಕೃತ ಪದಪ್ರಯೋಗಗಳು ಸರಿಬೀಳುವುದಿಲ್ಲ. ಆದುದದರಿಂದ ಷಡಕ್ಷರಿಯೆಂದರೆ ಅವರಿಗೆ ಆಗದು. ಇವನು ಸಂಸ್ಕೃತ ಭಾವ ಭಂಗಿಗಳನ್ನು ಮೀರಿಸುವಂತೆ ಕನ್ನಡದಲ್ಲಿ ಬರೆಯುವದರಿಂದ ಹಿಂದಿನ ಕವಿಗಳಿಂದ ಕದ್ದಿರುವನೆಂಬ ದೋಷಕ್ಕೂ ಪಾತ್ರನಾಗಿರುವನು. ಚಂಪೂ ಕಾವ್ಯಗಳಲ್ಲಿಯ ಏಕರೂಪತೆಯಿಂದ ಉದ್ದೇಶಪೂರ್ವಕವಾಗಿಯೋ ಅಲ್ಲವೋ ವರ್ಣನಾ ವಿಶೇಷಗಳು ಒಂದನ್ನೊಂದು ಹೋಲುತ್ತಲೂ ಮೀರಿಸುತ್ತಲೂ ಇರುವುದು ಕಂಡುಬರುತ್ತದೆ. ಈ ದೋಷಕ್ಕೆ ಷಡಕ್ಷರಿಯೊಬ್ಬನಲ್ಲದೆ, ಪಂಪನ ತರುವಾಯ ಬಂದ ಬಹುತರ ಎಲ್ಲ ಚಂಪೂಕಾರರೂ ಕೊಂಚ ಮಟ್ಟಿಗೆ ಗುರಿಯಾಗಿದ್ದಾರೆ. ಇಷ್ಟಾದರೂ ಬಹು ಜನರು ಆತನ ಲೋಕಪ್ರಿಯ ಕಾವ್ಯವಾದ ರಾಜಶೇಖರ ವಿಳಾಸವನ್ನು ಓದುವರು; ಅದರ ರಸಾಸ್ವಾದನೆಯನ್ನು ಮಾಡಿ, ಮೈಮರೆಯುವರು. ಎಚ್ಚತ್ತಮೇಲೆ, ಷಡಕ್ಷರಿಯು ನಿಜವಾಗಿಯೂ ಮಹಾಕವಿಯೆಂದು ಶ್ಲಾಘಿಸುವರು. ಇದಲ್ಲದೆ

ಷಡಕ್ಷರ ದೇವನಿಗೆ ಭಾರತೀಯ ತತ್ವಶಾಸ್ತ್ರದಲ್ಲಿಯೂ ಕೂಡ ಉತ್ತಮ ಸ್ಥಾನ ಸಲ್ಲಿಸಬೇಕು. ಆದರೆ ಅನೇಕರು ಅವನ ಹೃದಯವನ್ನು ಸರಿಯಾಗಿ ತಿಳಿದಿಲ್ಲ. ಅವನ ವಿಷಯದಲ್ಲಿ ಹಲಕೆಲವು ತಪ್ಪುಭಾವನೆಗಳನ್ನಿಟ್ಟುಕೊಂಡಿದ್ದಾರೆ. ಒಳಹೊಕ್ಕು ನೋಡಿ, ಅವನ ನಿಜವಾದ ಯೋಗ್ಯತೆಯನ್ನು ಅರಿತುಕೊಳ್ಳುವುದು ಅವಶ್ಯ.

ಷಡಕ್ಷರದೇವನು ಈಗ್ಗೆ ಸುಮಾರು ೨೫೦ ವರ್ಷಗಳ ಹಿಂದೆ ಬಾಳಿದನು. ಕವಿಚರಿತೆಕಾರರು ಈತನ ಕಾಲವು ಕ್ರಿ. ಶ. ೧೬೫೫ ಎಂದು ಊಹಿಸಿದ್ದಾರೆ. ಸಾಹಿತ್ಯಚೂತವನ್ನು ಚೈತ್ರಮಾಸದಂತೆ ಪೋಷಿಸಲು ಸದಾ ಉತ್ಸುಕನಾಗಿದ್ದ ಕವಿ-ಕಾವ್ಯಪಕ್ಷಪಾತಿಯಾದ ಚಿಕದೇವರಾಯನ ಆಳಿಕೆಯಲ್ಲಿ ಕವಿ ಜೀವಿಸಬಹುದು. ಚಿಕದೇವರಾಯನ ಆಸ್ಥಾನದ ಕವಿಗಳ ಕೂಡ ಸ್ಪರ್ಧೆ ಮಾಡುತ್ತಿದ್ದನೆಂದು ಹೇಳುವ ಆಖ್ಯಾಯಿಕೆಗಳೂ ಉಂಟು. ಅಂತೂ ಕವಿಯ ಕಾಲವನ್ನು ನಾವು ಹದಿನೇಳನೆಯ ಶತಮಾನದ ಉತ್ತರಾರ್ಧವೆಂದು ಇಟ್ಟುಕೊಳ್ಳೋಣ. ಸರಿಯಾದ ಕಾಲನಿರ್ಣಯ ಕೆಲಸವನ್ನು ಸಂಶೋಧಕರ ಪಾಲಿಗೆ ಬಿಡುವುದು ಒಳಿತು.

ಕವಿಯು ಹುಟ್ಟಿದ್ದು ಮೈಸೂರು ಜಿಲ್ಲೆಯಲ್ಲಿ ಮಳವಳ್ಳಿ ತಾಲೂಕಿನ ದನಗೂರು. ಎಳಂದೂರಿನಲ್ಲಿ ವಾಸಮಾಡಿದನು. ದನಗೂರಿನ ಚಿಕ್ಕವೀರದೇಶಿಕರೆಂಬ ಗುರುಗಳ ಶಿಷ್ಯನಾಗಿ ಕಲಿತು “ಶಿಷ್ಯಾದಿಚ್ಛೇತ್ ಪರಾಜಯಮ್” ಎಂಬಂತೆ ಗುರುವನ್ನು ಮೀರಿಸಿದನು. ತನ್ನ ಗುರುವಿನ ವಿಷಯಕ್ಕೆ ಬಹಳ ಗೌರವ ಬುದ್ಧಿಯನ್ನಿಟ್ಟುಕೊಂಡಿದ್ದರಿಂದ ಆತನನ್ನು ರಾಜಶೇಖರ ವಿಲಾಸದ ಪೀಠಿಕಾ ಸಂಧಿಯಲ್ಲಿ ಹೀಗೆ ಹೊಗಳಿದ್ದಾನೆ.

> ಯತಿತತಿ ಚಕ್ರವರ್ತಿರುಚಿರಾಮಳಮೂರ್ತಿವಿಶಾಲಕೀರ್ತಿಸಂ ।
> ರಿತಹರಿದಂತನುಜ್ವಳಗುಣಾವಳಿಕಾಂತ ನಶೀವಶಾಂತನಾ ॥
> ಶ್ರಿತಜನರಕ್ಷನನ್ವಿತಜಿತಾಕ್ಷನಮೋಘಕೃಪಾಕಟಾಕ್ಷನೂ ।
> ರ್ಜಿತ ಚಿಕವೀರದೇಶಿಕಶಿಖಾಮಣಿ ಮಾಳ್ಕೆಮಗಿಷ್ಟಸಿದ್ಧಿಯಂ ॥

ಷಡಕ್ಷರಿಯು ನೈಷ್ಠಿಕಬ್ರಹ್ಮಚಾರಿಯಾಗಿ ಮಠಾಧಿಪತಿಯಾಗಿ ಬಹು ಮೇಲಾದ ಬಾಳು ಬಾಳಿದನು. ಪ್ರಖ್ಯಾತಪಂಡಿತನಾಗಿ ರಾಜಸನ್ಮಾನಿತನಾಗಿ ಕೀರ್ತಿಗಳಿಸಿದನು. ಇವನು ಯಾವ ಅರಸನ ಆಸ್ಥಾನದಲ್ಲಿಯೂ ಇದ್ದಂತೆ ಕಂಡುಬರುವುದಿಲ್ಲ. ಇವನ ಗ್ರಂಥಗಳಲ್ಲಿ ಅರಸರ ಬಗೆಗೆ ಉಲ್ಲೇಖಗಳು ಸಿಗದಿರುವುದೇ ಈ ಊಹೆಗೆ ಬಲವಾದ ಸಾಕ್ಷಿಯಾಗಿದೆ. ವೇದ,

ಆಗಮ, ಶಾಸ್ತ್ರ ತರ್ಕ ವಾದ ಇವುಗಳಲ್ಲಿ ಇವನಿಗೆ ಅದ್ಭುತಪಾಂಡಿತ್ಯ. ಭಾಷೆ ಇವನಿಗೆ ಸಂಪೂರ್ಣವಶವಾಗಿದೆ. ಇಂಥ ಭಾಷಾಪ್ರಭುತ್ವ ಬಹಳ ವಿರಳ. ಈ ದೃಷ್ಟಿಯಲ್ಲಿ ಷಡಕ್ಷರಿಯನ್ನು ನಾವು ಕನ್ನಡ ಭವಭೂತಿಯೆಂದೇ ಸಂಬೋಧಿಸಬಹುದು. ಬೇರೆ ಯಾರೂ ಉಪಯೋಗಿಸಿದ ಅನೇಕ ಅಪೂರ್ವ ವೃತ್ತಗಳನ್ನು ಇವನ ಗ್ರಂಥಗಳಲ್ಲಿ ಕಾಣಬಹುದು. ವರ್ಣನೆ, ಸಂವಾದ, ಕಥೆ, ಸ್ತೋತ್ರ, ಎಲ್ಲದರಲ್ಲಿಯೂ ಇವನ ಪ್ರತಿಭೆ ಅಮೋಘವಾಗಿದೆ.

ಷಡಕ್ಷರಿಯು ಹುಟ್ಟುಕವಿ. ಕವಿತಾಶಕ್ತಿಯು ಅವನಿಗೆ ಆಜನ್ಮದಿಂದಲೇ ಬಂದಿತ್ತು. ತನ್ನ ಶಬರಶಂಕರ ವಿಳಾಸದ ಕೊನೆಯಲ್ಲಿ ಕವಿತಾತರುಣಿಯು ತನಗೆ ಆಶ್ರಯವನ್ನೀವ ಮತ್ತೊಬ್ಬರನ್ನು ಕಾಣದೆ, ಷಡಕ್ಷರದೇವನನ್ನು ಅವನ ಹನ್ನೊಂದನೆಯ ವಯಸ್ಸಿನಲ್ಲಿಯೇ ವರಿಸಿದಳೆಂದೂ, ರಾಜಶೇಖರ ವಿಳಾಸದಲ್ಲಿ ಎಳವರೆಯದೊಳು ಅಖಿಳ ಕಳಾವಿಳಾಸಮಂ ಕಂಡು, ಕವಿತಾಕೋಮಳೆಯು ನೆಚ್ಚಿ ಬರಲು ತಾನು, ಅವಳಿಗೆ ಎದೆಯಿತ್ತಂತೆಯೂ ಹೇಳಿಕೊಂಡಿರುವ ಹೆಚ್ಚಳವನ್ನು ನೋಡಿದರೆ, ಆತನಿಗೆ ಪೂರ್ವಜನ್ಮಸಿದ್ಧವಾದ, ಕವಿತಾಶಕ್ತಿಯ ಜೊತೆಗೆ, ದೇವತಾಪ್ರಸಾದಲಬ್ಧವಾದ ಪ್ರತಿಭೆಯೂ ಸೇರಿ, ಆತನ ಕಾವ್ಯಗಳನ್ನು ರೂಪುಗೊಳಿಸಿತೆಂದು ಹೇಳಬಹುದು. ಆತನಲ್ಲಿ ನಿರಂಕೃತಿ, ನಿರ್ಮಲಬುದ್ಧಿ, ಶುದ್ಧವರ್ತನೆ, ಶಿವಯೋಗ, ಆಗಮವಿಚಾರತೆ, ಸದ್ಗುರುಭಕ್ತಿ, ಶೈವಕಾವ್ಯಪುರಾಣ, ತರ್ಕ, ಷಟ್‌ಸ್ಥಲ, ಶಾಸ್ತ್ರಸಾರದರ್ಶನ ಇವುಗಳು ನಿಸರ್ಗವಾಗಿ ನೆಲಸಿದ್ದವೆಂದು ಬುಧರು ಆತನನ್ನು ಹೀಗೆ ಹೊಗಳಿರುವರು.

ನಿನಗೆ ನಿಸರ್ಗವುಕ್ತಿ ನಿರಹಂಕೃತಿ ನಿರ್ಮಲಬುದ್ಧಿ ಶುದ್ಧವ ।
ರ್ತನೆ ಶಿವಯೋಗವಾಗಮವಿಚಾರತೆ ಸದ್ಗುರುಭಕ್ತಿ ಶೈವಕಾ ॥
ವ್ಯನಿವಹ ಸತ್ಪುರಾಣತತಿ ತರ್ಕಸಮಂಚಿತ ಷಟ್‌ಸ್ಥಲಾಂತಕಾ ।
ಸ್ತ್ರನಿಚಯ ಸಾರದರ್ಶನ ವಿಳಾಸಪತಿಪೂಜಿತ ಪಾದಪಂಕಜಾ ॥

ಷಡಕ್ಷರಿಯು ಕನ್ನಡದಲ್ಲಿ ಬರೆದಿರುವ ಮೂರು ಚಂಪೂಗ್ರಂಥಗಳ ನಡುವೆ ರಾಜಶೇಖರವಿಳಾಸವನ್ನೇ ಮೊದಲು ಬರೆದನೆಂಬುದು ಶಬರಶಂಕರವಿಳಾಸದ ಕೊನೆಯ ಪದ್ಯದಿಂದ ನಮಗೆ ಗೊತ್ತಾಗುತ್ತದೆ ಇವನು ರಾಜಶೇಖರ ವಿಳಾಸ, ವೃಷಭೇಂದ್ರವಿಜಯ, ಶಬರಶಂಕರವಿಳಾಸ, ಎಂಬ ಮೂರು ಕನ್ನಡ ಕಾವ್ಯಗಳನ್ನೂ ಕವಿಕರ್ಣರಸಾಯನ, ಶಿವಸ್ತವಮಂಜರಿ,

ಎಂಬ ಎರಡು ಸಂಸ್ಕೃತಕಾವ್ಯಗಳನ್ನೂ, ಬಸವೇಶ್ವರ ಮೊದಲಾದ ಮಹಾತ್ಮರ ಮತ್ತು ತನ್ನ ಇಷ್ಟದೇವತೆಯ ಭಕ್ತಿಗೀತಗಳನ್ನೂ, ಶಿವಾಧಿಕ್ಯ, ಭಕ್ತಾಧಿಕ್ಯ ಎಂಬ ಎರಡು ಶಾಸ್ತ್ರಗ್ರಂಥಗಳನ್ನೂ ಹೀಗೆ ಒಟ್ಟು ಅನೇಕ ಗ್ರಂಥಗಳನ್ನು ಕನ್ನಡ ಸಂಸ್ಕೃತ ಭಾಷೆಗಳಲ್ಲಿ ರಚಿಸಿದ್ದಾನೆ. ಈ ಮೊದಲೇ ಹೇಳಿದಂತೆ ಶಬರಶಂಕರ ವಿಳಾಸವು ಪ್ರಬುದ್ಧವಯಸ್ಸಿನಲ್ಲಿ ಬರೆದದ್ದು. ರಾಜಶೇಖರ ವಿಳಾಸ ಮೊದಲಾದವುಗಳನ್ನು ತನ್ನ ಪಾಂಡಿತ್ಯವನ್ನು ಮೆರಸಿ ಕೀರ್ತಿಸಂಪಾದಿಸುವುದಕ್ಕೆ ಬರೆದನು. ವೃಷಭೇಂದ್ರವಿಜಯ ಅಥವಾ ಬಸವರಾಜ ವಿಜಯ ಎಂಬುದು ಅವನಿಟ್ಟ ಹೆಸರು. ಮನಸ್ಸು ಹಣ್ಣಾಗಿ ಜೀವನ ಪರಿಪಕ್ವವಾದಾಗ ಬರೆದದ್ದು. ಷಡಕ್ಷರಿಯು ಪಟ್ಟಾಧಿಕಾರಿಯಾಗಿದ್ದರೂ, ಬಸವೇಶ್ವರನನ್ನು ಕುರಿತು ಈ ಕಾವ್ಯದಲ್ಲಿ ಅನನ್ಯಭಾವದಿಂದ ಭಕ್ತಿಪರವಶನಾಗಿ ಹಾಡಿದ್ದಾನೆ. ಇದರಲ್ಲಿ ಕಥೆ ಹೆಚ್ಚು, ವರ್ಣನೆ ಕಡಿಮೆ. ಭಕ್ತಿ ಉಕ್ಕುತ್ತಿದೆ. ಪ್ರೌಢವಾಗಿದ್ದರೂ ತಿಳಿಯಾಗಿದೆ. ಮೊದಲು ಈತನ ಗ್ರಂಥಗಳಲ್ಲಿ ಕಂಡು ಬರುವ ಸಾಮಾನ್ಯ ಲಕ್ಷಣಗಳಲ್ಲಿ ಕೆಲವನ್ನು ನಾವು ಗ್ರಹಿಸಬೇಕಾಗಿದೆ.

ರಸವತ್ಕವಿತಾ ಶಕ್ತಿಯನ್ನು ಪಡೆದು, ಭವಹರನಾದ ಹರನನ್ನಲ್ಲದೆ ಉಳಿದ ಸುರರನ್ನೂ, ನರರನ್ನೂ ನುತಿಸನು "ಮಾನಿಸರಂ ಸುರರಂ ಪೊಗಳ್ವುದು ಕಸವರಮಂ ಕಳೆವು ಕಸವನಾಂತವೊಲಕ್ಕುಂ" ಎಂದು ತಾನೇ ಹೇಳಿದ್ದಾನೆ. ಅದರಂತೆ ರಾಜಶೇಖರವಿಳಾಸದಲ್ಲಿ ಶಿವಭಕ್ತಶ್ರೇಷ್ಠನಾದ ರಾಜಶೇಖರ ಚರಿತ್ರೆಯನ್ನೂ, ವೃಷಭೇಂದ್ರವಿಜಯದಲ್ಲಿ ಭಕ್ತಿಭಾಂಡಾರಿಯಾದ ಬಸವ, ಚೆನ್ನಬಸವ ಮುಂತಾದವರ ಮತ್ತು ಅರವತ್ತುಮೂರು ಶೈವಪುರಾತನರ ಮಹಿಮೆಯನ್ನೂ, ಶಬರಶಂಕರವಿಳಾಸದಲ್ಲಿ ಭಕ್ತ ವೀರನಾದ ಅರ್ಜುನನ ಕತೆಯನ್ನೂ ವರ್ಣಿಸಿರುತ್ತಾನೆ.

ಷಡಕ್ಷರದೇವನ ದೃಷ್ಟಿ ಬಹುಸೂಕ್ಷ್ಮ. ಪ್ರಕೃತಿಯನ್ನು ನಾನಾಭಾಗಗಳಲ್ಲಿ ಬಹು ಸೂಕ್ಷ್ಮವಾಗಿ ವಿಮರ್ಶಿಸಿನೋಡಿದ್ದಾನೆ. ಇವನಂತೆ ಇಷ್ಟು ವಿವಿಧರೀತಿಯಲ್ಲಿ ಹೊಸಹೊಸದಾಗಿ ಪ್ರಕೃತಿವರ್ಣನೆ, ಮಾಡುವ ಬೇರೊಬ್ಬ ಕನ್ನಡ ಕವಿಯಿಲ್ಲವೆಂದೇ ನನ್ನ ಭಾವನೆ. ಇವನು ಹರಿಹರನ' ವ್ಯದು ಮಧುರವಾದ ಉದಾತ್ತಮಾರ್ಗ'ದಲ್ಲಿ ಹೊರಟವನು. ಈತನು" ಸಕ್ಕದ ಗಬ್ಬಮಂ ಮಿಸುಪ ಕನ್ನಡ ಗಬ್ಬಮನೊಲ್ದು ಕೋವಿ

ಪರ್ ಚಿಕ್ಕಸಮುಣ್ಮ್ರವಂತೆ' ಪೊಗಳುತ್ತಿರೆ ಮೊಕ್ಕಳವಾಗಿ ಸರ್ವರಸಮೊಪ್ಪುವಂತ" ಕಾವ್ಯಗಳನ್ನು ರಚಿಸಿದೆನೆಂದು ಹೇಳುತ್ತಾನೆ. ಷಡಕ್ಷರದೇವನಿಗೆ ತನ್ನ ಕೃತಿಯು 'ವಿತತಪುರಾತನ ಕವಿಕೃತಕೃತಿ ಭೂಷಣ ಭೂಷಿತಾಂಗಿ" ಆಗಬೇಕೆಂದು ಹಂಬಲ. ವಿಳಸಿತಪದಮುವನರ್ಥಮುನ ಸಂಸ್ಕೃತಪ್ರಹಿತ ಪ್ರಭಾವದಿಂದೊಡಗೂಡಿದ ತನ್ನ ಕಾವ್ಯಗಳಿಂದ ರಸಿಕರನ್ನು ಒಲಿಸಿ, ಸಂತಸದ ಸಾಗರದಲ್ಲಿ ತೇಲಾಡಿಸಿ ರಂಜಿಸಿದ್ದಾನೆ. ಕಾವ್ಯಮಾಧುರ್ಯ, ನಾದಮಾಧುರ್ಯ, ಇವನ ಕಾವ್ಯಗಳಲ್ಲಿ ವಿಶೇಷವಾಗಿ ತೋರಿಬರುತ್ತದೆ. ಇದು ಇವನ ವೈಶಿಷ್ಟ್ಯವೆಂದೇ ಹೇಳಬಹುದು. ಪ್ರೌಢವರ್ಣನೆಯಲ್ಲಿ ಇವನನ್ನು ಮೀರಿಸುವವರು ವಿರಳ. ಕರುಣ ರಸವನ್ನು ಚಿತ್ರಿಸುವುದರಲ್ಲಿ, ಭಕ್ತಿಪರವಶತೆಯಲ್ಲಿ ಇವನು ರನ್ನ ರಾಘವಾಂಕ, ಹರೀಶ್ವರ ಮತ್ತು ನಾರಣಪ್ಪ, ಇವರ ಪಂಕ್ತಿಗೆ ಸೇರತಕ್ಕವನು. ಇದರ ಜೊತೆಗೆ ಅರ್ಥಾಲಂಕಾರ, ಶಬ್ದಾಲಂಕಾರ ಮಾತಿನ ಚಮತ್ಕಾರ ಇವನ ಗ್ರಂಥಗಳಲ್ಲಿ ಬೇಕಾದಷ್ಟು ಸಿಕ್ಕುತ್ತವೆ. ನೀತಿ ಪದ್ಯಗಳೂ ಹೇರಳವಾಗಿವೆ. ಇವನ ಮಾತು ಬಹು ಅಚ್ಚುಕಟ್ಟು. ಅಲಂಕಾರಪ್ರಿಯ. ಕಾವ್ಯಗಳನ್ನು ನೋಡಿದರೆ ಇವನು ರಸಿಕಶಿಖಾಮಣಿಯಾಗಿದ್ದನೆಂದು ತೋರುತ್ತದೆ. ಇವನಿಗೆ ಶೃಂಗಾರದಲ್ಲಿ ಒಲವು ಹೆಚ್ಚು. ಆದರೆ ಈ ಶೃಂಗಾರ ಸಾಮಾನ್ಯ ರೀತಿಯದಲ್ಲ. ಒಳ್ಳೆಯ ರಾಜಶೃಂಗಾರ. ಆ ಕಾಲದ ಜನರ ಮನೋಭಾವಕ್ಕೆ ತಕ್ಕಂತೆ ಕಾವ್ಯರಚನೆ ಮಾಡಿದ್ದಾನೆ. ಬರೆದ ಕಾಲ ಮತ್ತು ಆಗಿನ ಕಾಲದ ಜನರ ಮನೋಭಾವನೆಗಳನ್ನು ಗಣನೆಗೆ ತೆಗೆದುಕೊಳ್ಳದೆ, ಇಂದಿನ ಹೊಸ ದೃಷ್ಟಿಯಿಂದ ಆತನ ಕಾವ್ಯಗಳನ್ನು ವಿಮರ್ಶಿಸುವುದು ಕವಿಗೆ ದ್ರೋಹ ಬಗೆದಂತಾಗುವುದು. ಅದು ವಿಮರ್ಶೆಯಲ್ಲ. ವಿಮರ್ಶೆಯ ಆಭಾಸ ಮಾತ್ರ. ಕವಿಯ ಕಾವ್ಯಗಳನ್ನು ಸಹಾನುಭೂತಿಯಿಂದ ನೋಡಿದರೆ, ಕವಿಯ ಹೃದಯವರಿತು ಓದಿದರೆ, ಸ್ವಾರಸ್ಯ ತಿಳಿದು ಆನಂದ ದೊರೆಯುವುದರಲ್ಲಿ ತಿಲಮಾತ್ರ ಸಂದೇಹವಿಲ್ಲ.

ಷಡಕ್ಷರದೇವನ ಗ್ರಂಥಗಳಿಂದ ಕೆಲವು ಭಾಗಗಳನ್ನು ಓದಿದರೆ, ಆ ಭಾಗಗಳನ್ನು ವಿಮರ್ಶಿಸಿ ನೋಡಿದರೆ, ನಾವು ಮೇಲೆ ಹೇಳಿದ ಮಾತಿಗೆ ನಿದರ್ಶನ ದೊರಕಬಹುದು. ಇಂಥ ಮಾನ್ಯಕವಿಯ ಗ್ರಂಥಗಳನ್ನು ವೀರಶೈವರಿಗೆ ಮಾತ್ರ ಸೇರಿದ್ದೆಂದು ಬಿಟ್ಟುಬಿಡದೆ, ಎಲ್ಲ ಕನ್ನಡಿಗರೂ ಓದಿ ಆನಂದಿಸಬೇಕು. ಕವಿಯ ಸ್ಥೂಲ ಪರಿಚಯವನ್ನು ಮಾಡಿಕೊಡುವ ಈ

ಪುಟ್ಟಪ್ರಬಂಧವನ್ನು ಓದುವುದರಿಂದ ಷಡಕ್ಷರ ದೇವನ ಎಲ್ಲ ಕಾವ್ಯಗಳನ್ನೂ ಓದಬೇಕೆಂಬ ಕುತೂಹಲವು ಓದುಗರಲ್ಲಿ ಕೊಂಚವುಟ್ಟಿಗಾದರೂ ಹುಟ್ಟಿದರೆ, ಲೇಖಕನ ಉದ್ದೇಶವು ಸಾರ್ಥಕವಾದಂತಾಗುವುದು.

---

# ಬಸವೇಶ್ವರನ ಚರಿತ್ರೆ.

(ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ, ಎ, ಎಲ್, ಎಲ್, ಬಿ. ವಿಜಾಪುರ)

ಲೇಖಾಂಕಃ-

## ನಾಗಲಾಂಬಿಕೆಯ ಪತಿಯ ಗ್ರಾಮವು ಇಂಗುಳೇಶ್ವರವು

ನಾವು ಹಿಂದಿನ ಲೇಖದಲ್ಲಿ ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆಯು ವಿವಾಹಿತಳಾಗಿದ್ದಳೆಂದೂ ಅವಳು ಬಸವೇಶ್ವರನ ಕೂಡ ಸಂಗಮ ಕ್ಷೇತ್ರಕ್ಕೆ ಹೋಗುವ ಪೂರ್ವದಲ್ಲಿಯೇ ಅವಳಿಗೆ ಚನ್ನಬಸವೇಶ್ವರನು ಜನಿಸಿದ್ದನೆಂದೂ ಅವಳ ಗಂಡನ ಹೆಸರು ಸಿಂಗಿರಾಜ ಪುರಾಣದಲ್ಲಿ ಹೇಳಿದಂತೆ ಶಿವಸ್ವಾಮಿ ಎಂದಿರಬಹುದೆಂತಲೂ ನಿವರಿಸಿದೆವು. ಈಕೆಯು ಗಂಡನ ಮನೆಯು ಬಹುಶಃ ಬಾಗೇವಾಡಿ ಅಥವಾ ಅದಕ್ಕೆ ಸಮೀಪವರ್ತಿಯಾದ ಆವುದಾದರೂ ತಾಲೂಕಿನಲ್ಲಿರುವದು ಸಂಭವನೀಯವು. ಆದ್ದರಿಂದ ಈ ಭಾಗದಲ್ಲಿ ನಾಗಲಾಂಬಿಕೆಯ ಗುರುತುಗಳೇನಾದರೂ ಸಿಕ್ಕಬಹುದೋ ಹೇಗೆ ಎಂಬುದನ್ನು ನಾವು ಶೋಧಿಸುತ್ತಿರುವಲ್ಲಿ ಆಕೆಯ ಹೆಸರಿನ ಒಂದು ಪುಣ್ಯಸ್ಥಳವು ಬಾಗೇವಾಡಿ ಗ್ರಾಮದಿಂದ ೬ ಮೈಲು ದೂರ ಇರುವ ಇಂಗುಳೇಶ್ವರದಲ್ಲಿಯೇ ದೊರೆಯುತ್ತದೆಂಬುದು ಕಂಡು ಬಂದಿರುತ್ತದೆ. ಈ ಸ್ಥಳದಲ್ಲಿ ಆಕೆಯ ಹೆಸರಿನ ಒಂದು ಗುಹೆಯು ಇದ್ದು ಅದನ್ನು "ಅಕ್ಕನಾಗವ್ವನ ಗವಿ" ಎಂದು ಆ ಗ್ರಾಮದ ಜನರು ಈಗಲೂ ಕರೆಯುತ್ತಾರೆ. ಅಲ್ಲಿ ಒಂದು ಹೆಣ್ಣು ಮೂರ್ತಿ ಇದ್ದು ಅದು ಅಕ್ಕನಾಗಮ್ಮ ಎಂದು ಈಗಲೂ ಪೂಜಿಸಲ್ಪಡುತ್ತಿದೆ. ಭಾವಿಕ ಜನರು ಪುಣ್ಯ ಪುರುಷರ ಸ್ಥಾನಗಳಿಗೆ ಯಾರ ಹೆಸರನ್ನಿಟ್ಟು ಪೂಜಿಸುತ್ತಾರೋ

ಆ ಸ್ಥಾನಗಳು ಅವರವೇ ಎಂದು ನಾವು ನಂಬಲಿಕ್ಕೆ ಏನೂ ಅಡ್ಡಿ ಇಲ್ಲ. ಪುರಾತನ ಪದ್ಧತಿಗಳನ್ನು ಬಹು ಜನಸಮಾಜವು ಎಂದೂ ಬದಲಿಸುವದಿಲ್ಲ. ಕೆಲವೊಂದು ಕಾಲದಲ್ಲಿ ಪರಮತೀಯರು ಪುಣ್ಯ ಕ್ಷೇತ್ರಗಳನ್ನೂ ದೇವಾಲಯದೊಳಗಿನ ಮೂರ್ತಿಗಳನ್ನೂ ನಾಶಮಾಡಿದ್ದು ಕಂಡು ಬಂದಿರುತ್ತದೆ. ಆದರೆ ಇಂಥವರ ಉಪಟಳವು ದೂರವಾದ ಕೂಡಲೆ ಆ ದೇವಾಲಯಗಳು ಪುನಃ ಕಟ್ಟಲ್ಪಟ್ಟಿರುತ್ತವೆ. ಮತ್ತು ಆ ದೇವರ ಹೆಸರುಗಳೇ ಅಲ್ಲಿ ಪುನಃ ತಲೆದೋರುತ್ತವೆ. ಇದು ಇಡೀ ಹಿಂದುಸ್ತಾನದಲ್ಲೆಲ್ಲ ತೋರಿಬರುತ್ತದೆ. ಆದ್ದರಿಂದ ಕ್ಷೇತ್ರಗಳಲ್ಲಿ ಕಂಡು ಬರುವ ಸಂಗತಿಗಳು ಪುರಾತನ ಇತಿಹಾಸದ ಮೇಲೆ ಬಹಳ ಮಹತ್ವದ ಪ್ರಕಾಶವನ್ನು ಕೆಡಹುತ್ತವೆ ಕೀರ್ತನಕೇಸರಿ ಬಿ. ಶಿವಮೂರ್ತಿ ಶಾಸ್ತ್ರಿಗಳು ಶಿವಾನುಭವ ಸಂಪುಟ ೯ ಸಂಚಿಕೆ ೪ ಪುಟ ೨೭೮ ಇದರಲ್ಲಿ ಇಂಗಳೇಶ್ವರ ಗ್ರಾಮವನ್ನು ಸಂದರ್ಶಿಸಿ ಅದರ ವಿಸ್ತೃತ ವರ್ಣನೆಯನ್ನು ಮಾಡಿದ್ದಾರೆ. ಅದರಲ್ಲಿ ನಾಗಮ್ಮನ ವಿಷಯವಾಗಿ ಅವರು ಹೇಳಿದ್ದೇನೆಂದರೆ:—

"ಅಕ್ಕನಾಗಮ್ಮನ ಗವಿ:— ಇದೇ ಗುಡ್ಡದಲ್ಲಿ ಈ ಗವಿಯಿದೆ. ಬಸವೇಶ್ವರನ ಅಕ್ಕನಾದ ಈ ನಾಗಲಾಂಬಿಕೆಯು ಒಳ್ಳೇ ಯೋಗಿನಿ ಎಂದು ತೋರುತ್ತದೆ. ಕಲ್ಯಾಣ ಪಟ್ಟಣದಲ್ಲಿ ಸಹ ಇವಳ ಅತಿ ಭವ್ಯವಾದ ಒಂದು ಗವಿ ಇದೆ. ಈ ರೇವಣಸಿದ್ಧನ ಗುಡ್ಡದ ಗವಿಯಲ್ಲಿ ಈಕೆಯ ಗವಿ ಇದೆ. ಈ ಗವಿಯಲ್ಲಿ ೪೦—೫೦ ಗಜ ಒಳಗೆ ಹೋದರೆ ಅಲ್ಲಿ ಒಂದು ಶಿವಲಿಂಗದ ಪೀಠವೂ ಒಡೆದುಹೋದ ಅಕ್ಕನಾಗಮ್ಮನ ಮೂರ್ತಿಯೂ ಕಾಣುತ್ತಲಿವೆ. ಇಲ್ಲಿನ ಲಿಂಗವಂತರು ಹೊಸದಾಗಿ ಒಂದು ಕಲ್ಲಿನಿಂದ ಅಕ್ಕನಾಗಮ್ಮನ ಮೂರ್ತಿಯನ್ನು ಮಾಡಿಸಿ ಪೂಜಿಸುತ್ತಾರೆ ಈ ಗವಿಯ ಪ್ರವೇಶವೂ ರೇವಣಗವಿಯ ಪ್ರವೇಶದಂತೆಯೇ ಶ್ರಮಸಾಧ್ಯವಾಗಿದೆ" ಎಂದು ಇದರಲ್ಲಿ ಹೇಳಿದ್ದಾರೆ.

ನಾಗಲಾಂಬಿಕೆಯ ಜನ್ಮಸ್ಥಳವಾದ ಬಾಗೇವಾಡಿಯಲ್ಲಿ ನಾಗಮ್ಮನ ಸ್ಥಾನಗಳು ಎಲ್ಲಿಯೂ ಇರುವದಿಲ್ಲ. ಆಗ ಅವಳು ಚಿಕ್ಕವಳಿದ್ದದರಿಂದ ಮತ್ತು ಚಿಕ್ಕಂದಿನಲ್ಲಿಯೇ ಆಕೆಯ ಲಗ್ನವಾದದ್ದರಿಂದ ಅಲ್ಲಿ ಆಕೆಯ ಕುರುಹುಗಳಿರಲಿಕ್ಕಿಲ್ಲ. ಆದರೆ ಆಕೆಯು ಲಗ್ನವಾದ ಮೇಲೆ ತನ್ನ ಪತಿ ಗೃಹದಲ್ಲಿ ಧಾರ್ಮಿಕ ಭಾವವು ಆಕೆಯಲ್ಲಿ ತಲೆದೋರಲು ಅಲ್ಲಿಯ ಜನ

ತಲ್ಲಿ ಅವಳು ಶರಣೆ ಎಂದೆನಿಸಿಕೊಂಡು ಪ್ರಸಿದ್ಧಳಾಗಿರಬೇಕು. ಆದ್ದರಿಂದ ಆಕೆಯ ಹೆಸರಿನಿಂದ ಅಲ್ಲಿಯವರು ಒಂದು ಮೂರ್ತಿಯನ್ನು ಮಾಡಿ ಪೂಜಿಸುವರಾದರೆಂಬ ಅನುಮಾನವು ಉಂಟಾಗುತ್ತದೆ. ಮತ್ತು ಈ ಗವಿಯಲ್ಲಿಯೂ ಆಕೆಯು ಕೆಲಕಾಲವಿರಬಹುದು. ಆದ್ದರಿಂದ ಇಂಗುಳೇಶ್ವರದಲ್ಲಿ ನಾಗಲಾಂಬಿಕೆಯು ಇದ್ದು ಅದು ಆಕೆಯ ಗಂಡನ ಊರಾಗಿರಬೇಕು. ಬಾಗೇವಾಡಿ ಗ್ರಾಮವು ಇಲ್ಲಿಂದ ಬಹು ಸಮೀಪವಿದೆ. ಇಲ್ಲಿ ವೀರಶೈವ ಧರ್ಮವನ್ನು ಪರಿಪಾಲಿಸುತ್ತಿದ್ದ ತನ್ನ ಸಹೋದರರಾದ ಬಸವ ಮತ್ತು ಬಸವನ ಅಣ್ಣ ದೇವರಾಜ ಇವರ ಧಾರ್ಮಿಕ ಪ್ರಭಾವವು ಈಕೆಯ ಮೇಲೂ ಉಂಟಾಗಿ ಅವಳೂ ಅವಳ ಗಂಡನಾದ ಶಿವಸ್ವಾಮಿಯೂ ವೀರಶೈವ ಧರ್ಮವನ್ನು ಅನುಸರಿಸುವವರಾಗಿರಬಹುದು. ಮುಂದೆ ಬಸವೇಶ್ವರನು ತನ್ನ ಗ್ರಾಮದಿಂದ ಹೊರಗೆ ಹಾಕಲ್ಪಡಲು ಅವನೊಡನೆ ಇವರೂ ಕೂಡ ಸಂಗಮಕ್ಕೆ ಹೋಗಲು ಸಿದ್ಧರಾಗಿರಬೇಕು. ಈ ಪ್ರಕಾರ ಅನುಮಾನಗಳುಂಟಾಗುತ್ತವೆ. ನಾಗಮ್ಮನು ಇಂಗುಳೇಶ್ವರದಲ್ಲಿ ಪೂಜಿಸಲ್ಪಡಬೇಕಾದರೆ ಅವಳು ಪ್ರಬುದ್ಧಳಾಗಿ ಜನರಲ್ಲಿ ಖ್ಯಾತಿತಿಯನ್ನು ಹೊಂದಿ ಈ ಗ್ರಾಮದಲ್ಲಿ ಇದ್ದಿರಲಿಕ್ಕೆ ಬೇಕು. ಇದು ಆಕೆಯ ಪತಿಗೃಹದಲ್ಲಿಯೇ ಸಂಭವನೀಯವು. ಆದರೆ ಅವಳು ತೀರ ಚಿಕ್ಕವಳಿರುವಾಗ ಈ ಘಟನೆಗಳು ಉಂಟಾಗುವ ಸಂಭವವಿಲ್ಲ. ಆದ್ದರಿಂದ ಆಕೆಯ ಕುರುಹುಗಳು ಬಾಗೇವಾಡಿಯಲ್ಲಿಲ್ಲ. ಹರಿಹರನು ಹೇಳುವಂತೆ ಬಸವನು ೧೬ನೆಯ ವರ್ಷದಲ್ಲಿ ಪಿತೃಗೃಹವನ್ನು ತ್ಯಜಿಸಿದ್ದರಿಂದ ನಾಗಲಾಂಬಿಕೆಗೆ ಆಗ ೨೦—೨೨ ವರ್ಷಗಳಾಗಿರಬೇಕು. ಆ ವರೆಗೂ ಅವಳು ಇಂಗುಳೇಶ್ವರದಲ್ಲಿದ್ದುಕೊಂಡು ತನ್ನ ಉಚ್ಚ ವರ್ತನೆಯಿಂದ ಪೂಜ್ಯತೆಯನ್ನು ಹೊಂದಿರಬೇಕು. ಅಷ್ಟರಲ್ಲಿ ಬಸವನು ಸ್ವಗ್ರಾಮವನ್ನು ತ್ಯಜಿಸಲು ನಾಗಲಾಂಬಿಕೆಯೂ ಕೂಡ ಅವನೊಡನೆ ಸಂಗಮಕ್ಕೆ ಹೊರಡಲು ಸಿದ್ಧಳಾದಳೆಂದು ತೋರುತ್ತದೆ

ನಾಗಲಾಂಬಿಕೆಯ ಕುರುಹುಗಳು ಜತ್ತಸಂಸ್ಥಾನದಲ್ಲಿ ಬಾಲೇಗಾವ ಎಂಬಲ್ಲಿ, ಕಲ್ಯಾಣದಲ್ಲಿ, ಮತ್ತು ಉಳವಿಯಲ್ಲಿ ಹೀಗೆ ಇರುತ್ತವೆ. ಕಲ್ಯಾಣದಲ್ಲಿ ಮತ್ತು ಉಳವಿಯಲ್ಲಿ ಆಕೆಯ ಹೆಸರಿನ ಗವಿಗಳಿರುತ್ತವೆ. ನಾಗಲಾಂಬಿಕೆಯು ಈ ಸ್ಥಳಗಳಲ್ಲಿ ವಾಸವಾಗಿರಬಹುದು. ಬಸವನೊಡನೆ ಕಲ್ಯಾಣಕ್ಕೆ ಅವಳು ಹೋದದ್ದರಿಂದ ಅಲ್ಲಿ ಆಕೆಯ ಹೆಸರಿನ ಈ

ಗವಿಯು ಇರಬಹುದು. ಮುಂದೆ ಅವಳು ಚನ್ನಬಸವನೊಡನೆ ಉಳಿವಿಗೆ ಹೋದದ್ದು ಗ್ರಂಥಗಳಲ್ಲಿ ಉಪಲಬ್ಧವಿದೆ. ಆದ್ದರಿಂದ ಉಳಿವಿಯಲ್ಲಿಯೂ ಆಕೆಯ ಹೆಸರಿನ ಗವಿಯು ಇದೆ. ಆದರೆ ಅವಳು ಇಲ್ಲಿ ಇದ್ದದ್ದು ಆಕೆಯ ಲಗ್ನವಾದ ಬಳಿಕ ಎಂಬುದು ಸ್ಪಷ್ಟವದೆ. ಆದರೆ ವಿಜಾಪುರ ಜಿಲ್ಲೆಯಲ್ಲಿ ಆಕೆಯ ಹೆಸರಿನ ಸ್ಥಳಗಳನ್ನು ಶೋಧಿಸುವದು ಮಹತ್ವವಾದದ್ದು. ಇವು ಈಗ ಎರಡು ಮಾತ್ರ ನಮಗೆ ಉಪಲಬ್ಧವಿರುತ್ತವೆ. ಒಂದು ಜತ್ತ ಸಂಸ್ಥಾನದಲ್ಲಿರುವ ಬಾಲೇಗಾವ ಎಂಬ ಗ್ರಾಮದಲ್ಲಿ ಇನ್ನೊಂದು ಇಂಗಳೇಶ್ವರದಲ್ಲಿ. ಬಾಲೇಗಾವ ಗ್ರಾಮದಲ್ಲಿ ಆಕೆಯ ಹೆಸರಿನ ಒಂದು ದೇವಾಲಯವಿದೆ. ಆದರೆ ದೇವಾಲಯಗಳು ಪ್ರಸಿದ್ಧ ಪುರುಷರು ತೀರಿ ತರುವಾಯ ಅವರ ಹೆಸರಿನಿಂದ ಅವರ ಭಕ್ತರು ಸ್ಥಾಪಿಸುವದುಂಟು. ಆದ್ದರಿಂದ ಬಾಲೇಗಾವ ಇದು ನಾಗಲಾಂಬಿಕೆಯ ಗಂಡನಾದ ಶಿವಸ್ವಾಮಿಯ ಮೂಲ ಗ್ರಾಮವಾಗಿರಲಿಕ್ಕಿಲ್ಲ. ಆದರೆ ಇಂಗಳೇಶ್ವರದಲ್ಲಿಯ ಸ್ಥಾನವು ಒಂದು ಗುಹೆಯಾಗಿರುತ್ತದೆ. ಇಲ್ಲಿ ನಾಗಲಾಂಬಿಕೆಯು ಇದ್ದದರಿಂದಲೇ ಆಕೆಯ ಹೆಸರು ಅದಕ್ಕೆ ಬಿದ್ದಿರುತ್ತದೆ. ಅಲ್ಲಿ ಕೆಲವು ವರ್ಷವಾದರೂ ಅವಳು ವಾಸವಾಗಿದ್ದರಿಂದ ಶಿವಸ್ವಾಮಿಯ ಮೂಲ ಗ್ರಾಮವು ಇಂಗಳೇಶ್ವರವೇ ಆಗಿರಬೇಕು.

## ಬಸವನ ಬಾಲ್ಯ ಮತ್ತು ವಿದ್ಯಾಭ್ಯಾಸ

ಮಹಾಪುರುಷರ ಬಾಲ್ಯಸ್ಥಿತಿಯನ್ನು ನಿರೀಕ್ಷಿಸಿ ಆಗ ಅವರ ಮನಸ್ಸಿನ ಮೇಲೆ ಯಾವ ಯಾವ ಸಂಗತಿಗಳು ಯಾವ ಯಾವ ತೆರದ ಪರಿಣಾಮಗಳನ್ನುಂಟು ಮಾಡಿದವೆಂಬುದನ್ನು ಕಂಡು ಹಿಡಿಯುವದು ಬಹು ಮಹತ್ವದ ವಿಷಯವಾಗಿದೆ. ಬಸವನು ನಡುಪ್ರಾಯದಲ್ಲಿ ಅಂದರೆ ೩೬ನೆಯ ವರ್ಷದಲ್ಲಿಯೇ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿ ಇಹಲೋಕಯಾತ್ರೆಯನ್ನು ಮುಗಿಸಿದ್ದಾನೆ. ಇಂಥವನಿಗೆ ಅವನ ಪೂರ್ವವಯಸ್ಸಿನಲ್ಲಿಯೇ ಅನೇಕ ಮಹತ್ವದ ಘಟನೆಗಳುಂಟಾಗಿರಬೇಕೆಂಬ ಅನುಮಾನವು ಉಂಟಾಗುತ್ತದೆ. ಆದರೆ ಅವುಗಳಾವವೆಂಬುದನ್ನು ತಿಳಿಯುವಷ್ಟು ಸಾಕಷ್ಟು ಸಾಮಗ್ರಿಗಳು ನಮಗೆ ಇನ್ನೂ ಉಪಲಬ್ಧವಾಗಿಲ್ಲೆಂಬುದು ಬಹು ವಿಷಾದಕರವಾಗಿರುತ್ತದೆ. ಆದರೂ ಈ ವರೆಗೆ ದೊರೆತಷ್ಟು ಸಂಗತಿಗಳ ಮೇಲಿಂದ ಕೆಲವು ಅನುಮಾನಗಳನ್ನು ಮಾಡಬಹುದಾಗಿದೆ. ಅವುಗಳನ್ನು ನಾವು ವಾಚಕರೆದುರಿಗೆ ಇಡಲು ಪ್ರಯತ್ನಿಸುತ್ತೇವೆ.

ಬಸವನು ಪೂರ್ಣ ವಿದ್ವತ್ತೆಯುಳ್ಳವನೂ ಬಹುಶ್ರುತನೂ ಆಗಿದ್ದನೆಂಬುದು ಅವನ ವಚನಗಳಿಂದ ಗೊತ್ತಾಗುತ್ತದೆ. ಅವನು ತನ್ನ ವಚನಗಳಲ್ಲಿ ಅನೇಕ ಧಾರ್ಮಿಕ ಗ್ರಂಥಗಳಿಂದ ಅನೇಕ ಅವತರಣಿಕೆಗಳನ್ನು ತೆಗೆದುಕೊಂಡಿದ್ದರ ಮೇಲಿಂದ ಇದನ್ನು ನಾವು ಕಂಡು ಹಿಡಿಯಬಹುದಾಗಿದೆ. ಹರಿಹರನ ಅಭಿಪ್ರಾಯದ ಪ್ರಕಾರ ಅವನು ವಾಸವಾಗಿದ್ದ ಬಾಗವಾಡಿ ಗ್ರಾಮವು ಅಗ್ರಹಾರವೆಂದೆನಿಸಿಕೊಂಡಿತ್ತು. ಬಹುಜನ ವಿದ್ವಾಂಸರು ವಾಸವಾಗಿದ್ದ ಗ್ರಾಮಕ್ಕೆ ಅಗ್ರಹಾರವೆಂದು ಕರೆಯುವ ಸಂಪ್ರದಾಯವು ಬಹು ಕಾಲದಿಂದಲೂ ಕರ್ನಾಟಕದಲ್ಲಿ ರೂಢವಾಗಿತ್ತು. ಇಂಥ ಗ್ರಾಮದಲ್ಲಿ ಯಾವಾಗಲೂ ಶಾಸ್ತ್ರಗಳ ಮತ್ತು ವೇದವೇದಾಂತಗಳ ಅಭ್ಯಾಸವು ಆ ಕಾಲದಲ್ಲಿ ನಡೆಯುತ್ತಿತ್ತು. ಬಸವನ ತಂದೆಯು ಇಂಥ ಗ್ರಾಮದ ಒಬ್ಬ ಮುಖ್ಯಾಧಿಕಾರಿಯಾಗಿದ್ದನು. ಇಂಥಲ್ಲಿ ಧಾರ್ಮಿಕ ಗ್ರಂಥಗಳ ಅಭ್ಯಾಸಕ್ಕೆ ಅನುಕೂಲತೆಗಳಿದ್ದು ಅವುಗಳನ್ನು ಬಸವನೂ ಅವನ ಅಣ್ಣನಾದ ದೇವರಾಜನೂ ಚನ್ನಾಗಿ ಉಪಯೋಗಮಾಡಿಕೊಂಡು ಪಾಂಡಿತ್ಯವನ್ನು ಸಂಪಾದಿಸಿದವರಾಗಿದ್ದರೆಂದು ತಿಳಿಯಲು ಯಾವ ಆತಂಕವೂ ಇರಲಾರದು. ಬಸವನು ಹರಿಹರನ ಅಭಿಪ್ರಾಯದ ಪ್ರಕಾರ ತನ್ನ ೧೬ ನೇ ವರ್ಷದ ವಯಸ್ಸಿನವನಾಗುವ ವರೆಗೆ ಸ್ವಗ್ರಾಮದಲ್ಲಿ ಇದ್ದದರಿಂದ ಆ ವರೆಗೆ ಅವನು ಧರ್ಮ ಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರಲಿಕ್ಕೆ ಬೇಕು. ಬಸವೇಶ್ವರನ ವಚನಗಳಲ್ಲಿ ದೊರಕುವ ಅನೇಕ ಸಂಸ್ಕೃತ ಅವತರಣಿಕೆಗಳ ಮೇಲಿಂದ ಇದು ದೃಢಪಡುತ್ತದೆ. ಅವನು ತನ್ನ ಒಂದು ವಚನದಲ್ಲಿ ನಾನು ಕಾಳಿದಾಸನವ, ನಾನು ಬಾಣನವ, ಮಯೂರನವ ಎಂದು ಹೇಳಿಕೊಳ್ಳುತ್ತಾನೆ. ಇದರಿಂದ ಅವನು ಈ ಮಹಾಕವಿಗಳು ರಚಿಸಿದ ಗ್ರಂಥಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರಲಿಕ್ಕೆ ಬೇಕು. ಅವನ ಮಹೇಶ್ವರಸ್ಥಲದ ವಚನಗಳನ್ನು ವಾಚಕರು ಚೆನ್ನಾಗಿ ಪರೀಕ್ಷಿಸಬೇಕು. ಅವುಗಳಿಂದ ಅವನ ವಿದ್ಯಾವ್ಯಾಸಂಗವು ಎಷ್ಟು ವಿಸ್ತೃತವಾಗಿತ್ತೆಂಬುದು ಚನ್ನಾಗಿ ತಿಳಿದು ಬರುವಂತಿದೆ. ಅದರಲ್ಲಿ ಪರಮಾತ್ಮನ ಸ್ವರೂಪವನ್ನು ವರ್ಣಿಸುವ ಅನೇಕ ವಚನಗಳಿವೆ. ಅವು ವೇದ ಮತ್ತು ಉಪನಿಷತ್ತುಗಳಲ್ಲಿ ಕಂಡು ಬರುವ ಮಹತ್ವದ ಉಕ್ತಿಗಳ ಭಾಷಾಂತರಗಳಾಗಿರಬೇಕೆಂದು ನಮಗೆ ಭಾಸವಾಗುತ್ತದೆ. ದೇವರು ಒಬ್ಬನೇ ಇದ್ದಾನೆ ಮತ್ತು ಅವನು ಸರ್ವವ್ಯಾಪಿಯು

ಎಂಬ ವಿಚಾರಗಳು ಉಪನಿಷದ್ಗ್ರಂಥಗಳಲ್ಲಿ ಆಗಿಂದಾಗ್ಗೆ ಬರುತ್ತವೆ. ಬಸವನ ವಚನಗಳಲ್ಲಿ ಪರಮಾತ್ಮನನ್ನು ವರ್ಣಿಸುವ ಇಂಥ ಕೆಲವು ಉಕ್ತಿಗಳು ಋಗ್ವೇದದಲ್ಲಿಯೂ, ಬೇರೆ ಕೆಲವುಗಳು ಸಾಮವೇದ ಮತ್ತು ಅಥರ್ವಣ ವೇದದಲ್ಲಿಯವೂ ಇರುತ್ತವೆ. ವಿಸ್ತಾರಭಯಕ್ಕಾಗಿ ಅವುಗಳನ್ನೆಲ್ಲ ನಾವು ಇಲ್ಲಿ ಉದಹರಿಸಿಲ್ಲ. ಹಾಗೆಯೇ ಜಾತಿಭೇದವನ್ನು ಖಂಡಿಸುವ ಕೆಲವು ಉಕ್ತಿಗಳು ಇದ್ದು ಅವು ಭಗವದ್ಗೀತೆಯಲ್ಲಿಯವುಗಳನ್ನು ಹೋಲುತ್ತವೆ. ಅವುಗಳು ಆ ಗ್ರಂಥದೊಳಗಿನ ಪದ್ಯಗಳ ಭಾಷಾಂತರಗಳೆಂದೇ ಹೇಳಬಹುದಾಗಿದೆ. ಆಗಮ ಗ್ರಂಥಗಳಲ್ಲಿಯ ಉಕ್ತಿಗಳೂ ಅವನ ವಚನಗಳಲ್ಲಿ ಆಗಿಂದಾಗ್ಗೆ ದೊರಕುತ್ತವೆ ಹಾಗೆಯೇ ಷಟ್ಶಾಸ್ತ್ರಗಳಲ್ಲಿ ಸಮಾವೇಶವಾಗುವ ನ್ಯಾಯ, ವೈಶೇಷಿಕ, ಸ್ಮೃತ್ಯಾದಿ ಗ್ರಂಥಗಳಲ್ಲಿ ಪ್ರತಿಪಾದಿಸಲ್ಪಡುವ ಕರ್ಮಮಾರ್ಗ ಇವುಗಳನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಖಂಡಿಸಿದ್ದುಂಟು. ಆದ್ದರಿಂದ ಅವುಗಳ ಜ್ಞಾನವನ್ನು ಬಸವೇಶ್ವರನು ಮಾಡಿಕೊಂಡಿರಬೇಕು. ೧೮ ಪುರಾಣಗಳಲ್ಲಿ ಮಹತ್ವವಾದವುಗಳಾದ ಲಿಂಗ ಪುರಾಣ, ವಿಷ್ಣುಪುರಾಣ, ಸ್ಕಂದ ಪುರಾಣ ಇವುಗಳಲ್ಲಿಯ ಅವತರಣಿಕೆಗಳೂ ಕೂಡ ಅವನ ವಚನಗಳಲ್ಲಿ ಆಗಿಂದಾಗ್ಗೆ ಬರುವದುಂಟು. ಈ ಎಲ್ಲ ಸಂಗತಿಗಳ ಮೇಲಿಂದ ಬಸವೇಶ್ವರನು ಹಿಂದೂ ಧರ್ಮದಲ್ಲಿ ಮುಖ್ಯವೆನಿಸಿಕೊಂಡ ಧರ್ಮಗ್ರಂಥಗಳನ್ನು ಚೆನ್ನಾಗಿ ಅಭ್ಯಾಸಿಸಿ ಅವುಗಳ ಮರ್ಮವನ್ನು ಅರಿತವನಾಗಿದ್ದನೆಂದು ನಾವು ನಂಬಬೇಕಾಗುತ್ತದೆ. ಅನೇಕರು ಬಸವೇಶ್ವರನು ಪಂಡಿತನಾಗಿರಲ್ಲಿಲ್ಲ. ಅವನಿಗೆ ಸಂಸ್ಕೃತಜ್ಞಾನವೂ ಕೂಡ ಇರಲಿಲ್ಲ. ಅವನು ಕೇವಲ ಭಕ್ತಿಮಾರ್ಗದವನು ಎಂದು ಬಹಿರಂಗವಾಗಿ ಪ್ರತಿಪಾದಿಸುತ್ತಿರುವುದು ಕಂಡುಬರುತ್ತದೆ. ಆದರೆ ಅವರ ಅಭಿಪ್ರಾಯಗಳು ತಪ್ಪಾದವುಗಳೆಂದು ನಮಗೆ ತೋರುತ್ತದೆ. ಬಸವನು ಹೀಗೆ ಕೇವಲ ಸಂಸ್ಕೃತ ಧರ್ಮಗ್ರಂಥಗಳನ್ನಷ್ಟೇ ಅಲ್ಲ, ತಮಿಳು ದೇಶದಲ್ಲಿ ಆಗಿಹೋದ ಪುರಾತನರು ಪ್ರತಿಪಾದಿಸುತ್ತಿದ್ದ ತತ್ವಗಳನ್ನೂ ಕೂಡ ಚೆನ್ನಾಗಿ ಅಭ್ಯಾಸ ಮಾಡಿದವನಾದ್ದನೆಂದು ನಮಗೆ ತೋರುತ್ತದೆ. ಈ ಪುರಾತನರ ವಿಷಯವಾಗಿ ಬಸವನು ಅತ್ಯಂತ ಪೂಜ್ಯಭಾವವನ್ನು ವಹಿಸಿದವನಾಗಿದ್ದನೆಂಬುದು ಅರ್ಜುನವಾಡ ಶಿಲಾಶಾಸನ ಮತ್ತು ಅವನ ಉಕ್ತಿಗಳಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ೧೦೦೦ ವರ್ಷಗಳ ಹಿಂದೆ ಕರ್ನಾಟಕಕ್ಕೂ ತಮಿಳು ದೇಶಕ್ಕೂ ಅತ್ಯಂತ ನಿಕಟಸಂಬಂಧವಿತ್ತು. ಕರ್ನಾಟಕ ರಾಜರು ಚೋಳರಾಜರ

ಮೇಲೆ ಮತ್ತು ಚೋಳ ರಾಜರು ಕರ್ನಾಟಕದ ಮೇಲೆ ೧೧, ೧೨ನೇ ಶತಮಾನದಲ್ಲಿ ಆಗಿಂದಾಗ್ಗೆ ದಂಡೆತ್ತಿ ಹೋಗುತ್ತಿದ್ದದ್ದು ಕಂಡು ಬರುತ್ತದೆ. ಹೀಗೆ ಉಭಯ ನಾಡುಗಳಲ್ಲಿ ನಿಕಟಸಂಬಂಧವಿದ್ದದರಿಂದ ತಮಿಳು ದೇಶದ ಮತ್ತು ಕರ್ನಾಟಕದ ಶಿವಶರಣರಲ್ಲಿ ಪರಸ್ಪರತೆಯು ಹೆಚ್ಚಾಗಿ ಉಂಟಾಗಿರಬೇಕೆಂಬುದು ತೋರಿಬರುತ್ತದೆ. ಇದಕ್ಕೆ ರೇವಣಸಿದ್ಧ, ಚೆನ್ನಯ್ಯ ಇವರ ಚರಿತ್ರೆಗಳೇ ಉದಾಹರಣೆಯಾಗಿವೆ. ಈ ಎಲ್ಲ ಸಂಗತಿಗಳನ್ನು ನಾವು ವಿಚಾರಮಾಡಿದಲ್ಲಿ ಬಸವೇಶ್ವರನು ದ್ರಾವಿಡ ಮತ್ತು ಸಂಸ್ಕೃತ ಭಾಷೆಗಳಲ್ಲಿರುವ ಧರ್ಮಗ್ರಂಥಗಳನ್ನು ಚೆನ್ನಾಗಿ ಪರಿಶೀಲನೆ ಮಾಡಿದವನಾಗಿರಬೇಕೆಂದು ನಾವು ನಿರ್ವಿವಾದವಾಗಿ ಊಹಿಸಬಹುದಾಗಿದೆ.

ಬಸವನ ಬಾಲ್ಯದಲ್ಲಿ ಒದಗಿದ ಕೆಲವು ಪವಾಡಗಳು ವೀರಶೈವ ಪುರಾಣ ಗ್ರಂಥಗಳಲ್ಲಿ ಹೇಳಲ್ಪಡುತ್ತವೆ. ಅವುಗಳ ಸತ್ಯಾಸತ್ಯತೆಯನ್ನು ಕುರಿತು ವಿವೇಚಿಸುವ ಅವಶ್ಯಕತೆಯು ನಮಗೆ ಇರುವದಿಲ್ಲ. ಇಂಥ ಅದ್ಭುತ ಸಂಗತಿಗಳು ಕೂಡಲಸಂಗಮೇಶ್ವರನಲ್ಲಿ ಬಸವನ ಭಕ್ತಿ ಭಾವವು ಎಷ್ಟು ಘನತರವಾಗಿದ್ದಿತೆಂಬುದನ್ನು ಮಾತ್ರ ತೋರಿಸುತ್ತವೆಯೇ ಹೊರತು ಅವು ಅವನ ಜೀವಿತದಲ್ಲಿ ಒದಗಿದ ಘಟನೆಗಳ ಮೇಲೆ ಐತಿಹಾಸಿಕ ಪ್ರಕಾಶವನ್ನು ಕೆಡಹುವದಿಲ್ಲ. ಆದ್ದರಿಂದ ಅವುಗಳನ್ನು ಕುರಿತು ನಾವು ಇಲ್ಲಿ ಹೆಚ್ಚಿಗೆ ಉಲ್ಲೇಖಿಸಿರುವದಿಲ್ಲ.

ಬಸವನ ಸಹಾಧ್ಯಾಯಿಗಳು ಆರಾರಿದ್ದರೆಂಬುದನ್ನು ಹೇಳಲಿಕ್ಕೆ ನಮಗೆ ಸಾಕಷ್ಟು ಆಧಾರಗ್ರಂಥಗಳು ದೊರೆಯುವದಿಲ್ಲ. ಆದರೆ ಅವನ ಅಕ್ಕನಾದ ನಾಗಲಾಂಬಿಕೆ ಮತ್ತು ಅಣ್ಣನಾದ ದೇವರಾಜ ಈ ಉಭಯತರು ಮಾತ್ರ ಕುಶಲಮತಿಗಳಾಗಿ ಬಸವನಂತೆಯೇ ಧರ್ಮಗ್ರಂಥಗಳನ್ನು ಪರಿಶೀಲಿಸಿರಬೇಕೆಂದು ಊಹಿಸಲು ಅವ ಪ್ರತ್ಯವಾಯವಿರುವದಿಲ್ಲ. ಈ ಉಭಯತರು ಬಸವನಂತೆಯೇ ಮತಾಭಿಪ್ರಾಯವುಳ್ಳವರಾದ್ದರಿಂದಲೇ ಊರ ಜನರು ಬಸವನನ್ನು ಊರಿಂದ ಹೊರಗೆ ಹಾಕಿದಾಗ ಅವರೂ ಅವನೊಡನೆ ದೇಶತ್ಯಾಗಮಾಡಲು ಸಿದ್ಧರಾಗಿರಬೇಕು. ನಾಗಲಾಂಬಿಕೆಯು ತನ್ನ ಚಿಕ್ಕ ಮಗು ಚೆನ್ನಬಸವನನ್ನು ತೆಗೆದುಕೊಂಡು ಬಸವನೊಡನೆ ಕೂಡಲಸಂಗಮಕ್ಕೆ ತೆರಳಿದಳು. ಆದರೆ ಅಣ್ಣನಾದ

ದೇವರಾಜನು ಈ ಸ್ಥಳಕ್ಕೆ ಹೋಗದೆ ಬೇರೊಂದು ಗ್ರಾಮಕ್ಕೆ ಅಂದರೆ ಬಹುಶಃ ಕವಿಳಾಸಪುರ (ಅರ್ಜುನವಾಡ) ಕ್ಕೆ ಹೋಗಿರಬಹುವೆಂದು ತೋರುತ್ತದೆ.

ಬಸವನ ಬಾಲ್ಯದಲ್ಲಿ ಮೇಲೆ ಹೇಳಿದ ಸಂಗತಿಗಳು ಘಟಿಸಿರಬಹುದೆಂಬುದನ್ನು ನಿರೂಪಿಸಿ ನಾವು ಮುಂದಿನ ಲೇಖದಲ್ಲಿ ನಾಡಿನ ಆಗಿನ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಕುರಿತು ನಿರೂಪಿಸುವೆವು.

(ಮುಂದುವರಿಯುವದು.)

---

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ। ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲೆಲ್. ಬಿ. ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ತಮ್ಮ ೧೬೨ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

R N B. 2554

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬] ಮಾರ್ಚ. ೧೯೪೨. [ಸಂಚಿಕೆ ೬

## ವಿಷಯಾನುಕ್ರಮಣಿಕೆ.

# ಶಿವಾನುಭವ.

ವರ್ಷ ೧೬ | ಮಾರ್ಚ ೧೯೪೨. | ಸಂಚಿಕೆ ೬

## ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ)

[ ಲೇಖಾಂಕ ೭ ]

ಹಿಂದುಸ್ಥಾನ ದೇಶದಲ್ಲಿ ಯಾವನಾದರೊಬ್ಬನು ವಿಶೇಷತರದ ಮಹತ್ಕೃತ್ಯಗಳನ್ನು ಮಾಡಲು ಅವನು ದೇವಾಂಶ ಸಂಭೂತನೆಂಬ ತಿಳುವಳಿಕೆಯು ಜನರಲ್ಲಿ ಕೂಡಲೆ ಉಂಟಾಗಿ ಅವನ ವಿಷಯವಾಗಿ ಅನೇಕ ಪವಾಡಗಳೂ ಆಖ್ಯಾಯಿಕೆಗಳೂ ಹೊರಡಹತ್ತುತ್ತವೆ. ಇದರಿಂದ ಅವನ ನಿಜವಾದ ಚರಿತ್ರೆಯು ಗೊತ್ತಾಗದೆ ಹೋಗುತ್ತದೆ. ಅವನು ತೀರಿಕೊಂಡು ನೂರು ಇನ್ನೂರು ವರ್ಷಗಳಾದ ಬಳಿಕಂತೂ ಅವನ ವಿಷಯವಾಗಿ ಪುರಾಣಗಳು ಮಾತ್ರ ಉಳಿದುಬಿಡುತ್ತವೆ. ಇದರಿಂದ ಹಿಂದೂ ಧರ್ಮದ ಮತ್ತು ಸಮಾಜದ ಪ್ರಗತಿಯ ಇತಿಹಾಸವು ಗೊತ್ತಾಗದೆ ಹೋಗಿರುತ್ತದೆ. ಮಹಾಪುರುಷರು ಶೂರಪುರುಷರೇ ಇರಲಿ, ಅಥವಾ ಧಾರ್ಮಿಕ ಪುರುಷರೇ ಇರಲಿ, ಅವರ ಚರಿತ್ರೆಗಳು ಯಾವಾಗಲೂ ಉದ್ಬೋಧಕವಾಗಿರುತ್ತವೆ. ಅವರು ಕೈಕೊಂಡ ಕಾರ್ಯಗಳಲ್ಲಿ ಯಾವ ಯಾವ ತೊಂದರೆಗಳುದ್ಭವಿಸಿದವು, ಅವುಗಳನ್ನು ಅವರು ಹೇಗೆ ದೂರ ಮಾಡಿಕೊಂಡರು, ಅವರು ಯಾವ ಕಷ್ಟಗಳನ್ನು ಅನುಭವಿಸಿದರು ಎಂಬ

ವುಗಳ ವಿವರಣೆಗಳನ್ನು ಜನರು ಅರಿತಲ್ಲಿ ಅವರಿಗೆ ಅವು ಮಾರ್ಗದರ್ಶಕವಾಗದೆ ಇರವು. ಬಸವೇಶ್ವರನ ಚರಿತ್ರೆಯಾದರೂ ಹೀಗೆಯೇ ಉದ್ಬೋಧಕವಾಗಿರುತ್ತದೆ. ಆದರೆ ವೀರಶೈವ ಸಮಾಜದ ದುರ್ದೈವದಿಂದ ಅದು ತಿಳಿಯದೆ ಹೋಗಿದ್ದರಿಂದ ಬಸವೇಶ್ವರನು ನಮಗೆ ಕೇವಲ ಪವಾಡ ಪುರುಷನಾಗಿ ಉಳಿದಿದ್ದಾನೆ. ಅವನು ಜನಿಸಿದಾಗ ಕರ್ನಾಟಕದ ಸಾಂಸ್ಕೃತಿಕ ಮತ್ತು ಧಾರ್ಮಿಕ ಪರಿಸ್ಥಿತಿಯು ಒಂದು ವಿಲಕ್ಷಣ ಸ್ವರೂಪವನ್ನು ಹೊಂದಿದ್ದರಿಂದಲೇ ಅದರ ಪರಿಣಾಮವಾಗಿ ಬಸವೇಶ್ವರನು ಉದ್ಭವಿಸಿದನು ಮತ್ತು ಅವನ ಕಡೆಯಿಂದ ಮಹತ್ವದ ಕ್ರಾಂತಿಯು ಇಲ್ಲಿ ಉಂಟಾಯಿತು. ಬಸವೇಶ್ವರನೂ ಆವನ ಸಂಗಡಿಗರಾದ ಶಿವಶರಣರೂ ತಮಗೊದಗಿದ ವಿರುದ್ಧ ಪರಿಸ್ಥಿತಿಯನ್ನು ಬಹು ಜಾಣತನದಿಂದ ಹೇಗೆ ಎದುರಿಸಿದರು ಎಂಬುದರ ನಿಜಾಂಶವನ್ನು ಕರ್ನಾಟಕಸ್ಥರು ಅರಿಯುವದು ಬಹು ಅವಶ್ಯವಾಗಿದೆ

ಬಸವೇಶ್ವರನು ಜನಿಸಿದ ಕಾಲದಲ್ಲಿ ಕರ್ನಾಟಕದಲ್ಲಿ ಧಾರ್ಮಿಕ ಮತ್ತು ಸಾಮಾಜಿಕ ಅವನತಿಯು ಪ್ರಾಪ್ತವಾಗಿತ್ತೆಂತಲೂ ಇತರ ಧರ್ಮಾನುಯಾಯಿಗಳಿಂದ ಅದಕ್ಕೆ ಆಘಾತಗಳುಂಟಾಗಿದ್ದವೆಂತಲೂ ಅವುಗಳನ್ನು ದೂರ ಮಾಡುವದಕ್ಕೋಸ್ಕರ ಬಸವೇಶ್ವರನು ಅವತರಿಸಿದನೆಂತಲೂ ಅವನ ಪುರಾಣಗಳಲ್ಲಿ ಯುಕ್ತವಾಗಲೂ ಹೇಳಲ್ಪಡುತ್ತದೆ. ಈ ವಿಧಾನಗಳಲ್ಲಿ ಎಷ್ಟರಮಟ್ಟಿಗೆ ಸತ್ಯತೆಯು ಇದೆ ಎಂಬುದನ್ನು ಚರ್ಚಿಸುವದು ನಮ್ಮ ಈಗಿನ ಲೇಖದ ಮುಖ್ಯ ಉದ್ದೇಶವಾಗಿರುತ್ತದೆ.

ಈ ವಿಷಯವನ್ನು ನಾವು ವಿವೇಚಿಸುವಲ್ಲಿ ೧೧ನೇ ೧೨ನೇ ಮತ್ತು ೧೩ನೇ ಶತಮಾನಗಳು ಕರ್ನಾಟಕದ ಸಾಹಿತ್ಯ ಮತ್ತು ರಾಜಕೀಯ ಇತಿಹಾಸದಲ್ಲಿ ಬಹು ಮಹತ್ವವಾದವುಗಳೆಂಬದನ್ನು ನಾವು ಲಕ್ಷ್ಯದಲ್ಲಿಡಬೇಕಾಗುತ್ತದೆ. ಈ ಕಾಲದಲ್ಲಿ ಕರ್ನಾಟಕದ ಶಿಲ್ಪಶಾಸ್ತ್ರಜ್ಞರೂ ಸಂಸ್ಕೃತ ಮತ್ತು ಕನ್ನಡ ವಾಙ್ಮಯ ವಿಶಾರದರೂ ಅಸಂಖ್ಯಾತರಾಗಿ ಉದ್ಭವಿಸಿ ಕನ್ನಡನಾಡಿಗೆ ಅತ್ಯಂತ ಘನತೆಯನ್ನು ತಂದಿದ್ದಾರೆಂಬುದು ಕರ್ನಾಟಕದ ಇತಿಹಾಸದಿಂದ ತಿಳಿದುಬರುತ್ತದೆ. ಇದೇ ಕಾಲದಲ್ಲಿಯೇ ವಿಕ್ರಮಾದಿತ್ಯ, ವಿಷ್ಣುವರ್ಧನ ಮೊದಲಾದ ಸಾರ್ವಭೌಮರು ಉಗಮಿಸಿದ್ದರಿಂದ ಹಿಂದುಸ್ಥಾನದ ಇತಿಹಾಸದಲ್ಲಿ ಕರ್ನಾಟಕಕ್ಕೆ ಮಹತ್ವದ ಸ್ಥಾನವು

ಪ್ರಾಪ್ತವಾಗಿರುತ್ತದೆ. ಹಾಗೆಯೇ ಅನೇಕ ಶೈವ ವೈಷ್ಣವ ಜೈನ ಗ್ರಂಥಕಾರರು ಉದಯಿಸಿದ್ದಾರೆ. ಅವನತಿಯನ್ನು ಹೊಂದಿದ ಸಮಾಜಗಳನ್ನು ಎಚ್ಚರಿಸಿದವನು ಮಹಾಪುರುಷನೆಂದು ಹೇಳುವುದರಲ್ಲಿ ಆವ ಅಭ್ಯಂತರವಿಲ್ಲ. ಆದರೆ ಆಗಲೇ ಉಚ್ಚತರಗತಿಯನ್ನು ಹೊಂದಿದ ಸಮಾಜಗಳನ್ನು ತನ್ನ ಮತಕ್ಕೆ ಎಳೆಸುಕೊಳ್ಳುವದಲ್ಲದೆ, ಅವನತಸ್ಥಿತಿಯನ್ನು ಹೊಂದಿದ ಬೇರೆ ಸಮಾಜಗಳಲ್ಲಿ ಸಹ ಉಚ್ಚವಿಚಾರಗಳನ್ನು ಹುಟ್ಟಿಸುವ ಕಾರ್ಯ ಮಾಡಿದವನ ಪ್ರಯತ್ನಗಳು ಹೆಚ್ಚು ಕಠಿಣವಾದವುಗಳೂ ಸ್ತೋತ್ರಾರ್ಹವಾದವೂ ಇರುತ್ತವೆಂಬುದು ನಿರ್ವಿವಾದವಾದದ್ದು. ಈ ತರದ ಕಾರ್ಯವನ್ನು ಬಸವೇಶ್ವರನು ಮಾಡಿದನೆಂದು ನಮ್ಮ ಅಭಿಪ್ರಾಯವಿದೆ ಈ ಕಾಲದಲ್ಲಿ ಕರ್ನಾಟಕದಲ್ಲಿ ಬ್ರಾಹ್ಮಣ, ಜೈನ, ಕಾಳಾಮುಖ, ಪಾಶುಪತ, ಶೈವ ಮುಂತಾದ ಧರ್ಮಗಳು ಅತಿ ಪ್ರಬಲ ಸ್ಥಿತಿಯನ್ನು ಹೊಂದಿದ್ದವು. ಅವುಗಳಲ್ಲಿ ವಿದ್ವಾಂಸರು ಉತ್ಪನ್ನರಾಗಿದ್ದರು. ಅವುಗಳಿಗೆ ರಾಜಾಶ್ರಯವು ಸಹ ಇತ್ತು. ಆದರೂ ಕೂಡ ಬಸವೇಶ್ವರನು ಅವರನ್ನೆಲ್ಲ ತನ್ನ ವೀರಶೈವ ಸಿದ್ಧಾಂತಕ್ಕೆ ಎಳೆದದ್ದಲ್ಲದೆ, ಇಡೀ ಕರ್ನಾಟಕ ಜನಾಂಗದಲ್ಲೆಲ್ಲ ಎಚ್ಚರಿಕೆ ಮತ್ತು ಉದಾರ ಭಾವವನ್ನು ಬೀರಿದನು. ಈ ಕಾರ್ಯವು ಕಡಿಮೆ ತರದ್ದಲ್ಲ. ಬೌದ್ಧ, ಜೈನ, ಶೀಖ, ಮತಗಳು ಹಿಂದೂ ಸಮಾಜವು ಅತ್ಯಂತ ಖಿಲವಾಗಿದ್ದ ಕಾಲದಲ್ಲಿ ಉದ್ಭವಿಸಿದವು. ಮತ್ತು ಮತಪ್ರಸಾರ ಕಾರ್ಯವನ್ನು ಮಾಡಿದವು. ಆದರೆ ಬಸವೇಶ್ವರನ ಕಾಲದಲ್ಲಿ ಉಚ್ಚಧರ್ಮಗಳಿದ್ದವು, ನಾಗರಿಕತೆ ಇತ್ತು. ಆದರೂ ಕೂಡ ವೀರಶೈವ ಧರ್ಮವು ಅಂಥ ಸಮಾಜಗಳಲ್ಲಿ ಪ್ರಾಬಲ್ಯವನ್ನು ಹೊಂದಿ ಕರ್ನಾಟಕದ ಎಲ್ಲ ಸಮಾಜಗಳಲ್ಲಿ ಮಹತ್ವದ ಪ್ರಕಾಶವನ್ನು ಕೆಡವಿತು. ಶಿವಶರಣರು ಮತ್ತು ಬಸವೇಶ್ವರನು ಮಾಡಿದ ಧಾರ್ಮಿಕ ಕ್ರಾಂತಿಯಲ್ಲಿ ಈ ಬಗೆಯ ಒಂದು ವೈಶಿಷ್ಟ್ಯವು ತೋರಿಬರುತ್ತದೆ. ಇದು ಕೆಳಗಿನ ವಿವರಣೆಗಳಿಂದ ವಾಚಕರಿಗೆ ತೋರಿಬರುವದೆಂದು ಭಾವಿಸುತ್ತೇವೆ.

### (೧) ವೈದಿಕ ಮತಗಳು.

ಕರ್ನಾಟಕದಲ್ಲಿ ಮೊದಲಿನಿಂದಲೂ ವೈದಿಕ ಧರ್ಮವು ಪ್ರಬಲ ಸ್ಥಿತಿಯನ್ನು ಹೊಂದಿತ್ತೆಂದು ತೋರುತ್ತದೆ. ಈ ಪ್ರಾಂತದಲ್ಲಿ ಉದ್ಭವಿಸಿದ ಅಥವಾ ಪ್ರಾಬಲ್ಯವನ್ನು ಹೊಂದಿದ ಅನೇಕ ಧಾರ್ಮಿಕ ಪುರು

ಷರೂ ಧರ್ಮಸಂಸ್ಥಾಪಕರೂ ಇವಕ್ಕೆ ಉತ್ತಮ ಉದಾಹರಣೆಯಾಗಿದ್ದಾರೆ. ಈ ಸ್ಥಿತಿಯು ವಿಜಾಪುರ ಜಿಲ್ಹೆಯಲ್ಲಿ ಅಥವಾ ಬಸವೇಶ್ವರನು ಉದಯಿಸಿದ ತರ್ದವಾಡಿ ನಾಡಿನಲ್ಲಿ ಇದ್ದಿತೋ ಹೇಗೆ ಎಂಬುದನ್ನು ತಿಳಿಯುವದು ಅವಶ್ಯವು. ಯಾಕಂದರೆ ಅದರ ಪರಿಣಾಮಗಳು ಬಸವೇಶ್ವರನ ಮೇಲೆ ಆದವೋ ಹೇಗೆ, ಆಗಿದ್ದರೆ ಆವ ರೀತಿಯಿಂದ, ಎಂಬುದನ್ನು ನಿರ್ಧರಿಸಲು ಶಕ್ಯವಾಗುತ್ತದೆ. ಇದನ್ನು ವಿವೇಚಿಸಿದಲ್ಲಿ ಈ ಭಾಗದಲ್ಲಿ ವೈದಿಕ ಅಥವಾ ಬ್ರಾಹ್ಮಣ ಧರ್ಮವು ಪೂರ್ವಕಾಲದಿಂದಲೂ ಪ್ರಬಲವಾಗಿಯೇ ಇತ್ತೆಂದು ತೋರಿಬರುತ್ತದೆ ಇಲ್ಲಿ ಗಾಲವ ಕ್ಷೇತ್ರವೆಂದೆನಿಸಿಕೊಂಡ ಗಲಗಲಿಯು ಕೃಷ್ಣಾತೀರದಲ್ಲಿದೆ. ಸಂಗಮಕ್ಷೇತ್ರದ ವಿವರಣೆಯು ಶಿವಾನುಭವ ಸಂಪುಟ ೮ ಸಂಚಿಕೆ ೫ ಪುಟ ೨೬೪ ರಲ್ಲಿ ಬಂದಿದೆ. ಆದರಲ್ಲಿ ಸಂಗಮಕ್ಷೇತ್ರದ ಸ್ಥಳಿಕ ಪುರಾಣದ ವಿವರಣೆಯು ಸವಿಸ್ತಾರವಾಗಿ ಕೊಡಲ್ಪಟ್ಟಿದೆ. ಪುರಾತನ ಕಾಲದ ಅಲ್ಲಿ ಅನೇಕ ಬ್ರಾಹ್ಮಣ ತೀರ್ಥಗಳೂ ಪುಣ್ಯಸ್ಥಳಗಳೂ ಇದ್ದಹಾಗೆ ಕಂಡುಬರುತ್ತಿದೆ. ಇವುಗಳು ಬಹು ಪುರಾತನ ಕಾಲದ ವೈದಿಕ ಅಥವಾ ಬ್ರಾಹ್ಮಣ ಧರ್ಮದ ಅವಶೇಷಗಳಾಗಿವೆ. ಆದರೆ ಪ್ರಕೃತದಲ್ಲಿ ಬಸವೇಶ್ವರನ ಕಾಲಕ್ಕೆ ಸಮೀಪವರ್ತಿಯಾದ ಕಾಲವನ್ನು ನಾವು ನಿರೀಕ್ಷಿಸುವದೂ ಅವಶ್ಯವು. ಇದರಲ್ಲಿ ೧೦೭೬ ರಿಂದ ೧೧೨೬ ರ ವರೆಗೆ ಅಂದರೆ ೫೦ ವರ್ಷ ರಾಜ್ಯವಾಳಿದ ಚಾಲುಕ್ಯ ವಿಕ್ರಮಾದಿತ್ಯನ ಕಾಲವು ಬರುತ್ತದೆ. ಕರ್ನಾಟಕ ಇತಿಹಾಸದಲ್ಲಿ ಇದು ಮಹತ್ವದ ಕಾಲವು ಈ ರಾಜನ ಆಡಳಿತೆಯಲ್ಲಿಯೇ ಹಿಂದುಸ್ಥಾನದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ವಿಜ್ಞಾನೇಶ್ವರನು ತನ್ನ ಮಿತಾಕ್ಷರವೆಂಬ ಧರ್ಮಗ್ರಂಥವನ್ನು ರಚಿಸಿದನು. ಇದು ಕೇವಲ ಬ್ರಾಹ್ಮಣ ಸಂಸ್ಕೃತಿಯ ಗ್ರಂಥವು. ಈ ಸಂಗತಿಯು ವಿಕ್ರಮಾದಿತ್ಯನು ವೈದಿಕ ಮತಕ್ಕೆಯೇ ವಿಶೇಷ ಪ್ರೋತ್ಸಾಹಕೊಟ್ಟನೆಂಬುದನ್ನು ಸೂಚಿಸುತ್ತದೆ. ಅಲ್ಲದೆ ಹೇಗೆ ವೀರಶೈವ ಪುರಾಣಗಳಲ್ಲಿ ಜಯಸಿಂಹ ಪೆರ್ಮಾಡಿ ಮೊದಲಾದ ಅರಸರ ಹೆಸರುಗಳು ಆಗಿಂದಾಗ್ಗೆ ಉಪಲಬ್ಧವಾಗುತ್ತವೆಯೋ ಹಾಗೆಯೇ ಅವುಗಳಲ್ಲಿ ವಿಕ್ರಮಾದಿತ್ಯನ ಉಲ್ಲೇಖಗಳು ಎಲ್ಲಿಯೂ ಬರುವದಿಲ್ಲ ಅದರಿಂದ ಈ ರಾಜನು ವೀರಶೈವ ಅಥವಾ ಶೈವ ಅಥವಾ ಜೈನ ಮತವನ್ನು ಪ್ರೋತ್ಸಾಹಿಸದೆ ಕೇವಲ ವೈದಿಕ ಮತಕ್ಕೆಯೇ ಆಶ್ರಯ ಕೊಟ್ಟನೆಂಬ ಊಹೆಯುಂಟಾಗುತ್ತದೆ. ಅವನ

೫೦ ವರ್ಷಗಳ ದೀರ್ಘ ಆಳಿಕೆಯಲ್ಲಿ ಅನೇಕ ಬ್ರಾಹ್ಮಣ ಗ್ರಂಥಕಾರರು ಉದ್ಭವಿಸಿರಲಿಕ್ಕೆ ಬೇಕು. ಆದರೆ ಅವರು ಕನ್ನಡಕ್ಕೆ ಪ್ರಾಧಾನ್ಯವನ್ನು ಕೊಡದೆ ಸಂಸ್ಕೃತ ಭಾಷೆಗೆ ಪ್ರಾಧಾನ್ಯವನ್ನು ಕೊಟ್ಟು ಅದರಲ್ಲಿ ಗ್ರಂಥಗಳನ್ನು ರಚಿಸಿರಬೇಕು. ದಕ್ಷಿಣ ದೇಶದಲ್ಲಿ ರಾಜ್ಯವಾಳಿದ ಚೋಳ ರಾಜರು ಶೈವ ಮತಾವಲಂಬಿಗಳು. ವಿಕ್ರಮಾದಿತ್ಯನು ಅವರೊಡನೆ ಯಾವಾಗಲೂ ಹಗೆತನವನ್ನು ಬಳಸಿ ಆಗಾಗ್ಗೆ ಯುದ್ಧ ಮಾಡುತ್ತ ಇದ್ದುದು ತಿಳಿದು ಬರುತ್ತದೆ. ಆದ್ದರಿಂದ ಅವನು ಶೈವಮತಕ್ಕೆ ಅಷ್ಟು ಉತ್ತೇಜನ ಕೊಟ್ಟಿರಲಿಕ್ಕಿಲ್ಲ ಹೀಗೆ ಅವನ ಕಾಲದಲ್ಲಿ ವೈದಿಕ ಮತವು ಘನತರ ಸ್ಥಿತಿಯನ್ನು ಹೊಂದಿತ್ತೆಂದು ತೋರುತ್ತದೆ.

ಈ ಕಾಲದಲ್ಲಿ ವಿಜಾಪುರದ ಈ ಭಾಗದಲ್ಲಿ ಬ್ರಾಹ್ಮಣರ ಅನೇಕ ಅಗ್ರಹಾರಗಳಿದ್ದುದು ಶಿಲಾಶಾಸನಗಳಿಂದ ತಿಳಿದು ಬರುತ್ತದೆ. ಅವುಗಳಲ್ಲಿ ಬಾಗೇವಾಡಿ ಒಂದಾಗಿತ್ತು (ಹರಿಹರನ ರಗಳೆ). ಅಲ್ಲದೆ ಸಾಲೋಟಗಿ ಮುಘಾಣ, ಮುತ್ತಗಿ ಇವುಗಳು ಕೂಡ ಅಗ್ರಹಾರ ಸ್ಥಾನಗಳಾಗಿದ್ದುವು ಆಗಿನ ಕಾಲದ ಶಿಲಾಶಾಸನಗಳಲ್ಲಿ ಉಲ್ಲೇಖಗಳಿವೆ. ವಿಕ್ರಮಾದಿತ್ಯನು ಮರಣಹೊಂದಿದ್ದು ೧೧೨೬ ರಲ್ಲಿ, ಅಂದರೆ ಬಸವೇಶ್ವರನು ಜನಿಸಿದ್ದರಕಿಂತ ಆರ ವರ್ಷ ಪೂರ್ವದಲ್ಲಿ ಮಾತ್ರ. ಆದ್ದರಿಂದ ವಿಕ್ರಮಾದಿತ್ಯನ ಕಾಲವು ಬಸವೇಶ್ವರನ ಕಾಲಕ್ಕೆ ಬಹು ಸಮೀಪವರ್ತಿಯಾದುದು. ಆದ್ದರಿಂದ ಅವನು ಜನಿಸಿದಾಗ್ಗೆ ಅವನ ಪುರಾಣಗಳಲ್ಲಿ ಹೇಳುವಂತೆ ನಾಡಿನಲ್ಲಿ ಅವನತಿಯುಂಟಾಗಿತ್ತೆಂದು ಹೇಳಲಿಕ್ಕೆ ಬರಲಾರದು.

ವೈಷ್ಣವ ಧರ್ಮ:— ವೈದಿಕ ಧರ್ಮಗಳಲ್ಲಿ ವೈಷ್ಣವ ಧರ್ಮವು ಮುಖ್ಯವಾದುದು. ಇದಾದರೂ ಈ ಕಾಲದಲ್ಲಿ ತರ್ದವಾಡಿ ನಾಡಿನಲ್ಲಿ ಉಚ್ಚಸ್ಥಿತಿಯಲ್ಲಿದ್ದ ಹಾಗೆ ತೋರುತ್ತದೆ. ವಿಜಾಪುರ ಜಿಲ್ಹೆಯಲ್ಲಿ ಚಾಲುಕ್ಯ ರಾಜಧಾನಿಯಾದ ಬಾದಾಮಿಯು ಹಿಂದಿನಕಾಲದಲ್ಲಿ ಬಹು ಮಹತ್ವದ ನಗರವಾಗಿತ್ತು. ಇಲ್ಲಿರುವ ಕೊರೆದ ನಾಲ್ಕು ದೇವಾಲಯಗಳಲ್ಲಿ ವೈಷ್ಣವ ದೇವಾಲಯಗಳು ಉಳಿದ ದೇವಾಲಯಗಳಿಗಿಂತಲೂ ಶಿಲ್ಪಕಲಾಚಾತುರ್ಯದಲ್ಲಿ ಮಿಗಿಲಾದವುಗಳಿರುತ್ತವೆ. ಅವುಗಳಲ್ಲಿ ಒಂದು ದೇವಾಲಯವಂತೂ ಅತಿ ಶ್ರೇಷ್ಠತರಗತಿಯದಾಗಿರುತ್ತದೆ. ಬಸವೇಶ್ವರನು ಜನಿಸಿದ ತರ್ದವಾಡಿ ಭಾಗವನ್ನು ನಿರೀಕ್ಷಿಸಿದಲ್ಲಿ, ಅಲ್ಲಿ ನಾರಸಿಂಹನ

ಆರಾಧನೆಯು ಬಹು ಪ್ರಚುರವಾಗಿತ್ತೆಂದು ತೋರುತ್ತದೆ. ವಿಜಾಪುರ ಪಟ್ಟಣದಲ್ಲಿ ಆಗ ನರಸಿಂಹದೇವರ ದೇವಾಲಯವು ಇದ್ದು ಅದಕ್ಕೆ ಚಾಲುಕ್ಯರೂ ದೇವಗಿರಿ ಯಾದವರೂ ದಾನ ಕೊಟ್ಟಿದ್ದರ ಉಲ್ಲೇಖಗಳು ಇಲ್ಲಿಯ ಕೆಲವು ಶಿಲಾಲೇಖಗಳಲ್ಲಿ ಬಂದಿರುತ್ತವೆ. ಈ ಪಟ್ಟಣವು 'ದಕ್ಷಿಣ ಕಾಶಿ' ಎಂದು ಅವುಗಳಲ್ಲಿ ಹೇಳಲ್ಪಟ್ಟಿದೆ. ಕೃಷ್ಣಾತೀರದಲ್ಲಿ ತರ್ದೆವಾಡಿ ಭಾಗಕ್ಕೆ ಸಮೀಪವಾಗಿರುವ ನವಿಲೆ ಎಂಬಲ್ಲಿ ಪ್ರಸಿದ್ಧ ಶಿವಶರಣನಾದ ಶಂಕರದಾಸಿಮಯ್ಯನಿದ್ದು ಅವನು ಚಾಲುಕ್ಯ ಜಯಸಿಂಹ ರಾಜನ ರಾಜಧಾನಿಯಲ್ಲಿ ವಿಷ್ಣುದೇವಾಲಯಗಳನ್ನು ಶಿವದೇವಾಲಯಗಳನ್ನಾಗಿ ಮಾಡಿದ ಸಂಗತಿಯು ವೀರಶೈವ ಪುರಾಣಗಳಲ್ಲಿ ಹೇಳಲ್ಪಟ್ಟಿರುತ್ತದೆ. ಅದೇ ಬಗೆಯ ಆಖ್ಯಾಯಿಕೆಗಳು ಮಂಗಳವಾಡದಲ್ಲಿದ್ದ ರೇವಣಸಿದ್ಧನ ವಿಷಯವಾಗಿಯೂ ಇರುತ್ತವೆ. ಈ ಎಲ್ಲ ಸಂಗತಿಗಳನ್ನು ಒಟ್ಟಿನಲ್ಲಿ ಲಕ್ಷಿಸಿದಲ್ಲಿ ಬಸವೇಶ್ವರನ ಕಾಲದಲ್ಲಿ ವೈಷ್ಣವ ಧರ್ಮವು ಅರಸರಿಂದ ರಕ್ಷಿತವಾಗಿ ಬಸವೇಶ್ವರನು ಉದಿಸಿದ ನಾಡಿನಲ್ಲಿ ಪ್ರಾಚುರ್ಯವನ್ನು ಹೊಂದಿತ್ತೆಂಬ ಅನುಮಾನ ಉಂಟಾಗುತ್ತದೆ.

## (೨) ಶೈವಧರ್ಮಗಳು.

ಬಸವೇಶ್ವರನ ಕಾಲದಲ್ಲಿ ಅನೇಕ ಬಗೆಯ ಶೈವಧರ್ಮಗಳೂ ಕೂಡ ಬಹಳ ಪ್ರಬಲಸ್ಥಿತಿಯಲ್ಲಿದ್ದದ್ದು ಕಂಡುಬರುತ್ತದೆ. ಅವುಗಳಲ್ಲಿ ಕೆಲವು ಶುದ್ಧ ಆಗಮ ಧರ್ಮಗಳು. ಬೇರೆ ಕೆಲವುಗಳು ಕ್ರೂರ ಕರ್ಮಗಳುಳ್ಳವು ಆಗಿದ್ದವು. ಬಹುಜನ ಸಮಾಜವು ವೈದಿಕ ಧರ್ಮವನ್ನನು ಸರಿಸದೆ ಈ ಶೈವಧರ್ಮಗಳನ್ನೇ ಅನುಸರಿಸುತ್ತಿರಬೇಕು. ಯಾಕಂದರೆ ಶೈವಧರ್ಮಗಳು ಯಾವಾಗಲೂ ಉದಾರ ಭಾವವುಳ್ಳವು. ಆದರೆ ವೈದಿಕ ಧರ್ಮಗಳು ವರ್ಣಾಶ್ರಮ ಧರ್ಮಗಳಿಂದ ಬದ್ಧವಾದವುಗಳು. ಈ ಶೈವ ಧರ್ಮಗಳನ್ನನುಸರಿಸುವವರಲ್ಲಿ ಪಾಶುಪತರು, ಕಾಳಾಮುಖರು, ಶಾಕ್ತರು, ಕಾಪಾಲಿಕರು, ಸಿದ್ಧರು, ಇವರು ಮುಖ್ಯರಾಗಿದ್ದರೆಂದು ಕಂಡುಬರುತ್ತದೆ. ಈ ಪ್ರಭೇದದವರೆಲ್ಲ ಬಸವೇಶ್ವರನ ಕಾಲದಲ್ಲಿ ತರ್ದೆವಾಡಿ ನಾಡಿನಲ್ಲಿಯೂ ಅದಕ್ಕೆ ಸಮೀಪವರ್ತಿಯಾದ ಪ್ರದೇಶಗಳಲ್ಲಿಯೂ ಪಸರಿಸಿದ್ದಂತೆ ತೋರುತ್ತದೆ. ಈ ಧರ್ಮಗಳು ತರ್ದೆವಾಡಿನಾಡಿನಲ್ಲಿ ಯಾವ ಸ್ಥಿತಿಯನ್ನು ಹೊಂದಿದ್ದವೆಂಬುದನ್ನು ಅತಿ ಸಂಕ್ಷೇಪವಾಗಿ ಇಲ್ಲಿ ವಿವರಿಸುತ್ತೇವೆ.

(೧) ಪಾಶುಪತರು:— ಪಾಶುಪತರು ಬಸವೇಶ್ವರನ ಕಾಲದಲ್ಲಿ ಉತ್ತರ ವಿಜಾಪುರ ಜಿಲ್ಲೆಯಲ್ಲಿ ಒಂದು ಪ್ರಬಲ ಸಮಾಜವಾಗಿತ್ತೆಂದು ತೋರುತ್ತದೆ. ಬಸವೇಶ್ವರನು ಈ ಪಾಶುಪತ ಮತದ ತತ್ವಗಳನ್ನು ಚೆನ್ನಾಗಿ ಅರಿತವನಾಗಿದನಷ್ಟೇ ಅಲ್ಲ, ಅವುಗಳ ವಿಷಯವಾಗಿ ಆದರ ಭಾವವನ್ನು ಸಹ ವಹಿಸಿರಬೇಕೆಂದು ತೋರುತ್ತದೆ. ಈ ವಿಷಯವಾಗಿ ನಾವು ಕೆಳಗೆ ಕಾಣಿಸಿದ ಉಕ್ತಿಗಳನ್ನು ಉದಹರಿಸುತ್ತೇವೆ. ಅವು ಯಾವವೆಂದರೆ—

"ಬಾರದು ಬಾರದು ಭಕ್ತಂಗೆ ಪರಧನ ಪರಸತಿ. ಬಾರದು ಬಾರದು ವಿನಯಿಂಗೆ ಪಶುಪತಿ ಬ್ರತವು. ಬಾರದು ಬಾರದು. ಭವಭಾರಿಗೆ ಕೂಡಲ ಸಂಗಮದೇವನ ಒಕ್ಕುದ ಕೊಳಬಾರದು"

(ಬಸವ ವಚನ ಪುಟ ೧೧೯-೫.)

ಇದರಲ್ಲಿ 'ಪಶುಪತಿ ಬ್ರತ' ಈ ಶಬ್ದವು ಪಾಶುಪತ ಮತಸ್ತರ ಗ್ರಂಥದಿಂದ ತೆಗೆದುಕೊಳ್ಳಲ್ಪಟ್ಟಂತೆ ತೋರುತ್ತದೆ. ಪಾಶುಪತ ಮತದಲ್ಲಿ ಪಶು, ಪಾಶ ಮುಂತಾದ ವಿಶಿಷ್ಟಾರ್ಥವುಳ್ಳ ಶಬ್ದಗಳು ಬರುವದುಂಟು ಅವೇ ಶಬ್ದಗಳು ಬಸವೇಶ್ವರನ ವಚನಗಳಲ್ಲಿ ಕೆಲವೆಡೆಗಳಲ್ಲಿ ಬಂದಿರುತ್ತವೆ.

"ಕೂಡಲ ಸಂಗಮದೇವ ನಿಮ್ಮ ಉಂಡಿಗೆಯು ಪಶುವ ಮಾಡಿದೆಯಾಗಿ" (ಬಸವ ವಚನ ಪುಟ ೧೩-೧)

"ಲಿಂಗದುಂಡಿಗೆಯ ಪಶುವಾನಯ್ಯ ವೇಷಧಾರಿಯಾನಯ್ಯಾ"

(ಬಸವ ವಚನ ಪುಟ ೧೩-೨)

ಬಸವನು ಇಲ್ಲಿ ಬಂದಿರುವ 'ಪಶು' ಈ ಶಬ್ದವನ್ನು, ಪಾಶುಪತ ಸಿದ್ಧಾಂತದೊಳಗಿಂದ ತೆಗೆದುಕೊಂಡು ವೀರಶೈವ ಆಚರಣೆಯನ್ನು ವರ್ಣಿಸಲು ಉಪಯೋಗಿಸಿದ್ದಾನೆ.

ಬಾಗೇವಾಡಿಯಿಂದ ಪಶ್ಚಿಮಕ್ಕೆ ೬ ಮೈಲುಗಳ ಮೇಲೆ ಮುತ್ತಿಗೆ ಎಂಬ ಗ್ರಾಮವಿದೆ. ಅದು ಈಗ ಅಪ್ರಸಿದ್ಧ ಗ್ರಾಮವಾಗಿದೆ. ಆದರೆ ಅದು ಬಸವನ ಕಾಲದಲ್ಲಿ ಪಾಶುಪತ ಮತಸ್ತರ ಒಂದು ಮುಖ್ಯ ಪೀಠ

ಸ್ಥಾನವಾಗಿ ಬಹು ಪ್ರಸಿದ್ಧಿಯನ್ನು ಹೊಂದಿತ್ತು. ಈಗಲೂ ಅಲ್ಲಿ ಅನೇಕ ಪುರಾತನ ದೇವಾಲಯಗಳೂ ಮಹತ್ವದ ಶಿಲಾಶಾಸನಗಳೂ ಉಪಲಬ್ಧವಿರುತ್ತವೆ. ಅಲ್ಲಿಯ ಶಿಲಾಶಾಸನಗಳನ್ನು ಪ್ರೊ. ಕೆ. ಜಿ. ಕುಂದಣಗಾರ ಎಮ್. ಏ. ಕನ್ನಡ ಪ್ರೊಫೆಸರ ರಾಜಾರಾಮ ಕಾಲೇಜ ಇವರು ತಮ್ಮ "*Inscriptions in Northern Karnataka and the Kolhapore State*" ಎಂಬ ಗ್ರಂಥದಲ್ಲಿ ಪ್ರಸಿದ್ಧಿಸಿದ್ದಾರೆ. ಅದರಲ್ಲಿಯ ಒಂದನೆಯ ಶಾಸನದಲ್ಲಿ ಚಾಲುಕ್ಯ ಜಗದೇಕಮಲ್ಲದೇವನು ಕಲ್ಯಾಣದಲ್ಲಿ ರಾಜ್ಯವಾಳುತ್ತಿರುವಾಗ ಮುತ್ತಿಗೆಯ ಲಕುಳೇಶ್ವರ ದೇವರಿಗೆ ಅವನ ಮಾಂಡಲಿಕನು ದಾನ ಕೊಟ್ಟದ್ದು ವಿವರಿಸಲ್ಪಟ್ಟಿದೆ. ಈ ಲಕುಳೇಶ್ವರ ದೇವರ ಗುರುಪರಂಪರೆಯು ೫ ತಲಾಂತರದ ವರೆಗೆ ಇದರಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಲಕುಳೇಶ್ವರನು 'ಶಿವತತ್ವವೇದಿ' ಎಂತಲೂ 'ಲಾಕುಳಾಗಮ ಸುಧಾಂಭೋರಾಶಿ' ಎಂತಲೂ ಇಲ್ಲಿ ವರ್ಣಿಸಲ್ಪಟ್ಟಿದ್ದಾನೆ. ಇವನ ಮೂಲ ಗುರುಗಳು ಕಾಶ್ಮೀರ ದೇಶದಿಂದ ಬಂದು ವಿಜಯಾಪುರದಲ್ಲಿ ಮೊದಲು ನೆಲಸಿದ್ದರೆಂದು ಇದರಲ್ಲಿ ಹೇಳಲ್ಪಟ್ಟಿದೆ. ಇದು ಪೂರ್ಣ ಪಾಶುಪತ ಶಿಲಾಶಾಸನವು. ಇದು ಕ್ರಿ. ಶ. ೧೧೪೭ ನೆಯ ವರ್ಷದದೆ. ಈ ಕಾಲದಲ್ಲಿ ಬಸವೇಶ್ವರನು ೪೨ ವರ್ಷ ವಯಸ್ಸಿನವನಾಗಿದ್ದನು. ಮುತ್ತಿಗೆ ಗ್ರಾಮವು ಬಾಗೇವಾಡಿಗೆ ಬಹು ಸಮೀಪ ಅಂದರೆ ಆರು ಮೈಲುಗಳು ಮಾತ್ರ ದೂರವಿರುತ್ತದೆ. ಹೀಗೆ ಈ ಭಾಗದಲ್ಲಿ ಪಾಶುಪತರು ವರ್ಚಸ್ಸುಳ್ಳವರಾದುದರಿಂದಲೇ ಇಲ್ಲಿ ಅವರ ಒಂದು ಮಹತ್ವದ ಪೀಠವು ನೆಲಸಿರಬೇಕು. ಪಾಶುಪತ ಮತವು ಆಗಮ ಧರ್ಮಕ್ಕೆ ಬಹು ಸಮೀಪವರ್ತಿಯಾದುದು. ಈ ಧರ್ಮದ ತತ್ವಗಳನ್ನು ಬಸವೇಶ್ವರನು ಅಭ್ಯಾಸ ಮಾಡಿರಬೇಕೆಂಬ ಅನುಮಾನವು ಉಂಟಾಗುತ್ತದೆ.

**ಕಾಳಾಮುಖರು:** ಈ ಶತಮಾನದಲ್ಲಿ ಕಾಳಾಮುಖರು ಒಂದು ಮಹತ್ವದ ಸಮಾಜವಾಗಿದ್ದರು. ಉತ್ತರ ಕರ್ನಾಟಕದಲ್ಲಿಯ ಅನೇಕ ಶಿವಾಲಯಗಳಲ್ಲಿ ಅರ್ಚಕರಾದವರು ಈ ಸಮಾಜದವರೇ ಇದ್ದರೆಂದು ತೋರುತ್ತದೆ. ಇವರ ಪ್ರಬಲವಾದ ಮಠಗಳು ಇಡೀ ಕರ್ನಾಟಕದಲ್ಲೆಲ್ಲ ಪಸರಿಸಿದ್ದವು. ಅವುಗಳಲ್ಲಿಯ ಅಧಿಕಾರಿಗಳು ಅತ್ಯಂತ ಶ್ರೀಮಂತಿಕೆಯುಳ್ಳವರೂ ಬಹು ವರ್ಚಸ್ಸುಳ್ಳವರೂ ಆಗಿದ್ದರು. ಅನೇಕ ರಾಜರೂ ಮಾಂಡಲಿಕರೂ ಇವರಿಗೆ ಆಗಿಂದಾಗ್ಗೆ ದಾನಗಳನ್ನು ಕೊಟ್ಟದ್ದು ತಿಳಿದು

ಬರುತ್ತದೆ. ಇವುಗಳ ಉಲ್ಲೇಖಗಳು ಅವರ ದೇವಾಲಯಗಳಲ್ಲಿರುವ ಶಿಲಾಶಾಸನಗಳಲ್ಲಿ ಹೇರಳವಾಗಿ ಉಪಲಬ್ಧವಿವೆ. ಅವರ ಬಿರುದಾವಳಿಯಲ್ಲಿ 'ಅಯ್ಯಾಹೊಳೆಯ ಐನೂರ್ಖ ಸ್ವಾಮಿಗಳು" ಎಂದು ಯಾವಾಗಲೂ ಹೇಳಲ್ಪಡುತ್ತಿದೆ. ಇದರಿಂದ ಬನಾಮಿಗೆ ಸಮೀಪವಾಗಿರುವ ಮತ್ತು ಕರ್ನಾಟಕದಲ್ಲಿ ಒಂದು ಮಹತ್ವದ ಕ್ಷೇತ್ರವೆನಿಸಿಕೊಂಡ ಈಗಿನ ಐಹೊಳೆಯೇ ಈ ಮತದವರ ಮೂಲಸ್ಥಾನವಾಗಿರಬೇಕು. ಇದು ತರ್ದವಾಡಿಗೆ ಸಮೀಪವಿರುವ ಗ್ರಾಮವು. ಈ ಸಮಾಜವು ಬಸವೇಶ್ವರನಿದ್ದ ಕಾಲದಲ್ಲಿ ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿಯೂ ಕೂಡ ಇದ್ದುದು ಕಂಡುಬರುತ್ತದೆ. ಬಾಗೇವಾಡಿಯ ವಾಯವ್ಯ ದಿಕ್ಕಿಗೆ ೧೫ ಮೈಲುಗಳ ಮೇಲೆ ಮನಗೋಳಿ ಎಂಬ ಗ್ರಾಮವಿದೆ. ಈ ಗ್ರಾಮವು ಕಾಳಾಮುಖರ ಒಂದು ಮುಖ್ಯ ಸ್ಥಾನವಾಗಿತ್ತು. ಅಲ್ಲಿಯ ಒಂದು ದೇವಾಲಯಕ್ಕೆ ತರ್ದವಾಡಿ ನಾಡಿನ ಆಗಿನ ಮಹಾಮಂಡಳೇಶ್ವರನಾದ ಬರ್ಮದೇವನು ಒಂದು ಉಂಬಳಿಯನ್ನು ಹಾಕಿಕೊಟ್ಟಿದ್ದರ ಉಲ್ಲೇಖವು ಅಲ್ಲಿಯ ಒಂದು ಶಿಲಾಶಾಸನದಲ್ಲಿರುತ್ತದೆ. ಈ ಶಿಲಾಶಾಸನದ ಪೂರ್ಣ ವಿವರಣೆಯು ಶಿವಾನುಭವ ಸಂಪುಟ ೧೩ ಸಂಚಿಕೆ ೮ ಪುಟ ೩೦೪ ಇದರಲ್ಲಿ ಬಂದಿರುತ್ತದೆ. ಈ ಬರ್ಮದೇವನು ಕಾಳಾಮುಖ ಪಂಥಕ್ಕೆ ಸೇರಿಕೊಂಡು ಅದಕ್ಕೆ ಬಹಳ ಸಹಾಯ ಮಾಡುವವನಾಗಿದ್ದನೆಂದು ಅವನ ಅನೇಕ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಈ ಮನಗೋಳಿ ಶಿಲಾಶಾಸನವು ೧೧೪೨ ನೆಯ ಇಸ್ವಿಯದಿರುತ್ತದೆ. ಅಂದರೆ ಅದು ಬಸವೇಶ್ವರನು ಬಾಗೇವಾಡಿಯಲ್ಲಿ ಇನ್ನೂ ವಾಸಿಸಿರುವಾಗ್ಗೆಯೇ ಹುಟ್ಟಿದ್ದಿದೆ. ಹೀಗೆಯೇ ಬಾಗೇವಾಡಿ ತಾಲೂಕಿಗೆ ಹೊಂದಿಗಿರುವ ಸಿಂದಗಿ ತಾಲೂಕಿನಲ್ಲಿ ಕಡ್ಲೇವಾಡ ಎಂಬ ಗ್ರಾಮವಿದೆ. ಅಲ್ಲಿ ಕಾಳಾಮುಖರ ಶಿಲಾಶಾಸನವು ಒಂದು ಇದ್ದು, ಇದು ಕ್ರಿ. ಶ. ೧೧೭೩ ನೆಯ ಇಸ್ವಿಯದಿರುತ್ತದೆ. ಅದು ಬಿಜ್ಜಳನ ಮಗನಾದ ರಾಯಮುರಾರಿ ಸೋವಿದೇವನದು ಇರುತ್ತದೆ. ಈ ಎಲ್ಲ ಸಂಗತಿಗಳನ್ನು ನಾವು ಅವಲೋಕಿಸಿದಲ್ಲಿ ತರ್ದವಾಡಿ ನಾಡಿನಲ್ಲಿ ಕಾಳಾಮುಖ ಸಮಾಜದವರು ಬಸವೇಶ್ವರನ ಕಾಲಕ್ಕೆ ಬಹು ಪ್ರಬಲರಾಗಿದ್ದರೆಂತಲೂ ಅವರು ಆಗಿನ ರಾಜರಿಂದಲೂ ಮಾಂಡಲಿಕರಿಂದಲೂ ಸನ್ಮಾನ ಹೊಂದಿದವರಾಗಿದ್ದರೆಂತಲೂ ತಿಳಿದುಬರುತ್ತದೆ.

## (೩) ಶೈವಪ್ರಭೇದಗಳು.

ಪಾಶುಪತ ಮತ್ತು ಕಾಳಾಮುಖ ಶೈವರಲ್ಲದೆ ಇನ್ನೂ ಕೆಲವು ಚಿಕ್ಕ ಚಿಕ್ಕ ಶೈವಪ್ರಭೇದಗಳು ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಪ್ರಬಲವಾಗಿದ್ದುವೆಂದು ತೋರುತ್ತದೆ. ಆದರೆ ಇವುಗಳ ಅನುಯಾಯಿಗಳು ಉಚ್ಚ ಮುಖ್ಯವಾಗಿ ಹಠಯೋಗದ ಅಭ್ಯಾಸಗಳನ್ನು ಮಾಡುತ್ತ ವಾಮಮಾರ್ಗಿಗಳಾಗಿ ಆಚರಿಸುತ್ತಿದ್ದ ಹಾಗೆ ತೋರುತ್ತದೆ. ಇವರು ಶಾಕ್ತರು, ಕಾಪಾಲಿಕರು, ಸಿದ್ಧರು, ಈ ವಿಧದ ಪಂಗಡಗಳಿಗೆ ಸೇರಿದವರಾದ್ದರು ಇವರ ಅವಶೇಷಗಳು ತರ್ದೆವಾಡಿ ಮತ್ತು ಅದಕ್ಕೆ ಸಮೀಪಸ್ಥವಾದ ಪ್ರದೇಶಗಳಲ್ಲಿಯೂ ಈಗಲೂ ಕಂಡುಬರುತ್ತಿವೆ.

ಶಾಕ್ತರು:— ಉತ್ತರ ಕರ್ನಾಟಕದಲ್ಲಿ ಶಕ್ತಿಪೂಜೆಯ ದ್ಯೋತಕವಾದ ಸ್ಥಾನಗಳು ಈಗ್ಗೆಯೂ ಇರುತ್ತವೆ. ಬದಾಮಿಯಲ್ಲಿಯ ಬನಶಂಕರಿಯು, ತುಳಜಾಪುರದ ಭವಾನಿಯು, ಕೊಲ್ಹಾಪುರದ ಮಹಾಲಕ್ಷ್ಮಿಯು ಶಕ್ತಿದೇವತೆಯ ಬೇರೆ ಬೇರೆ ಸ್ವರೂಪಗಳಾಗಿರುತ್ತವೆ. ಬದಾಮಿಗೆ ಸಮೀಪವಾಗಿರುವ ಮಂಗಳೂರ ಎಂಬಲ್ಲಿಯ ದೇವಾಲಯ ಮತ್ತು ಬದಾಮಿ ಮಹಾಕೂಟದ ಸಮೀಪದಲ್ಲಿರುವ ನಾಗನಾಥ ದೇವಾಲಯಗಳು ಒಂದು ವಿಧದ ಶಕ್ತಿಪೂಜೆಯ ಕುರುಹುಗಳಾಗಿ ಉಳಿದಿರುತ್ತವೆ. ಇವೆಲ್ಲವುಗಳಲ್ಲಿ ಮೊದಲಿನ ಕಾಲದಲ್ಲಿ ಹಿಂಸಾಕಾರ್ಯಗಳು ವಿಶೇಷವಾಗಿ ನಡೆಯುತ್ತಿರಬಹುದು. ಈಗಲೂ ಇವುಗಳಲ್ಲಿ ಕೆಲವುಗಳಲ್ಲಿ ಬಲಿಕೊಡುವ ಪದ್ಧತಿಯು ಇರುತ್ತದೆ.

ಕಾಪಾಲಿಕರು:— ಅಲ್ಲಮಪ್ರಭು ಮತ್ತು ರೇವಣಸಿದ್ಧ ಇವರ ಪುರಾಣಗಳಲ್ಲಿ ಸಿದ್ಧಿಗಳನ್ನು ಸಾಧಿಸಿದವರನ್ನು ಕಂಡು ಅವರ ಮಾರ್ಗ ಖಂಡನೆ ಮಾಡಿದ ಐತಿಹ್ಯಗಳು ಬಂದಿರುತ್ತವೆ ಈ ಪಂಗಡದವರು ನಿರ್ಜನವಾದ ಪ್ರದೇಶಗಳಲ್ಲಿದ್ದುಕೊಂಡು ತಮ್ಮ ಕ್ರೂರ ಆಚರಣೆಗಳನ್ನು ನಡಿಸುತ್ತಿದ್ದರು.

ಸಿದ್ಧರು:— ಶ್ರೀಯುತ ಪಾಂಡುರಂಗರಾವ ದೇಸಾಯಿ ಎಮ್. ಎ. ಇವರು ವಿಜಾಪುರ ಜಿಲ್ಲೆ ಮತ್ತು ಜತ್ತ ಸಂಸ್ಥಾನಗಳಲ್ಲಿ ಸಂಚರಿಸಿ ಈ ಭಾಗಗಳಲ್ಲಿ ಸಿದ್ಧರೆಂಬ ಪಂಗಡದವರು ವಾಸವಾಗಿದ್ದರೆಂಬ ವಿಷಯ

ವಾಗಿ ಒಂದು ವಿಸ್ತೃತ ಲೇಖವನ್ನು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಿದ್ದಾರೆ. ವಾಚಕರು ಶಿವಾನುಭವ ಸಂಪುಟ ೧೬ ಸಂಚಿಕೆ ೪ ಪುಟ ೧೯೮ ಇದನ್ನು ಅವಲೋಕಿಸಬೇಕು. ಈ ಸಿದ್ಧರು ಬಹುಜನ ಸಮಾಜದಲ್ಲಿ ವರ್ಚಸ್ಸುಳ್ಳವರಾಗಿರಬೇಕು. ಇವರ ವಿಷಯವಾಗಿ ನಾವು ಇಲ್ಲಿ ಪುನಃ ಪ್ರಸ್ತಾಪಿಸುವ ಅವಶ್ಯವಿಲ್ಲ.

ಈ ಯಾವತ್ತು ಪಂಗಡದವರು ಒಂದು ಬಗೆಯ ಶಕ್ತಿಪೂಜಕರಾಗಿ ನಾನಾವಿಧ ಸಾಧನೆಗಳನ್ನು ಮಾಡುತ್ತ ಅಜ್ಞ ಜನರನ್ನು ಮರುಳುಗೊಳಿಸುತ್ತ ಹಿಂಸಾ ಕರ್ಮಗಳನ್ನು ಆಚರಿಸುತ್ತ ವರ್ತಿಸುವವರಾಗಿದ್ದರು. ಈ ಮಾರ್ಗದವರ ವರ್ತನೆಗಳು ಜನಸಮುದಾಯದ ಮೇಲೆ ಬಹು ಅನಿಷ್ಟ ಪರಿಣಾಮಗಳನ್ನುಂಟು ಮಾಡಿರಲಿಕ್ಕೆಬೇಕು. ಆದ್ದರಿಂದ ಶುದ್ಧಾಚರಣೆಯುಳ್ಳ ಶಿವಶರಣರು ಈ ವಾಮಮಾರ್ಗದ ಪಂಗಡಗಳ ವರ್ಚಸ್ಸನ್ನು ನಿರ್ಮೂಲ ಮಾಡುತ್ತ ಆಗಿಂದಾಗ್ಗೆ ಸಂಚರಿಸಿದ್ದಾರೆ. ಬಸವೇಶ್ವರನಾದರೂ ಇವರ ಮಾರ್ಗವನ್ನು ತಮ್ಮ ವಚನಗಳಲ್ಲಿ ಖಂಡಿಸಿದ್ದಾನೆ. ಇದರಿಂದ ಈ ಜನರ ಪ್ರಾಬಲ್ಯವು ಬಸವನ ಕಾಲದಲ್ಲಿ ತರ್ದವಾಡಿನಾಡಿನಲ್ಲಿ ವಿಶೇಷವಾಗಿ ಬೆಳೆದಿತ್ತೆಂದು ತೋರುತ್ತದೆ.

### (೪) ಕುರುಬ ಜನಾಂಗದಲ್ಲಿಯ ಸಿದ್ಧರು.

ವಿಜಾಪುರ ಜಿಲ್ಹೆಯಲ್ಲೆಲ್ಲ ಕುರುಬರ ಸಮಾಜವು ಬಹಳ ದೊಡ್ಡದಿದೆ. ಅವರ ಕೆಲವು ದೇವಾಲಯಗಳು ಇಲ್ಲಿ ಬಹು ಪ್ರಸಿದ್ಧವಾಗಿರುತ್ತವೆ. ವಿಜಾಪುರ ಜಿಲ್ಲೆಯಲ್ಲಿ ಹೋದ ಜನಗಣಿತೆಯಲ್ಲಿ ಕುರುಬರ ಜನಸಂಖ್ಯೆಯು ಸುಮಾರು ಒಂದು ಲಕ್ಷವಿರುತ್ತದೆ. ಅವರಲ್ಲಿ ಬಹುಜನರು ಈಗ ವೀರಶೈವ ಧರ್ಮವನ್ನು ಪಾಲಿಸುತ್ತಾರೆ. ಅವರಿಗೆ ಹಂಡೇವಜೀರರೆಂಬ ಹೆಸರು. ಇವರೊಡನೆ ಇತರ ವೀರಶೈವರು ಬಳಿಕೆ ಮಾಡುತ್ತಾರೆ. ಈ ಕುರುಬರ ದೇವಾಲಯಗಳು ಅರಕೇರಿ, ಕಲಕೇರಿ, ವಿಜಾಪುರ, ಉಮದಿ ಈ ಗ್ರಾಮಗಳಲ್ಲಿದ್ದು ಬಹು ಪ್ರಸಿದ್ಧವಾಗಿವೆ. ಇವೆಲ್ಲವೂ ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿವೆ. ಅರಕೇರಿಯಲ್ಲಿ ಅಮೋಘಸಿದ್ಧನ ಪ್ರಸಿದ್ಧ ದೇವಾಲಯವಿದ್ದು ಈ ಸಿದ್ಧನು ಬಸವೇಶ್ವರನ ಕಾಲದಲ್ಲಿ ಬಹು ಪ್ರಸಿದ್ಧಿಗೆ ಬಂದಿದ್ದು ಅವನ ವಂಶದವರ ಸಮಾಧಿಗಳೂ ದೇವಾಲಯಗಳೂ ಉತ್ತರ ಕರ್ನಾಟಕದಲ್ಲಿ ಬಹುಕಡೆಗೆ ಇರು

ತ್ತವೆಂಬದೂ ಅಲ್ಲಿಯ ಅರ್ಚಕರಿಂದ ನಮಗೆ ತಿಳಿದುಬರುತ್ತದೆ. ಈ ಸಿದ್ಧರು ವೀರಶೈವ ಧರ್ಮಪ್ರಸಾರದ ಆರಂಭದ ಕಾಲದಲ್ಲಿ ವೀರಶೈವರಿಗೆ ವಿಶೇಷ ಸಹಾಯಕರಾಗಿ ಕಾರ್ಯ ಮಾಡಿದ ಹಾಗೆ ತೋರುತ್ತದೆ. ಇವರ ಇತಿಹಾಸವು ಇನ್ನು ಅಪರಿಚಿತವಿದೆ. ಈ ಸಿದ್ಧರ ಮಠಗಳಲ್ಲಿರುವವರೆಲ್ಲ ಈಗ ಲಿಂಗಧಾರಿಗಳಾಗಿ ವೀರಶೈವಾಚರಣೆಗಳಂತೆ ನಡೆಯುತ್ತಾರೆ.

**ಮೈಲಾರ:—** ಶಂಕರದಾಸಿಮಯ್ಯನ ಪುರಾಣದಲ್ಲಿ ಮತ್ತು ಅವನ ರಗಳೆಯಲ್ಲಿ ಮೈಲಾರ ಅಥವಾ ಮೈಲುಗಿ ಎಂಬ ದೇವತೆಯ ಆರಾಧನೆಯನ್ನು ನಿರಾಕರಿಸಿದ ವಿಷಯವು ಬಂದಿರುತ್ತದೆ. ತರ್ದವಾಡಿ ನಾಡಿನಲ್ಲಿ ಹಿಪ್ಪರಗಿ ಎಂಬ ಗ್ರಾಮವಿದ್ದು ಇಲ್ಲಿ ಈ ದೇವತೆಯ ಪ್ರಸಿದ್ಧ ಸ್ಥಾನವಿದೆ. ಈ ಹಿಪ್ಪರಗೆಯು ಬಾಗೇವಾಡಿಯಿಂದ ಸುಮಾರು ೨೦ ಮೈಲು ದೂರ ಇರುತ್ತದೆ ಇಲ್ಲಿಯೇ ಮಡಿವಾಳ ಮಾಚಿದೇವನು ಉದಯಿಸಿದನು- ಈ ಮೈಲಾರನ ಭಕ್ತರನೇಕರು ಬಸವೇಶ್ವರನ ಕಾಲದಲ್ಲಿ ಈ ಭಾಗದಲ್ಲಿರಬೇಕು

ಮೇಲೆ ಹೇಳಿದ ಪಂಥಗಳು ವಿಜಾಪುರ ಜಿಲ್ಹೆಯಲ್ಲಿ, ವಿಶೇಷವಾಗಿ ತರ್ದವಾಡಿ ನಾಡಿನಲ್ಲಿ ಬಸವೇಶ್ವರನ ಕಾಲದಲ್ಲಿ ಪ್ರಬಲವಾಗಿದ್ದವೆಂಬದು ಅಲ್ಲಿ ಈಗಲೂ ಇರುವ ಅವುಗಳ ಅವಶೇಷಗಳಿಂದ ತಿಳಿದುಬರುತ್ತದೆ. ಈ ಪಂಥಗಳ ಮೂಲಕ ಬಹುಜನ ಸಮಾಜದಲ್ಲಿ ಧಾರ್ಮಿಕ ಮತ್ತು ನೈತಿಕ ಅವನತಿಯುಂಟಾಗಿರಬಹುದು- ಈ ಸ್ಥಿತಿಯನ್ನು ದೂರ ಮಾಡುವದಕ್ಕೋಸ್ಕರ ವಚನಕಾರರು ತಮ್ಮ ವಚನಗಳಲ್ಲಿ ನೈತಿಕಾಚಾರವನ್ನು ಜನರಿಗೆ ವಿಶೇಷವಾಗಿ ಬೋಧಿಸಿರುತ್ತಾರೆಂದು ತೋರುತ್ತದೆ.

### (ಅ) ಜೈನರು

ವೀರಶೈವ ಪುರಾಣಗಳಲ್ಲಿ ಬಸವೇಶ್ವರನು ಅವತರಿಸಿದ ಕಾಲದಲ್ಲಿ ಜೈನರು ದೇಶದಲ್ಲೆಲ್ಲ ಬಹು ಪ್ರಬಲರಾಗಿದ್ದರೆಂತಲೂ ಅವರ ದೇವಾಲಯಗಳು ಎಲ್ಲ ಕಡೆಗೆ ಪಸರಿಸಿದ್ದವೆಂತಲೂ ಶಿವಮತವು ಅವನತಸ್ಥಿತಿಯನ್ನು ಹೊಂದಿತ್ತೆಂತಲೂ ವಿವರಣೆಗಳಿದ್ದು ಜೈನಮತವನ್ನು ಕಡಿಮೆ ಮಾಡುವದಕ್ಕೋಸ್ಕರವೇ ಬಸವನು ಅವತರಿಸಿದನೆಂದು ಸಹ ಹೇಳಲ್ಪಡುತ್ತದೆ. ಈ ಕಾಲದ ಜೈನ ಗ್ರಂಥಗಳು ಕನ್ನಡ ಭಾಷೆಯಲ್ಲಿ ಹೆಚ್ಚಾಗಿ

ದೊರಕುವದರಿಂದಲೂ ಆಗಿನ ವೀರಶೈವ ಮತ್ತು ಬ್ರಾಹ್ಮಣ ಕನ್ನಡ ಗ್ರಂಥಗಳು ಉಪಲಬ್ಧವಿರದ್ದರಿಂದಲೂ ಈ ತಿಳುವಳಿಕೆಯು ಬಹು ಜನರಿಂದ ಈಗಲೂ ಅಂಗೀಕರಿಸಲ್ಪಟ್ಟಿರುತ್ತದೆ. ಈ ವಿಧಾನಗಳಲ್ಲಿ ಕೆಲ ಮಟ್ಟಿಗೆ ಅತಿಶಯೋಕ್ತಿ ಇರುತ್ತದೆಂದು ನಮಗೆ ತೋರುತ್ತದೆ. ಜೈನ ಧರ್ಮವು ಈ ಕಾಲದಲ್ಲಿ ಪ್ರಬಲಸ್ಥಿತಿಯಲ್ಲಿರಬಹುದು. ಆದರೆ ವೈದಿಕ ಮತ್ತು ಶೈವ ಧರ್ಮಗಳಾದರೂ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಪ್ರಬಲಸ್ಥಿತಿಯಲ್ಲಿದ್ದವೆಂಬುದು ನಾವು ಈ ವರೆಗೆ ಈ ಲೇಖದಲ್ಲಿ ಮಾಡಿದ ವಿವರಣೆಗಳಿಂದ ವಾಚಕರಿಗೆ ಗೊತ್ತಾಗದೆ ಇರದು. ಉತ್ತರ ಕರ್ನಾಟಕದಲ್ಲಿ ಸವದತ್ತಿಯ ರಟ್ಟರು ಮತ್ತು ಕಲುಚೂರ್‍ಯ ವಂಶದಲ್ಲಿಯ ಕೆಲವು ರಾಜರು ಜೈನರಿರಬಹುದು. ಹಾಗೆಯೇ ಚಾಲುಕ್ಯ ರಾಜರಲ್ಲಿಯೂ ಒಬ್ಬಿಬ್ಬರು ಜೈನಮತಾವಲಂಬಿಗಳಾಗಿರಬಹುದು. ಆದರೆ ಹಿಂದೂ ಧರ್ಮವನ್ನು ಎಂದಿನಿಂದಲೂ ಪಾಲಿಸುತ್ತ ಬಂದಂಥ ಅನೇಕ ಪ್ರಬಲ ರಾಜವಂಶಗಳೂ ಮಾಂಡಲಿಕರೂ ಸಹ ಆಗ ಇಲ್ಲಿ ಇದ್ದರೆಂಬುದನ್ನು ನಾವು ಲಕ್ಷಿಸಬೇಕು. ಚಾಲುಕ್ಯ ವಿಕ್ರಮಾದಿತ್ಯನೂ ಅವನ ತರುವಾಯ ಆಳಿದ ಚಾಲುಕ್ಯ ರಾಜರೂ ಕರ್ಹಾಡದ ಶಿಲಾಹಾರರೂ ಯಲಬುರ್ಗಿಯ ಸಿಂದ ವಂಶದವರೂ ಹಿಂದೂ ಧರ್ಮವನ್ನು ಪ್ರತಿಪಾಲಿಸುವವರಾಗಿದ್ದರು. ಇವರೆಲ್ಲರೂ ಬಹು ಪ್ರಬಲರು ಮತ್ತು ಶೂರರು. ಈ ಕಾಲದಲ್ಲಿ ಪ್ರಸಿದ್ಧಿಗೆ ಬಂದ ದಂಡನಾಯಕರಾದ ಕೇಶಿರಾಜನೂ, ಬರ್ಮದೇವನೂ ಶೈವ ಪಂಥಗಳಿಗೆ ಸೇರಿದವರಾಗಿದ್ದರು. ಇವರೆಲ್ಲರು ಶೈವ ಮತ್ತು ವೈಷ್ಣವ ದೇವಾಲಯಗಳಿಗೆ ಈ ತರ್ದವಾಡಿ ನಾಡಿನಲ್ಲಿ ಅಸಂಖ್ಯಾತವಾಗಿ ಉಂಬಳಿಗಳನ್ನು ಹಾಕಿಕೊಟ್ಟಿದ್ದಾರೆ. ಈ ಭಾಗದಲ್ಲಿ ಜಿನಾಲಯಗಳೂ ಜಿನ ಮಠಗಳೂ ಸಂಖ್ಯೆಯಲ್ಲಿ ಬಹಳ ಕಡಿಮೆ. ಆದರಲ್ಲಿ ೧೧ ನೆಯ ೧೨ ನೆಯ, ೧೩ ನೆಯ ಶತಮಾನಗಳಲ್ಲಿ ಉಂಟಾದ ಜಿನಶಾಸನಗಳ ಸಂಖ್ಯೆಯು ಬಹಳ ಕಡಿಮೆ. ಅಸಂಖ್ಯ ಶಿಲಾಶಾಸನಗಳು ಹಿಂದೂ ಧರ್ಮವನ್ನೇ ಪುಷ್ಟೀಕರಿಸುವಂತಹವು ಇರುತ್ತವೆ. ಜೈನ ಗ್ರಂಥಾಂತರಗಳಿಂದ ಇಂಗುಳೇಶ್ವರ, ವಿಜಯಪುರ ಇವು ಮಾತ್ರ ಜೈನರ ಮುಖ್ಯ ಸ್ಥಾನಗಳಾಗಿದ್ದವೆಂದು ತೋರುತ್ತದೆ. ಇಂಗುಳೇಶ್ವರವು ಜೈನ ಮಹಾಕವಿಯಾದ ಅಗ್ಗಳನು ಪ್ರಸಿದ್ಧಿಗೆ ಬಂದ ಸ್ಥಳವು. ಇಲ್ಲಿ ಜೈನರ ಒಂದು ಸಮುದಾಯವು ಇತ್ತೆಂದು ತೋರುತ್ತದೆ. ವಿಜಯಪುರವು, ಅಭಿನವಪಂಪನ

ಸ್ಥಾನವು. ಈ ಪಟ್ಟಣದಲ್ಲಿ ಮಾತ್ರ ಜೈನ ಅವಶೇಷಗಳು ಈಗಲೂ ಬಹಳ ದೊರೆಯುತ್ತವೆ. ಇಲ್ಲಿ ಸಿಕ್ಕಿದ ಜೈನ ಮೂರ್ತಿಗಳೂ ಇತರ ಅವಶೇಷಗಳೂ ಇಲ್ಲಿಯ ವಸ್ತುಸಂಗ್ರಹಾಲಯದಲ್ಲಿ ಇಡಲ್ಪಟ್ಟಿವೆ. ಪಟ್ಟಣ ದಿಂದ ಎರಡು ಮೈಲು ದೂರವಿರುವ ದರ್ಗಾ ಎಂಬ ಗ್ರಾಮದಲ್ಲಿ ಸುಂದರವಾದ ಜೈನ ಮೂರ್ತಿಗಳುಳ್ಳ ಒಂದು ದೇವಾಲಯವಿದೆ. ಬದಾ ಮಿಯಲ್ಲಿಯ ಕೊರೆದ ದೇವಾಲಯಗಳಲ್ಲಿ ಒಂದು ದೇವಾಲಯವು ಮಾತ್ರ ಜೈನರದಿದೆ. ಈ ಭಾಗದಲ್ಲಿ ಜೈನರ ಪುರಾತನ ಕುರುಹುಗಳು ದೊರೆತವುಗಳು ಇಷ್ಟೇ ಇವೆ. ಈ ಸಂಗತಿಗಳ ಮೇಲಿಂದ ಬಸವೇಶ್ವರನ ಕಾಲದಲ್ಲಿ ತರ್ದೆವಾಡಿ ನಾಡಿನಲ್ಲಿ ವೀರಶೈವ ಪುರಾಣಗಳಲ್ಲಿ ಹೇಳು ವಷ್ಟು ಜೈನರ ಪ್ರಾಬಲ್ಯವಿದ್ದುದು ನಮಗೆ ಕಂಡುಬರುವುದಿಲ್ಲ. ಅವ ರಲ್ಲಿ ಕೆಲವರು ಮಹತ್ವದ ಗ್ರಂಥಕಾರರಾಗಿರಬಹುದು. ಆದರೆ ಅವರ ಸಮಾಜವು ಸಂಖ್ಯೆಯಿಂದ ಅಷ್ಟು ದೊಡ್ಡದಾಗಿರಲಿಲ್ಲ. ಜೈನನೆಂದು ತಿಳಿಯಲ್ಪಟ್ಟ ಬಿಜ್ಜಳನಿಗೂ ಬಸವನಿಗೂ ವೈಮನಸ್ಸು ಉಂಟಾದ್ದರಿಂದ ಈಚೆಗೆ ರಚಿಸಲ್ಪಟ್ಟ ವೀರಶೈವ ಪುರಾಣಕರ್ತರು ಜೈನರ ಪ್ರಬಲ್ಯವು ಆಗ ಹೆಚ್ಚಾಗಿರಬೇಕೆಂದು ಊಹಿಸಿ ಈ ಸ್ಥಿತಿಯನ್ನು ದೂರ ಮಾಡಲು ಬಸ ವನು ಅವತರಿಸಿದನೆಂದು ತಿಳಿದು ಹಾಗೆ ಬರೆದಿದ್ದಾರೆಂದು ತೋರುತ್ತದೆ. ನಿಜವಾಗಿ ಆಗ ಅತ್ಯಂತ ವರ್ಚಸ್ಸುಳ್ಳ ಸಮಾಜಗಳೆಂದರೆ ಪುರಾತನ ವೈದಿಕ ಮತಾವಲಂಬಿಗಳೂ ಉಚ್ಚ ಶೈವ ಮಾರ್ಗಾನುಯಾಯಿಗಳಾದ ಕಾಳಾಮುಖರೂ ಪಾಶುಪತರೂ ಇವರೇ ಆಗಿದ್ದರೆಂದು ನಮಗೆ ತೋರು ತ್ತದೆ. ಬಸವೇಶ್ವರನ ಕಾಲದಲ್ಲಿ ಆಗಿಹೋದ ವಚನಕಾರರು ಈ ಎಲ್ಲ ಮತಾನುಯಾಯಿಗಳನ್ನು ತಮ್ಮ ವಚನಗಳಲ್ಲಿ ಬಹಳವಾಗಿ ಟೀಕಿಸಿ ದ್ದಾರೆ. ಆದರೆ ಜೈನರನ್ನು ಟೀಕಿಸಿದ್ದು ಕೆಲವು ಸಂದರ್ಭಗಳಲ್ಲಿ ಮಾತ್ರ. ಕೆಲವೊಂದು ಪ್ರಸಂಗಗಳಲ್ಲಿ ವೀರಶೈವರಿಗೂ ಜೈನರಿಗೂ ಕಲಹಗಳುಂ ಟಾಗಿರಬಹುದು. ಆದರೆ ಅವು ಸಾಮಾನ್ಯವಾಗಿ ಪ್ರಾಂತದಲ್ಲೆಲ್ಲ ಇರ ಲಿಕ್ಕಿಲ್ಲ. ಅವು ಕ್ವಚಿತ್ತಾಗಿ ಕೆಲವೊಂದು ವಿಶೇಷ ಕಾರಣಕ್ಕೋಸ್ಕರ ಇರಬಹುದು. ಬಸವೇಶ್ವರನ ಕಾಲದಲ್ಲಿ ಅನೇಕರು ವೀರಶೈವ ಧರ್ಮವು ಒತ್ತಾಯದಿಂದ ಪ್ರಸಾರಪಡಿಸಲ್ಪಟ್ಟಿತೆಂತಲೂ ಜೈನ ಧರ್ಮವು ವೀರಶೈವ ಧರ್ಮಾನುಯಾಯಿಗಳ ಹಿಂಸೆಯ ಮೂಲಕ ಹೋಗಿಬಿಟ್ಟಿತೆಂತಲೂ ನಂಬಿರುತ್ತಾರೆ. ಆದರೆ ಇದರಲ್ಲಿ ನಿಜತ್ವವು ಇರುವದಿಲ್ಲ. ಒಂದು

ವೇಳೆ ಹೀಗಿದ್ದರೆ ಬಸವೇಶ್ವರನ ತರುವಾಯ ೧೩ನೆಯ ಶತಮಾನದಲ್ಲಿ ಅನೇಕ ಜನ ಮಹತ್ವದ ಜೈನ ಗ್ರಂಥಕಾರರು ಉದಯಿಸುತ್ತಿದ್ದಿಲ್ಲ. ವೀರಶೈವ ಧರ್ಮವು ತನ್ನ ಮಹತ್ತರವಾದ ಮತ್ತು ಉದಾರವಾದ ತತ್ವಗಳ ಮೂಲಕವಾಗಿಯೇ ಸ್ವಾಭಾವಿಕವಾಗಿ ನಾಡಿನಲ್ಲಿ ಪಸರಿಸಿರುತ್ತ ಹೋಯಿತೇ ಹೊರ್ತು ಬಲಾತ್ಕಾರದಿಂದ ಅದು ಪಸರಿಸಿರುವುದಿಲ್ಲ. ಒಟ್ಟಾರೆ ತರ್ದವಾಡಿ ನಾಡಿನಲ್ಲಿ ಜೈನರ ಪ್ರಾಬಲ್ಯವು ವಿಶೇಷವಾಗಿದ್ದು ಅದನ್ನು ನಾಶಗೊಳಿಸಲು ಬಸವನು ಉದಯವಾದನೆಂದು ಯಾವ ತಿಳಿವಳಿಕೆಯು ಈಗ ಇದೆಯೋ ಅದು ಅತ್ಯುಕ್ತಿ ಎಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಿರುತ್ತದೆ.

## (೬) ಪುರಾತನರ ಮಾರ್ಗ

ವಿಜಾಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಮೇಲೆ ಹೇಳಿದ ಸಮಾಜಗಳು ಹೆಚ್ಚುಕಡಿಮೆ ಪ್ರಬಲಸ್ಥಿತಿಯಲ್ಲಿದ್ದುವೆಂಬದು ಹಿಂದಿನ ವಿವರಣೆಗಳಿಂದ ಗೊತ್ತಾಗುತ್ತದೆ. ಆದರೆ ಅವುಗಳಲ್ಲಿ ಯಾವವೂ ವೀರಶೈವ ಪರಂಪರೆಗೆ ಹೊಂದಿದವುಗಳಲ್ಲವೆಂಬುದನ್ನು ನಾವು ಲಕ್ಷಿಸುವದು ಅವಶ್ಯವು. ಕೆಲವು ಶೈವ ಮತಗಳು ವೀರಶೈವ ಧರ್ಮವನ್ನು ಹೋಲುತ್ತಿರಬಹುದು. ಆದರೆ ಅವುಗಳು ವೀರಶೈವ ಧರ್ಮದಿಂದ ಭಿನ್ನವಾದವುಗಳೆಂದು ನಾವು ಒಪ್ಪಬೇಕಾಗುತ್ತದೆ. ವೀರಶೈವ ಗ್ರಂಥಕಾರರೆಲ್ಲರು ಈ ಯಾವತ್ತು ಮತಗಳ ತತ್ವಗಳನ್ನು ತಮ್ಮ ಗ್ರಂಥಗಳಲ್ಲಿ ಖಂಡಿಸಿದ್ದಾರೆ. ಆದರೆ ಈ ಶೈವಧರ್ಮಗಳಲ್ಲಿ ವೀರಶೈವ ಮತದ ಪರಂಪರೆಗೆ ಹೊಂದಿದ್ದು ತಮಿಳು ದೇಶದಲ್ಲಿಯ ಪುರಾತನರ ಮಾರ್ಗವು ಮಾತ್ರ ಇರುತ್ತದೆ. ಈ ದೇಶದಲ್ಲಿಯ ಈ ಶೈವ ವಾಙ್ಮಯವು ಬಹು ಘನತರವಾದದ್ದು. ಅದು ಮಾಣಿಕ್ಯ ವಾಚಗರ್, ತಿರುಜ್ಞಾನ ಸಂಬಂಧರ್ ಮೊದಲಾದ ಮಹಾಪುರುಷರಿಂದ ಪೋಷಿತವಾಗಿರುತ್ತದೆ. ಈ ಪುರಾತನರು ೬೩ ಜನರಿದ್ದು ಅವರು ಪೂರ್ಣ ವೀರಶೈವರಲ್ಲದಿದ್ದರೂ ವೀರಶೈವರಿಂದ ಈಗಲೂ ಮಾನ್ಯತೆಯನ್ನು ಹೊಂದಿದವರಾಗಿದ್ದಾರೆ. ಬಸವೇಶ್ವರನು ತನ್ನ ವಚನಗಳಲ್ಲಿ ಮೇಲಿಂದ ಮೇಲೆ ಅವರನ್ನು ಸ್ತುತಿಸಿದ್ದಾನೆ. ಅರುವತ್ತುಮೂರು ಪುರಾತನರ ಪೂಜೆಯು ಈಗಲೂ ವೀರಶೈವರಿಂದ ಆಚರಿಸಲ್ಪಡುತ್ತದೆ. ಮಹಾಕವಿ ಹರಿಹರನು ಕಾಳಾಮುಖ

ಪಾಶುಪತ ಮತಸ್ಥನಾದ ಯಾವ ಮಹಾಪುರುಷನ ಚರಿತ್ರೆಯನ್ನೂ ಬರೆಯದೆ ಪುರಾತನರ ಚರಿತ್ರೆಯನ್ನು ಸವಿಸ್ತಾರವಾಗಿ ಬರೆದಿದ್ದಾನೆ. ಆದ್ದರಿಂದ ಪುರಾತನರ ಮಾರ್ಗವು ವೀರಶೈವ ಪರಂಪರೆಗೆ ಹೊಂದಿದ್ದೆಂದು ನಾವು ಭಾವಿಸಬೇಕಾಗುತ್ತದೆ. ಆದರೆ ಈ ಪುರಾತನರ ಮಾರ್ಗದವರು ಬಸವೇಶ್ವರನ ಕಾಲದಲ್ಲಿ ತರ್ದೆವಾಡಿ ನಾಡಿನಲ್ಲಿ ಇದ್ದರೋ ಹೇಗೆ ಎಂಬುದನ್ನು ನಾವು ನಿರೀಕ್ಷಿಸಿದಲ್ಲಿ ಅವರ ಉಲ್ಲೇಖಗಳು ಕೆಲ ಮಟ್ಟಿಗೆ ದೊರೆತರೂ ಅವರು ಅತ್ಯಂತ ಅಲ್ಪಸಂಖ್ಯಾಕರಾಗಿದ್ದರೆಂದು ನಾವು ತಿಳಿಯಬೇಕಾಗುತ್ತದೆ. ಈ ಮಾರ್ಗದ ಪುರಸ್ಕರ್ತರು ಕೆಲವರು ಉಗಮಿಸಿ ಮಹತ್ಕಾರ್ಯಗಳನ್ನು ಮಾಡಿದ್ದಾರೆಂಬುದು ನಿಜವು. ಆದರೆ ಬಸವೇಶ್ವರನ ಕಾಲದಲ್ಲಿ ಅವರ ಮಾರ್ಗಾನುಯಾಯಿಗಳು ಸಂಖ್ಯೆಯಿಂದ ಪ್ರಾಬಲ್ಯವನ್ನು ಹೊಂದಿರಲಿಲ್ಲೆಂದು ನಮಗೆ ತೋರುತ್ತದೆ.

ಈ ಶೈವ ಮಾರ್ಗವನ್ನವಲಂಬಿಸಿ ವೀರಶೈವ ಪರಂಪರೆಗೆ ಕಾರಣರಾದವರಲ್ಲಿ ದೇವರದಾಸಿಮಯ್ಯನು ಪ್ರಮುಖನಾಗಿದ್ದಾನೆ. ಆವನ ಉಲ್ಲೇಖಗಳು ವೀರಶೈವ ಪುರಾಣಗಳಲ್ಲಿಯೂ ವಚನ ಗ್ರಂಥಗಳಲ್ಲಿಯೂ ಆಗಿಂದಾಗ್ಗೆ ಬರುತ್ತವೆ ಇವನ ಗ್ರಾಮವಾದ ಮುದನೂರು ತರ್ದೆವಾಡಿ ನಾಡಿನಲ್ಲಿಯು ಈಗಿನ ಸಿಂದಗಿ ತಾಲೂಕಿನ ಮೇರೆಯಿಂದ ಪೂರ್ವಕ್ಕೆ ೮-೧೦ ಮೈಲು ದೂರವಿದೆ. ಇವನ ಸಮಕಾಲೀನನು ಶಂಕರದಾಸಿಮಯ್ಯನು. ಇವನ ಹೆಸರು ಬಸವೇಶ್ವರ ಮೊದಲಾದ ವಚನಕಾರರ ವಚನಗಳಲ್ಲಿ ದೊರೆಯುದಿದ್ದರೂ ವೀರಶೈವ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಉಭಯತರು ೧೧ನೆಯ ಶತಮಾನದಲ್ಲಿ ಆಳಿದ ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದರು. ಮುಂದೆ ವಿಕ್ರಮಾದಿತ್ಯನ ಆಳಿಕೆಯು ಪ್ರಾರಂಭವಾಗಲು ಈ ಶಿವಶರಣರು ಮುಂದುವರಿಸಿದ ಧರ್ಮಜಾಗ್ರತೆಯ ಕಾರ್ಯಗಳು ಕೆಲವು ಕಾಲ ನಿಂತುಹೋಯಿತೆಂದು ತೋರುತ್ತದೆ. ಅವನ ಆಳಿಕೆಯಲ್ಲಿ ಒಬ್ಬನಾದರೂ ಶಿವಶರಣನ ಹೆಸರು ನಮಗೆ ಉಪಲಬ್ಧವಿಲ್ಲ. ಅದರಿಂದ ಈ ಅರಸನು ಅವರಿಗೆ ಸಹಾಯ ಮಾಡಿದಂತೆ ತೋರುವದಿಲ್ಲ. ಈ ರಾಜನ ಆಳಿಕೆಯು ೧೧೨೬ ರಲ್ಲಿ ಮುಗಿದ ಬಳಿಕ ಶಿವಶರಣರ ಹೆಸರುಗಳು ನಮಗೆ ಪುನಃ ಉಪಲಬ್ಧವಾಗಹತ್ತುತ್ತವೆ ಕೊಂಡುಗುಳಿಯ ಕೇಶಿರಾಜ, ತೆಲಗು ಜೊಮ್ಮಯ್ಯ, ಬಾಹೂರು ಬೊಮ್ಮಯ್ಯ, ಇಳಿಹಾಳಿ ಬ್ರಹ್ಮಯ್ಯ ಇವರು ೧೧೨೮ ರಲ್ಲಿ ಆಳಹತ್ತಿದ ಸೋಮೇಶ್ವರನ

ಯನ ಕಾಲದಲ್ಲಿ ಪ್ರಸಿದ್ಧರಾದದ್ದು ತಿಳಿಯುತ್ತದೆ. ಇವರೆಲ್ಲರು ವೀರಶೈವ ಪರಂಪರೆಗೆ ಹೊಂದಿದವರು. ಕೊಂಡುಗೂಳಿಯು ಬಾಗೇವಾಡಿಯಿಂದ ಉತ್ತರಕ್ಕೆ ೧೦–೧೫ ಮೈಲುಗಳ ಮೇಲೆ ಇದೆ. ಪೆರ್ಮಾಡಿರಾಯನು ತರ್ದವಾಡಿ ಮಂಡಲವನ್ನು ಆಳುವ ಅಧಿಪತಿಯಾಗಿದ್ದನು. ಇವನು ೧೧೨೨ ರಿಂದ ಚಾಲುಕ್ಯ ರಾಜನಿಗೆ ಮಾಂಡಲಿಕನಾಗಿ ರಾಜ್ಯವಾಳಿದನು. ಪೆರ್ಮಾಡಿರಾಯನು ಬಿಜ್ಜಳನ ತಂದೆಯಾಗಿದ್ದು ಅವನ ತರುವಾಯ ಬಿಜ್ಜಳನು ಇದೇ ತರ್ದವಾಡಿಯಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದ್ದನು. ಅವನ ಆಳಿಕೆಯ ಆರಂಭಕಾಲದಲ್ಲಿ ರೇವಣಸಿದ್ಧೇಶ್ವರನು ತರ್ದವಾಡಿನಾಡಿನಲ್ಲಿ ಪ್ರಬಲಸ್ಥಿತಿಗೆ ಬಂದನು. ಈ ಪ್ರಕಾರ ಪೂರ್ವದ ಶಿವಶರಣರ ವೃತ್ತಾಂತವಿರುತ್ತದೆ. ಅವರು ಈ ಪ್ರಕಾರ ಜನರಲ್ಲಿ ಪ್ರಸಿದ್ಧಿಯನ್ನು ಹೊಂದಿದವರಾಗಿದ್ದರೂ ದೇಶದಲ್ಲಿ ಅವರ ಮತದಂತೆ ನಡೆಯುವ ಜನರ ಸಂಖ್ಯೆಯು ಮಾತ್ರ ಹೆಚ್ಚಾಗಿರಲಿಲ್ಲವೆಂದು ತೋರುತ್ತದೆ. ಈ ಯಾವತ್ತರ ದೇವಾಲಯಗಳು ಈಗ ಉಪಲಬ್ಧವಿವೆ. ಆದರೆ ಹೇಗೆ ಪಾಶುಪತ, ಕಾಳಾಮುಖ, ವೈದಿಕ ಮತಸ್ಥರಿಗೆ ರಾಜರಿಂದಲೂ ಸೇನಾಪತಿಗಳಿಂದಲೂ ಉಂಬಳಿಗಳು ದೊರೆತವೋ ಹಾಗೆ ಈ ಶಿವಶರಣರಿಗೆ ದೊರೆತದ್ದು ಯಾವ ಶಿಲಾಶಾಸನದಲ್ಲಿ ಕಂಡುಬಂದಿಲ್ಲ. ಆದರೆ ೧೧೫೬ ರಲ್ಲಿ ಉಂಟಾದ ದೇವರದಾಸಿಮಯ್ಯನ ಶಿಲಾಶಾಸನ ಒಂದೇ ಮಾತ್ರ ಇದಕ್ಕೆ ಅಪವಾದಾತ್ಮಕವಾಗಿರುತ್ತದೆ. ವೀರಶೈವ ಪುರಾಣಗಳಲ್ಲಿ ಶಿವಮತವು ಅವನತಿಯನ್ನು ಹೊಂದಿತ್ತೆಂದು ಹೇಳಲ್ಪಟ್ಟಿದೆಯಷ್ಟೇ. ಈ ಸಂಗತಿಯು ಈ ಶಿವಶರಣರಿಂದ ಪ್ರತಿಪಾದಿಸಲ್ಪಟ್ಟ ಮತದ ಸಂಬಂಧವಾಗಿರುತ್ತದೆಂದು ನಮಗೆ ತೋರುತ್ತಿದೆ. ಈ ಮತವನ್ನು ಪಾಶುಪತ, ಕಾಳಾಮುಖ, ಜೈನ, ಬ್ರಾಹ್ಮಣ ಧರ್ಮಗಳು ಬಹಳ ವಿರೋಧಿಸಿರಬೇಕೆಂಬುದು ದೇವರದಾಸಿಮಯ್ಯ, ಶಂಕರದಾಸಿಮಯ್ಯ, ರೇವಣಸಿದ್ಧ, ಕೆಂಭಾವಿಭೋಗಣ್ಣ, ಬಾಹೂರ ಬೊಮ್ಮಯ್ಯ ಇವರ ಚರಿತ್ರೆಗಳಿಂದ ದೃಢಪಡುತ್ತದೆ. ಅದ್ದರಿಂದ ಬಸವೇಶ್ವರನ ಕಾಲದಲ್ಲಿ ಪುರಾತನರ ಪದ್ಧತಿಯ ಈ ಶೈವಮತವು ತರ್ದವಾಡನಾಡಿನಲ್ಲಿ ಊರ್ಜಿತಸ್ಥಿತಿಯಲ್ಲಿರದೆ ಅದರ ಅನುಯಾಯಿಗಳು ಸಂಖ್ಯೆಯಲ್ಲಿ ಬಹಳ ಕಡಿಮೆಯಾಗಿದ್ದರು. ಈ ಮತವನ್ನೇ ಬಸವಾದಿ ಪ್ರಮಥರು ಶಿವಾನುಭವ ಮಂಟಪದಲ್ಲಿ ಮುಂದುವರಿಸಿದಂತೆ ತೋರುತ್ತದೆ.

ಪಾಶುಪತ ಮತಸ್ತನಾದ ಯಾವ ಮಹಾಪುರುಷನ ಚರಿತ್ರೆಯನ್ನೂ ಬರೆಯದೆ ಪುರಾತನರ ಚರಿತ್ರೆಯನ್ನು ಸವಿಸ್ತಾರವಾಗಿ ಬರೆದಿದ್ದಾನೆ. ಆದ್ದರಿಂದ ಪುರಾತನರ ಮಾರ್ಗವು ವೀರಶೈವ ಪರಂಪರೆಗೆ ಹೊಂದಿದ್ದೆಂದು ನಾವು ಭಾವಿಸಬೇಕಾಗುತ್ತದೆ. ಆದರೆ ಈ ಪುರಾತನರ ಮಾರ್ಗದವರು ಬಸವೇಶ್ವರನ ಕಾಲದಲ್ಲಿ ತರ್ದೆವಾಡಿ ನಾಡಿನಲ್ಲಿ ಇದ್ದರೋ ಹೇಗೆ ಎಂಬದನ್ನು ನಾವು ನಿರೀಕ್ಷಿಸಿದಲ್ಲಿ ಅವರ ಉಲ್ಲೇಖಗಳು ಕೆಲ ಮಟ್ಟಿಗೆ ದೊರೆತರೂ ಅವರು ಅತ್ಯಂತ ಅಲ್ಪಸಂಖ್ಯಾಕರಾಗಿದ್ದರೆಂದು ನಾವು ತಿಳಿಯಬೇಕಾಗುತ್ತಿದೆ. ಈ ಮಾರ್ಗದ ಪುರಸ್ಕರ್ತರು ಕೆಲವರು ಉಗಮಿಸಿ ಮಹತ್ಕಾರ್ಯಗಳನ್ನು ಮಾಡಿದ್ದಾರೆಂಬುದು ನಿಜವು. ಆದರೆ ಬಸವೇಶ್ವರನ ಕಾಲದಲ್ಲಿ ಅವರ ಮಾರ್ಗಾನುಯಾಯಿಗಳು ಸಂಖ್ಯೆಯಿಂದ ಪ್ರಾಬಲ್ಯವನ್ನು ಹೊಂದಿರಲಿಲ್ಲೆಂದು ನಮಗೆ ತೋರುತ್ತದೆ.

ಈ ಶೈವ ಮಾರ್ಗವನ್ನವಲಂಬಿಸಿ ವೀರಶೈವ ಪರಂಪರೆಗೆ ಕಾರಣರಾದವರಲ್ಲಿ ದೇವರದಾಸಿಮಯ್ಯನು ಪ್ರಮುಖನಾಗಿದ್ದಾನೆ. ಆವನ ಉಲ್ಲೇಖಗಳು ವೀರಶೈವ ಪುರಾಣಗಳಲ್ಲಿಯೂ ವಚನ ಗ್ರಂಥಗಳಲ್ಲಿಯೂ ಆಗಿಂದಾಗ್ಗೆ ಬರುತ್ತವೆ ಇವನ ಗ್ರಾಮವಾದ ಮುದನೂರು ತರ್ದೆವಾಡಿ ನಾಡಿನಲ್ಲಿಯು ಈಗಿನ ಸಿಂದಗಿ ತಾಲೂಕಿನ ಮೋರೆಯಿಂದ ಪೂರ್ವಕ್ಕೆ ೮-೧೦ ಮೈಲು ದೂರವಿದೆ. ಇವನ ಸಮಕಾಲೀನನು ಶಂಕರದಾಸಿಮಯ್ಯನು. ಇವನ ಹೆಸರು ಬಸವೇಶ್ವರ ಮೊದಲಾದ ವಚನಕಾರರ ವಚನಗಳಲ್ಲಿ ದೊರೆಯುದಿದ್ದರೂ ವೀರಶೈವ ಪುರಾಣಗಳಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಉಭಯತರು ೧೧ನೆಯ ಶತಮಾನದಲ್ಲಿ ಆಳಿದ ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದರು. ಮುಂದೆ ವಿಕ್ರಮಾದಿತ್ಯನ ಆಳಿಕೆಯು ಪ್ರಾರಂಭವಾಗಲು ಈ ಶಿವಶರಣರು ಮುಂದುವರಿಸಿದ ಧರ್ಮಜಾಗ್ರತೆಯ ಕಾರ್ಯಗಳು ಕೆಲವು ಕಾಲ ನಿಂತುಹೋಯಿತೆಂದು ತೋರುತ್ತದೆ. ಅವನ ಆಳಿಕೆಯಲ್ಲಿ ಒಬ್ಬನಾದರೂ ಶಿವಶರಣನ ಹೆಸರು ನಮಗೆ ಉಪಲಬ್ಧವಿಲ್ಲ. ಅದರಿಂದ ಈ ಅರಸನು ಅವರಿಗೆ ಸಹಾಯ ಮಾಡಿದಂತೆ ತೋರುವದಿಲ್ಲ. ಈ ರಾಜನ ಆಳಿಕೆಯು ೧೧೨೬ ರಲ್ಲಿ ಮುಗಿದ ಬಳಿಕ ಶಿವಶರಣರ ಹೆಸರುಗಳು ನಮಗೆ ಪುನಃ ಉಪಲಬ್ಧವಾಗಹತ್ತುತ್ತವೆ ಕೊಂಡುಗುಳಿಯ ಕೇಶಿರಾಜ, ತೆಲಗು ಜೊಮ್ಮಯ್ಯ, ಬಾಹೂರು ಬೊಮ್ಮಯ್ಯ, ಇಳಿಹಾಳಿ ಬ್ರಹ್ಮಯ್ಯ ಇವರು ೧೧೨೮ ರಲ್ಲಿ ಆಳಹತ್ತಿದ ಸೋಮೇಶ್ವರನ

ಯನ ಕಾಲದಲ್ಲಿ ಪ್ರಸಿದ್ಧರಾದದ್ದು ತಿಳಿಯುತ್ತದೆ. ಇವರೆಲ್ಲರು ವೀರಶೈವ ಪರಂಪರೆಗೆ ಸೇರಿದವರು. ಕೊಂಡುಗೂಳಿಯು ಬಾಗೇವಾಡಿಯಿಂದ ಉತ್ತರಕ್ಕೆ ೧೦–೧೫ ಮೈಲುಗಳ ಮೇಲೆ ಇದೆ. ಪೆರ್ಮಾಡಿರಾಯನು ತರ್ದವಾಡಿ ಮಂಡಲವನ್ನು ಆಳುವ ಅಧಿಪತಿಯಾಗಿದ್ದನು. ಇವನು ೧೨೨ ರಿಂದ ಚಾಲುಕ್ಯ ರಾಜನಿಗೆ ಮಾಂಡಲಿಕನಾಗಿ ರಾಜ್ಯವಾಳಿದನು. ಪೆರ್ಮಾಡಿರಾಯನು ಬಿಜ್ಜಳನ ತಂದೆಯಾಗಿದ್ದು ಅವನ ತರುವಾಯ ಬಿಜ್ಜಳನು ಇದೇ ತರ್ದವಾಡಿಯಲ್ಲಿ ಮಹಾಮಂಡಲೇಶ್ವರನಾಗಿ ಆಳುತ್ತಿದ್ದನು. ಅವನ ಆಳಿಕೆಯ ಆರಂಭಕಾಲದಲ್ಲಿ ರೇವಣಸಿದ್ಧೇಶ್ವರನು ತರ್ದವಾಡಿನಾಡಿನಲ್ಲಿ ಪ್ರಬಲಸ್ಥಿತಿಗೆ ಬಂದನು ಈ ಪ್ರಕಾರ ಪೂರ್ವದ ಶಿವಶರಣರ ವೃತ್ತಾಂತವಿರುತ್ತದೆ. ಅವರು ಈ ಪ್ರಕಾರ ಜನರಲ್ಲಿ ಪ್ರಸಿದ್ಧಿಯನ್ನು ಹೊಂದಿದವರಾಗಿದ್ದರೂ ದೇಶದಲ್ಲಿ ಅವರ ಮತದಂತೆ ನಡೆಯುವ ಜನರ ಸಂಖ್ಯೆಯು ಮಾತ್ರ ಹೆಚ್ಚಾಗಿರಲಿಲ್ಲವೆಂದು ತೋರುತ್ತದೆ. ಈ ಯಾವತ್ತರ ದೇವಾಲಯಗಳು ಈಗ ಉಪಲಬ್ಧವಿವೆ. ಆದರೆ ಹೇಗೆ ಪಾಶುಪತ, ಕಾಳಾಮುಖ, ವೈದಿಕ ಮತಸ್ಥರಿಗೆ ರಾಜರಿಂದಲೂ ಸೇನಾಪತಿಗಳಿಂದಲೂ ಉಂಬಳಿಗಳು ದೊರೆತವೋ ಹಾಗೆ ಈ ಶಿವಶರಣರಿಗೆ ದೊರೆತದು ಯಾವ ಶಿಲಾಶಾಸನದಲ್ಲಿ ಕಂಡುಬಂದಿಲ್ಲ. ಆದರೆ ೧೧೩೬ ರಲ್ಲಿ ಉಂಟಾದ ದೇವರದಾಸಿಮಯ್ಯನ ಶಿಲಾಶಾಸನ ಒಂದೇ ಮಾತ್ರ ಇದಕ್ಕೆ ಅಪವಾದಾತ್ಮಕವಾಗಿರುತ್ತದೆ. ವೀರಶೈವ ಪುರಾಣಗಳಲ್ಲಿ ಶಿವಮತವು ಅವನತಿಯನ್ನು ಹೊಂದಿತ್ತೆಂದು ಹೇಳಲ್ಪಟ್ಟಿದೆಯಷ್ಟೇ. ಈ ಸಂಗತಿಯು ಈ ಶಿವಶರಣರಿಂದ ಪ್ರತಿಪಾದಿಸಲ್ಪಟ್ಟ ಮತದ ಸಂಬಂಧವಾಗಿರುತ್ತದೆಂದು ನಮಗೆ ತೋರುತ್ತಿದೆ. ಈ ಮತವನ್ನು ಪಾಶುಪತ, ಕಾಳಾಮುಖ, ಜೈನ, ಬ್ರಾಹ್ಮಣ ಧರ್ಮಗಳು ಬಹಳ ವಿರೋಧಿಸಿರಬೇಕೆಂಬುದು ದೇವರದಾಸಿಮಯ್ಯ, ಶಂಕರದಾಸಿಮಯ್ಯ, ರೇವಣಸಿದ್ಧ, ಕೆಂಭಾವಿಭೋಗಣ್ಣ, ಬಾಹೂರ ಬೊಮ್ಮಯ್ಯ ಇವರ ಚರಿತ್ರೆಗಳಿಂದ ದೃಢಪಡುತ್ತದೆ. ಅದ್ದರಿಂದ ಬಸವೇಶ್ವರನ ಕಾಲದಲ್ಲಿ ಪುರಾತನರ ಪದ್ಧತಿಯು ಈ ಶೈವಮತವು ತರ್ದವಾಡನಾಡಿನಲ್ಲಿ ಊರ್ಜಿತಸ್ಥಿತಿಯಲ್ಲಿರದೆ ಅದರ ಅನುಯಾಯಿಗಳು ಸಂಖ್ಯೆಯಲ್ಲಿ ಬಹಳ ಕಡಿಮೆಯಾಗಿದ್ದರು. ಈ ಮತವನ್ನೇ ಬಸವಾದಿ ಪ್ರಮಥರು ಶಿವಾನುಭವ ಮಂಟಪದಲ್ಲಿ ಮುಂದುವರಿಸಿದಂತೆ ತೋರುತ್ತದೆ.

## (೭) ಶಿವಶರಣರ ಮಾರ್ಗ.

ಬಸವೇಶ್ವರನ ಕಾಲದಲ್ಲಿ ಪುರಾತನರ ಪದ್ಧತಿಯು ಶೈವಮಾರ್ಗಕ್ಕೆ ಕೆಲವು ಮಾರ್ಪಾಡುಗಳಾದವು. ಇದಕ್ಕೆ ಪ್ರಮಥರ ಮಾರ್ಗ ಅಥವಾ ಶಿವಶರಣರ ಮಾರ್ಗವೆಂದು ನಾವು ಕರೆಯಬಹುದು. ಇದೇ ಪೂರ್ಣ ವೀರಶೈವ ಮತವು. ಇವರಲ್ಲಿ ಷಟ್‌ಸ್ಥಲ, ಏಕೋತ್ತರಶತಸ್ಥಲ, ಅಷ್ಟಾವರಣ ಇವುಗಳು ಬಹು ಮಹತ್ವದ ಸ್ಥಾನವನ್ನು ಹೊಂದಿದವು. ಕಲ್ಯಾಣದಲ್ಲಿ ಸ್ಥಾಪಿಸಲ್ಪಟ್ಟ ಶಿವಾನುಭವ ಮಂಟಪದಲ್ಲಿ ಅವು ಬಹು ಉಚ್ಚತಮ ತರಗತಿಯನ್ನು ಹೊಂದಿದವು. ಇವುಗಳಲ್ಲಿಯ ಉದಾತ್ತ ತತ್ವಗಳು ವಚನ ವಾಙ್ಮಯದ ಮೂಲಕ ದೇಶದಲ್ಲೆಲ್ಲ ಶಿವಶರಣರಿಂದ ಈ ಕಾಲದಲ್ಲಿ ಪ್ರಸಾರ ಮಾಡಲ್ಪಟ್ಟವು. ಇವರ ಮಾರ್ಗವು ಪುರಾತನರ ಮಾರ್ಗದಿಂದ ಬೇರೆ ತರದ್ದಾಗಿದ್ದರೂ ಇವೆರಡೂ ಒಂದೇ ತರದ ಧಾರ್ಮಿಕ ಪರಂಪರೆಯಲ್ಲಿ ಸಮಾವೇಶವಾಗುತ್ತವೆ. ಅವುಗಳಲ್ಲಿ ಶಿವಶರಣರ ಮಾರ್ಗವು ದೇಶದಲ್ಲಿ ಬಸವೇಶ್ವರನ ಕಾಲಕ್ಕೆ ಮತ್ತು ಅವನ ತರುವಾಯು ಸಹ ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯನ್ನುಂಟು ಮಾಡಿತು.

### ಉಪಸಂಹಾರ

ಈ ಸಮಾಜೇತಿಹಾಸದಲ್ಲಿ ನಮಗೆ ನಿಶ್ಚಿತ ಮತ್ತು ಸತ್ಯ ಸಂಗತಿಗಳು ಕೆಲವು ಮಾತ್ರ ದೊರೆಯುತ್ತಿದ್ದು ಅವೆಲ್ಲವೂ ಬಸವೇಶ್ವರನ ಕಾಲದಲ್ಲಿಯೂ ತರ್ದವಾಡಿ ನಾಡಿನಲ್ಲಿಯೂ ಇಂಬೀಳಾದುದರಿಂದ ಈ ವಿಷಯ ವಿವೇಚನೆಗೆ ನಮ್ಮ ಕ್ಷೇತ್ರವು ಅತ್ಯಲ್ಪವಾಗಿರುತ್ತದೆ. ಈ ಲೇಖದಲ್ಲಿ ನಾವು ವಾಚಕರಿದುರಿಗೆ ಇಟ್ಟ ಸಂಗತಿಗಳು ಒಂದು ವಿಸ್ತೃತ ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುವ ಕಣಗಳಂತಿರುತ್ತವೆ. ಆದರೂ ಅವುಗಳೆಲ್ಲವನ್ನೂ ನಾವು ಒತ್ತಟ್ಟಿಗೆ ಸಂಗ್ರಹಿಸಿ ವಿಚಾರ ಮಾಡ ನೋಡಿದಲ್ಲಿ ಈ ಮಹತ್ವದ ಕಾಲದಲ್ಲಿ ಶಿವಶಿರಣರಿದುರಿಗೆ ಯಾವ ಯಾವ ಸಮಸ್ಯೆಗಳಿದ್ದವೆಂಬುದನ್ನು ಸ್ಥೂಲ ಮಾನದಿಂದ ಅರಿಯಲು ಶಕ್ಯವಾಗುತ್ತದೆ. ಈ ಕಾಲದಲ್ಲಿ ನಾವು ಈ ಲೇಖದಲ್ಲಿ ವಿವರಿಸಿದ ಪ್ರಕಾರ ಜೈನ ಮತ್ತು ವೈದಿಕ ಧರ್ಮಗಳು ಪ್ರಬಲವಾಗಿದ್ದವು. ಹಾಗೆಯೇ ಶೈವ ಮತಗಳೆಂದು ಎಣಿಸಲ್ಪಟ್ಟಿರುವ ಕಾಳಾಮುಖರೂ ಪಾಶುಪತರೂ ಕೂಡ ಈ ತರ್ದವಾಡಿ ನಾಡಿನಲ್ಲಿ ಸ್ಥಾಯಿಕವಾಗಿ ನೆಲಿಸಿದ್ದರು. ಆದರೆ ಬಹು ಜನ ಸಮಾ

ಜವು ಮಾತ್ರ ಅಜ್ಞಾನದೆಶೆಯಲ್ಲಿದ್ದು ಧರ್ಮಮೂಢತೆಯಿಂದ ಅನೇಕ ತರದ ಕ್ಷುದ್ರ ದೇವತೆಗಳ ಆರಾಧನೆಯಲ್ಲಿದ್ದಿತು. ಉಚ್ಚ ತರಗತಿಯನ್ನು ಹೊಂದಿದ ತಮಿಳು ದೇಶದ ಪುರಾತನರ ಮತವು ಸಹ ಪ್ರಸಾರ ಹೊಂದದೆ ಇದ್ದರೂ ಅದು ಅಲ್ಲಲ್ಲಿ ಅಂಕುರಿಸತೊಡಗಿತ್ತು. ಇದೇ ಕಾಲದಲ್ಲಿ ದೇವರದಾಸಿಮಯ್ಯ, ರೇವಣಸಿದ್ಧ, ಶಂಕರದಾಸಿಮಯ್ಯ ಮೊದಲಾದ ಶಿವಶರಣರು ಶುದ್ಧ ಮತ್ತು ಉದಾರ ಶೈವ ಮಾರ್ಗವನ್ನು ಪ್ರಚಾರದಲ್ಲಿ ತರಲು ಪ್ರಯತ್ನಿಸುತ್ತಿದ್ದರು. ಆದರೆ ಅವರಿಗೆ ಸಾಕಷ್ಟು ರಾಜಾಶ್ರಯವಾಗಲಿ ಜನಾಶ್ರಯವಾಗಲಿ ಇದ್ದಂತೆ ತೋರಲಿಲ್ಲ. ಕೆಲವೊಂದು ಕಾಲದಲ್ಲಿ ಅವರಿಗೆ ಅನುಕೂಲ ಪರಿಸ್ಥಿತಿಯೂ ಇದ್ದರೂ ಮುಂದೆ ಸ್ವಲ್ಪ ಕಾಲದಲ್ಲಿಯೇ ಇದು ಪಲ್ಲಟಿಸಿ ಪ್ರತಿಕೂಲ ಸಮಯಗಳು ಒದಗುತ್ತಿದ್ದವು. ಇಂಥ ಪರಿಸ್ಥಿತಿಯಲ್ಲಿ ಬಸವೇಶ್ವರನು ತರ್ದವಾಡಿ ನಾಡಿನ ಮಧ್ಯದಲ್ಲಿದ್ದ ಬಾಗೇವಾಡಿಯಲ್ಲಿ ಜನಿಸಿದನು. ಆಗ ನಾವು ಈ ಲೇಖದಲ್ಲಿ ವಿವರಿಸಿದಂತೆ ತರತರದ ಸಾಮಾಜಿಕ ಸನ್ನಿವೇಶಗಳು ಅವನನ್ನು ಆವರಿಸಿಕೊಂಡಿದ್ದವು. ಇಂಥ ಸ್ಥಿತಿಯಲ್ಲಿ ಅವನು ಸತ್ಯಸಂಕಲ್ಪನೂ ಅತ್ಯಂತ ಮನೋಧೈರ್ಯವುಳ್ಳವನೂ ಆಗಿ ಪುರಾತನ ವೈದಿಕ ಮಾರ್ಗವನ್ನು ತೊರೆದು ತನ್ನ ಪಿತೃಗೃಹವನ್ನು ಸಹ ತ್ಯಾಗಮಾಡಲು ಸಿದ್ಧನಾದನು. ಅವನ ಚಳವಳಿಯ ಪ್ರಭಾವದಿಂದ ತರ್ದವಾಡಿ ನಾಡಿನಲ್ಲಿ ಚೆನ್ನಬಸವ, ಸಿದ್ಧರಾಮ, ಮಡಿವಾಳ ಮಾಚಿದೇವ, ಹರಳಯ್ಯ, ಕಿನ್ನರೀ ಬ್ರಹ್ಮಯ್ಯ, ಮಧುವರಸ, ಸೊಡ್ಡಳ ಬಾಚರಸ, ಇಂಥ ಶಿವಶರಣರು ಉದ್ಭವಿಸಿ ವೀರಶೈವ ಮತಕ್ಕೆ ಹೊಸ ಕಳೆಯನ್ನು ತಂದುಕೊಟ್ಟರು.

ಇನ್ನು ಮುಂದಿನ ಲೇಖದಲ್ಲಿ ಬಸವೇಶ್ವರನಿಗುಂಟಾದ ಧಾರ್ಮಿಕ ಪ್ರೇರಣೆಗಳನ್ನೂ ಅವನು ಸಂಗಮಕ್ಷೇತ್ರಕ್ಕೆ ಹೋದಾಗಿನ ಸಂಗತಿಗಳನ್ನೂ ವಿವರಿಸುವೆವು

---

# ಷಟ್ ಸ್ಥಲಗಳು.

(ಲೇ:- ಶ್ರೀ. ಬಸವಣ್ಣಾ ಚನ್ನಪ್ಪ ಪಟ್ಟೇದ)

---

ವೀರಶೈವರಿಗೆ ಅಷ್ಟಾವರಣ ಷಟ್‌ಸ್ಥಲಗಳೇ ಮುಖ್ಯವಾದವುಗಳೆಂದು ಎಲ್ಲರೂ ಹೇಳುತ್ತಾರಷ್ಟೇ. ಆದರೆ ಅವುಗಳ ನಿಜಸ್ಥಿತಿಯನ್ನರಿತವರು ಬಹು ಸ್ವಲ್ಪ ಜನರಿರುವರೆಂಬುದು ವಿಷಾದದ ಸಂಗತಿಯು. ಇತ್ತಿತ್ತಲಾಗಿ ವಚನಶಾಸ್ತ್ರದ ವಿಸ್ತಾರವಾಗಹತ್ತಿರುವದರಿಂದ ಸಾಮಾನ್ಯ ಜನರಲ್ಲಿ ಹಲಕೆಲವರು ಅತ್ತ ಗಮನಿಸಹತ್ತಿದರು. ಆದುದರಿಂದ ತಮ್ಮ ಧರ್ಮವೆಂದರೆ ಏನೆಂಬುದರ ಮಸಮಸಕಾದ ಕಲ್ಪನೆಯಾದರೂ ಅವರಲ್ಲಿ ಸ್ಥೂಲ ಮಾನದಿಂದ ಒಡಮೂಡಲಿಕ್ಕೆ ಅವಸರವಾಯಿತು. ಶಿಕ್ಷಣ ಕ್ರಮದಲ್ಲಿ ವಚನ ಗ್ರಂಥಗಳ ಪ್ರವೇಶವಾದುದರಿಂದ, ಅನೇಕ ಸುಶಿಕ್ಷಿತರು ಅತ್ತ ದೃಷ್ಟಿಯನ್ನು ಹೊರಳಿಸಿದರು. ಅವರ ಪ್ರಯತ್ನಗಳಿಂದಲೇ ವಚನಶಾಸ್ತ್ರದ ದಿವ್ಯಪ್ರಕಾಶವು ಅದೆಂತಹ ಅಗಮ್ಯವಾದುದೂ ಬೆರಗುಪಡಿಸುವಂತಹದೂ ಇರುವದೆಂಬುದು, ತುಸು ತುಸು ಮನವರಿಕೆಯಾಗಹತ್ತಿರುವದು. ಇರಲಿ. ಅಷ್ಟಾವರಣ ಪಂಚಾಚಾರಗಳ ಸಾಧನದಿಂದ ಲಿಂಗಾಯತರು ಷಟ್‌ಸ್ಥಲ ಜ್ಞಾನವನ್ನು ಹೊಂದತಕ್ಕದ್ದಿರುವದು. ಅದೇ ನಮ್ಮ ಕೊನೆಯ ಧ್ಯೇಯ! ಈ ಷಟ್‌ಸ್ಥಲಗಳ ತೀರ ಸಾದಾ ಮುದ್ದಾಂ ತಿಳುವಳಿಕೆಯನ್ನು ಅರಿಯದ ಸಾಮಾನ್ಯ ಜನತೆಯ ಮುಂದಿಡಬೇಕೆಂದು ನಾನು ಹಾರೈಸಿರುವೆನು. ಇದರಿಂದ ಲಿಂಗಾಂಗಿಗಳು ಆ ಜ್ಞಾನವನ್ನು ಅದು ಹೇಗೆ ವ್ಯವಹಾರದಲ್ಲಿ ಬಳಕೆಗೆ ತರಬೇಕೆಂಬುದು ತಮ್ಮ ಮಟ್ಟಿಗಾದರೂ ತಿಳಿಯಬಹುದೆಂದು, ನಾನು ನಿರೀಕ್ಷಿಸಿರುವೆನು. ಇದು ನನ್ನಂತಹ ಅಲ್ಪ ಮತಿಯವನ ತಾಕತ್ತಲ್ಲವೆಂಬುವದನ್ನು ನಾನು ಬಲ್ಲೆನು. ಆದರೂ ನನ್ನಿಂದ ಈ ವಿಷಯದಲ್ಲಿ ಕಿಂಚಿತ್ತಾದರೂ ಜನ ಸೇವೆ ಘಟಿಸಲೆಂದೂ ಸಮಾಜದೊಳು ಇಷ್ಟು ಚರ್ಚೆಗೆ ಆಸ್ಪದವಾಗಲೆಂದೂ ಸದುದ್ದೇಶ ಹಿಡಿದು ಇದಕ್ಕೆ ಉದ್ಯುಕ್ತನಾಗಿರುವೆನು. ಬಲ್ಲ ಮಹಾನುಭಾವರು ಮುಂದಾಗಿ ತಪ್ಪಿದುದನ್ನು ತಿದ್ದಿ, ಅಜ್ಞಾನರೋಗದಿಂದ ಬಳಲುತ್ತಿರುವ ಸಮಾಜದ ಆರೋಗ್ಯಕ್ಕೆ ನೆರವಾಗುವಂತೆ ಮಾಡುವರೆಂದು ಬಲವಾದ ಆಶೆವಿಡಿದಿರುವೆನು.

ಏಕಮೇವಾದ್ವಿತೀಯಂ ಬ್ರಹ್ಮ ವೆನಿಸುವ ಪರವಸ್ತುವು ಮೊದಲು ಎರಡಾಗಿ, ಲಿಂಗ-ಅಂಗವೆನಿಸಿ ಪೂಜ್ಯ ಪೂಜಕನಾಗಿ ನಿಂತಿತು. ಬಳಿಕ ಲಿಂಗವು ಇಷ್ಟ, ಪ್ರಾಣ, ಭಾವವೆಂದೂ ಅಂಗವು ತ್ಯಾಗಾಂಗ ಭೋಗಾಂಗ, ಯೋಗಾಂಗವೆಂದೂ ಮೂರು ತೆರನಾಯಿತು. ತರುವಾಯ ಮತ್ತೊಂದರಲ್ಲಿ ಎರಡೆರಡಾಗಿ ಲಿಂಗವು ಆಚಾರ-ಗುರು-ಶಿವ-ಚರ-ಪ್ರಸಾದ ಮಹತ್ (ಮಹಾ) ಎಂತಲೂ ಅಂಗವು ಈಶ್ವರ ೧ ಮಹೇಶ್ವರ–ಪ್ರಸಾದಿ-ಪ್ರಾಣಲಿಂಗಿ ಶರಣ-ಐಕ್ಯವೆಂತಲೂ, ಆರು ವಿಧವಾದುದು. ಅಂಗವೆಂದರೆ ಭಕ್ತ. ಲಿಂಗವೆಂದರೆ ಶಿವ. ಲಿಂಗರೂಪ ಈ ಶಿವನನ್ನು ಆರಾಧಿಸಿ ಕೃತಾರ್ಥರಾಗಬೇಕೆಂದು ಬಯಸುವವರೇ ಶಿವಭಕ್ತರು ಅಥವಾ ಲಿಂಗಾಯತರು ಇಲ್ಲವೆ ವೀರಶೈವರು. ಇವರೆಲ್ಲರು ಒಂದೇ ಒಂದಾದ ಸಮಾಜದವರು. ಇವರಲ್ಲಿ ಭವಿಗಳಂತೆ ಜಾತಿಗಳಾಗಲಿ ಪಂಗಡಗಳಾಗಲಿ ಮೂಲತಃ ಇಲ್ಲವೇ ಇಲ್ಲ. ಹಾಗೆ ಯಾರಾದರೂ ಉದ್ಯೋಗ ಭೇದದಿಂದ ಎಣಿಸುತ್ತಿದ್ದರೆ, ಅದು ಅಜ್ಞಾನ; ದೊಡ್ಡ ತಪ್ಪು. ಎಲ್ಲರೂ (ಅವರು ಗುರು-ಜಂಗಮರೇ ಇರಲಿ. ಅಯ್ಯಗಳೇ ಇರಲಿ, ಸಾಮಾನ್ಯತಃ ಶಿವಭಕ್ತರೇ ಇರಲಿ, ಎಲ್ಲರೂ) ಷಟ್‌ಸ್ಥಲ ಭಕ್ತರಾಗಿ, ಷಡ್ಲಿಂಗಗಳನ್ನು ಆರಾಧಿಸಿಯೇ ಭವಪಾಶದಿಂದ ಮುಕ್ತರಾಗತಕ್ಕದ್ದಿರುವದು. ಆದ್ದರಿಂದ ಇದು ನಮಗೆ ಅದೆಷ್ಟು ಮಹತ್ವದ ವಿಷಯವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಇನ್ನು ಮುಖ್ಯ ವಿಷಯದ ಕಡೆಗೆ ತಿರುಗುವಾ.

---

೧ ಭಕ್ತವೆಂಬ ಹೆಸರು ಎಲ್ಲ ಲಿಂಗಾಂಗಿಗಳಿಗೆ ಸಾಮಾನ್ಯವಾಗಿರುವದೆಂಬುದು "ದೇವ ದೇವ ಭಿನ್ನಪವನವಧಾರು ಕೂ...ಸ...ದೇವ." ಮತ್ತು 'ಆಧಾರದಲ್ಲಿ ಆಚಾರಲಿಂಗವ ಪೂಜಿಸಿ......ಮಹಾಲಿಂಗ ಗುರು ಶಿವಶಿದ್ಧೇಶ್ವರ ಪ್ರಭುವೆ' ಇತ್ಯಾದಿ ವಚನಗಳಿಂದ ಸುಸ್ಪಷ್ಟವಾಗಿರುವದರಿಂದ ಷಟ್‌ಸ್ಥಲಗಳಲ್ಲಿ ಮೊದಲಿಗನಾದ ಅಂಗನಿಗೊಬ್ಬನಿಗೇ ಅದನ್ನು ಉಪಯೋಗಿಸುವದು ಅನೇಕರ ತಪ್ಪು ಭಾವನೆಗೆ ಕಾರಣವಾಗಿರುತ್ತದೆಂದು ಕಂಡು ಬರುತ್ತದೆ. ಅದುದರಿಂದ ಇಲ್ಲಿ ಅವರಿಗೆ ಈಶ್ವರ ಎಂಬ ಬೇರೆ ಹೆಸರಿಟ್ಟು ವರ್ಗೀಕರಿಸಿರುತ್ತದೆ

ಷಟ್‌ಸ್ಥಲವೆಂಬ ದಿವ್ಯವಾದ ಮಹಾಜ್ಞಾನವು ಒಂದು ಭವ್ಯವಾದ ಆರಂತಸ್ತಿನ ಮಂದಿರವೆಂದು ಭಾವಿಸೋಣ. ಮಂದಿರದಲ್ಲಿ ಭಾಗವಿಭಾಗಗಳಿರುತ್ತಿದ್ದು ಅವೆಲ್ಲವುಗಳಲ್ಲಿಯೂ ವಿಧವಿಧದ ಪದಾರ್ಥಗಳು ತುಂಬಿರುವವಷ್ಟೇ. ಅದೇ ಮೇರೆಗೆ ಈ ಜ್ಞಾನಮಂದಿರದಲ್ಲಿಯೂ ಅನೇಕ ಕೋಣೆ ಒಳಕೋಣೆಗಳಿದ್ದು ಅವುಗಳಲ್ಲಿ ಬಗೆಬಗೆಯ ಜ್ಞಾನವು ಸಂಗ್ರಹಿತವಾಗಿದೆ. ಈ ಕೋಣೆಗಳಿಗೆ ಸಕೀಲಗಳೆನ್ನುವರು. ಆದುದರಿಂದ ಷಟ್‌ಸ್ಥಲದ ಜ್ಞಾನವಾಗಬೇಕಾದರೆ ಈ ಕೀಲಗಳನ್ನು ಮರೆಯುವಂತಿಲ್ಲ. ಈ ಸಕೀಲರೂಪ ಪ್ರತಿಯೊಂದು ಕೋಣೆಗಳಲ್ಲಿ ಹೊಕ್ಕು ಅಲ್ಲಿರುವ ಜ್ಞಾನವನ್ನು ಹಸ್ತಗತ ಮಾಡಿಕೊಳ್ಳದಿದ್ದರೆ ಗತ್ಯಂತರವೇ ಇಲ್ಲ. ಅನೇಕರು ತಾವು ಸಕೀಲಗಳನ್ನು ಬಲ್ಲೆವೆಂದು ಹೇಳುತ್ತಾರೆ. ಆದರೆ ಅವರು ಕೆಳಗಿನ ಪಟ್ಟಿಯಲ್ಲಿ ಕಾಣಿಸಿದಂತೆ ಬಹುಶಃ ಬರೀ ಹೆಸರುಗಳನ್ನು ಮಾತ್ರ ಹೇಳಬಲ್ಲರೇ ಹೊರತು ಅವುಗಳ ಮರ್ಮವನ್ನರಿತು ಆಚರಿಸುವವರಲ್ಲ. ಆದುದರಿಂದ ಸಕೀಲಗಳ ನಿಜಸ್ಥಿತಿಯನ್ನು ಮನವರಿಕೆ ಮಾಡಿಕೊಂಡು ಆ ಪ್ರಕಾರ ಜೀವನದಲ್ಲಿ ಶಕ್ಯವಿದ್ದ ಮಟ್ಟಿಗೆ ನಡವಳಿಕೆಯಲ್ಲಿ ತರಲೆಂಬ ಆಕಾಂಕ್ಷೆಯಿಂದ ಈ ವಿಷಯವನ್ನು ಈಗ ಎತ್ತಿದುದಾಗಿದೆ. ಅದನ್ನು ಸಫಲಗೊಳಿಸುವ ಭಾರವು ಸಾಮಾಜಿಕರನ್ನೇ ಅವಲಂಬಿಸಿರುವದು.

ಸಕೀಲಗಳು ಬೇರೆ ಬೇರೆ ದೃಷ್ಟಿಯಿಂದ ಅನೇಕ ರೀತಿಯಾಗಿ ವರ್ಗೀಕರಿಸಲ್ಪಟ್ಟಿವೆ. ಆದರೂ ಅವುಗಳಲ್ಲಿ ಒಂದಾದ ತೀರ ಸ್ಥೂಲಮಾನದ ಇಷ್ಟು ವಿಧಸಕೀಲಗಳ ದ್ವಾರವಾಗಿ ನಾನು ಈಗ ಆ ಷಟ್‌ಸ್ಥಲಗಳನ್ನು ಕುರಿತು ವಿವೇಚಿಸುವೆನು. ಆ ಪಟವು ಕೆಳಗೆ ಕೊಡಲಟ್ಟಿದೆ.

---

ಈ ಬಗ್ಗೆ ಒಂದು ಸ್ವತಂತ್ರ ಲೇಖನನ್ನೇ ಬರೆಯುವದು ಅವಶ್ಯವದೆ. ಮುಂದೆ ನೋಡೋಣ.

— ಅಷ್ಟ ವಿಧ ಸಕೀಲಗಳು —

| ಕ್ರ. ಸಂ. | ಚಕ್ರ | ಅಂಗ | ಲಿಂಗ | ಶಕ್ತಿ | ಭಕ್ತಿ |
|---|---|---|---|---|---|
| | ೧ | ೨ | ೩ | ೪ | ೫ |
| ೧ | ಆಧಾರ | ಈಶ್ವರ | ಆಚಾರ | ಕ್ರಿಯಾ | ಶ್ರದ್ಧಾ |
| ೨ | ಸ್ವಾಧಿಷ್ಠಾನ | ಮಹೇಶ್ವರ | ಗುರು | ಜ್ಞಾನ | ನಿಷ್ಠಾ |
| ೩ | ಮಣಿಪೂರಕ | ಪ್ರಸಾದಿ | ಶಿವ | ಇಚ್ಛಾ | ಅವಧಾನ |
| ೪ | ಅನಾಹತ | ಪ್ರಾಣಲಿಂಗಿ | ಚರ | ಆದಿ | ಅನುಭಾವ |
| ೫ | ವಿಶುದ್ಧಿ | ಶರಣ | ಪ್ರಸಾದ | ಪರಾ | ಆನಂದ |
| ೬ | ಆಜ್ಞೇಯ | ಐಕ್ಯ | ಮಹಾ | ಚಿತ್ | ಸಮರಸ |

| ಕ್ರ. ಸಂ. | ಹಸ್ತ | ಮುಖ | ಪದಾರ್ಥ | ಕಲೆ | ವಿಶೇಷ |
|---|---|---|---|---|---|
| | ೬ | ೭ | ೮ | | |
| ೧ | ಸುಚಿತ್ತ | ಘ್ರಾಣ | ಸುಗಂಧ | ನಿವೃತ್ತಿ | ಇವುಗಳಲ್ಲಿ ಕಲೆಗಳೇನು ಸ್ವತಂತ್ರವಾದವುಗಳಲ್ಲ ಅವು ಶಕ್ತಿಗಳ ಪರ್ಯಾಯಗಳು ಅಂಗನು ಅವುಗಳನ್ನು ಪಡೆದಾಗಲೇ ಆತನು ಆಯಾ ಲಿಂಗಗಳಲ್ಲಿ ಬೆರೆಯಲು ಯೋಗ್ಯನಾಗುತ್ತಾನೆ. |
| ೨ | ಸುಬುದ್ಧಿ | ಜಿಹ್ವೆ | ಸುರಸ | ಪ್ರತಿಷ್ಠಾ | |
| ೩ | ನಿರಹಂಕಾರ | ನೇತ್ರ | ಸುರೂಪ | ವಿದ್ಯಾ | |
| ೪ | ಸುಮನ | ತ್ವಚೆ | ಸುಸ್ಪರ್ಶ | ಶಾಂತಿ | |
| ೫ | ಸುಜ್ಞಾನ | ಶ್ರೋತ್ರ | ಸುಶಬ್ದ | ಶಾಂತ್ಯತೀತೆ | |
| ೬ | ಸದ್ಭಾವ | ಹೃದಯ | ಸುತೃಪ್ತಿ | ಶಾಂತ್ಯತೀತೋತ್ತರೆ | |

ಷಟ್‌ಸ್ಥಲಗಳನ್ನನುಸರಿಸಿ ಪ್ರತ್ಯೇಕ ಸಕೀಲದಲ್ಲಿ ಆರಾರು ಪ್ರಕಾರಗಳಿರುವವು ಈ ಸಕೀಲಗಳಲ್ಲಿ ಮೊದಲನೆಯದು ಚಕ್ರವೆಂಬುದಾಗಿದೆ. ಈ ಆರು ಚಕ್ರಗಳೇ ಷಟ್‌ಸ್ಥಲಗಳ ಉತ್ಪತ್ತಿಗೆ ಮೂಲವು. ಚಕ್ರಗಳೆಂದರೆ ದೇಹಗತ ಜ್ಞಾನತಂತುಗಳ ಕೇಂದ್ರಗಳ ಸ್ಥಾನಗಳು. ಇವೇ ಜ್ಞಾನಕ್ಕೆ ಆಧಾರಗಳು. ಇವು ಹೃದಯದ ಕೆಳಭಾಗವಾದ ಗುದಸ್ಥಾನದಿಂದ ಭ್ರೂಮಧ್ಯದ ವರೆಗೆ ಕ್ರಮವಾಗಿ ಆರು ಇರುತ್ತವೆ. ಅಲ್ಲಿ ನೆಲೆಸಿರುವ ಭಿನ್ನ ಭಿನ್ನವಾದ ಜ್ಞಾನಕ್ಕೆ (ಲಿಂಗಗಳಿಗೆ) ನಕಾರಾದಿ ಪ್ರಣವ ಸ್ವರೂಪ ಸಂಜ್ಞೆ ಕೊಟ್ಟು ಮಂತ್ರಮಯ ಮೂರ್ತಿಗಳೆಂದು ಭಾವಿಸಿರುವರು. ಉಳಿದ ಸಕೀಲಗಳಲ್ಲಿ ಶಕ್ತಿಗಳು ಲಿಂಗಕ್ಕೂ ಮಿಕ್ಕವುಗಳು ಅಂಗಕ್ಕೂ ಸಂಬಂಧಿಸಿರುವವು.

ಪ್ರತಿಯೊಂದು ಲಿಂಗದಲ್ಲಿ ಒಂದೊಂದು ದಿವ್ಯಶಕ್ತಿಯುಂಟು. ಅದೇ ಮೇರೆಗೆ ಭಕ್ತನು ಉದ್ಧಾರಹೊಂದಲಿಕ್ಕೆ ಆ ಶಕ್ತಿಯೇ ಭಕ್ತಿಯಾಗಿ ಪರಿಣಮಿಸಿ, ಅವನಲ್ಲಿ ಕಲಾಸ್ವರೂಪವನ್ನುಂಟುಮಾಡುವದು. ಆಗ ಮಾತ್ರ ಭಕ್ತನು ಲಿಂಗದಲ್ಲಿ ಬೆರೆಯಲಿಕ್ಕೆ ತಕ್ಕವನಾಗುವನು. ಈ ಬಗೆಯ ಸಾರೂಪ್ಯವನ್ನು ಪಡೆಯದಿದ್ದರೆ ನಿರ್ವಾಹವೇ ಇಲ್ಲ. ಭಕ್ತನಾಗಿ ಶಿವಮಾರ್ಗದಲ್ಲಿ ಅಡಿ ಇಡುವದೇ ಸಾಲೋಕ್ಯ, ಶಿವಮಾರ್ಗದಲ್ಲಿ ಪ್ರಗತಿ ಪಡೆವುದೇ ಸಾಮೀಪ್ಯ, ಲಿಂಗ ಕಲೆಗಳನ್ನು ಧರಿಸುವದೇ ಸಾರೂಪ್ಯ, ಲಿಂಗದಲ್ಲಿ ಸಾಮರಸ್ಯವೇ ಸಾಯುಜ್ಯ, ಇವೇ ಚತುರ್ವಿಧ ಮೋಕ್ಷಗಳು. ಆದುದರಿಂದ ಲಿಂಗಾಂಗಸಾಮರಸ್ಯವನ್ನು ಬಯಸುವ ನಾವು ವೀರಶೈವರು, ಮೊದಲು ಸಾರೂಪ್ಯ ಪದವಿಯನ್ನು ದೊರಕಿಸುವದಕ್ಕಾಗಿ, ಲಿಂಗದ ಕಲೆಗಳನ್ನು ಸಾಧಿಸಿಕೊಳ್ಳಲಿಕ್ಕೇ ಬೇಕು. ಅದನ್ನು ಹೇಗೆ ಪಡೆಯಬೇಕೆಂಬುದನ್ನೇ ಈಗ ಯಥಾಮತಿ ಅರಿಕೆಮಾಡುವೆನು.

ಈಶ್ವರ— ಸಂಸಾರದ ಕಷ್ಟನಷ್ಟಗಳಲ್ಲಿ ಬೆಂದುಬೆಂಡಾಗಿ ಮನುಜನು ಬೇಸತ್ತುಹೋಗಿ, ಅದರಲ್ಲಿ ಹ್ಯೇಯ ಬುದ್ಧಿಯನ್ನು ತಾಳಿದ ಮೇಲೆ ಗುರುಕಾರುಣ್ಯವನ್ನು ಬಯಸುವನಷ್ಟೇ! ಆಗ ಅವನಲ್ಲಿ ಗುರುವಿನ ಬಗ್ಗೆ ಅತ್ಯಂತ ಹಂಬಲವು ತಲೆದೋರುತ್ತದೆ. (ಇಂತಹ ಹಂಬಲವು ಶಿವದೀಕ್ಷೆ ಹೊಂದತಕ್ಕ ಬಾಲಕರಲ್ಲಿ ಹುಟ್ಟುವಂತೆ, ಪಾಲಕರು ಮೊದಲಿನಿಂದಲೇ ನೋಡಿಕೊಳ್ಳುತ್ತಿರಬೇಕು). ಆಗ ಅವನಿಗೆ ಯೋಗ್ಯ ಮಾರ್ಗ

ತೋರಿಸುವ ಸದ್ಗುರುವೇ ಬೇಕು. ಅವನಲ್ಲಿ ಶಿಷ್ಯನು ಸ್ವಾಭಾವಿಕವಾಗಿಯೇ ಶ್ರದ್ಧೆಯನ್ನು ವಹಿಸುವನು. ಗುರುವು ಅವನಿಗೆ ಪೂಜಿಸಲಿಕ್ಕೆಂದು, ಲಿಂಗವನ್ನು ದಯಪಾಲಿಸುವನು. ಮಗುವಿನ ಚಿತ್ಕಳೆಯನ್ನು ಬಹಿಷ್ಕರಿಸಿ ಕರದಲ್ಲಿ ಕೊಡುವನು. ಈ ಚಿತ್ಕಳೆಯೆಂದರೆ ಶ್ರೀಪ್ರಭುದೇವರು ಹೇಳಿದಂತೆ ಅರುಹು (ಜ್ಞಾನವು). ಅರುಹು ಸ್ವರೂಪವಾದ ಈ ಕುರುಹನ್ನು (ಲಿಂಗವನ್ನು) ಪೂಜಿಸುವದೆಂದರೆ, ಯಾವಾಗಲೂ ಜ್ಞಾನಮಾರ್ಗವಿಡಿದು ನಡೆವುದೇ ಹೊರತು ಮತ್ತೇನೂ ಅಲ್ಲ. ಬರಿಯ ಅಷ್ಟವಿಧಾರ್ಚನೆ ಷೋಡಶೋಪಚಾರಗಳು ನಿಜವಾದ ಪೂಜೆಗಳಾಗಲಾರವು. ಆದರೂ ಅವನ್ನು ಬಿಡತಕ್ಕದಲ್ಲ. ಅಷ್ಟಕ್ಕೇ ಸಂತುಷ್ಟರಾದರೆ ನಾವು ನರಗುರಿಗಳಾಗುವೆವು. ಶಾಲೆಗೆ ಹೋದ ಮಗುವಿಗೆ ಅದು ಹೇಗೆ ಉಪಾಧ್ಯಾಯನು ಅಕ್ಷರಾಭ್ಯಾಸವನ್ನು ಹಚ್ಚುವನೋ ಹಾಗೆಯೇ, ಈ ಸದ್ಗುರುವು ಮೊದಲು ಆಚಾರವಂತನಾಗಲಿಕ್ಕೆ ಬೋಧಿಸುತ್ತಾನೆ. ಆದುದರಿಂದ "ಆಚಾರವೇ ಗುರು"ವೆಂದು ವಚನಶಾಸ್ತ್ರಕಾರರು ಹೇಳಿದಾರೆ. ಗುರುವಿಗೆ ತನುವನೊಪ್ಪಿಸುವುದೆಂದರೆ, ಯಾವಾಗಲೂ ತನುವಿನಿಂದ ಯೋಗ್ಯವಾದ ಆಚಾರಗಳೇ ಘಟಿಸುವಂತೆ ವರ್ತಿಸಬೇಕೆಂದು ತಿಳಿಯಬೇಕು ಅನಾಚಾರಗಳು ಒದಗದಂತೆ ಬಲು ಸಾವಧವಾಗಿರಬೇಕು ಲಿಂಗಪೂಜೆಯನ್ನು (ಅಂದರೆ ಜ್ಞಾನಸಾಧನೆಯನ್ನು) ಹಿಡಿದವರಿಗೆ, ಮೊದಲು ಕೇವಲ ನೀತಿಯನ್ನವಲಂಬಿಸಿ ಸದ್ಗುಣಸದಾಚಾರಿಗಳಾಗಲಿಕ್ಕೆ ಬೋಧಿಸುವದರ ವಿನಾ, ಇನ್ನಾವುದನ್ನು ಹೇಳತಕ್ಕದ್ದದೆ? ಈ ಸದ್ಗುಣಸದಾಚಾರಂಗಳೇ ಆಚಾರಲಿಂಗವು. ಈ ಬಗ್ಗೆ ಬಲು ಎಚ್ಚರವಿಟ್ಟುಕೊಂಡು ನಡೆಯುವದೇ ಆಚಾರಲಿಂಗಪೂಜೆಯು. ಈ ಲಿಂಗವನ್ನು ಸುಚಿತ್ತ ಹಸ್ತದಲ್ಲಿ ಧರಿಸಬೇಕಾಗುವದು. ಚಿತ್ತಶುದ್ಧಿಯಿಲ್ಲದವರಿಂದ ಆಚಾರಲಿಂಗದ ಪೂಜೆಯು ಅದೆಂತು ಘಟಿಸುವದು? ಅವರು ದುರಾಚಾರಿಗಳೂ ಅನಾಚಾರಿಗಳೂ ಆಗುವದು ಸ್ವಾಭಾವಿಕ! ಆಕಾರಣ ಈಶ್ವರನು (ದೀಕ್ಷೆಗೊಂಡು ಶಿವಮಾರ್ಗದಲ್ಲಿ ಕಾಲಿಟ್ಟ ಮೊದಲಿಗನು) ತನ್ನಿಂದ ಸ್ವಾರ್ಥಮೂಲಕ ಅತ ಏವ ಅಜ್ಞಾನಮೂಲಕ, ಅದಾವ ದುಷ್ಕೃತ್ಯಗಳೂ ಒಗದಂತೆ ಜಾಗ್ರತೆಯಿಂದಿರಬೇಕು ಈಪ್ರಕಾರ ಅನಿಷ್ಟ ಕಾರ್ಯಗಳನ್ನು ತೊರೆಯುವದೇ ನಿವೃತ್ತಿಕಲೆಯು. ಈ ಕಳೆಯನ್ನು ಧರಿಸಿ, ಚಿತ್ತದಲ್ಲಿ ಸುವಿಚಾರ ಸದ್ಭಾವನೆಗಳನ್ನಿಂಬಿಟ್ಟುಕೊಂಡು, ನೀತಿಯುತನಾಗಿ ನಿರಂತ

ರದಲ್ಲಿಯೂ ಸನ್ಮಾರ್ಗದಲ್ಲಿಯೇ ನಡೆಯಲಿಕ್ಕೆ ಪ್ರಯತ್ನಿಸಬೇಕು. ಇದೇ ಈಶ್ವರ ಭಕ್ತನ ಕರ್ತವ್ಯವು, ಅಥವಾ ಲಿಂಗಪೂಜೆಯು. ಸಾರಾಂಶವೇ ನಂದರೆ— ಈತನ ಬಹಿರ್ಗತಕಾಯೋನ್ಮುಖ ಕ್ರಿಯಾಶಕ್ತಿಯು ಬಲು ಪರಿಶುದ್ಧವಾಗಿರಬೇಕು. ಶ್ರೀಬಸವಣ್ಣನವರು ಈತನಿಗೆ—

"ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿ
ಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ,
ಇದಿರು ಹಳಿಯಬೇಡ. ಇದೇ ಅಂತರಂಗಶುದ್ಧಿ, ಇದೇ ಬಹಿರಂಗ
ಶುದ್ಧಿ, ಇದೇ ನಮ್ಮ ಕೂಡಲಸಂಗನನೊಲಿಸುವ ಪರಿ.

ಎಂದು ಮುಂತಾಗಿ ಬೋಧಿಸಿದ್ದಾರೆ.

ಮಹೇಶ್ವರ— ಮೇಲೆ ಹೇಳಿದಂತೆ ತನ್ನಲ್ಲಿ ಆಚಾರವಂತಿಕೆಯನ್ನು ಕ್ರಮಕ್ರಮವಾಗಿ ನೆಲೆಗೊಳ್ಳಿಸಿಕೊಳ್ಳುತ್ತ ಸಾಗಿ ಕಡೆಗೆ ಸದಾಚಾರದ ಮೂರ್ತಿಯಾದ ಈಶ್ವರನೇ ಮಹೇಶ್ವರನೆನಿಸುವನು. ಈ ಬಗ್ಗೆ ಶ್ರೀಬಸವಣ್ಣನವರು —

"ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲಬೇಕು ಶರಣಂಗೆ
ಪರಸತಿಯನೊಲ್ಲೆನೆಂಬ. ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ.
ಛಲಬೇಕು ಶರಣಂಗೆ ಲಿಂಗ-ಜಂಗಮ ಒಂದೆಂಬ. ಛಲಬೇಕು ಶರಣಂಗೆ
ಪರವಾದಿನಿಗ್ರಹದಲ್ಲಿ. ಛಲಬೇಕು ಶರಣಂಗೆ ಪ್ರಸಾದದಿಟವೆಂಬ. ಛಲ
ವಿಲ್ಲದವರ ಮೆಚ್ಚ ಕೂಡಲಸಂಗಮದೇವ."

ಎಂದು ಉಸುರಿದ್ದಾರೆ. ಈ ಮಹೇಶ್ವರನು ಉದರಂಭರಣಕ್ಕಾಗಿ ಭಿಕ್ಷೆಯನ್ನು ಬೇಡಬಾರದು. ವಂಚಿಸಿ ಪರದ್ರವ್ಯವನ್ನು ಸೆಳೆಯಬಾರದು. ಸ್ವಪತ್ನಿಯಲ್ಲದಿತರರನು ಮಹಾದೇವಿಯಂತೆ ಭಾವಿಸಿ ನಡೆಯಬೇಕು. ಇಷ್ಟಲಿಂಗದ ವ್ಯತಿರಿಕ್ತವಾಗಿ ಬೇರೆ ದೇವರು ಜಗತ್ತಿನಲ್ಲಿ ಉಂಟೆಂಬ ಬಯಲಭ್ರಾಂತಿಯನ್ನು ಸಂಪೂರ್ಣವಾಗಿ ಕಿತ್ತುಹಾಕಬೇಕು. ಈ ವಿಷಯದಲ್ಲಿ,

"ಕಟ್ಟಿದ ಲಿಂಗವ ಬಿಟ್ಟು ಮೆಟ್ಟಿದ ಲಿಂಗಕ್ಕೆ ಹೋಗಿ ಹೊಟ್ಟೆಡಿಯಾಗಿ
ಬೀಳುವ ಲೊಟ್ಟೆಮೂಳರನು...... ಹೊಡೆಯೆಂದೆ ನಮ್ಮ ಅಂಬಿಗರ
ಚೌಡಯ್ಯ

ಎಂಬ ಪ್ರಮಥರ ವಚನವನ್ನು ವೀರಶೈವರೆಲ್ಲರು ಸರಿಯಾಗಿ ಗಮನಿಸಿ, ಮನೆದೈವ, ಕುಲದೈವ, ಕ್ಷೇತ್ರದೈವ, ಎಂಬ ಹುಚ್ಚುಕಲ್ಪನೆಗಳನ್ನೆಲ್ಲ ಬಿಟ್ಟು, ಲಿಂಗದಲ್ಲೇ-ಜ್ಞಾನಮಾರ್ಗವಿಡಿದು ನಡೆಯುವದರಲ್ಲೇ-ಘನತರವಾದ ನಿಷ್ಠೆಯನ್ನು ಧರಿಸಬೇಕು. (ಈ ನಿಷ್ಠೆಯೇ ಮಹೇಶ್ವರನಿಗೆ ಹೇಳಿದ ಭಕ್ತಿಯು.) ಸಾಮಾನ್ಯವಾಗಿ ಜಂಗಮ ಶಬ್ದಕ್ಕೆ "ಮನುಷ್ಯ" ಎಂಬರ್ಥವನ್ನು ಹೇಳಬಹುದು. ಆದರೂ ಈ ವಚನದಲ್ಲಿ ಲಿಂಗಧಾರಿ ಮನುಜನೆಂದು ನಿರ್ದಿಷ್ಟವಾಗಿದೆ. ವೀರಶೈವರೆಲ್ಲರೂ— ಅವರಾವ ಕಾಯಕ ಮಾಡುತ್ತಿದ್ದರೂ ಅವರನ್ನು—ಲಿಂಗ (ಶಿವ) ಎಂದು ಬಗೆದು, ಅವರೊಡನೆ ಆಚರಿಸಬೇಕು. ಇದೇ ಮೇರೆಗೆ ವೀರಶೈವವನ್ನು ಯಾರಾದರೂ ದೂಷಿಸಿದರೆ, ಅಂತಹ ಪರವಾದಿಗಳನ್ನು (ಅವರ ಮತವನ್ನು) ಖಂಡಿಸಿ, ವೀರಶೈವತ್ವವನ್ನು ಪ್ರಸ್ಥಾಪಿಸುವಷ್ಟು ಜ್ಞಾನಸಾಮರ್ಥ್ಯವನ್ನು ಮಹೇಶ್ವರನು ಹೊಂದಬೇಕು. ಗುರುಲಿಂಗಕ್ಕೆ ಸುಬುದ್ಧಿಯೇ ಕರವೆಂದರೆ ಪೂಜಿಸುವ ಹಸ್ತವಾಗಿದೆ. ಆಚಾರ ವಿಚಾರದಲ್ಲಿಯೂ ತತ್ವನಿರ್ಣಯ ನಿರ್ವಾಣತೆಯಲ್ಲಿಯೂ ಹುಟ್ಟುವಂತೆ ಬುದ್ಧಿಪ್ರಾಶಸ್ತ್ಯವನ್ನು ಪಡೆಯಬೇಕಾಗುವದು. ಈ ಪ್ರಕಾರ ಸದಾಚಾರಸಂಪನ್ನನಾದಾಗಲೇ ಆ ಲಿಂಗಾಂಗಿಯು ಈಶ್ವರತ್ವದಿಂದ ಮಹೇಶ್ವರತ್ವಕ್ಕೆ ಏರುವನು. ಮಹೇಶ್ವರನು ಪೂಜಿಸುವ ಲಿಂಗವು ಗುರುಲಿಂಗವು. ಆತನ ಆಚಾರವು ಗುರುಸ್ವರೂಪಕ್ಕೆ ಅಂದರೆ ಮೇಲ್ಪಟ್ಟಕ್ಕೆ—ಬಂದಾಗಲೇ ಆ ಆಚಾರಲಿಂಗವು ಗುರುಲಿಂಗವಾಗುವದು. ಇಂತಹ ಗುರುಲಿಂಗ ಪೂಜಕನು ಸಮಾಜದಲ್ಲಿ ಬಹು ಪ್ರತಿಷ್ಠೆಯನ್ನು ಹೊಂದುವದು ಸ್ವಾಭಾವಿಕವೇ! ಈ ಪ್ರತಿಷ್ಠಾ ಕಲೆಯಿಂದಲೇ ಮಹೇಶ್ವರನು ಗುರುಲಿಂಗದಲ್ಲಿ ಬೆರೆಯಲು ಯೋಗ್ಯನಾಗುವನು.

ಪ್ರಸಾದಿ— ಗುರುಕೃಪೆಯನ್ನು ಪಡೆದು ಆತನಿಂದ ಪ್ರಸಾದವನ್ನು ಪಡೆದವರಿಗೆ ಪ್ರಸಾದಿಗಳೆಂದು ಸಾಮಾನ್ಯವಾಗಿ ಅನ್ನುವದುಂಟು. ನಮ್ಮ ಸಮಾಜದಲ್ಲಿ ಹೀಗೆ ಪ್ರಸಾದವನ್ನು ಕೈಕೊಂಡ ಅನೇಕ ಪ್ರಸಾದಿಗಳು ಎಲ್ಲೆಡೆಯಲ್ಲಿಯೂ ಕಂಡುಬರುತ್ತಾರೆ. ಇವರು ಈಶ್ವರ—ಮಹೇಶ್ವರವೆಂಬೆರಡು ಮೆಟ್ಟಲುಗಳನ್ನು ಏರಿ, ಬಹಿರ್ಗತಲಿಂಗ ಪೂಜೆಯನ್ನು ಮುಗಿಸಿ—ಸ್ಥೂಲಜ್ಞಾನವೆನಿಸುವ ಸದ್ಗುಣ ಸದಾಚಾರಗಳ ಉತ್ಕೃಷ್ಟ ಮೂರ್ತಿಯಾಗಿ – ಅಂತರ್ಲಿಂಗ ಪೂಜೆಗೆ ಕೈಚಾಚಿದವರು. ಪ್ರಸಾದಿಯು

"ಹೊರಗೆ ಕಾಣಿಸುವ ಈ ದೇಹವು ನಾನಲ್ಲ, ಅದಕ್ಕೆ ಸಾಕ್ಷೀಭೂತನಾಗಿ ಅದರೊಳಗಿರುವ ಆತ್ಮನೇ ನಾನು. ಆ ಆತ್ಮವು ಶಿವ (ಲಿಂಗ) ಸ್ವರೂಪವಾದುದು. ಆ ಕಾರಣ ನಾನು ಎಂದರೆ ಕೇವಲ ಶಿವನ ಹೊರತು ಬೇರೊಂದಲ್ಲ. ಎಂಬ ದೃಢವಿಶ್ವಾಸದಿಂದ, ತನ್ನನ್ನು ಶಿವನೊಳಗೆ ಮಾಡಿಕೊಂಡು ವರ್ತಿಸಬೇಕು. ಹೀಗೆ ಲಿಂಗಕ್ಕೆ ಕಾಯಾರ್ಪಣವಮಾಡಿ ಶಿವನಲ್ಲಿ ಅಡಗಿದಾಗಲೇ ಅವನು ನಿರಹಂಕಾರಿಯಾಗುವನು. ಇದೇ ಆತನ ಲಿಂಗಪೂಜೆಯು ಹಸ್ತ. ಮುಂದೆ ಅವನು ತನ್ನ ಇಚ್ಛೆಯಿಂದ ಒಡಲಕಳವಳಕ್ಕಾಗಲಿ ಬಾಯಿಸವಿಗಾಗಲಿ ಏನನ್ನೂ ಸ್ವೀಕರಿಸಕೂಡದು. ಸರ್ವ ವಿಷಯುಗಳನ್ನು ಕೇವಲ ಶಿವಲಿಂಗ ಪ್ರೀತ್ಯರ್ಥವಾಗಿ ಅವನಿಗೆ ತನ್ನ ಇಂದ್ರಿಯುಗಳ ಮುಖಾಂತರ ಸಮರ್ಪಿಸಿ, ಆ ಪ್ರಸಾದದಲ್ಲಿಯೇ ತಾನು ತೃಪ್ತನಾಗಬೇಕು; ಅಂದರೆ ಶಿವಲಿಂಗದೊಡನೆಯೇ ಭೋಗಿಸತಕ್ಕದಲ್ಲದೆ, ತಾನು ಬೇರೆ ಎಂಬ ಭಾವನೆಯನ್ನು ಎಷ್ಟು ಮಾತ್ರವೂ ತರಕೂಡದು. ಈ ವಿಷಯವಾಗಿ ಅವನು ಬಹು ಸಾವಧಾನಿಯಾಗಿರಬೇಕು. ಇದೇ ಆತನ ಭಕ್ತಿಯೆನಿಸುವದು. ಹೀಗೆ ತಪ್ಪದೆ ವರ್ತಿಸುವ ಶಕ್ತಿ ಬರಬೇಕಾದರೆ ಅದಕ್ಕೆ ವಿದ್ಯೆಯು ಜೋಡು ಬೇಕು. ಇಲ್ಲಿ ವಿದ್ಯೆಯೆಂದರೆ ಅಧ್ಯಾತ್ಮ ವಿದ್ಯೆ ಇಲ್ಲವೆ ಶಿವಾನುಭವವೆಂದರಿಯಬೇಕು. "ಕಸ್ತ್ವಂ ವಾ ಕುತ ಆಯಾತಸ್ತತ್ವಂ ಚಿಂತಯ" ಎಂಬಂತೆ, ತಾನು ಯಾರು? ತನಗೆ ಮೂಲ ಕಾರಣವಾದುದು ಅವುದು? ಮುಂತಾದ ನಿಶ್ಚಯಾತ್ಮಕ ಜ್ಞಾನವಾದರೆ, ತನ್ನನ್ನು ಇಲ್ಲವಾಗಿ ಮಾಡಿಕೊಂಬುದು ಒಂದು ವೇಳೆ ಸಾಧ್ಯ! ಇಲ್ಲದಿದ್ದರೆ ಅದು ಶಕ್ಯವೇ ಇಲ್ಲ. ಪ್ರಸಾದಿಯನ್ನು ಕುರಿತು ಶ್ರೀಬಸವೇಶ್ವರರು —

"ಲಿಂಗಮುಖದಿಂದ ಬಂದ ಪ್ರಸಾದವನೊಲ್ಲದೆ ಕೊಂಡೆನಾದಡೆ ಸಿಮ್ಮಾಣೆ ಸಿಮ್ಮ ಪ್ರಮಥರಾಣೆ. ಲಿಂಗಾರ್ಪಿತವನಲ್ಲದೆ ಉದಕವ ಮುಕ್ಕುಳಿಸಿದರೆ, ಎಲ್ಲೆನು ಸಿಮ್ಮಗಣಾಚಾರಕಯ್ಯ. ಲಿಂಗಾರ್ಪಿತವಲ್ಲದೆ ಹಲ್ಲುಕಡ್ಡಿಯ ಕೊಂಡರೆ, ಬಲ್ಲೆ ಮುಂದೆ ಭವಘೋರನರಕವೆಂಬುದ. ಸಿಮಗೆ ಶ್ರೀ ಕರದಲ್ಲಿ ಮತ್ತೊಂದಕ್ಕೆ ಕೈಯ್ಯನೆನು. ಆಳವರಿಯದೆ ನುಡಿದೆನು. ಕಡೆಯ ಮುಟ್ಟಿಸಲೀಯದಿದ್ದರೆ. ತಲೆದಂಡ ಕೂಡಲಸಂಗಮದೇವ"

ಎಂದು ಹೇಳಿದ್ದಾರೆ. ಈ ಮೇರೆಗೆ ಸರ್ವ ವಿಷಯುಗಳನ್ನು, ನೀರು ಹಲ್ಕಡ್ಡಿ ಮೊದಲಾದವನ್ನು ಸಹ ಪ್ರಸಾದ ಮುಖದಿಂದಲೇ ಸ್ವೀಕರಿಸಬೇಕು

ಪ್ರಾಣಲಿಂಗಿ— ಈತನು ಕೇವಲ ಅಂತರ್ಲಿಂಗ ಪೂಜಕನು. ಪ್ರಾಣವೇ ಲಿಂಗವೆಂದು ನೆರೆನಂಬಿ ನಡಿಯುವವನು. ಇಂತಹ ಪ್ರಾಣ ರೂಪಿ ಲಿಂಗವು ತನ್ನಂತೆಯೇ ಸಕಲಪ್ರಾಣಿಗಳಲ್ಲಿಯೂ ಇರುತ್ತಿರುವ ದರಿಂದ ಯಾವತ್ತು ಚರ ಸೃಷ್ಟಿಯನ್ನು ಈತನು ಲಿಂಗವೆಂದು ಭಾವಿಸು ವನು. ಆಕಾರಣ ಈತನಿಗೆ ಚರಲಿಂಗವು ಆರಾಧ್ಯವಾಗಿರುವದು. ಚರ ಲಿಂಗಕ್ಕೆ ಜಂಗಮಲಿಂಗವೆಂದೂ ಹೆಸರುಂಟು. ಪ್ರಾಣಿಯು ಮುಖ್ಯವಾಗಿ ಮನುಷ್ಯನ ಕ್ರಿಯಾ ಜ್ಞಾನ ಇಚ್ಛಾ ಮೊದಲಾದ ಶಕ್ತಿಗಳಿಗೆಲ್ಲ ಅವನ ಪ್ರಾಣವೇ ಕಾರಣವು, ಇಲ್ಲವೆ ಆಧಾರವು. ಅದಿಲ್ಲದಿದ್ದರೆ ಅವನಲ್ಲಿ ಯಾವ ಶಕ್ತಿಯೂ ಇಲ್ಲವಾಗುವದು. ಬಗೆಬಗೆಯಿಂದ ಬೆರಗುಗೊಳಿ ಸುವಂತಹ ಮನುಷ್ಯನ ಶಕ್ತಿಗಳೆಲ್ಲ ಪ್ರಾಣವನ್ನೇ ಅವಲಂಬಿಸಿರುವದ ರಿಂದ ಅದೇ ಆದಿಶಕ್ತಿಯು. ಪ್ರಾಣಲಿಂಗಿಯು ಚರಲಿಂಗಪೂಜೆಗೆ ಸುಮ ನವೇ ಹಸ್ತವಾಗಿದೆ. ಮನವೆಂಬ ಕರದಿಂದಲೇ ಅದನ್ನು ಆರಾಧಿಸುವ ದುಂಟು. ಆಕಾರಣ ಆತನ ಮನಸು ಬಹು ಉದಾರವಾದುದೂ ನಿರ್ಮ ಲವಾದುದೂ ಇರಬೇಕಾಗುವದು. "ಆತ್ಮವತ್ ಸರ್ವಭೂತಾನಿ" ಎಂಬ ವಿಶ್ವವ್ಯಾಪಕ ಬಂಧುತ್ವವು ಅವನಲ್ಲಿ ಒಡಮೂಡಬೇಕು. ಈತನ ಬಗ್ಗೆ ಶ್ರೀಬಸವಣ್ಣನವರು ಹೀಗೆ ಹೇಳಿದ್ದಾರೆ. ನೋಡಿರಿ-

> "ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ! ನಿಮ್ಮ ಧರ್ಮ. ಬೊಬ್ಬಿಡದಿರಿಂಭೋ! ನಿಮ್ಮ ಧರ್ಮ-ಜರಸದಿರಿಂಭೋ! ನಿಮ್ಮ ಧರ್ಮ-ಅಲ್ಲಿ ಉಂಬರೆ ಸಂಗ. ಇಲ್ಲಿ ಉಂಬರೆ ಸಂಗ. ಕೂಡಲಸಂಗಮ ದೇವ ಏಕೋಭಾವ.

ಈ ವಚನದಲ್ಲಿ ಆಕಳನ್ನು ಎದುರಿಟ್ಟುಕೊಂಡು ನುಡಿದಿದ್ದಾರೆ. ಆದರೆ ಇದರಂತೆಯೇ ಎಲ್ಲ ವಿಷಯುಗಳೆಂದು ಅರಿಯಬೇಕೆಂಬುದೇ ಆದರ ಭಾವ. ಈ ಪ್ರಾಣಲಿಂಗಿಯೂ ಮನುಷ್ಯಮಾತ್ರರಿಗಷ್ಟೇ ಅಲ್ಲ, ಯಾವ ಪ್ರಾಣಿಗೂ ಅಹಿತ ಬಯಸತಕ್ಕವನಲ್ಲ. ಇವನ ಜ್ಞಾನವು ತೋರಿಕೆಯುದೂ ಅಲ್ಲ, ಗ್ರಂಥಾದಿಗಳಿಂದ ಪಡೆದು ಅನ್ಯರಿಗೆ ಮಾತ್ರ ಬೋಧಿಸುವ ಒಣ ಬಡಬಡಿಕೆಯುದೂ ಅಲ್ಲ; ಪ್ರತ್ಯಕ್ಷ ತನ್ನ ವರ್ತನದಲ್ಲಿ ತಂದು ಮನ ಗಂಡ ಅನುಭವಜ್ಞಾನವಾಗಿರುವದು. ಇಂತಹ ಅನುಭಾವವೇ ಈತನ ಭಕ್ತಿಯೆಂದು ಹೇಳಲಾಗಿದೆ. ಎಂತಹ ಬಿಕ್ಕಟ್ಟಿನ ಪ್ರಸಂಗ ಒದಗಿದರೂ ಇವನು ಎದೆಗೊಟ್ಟು ಅವನ್ನೆಲ್ಲ ಬಹು ಶಾಂತಿಯಿಂದಲೇ ಎದುರಿಸು

ವನು. ಈ ಶಾಂತಿಯೇ ಈತನ ಕಳೆಯು. ಈ ಕಳೆಯ ಯೋಗದಿಂದಲೇ ಅವನು ಚರಲಿಂಗದಲ್ಲಿ ಬೆರೆಯುವನು.

ಪ್ರಸಾದಿ ಪ್ರಾಣಲಿಂಗಿ ಇವರೀರ್ವರೂ ಭೋಗಾಂಗಿಗಳು, ಪ್ರಾಣಲಿಂಗ ಪೂಜಕರು, ಸಿದ್ಧಪ್ರಸಾದ(ಲಿಂಗರೂಪ)ದವರು.

ಶರಣ — "ಶರಣಸತಿ ಲಿಂಗಪತಿ" ಎಂದು ಎಲ್ಲರೂ ಒಪ್ಪುವರಷ್ಟೆ! ಸತಿಗೆ ಅದು ಹೇಗೆ ತನ್ನ ಪತಿಯ ವಿನಾ, ಇನ್ನೊಂದೇನೇನೂ ಕಾಣುವದಿಲ್ಲವೋ ಹಾಗೆ, ಶರಣನು ಚರ ಮತ್ತು ಅಚರಗಳಿಂದೊಡಗೂಡಿದ ಈ ಜಗತ್ತಿನಲ್ಲಿ, ಲಿಂಗದ ವ್ಯತಿರಿಕ್ತವಾಗಿ ಇನ್ನಾವುದನ್ನೂ ಕಾಣಬಾರದು. "ಲಿಂಗರೂಪಂ ಜಗತ್ಸರ್ವಂ" ಎಂದು ಆದವನು ಅದಕ್ಕೆ ಶರಣು (ಮೊರೆ) ಹೊಕ್ಕಿರುವನೋ ಅವನೇ ಶರಣನು. "ಜಗದ್ರೂಪವಾದ" ಅವನ ಲಿಂಗವು ಪ್ರಸಾದಮಯವಾದುದು. "ಇದೇ ಉಪದೇಶ ತತ್ವವು." ನೋಡಿದತ್ತೆಲ್ಲ ಅದೊಂದೇ ಕಾಣುವದು. ಇದು ಪ್ರಾಣಿಕೋಟಿಗೇ ಕೃಪಾಳುತೆಯಿಂದ ಬೇಕಾದುದನ್ನೆಲ್ಲ ಕೊಟ್ಟು, ಅಹೇತುಕ ದಯಾದೃಷ್ಟಿಯಿಂದ ಸಲಹತಕ್ಕುದು. ಆದರ ಈ ಅತ್ಯಂತ ಶ್ರೇಷ್ಠವಾದ ಶಕ್ತಿಯೇ ಪರಾಶಕ್ತಿಯು. ಇಂತಹ ಪ್ರಸಾದಲಿಂಗ ಸ್ವರೂಪವನ್ನು ಕಂಡು ಅತ್ಯಂತ ಹರ್ಷನಿರ್ಭರನಾಗಿ ಶರಣನು ಸರ್ವಕಾಲವೂ ಆನಂದದಲ್ಲಿಯೇ ಮುಳುಗಿರುವನು. ಈ ಆನಂದವೇ ಆತನ ಭಕ್ತಿಯು. ಹೀಗೆ ಪ್ರಸಾದ ಲಿಂಗದಲ್ಲಿ ತನ್ಮಯನಾಗಿ ವರ್ತಿಸುವ ಶರಣನ ಆನಂದಕ್ಕೆ ಎಣೆಯುಂಟೇ? ಈ ಆನಂದಸ್ಥಿತಿಯು ಶಾಂತಿಯನ್ನು ಹಿಂದಿಕ್ಕಿ ಮುಂದೆ ಹೋದುದಾದ ಕಾರಣ, ಅವನಲ್ಲಿ ಶಾಂತ್ಯತೀತವಾದ ಕಳೆಯು (ಅನುಪಮಾನಂದ ಮುದ್ರೆಯು) ತೋರುವದೇನು ಅಚ್ಚರಿ! "ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿವಾಕ್ಯವನ್ನು ಸಾರ್ಥಕಗೊಳಿಸಿದವನು ಶರಣನೇ. ಇವನ ಜ್ಞಾನಕ್ಕೆ ಪಾರಾವಾರವೇ ಇಲ್ಲ. ಈ ಜ್ಞಾನವೇ ಪ್ರಸಾದಲಿಂಗವನ್ನು ಪೂಜಿಸುವ ಹಸ್ತವು. ಇವನಿಗೆ ಸರ್ವವಿಷಯಗಳು ಲಿಂಗರೂಪವಾಗಿಯೇ ತೋರುವದರಿಂದಲೂ ಅವುಗಳ ಸಮಷ್ಟಿ ಸ್ವರೂಪವಾದ ಪ್ರಸಾದಲಿಂಗವನ್ನೇ ತಾನು ನಿರಂತರ ಭಜಿಸುವದರಿಂದಲೂ ಅವನು ಕೇವಲ ನಿರಿಚ್ಛನೂ ನಿರ್ಭಯನೂ ಆಗಿರುವನು. ಶ್ರೀಬಸವಣ್ಣನವರು ಶರಣನ ಬಗ್ಗೆ:-

"ಧನದಲ್ಲಿ ಶುಚಿ, ಪ್ರಾಣದಲ್ಲಿ ನಿರ್ಭಯ, ಇದಾವಂಗಳವಡುವದಯ್ಯ? ನಿಧಾನತಪ್ಪಿಬಂದರೆ ಒಲ್ಲೆನೆಂಬುವರಿಲ್ಲ. ಪ್ರಮಾದವಶ ಬಂದರೆ ಹುಸಿಯೆ

ನೆಂಬುವರಿಲ್ಲ. ನಿರಾಶೆ ನಿರ್ಭಯ ಕೂಡಲಸಂಗಮದೇವನೊಲಿದ ಶರಣಂಗಲ್ಲದಿಲ್ಲ"

ಎಂದು ನುಡಿದಿದ್ದಾರೆ.

ಐಕ್ಯ— ಈತನು ವಿಶ್ವದೊಡನೆ ಕೇವಲ ಬೆರೆದು ತದಾಕಾರನಾಗಿ ಹೋಗಿರುವದರಿಂದ ಈತನಿಗೆ ಐಕ್ಯನೆಂಬ ಹೆಸರು ಸಾರ್ಥಕವಾಗಿದೆ. ಇವನು ಯಾವಾಗಲೂ ಇಂತಹ ಸುಯೋಗವನ್ನೇ ನೆನೆಯುತ್ತಿರುವದರಿಂದ ಸಮರಸವೇ ಈತನ ಭಕ್ತಿಯೆಂದು ಹೇಳಿರುವನು. ಶರಣನು ತಾನು ಸತಿ ಲಿಂಗವು ಪತಿ; ಎಂದು ಇಟ್ಟುಕೊಂಡಿರುವ ಭಿನ್ನಭಾವವು ಸಹ, ಇವನಲ್ಲಿ ಅಳಿದುಹೋಗಿ, ಕೇವಲ ಒಂದೇ ಒಂದಾದ ಅಖಂಡ ಸ್ವರೂಪವು ಒಡಮೂಡಿರುವದರಿಂದಲೇ, ಈತನಿಗೆ ಮಹತ್ತು (ವಿರಾಟ್ ಸ್ವರೂಪವು) ಲಿಂಗವಾಯಿತು. ತಾನು ಸಹಿತವಾಗಿ ಇದ್ದುದೆಲ್ಲ "ಸತ್ ಅಂದರೆ ಏಕಮೇವಾದ್ವಿತೀಯಂ" ಎನಿಸುವ ಪರಬ್ರಹ್ಮವೇ ಆಗಿಬಿಡುವದು. ಈತರದ ಮಹಾಲಿಂಗವನ್ನು ಪೂಜಿಸಲಿಕ್ಕೆ ಸದ್ಭಾವವೇ ಹಸ್ತವೆಂದು ಹೇಳಿರುವರು. ಆದರೂ ಕೊನೆಗೆ ಆ ಭಾವವಾಗಲಿ, ಜ್ಞಾನವಾಗಲಿ, ಅವನಲ್ಲಿ ಉಳಿಯುವದು ಶಕ್ಯವೇ ಇಲ್ಲ. ಈತನು ಆರಾಧಿಸುವ ಮಹಾಲಿಂಗದ ಶಕ್ತಿಯು ಪರಾಶಕ್ತಿಗೂ ಕೂಡ ಆಧಾರವಾಗಿರುವದರಿಂದ ಅದನ್ನು ಚಿಚ್ಛಕ್ತಿ ಎಂದು ಪೆಸರಿಸಿರುವರು. ಈ ಐಕ್ಯನ್ನು ತನ್ನಲ್ಲಿ ಯಾವ ವೃತ್ತಿಗೂ ಆಸ್ಪದವಿಲ್ಲದವನಾಗಿರುವದರಿಂದ, ಅವನನ್ನು ಶಾಂತ್ಯತೀತೋತ್ತರ ಕಳೆಯುವನೆನ್ನುವದರಲ್ಲೇನು ಸಂದೇಹ! ಈತನು ಕೇವಲ ಉರಿಯುಂಡ ಕರ್ಪುರದಂತೆ, ಜಲವೆರೆದ ಆಲಿಕಲ್ಲಿನಂತೆ ತದ್ರೂಪನಾಗಿ ಬಿಡುವನು ಐಕ್ಯನ ಬಗ್ಗೆ ಬಸವಣ್ಣನವರು:—

"ಸತ್ತು ಹುಟ್ಟುವನಲ್ಲ, ಸಂದೇಹಿ ಸೂತಕಿಯಲ್ಲ, ಆಕಾರ ನಿರಾಕಾರದವನಲ್ಲ, ನೋಡಯ್ಯ ಕಾಯ ವಂಚಕನಲ್ಲ, ಜೀವವಂಚಕನಲ್ಲ, ನಿರಂತರ ಸಹಜ ನೋಡಯ್ಯ.

ಶಂಕೆಯಿಲ್ಲದ ಮಹಾಮಹಿಮ ನೋಡಯ್ಯ! ಕೂ- ಸಂಗನ ಶರಣನು ಉಪಮಾತೀತ ನೋಡಯ್ಯ ಎಂದು ಬಣ್ಣಿಸಿದ್ದಾರೆ.

ಶರಣನೂ ಐಕ್ಯನೂ ಯೋಗಾಂಗರು, ಭಾವಲಿಂಗಪೂಜಕರು, ಪ್ರಸಿದ್ಧಪ್ರಸಾದವನ್ನು ( ಸಂಯೋಗವನ್ನು ) ಹೊಂದತಕ್ಕವರು.

ಮೇಲೆ ವರ್ಣಿಸಿದ ಷಟ್‌ಸ್ಥಲಗಳಲ್ಲಿ ಆರು ಸಕೀಲಗಳು (ಅಂಗ, ಲಿಂಗ, ಶಕ್ತಿ, ಭಕ್ತಿ ಹಸ್ತ ಕಲೆ ವಿವೇಚಿಸಲ್ಪಟ್ಟಿವೆ. ಮುಖ ಮತ್ತು ಪದಾರ್ಥ ಎಂಬೆರಡುಗಳನ್ನು ಕುರಿತು ಏನೂ ಬಂದಿಲ್ಲ. ಅವನ್ನಷ್ಟು ಹೇಳಿದರೆ ಈ ವಿವೇಚನೆ ಸಾಂಗವಾಗುವದು. ಭವಿಗಳಂತೆ ಭಕ್ತರು ಸಹ ವಿಷಯಗಳನ್ನು ಸಂಪಾದಿಸುತ್ತಾರೆ, ಭೋಗಿಸುತ್ತಾರೆ. ಆದರೆ ಅವರ ಇವರ ಕೃತಿಗಳಲ್ಲಿಯೂ ಭಾವನೆಯಲ್ಲಿಯೂ ಮಹದಂತರವುಂಟು. ವೀರ ಶೈವರೊಳಗೆ ಅಂತರ್ಲಿಂಗಪೂಜೆಯಲ್ಲಿ ನಿರತವರು, ಭವಿಗಳಂತೆ ದುರಾಶೆಗೊಳಗಾಗಿ ಹೆಚ್ಚಾಗಿ ಹರಿದಾಡಿ, ವಿಷಯಸಂಗ್ರಹ ಮಾಡಲಿಕ್ಕೆ ಹೆಣಗುವದಿಲ್ಲ. ಸತ್ಯ ಶುದ್ಧ ಕಾಯಕವನ್ನು ಪ್ರಾಮಾಣಿಕತನದಿಂದ ಮಾಡಿ, ಶಿವಕೃಪೆಯಿಂದ ದೊರೆತುದರಲ್ಲಿಯೇ ಸಂತುಷ್ಟರಾಗಿ ಗುರುಲಿಂಗಜಂಗಮ ಸೇವನೆಯನ್ನು ನೆರವೇರಿಸಿ, ತಾವೂ ಆನಂದದಿಂದ ಉಪಜೀವಿಸುವರು. ಉಳಿದವರು ವಿಷಯಸಂಗ್ರಹಮಾಡಿದರೂ ವಿವೇಕಿಗಳಾಗಿ, ಸತ್ಪಾತ್ರದಾನವೇ ಮೊದಲಾದ ಯೋಗ್ಯ ಮಾರ್ಗದಲ್ಲಿ ವೆಚ್ಚಮಾಡುವರು. ಇನ್ನು ವಿಷಯಗಳನ್ನು ಅನುಭೋಗಿಸುವದರ ಬಗ್ಗೆ ಹೇಳುವದಾದರೆ, ಭವಿಗಳು ತಮ್ಮ ದೇಹರಕ್ಷಣಕ್ಕೂ ಜೀವಸುಖಕ್ಕೂ ವಿಷಯಗಳನ್ನು ಯಥೇಚ್ಛವಾಗಿ ಭೋಗಿಸುವರು. ಎಷ್ಟು ಉಪಭೋಗಿಸಿದರೂ ಅವರಿಗೆ ಸಾಕೇ ಇಲ್ಲ. ಆದರೆ ಶಿವಭಕ್ತರು ವಿಷಯಗಳನ್ನೆಲ್ಲ ತಮ್ಮ ಲಿಂಗಕ್ಕೆ ಅರ್ಪಿತಮಾಡಿ, ಬಳಿಕ ತಾವು ಅವುಗಳನ್ನು ಪ್ರಸಾದರೂಪದಿಂದ ಸ್ವೀಕರಿಸುತ್ತಾರೆ. ಆದುದರಿಂದ ಆ ಭೋಗ ಕರ್ಮದ ಬಂಧನವು ಇವರಿಗೆ ಆಗುವದಿಲ್ಲ ಈ ರೀತಿ ತಾವು ಮಿತಭೋಗಿಗಳಾಗಿ, ಭೋಗ ಕರ್ಮವು ಸೋಂಕದಂತೆ ಅದು ಹೇಗೆ ವರ್ತಿಸಬೇಕೆಂಬ ಸಂಗತಿಯೇ ಇನ್ನು ಮುಂದೆ ವಿವರಿಸತಕ್ಕದ್ದಿರುವದು.

ದೇಹವೇ ದೇವಾಲಯು, ತದಂತರಾತ್ಮನೇ ಪರಮಾತ್ಮನು, ಎಂಬದು ಸಿದ್ಧಾಂತವಾದ ಮಾತಾಗಿರುವದರಿಂದ ದೇಹವೂ ಇಂದ್ರಿಯಾದಿಗಳೂ ಅಂತರಾತ್ಮನವೇ ಸರಿ. ಅಂತರಾತ್ಮನೇ ಪ್ರಾಣಲಿಂಗವು; ಅವನೇ ಜಗದಂತರ್ಯಾಮಿಯಾದ ಭಾವಲಿಂಗವು. ಆದಕಾರಣ ಸರ್ವ ವಿಷಯಗಳನ್ನು ಇಂದ್ರಿಯಗಳ ಮುಖಾಂತರವಾಗಿಯೇ ಅಂತರಾತ್ಮನಾದ ಶಿವನಿಗೆ ಸಮರ್ಪಿಸುವದು ಉಚಿತವೂ ನ್ಯಾಯವೂ ಆಗಿರುವದು. ಅಂತೇ ಈಶ್ವರನು ಸುಗಂಧ ಪದಾರ್ಥವನ್ನು ಘ್ರಾಣದ್ವಾರವಾಗಿಯೂ, ಮಹೇಶ್ವರನು ಷಡ್ರ

ಪಗಳನ್ನು ಜಿಹ್ವೇಂದ್ರಿಯ ಮುಖಾಂತರವಾಗಿಯೂ, ಪ್ರಸಾದಿಯು ಸುರೂಪ ವಸ್ತುಗಳನ್ನು ನೇತ್ರಗಳ ಮೂಲಕವಾಗಿಯೂ, ಪ್ರಾಣಲಿಂಗಿಯು ಸುಸ್ಪರ್ಶನವನ್ನು ತ್ವಚೆಯ ಮುಖಾಂತರವಾಗಿಯೂ, ಶರಣನು ಸುಶಬ್ದಗಳನ್ನು ಕರ್ಣದ್ವಾರವಾಗಿಯೂ, ಐಕ್ಯನು ಸರ್ವ ವಿಷಯಗಳ ತೃಪ್ತಿಯನ್ನು ಹೃದಯ ಮುಖಾಂತರವಾಗಿಯೂ ತಮ್ಮ ತಮ್ಮ ಲಿಂಗಗಳಿಗೆ ಮಂತ್ರಪೂರ್ವಕವಾಗಿ ಸಮರ್ಪಿಸಿ, ತತ್ಪ್ರಸಾದವನ್ನು ಸೇವಿಸಿದರೆ, ಲಿಂಗದೊಡನೆಯೇ ಭೋಗವಾಗುವದರಿಂದ ಆ ಕರ್ಮದ ಬಂಧನವು ಅವರಿಗೆ ಎಂದೆಂದೂ ಆಗಲಾರದು. ಮುಖಗಳಿಂದ ಆಯಾ ಇಂದ್ರಿಯಗಳಲ್ಲಿ ಜ್ಞಾನ (ಲಿಂಗ)ವು ಸ್ವಾಭಾವಿಕವಾಗಿರುವದರಿಂದಲೂ ದೀಕ್ಷೆಯ ಕಾಲದಲ್ಲಿ ಮತ್ತು ಗುರುವು ಅಲ್ಲಿ ಲಿಂಗವು ಸ್ಥಾಪನೆ ಮಾಡುವದರಿಂದಲೂ ಅವು ಅತ್ಯಂತ ಪರಿಶುದ್ಧವಾದವುಗಳು. ಆದುದರಿಂದಲೇ ಅವುಗಳ ದ್ವಾರವಾಗಿ ಲಿಂಗಕ್ಕೆ ಅರ್ಪಿಸಲ್ಪಡುವ ಪದಾರ್ಥಗಳಾದರೂ ನಿರ್ದುಷ್ಟವಾದವುಗಳೂ ಸಾತ್ವಿಕ ಮಾರ್ಗದಿಂದ ಸಂಪಾದಿತವಾದವುಗಳೂ ಇರಬೇಕೆಂದು ಬೇರೆ ಹೇಳುವ ಕಾರಣವಿಲ್ಲ.

ಷಟ್‌ಸ್ಥಲಗಳಲ್ಲಿ ಹೇಳಿದ ಆರು ಅಂಗರು ಬೇರೆ ಬೇರೆಯಲ್ಲ. ಒಬ್ಬನೇ ಅಂಗನು ತನ್ನಲ್ಲಿ ಉಂಟಾದ ಲಿಂಗಪ್ರಗತಿಯ ಅಂತಸ್ತುಗಳಿಗನುಸಾರವಾಗಿ ಆರು ಅವಸ್ಥೆಗಳನ್ನು ಹೊಂದಿ, ಈಶ್ವರ-ಮಹೇಶ್ವರ-ಪ್ರಸಾದಿ-ಪ್ರಾಣಲಿಂಗಿ-ಶರಣ-ಐಕ್ಯ ಎಂಬ ಹೆಸರು ಧರಿಸುತ್ತಾನೆ. ಅದೇ ಮೇರೆಗೆ ಒಂದು ಲಿಂಗನೇ ಆರು ಲಿಂಗವಾಗಿರುವದು. ಆದುದರಿಂದ ಅಂಗನು (ಪ್ರತಿಯೊಬ್ಬ ಲಿಂಗಧಾರಿ ವ್ಯಕ್ತಿಯು) ತಾನಾವ ಸ್ಥಲದಲ್ಲಿ ನಿಂತು ಲಿಂಗಾರಾಧನೆಗೆ ಉದ್ಯುಕ್ತನಾದರೂ, ಅಲ್ಲಿಯೇ ಷಟ್‌ಸ್ಥಲಗಳನ್ನೆಲ್ಲ ಪಡೆದು ಕೊನೆಗೆ ಲಿಂಗಾಂಗಸಾಮರಸ್ಯವನ್ನು ಪಡೆಯಲೇಬೇಕು. ಮುಂದಿನ ವಚನವನ್ನು ನೋಡಿರಿ—

"ಭಕ್ತ (ಈಶ್ವರ), ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಮೆಲ್ಲಮೆಲ್ಲನೆ ಆದೆನೆಂಬನ್ನಬರ, ನಾನು ವಜ್ರದೇಹಿಯೇ? ನಾನೇನು ಅಮೃತವ ಸೇವಿಸಿದೆನೇ? ಆನು ಮರುಜೀವಣಿಯ ಕೊಂಡೆನೇ? ನುಡಿದ ನುಡಿಯೊಳಗೆ ಷಡುಸ್ಥಲ ಬಂದು ಎನ್ನ ಮನವನಿಂಬುಗೊಳ್ಳದಿದ್ದರೆ, ಸುಡುವೆನೀ ತನುವನು. ಕೂ. ಸಂ. ದೇವ

ಇದರ ಮೇಲಿಂದ ಏನು ತೋರುತ್ತದೆ? ಷಡಂಗರು ಹೆಸರಿಗೆ ಮಾತ್ರ. ಅವರೆಲ್ಲ ನಿಜವಾಗಿ ಪ್ರತಿಯೊಬ್ಬ ವೀರಶೈವನಲ್ಲಿ ಆತನ ಶಿವಮಾರ್ಗದ ಬೆಳವಣಿಗೆಯನ್ನು ನಿರ್ದೇಶಿಸಲಿಕ್ಕೆ ಮೈದೋರಿದರು. ಗುರು-ವಿರಕ್ತ (ಜಂಗಮ)ರುಗಳಾದರೂ ಲಿಂಗಭಕ್ತರಾಗಿ, ಸಮಾಜ ಸುಧಾರಣೆಯ ಪವಿತ್ರಕಾರ್ಯವನ್ನು ವಹಿಸಿದ ಮುಂದಾಳುಗಳು. ಆದುದರಿಂದ ಯಾರೂ ಅಹಂಕಾರ ಆಶೆಗಳಿಗೆ ಒಳಗಾಗದೆ, ವಿವೇಕದಿಂದ ಷಟ್‌ಸ್ಥಲ ಮಾರ್ಗವಿಡಿದು ನಡೆದು, ತಮ್ಮ ಜನ್ಮ ಸಾಫಲ್ಯದ ಕಡೆಗೇ ದೃಷ್ಟಿಯನ್ನಿಡಬೇಕು. ಇದೇ ಸಕಲರಿಗೆ ವಿಹಿತವೂ ಶ್ರೇಯಸ್ಕರವೂ ಆಗಿರುವದು.

---

## ಮಹಾದೇವಿಯಕ್ಕನ ಕಾವ್ಯಮಣಿ.

(ಲೇ:— ಎಮ್. ಎಸ್. ವೀರಾಪೂರ. ಲಿಂಗರಾಜ ಕಾಲೇಜ ಬೆಳಗಾಂವಿ)

ವಚನ ವಾಙ್ಮಯದ ಯಶೋದುಂದುಭಿಯು ಸಾಕಷ್ಟು ಮೊಳಗಿದೆ, ಮೊಳಗುತ್ತಿದೆ, ಇನ್ನೂ ಮೊಳಗಲಿದೆ. ಅದರ ಗಂಭೀರನಾದವು ಮೂಲೆಮೂಲೆಗಳಲ್ಲಿ ಹರಡಿ ಅನೇಕ ಜೀವನಗಳನ್ನು ಶುದ್ಧಗೊಳಿಸುತ್ತಿದೆ. ಪ್ರಕೃತಿ ಸೌಂದರ್ಯದ ರಮಣೀಯತೆ ಕಲೋಪಾಸಕನ ಅಂತರಾತ್ಮವನ್ನು ಬಡಿದೆಬ್ಬಿಸಿ, ಹೇಗೆ ಅದನ್ನು ಶಾಂತಿ ಸಾಮ್ರಾಜ್ಯದಲ್ಲಿ ಮುಳುಗಿಸುತ್ತಿದೆಯೋ ಹಾಗೆ ಶಿವಶರಣ ಶರಣೆಯರ ವಚನಗಳು ತತ್ತ್ವಾನ್ವೇಷಿಗಳಿಗೆ ವಿಶ್ವಶಾಂತಿಯನ್ನು ತಂದು ಕೊಡುತ್ತವೆ. ವಚನ ಸಾಹಿತ್ಯವು ಶಾಂತಿಯನ್ನು ನೀಡುವುದು, ಕೇವಲ ಒಂದು ಧರ್ಮ, ಒಂದು ಪಂಥದವರಿಗಲ್ಲ, ಜಾತಿಮತ ಪಂಥಗಳಾಚೆ ಹೊಳೆಯುತ್ತಿದೆ, ವಚನ ಸಾಹಿತ್ಯದ ಜ್ಞಾನಪ್ರಕಾಶ. ವಚನಸಾಹಿತ್ಯ ನಭೋಮಂಡಲದಲ್ಲಿ ಮಹಾದೇವಿಯಕ್ಕನ ಅಪೂರ್ವ ಕಾಂತಿ, ಯಾರ ಕಣ್ಣನ್ನಾದರೂ ಸೆಳೆಯುತ್ತದೆ. ಬಸವಣ್ಣ ಅಲ್ಲಮಪ್ರಭುಗಳಂತಹ ಪ್ರಥಮ ಶ್ರೇಣಿಯ ವಚನಕಾರರೊಡನೆ ಹೋಲಿಸಿದಾಗ ಕೂಡ

ಆಕೆಯ ವರ್ಚಸ್ಸು ಎಳ್ಳಷ್ಟೂ ಕುಂದುವುದಿಲ್ಲ. ಕಳೆದ ಮೂರು ನಾಲ್ಕು ವರುಷಗಳಿಂದ ಅಕ್ಕನವರ ಚರಿತ್ರೆ, ಮತ್ತು ವಚನಗಳು ಜನರ ಮನಸ್ಸನ್ನು ಆಕರ್ಷಿಸಹತ್ತಿರುವುದರಿಂದ ಕೆಲವು ಪಂಡಿತರು ಆ ಆ ವಿಷಯಗಳನ್ನು ಕುರಿತು ಲೇಖಗಳನ್ನು ಬರೆಯಹತ್ತಿದ್ದಾರೆ. ಇದೊಂದು ಆನಂದದ ಸಂಗತಿ. ಅಂದು ವೀರಶೈವರ ಮನನ ಮಂತ್ರವಾಗಿ ಪರಿಣಮಿಸಿದ ಅವಳ ವಚನಗಳು ಇಂದು ಜಾತಿ ಮತಗಳ ಎಲ್ಲೆಯನ್ನು ದಾಟಿ, ಎಲ್ಲ ಕನ್ನಡಿಗರ ಹೃದಯವನ್ನು ಸೂರೆಗೊಂಡಿವೆ. ಅವಳ ಕಾವ್ಯಸಂಪತೂ ಅವುಗಳಲ್ಲಿ ವ್ಯಕ್ತವಾಗುವ ಮಹಾದೇವಿಯ ಮೂರ್ತಿಯೂ ಕನ್ನಡ ಸಾಹಿತ್ಯಕ್ಕೆ ಭೂಷಣವಾಗಿ ನಿಂತಿರುವುದರಲ್ಲೇನಾಶ್ಚರ್ಯ?

ಇಲ್ಲಿ ನಾವು ಅಕ್ಕನ ಕಾವ್ಯವಾಣಿಯ ಸಂಪೂರ್ಣ ವಿವೇಚನೆಯನ್ನು ಮಾಡಲು ಹೊರಟಿಲ್ಲ. ಅವಳ ಜೀವನದ ಒಂದೆರಡು ಸನ್ನಿವೇಶಗಳ ಕಡೆಗೆ ಮಾತ್ರ ಗಮನಕೊಟ್ಟು, ಆ ಕಾಲಕ್ಕೆ ಅವಳ ಅಂತರಾಳದಿಂದ ಹೊರಟ ಕೆಲವೊಂದು ವಚನಗಳಲ್ಲಿ ಕವಿಯ ಹೃದಯ ಹೇಗೆ ಒಡೆದು ಕಾಣುವುದೆಂಬುದನ್ನಷ್ಟೇ ದಿಗ್ದರ್ಶನದಿಂದ ತೋರಿಸಿಕೊಡುವುದು ಈ ಪುಟ್ಟ ಬರವಣಿಗೆಯ ಮುಖ್ಯೋದ್ದೇಶ. ಪ್ರಸ್ತುತ ಪ್ರಬಂಧದಲ್ಲಿ ನಾವು ಎತ್ತಿಕೊಂಡ ವಚನಗಳು ಅವಳ ಆಧ್ಯಾತ್ಮಿಕ ಜೀವನದ ಕೊನೆಯ ಭಾಗಕ್ಕೆ ಸೇರಿರುವುಗಳು. ಅವಳ ಕಾವ್ಯವಾಣಿಯನ್ನು ಷಟ್‌ಸ್ಥಲದ ಪ್ರಕಾರ ವಿಭಾಗಿಸಿ ಹೇಳಹೊರಟರೆ, ಲೇಖನವು ಅನಾವಶ್ಯಕವಾಗಿ ಬೆಳೆಯುವದೆಂಬ ಭೀತಿಯಿಂದ, ಆ ಸಾಹಸಕ್ಕೆ ನಾವು ಇಲ್ಲಿ ಕೈಹಾಕಿಲ್ಲೆಂಬುದನ್ನು ಸಹೃದಯರು ಜ್ಞಾಪಕದಲ್ಲಿಟ್ಟುಕೊಳ್ಳಲಿ.

ವಚನಕಾರರ ವಚನಗಳನ್ನು ಒಟ್ಟಿನ ಮೇಲೆ ಎರಡು ರಾಶಿಯಾಗಿ ವಿಂಗಡಿಸಬಹುದು. ತಾವು ಕಂಡ ಅಥವಾ ತಿಳಿದ ತತ್ವವನ್ನು ಉಪದೇಶಿಸುವುದನ್ನೇ ಮುಖ್ಯೋದ್ದೇಶವಾಗಿಟ್ಟುಕೊಂಡು, ಅದಕ್ಕೆ ಯಾವ ಬಗೆಯ ಸವಿಯನ್ನೂ ಕೂಡಿಸದೆ, ರಚಿಸಿದ ವಚನಗಳು ಒಂದು ಗುಂಪಾಗಿರುತ್ತವೆ. ಇವುಗಳಲ್ಲಿ ವಚನಕಾರರ ಗಮನವೆಲ್ಲ ಧರ್ಮದ ಕಡೆಗೆ. ಅದು ಶ್ರೋತೃಗಳಿಗೆ ಗೊತ್ತಾದರೆ ಅವರ ಉದ್ದೇಶ ತೀರಿತು. ಹೀಗೆ ಮಾಡುವಾಗ ಮಾತು ಶುಷ್ಕವಾದರೂ ಅವರಿಗೆ ಲಕ್ಷ್ಯವಿಲ್ಲ. ಇಂಥ ರಚನೆಗೆ, 'ವಚನಶಾಸ್ತ್ರ' ಎಂಬ ಹೆಸರು ಸರಿಯಾಗಿ ಅನ್ವಯಿಸುತ್ತದೆ. ಧಾರ್ಮಿಕ ದೃಷ್ಟಿಯುಳ್ಳವರಿಗಲ್ಲದೆ, ಸಾಹಿತಿಗಳ ಹೃದಯವನ್ನು ಇವು ಆಕರ್ಷಿಸಲಾರವು

ಎರಡನೆಯ ಗುಂಪಿನ ವಚನಗಳು ಸಂಖ್ಯೆಯಲ್ಲಿ ಅಷ್ಟೇನಿಲ್ಲ. ಆದರೆ ಸಾಹಿತಿಯ ದೃಷ್ಟಿಯಲ್ಲಿ ಅವುಗಳಿಗೆ ಹಿರಿಮೆಯ ಹೆಮ್ಮೆಯ ಸ್ಥಾನವುಂಟು. ವಚನ ವಾಙ್ಮಯಕ್ಕೆ ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠ ಸ್ಥಾನವನ್ನು ಕಲ್ಪಿಸಿಕೊಟ್ಟ ಶ್ರೇಯಸ್ಸು ಇವುಗಳಿಗೆ ಸಲ್ಲುವುದು. ಇವುಗಳಲ್ಲಿ ತತ್ತ್ವನೀತಿ ವೀರಶೈವ ಧರ್ಮದ ಸಾರವಿದ್ದರೂ, ಇವು ಬುದ್ಧಿ ವ್ಯವಸಾಯದಿಂದ ಹೊರಬಿದ್ದ ವಚನಗಳಲ್ಲ. ಇವು ಹೊಮ್ಮಿರುವುದು ಹೃದಯದ ಆಳದಿಂದ, ಅನುಭವದ ಅರಳಾಗಿ. ಒಂದೊಂದು ವಚನವೂ ಸಾಧಕನು ಅನುಭವಿಸಿದ, ಯಾವದೋ ಒಂದು ನೋವಿನಿಂದ, ನಲವಿನಿಂದ ಹಾರೈಕೆಯಿಂದ ಜೀವಗೊಂಡು ಮಿಡಿಯುತ್ತಿರುತ್ತವೆ. ಭಕ್ತಿ-ಜ್ಞಾನ-ವೈರಾಗ್ಯ ಯಾವುದೇ ಅವರ ವಿಷಯವಾಗಿರಲಿ, ವಚನಕಾರನ ಹೃದಯರಸದಲ್ಲಿ ಅದ್ದಿ ತೆಗೆದಿರುವದರಿಂದ ನಿಜವಾಗಿಯೂ ಅದೊಂದು ಬಿಡಿಕೃತಿ-- ಮುಕ್ತಕ' ಶರಣನು ತನ್ನ ಜೀವನದ ಒಂದು ವಿಶಿಷ್ಟ ಘಟನೆಯಿಂದ ವಿಶಿಷ್ಟ ಸನ್ನಿವೇಶದಿಂದ ಆವೇಶಗೊಂಡು, ಹಾಡಿರತಕ್ಕ ವಚನಗಳೂ ಉಂಟು. ಇವುಗಳಲ್ಲೆಲ್ಲಾ ಅವರ ವ್ಯಕ್ತಿತ್ವದ ಮುದ್ರೆ ಒತ್ತಿಯೇ ಇರುತ್ತದೆ. ಅವನ ಜೀವನದ ಸಂಗತಿಗಳು ಅಲ್ಲಲ್ಲಿ ತಲೆ ಹಾಕಿರುವುದೂ ಉಂಟು. ಸಾಹಿತಿ ಸವಿಯಲು ಬಯಸುವುದು ಇಂಥ ವಚನಾಮೃತವನ್ನು. ಬಸವಣ್ಣನ ವಚನಗಳ ಸ್ವಾರಸ್ಯವನ್ನು ಅರಿತವರಿಗೆ ಈ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸಬೇಕಾಗಿಲ್ಲ.

ವಚನಕಾರರಲ್ಲಿ ಬಸವಣ್ಣನ ಗುಂಪಿಗೇ ಮಹಾದೇವಿಯಕ್ಕನು ಸೇರುತ್ತಾಳೆ. ತತ್ತ್ವೈಕ ಪ್ರಧಾನವಾದ ವಚನಗಳನ್ನು ಈಕೆ ರಚಿಸಿಲ್ಲವೆಂದಲ್ಲ. 'ಚೆನ್ನಮಲ್ಲಿಕಾರ್ಜುನ' ಎಂಬ ಅಂಕಿತವನ್ನೊಳಗೊಂಡ ವಚನಗಳಲ್ಲಿ ಕೆಲವು ಈ ವರ್ಗಕ್ಕೆ ಸೇರತಕ್ಕವೂ ಉಂಟು. ಆದರೆ ಅವಳ ವಚನಗಳ ಬಹುಭಾಗ ನಿಜವಾಗಿಯೂ ರಸೋದ್ರೇಕವನ್ನುಂಟು ಮಾಡುವಂತಹದು. ಉಪಮಾನಗಳಿಂದ, ಚಿತ್ರಕಲ್ಪನೆಗಳಿಂದ, ಮನೋಹರವಾಗಿರತಕ್ಕದ್ದು; ಅವಳದು ಕವಿಯ ಹೃದಯ, ಕವಿಯ ಕಣ್ಣು ಎಂಬುದನ್ನು ಸಾರತಕ್ಕದ್ದು. ಇದರ ಸೊಗಸನ್ನು ಕಂಡವರಿಗೆ ಇಂಥ ಇನ್ನಷ್ಟನ್ನು ಓದಬೇಕೆಂಬ ಆಶೆ ಅತಿಶಯವಾಗಿ ಹುಟ್ಟುತ್ತದೆ.

ತತ್ತ್ವಪ್ರಾಧಾನ್ಯದ ವಚನಗಳಿಗಿಂತ ಕಾವ್ಯಗುಣಗಳುಳ್ಳ ವಚನಗಳ ಕಡೆಗೆ, ಅದರಲ್ಲಿಯೂ ಮಹಾದೇವಿಯಕ್ಕನ ವ್ಯಕ್ತಿಜೀವನದ ಮೇಲೆ

ಬೆಳಕು ಬೀರಬಹುದಾದ ವಚನಗಳ ಕಡೆಗೆ ಇತ್ತೀಚೆಗೆ ನಮ್ಮ ಮುಖ್ಯ ಗಮನ. ಕೇವಲ ತತ್ವದ ವಚನಗಳನ್ನು ಮತಾಭಿಮಾನಿಗಳಾದ ಹಿಂದಿನ ಸಂಗ್ರಹಕಾರರು ಒಂದಲ್ಲ ಒಂದು ಕಡೆ ಉಳಿಸಿಕೊಟ್ಟಿದ್ದಾರೆ. ಒಂದಲ್ಲ ಒಂದು ದಿನ ಅವೆಲ್ಲವೂ ಪ್ರಕಟವಾಗಿಯೇ ಆಗುತ್ತವೆ. ಆದರೆ ಮತ ದೃಷ್ಟಿಯಿಂದ ಅಷ್ಟು ಮುಖ್ಯವೆಂದು ತೋರದ ಆಕೆಯ ಆತ್ಮೀಯ ವಚ ನಗಳಲ್ಲಿ ಹಲವು ಈಗಾಗಲೇ ಕಾಲಪುರುಷನ ತುತ್ತಾಗಿರುವಂತೆ ಕಂಡು ಬರುತ್ತದೆ. ಇವಳ ವಚನಗಳನ್ನೆಲ್ಲ ಒಟ್ಟುಗೂಡಿಸಿದ ಪುರಾತನ ಸಂಕ ಲನ ಯಾವುದೂ ಇದುವರೆಗೆ ದೊರೆತಿಲ್ಲ. ರಾವಬಹದ್ದೂರ ಶ್ರೀಮಾನ್ ಪಿ. ಜಿ. ಹಳಕಟ್ಟಿಯವರು "ಆ ವಚನ ಸಂಗ್ರಹಗಳೊಳಗಿನ ವಚನಗಳನ್ನು ಬೇರೆ ತೆಗೆದು" "ಒಂದು ಕ್ರಮದಲ್ಲಿ ಜೋಡಿಸಿ, "ಮಹಾದೇವಿಯಕ್ಕನ ವಚನಗಳು" ಎಂಬ ಹೆಸರಿನಿಂದ ಪ್ರಸಿದ್ಧಪಡಿಸಿದ್ದಾರೆ. ಅದು ಈಗ ಎರಡನೆಯ ಸಲ ಮುದ್ರಣ ಕಂಡಿದೆ. ಶ್ರೀಮಾನ್ ಹಳಕಟ್ಟಿಯವರು ಹೆಚ್ಚಿನ ವಚನಗಳನ್ನೇನೂ ಅದಕ್ಕೆ ಸೇರಿಸಿಲ್ಲ. ಶ್ರೀಬಸವೇಶ್ವರರ ವಚನ ಗಳು ಒಂದೆಡೆಗೆ ಸಿಗುವಂತೆ ಇವಳ ವಚನಗಳೂ ಅಂತಹ ಸ್ವರೂಪ ವನ್ನು ಬೇಗನೆ ಹೊಂದಲಿ.

ಅಕ್ಕನ ವಚನಗಳು ಮಧುರವೂ, ಭಾವಗರ್ಭಿತವೂ, ಕಾವ್ಯಮ ಯವೂ, ಆಗಿರುವುದರಿಂದ ಅವುಗಳ ಮಹತ್ವವನ್ನು ಚೆನ್ನಬಸವಣ್ಣನವರು ಹೀಗೆ ವರ್ಣಿಸಿರುವರು.

ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.
ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.

ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ.
ಅಜಗಣ್ಣನ ಐದು ವಚನಕ್ಕೆ ಕೂಡಲಚೆನ್ನಸಂಗಯ್ಯನಲ್ಲಿ ಮಹಾದೇವಿ ಯಕ್ಕಗಳ ಒಂದು ವಚನ ಕಾಣಾ, ಸಿದರಾಮಯ್ಯಾ.

ಈ ವಚನದಲ್ಲಿ ಚೆನ್ನಬಸವಣ್ಣದೇವರು ಬೇರೆ ಬೇರೆ ವಚನಕಾರರ ವಚನಗಳನ್ನೆಲ್ಲ ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸಿ ತೂಗಿ, ಅವರವರ ಯೋಗ್ಯತೆಗೆ ತಕ್ಕಂತೆ ಸ್ಥಾನಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ಅವರಲ್ಲಿ ಅಗ್ರಸ್ಥಾನಪಟ್ಟವು ಅಕ್ಕನವರಿಗೆ ಸಲ್ಲಿದ್ದು ಯೋಗ್ಯವೇ ಸರಿ.

ಮಹಾದೇವಿಯಕ್ಕನು ಕಲ್ಯಾಣವನ್ನು ಬಿಟ್ಟು ಪ್ರಯಾಣಮಾಡುತ್ತ ಶ್ರೀಶೈಲವನ್ನು ಸಮೀಪಿಸಿದಾಗ, ಅಲ್ಲಿಯ ಸೃಷ್ಟಿಸೌಂದರ್ಯದಿಂದ, ಮನೋಹರ ದೃಶ್ಯಗಳಿಂದ, ಕದಳಿವನ ಶೋಭೆಯಿಂದ, ಶಿವಾನುಭವವುಂಟಾದಲ್ಲಿ ಶಿವತತ್ವಗಳನ್ನು ಚರ್ಚಿಸುವಾಗ ಕೆಲಕಾಲ ಮರೆತುಹೋದ, ಅವರ ಸೌಂದರ್ಯದೃಷ್ಟಿಯು ಜಾಗ್ರತವಾಗಿ, ವನಶೋಭೆಯಲ್ಲಿ ಅವರ ಮನವು ಬೆರೆತು, ಅವರ ವಚನಗಳು ಮತ್ತೆ ಕಾವ್ಯರೂಪವಾಗಿ ಹರಿಯುಹತ್ತಿದವು.

ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ,
ಶಿಲೆಗಳೆಲ್ಲ ಪರುಷ, ನೆಲವೆಲ್ಲ ಅವಿಮುಕ್ತಕ್ಷೇತ್ರ.
ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪುರುಷಮೃಗ,
ಎಡಹುವ ಹರಳುಗಳೆಲ್ಲ ಚಿಂತಾಮಣಿ,
ಚೆನ್ನಮಲ್ಲಿಕಾರ್ಜುನಯ್ಯನ ಮೆಚ್ಚಿನ ಗಿರಿಯಸುತ್ತಿ
ನೋಡುತ್ತಬಂದು, ಕದಳಿಯ ಬನವ ಕಂಡೆನಾನು.

ಹೆಣ್ಣುಮಕ್ಕಳು ತಮ್ಮ ಮುದ್ದುಮಕ್ಕಳನ್ನು ಆಡಿಸುವಾಗ, "ನನ್ನ ಕಟ್ಟಾಣಿಯು, ನನ್ನ ಕರಿಮಣಿಯು" ಎಂದು ಮುಂತಾಗಿ ಕರೆಯುವುದುಂಟು. ಅದೇ ವೃತ್ತಿಯಲ್ಲಿ ಅಕ್ಕನವರು ತಮ್ಮ ನಚ್ಚಿನ ಮೆಚ್ಚಿನ ಪರಮಾತ್ಮನಿರುವ ಶ್ರೀಪರ್ವತವು ಕೈಲಾಸವೆಂದು ಭಾವಿಸಿ, ಅಲ್ಲಿರುವ ಗಿಡ, ಕಲ್ಲು, ಹೊಳೆ, ಹಳ್ಳ, ಪಶು, ಪಕ್ಷ್ಯಾದಿಗಳು ಕೈಲಾಸದೊಳಗಿನ ವಸ್ತುಗಳೆಂದು ಭಾವಿಸಿ, ಮನೋಹರವಾದ ಕಾವ್ಯಾಮೃತವನ್ನು ಸುರಿಸಿದ್ದಾರೆ. ಆಧ್ಯಾತ್ಮಿಕ ಸೂಚನೆಯೂ ಅಲ್ಲಿದೆ. ಏಕೆಂದರೆ ಪ್ರಾಣಲಿಂಗಿಸ್ಥಲದಲ್ಲಿದ್ದಾಗಿನ ತಮ್ಮ ಸ್ಥಿತಿಯನ್ನು ಅವರು ಅಲಂಕಾರಿಕವಾಗಿ, "ವೈರಾಗ್ಯದ ಸೋಪಾನದಿಂದ ಶ್ರೀಪರ್ವತವನೇರಿದೆ" ಎಂದೂ "ಕರ್ಮವೆಂಬ ಕದಳಿ ಎನಗೆ ಕಾಯವೆಂಬ ಕದಳಿ ನಿನಗೆ, ಮಾಟವೆಂಬ ಕದಳಿ ಬಸವಣ್ಣಂಗೆ" ಎಂದೂ ಹೇಳಿದ್ದಾರೆ. ಇದಲ್ಲದೆ "ಕದಳಿಯೆಂಬುದು ತನು, ಕದಳಿಯೆಂಬುದು ಮನ, ಕದಳಿಯೆಂಬುದು ವಿಷಯಂಗಳು, ಕದಳಿಯೆಂಬುದು ಭವರೋಗದರಣ್ಯ. ಕದಳಿಯೆಂಬುದಾ ಗೆಲ್ದು, ಸಲೆ ಬದುಕಿಬಂದು, ಕದಳಿಯ ಬನದಲ್ಲಿ ಭವಹರನ ಕಂಡೆನು, ಎಂದು ಹೇಳುವಾಗಲೂ ಅವಳ ಕಾವ್ಯಮಯವಾಣಿಯು ಶಿವತತ್ವಮಿಶ್ರವಾಗಿದೆ. ತಾವು ಬಯಸಿದ ಸ್ಥಳವು ಶ್ರೀಪರ್ವತವೇ ಹೊರತು, ಬೇರೆಯಲ್ಲವೆಂದು ಅವರು ಬಹು ಸ್ವಾರಸ್ಯವಾಗಿ ಹೇಳಿದ್ದಾರೆ.

"ಗಿರಿಯಲ್ಲದೆ ಹುಲ್ಲುಮೊರಡಿಯಲ್ಲಾಡುವುದೇ ನವಿಲು?
ಕೊಳನಲ್ಲದೆ ಕಿರುವಳ್ಳಕ್ಕೆಳಸುವುದೇ ಹಂಸೆ?
ಮಾಮರ ತಳಿತಲ್ಲದೆ, ಸ್ವರಗೈವುದೇ ಕೋಗಿಲೆ?
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ?"

ಅಕ್ಕನವರ ಸೌಂದರ್ಯಾನುಭವದ ಕುತೂಹಲವು ಕಡವೆಯಾಗಿ, ಆ ಮೋಹಿ ಚೆನ್ನಮಲ್ಲಿಕಾರ್ಜುನನನ್ನು ಕಾಣುವ ಆತುರತೆಯು ಹೆಚ್ಚಾಗಿ ಆ ಭಾವ ವನ್ನು ಕಾವ್ಯಮಯವಾಗಿ ಹಾಡಿದ್ದಾರೆ.

"ಅಳಿಸಂಕುಳವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ, ನಿಮ್ಮ ನಿಮ್ಮ ನೆಲ್ಲರನು ಬಂದು ಬೇಡುವೆನು. ಎನ್ನೊಡೆಯ ಚೆನ್ನಮಲ್ಲಿ ಕಾರ್ಜುನ ದೇವರ ಕಂಡರೆ ಕರೆದು ತೋರಿರೆ.

ಯಾವ ಮರ ಗಿಡಬಳ್ಳಿಯನ್ನು ನೋಡಿದರೂ, ಚಿಗುರು, ಮೊಗು ಹೂವು ಕಾಯಿ ಹಣ್ಣುಗಳಿಂದ ಜಗ್ಗಿನಿಂತು, ಪರಮಾತ್ಮನ ಅಮೋಘ ವಾದ ಸೃಷ್ಟಿಶಕ್ತಿಯನ್ನು ಉಗ್ಗಡಿಸುತ್ತಿದ್ದವು. ಜೊತೆಗೆ ಹತ್ತೂ ಕಡೆಯಿಂದ ಕೋಗಿಲೆ, ಗಿಳಿ, ತುಂಬಿ (ದುಂಬಿ) ಮೊದಲಾದ ಚಿತ್ರವಿಚಿತ್ರಗಳಾದ ವನ್ಯಪಕ್ಷಿಗಳ ಕಲಕಲನಿನಾದ ಈ ಸೃಷ್ಟಿಯನ್ನು ಗಾನರೂಪದಲ್ಲಿ ವರ್ಣಿಸಿ, ತೋರುವಂತೆ ಭಾಸವಾಯಿತು. ಬಳ್ಳಿಯಂತೆ ಚಿಮ್ಮುಬರುವ ಮಿಂಚು ಬಾಯಿಬಿಟ್ಟು ಮಾತನಾಡಿದಂತೆ, ನಯನಗೋಚರವಾದ ಸೃಷ್ಟಿ, ಶಬ್ದ ಗೋಚರವೂ, ಆಗಿ, ಪರಿಣಮಿಸಿದುದರ ಫಲವಾಗಿ ಅಕ್ಕ ಈ ಸೃಷ್ಟಿಸೌಂ ದರ್ಯದ ರಸಾವೇಶದ ಆನಂದಾನುಭೂತಿಯಲ್ಲಿ ಪರವಶಳಾದಳು. ಮರ ಗಿಡಗಳಲ್ಲಿ ನದಿನದಗಳಲ್ಲಿ ಖಗಮೃಗಗಳಲ್ಲಿ ಆ ಆನಂದಸಮೂರ್ತಿ ಯಾದಾ ಚನ್ನನನ್ನು ಅರಸಿದಳು.

ಚಿಲಿಮಿಲಿಯೆಂದೋದುವ ಗಿಳಿಗಳಿರಾ, ನೀವು ಕಾಣಿರೇ ನೀವು ಕಾಣಿರ
ಸರವೆತ್ತಿ ಪಾಡುವ ಕೋಗಿಲಗಳಿರಾ ನೀವು ಕಾಣಿರೇ ನೀವು ಕಾಣಿರೆ
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೇ ನೀವು ಕಾಣಿರೆ

ಕೊಳನತಡಿಯೊಳಾಡುವ ಹಂಸಗಳಿರಾ. ನೀವು ಕಾಣಿರೇ ನೀವುಕಾಣಿರ
ಗಿರಿಗಹ್ವರದೊಳಗಾಡುವ ನವಿಲುಗಳಿರಾ ನೀವು ಕಾಣಿರೆ ನೀವು ಕಾಣಿರ
ಚೆನ್ನಮಲ್ಲಿಕಾರ್ಜುನನೆಲ್ಲಿರ್ದಹನೆಂದು ನೀವು ಹೇಳಿರೆ, ನೀವು ಹೇಳಿರೆ.

ಈ ವಚನವಂತೂ ವಚನಸಾಹಿತ್ಯದಲ್ಲಿ ಏಕೆ, ಇಡಿಯ ಕನ್ನಡ ಸಾಹಿತ್ಯದಲ್ಲಿ ಅತ್ಯಮೂಲ್ಯವಾದ ಒಂದು ಕಾವ್ಯಭಾಗವೆನ್ನಬಹುದು. ಆಧುನಿಕರ ದೃಷ್ಟಿಯಲ್ಲಿ ಇದೊಂದು ಭಾವಗೀತೆ. ಇಲ್ಲಿ ಅರ್ಥಭಾವ ಎಷ್ಟು ಉದಾತ್ತವಾಗಿವೆಯೋ ಮಾತು ರೀತಿ ಅಷ್ಟು ಸುಲಭವಾಗಿರುವುದೇ ಒಂದು ವಿಶೇಷ. ಹೃದಯದಲ್ಲಿ ಸಹಜವಾದ ರಸಾವೇಶವುಂಟಾದಾಗ ಭಾವ ಹೀಗೆ ಶಬ್ದಮಯವಾಗಿ, ನಾದಮಯವಾಗಿ, ಛಂದೋಬದ್ಧವಾಗಿ ಹೊರಹೊಮ್ಮುತ್ತದೆ

ಈ ಮೇಲೆ ಉದಾಹರಿಸಿದ ವಚನಗಳಿಂದಲೇ ಅಕ್ಕನ ವಾಣಿ, ಎಂತಹ ಕಾವ್ಯವಾಣಿಯೆಂಬುದನ್ನು ಯಾರಾದರೂ ಅರಿತುಕೊಳ್ಳಬಹುದು. ಅವಳ ಜೀವನವೇ ಒಂದು ಕಾವ್ಯ. ಅವಳ ಆತ್ಮವೇ ಒಂದು ಕಾವ್ಯದ ನಾಯಕ ರತ್ನ. ಆದುದರಿಂದಲೇ ಆ ರತ್ನದ ವರ್ಣಚ್ಛವಿಯಂತೆ ಬಣ್ಣಬಣ್ಣದ ಕಾಂತಿ ಬೀರುತ್ತವೆ, ಆ ವಚನಗಳು. ಬಣ್ಣದ ಬೆಡಗಿನ ಜೊತೆಗೆ ಇವು ರಸವತ್ತಾಗಿಯೂ ಇವೆ.

ಅಲಂಕಾರಗಳಲ್ಲಿ ಶ್ರೇಷ್ಠವಾದ ಉಪಮೆಯನ್ನು ಉಪಯೋಗಿಸುವುದರಲ್ಲಿ ಇವಳದು ಪಳಗಿದ ಕೈ. 'ಊರ ಸೀರೆಗೆ ಅಗಸ ತಡೆಗೊಂಡಂತೆ' 'ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಯಮಾಡಿ, ತನ್ನ ನೂಲು ತನ್ನ ಸುತ್ತಿ ಸಾವ ತೆರನಂತೆ' 'ಅರಲುಗೊಂಡ, ಕೆರೆಗೆ ತೊರೆ ಬಂದು ಹಾಯ್ದಂತೆ' 'ನೀರಕ್ಷೀರದಂತೆ' 'ಶಿಲೆಯ ಮರೆಯ ಹೇಮದಂತೆ' 'ತಿಲದ ಮರೆಯ ತೈಲದಂತೆ' ಈ ಮೊದಲಾದ ಉಪಮೆಗಳು ಹೇಳುವ ಅರ್ಥವನ್ನು ಪುಷ್ಟೀಕರಿಸಿ, ವಿಷಯಗಳನ್ನು ಸುಲಭಗ್ರಾಹ್ಯವಾಗುವಂತೆ ಮಾಡಿವೆ. ಈ ಎಲ್ಲ ಉಪಮೆಗಳೂ ಜೀವಂತ ಉಪಮೆಗಳು. ದಿನದಿನದ ಲೋಕಾನುಭವದಿಂದ ನೇರವಾಗಿ ಸೆಳೆದುಕೊಂಡ ಉಪಮೆಗಳು.

ಉಪಮೆಗಳನ್ನು ಬಳಸಿದಂತೆ, ದೃಷ್ಟಾಂತಾಲಂಕಾರವನ್ನು ಬಳಸಿರುವುದು ಈಕೆಯ ವಚನಗಳಲ್ಲಿ ಇನ್ನೊಂದು ಗುಣ. ಲೋಕದಲ್ಲಿ ಹುಟ್ಟಿದವನು ಸಮಾಧಾನಿಯಾಗಿರಬೇಕೆಂದು ಹೇಳುವಾಗ, 'ಬೆಟ್ಟದ ಮೇಲೊಂದು ಮನೆಯಮಾಡಿ, ಮೃಗಂಗಳಿಗಂಜಿದರೆಂತಯ್ಯ !!' ಎಂದು ಕೊಡುವ ದೃಷ್ಟಾಂತ, ಅನುಭವಿಗಳ ಸಂಘ ಬೇಕೆನ್ನುವಾಗ, 'ಮರಮರ ಮಥನಿಸಿ ಕಿಚ್ಚು ಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಗಿತ್ತು' ಎಂದು

ಕೊಡುವ ದೃಷ್ಟಾಂತ. ಇತ್ಯಾದಿ ನುಡಿಗಳಲ್ಲಿಯು ಸೊಬಗು ನಮ್ಮ ಮನವನ್ನು ಮೆಚ್ಚಿಸದೆ ಇರದು.

ಹೀಗೆ ಅಕ್ಕನ ವಚನಗಳಲ್ಲಿ ಭಾವೋತ್ಕರ್ಷತೆಯಿದೆ; ಅರ್ಥಗೌರವವಿದೆ; ಮಧುರಪದಬಂಧವಿದೆ; ಆಲಂಕಾರಿಕ ಪರಿಭಾಷೆಯಿದೆ. ಒಂದು ಮಾತಿನಲ್ಲಿ ಹೇಳುವುದಾದರೆ ಉತ್ತಮ ಕವಿಜೀವನದ ಎಲ್ಲ ಸಂಸ್ಕಾರವೂ, ಹೃದಯದ ಎಲ್ಲ ರಸಾನುಭವವೂ ಕಂಡುಬರುತ್ತಿವೆ. ಕನ್ನಡದ ಶಾರದೆ ಅವಳ ನಾಲಗೆಯಲ್ಲಿ ನೆಲಿಸಿ, ಬಿಡಿ ಕವನಗಳಂತಿರುವ ವಚನ ಮುಕ್ತಕಗಳನ್ನು ಅವಳಿಂದ ಹಾಡಿಸಿದ್ದಾಳೆ. ಅಕ್ಕನವರ ಕಾವ್ಯವಾಣಿಯು ಬಗೆಗೆ ಕನ್ನಡ ಮಹಿಳೆಯರು ಹೆಮ್ಮೆತಾಳಲಿ.

---

# ವಜ್ರಸೂಚ್ಯೋಪನಿಷತ್ತು.

ಲೇ:— ಶ್ರೀ. ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು ಜಗದ್ಗುರು
ಶ್ರೀ ನಿಡುಮಾಮಿಡಿ ಶ್ರೀಶೈಲ ಸಂಸ್ಥಾನ ಗೂಳೂರ.

ನಮ್ಮ ದಕ್ಷಿಣ ದೇಶದ ಪ್ರಯಾಣದಲ್ಲಿ **ಒಮ್ಮೆ ಗುಡಿಯಾತ್ತ** ಗ್ರಾಮದ ಮುಕ್ಕಾಂ ಮಾಡಲಾಯ್ತು. **ಗುಡಿಯಾತವು** ಆಂಧ್ರ-ಅರವಗಳ ಗಡಿನಾಡು. ಹಿಂದು-ಮುಸ್ಲಿಂ ಸಂಸ್ಕೃತಿಗಳ ಸಂಗಮಸ್ಥಳ. ಹೀಗಿದ್ದರೂ ಇಂದು ಗಡಿಯಾತವು ಸಂಪೂರ್ಣ ತಮಿಳು ನಾಡಾಗಿದೆ. ಬರಿ ಮುಹಮ್ಮದೀಯರ ನೆಲವೀಡಾಗಿದೆ. ಇಲ್ಲಿ ಕನ್ನಡಿಗರ (ವೀರಶೈವರ) ಇಪ್ಪತ್ತು ಮೂವತ್ತು ಮನೆಗಳಿವೆ. ನೂತನವಾಗಿ ನಿರ್ಮಿತವಾದ ವೀರಶೈವ ಮಠದಲ್ಲಿಯೇ ಬೀಡಾರವಾಯ್ತು. ಒಂದು ಬೆಳಗಿನ ಸ್ನಾನ, ಶಿವಪೂಜೆಗಳನ್ನು ಆಗುಮಾಡಿಕೊಂಡು ಮಠದ ಕೈಶಾಲೆಗೆ ಬರೋಣವಾಯ್ತು. ಆ ಕೈಸಾಲೆಯಲ್ಲಿ ಒಂದು ಪಕ್ಕಕ್ಕೆ ಎತ್ತರಕ್ಕೆ ತಕ್ಕ ಹರವಾದ ಒಂದು ಜಗಲಿ. ಆ ಜಗಲಿಯ ಮೇಲೆ ಅದೇ ಮಠವನ್ನು ಕಟ್ಟಿಸುತ್ತಲೇ ಲಿಂಗೈ

ಕ್ಕರಾದ ಬಾರ್ಶಿ ಶಂಭುಲಿಂಗ ಸ್ವಾಮಿಗಳವರ ಒಂದು ನಿಲುವಾದ ಭಾವಚಿತ್ರ. ಆ ಭಾವಚಿತ್ರ ಅವರ ಸಾಧು ಭಾವಕ್ಕೆ ತಕ್ಕುದಾಗಿತ್ತು. ಆ ಭಾವಚಿತ್ರದ ಮುಂಭಾಗದಲ್ಲಿ ಒಂದು ಚಿಕ್ಕ ಜಿಂಕೆಯ ಚರ್ಮಾಸನ. ಅದರ ಮೇಲೆ ಮೂರು ಹಳೆ ತಾಳೆಗರಿಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಅವನ್ನು ಕಂಡೊಡನೆ ನೋಡಬೇಕೆಂಬ ಕುತೂಹಲ ಹೆಚ್ಚಿತು. ಅದಕ್ಕೆ ಸರಿಯಾಗಿ ಆ ದಿನ ಬಿಡುವಿನ ಬೆಂಬಲವೂ ದೊರೆತಿತ್ತು. ಅದರಿಂದ ಕುತೂಹಲವು ಕೈಗೂಡಿತು. ಆ ಮೂರನ್ನೂ ತೆಗೆದುಕೊಂಡು ಧೂಳ ಜಾಡಿಸಿ ಪುಟ ಜೋಡಿಸಿ ನೋಡುತ್ತ ಕುಳಿತೆವು. ಅವುಗಳಲ್ಲಿ ಒಂದು ದೊಡ್ಡದು ಇನ್ನೆರಡು ಚಿಕ್ಕವು. ದೊಡ್ಡದು ಅಚ್ಚಾದುದು. ಅದರಿಂದ ಅಷ್ಟಕ್ಕೇನೇ ಕೈಬಿಟ್ಟೆವು. (ಅದರ ಹೆಸರು ಜ್ಞಾಪಕವಿಲ್ಲ.) ಚಿಕ್ಕವೆರಡನ್ನೂ ಬೆದಕತೊಡಗಿದೆವು. ಅವೆರಡೂ ಹರಕುಮುರಕಾದ ಅರ್ಧಮರ್ಧವುಳ್ಳ ಸಂಕಲನದ ಕಟ್ಟುಗಳು. ಅವುಗಳಲ್ಲಿರುವ ಗ್ರಂಥಗಳಾದರೋ ಸಂಸ್ಕೃತದ ಕೋಶ, ವ್ಯಾಕರಣ, ಜೋತಿಷ್ಯ, ಶಿವಪೂಜಾವಿಧಿ, ಸಾಮುದ್ರಿಕ ಇವೆ ಮುಂತಾದವುಗಳು. ಅವೂ ಅಪರಿಪೂರ್ಣ ಹೀಗಾಗಿ ನೋಡಲು ತುಂಬಾ ಬೇಜಾರ. ಆದರೂ ಬೇಸರಪಡದೆ ಏನೋ ಒಂದು ಆಶೆಯಿಂದ ಬೆದಕಹತ್ತಿದ್ದೆವು. ಹಾಗೆ ಹುಡುಕುತ್ತಿರುವಾಗ ನಡುವಿನ ಒಂದು ಗರಿ ಓದತೊಡಗಿದೆವು. ಸಂಸ್ಕೃತವಾದರೂ ಒಳ್ಳೆ ಸ್ವಾರಸ್ಯವಾಗಿ ಕಂಡಿತು. ಇದರ ಹೆಸರೇನಿರಬಹುದೆಂದೆನುತ್ತ ಗರಿ ತಿರುಪಿದೆವು. ಅಲ್ಲಿಯೆ ಆರಂಭವಾಗಿತ್ತು. ಗ್ರಂಥದ ಹೆಸರೂ ದೊರಕಿತು. ಆನಂದವಾಯ್ತು. ಆದರೆ ಗ್ರಂಥ ಅಪರಿಪೂರ್ಣವಾದದ್ದರಿಂದ ಆ ಆನಂದ ನಿಲ್ಲಲಿಲ್ಲ. ಪರಿಪೂರ್ಣ ದೊರೆತರೆ ಚನ್ನಾಗಿತ್ತೆಂಬ ಯೋಚನೆ ಹತ್ತಿತು. ಹಾಗೆಯೆ ಮುಂದೆ ಪ್ರತಿಯೊಂದು ಎಲೆಯನ್ನು ಎವೆಯಿಕ್ಕದೆ ಓದುತ್ತ ನೋಡುತ್ತ ಹೋದೆವು. ಕೊನೆ ಕೊನೆಗೆ ಮಾತ್ರ ಇದಕ್ಕೆ ಸಂಬಂಧ ಪಟ್ಟುದು ಸಿಕ್ಕಿತು. ಅದನ್ನು ನೋಡಲಿಕ್ಕಾಗಿ ಅದರಲ್ಲಿಯೇ ಗ್ರಂಥ ಸಂಪೂರ್ಣಗೊಂಡಿತ್ತು. ಇದ್ದದ್ದೂ ಸಂತೋಷವಾಯ್ತು. ಮರುಕ್ಷಣವೆ ಎಂಟೂ ಎಲೆ ತಾಳೆ ಹಾಕಿ ನೋಡುವಷ್ಟರಲ್ಲಿ ಮಧ್ಯ ಇನ್ನೊಂದು ಎಲೆಯಷ್ಟು ವಿಷಯ ಇರಲಿಲ್ಲ. ಆ ಆನಂದ ಹಾಗೆಯೇ ಮಾಯವಾಯ್ತು. ಆದರೂ ಮಾಯವಾದರೂ ಆಶೆ ಮಾಯವಾಗಿರಲಿಲ್ಲ. ಏಕೆಂದರೆ ಇಂತಹುದು ಇನ್ನೊಂದು ತಾಳೆಗರಿಯ ಕಟ್ಟು

ಇತ್ತು. ಅದನ್ನು ಬಿಡಕತೊಡಗಿದೆವು. ಅದೃಷ್ಟಕ್ಕೆ ಅವರ ನಟ್ಟನಡುವೆ
ಅದೂ ದೊರೆಯಿತು. ಮಾಯವಾದ ಆನಂದ ಮರಳಿ ಬಂದಿತು.
ಇಷ್ಟು ಹೊತ್ತು ಕಷ್ಟಪಟ್ಟುದಕ್ಕೆ ಇದೊಂದಾದರೂ ಸಂಪೂರ್ಣ ಸಿಕ್ಕಿತು.
ಶ್ರಮ ಸಾರ್ಥಕವಾಯ್ತು ಎಂದುಕೊಂಡೆವು. ಈ ಉಪನಿಷತ್ತಿನ ಹೆಸ
ರನ್ನು ಅಂದಿನ ವರೆಗೆ ಕೇಳಿರಲಿಲ್ಲವಾದ್ದರಿಂದ ಇದು ಹೊಸದೆಂದೇ ಆ
ಪಿನ ಭಾವಿಸಿಕೊಂಡೆವು. ಅನಂತರ "ಅಷ್ಟೋತ್ತರ ಶತೋಪನಿಷತ್ತು"
ಗಳಲ್ಲಿ ಇದೂ ಇದೆಯೊ ಹೇಗೊ ಎಂದು ಸಂದೇಹವುಂಟಾಯಿತು. ಆಗಲಿ.
ಆ ಅಷ್ಟೋತ್ತರ ಶತೋಪನಿಷತ್ತಿನ ಪಟ್ಟಿಯನ್ನು ನೋಡಿದರೆ ಆಗ ತಾನೆ
ಗೊತ್ತಾಗುತ್ತದೆ. ಹೊಸದೊ ಹಳೆಯದೊ ಎಂದುಕೊಂಡು ಆ ಮೂರು
ಗರಿಗಳನ್ನೂ ಬೇರೆ ತೆಗೆದುಕೊಂಡು ಇಟ್ಟುಕೊಂಡೆವು. ಹಾಗೆ ಪ್ರಯಾಸ
ಮಾಡುತ್ತ ಬರುತ್ತಿರುವಾಗ ಸುಂಗನೂರಲ್ಲಿ ಹಿಂದೆ ಒಬ್ಬರು ಯಾರೋ
ಮಾಡಿ ಹೋದ ಮತದೂಷಣೆಯ ಗೋಷ್ಠಿಯ ಪ್ರಸಂಗದಲ್ಲಿ ಇವರ
ಜ್ಞಾಪಕವಾಗಿ ಇದನ್ನು ತೆಗೆದೋದಿದೆವು. ಅಲ್ಲಿರುವವರಲ್ಲೊಬ್ಬರು ಇದು
ಅಚ್ಚಾಗಿದೆಯೆಂದರು. ಎಲ್ಲಿ ಎಂದೆವು. ಊರಲ್ಲಿದೆ ಎಂದರು. ಸುಮ್ಮ
ನಾದೆವು. ಮುಂದೆ ಘಟ್ಟದ ಮುಕ್ಕಾಮಿಗೆ ಬಂದಾಗ ಅಕ್ಕಲಪ್ಪಯ್ಯ
ನವರಲ್ಲಿ ಆ ಅಚ್ಚಿನ ಪ್ರತಿಯು ದೊರೆಯಿತು. ಆಂಧ್ರ ಲಿಪಿಯಲ್ಲಿ ಆಂಧ್ರ
ತಾತ್ಪರ್ಯದೊಡನೆ ಚೆನ್ನಪುರಿಯ ವಾವಿಳ್ಳ ರಾಮಸ್ವಾಮಿ ಶಾಸ್ತ್ರಿಗಳು
ತ್ಯಂಡ ಸನ್ಸ ಅವರಿಂದ ಕ್ರಿ. ಶ. ೧೯೧೬ರಲ್ಲಿ ಪ್ರಕಟಿತವಾದುದು. ನಮ್ಮ
ಲ್ಲಿರುವ ತಾಳೆಗರಿಯನ್ನೂ ಇದನ್ನೂ ತಾಳೆ ಹಾಕಿ ನೋಡಿದೆವು. ಗ್ರಂಥ
ವೊಂದೆಯಾದರೂ ವ್ಯತ್ಯಾಸ ಹೆಚ್ಚಾಗಿ ಕಂಡು ಬಂದಿತು. ಆಗಲೆಂದು
ಆ ತೆಲುಗು ಪ್ರತಿಯನ್ನೂ ಸಂಗ್ರಹಿಸಿದೆವು. ಅಲ್ಲಿಂದ ಸಂಸ್ಥಾನಕ್ಕೆ
ಬಂದನಂತರ ಸಂಸ್ಕೃತ ಲಿಪಿಯಲ್ಲಿ ಮುದ್ರಿತವಾದ ಮುಂಬಯಿ ನಿರ್ಣ
ಯಸಾಗರ ಪ್ರೆಸ್ಸಿನ ಅಷ್ಟೋತ್ತರ ಶತೋಪನಿಷತ್ತನ್ನು ತೆಗೆದು ನೋಡಿ
ದೆವು. ಅದರ ಅನುಕ್ರಮಣಿಕೆಯ ಪಟ್ಟಿಯಲ್ಲಿ ೩೮ನೆಯ ನಂಬರಿನಲ್ಲಿ
ಇದರ ಹೆಸರೂ ದೊರೆಯಿತು. ನೂರೆಂಟರಲ್ಲಿ ಇದಕ್ಕೂ ಒಂದು ಸ್ಥಾನ ದೊರೆ
ತಿದೆಯೆಂದು ಸಂತೋಷವಾಯ್ತಾದರೂ ಇಲ್ಲಿಯ ವರೆಗೂ ನಾವಿದನ್ನು
ನೋಡಿರಲಿಲ್ಲವಲ್ಲ ಎಂದು ವಿಷಾದವೂ ಉಂಟಾಯಿತು. ಆಗ ಮೂರನ್ನೂ
ತಾಳೆ ಹಾಕಿ ನೋಡಿದೆವು. ತುಸು ಹೆಚ್ಚು ಕಡಿಮೆ ಅಚ್ಚಾದ ತೆಲುಗು
ಲಿಪಿಯ ಪ್ರತಿಯೂ ದೇವನಾಗರಲಿಪಿಯ ಪ್ರತಿಯೂ ಒಂದೇ ತರಹವಾ

ಗಿರುವವು. ನಮಗೆ ದೊರೆತ ತಾಳೆಗರಿಯ ಪ್ರತಿಯಲ್ಲಿ ಮಾತ್ರ ಬಹಳ ಹೆಚ್ಚು ಹೆಚ್ಚಾಗಿದೆ. ಹೆಚ್ಚಾಗಿದ್ದರೂ ಇದೇ ಸಮಂಜಸವಾಗಿ ಸಾರ್ಥವಾಗಿ ತೋರುತ್ತದೆ. ಅಚ್ಚಿನ ಪ್ರತಿಗಳೆರಡರಲ್ಲಿಯೂ ಮಧ್ಯೆ ಮಧ್ಯೆ ಹಲ ಕೆಲವು ಭಾಗಗಳನ್ನು ಕೈಬಿಟ್ಟು ಬಿಟ್ಟಿದ್ದಾರೆ. ಅಥವಾ ಅವರಿಗೆ ದೊರೆತ ಮೂಲ ಪ್ರತಿಗಳಲ್ಲಿ ಇರಲಿಕ್ಕಿಲ್ಲ. ಏನೇ ಆಗಲಿ, ಅವರಿಂದ ಆ ಗ್ರಂಥಗಳ ಅನ್ವಯಾರ್ಥಕ್ಕೂ ತಾತ್ಪರ್ಯಕ್ಕೂ ತುಂಬಾ ಕೊರತೆಯುಂಟಾಗಿದೆ. ಈ ಕಾರಣದಿಂದ ನಮಗೆ ದೊರೆತ ತಾಳೆಗರಿಯ ಪ್ರತಿಯನ್ನು ಆದ್ಯಂತವಾಗಿ ಎತ್ತಿ ಬರೆಯುತ್ತೇವೆ. ಇದರಿಂದ ಶಿವಾನುಭವ ವಾಚಕರಿಗೆ ಸಂಪೂರ್ಣ ಗ್ರಂಥದ ಪರಿಚಯವಾಗುವದಲ್ಲದೆ ನಿರ್ಣಯಸಾಗರ ಪ್ರೆಸ್ಸಿನವರಾದರೂ ತಮ್ಮ ಅಷ್ಟೋತ್ತರ ಶತೋಪನಿಷತ್ತಿನ ಮುಂದಿನ ಆನೆಯ ಸಂಸ್ಕರಣದಲ್ಲಿ ಸರಿಪಡಿಸಿ ಅಚ್ಚು ಮಾಡಲು ಅನುಕೂಲವಾಗುವಲ್ಲಿ ಯಾವ ಸಂದೇಹವಿಲ್ಲ. ಅಲ್ಲದೆ ಸಂಸ್ಕೃತ ತೆಲುಗು ಲಿಪಿಗಳಲ್ಲಿ ದೊರೆಯದ ಕೆಲವಂಶಗಳು ಕನ್ನಡ ಲಿಪಿಯ ತಾಳೆಗರಿಯಲ್ಲಿ ದೊರೆತುದೊಂದು ಕನ್ನಡಲಿಪಿಗೂ ಕನ್ನಡಿಗರಿಗೂ ಹೆಮ್ಮೆಯ ಹೆಕ್ಕಳ. ಅದರಲ್ಲಿಯೂ ತಮಿಳು ನಾಡಿನಲ್ಲಿ ಕನ್ನಡ ಲಿಪಿಯ ತಾಳೆಗರಿಯು ದೊರೆತುದು ಮತ್ತೂ ವಿಶೇಷ. ಈ ಕೀರ್ತಿ ವಿಶೇಷವಾಗಿ ವೀರಶೈವರಿಗೆ ಸಲ್ಲತಕ್ಕುದು. ಏಕೆಂದರೆ ಅಲ್ಲಿಯ ವರೆಗೂ ಹಿ ದೊಮ್ಮೆ ಕನ್ನಡ ನುಡಿಯನ್ನೂ ಲಿಪಿಯನ್ನೂ ಒಯ್ದವರು ವೀರಶೈವರು. ತಮಿಳು ಹಾರದಲ್ಲಿ ಕನ್ನಡ ಹವಳ ಕೂಡಿಸಿ ಪೋಣಿಸಿದವರು ವೀರಶೈವರು. ಆದುದರಿಂದಲೇ ಇಂದು ತಮಿಳು ನಾಡಿನಲ್ಲಿ ವೀರಶೈವರಿಗೆ "ಕನ್ನಡಿಗರು" ಎಂದು ಹೆಸರಿಸಿ ಕರೆಯುತ್ತಾರೆ. ಇದಕ್ಕೆ ಅಲ್ಲಿಯ ವೀರಶೈವರು ಇಷ್ಟಪಡುವದಿಲ್ಲವಾದರೂ ಇದು ನಿಜವಾಗಿಯೂ ವೀರಶೈವರಿಗೆ ಹೆಮ್ಮೆಯ ಬಿರುದೆಂದು ನಾವು ಭಾವಿಸುತ್ತೇವೆ ತಾಯ್ನುಡಿಯ ಹೆಸರೇ ನಮ್ಮ ಹೆಸರಾದಾಗ ಅದು ಬಿರುದಲ್ಲವೆ ? ಹೆಮ್ಮೆಯಲ್ಲವೆ ?

## ಉಪನಿಷತ್ತಿನ ಹೃದಯ

ನಾವೇ ಬ್ರಾಹ್ಮಣರು. ಜಾತಿ ಅಥವಾ ಕರ್ಮಬ್ರಾಹ್ಮಣ್ಯವೆ ಬ್ರಾಹ್ಮಣ್ಯ. ನಮ್ಮಿಂದ ಮೇಲಾರೂ ಇಲ್ಲ. ನಾವು ಭೂಲೋಕದ ದೇವತೆಗಳು. ನಮಗೆ ಯಾರೂ ಸರಿಸಾಟಿಯಿಲ್ಲ. ಈ ಬ್ರಾಹ್ಮಣ್ಯಕ್ಕೆ ಬರಲು ಇತರ

ರಿಗೆ ಯಾರಿಗೂ ಹಕ್ಕಿಲ್ಲ. ಎಂಬ ಇವೇ ಮೊದಲಾದ ಭಾವನೆಗಳು ಒಟ್ಟುಗೂಡಿ ವಜ್ರದಂತೆ ಗಟ್ಟಿಗೊಂಡಿದ್ದವು. ಆ ವಜ್ರವನ್ನು ಭೇದಿಸು ವದು ಎಂಥವರಿಗೂ ಕಷ್ಟಸಾಧ್ಯವಾಗಿತ್ತು. ಇದಕ್ಕೆ ವಿಶ್ವಾಮಿತ್ರನು ಬ್ರಾಹ್ಮಣನಾಗಲು ಹೆಣಗಿದ್ದೊಂದು ಹೆಚ್ಚು ನಿಚ್ಚಳವಾದ ನಿದರ್ಶನ. ಆತನಿಗೆ ಜಾತಿ ಬ್ರಾಹ್ಮಣ್ಯವೆ ಬ್ರಾಹ್ಮಣ್ಯವೆಂದು ತಿಳಿದ ವಶಿಷ್ಠನು ಒಡ್ಡಿದ ಎಡರುಗಳು ಎಣಿಸಲಸದಳ. ಆದರೂ ವಿಶ್ವಾಮಿತ್ರನು ಛಲವಂತ. ಗುಣ ವಂತ. ಗುರಿಯನ್ನು ದೊರಕಿಸಿಯೇ ಬಿಟ್ಟ. ಕೊನೆಗೆ ಎದುರಾಳಿಯು ಒಪ್ಪಿ ಸಿಯೇ ಬಿಟ್ಟ. ಜ್ಞಾನ ಬ್ರಾಹ್ಮಣ್ಯವೇ ಬ್ರಾಹ್ಮಣ್ಯವೆಂದು ಅಥವಾ ಜ್ಞಾನಿಯೆ ಬ್ರಾಹ್ಮಣನೆಂದು ಕೃತಿಯಲ್ಲಿ ತಂದ. ಪ್ರಥಮ ಕೀರ್ತಿ ವಿಶ್ವಾಮಿತ್ರನದು. ವಿಶ್ವ ಪ್ರಯತ್ನ ಶೀಲನೂ ವಿಶಾಲ ಹೃದಯಿಯೂ ಆದ ಆ ವಿಶ್ವಾಮಿತ್ರ ನಿಗೇನೆ ಅಷ್ಟೊಂದು ಕಷ್ಟಸಾಧ್ಯವಿರುವಾಗ ಅದು ವಜ್ರವಲ್ಲದೆ ಮತ್ತೇನು ? ಅಂತಹ ವಜ್ರದಂತಹ ಬ್ರಾಹ್ಮಣ್ಯವನ್ನು ಭೇದಿಸಲು ಈ "ವಜ್ರಸೂಚೀ" ಉಪನಿಷತ್ತು ಉದಯವಾಯ್ತು. ವಜ್ರ ಭೇದಕ ಅಸ್ತ್ರವು ಹೇಗೆ ಸಣ್ಣಾಗಿಯೂ ಕೂರಾಗಿಯೂ ಇರಬೇಕೋ ಹಾಗೆಯೇ ಈ ಉಪ ನಿಷತ್ತೂ ಇದೆ. ಇದು ಹೆಸರಿಗೆ ತಕ್ಕ ಗ್ರಂಥ. ಅರ್ಥಕ್ಕೆ ತಕ್ಕ ಪ್ರತಿ ಪಾದನೆ. ಸೂಜಿಯಂತೆ ಆಕೃತಿಯಲ್ಲಿ ಸಣ್ಣದಾಗಿದ್ದರೂ ಕೃತಿಯಲ್ಲಿ ತೀರ ದೊಡ್ಡದು. ಇದನ್ನು ಪ್ರತಿಯೊಬ್ಬರು ಓದಿಯೇ ಆಗಬೇಕು. ಬ್ರಾಹ್ಮ ಣ್ಯದ ಅಂಧಃಶ್ರದ್ಧೆಯ ಕಟ್ಟನ್ನು ಕತ್ತರಿಸಲು ಉಪನಿಷತ್ಕಾಲವೆ ಉದ್ಯೋ ಗಿಸಿದೆಯೆಂಬುವು ಇದನ್ನು ಓದಿದಾಗ ಅರ್ಥವಾಗುತ್ತದೆ; ಸಂಗ್ರಾಹ ಕರ ಶ್ರಮ ಸಾರ್ಥಕವಾಗುತ್ತದೆ.

ಸೂಚನೆಃ– ಸಂಸ್ಕೃತ ಮತ್ತು ತೆಲುಗು ಲಿಪಿಯ ಗ್ರಂಥಗಳಲ್ಲಿ ಇಲ್ಲದೆ ನಮಗೆ ದೊರೆತ ತಾಳೆಗರಿಯ ಪ್ರತಿಯಲ್ಲಿ ಮಾತ್ರ ಇರುವ ಭಾಗಕ್ಕೆ ( ) ಈ ಚಿನ್ಹವನ್ನು ಹಾಕಿದ್ದೇವೆ. ಅರ್ಥವಾಗದ ಭಾಗಕ್ಕೆ (?) ಈ ಚಿಹ್ನ ತೋರಿದ್ದೇವೆ. ಅಚ್ಚಿನ ಗ್ರಂಥಗಳ ಪಾಠಾಂತರಗಳನ್ನು ಕೆಳಗೆ ಕಾಣಿಸಿದ್ದೇವೆ.

(ಮುಂದು ವರಿಯುವದು.)

---

# ಬಸವಣ್ಣನವರ ನುಡಿಗಳು.



ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ
ಎನ್ನ ತನುಗುಣವೆಲ್ಲವನು ಸುಡದಿಪ್ಪುದೇ ?

ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ.

ಎನಗಿಂತ ಕಿರಿಯರಿಲ್ಲ ; ಶಿವಭಕ್ತರಿಗಿಂತ ಹಿರಿಯರಿಲ್ಲ.

ಕಂಬಳಿಯಲ್ಲಿ ಕಣಕವ ನಾದಿದಂತೆ ಕಾಣಿರೇ
ಎನ್ನ ಮನ ! ಕಂಗಳೊಳಗಣ ಕಸವ ಕಳೆದಲ್ಲದೆ
ನೋಡಲೀಯ್ಯದು.

ಕರ್ತನ ಪೂಜಿಸಿ ಕುತ್ಸಿತ ದೈವಕ್ಕೆರಗುವವರು
ಕತ್ತೆ ಕುದುರೆಗೆ ಹುಟ್ಟಿದ ಹೇಸರನಂತೆ !

ಕಣ್ಣಿನಲ್ಲಿ ನೋಡಿ ಮಣ್ಣಿನಲ್ಲಿ ನೆರಹಿ
ಉಣ್ಣದೆ ಹೋಗದಿರಾ !

ರೂಹಿಲ್ಲದಂಗೆ ಒಲಿದವರಿಗೆ ತನುವಿನ
ಹಂಗುಂಟೇ ?

ಶಿವಜ್ಞಾನ ದೀಪ್ತಯಾಯಿತ್ತೆಂದು
ಶಿವಶರಣರೊಡನೆ ಧಿಃಕ್ಕರಿಸಬೇಡ !

ಸಾವಾಗ ದೇಹವ ದೇಗುಲಕ್ಕೆ ಒಯ್ಯೆಂಬರೆ
ದೇವರಿಗೆ ಹೆಣ ಬಿಟ್ಟಿಯು ಹೇಳತ್ತೇ ?

ಗಂಡನ ಮೇಲೆ ಸ್ನೇಹವಿಲ್ಲದ ಹೆಂಡತಿ
ಲಿಂಗದ ಮೇಲೆ ನಿಷ್ಠೆ ಇಲ್ಲದ ಭಕ್ತ
ಇದ್ದರೇನೋ ಶಿವಶಿವಾ ಹೋದರೇನೋ ಶಿವಶಿವಾ?
ಊಡದ ಆವಿಂಗೆ ಉಣ್ಣದ ಕರುವ ಬಿಟ್ಟಂತೆ.



# ಶಿವಾನುಭವ.

| ವರ್ಷ ೧೬ | ಮೇ = ೧೯೪೨. | ಸಂಚಿಕೆ |
| --- | --- | --- |

## ದೀಕ್ಷಾವಾದ.

(ಲೇಖಕರು:— ಶ್ರೀ ಮೂ. ನಂ. ನಂಜಪ್ಪನವರು ಬೆಂಗಳೂರುನಗರ.)

[೧೯೪೨ನೇ ಎಪ್ರೆಲ್ ಸಂಚಿಕೆಯಿಂದ ಮುಂದೆ ಸಾಗಿದ್ದು.]

ಈ ಆಕುಲಯ್ಯನವರ ಮತ್ತೊಂದು ಕಕುಲಾತಿಯನ್ನು ನೋಡೋಣ
ನನ್ನ ಲೇಖನದಲ್ಲಿದ್ದ "ಬಸವಪ್ರಭು ರೇವಣಸಿದ್ಧಾದಿಗಳ ಶರಣಯುಗ
ದಿಂದ ನೋಡಿದರೂ ಕೂಡ ಒಮ್ಮೆ ವೀರಶೈವ ದೀಕ್ಷಾಪೂರ್ವಕ ಲಿಂಗ
ಧಾರಿಗಳಾದವರು ಪುನಃ ವೀರಶೈವ ದೀಕ್ಷೆಯನ್ನು ಪಡೆದುದು ಎಲ್ಲಿಯೂ
ಕಾಣುವುದಿಲ್ಲ. ಹಾಗೆ ಪಡೆದಿರುವುವನ್ನು ಯಾರಾದರೂ ಸಿದ್ಧಮಾಡು
ವವರಿದ್ದರೆ ಅಗತ್ಯವಾಗಿ ಮಾಡಬಹುದು! ಅದು ಸತ್ಯವೆಂದು ಕಂಡು
ಬಂದರೆ ಯಾರಾದರೂ ಒಪ್ಪಿಕೊಳ್ಳಲೇ ಬೇಕಾಗುತ್ತದೆ." ಎಂಬ ವಿಷ
ಯಕ್ಕೆ ಉತ್ತರವನ್ನು ಕೊಡಲು ಪ್ರಯತ್ನಿಸಿ ಈ ಆಕುಲಯ್ಯಗಳು "...ರೇವ
ಣಸಿದ್ಧಾದಿಗಳ ಶರಣಯುಗದಿಂದ ನೋಡಿದರೂ ಕೂಡ ಒಮ್ಮೆ"ಎಂಬಿಷ್ಟು
ವಾಕ್ಯಗಳನ್ನು ಕಳ್ಳತನ ಮಾಡಿ ಬಸವ-ಪ್ರಭು ಮುಂತಾದವರೇ ಎರಡನೇ
ಬಾರಿ ದೀಕ್ಷೆಪಡೆದಿಲ್ಲವೆಂದು ನಾನು ಬರೆದಿರುವಂತೆ ತೋರಿಸಿ ವಾಚಕ
ವರ್ಗದ ಕಣ್ಣಿಗೆ ಮಣ್ಣೆರಚಿ ಮೋಸಮಾಡಲು ಯತ್ನಿಸಿ ಕಳ್ಳತನ-ಸುಳ್ಳು
ತನ ಈ ಎರಡು ಆಪಾದನೆಗಳನ್ನೂ ಹೊತ್ತುಕೊಂಡು ತಪ್ಪಿತಸ್ಥರಾಗಿ
ದ್ದಾರೆ.

ಬಸವಪ್ರಭು ಮುಂತಾದವರು ಶೈವದಿಂದ ವೀರಶೈವ ಮತಸ್ವೀಕಾರ ಮಾಡಿರುವುದರಿಂದ...... ಈ ಪ್ರಸಕ್ತಿಯು ಅವರಿಗಿಲ್ಲ. ಇವರಿಬ್ಬರು ವಯಸ್ಕರಾಗಿ ದೀಕ್ಷಿತರಾದುದಕ್ಕೆ ಹರಿಹರನ ರಗಳೆಗಳೇ ಪ್ರಮಾಣ ಎಂಬೀ ಮಾತಗಳನ್ನು ಈ ಅಕುಲಯ್ಯಗಳು "ಊರೆಲ್ಲ ಕಂಡದ್ದನ್ನು ಕಿವಿಯಲ್ಲಿ ಹೇಳಿದ"ನೆಂಬ ಗಾದೆಯಂತೆ ಏನನ್ನೋ ಹೊಸದಾಗಿ ಶೋಧಿಸಿ ಬಿಟ್ಟವರಂತೆ ಹರಿಹರನ ರಗಳೆಯ ಆಧಾರವನ್ನು ತೋರಿಸಿ ಹೇಳಲು ಹೊರಟಿದ್ದಾರೆ.

ಬಸವಣ್ಣನವರು ಪ್ರಭುದೇವರು ರೇವಣಸಿದ್ಧರು ಶ್ರೀಶೈಲದ ಪಂಡಿತಾರಾಧ್ಯರು ಮುಂತಾದವರೆಲ್ಲರೂ ಮೊದಲು ಶೈವರಾಗಿದ್ದು ಶ್ರೀಮದ ಸವಾದಿಗಳಿಂದಲೇ ಪರಿಷ್ಕೃತವಾಗಿ ರೂಪುಗೊಂಡ ವೀರಶೈವ ಧರ್ಮವನ್ನು ಆನಂತರ ಅವಲಂಬಿಸಿ ಅದನ್ನು ಪ್ರಸಾರ ಮಾಡಿ ಪರಿಪುಷ್ಟಿಗೊಳಿಸಲು ಕಾರಣರಾದರೆಂಬ ವಿಚಾರವು ಚರಿತ್ರಪ್ರಸಿದ್ಧವಾಗಿ ಮಠಗಳಲ್ಲಿ ಓದುವ ಹುಡುಗರಿಗೆಲ್ಲ ಚೆನ್ನಾಗಿ ತಿಳಿದಿರುವ ಈ ಕಾಲದಲ್ಲಿ ಈ ಅಕುಲಯ್ಯಗಳು ಅದನ್ನು ಹೊಸದಾಗಿ ಶೋಧಿಸಿ ಕಂಡುಹಿಡಿದವರಂತೆ ವಾಚಕರಿಗೆ ತಿಳಿಸಲು ಹೊರಟಿರುವುದು ಪರಿಹಾಸಕರವಲ್ಲವೆ?

"...ರೇವಣಸಿದ್ಧಾದಿಗಳ ಶರಣಯುಗದಿಂದ ನೋಡಿದರೂ ಕೂಡ ........ಎರಡನೆಯಬಾರಿ ವೀರಶೈವ ದೀಕ್ಷೆಯನ್ನು ಪಡೆದುದು ಎಲ್ಲಿಯೂ ಕಾಣುವುದಿಲ್ಲ." ಎಂಬ ನನ್ನ ಆ ಬರೆಹಕ್ಕೆ ಅಂದಿನ ಶರಣರ ಯುಗದಿಂದ ಇಂದಿನ ವರೆಗಿನ ವೀರಶೈವ ಸಾಹಿತ್ಯದಲ್ಲಿ ಯಾವ ಶರಣರ ಜೀವಿತ ಕಥೆಗಳಲ್ಲಿಯೂ ಯಾವ ಶರಣರೂ ಎರಡನೆಯಬಾರಿ ವೀರಶೈವ ದೀಕ್ಷೆಯನ್ನು ಹೊಂದಿದುದಾಗಲಿ ಶರಣರ ಮಕ್ಕಳಿಗೆ ಎಂಟನೆಯ ವರ್ಷದಲ್ಲಿ ಅಥವ ಇನ್ನೂ ಹೆಚ್ಚಿನ ವಯಸ್ಸಿನಲ್ಲಿ ಎರಡನೆಯ ಬಾರಿ ವೀರಶೈವ ದೀಕ್ಷೆಯನ್ನು ಮಾಡಿಸಿದುದಾಗಲಿ ಎಲ್ಲಿಯೂ ಕಾಣುವುದಿಲ್ಲ. ಎಂಬ ಅಭಿಪ್ರಾಯವು ವಾಚಕರಿಗೆ ಸ್ಪಷ್ಟವಾಗಿ ಹೊಳೆಯುತ್ತಿದ್ದರೂ ಕೂಡ ಈ ಅಕುಲಯ್ಯಗಳು ನನ್ನ ಬರೆಹದಲ್ಲಿಯ—ತಾವು ಉತ್ತರ ಕೊಡಲು ಕಷ್ಟವೆಂದು ಕಂಡಬಂದ—ವಾಕ್ಯಗಳನ್ನೇ ಕದಿಯುವುದರ ಮೂಲಕ ನನ್ನ ಬರೆಹವನ್ನು ತಮಗೆ ಬೇಕಾದಂತೆ ತಿರುಗಿಸಿಕೊಂಡು ಒಂದು ಕೇಳಿದರೆ ಮತ್ತೊಂದು ಹೇಳುವ 'ಪೆಚ್ಚು'ತನವನ್ನು ಪ್ರದರ್ಶಿಸಿ ವಾಚಕರನ್ನು ಮರುಳುಗೊಳಿಸಲೆತ್ನಿಸಿರುವುದು ಶುದ್ಧ ವಂಚಕತನವಲ್ಲವೆ?

ಈಗಲೂ ಯಾವ ಪುರಾತನ ಶರಣರ ಚರಿತ್ರೆಯಲ್ಲಿಯಾದರೂ ಶರಣರು ತಮ್ಮ ಮಕ್ಕಳಿಗೆ ಎಂಟನೆಯ ವರ್ಷದಲ್ಲಿ ಅಥವ ಅದಕ್ಕಿ ಹೆಚ್ಚಿನ ವಯಸ್ಸಿನಲ್ಲಿ ಎರಡನೆ ಸಾರಿ ವೀರಶೈವ ದೀಕ್ಷೆಯನ್ನು ಕೊಡಿಸಿದುದನ್ನು ಯಾರಾದರೂ ಪರಿಶೋಧಿಸಿ ಪ್ರಕಟಿಸುವವರಾಗಬೇಕು. ಈ ಕೆಲಸವನ್ನು ನಿಡುಮಾಮಿಡಿಯ ಗುರುಮೂರ್ತಿಗಳಾದರೂ ಮಾಡಬಹುದು. ಅಕುಲಯ್ಯಗಳಾದರೂ ಮಾಡಬಹುದು. ಅಥವ ಜಿಜ್ಞಾಸುಗಳಾದ ಯಾರು ಬೇಕಾದರೂ ಮಾಡಬಹುದು. ಆದರೆ ಉತ್ತರವನ್ನು ಬರೆಯುತ್ತೇವೆಂದು ಹೊರಟು ಬೈಗಳ ಸುರಿಮಳೆಯನ್ನು ಸುರಿಸಿ ಸತ್ಯವನ್ನು ಮುಚ್ಚಲೆಳಸುವ ಅಥವ ಪ್ರಯತ್ನವು ಮಾತ್ರ ಯಾರಿಗೂ ಸಲ್ಲದು.

ಶಿಶುಗಳಿಗೆ ಒಮ್ಮೆ ಎಸಗಿದ ದೀಕ್ಷಾತ್ಮಕ ಲಿಂಗಧಾರಣೆಯಿಂದಲೇ ಆ ಮಕ್ಕಳು ಬೆಳೆದಹಾಗೆಲ್ಲ ಆ ಬೆಳೆವಣಿಗೆಯ ಜೊತೆಯಲ್ಲಿಯೇ ತನ್ನ ಧರ್ಮಕ್ಕೆ ಸಂಬಂಧಪಟ್ಟ ಅಂದರೆ ಗುರುಲಿಂಗಜಂಗಮಾದ್ಯಷ್ಟಾವರಣಗಳೇ ಮೊದಲಾದವುಗಳಿಗೆ ಸಂಬಂಧಪಟ್ಟ ವಿಚಾರಗಳು ತಾವಾಗಿಯೇ ಮಕ್ಕಳ ರಕ್ತಗತವಾಗಿ ಹೋಗುವ ರೀತಿಯಲ್ಲಿ ಆಚಾರ ವಿಚಾರ ನಡೆನುಡಿ ಮುಂತಾದ ಜೀವಿತ ಕ್ರಮವನ್ನು ನಿರ್ಣಯಿಸಿದ್ದಾರೆ. ಆದರೆ ಇಂದು ಹಲವರು ತಪ್ಪುತಪ್ಪಾದ–ಪರಾನುಕರಣದ–ಆಚರಣೆಯನ್ನನುಸರಿಸುತ್ತಿರುವುದರಿಂದ ಅಂತಹವರಿಗೆ ಶರಣರ ನಿಜಾಚರಣೆಯ ಬಗ್ಗೆ ಅನುಮಾನಪ್ರಕೃತಿಯುಂಟಾಗುವುದು ಸಹಜವಾಗಿಯೇ ಇದೆ. ಅಂತಹ ಅನುಮಾನಿತರು ಶಿವಶರಣರ ವಚನಶಾಸ್ತ್ರವನ್ನು ಅಧ್ಯಯನಮಾಡತೊಡಗಿದರೆ ಅವರ ಸಂಶಯಗಳು ಪರಿಹಾರವಾಗುತ್ತವೆ.

ದೀಕ್ಷೆ—ಧಾರಣೆ ಎಂಬುದು ಅಭಿನ್ನವಾದ ಏಕೈಕ ಸಂಸ್ಕಾರವೆಂಬುದಕ್ಕೆ ಆಧ್ಯರ ಅನೇಕ ವಿಚಾರಗಳನ್ನು ಉದಹರಿಸಬಹುದು. ವಿಜಯನಗರದ ಬೃಹನ್ಮಠಾಧೀಶ್ವರರೂ ಶ್ರೇಷ್ಠ ಪಂಡಿತರೂ ಗುರುಗಳೂ ಆಗಿದ್ದ ಶ್ರೀವಿರೂಪಾಕ್ಷ ಪಂಡಿತಾರಾಧ್ಯರು ತಮ್ಮ ಚನ್ನಬಸವ ಪುರಾಣದಲ್ಲಿ “ಗಿರಿಜೋತ್ಪತ್ತಿಯ ಸಂಧಿ” ಯಲ್ಲಿ ಗಿರಿಜೆಯ ಜನನವನ್ನು ವರ್ಣಿಸುವಾಗ ಈ ದೀಕ್ಷೆಧಾರಣೆಗಳ ಅಭಿನ್ನತೆಯನ್ನು ಈ ಕೆಳಗಿನಂತೆ ಸ್ಪಷ್ಟವಾಗಿ ನಿರೂಪಿಸಿದ್ದಾರೆ.

ಬಳಿಕ ತಿಥಿವಾರ ತಾರಾಯೋಗ ಕರಣ ಸ ।
ಮ್ಮಿಳಿತ ಶುಭ ದಿವಸದೊಳ್ ಶುಭಲಗ್ನದೊಳ್ ಪಡೆದ ।
ಳೊಲವಿನಿಂ "ಶಿವಲಿಂಗಧರೆಯಾದ" ಕುವರಿಯಂ ಗಿರಿರಾಜ
ನೆಯ್ದೆ ನೋಡಿ ॥

ನಲಿದು ತಚ್ಛಿಶುವಿಂಗೆ "ತಲ್ಲಿಂಗವಂ" ತನ್ನ ।
ಕುಲಗುರುವಿನಿಂ "ದೀಕ್ಷೆಯಿಂ ಕೊಡಿಸಿ" ಪೆಸರಿಡಲ್ ।
ಬಳಿವುತಿರ್ದರ್ ಲೋಕವಮಾತೆ ಗಿರಿಜಾತೆ ಶಿವಶರಣಕುಲ ಪಾರಿ
ಜಾತೆ ॥

ಬೃಹನ್ಮಠಾಧಿಪತಿಗಳಾದ ಈ ಗುರುಗಳು "ತಲ್ಲಿಂಗವಂ ತನ್ನ ಕುಲ ಗುರುವಿನಿಂ ದೀಕ್ಷೆಯಿಂ ಕೊಡಿಸಿ ಪೆಸರಿಟ್ಟ"ರೆಂದು ಬರೆಯುವಾಗ ಆಗಿನ ಶಿವಶರಣರ ನಿಜಾಚರಣೆಯನ್ನೇ ಚಿತ್ರಿಸಿರುವರಲ್ಲವೆ? ಹಾಗಲ್ಲದೆ ಪುನಃ ಎಂಟನೆಯ ವರ್ಷಕ್ಕೆ ದೀಕ್ಷೆಯನ್ನು ಮಾಡುವ ಈಗಿನ ಅನುಕರಣ ಪದ್ಧತಿಯು ಆಗಲೂ ಆಚರಣೆಯಲ್ಲಿದ್ದಿದ್ದರೆ ಇವರೂ ಸಹ ಗಿರಿಜೆಗೆ ಎರಡನೆಯಬಾರಿ ದೀಕ್ಷೆಯಾದ ಸಂದರ್ಭವನ್ನು ಚಿತ್ರಿಸದೆ ಬಿಡುತ್ತಿದ್ದರೆ? ಹಾಗೆ ಇಲ್ಲದುದನ್ನು ಚಿತ್ರಿಸದೆ "ಧಾರಣದೀಕ್ಷೆ" ಎಂಬುದನ್ನು ಶಿಶುವು ಹುಟ್ಟಿದಾಗ ಮಾತ್ರ ನಡೆಯುತೆಂದು ನಿರೂಪಿಸಿರುವುದು ಈಗ ಕೆಲವರು ಎಂಟನೆಯ ವರ್ಷದಲ್ಲಿ ದೀಕ್ಷೆಯನ್ನು ಮಾಡುವ ಅಥವ ಮಾಡಬೇಕೆಂದು ವಾದಿಸುವ ಪದ್ಧತಿಯು ತಪ್ಪು ಮತ್ತು ಪರಾನುಕರಣವೆಂಬುದಕ್ಕೆ ಪ್ರಬಲವಾದ ನಿದರ್ಶನವಲ್ಲವೆ? ಆದುದರಿಂದ ಎರಡನೆಯಬಾರಿ ದೀಕ್ಷೆಯನ್ನು ಮಾಡಲೇಬೇಕೆಂದು ವಾದಿಸುವವರು ಆದ್ಯರ ಆಚರಣೆಯ ಆಧಾರಗಳಾಗಲಿ ಸರಿಯಾದ ಶಾಸ್ತ್ರವಾಕ್ಯಗಳಾಗಲಿ ಇದ್ದರೆ ಅವುಗಳನ್ನು ವಾಚಕರ ಮುಂದಿಟ್ಟು ಸಪ್ರಮಾಣವಾಗಿ ವಾದಿಸುವವರಾಗಬೇಕೇ ಹೊರ್ತು ಈ ಅಕುಲಯ್ಯ ಗುರುಮೂರ್ತಿಗಳವರಂತೆ ಈ ವಿಷಯಕ್ಕೆ ಸಂಬಂಧವಿಲ್ಲದ ವಿಚಾರಗಳನ್ನು ವಾದಕ್ಕೆ ಎಳೆದುಕೊಳ್ಳುವ ಅಥವ ಅಲ್ಪೋಕ್ತಿಗಳಿಂದ ನಿಂದಿಸಿ ಚರ್ಚೆಯ ಮುಖ್ಯ ಗುರಿಯನ್ನು ಮರೆಮಾಚಲೆತ್ನಿಸುವ ಬೀಳುಗೆಲಸವನ್ನು ಯಾರೂ ಮಾಡಬಾರದು.

ಮುಖ್ಯವಾಗಿ ಎರಡನೇಬಾರಿ ದೀಕ್ಷೆ ಮಾಡಿಸಲೇಬೇಕೆಂದು ವಾದಿಸುವವರು ಕಳೆದ ಮೇ ತಿಂಗಳ "ಶಿವಾನುಭವ"ದೊಳಗಣ ೩೦೮-೩೦೧-

೩೦) ಈ ಮೂರು ಪುಟಗಳಲ್ಲಿಯ ಪ್ರಶ್ನೆಗಳನ್ನು ಗಮನದಲ್ಲಿಟ್ಟುಕೊಂಡು ಅವುಗಳಿಗೂ ಸಮರ್ಪಕವಾದ ಉತ್ತರಗಳನ್ನು ಬರೆಯಬೇಕು.

ಮತ್ತೊಂದು ವಿಚಾರ: ಚಿತ್ತೂರು ಜಿಲ್ಲೆಯಲ್ಲಿ 'ಅಕುಲಯ್ಯ' ಎಂಬ ಹೆಸರಿನ ಮಾನ್ಯ ವ್ಯಕ್ತಿಗಳೆಷ್ಟೋ ಇರಬಹುದಾದರೂ ಕನ್ನಡ ಸಾಹಿತ್ಯದಲ್ಲಿ ಪರಿಶ್ರಮ ಉಳ್ಳ-ಕನ್ನಡವನ್ನು ಚನ್ನಾಗಿ ಬರೆಯಬಲ್ಲ 'ಅಕುಲಯ್ಯ' ಎಂಬ ವ್ಯಕ್ತಿಯು ತೆಲುಗು ಸೀಮೆಯಾದ ಚಿತ್ತೂರು ಜಿಲ್ಲೆಯಲ್ಲಿ ಇದೆಯೆ? ಎಂಬ ಸಂದೇಹವು ಮೊದಲು ಉಂಟಾಗುತ್ತದೆ. ಆದರಲ್ಲಿಯೂ ತೆಲುಗು ಸೀಮೆಯಲ್ಲಿರುವ (ಇರುವುದೇ ಸಂದೇಹ!) ಈ ವ್ಯಕ್ತಿಯು ಇಷ್ಟು ದಿನವೂ ಅಜ್ಞಾತವಾಗಿದ್ದು ಈಗ ಇದ್ದಕ್ಕಿದ್ದಂತೆ ಕಂಡರಿಯದ ಕೇಳರಿಯದ ಮತ್ತು ಕನ್ನಡನಾಡಿನ ಗುರುಮೂರ್ತಿಗಳ (ಈ ವಿಷಯವನ್ನು ಕುರಿತು ಚೆನ್ನಾಗಿ ಬರೆಯಬಲ್ಲ ಈ ಹೆಸರಿನ ವ್ಯಕ್ತಿಯು ಇರುವಿಕೆಯೂ ಈಗ ಸಂದೇಹಾಸ್ಪದವಾಗಿದೆ!) ಪರಕಾಯವನ್ನು ಪ್ರವೇಶ ಮಾಡಿ ಅವರ ಮನೋಗತವನ್ನೆಲ್ಲ ಕರತಲಾಮಲಕ ಮಾಡಿಕೊಂಡು ಆ ಹೆಸರಿನ ಶರೀರವನ್ನು ಗೋಪ್ಯದಲ್ಲಿರಿಸಿ ಈ ಅಕುಲಯ್ಯಗಳೆಂಬ ಹೆಸರಿನಿಂದ ಕಾಣಿಸಿಕೊಂಡು ಗುರುಮೂರ್ತಿಗಳೇ ಮೊದಲಾದವರೆಲ್ಲರ ಮನೋಗತವನ್ನೂ ಚೆನ್ನಾಗಿ ಬಲ್ಲ ಜ್ಯೋತಿಷ್ಕನ ಸೋಗಿನಿಂದ ತಪ್ಪು ಹೆಜ್ಜೆಗಳನ್ನು ಹಾಕುತ್ತಾ ಹೊರಟಿರುವ ಈ ಅಕುಲಯ್ಯ! ಎಂಬ ಹೆಸರನ್ನು ಕಂಡು ಆಶ್ಚರ್ಯವಾಗುತ್ತದೆ! ಅಲ್ಲದೆ ಇದನ್ನೆಲ್ಲ ನೋಡಿದರೆ ಹಿಂದಿನಿಂದ ಅಜ್ಞಾತವಾಗಿದ್ದು ಈಗ ಥಕ್ಕನೆ ಕಾಣಿಸಿಕೊಳ್ಳುತ್ತಿರುವ ಈ ನಾಮಧೇಯಗಳ ಪರದೆಯ ಹಿಂದೆ ಯಾರೋ ಇದ್ದುಕೊಂಡು ಹೊರಗೆ ಬರಲು ಧೈರ್ಯವಿಲ್ಲದೆ ಸೂತ್ರದ ಮೂಲಕ ಈ ಹೆಸರುಗಳನ್ನು ಕುಣಿಸುತ್ತಿರುವಂತೆ ಕಾಣುತ್ತಿದೆ! ಚಿಂತೆಯಿಲ್ಲ. ಎಷ್ಟು ದಿನ ಮುಸುಕಿನಲ್ಲಿರುತ್ತಾರೆಯೋ ನೋಡಿಯೇ ಬಿಡೋಣ. ಗೋಷಾ ಹೆಂಗಸರೆಲ್ಲರೂ ಹೊರಗೆ ಬರುತ್ತಿರುವ ಈ ಕಾಲದಲ್ಲಿ ಮುಸುಕಿನಲ್ಲಿ ಗಂಡಸರು ಬಾಳಲು ಸಾಧ್ಯವೆ?

ಇನ್ನು ಈ ಅಕುಲಯ್ಯ! ಎಂಬವರು ತೆಲುಗು ಸೀಮೆಯಲ್ಲಿರುವುದು ಒಂದು ಸಮಯಕ್ಕೆ ನಿಜವೇ ಆದರೆ ಅದು ಕನ್ನಡಿಗರೆಲ್ಲರಿಗೂ ಸಂತೋಷದಾಯಕವಾದ ಸಮಾಚಾರ! ಯಾಕೆಂದರೆ:— ತೆಲುಗು ಸೀಮೆಯ ನಿವಾಸಿಗಳಾಗಿದ್ದುಕೊಂಡು ಕನ್ನಡವನ್ನು ಚನ್ನಾಗಿ ಬರೆಯ

ಬಲ್ಲವರು ಒಬ್ಬರೂ ಇಲ್ಲದಿರುವ ಈ ದುಷ್ಕಾಲದಲ್ಲಿ ಇವರೊಬ್ಬರಾದರೂ ಇದ್ದರೆ! ಅದರಿಂದ ಕನ್ನಡದ ವೈಗೆ ಎಷ್ಟೋ ಒಳ್ಳೆಯದಲ್ಲವೆ? ಆದರೆ ಇರಬೇಕು! ಇದ್ದರೆ ಮಾತ್ರ ಕನ್ನಡಕ್ಕುಪಕಾರ!! ಅವರೇನೇ ಬರೆಯಲಿ. ಅಲ್ಲಿದ್ದುಕೊಂಡು ಕನ್ನಡದಲ್ಲಿ ಬರೆಯುತ್ತಾರೆಂದರೆ ಅದು ಎಲ್ಲರಿಗೂ ಸಂತೋಷಕರವಾದುದು! ಆದರೆ ಹಾಗಿಲ್ಲವೇ ಇಲ್ಲದೆ ಎಲ್ಲಿಯೋ ಇರುವ ಯಾರೋ ಒಬ್ಬರು ಹೀಗೆ ತೆಲುಗು ಸೀಮೆಯು ತೆಲುಗು ವ್ಯಕ್ತಿಯು ಇಲ್ಲದ ಹೆಸರಿನಿಂದ ಲೇಖಗಳನ್ನು ಬರೆದು ಪ್ರಕಟಣೆಗೆ ಕೊಡುವುದಾದರೆ ಮಾತ್ರ ಅದಕ್ಕಿಂತ ನಾಚಿಕೆಗೇಡಾದ ಬುದ್ಧಿಹೀನತೆಯು ಕೆಲಸ ವಿನ್ನೊಂದಿರಲಾರದು.

ಅದು ಹೇಗಾದರೂ ಇರಲಿ. ಅಕುಲಯ್ಯ ಎಂಬ ವ್ಯಕ್ತಿಯೊಂದಿದೆ. ಎಂದಿಟ್ಟುಕೊಂಡೇ ಈ ಲೇಖನವನ್ನು ಬರೆಯಲಾಗಿದೆಯಾದುದರಿಂದ ಈ ಅಕುಲಯ್ಯಗಳು ಬರೆದಿರುವ "ಇನ್ನೊಂದು ವಿಷಯ" ಎಂಬುದಕ್ಕೂ ಇಲ್ಲಿ ಸಂಕ್ಷಿಪ್ತವಾಗಿ ಉತ್ತರವನ್ನು ಕೊಡೋಣ.

ಈ ಅಕುಲಯ್ಯಗಳು:— ಮೇ-ಜೂನ್ ತಿಂಗಳ "ಶಿವಾನುಭವ" ಸಂಚಿಕೆಯು ನಿಮ್ಮ "ದೀಕ್ಷಾವಾದ"ದಲ್ಲಿ-ಭಿಕ್ಷುಕರ ತಂಡ, ಉಪಟಳ, ಉಪದ್ರವ, ಸ್ವಾರ್ಥಿ ಮುಂತಾದ ಶಬ್ದಗಳು ಯಾರನ್ನು ಕುರಿತು? ಜನ್ಮಲಿಂಗಧಾರಿಗಳಾದ ವೀರಶೈವರಿಗೆ ಪುನರ್ದೀಕ್ಷೆಯನ್ನು ಮಾಡಿಸದೆ ಇರುವ ಉತ್ತಮ ಜಂಗಮರು ಯಾರಿರುವರೆಂಬುದನ್ನು ಹೆಸರು ಸಹಿತ ಪ್ರಕಟಿಸುವಿರಾ?" ಎಂದು ಕೇಳಿದ್ದಾರೆ.

ಅಯ್ಯಾ, ಅಕುಲಯ್ಯಗಳೇ ನಿಮ್ಮ ತೆಲುಗು ಸೀಮೆಯಲ್ಲಿ ನಮ್ಮ ಜನಸಂಖ್ಯೆಯೇ ಕಡಿಮೆ. ಆದುದರಿಂದ ಕೆಲ ಭಿಕ್ಷುಕ ಅಯ್ಯಗಳ ಉಪಟಳವಾದರೂ ನಿಮಗಿರಲಾರದು. ಆದರೆ ನಮ್ಮ ಕನ್ನಡನಾಡಿನ ಯಾವ ಭಾಗದಲ್ಲಿಯಾದರೂ ಬಂದು ನೋಡಿದರೆ ಕೆಲವರು ಈ ಭಿಕ್ಷುಕ ವೃತ್ತಿಗಾಗಿಯೇ ಅಯ್ಯಾಚಾರದ ದೀಕ್ಷೆ!? ಯನ್ನು ಹೊಂದಿರುವುದೂ ಅವರ ತಂಡದ ಉಪಟಳ ಉಪದ್ರವಗಳೂ ಅವರು ಭಿಕ್ಷದಿಂದ ಸಂಪಾದಿಸುವ ಅಕ್ಕಿ ಬೇಳೆ ಕಾಸು ಕಡ್ಡಿಗಳೆಲ್ಲವನ್ನೂ ಸ್ವಾರ್ಥಕ್ಕಾಗಿ ಅಂದರೆ ಹೆಂಡಿರ (ಹೆಂಡಿರಿಲ್ಲದಿದ್ದರೆ ಬೇರೆ ಹೆಂಗಸರ) ಮಕ್ಕಳ ಹೊಟ್ಟೆಪಾಡಿಗಾಗಿಯೇ ವಿನಿಯೋಗವಾಗುತ್ತವೆಯೆಂಬುದೂ ತಮಗೆ ಸ್ಪಷ್ಟವಾಗಿ ತಿಳಿದುಬರು

ತ್ತದೆ. ಅಲ್ಲದೆ ಈ ನಾಡಿನಲ್ಲಿ ನಿಮಗೆ ಯಾರಾದರೂ ಪರಿಚಯಸ್ಥರಿದ್ದಲ್ಲಿ ಅವರಿಗೆ ಒಂದು ಪತ್ರವನ್ನು ಬರೆದು "ಈ ದೀಕ್ಷೆಯೆಂಬುದನ್ನು ಮಾಡಿಸಿಕೊಳ್ಳುವವರು ಭಿಕ್ಷುಕ ವೃತ್ತಿಯು ವಿನಾ ಸಮಾಜೋಪಯುಕ್ತವಾದ ಬೇರೆ ಯಾವ ಕಾರ್ಯವನ್ನಾದರೂ ಮಾಡುತ್ತಿದ್ದಾರೆಯೇ?" ಎಂದು ಕೇಳಿ ತಿಳಿದುಕೊಳ್ಳಿ. ಆಗಬರುವ ಉತ್ತರವು ನಿಮ್ಮ ಸಂಶಯವನ್ನು ಹೋಗಲಾಡಿಸುತ್ತದೆ. ಅಥವ ನೀವೇ ಸ್ವತಃ ದೀಕ್ಷಾಸಮಾರಂಭಗಳಾಗುವ ಸ್ಥಳಕ್ಕೆ ಹೋಗಿ ನೋಡಿರಿ. ಅಲ್ಲಿ ಈಗ ಭಿಕ್ಷುಕವೃತ್ತಿಯಿಂದ ಸಮಾಜವನ್ನು ಭಕ್ಷಿಸುತ್ತಿರುವವರ ಸಂತಾನ ಸಮೂಹವೇ ಮುಕ್ಕಾಲು ಮೂರು ವೀಸೆಯ ಪಾಲಿನಷ್ಟು ಪ್ರತ್ಯಕ್ಷವಾಗಿರುತ್ತದೆಯಲ್ಲದೆ ನೀವು ತಿಳಿದುಕೊಂಡಿರುವಂತೆ ದೀಕ್ಷೆಹೊಂದಿ ಜಂಗಮರಾಗಬೇಕೆಂಬ ಹಂಬಲದಿಂದ ಕೂಡಿದ ಕೆಲವರು ಕೇವಲ ಬೆರಳೆಣಿಸುವಷ್ಟು ಜನರು ಮಾತ್ರ ಇರುತ್ತಾರೆ. ಆ ದೃಶ್ಯವನ್ನು ನೋಡಿದ ಬಳಿಕ ಭಿಕ್ಷುಕರ ಉಪಟಳ ಉಪದ್ರವಗಳೂ ಸ್ವಾರ್ಥ ಮನೋವೃತ್ತಿಯೂ ನಿಮ್ಮ ಕಣ್ಣಿಗೆ ಕಟ್ಟಿದಂತಾಗುತ್ತವೆ.

ಇನ್ನು ಪುನರ್ದೀಕ್ಷೆಯನ್ನು ಮಾಡಿಸದೆ ಇರುವ ಉತ್ತಮ ಜಂಗಮರು ಯಾರಿರುವರು? ಎಂದು ಕೇಳುತ್ತಾರೆ. ಈ ಅಕುಲಯ್ಯಗಳು:— ಈ ಪ್ರಶ್ನೆಯನ್ನು ಕೇಳಿದರೆ ಈ ಅಕುಲಯ್ಯಗಳಿಗೆ ವೀರಶೈವ ಧರ್ಮದ ಪರಿಚಯವಾದರೂ ಇದೆಯೋ? ಇಲ್ಲವೊ? ಎಂಬ ಸಂದೇಹ ಉಂಟಾಗುತ್ತಿದೆ. ಯಾಕೆಂದರೆ— ಈ ಅಕುಲಯ್ಯಗಳ ತಿಳಿವಳಿಕೆಯ ಪ್ರಕಾರ ಪುನರ್ದೀಕ್ಷೆಯನ್ನು ಹೊಂದಿದವರೆಲ್ಲರೂ ಜಂಗಮರು. ಅದರಲ್ಲಿಯೂ ಉತ್ತಮ ಜಂಗಮರಾಗುತ್ತಾರೆಂದ ಹಾಗಾಯಿತು. ಹೀಗೆ ಪುನರ್ದೀಕ್ಷೆಯನ್ನು ಹೊಂದಿದವರೆಲ್ಲರೂ ಉತ್ತಮ ಜಂಗಮರಾಗುತ್ತಾರೆಂದು ಯಾವ ವೀರಶೈವ ಶಾಸ್ತ್ರದಲ್ಲಿ ಉಕ್ತವಾಗಿದೆಯೋ? ಕಾಣೆವು.

ಶ್ರೀನಿಡುಮಾಮಿಡಿ ಗುರುಮೂರ್ತಿಗಳು:— ಜನ್ಮತಃ ದೀಕ್ಷೆ— ಎಂಟನೆಯ ವರ್ಷದಲ್ಲಿ ಈಗ ಆಗುತ್ತಿರುವ ದೀಕ್ಷೆಗಳೆರಡೂ ತತ್ವಶಃ ಒಂದೇ ಎಂದು ಒಪ್ಪಿಕೊಂಡು: ಆದರೆ ಲೌಕಿಕವೀಗ ಎರಡನೆಯ ಫಲವೂ ಮಾಡಲೇಬೇಕೆಂಬ ದುರಭಿಮಾನದ ಪಟ್ಟು ಸಾಲದೆಂದೋ ಏನೋ ತಾವು ಇನ್ನೂ ಮುಂದೆ ಹೋಗಿ ಉತ್ತಮ ಜಂಗಮರಾಗುವುದಕ್ಕಾಗಿ ಎಂಟನೆಯ ವರ್ಷದ ದೀಕ್ಷೆಯು ಅವಶ್ಯಕವೆಂಬ ಮತ್ತಷ್ಟು ಗಾಢಾಂಧಕಾರದ ಗುಹೆಯೊಳಕ್ಕೆ ಕಾಲಿಟ್ಟಿದ್ದಾರೆ.

ಓ, ಅಕುಲಯ್ಯಗಳೇ ಇನ್ನಾದರೂ ತಿಳಿದುಕೊಳ್ಳಿ. ನೀವು ಹೇಳುವ ಮಾಹೇಶ್ವರ ಅಥವ ಜಂಗಮುಯೆಂಬುದು ಷಟ್‌ಸ್ಥಲಗಳಲ್ಲಿಯು ಒಂದು ಸ್ಥಲವೇ ಹೊರ್ತು ನೀವು ತಿಳಿದುಕೊಂಡಿರುವಂತೆ ಎಂಟನೆಯು ವರ್ಷದ ದೀಕ್ಷೆಯಿಂದ ಪ್ರಾಪ್ತನಾಗುವುದಲ್ಲ. ಈ ವಿಚಾರವನ್ನ ನೀವು ಬಲ್ಲವರ ಪದತಲದಲ್ಲಿ ಕುಳಿತು ಚೆನ್ನಾಗಿ ಅಭ್ಯಾಸ ಮಾಡಿದರೆ ನಿಮ್ಮ ತಪ್ಪು ತಿಳಿವಳಿಕೆಗಳೆಲ್ಲವೂ ದೂರವಾಗುತ್ತವೆ.

ಇನ್ನು ನನ್ನ ಲೇಖನಗಳ ಪ್ರಶಂಸೆಯು ವಿಷಯು: – ಹಿಂದಿನ ನನ್ನ ಅನೇಕ ಲೇಖನಗಳನ್ನು ಗುರುಮೂರ್ತಿಗಳು ಕುತ್ಸಿತ ಬುದ್ಧಿಯಿಂದ 'ದ್ವೇಷವಾದ' ಎಂಬುದಾಗಿ ಟೀಕಿಸಿ ಅಹಂಭಾವವನ್ನು ತೋರಿಸಿಕೊಂಡಿದ್ದರಿಂದ ಆ ಅಹಂಭಾವದ ಖಂಡನೆಗಾಗಿ ಆ ನನ್ನ ಹಿಂದಿನ ಲೇಖನಗಳನ್ನು ಕುರಿತ ವಾಚಕ ವರ್ಗದ ಅಭಿಪ್ರಾಯುವನ್ನು ಹಾಗೆ ಬರೆದಿದ್ದೇನೆಯೋ ಹೊರ್ತು ನೀವು ತಪ್ಪಾಗಿ ತಿಳಿದುಕೊಂಡಿರುವಂತೆ ಅಹಂಮನ್ಯತೆಗಾಗಿ ಬರೆದುದಲ್ಲ. ಗುರುಮೂರ್ತಿಗಳಿಗೆ ಉತ್ತರವಾಗಿ ಬರೆದ ಆ ಕಲಮಿನ ಅಂತ್ಯದಲ್ಲಿಯೋ ನಾನು ಬರೆದಿರುವ "ಸಮಾಜ ಸುಧಾರಣೆಯಂತಹ ಮಹತ್ಕಾರ್ಯವು ಕೇವಲ ನಮ್ಮ ನಿಮ್ಮಂತಹ ಒಬ್ಬಿಬ್ಬರದಲ್ಲ. ಅದು ಸಮಸ್ತಸದ್ಭಕ್ತಗಣಂಗಳ ಪಾಲಿನ ಸೌಭಾಗ್ಯ" ಎಂಬುದನ್ನು ನೀವು ಇನ್ನೊಮ್ಮೆ ಓದಿ ನೋಡಿದರೆ ಅಹಂಮನ್ಯತೆಯು ಯಾರದೆಂಬುದು ನಿಮಗೆ ಚನ್ನಾಗಿ ಅರ್ಥವಾಗುತ್ತದೆ.

ಇನ್ನು: ನಾನೊಬ್ಬನೇ ಭಕ್ತ ಮರ್ತ್ಯದೊಳಗಣ ಉಳಿದ ಭಕ್ತರೆಲ್ಲರೂ ಜಂಗಮ..." ಎಂಬ ಬಸವೇಶ್ವರ ವಚನವನ್ನು ಕುರಿತು ಈ ಅಕುಲಯ್ಯಗಳು ಈ ವಚನವು ಬಸವಣ್ಣನವರ ಮೇರೆಮೀರಿದ ಭಕ್ತಿಭಾವವನ್ನು ಹೊರಸೂಸುತ್ತದೆಯೋ ಹೊರ್ತು... ಒಬ್ಬ ಲಿಂಗಾಯತನು ಉಳಿದ ಲಿಂಗಾಯುತರೆಲ್ಲರನ್ನೂ ಜಂಗಮರನ್ನಾಗಿ ಭಾವಿಸಬೇಕೆನ್ನುವುದು ನ್ಯಾಯುವೇಹೊರ್ತು... ಭಕ್ತನು ಒಂದು ಸಂಸ್ಕಾರದಿಂದ ಜಂಗಮನಾದರೆ ವ್ಯವಹರಿಸಲು ಅಡ್ಡಿಯಿಲ್ಲ. ಅದಿಲ್ಲದಿದ್ದರೆ ಆ ಭಕ್ತನನ್ನು ಜಂಗಮನೆಂದು ಬರಿ ಭಾವಿಸಬೇಕೇ ಹೊರ್ತು...ವ್ಯವಹರಿಸಲು ಬಾರದು ಎಂದು ಬರೆದಿದ್ದಾರೆ. ಎಲ್ಲ ವಚನಗಳಿಗೂ ಈ ಅಕುಲಯ್ಯಗಳು ಹೇಳುವಂತೆ ಮೇರೆಮೀರಿದ ಭಕ್ತಿ ಮೇರೆಮೀರಿದ ಜ್ಞಾನ ಮೇರೆಮೀರಿದ ವೈರಾಗ್ಯ

ವನ್ನು ತೋರಿಸುತ್ತವೆಯೆಂದು ಹೇಳುವುದು ತೀರ ಬೆಪ್ಪತನ. ಶರಣರು ತಮ್ಮ ವಚನಗಳಲ್ಲಿ ಅತಿಶಯೋಕ್ತಿಗಳನ್ನೆಲ್ಲಿಯೂ ಹೇಳಿಲ್ಲ. ಆಯಾಸ್ಥಲಾನುಸಾರವಾಗಿ ಯಾರ ದಾಕ್ಷಿಣ್ಯ ದರ್ಪಗಳನ್ನೂ ಗಮನಿಸದೆ ತಮಗೆ ಸತ್ಯವೆಂದು ತೋರಿದುದನ್ನು ಸ್ಪಷ್ಟವಾಗಿ ಹಾಡಿಬಿಟ್ಟಿದ್ದಾರೆ. ತೋರಿಕೆಗೆ ಮಾತ್ರ ಭಾವಿಸಿ ಕಾರ್ಯತಃ ಆಚರಿಸಕೂಡದೆಂಬ ಮಾತು ಶಿವಾಚಾರ ಮಾರ್ಗಕ್ಕೆ ಸಲ್ಲದು. ಮತ್ತು ಭಕ್ತನು ಎಂಟನೆಯ ವರ್ಷದ ದೀಕ್ಷಾ ಸಂಸ್ಕಾರದಿಂದ ಜಂಗಮನಾಗುವನೆಂಬ ಈ ಅಕುಲಯ್ಯಗಳ ಅಭಿಪ್ರಾಯವು ಅಜ್ಞಾನಜನ್ಯವಾದುದು. ಇವರ ಈ ಯದ್ವಾತದ್ವದ ವಿಪರೀತವಾದದ ರೀತಿಯಾಗಿ ಈ ಧರ್ಮಕ್ಕೆ 'ವೀರಶೈವ' ಎಂಬ ಹೆಸರನ್ನು ತ್ಯಜಿಸಿ 'ಜಂಗಮ' ಎಂದೇ ಕರೆಯಬೇಕಾದೀತು! ಏಕೆಂದರೆ ಇವರ ತಿಳಿವಳಿಕೆಯ ಪ್ರಕಾರ ಎಲ್ಲರೂ ಎಂಟನೆಯ ವರ್ಷದ ದೀಕ್ಷೆಯನ್ನು ಹೊಂದಿ ಉತ್ತಮ ಜಂಗಮರಾಗುತ್ತಾರೆಂದ ಹಾಗಾಯಿತು! ಹೀಗಾಗುವುದು ನಿಜವಾದರೆ ವೀರಶೈವ ಎಂಬ ಹೆಸರಿನ್ನೇಕೆ ಬೇಕು? ಅಕುಲಯ್ಯಗಳು ಈ ವಿಚಾರದಲ್ಲಿ ದುರಭಿಮಾನವನ್ನು ತ್ಯಜಿಸಿ ಬಲ್ಲವರಿಂದ ನಿಜತತ್ವವನ್ನು ತಿಳಿದುಕೊಳ್ಳಬೇಕು.

ಇನ್ನು ಈ ಅಕುಲಯ್ಯಗಳು "ಒಟ್ಟಿನಲ್ಲಿ......ನಾವೆಲ್ಲಿ ಜಂಗಮರಾಗದೇ ಹೋಗುತ್ತೇವೆಯೋ ಎಂಬ ಭಯ ವಿಪರೀತವಾಗಿದೆ. ಹಾಗೆ ಅವರೇನೂ ಭಯಪಡಬೇಕಾಗಿಲ್ಲ......ಆ (ದೀಕ್ಷಾ) ಸಂಸ್ಕಾರದಿಂದ ಸಂಸ್ಕಾರಿತರಾಗಿ ನೀವೂ (ಜಂಗಮರ ಗುಂಪಿಗೆ) ಸೇರಲು ಯಾರದೂ ಅಭ್ಯಂತರವಿಲ್ಲ...ಮುಂತಾಗಿ ಬರೆದು ಅಭಯ ಹಸ್ತವನ್ನು ತೋರಿದ್ದಾರೆ. ಇವರ ಅಭಯ ಹಸ್ತವನ್ನು ತೋರುವುದು ಉತ್ತಮ – ಬುದ್ಧಿಬಲಗಳುಳ್ಳವ – ರ ಲಕ್ಷಣವಲ್ಲವೆ? ಅದಕ್ಕೆ ಬದಲಾಗಿ ಉಂಡೆಯಗೌಡ? ಎಂಬ ಪ್ರಶ್ನೆಗೆ ನೀವೇನೂ ಹೆದರಬೇಡಿ ಎಂದು ಉತ್ತರ ಕೊಡುವ ಗೌಡನಂತಹ ಅತಿ ಬುದ್ಧಿವಂತರನ್ನು ಧಡ್ಡರ ದೊಡ್ಡಿಯೊಳಕ್ಕೆ ಸೇರಿಸಿ ಚಿಕಿತ್ಸೆಮಾಡಿಸಬೇಕಲ್ಲವೆ? ಪುನಃ ಪುನಃ ಮೇಲಿಂದ ಮೇಲೆ ಮಾತು ಮಾತಿಗೂ (ದೀಕ್ಷಾ) ಸಂಸ್ಕಾರದಿಂದ ಜಂಗಮರಾಗಬೇಕು ಎಂಬ ಮಾತನ್ನೇ ರಾಗರಾಗವಾಗಿ ಹಾಡುತ್ತಿರುವ ಈ ಅಕುಲಯ್ಯಗಳ ಬುದ್ಧಿಗೇನು ಮಂಕು ಹಿಡಿದಿದೆಯೋ? ಮರುಳು ಕವಿದಿದೆಯೋ? ತಿಳಿಯದು.

ಈ ಅಕುಲಯ್ಯಗಳು ಯಾವ ದುರಭಿಮಾನವನ್ನು ಹೃದಯಾಂತರಾಳದಲ್ಲಿ ಬಚ್ಚಿಟ್ಟುಕೊಂಡು ಎಂಟನೆಯ ವರ್ಷಕ್ಕೆ ಎರಡನೇ ಬಾರಿ ಎಲ್ಲರೂ ದೀಕ್ಷಾಸಂಸ್ಕಾರವನ್ನು ಹೊಂದಲೇಬೇಕೆಂದು ವಾದಿಸತೊಡಗಿದ್ದಾರೆಯೋ ಆ ದುರಾಭಿಮಾನದ ದುಷ್ಟ ಸ್ವರೂಪವೆಂತಹುದೆಂಬುದು (ದೀಕ್ಷಾ) ಸಂಸ್ಕಾರದಿಂದ ಜಂಗಮರಾಗುವರೆಂದ ಅವರ ಮಾತಿನಿಂದಲೇ ಎಲ್ಲರಿಗೂ ಸ್ಪಷ್ಟವಾಗಿ ತಿಳಿದಂತಾಯಿತು. ಹೀಗೆ ಎಂಟನೆಯ ವರ್ಷದ ದೀಕ್ಷಾಸಂಸ್ಕಾರವನ್ನು ಹೊಂದಿದವರೆಲ್ಲರೂ ಉತ್ತಮಜಂಗಮ! ರಾಗುತ್ತಾರೆಂಬುದಕ್ಕೆ ಆಧಾರವು ವೀರಶೈವ ಧರ್ಮಶಾಸ್ತ್ರದಲ್ಲಿ ಎಲ್ಲಿ ಹೇಳಿದೆಯೋ? ಆ ಪ್ರಕಾರವಾಗಿ ಯಾವ ದೇಶದಲ್ಲಿ ಯಾವ ಶರಣರು! ಆಚರಿಸುತ್ತಿದ್ದಾರೆಯೊ? ಈ ಅಕುಲಯ್ಯಗಳೇ ತಿಳಿಸಬೇಕಾಗಿದೆ.

ಇನ್ನು ಈ ಅಕುಲಯ್ಯಗಳು "ನಂಜಪ್ಪನವರು ಎಷ್ಟು ಮಠಗಳಿಗೆ ಹೋಗಿ ತಮ್ಮ ಪೂಜೆಯನ್ನು ಮಾಡಿಸಿಕೊಂಡಿರುವರೋ ನಾವು ಬೇರೆ ಕಾಣೆವು ಮಾಹೇಶ್ವರರಿಗೆ ಭಕ್ತಿಸ್ಥಲವಿದೆ ಅದು ಮಹೇಶಭಕ್ತಸ್ಥಲವೆಂಬುದನ್ನು ನಂಜಪ್ಪನವರು ಮರೆಯಬಾರದು. ಎನ್ನುತ್ತಾರೆ. ಇವರ ಈ ವಾಕ್ಯಗಳನ್ನು ನೋಡಿದರೆ ಇವರಿಗೆ ವ್ಯವಹಾರಜ್ಞಾನವಿದೆಯೋ ಇಲ್ಲವೋ? ಎಂಬ ಸಂದೇಹ ಉಂಟಾಗುತ್ತದೆ. ಯಾಕೆಂದರೆ ಭಕ್ತರು ಮಠಗಳಿಗೆ ಹೋಗುವುದು ಪೂಜೆಮಾಡಿಕೊಳ್ಳುವುದಕ್ಕಲ್ಲ. ಸ್ವಾಮಿಗಳ ದರ್ಶನಲಾಭವನ್ನು ಹೊಂದಿ ಅವರೊಡನೆ ಸದ್ಗೋಷ್ಠಿಯನ್ನು ನಡೆಸಿ ಧರ್ಮಜ್ಞಾನವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ! ಹೀಗೆ ತಮ್ಮ ದರ್ಶನಲಾಭಕ್ಕಾಗಿ ಬರುವ ಭಕ್ತರನ್ನು ಭಕ್ತಿಸ್ಥಲದಲ್ಲಿ ನಿಂತು ಸ್ವಾಗತಿಸಿ ಉಪಚರಿಸಬೇಕಾದುದು ಮಠಾಧಿಕಾರಿಗಳ ಕರ್ತವ್ಯ. ತಿಳಿವಳಿಕೆಯುಳ್ಳ ಎಲ್ಲ ಮಠಾಧಿಕಾರಿಗಳೂ ಈ ಬಗೆಯ ಆಚರಣೆಯನ್ನೇ ಇಟ್ಟುಕೊಂಡಿದ್ದಾರೆ. ಅದು ಮಹೇಶ್ವರನ ಭಕ್ತಿಸ್ಥಲವಾದರೇನು? ಯಾವ ಭಕ್ತಿಸ್ಥಲವಾದರೇನು? ಅದು ಭಕ್ತಿಸ್ಥಲವೆಂಬುದು ತಾನೇ ಮುಖ್ಯ. ಭಕ್ತರು ಮಠಕ್ಕೆ ಹೋಗಿ ಗುರುಗಳಿಂದ ಪೂಜೆಮಾಡಿಸಿಕೊಳ್ಳುತ್ತಾರೆಯೆಂದು ಯಾರು ಬರೆದಿದ್ದರು? ಈ ಅಕುಲಯ್ಯಗಳು ಗಯ್ಯಾಳಿ ಹೆಂಗಳೆಯರಂತೆ ಇಲ್ಲದುದನ್ನೆಲ್ಲ ಕಲ್ಪಿಸಿಕೊಂಡು ಹೀಗೆ ಕುಹಕೋಕ್ತಿಗಳನ್ನು ಬರೆದು ವಾಚಕರನ್ನು ಮೋಸಗೊಳಿಸಲೆತ್ನಿಸಿರುವುದು ಅವರ ಅಲ್ಪಜ್ಞತೆಯನ್ನೇ ಸ್ಥಿರಪಡಿಸುತ್ತದೆ.

ಈ ಅಕುಲಯ್ಯಗಳು ನಾನು ಬರೆದಿದ್ದ "ಮಗುವಿನಂತೆ ಸಾಕಿಸಲಹಿ..... ಒಳ್ಳೆಯ ಆದಾಯ ಉಳ್ಳ ಮಠಕ್ಕೆ ಪಟ್ಟವನ್ನು ಕಟ್ಟಿದ...ಗುರುಗಳನ್ನೇ ದರ್ಶನಕ್ಕೆ ಬರುವಂತೆ ಹೇಳಿಕಳಿಸುವ ಕೆಲ ಧೂರ್ತ ಮಠಾಧಿಕಾರಿಗಳ ಕೃತಘ್ನತನ"ದ ವಿಚಾರವನ್ನೆತ್ತಿಕೊಂಡು 'ಗಗನ ಕುಸುಮ... ಈ ಸುಳ್ಳು ಬರೆಹಕ್ಕೆ ಯಾರು ಗುರಿ? ಕಳಿಸಿದವರಾರು? ಕೇಳಿದವರಾರು? ತಾಣವಾವುದು? ಇದನ್ನೆಲ್ಲಾ ಸರಿಯಾಗಿ ಉತ್ತರಿಸಬಲ್ಲರೊ? ನೋಲಾಗಿ ಲೇಖಕರಿಗೂ ಇದಕ್ಕೂ ಯಾವ ಸಂಬಂಧವೂ ಇಲ್ಲವೆಂದು ಕೇಳುತ್ತೇನೆ" ಮುಂತಾಗಿ ಬರೆದು "ಕುಂಬಳಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿಕೊಂಡ" ಬೆಪ್ಪುತಕ್ಕಡಿಯಂತಾಗಿದ್ದಾರೆ ಯಾಕೆಂದರೆ ಆ ಕೃತಘ್ನತನದ ಆಚರಣೆಯನ್ನು ಯಾವುದಾದರೊಂದು ವ್ಯಕ್ತಿಗೆ ಅನ್ವಯಿಸಿ ಬೆರಳು ತೋರಿಸಿ ಬರೆದಿರಲಿಲ್ಲ. ನಿಡುಮಾಮಿಡಿಯ ಗುರುಮೂರ್ತಿಗಳು ಜಂಗಮರೆಂಬುವ ಒಂದು ವಂಶಪಾರಂಪರ್ಯವನ್ನುಳ್ಳ ವರ್ಗೀಕರಣ ಉಂಟೆಂಬ ಮತ್ತು ಅಂಥವರೇ ಮಠಾಧಿಕಾರಿಗಳಾಗುವರೆಂಬ ಅಭಿಪ್ರಾಯಸೂಚಕವಾದ ಬರೆಹವನ್ನು ಬರೆದಿದ್ದುದರಿಂದ ಅದರ ಖಂಡನೆಗಾಗಿ ಈ ಬಗೆಯ ಕೃತಘ್ನತನದಾಚರಣೆಯುಳ್ಳವರನ್ನು ಜಂಗಮರೆನ್ನಬಹುದೆ? ಮಠಾಧಿಕಾರಿಗಳೆನ್ನಬಹುದೆ? ಮುಂತಾಗಿ ಬರೆಯಲಾಗಿದ್ದಿತು. ಹೀಗೆ ಕೃತಘ್ನರೆಲ್ಲರಿಗೂ ಅನ್ವಯಿಸುವ ಆ ವಾಕ್ಯಗಳನ್ನು ಈ ಅಕುಲಯ್ಯಗಳು ತಮ್ಮ ಯಾರೋ ಒಬ್ಬ!? ಆಪ್ತರಿಗೆ ಮಾತ್ರ ಅನ್ವಯಿಸಿಕೊಂಡು 'ಕಂಡದ್ದನ್ನು ಹೇಳಿದರೆ ಕೆಂಡದಂತಹ ಕೋಪ' ಎಂಬ ಗಾದೆಯನ್ನು ಸಾರ್ಥಕಪಡಿಸಿದ್ದಾರೆ. ಆ ಬಗೆಯ ಕೃತಘ್ನತನದಾಚರಣೆಯುಳ್ಳವರು ಎಲ್ಲಿಯಾದರೂ ಒಬ್ಬಿಬ್ಬರಿದ್ದರೆ ಹೆಸರು, ತಾಣಗಳನ್ನು ತಿಳಿಸಲು ಸಾಧ್ಯ. ಮತ್ತು ಹಾಗೆ ತಿಳಿಸಿದ್ದಕ್ಕೂ ಸಾರ್ಥಕವಾದೀತು! ಆದರೆ ಅಂತಹ ಕೃತಘ್ನರನ್ನು ಆರಿಸಿ ಎಣಿಸಲು ಪ್ರಾರಂಭಿಸಿದರೆ ಹಿಂಡುಗಟ್ಟಲೆಯಾಗಿ ದೊರೆಯುತ್ತಾರೆ. ಹೀಗಿರುವಾಗ ಆ ಕೃತಘ್ನತನವನ್ನು ತಮ್ಮ ಯಾರೋ ಒಬ್ಬ ಆಪ್ತರಿಗೆ ಮಾತ್ರ ಅನ್ವಯಿಸಿಕೊಂಡು ಅಲ್ಪೋಕ್ತಿಗಳನ್ನಾಡಿರುವುದು ಈ ಅಕುಲಯ್ಯಗಳ ಅಲ್ಪತನವನ್ನೇ ತೋರಿಸುತ್ತದೆ.

ಇದಾದ ಮೇಲೆ ಈ ಅಕುಲಯ್ಯಗಳು: "...... ತಾವು ಬರೆದ ಬರೆಹಗಳನ್ನು ಧೈರ್ಯವಿಲ್ಲದೆ ಆಶ್ರಯದಲ್ಲಿರುವ ಹುಡುಗರ ಹೆಸರಿ

ನಿಂದ ಪ್ರಕಟಿಸುವುದೂ ಜಂಗಮರೆಂದು ಹೇಳಿಸಿಕೊಳ್ಳುವವರ ಮತಾಧಿಕಾರಿಗಳ-ಲಕ್ಷಣವೇನು ? ಎಂಬುದಕ್ಕೆ ಉತ್ತರವನ್ನು ಕೊಡಲು ಹೊರಟು 'ತಾನೂ ಸುಳ್ಳು ಮೂರು ಲೋಕವೂ ಸುಳ್ಳು'' ಎಂದು ನಿರ್ಧರಿಸಿಕೊಂಡು ಅನೇಕ ವಕ್ರೋಕ್ತಿಗಳಿಂದ ಅದೆಲ್ಲವೂ ಸುಳ್ಳು ಎಂದು ಸಾಧಿಸಲು ಹೆಣಗಿದ್ದಾರೆ. ಆದರೆ ಪಾಪ! ನೀವು ಇಂಥ ತಪ್ಪು ಮಾಡಿದ್ದೀರಿ ಎಂದು ತೋರಿಸಿದ ಬಳಿಕವೂ ಪುನಃ ಆ ಹೆಸರನ್ನೂ ಬಿಟ್ಟು ಮತ್ತೊಬ್ಬರ ಹೆಸರಿನಿಂದ ಪ್ರಕಟಿಸುವ ಮೋಸಗಾರರೂ ಸಹ ಇರುವರೆಂಬುವನ್ನರಿಯದೆ ತಮ್ಮ ಕೈಯೊಳಗಿನ ಹಗ್ಗವನ್ನು ತಮ್ಮ ಕಾಲಿಗೆ ತಾವೇ ಬೀರಿಕೊಂಡು ಮುಗ್ಗರಿಸಿ ಬಿದ್ದು ಬಿಟ್ಟಿದ್ದಾರೆ! ಹೇಗೆಂದರೆ ಈ ಅಕುಲಯ್ಯಗಳು ಎಲ್ಲವನ್ನೂ ಸುಳ್ಳೆಂದು ಹೇಳುವುದಾದರೆ ಇವರೇ ಬರೆದಿರುವ ' ಮೇಲಾಗಿ ಲೇಖಕರಿಗೂ ಇದಕ್ಕೂ ಯಾವ ಸಂಬಂಧವೂ ಇಲ್ಲವೆಂದು ಕೇಳುತ್ತೇನೆ...... ನಿಮಗೆ ಅನರ್ಥವಿದೆಯೋ ಹೊರ್ತು ನೀವು ಯಾರನ್ನು ಗುರಿಯಿಟ್ಟು ಬರೆದಿರುವಿರೋ ಅವರಿಗೇನೂ ಬಾಧಕವಿಲ್ಲ. ಅವರು ಆ ರೀತಿ ಮಾಡುತ್ತಿದ್ದರಲ್ಲವೇ ಬಾಧಕವಾಗುವುದು? " ಮುಂತಾದ ವಾಕ್ಯಗಳಿಗೆ ಅರ್ಥವೇನು? ಈ ಅಕುಲಯ್ಯಗಳ ಸಂಬಂಧಿಗಳೋ ಆಪ್ತರೋ ಒಬ್ಬರು ಆ ಬಗೆಯ ಕೃತಘ್ನತನದಾಚರಣೆಯನ್ನಿಟ್ಟುಕೊಂಡಿರುವುದರಿಂದಲೇ ಎಲ್ಲವನ್ನೂ ಅವರಿಗೆ ಅನ್ವಯಿಸಿಕೊಂಡು ತಮ್ಮವರ ಕೃತಘ್ನತನವನ್ನು ಮುಚ್ಚಿಕೊಳ್ಳಲು ಇವರು ವಕೀಲಿಯನ್ನು ವಹಿಸಿಕೊಂಡು ಮುಂದೆ ಬಂದಿರುವರೆಂಬುದು ನಿರ್ವಿವಾದವಲ್ಲವೇ?

ಹೀಗೇ ಬರೆಯುತ್ತಾ ಹೋದರೆ ಈ ಲೇಖನವು ಬೆಳೆದು ಹೋಗುತ್ತದೆಯಾದುದರಿಂದ ಇಷ್ಟಕ್ಕೇ ಸಿಲ್ಲಿಸಿ ಶ್ರೀ ಗುರುಮೂರ್ತಿಗಳಾಗಲಿ ಅಕುಲಯ್ಯಗಳಾಗಲಿ ಯಾರೇ ಆಗಲಿ ತಮ್ಮ ಹೃದಯಕ್ಕೆ ಸತ್ಯವೆಂದು ಕಂಡುಬಂದುದನ್ನು—ದುರಭಿಮಾನವನ್ನು ತ್ಯಜಿಸಿ—ಪರಿಗ್ರಹಿಸಿ ಒಪ್ಪಿಕೊಳ್ಳುವ ಮನೋಭಾವನೆಯನ್ನುಂಟುಮಾಡಿಕೊಳ್ಳಬೇಕೇ ಹೊರ್ತು ವೃಥಾ ದುರ್ವಾದವನ್ನು ಹೂಡಬಾರದೆಂದು ಸೂಚಿಸಿ ವಿರಮಿಸಬೇಕಾಗಿದೆ.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ ೯.]

---

## ಬಸವನ ಗುರುವು ಯಾರು ?

ನಾವು ಈಗಿನ ಲೇಖದಲ್ಲಿ ಬಸವೇಶ್ವರನಿಗೆ ಗುರುಗಳಾರೆಂಬುವದನ್ನು ಕುರಿತು ವಿವೇಚಿಸಲಣಿಸಿದ್ದೇವೆ. ಬಸವೇಶ್ವರನು ಜನ್ಮತಃ ಬ್ರಾಹ್ಮಣನೆಂಬುದು ಎಲ್ಲರಿಗೂ ಒಪ್ಪಿಗೆಯಾದ ಸಂಗತಿಯಾಗಿರುತ್ತದೆ. ಆದ್ದರಿಂದ ಅವನು ವೀರಶೈವ ಧರ್ಮವನ್ನು ಹೊಂದುವ ಪೂರ್ವದಲ್ಲಿ ಯಾರಾದರೊಬ್ಬರಿಂದ ಅವನು ಲಿಂಗಧಾರಣವನ್ನು ಹೊಂದಿರಲಿಕ್ಕೆಬೇಕು ಮತ್ತು ಅವರೊಬ್ಬ ಮಹತ್ವಿಕರಿರಬೇಕೆಂಬ ತಿಳುವಳಿಕೆಯು ಸ್ವಾಭಾವಿಕವಾಗಿ ಜನರಲ್ಲಿ ಉಂಟಾಗಿರುತ್ತದೆ. ಆದರೆ ಈ ವಿಷಯವನ್ನು ಕುರಿತು ವೀರಶೈವ ಗ್ರಂಥಕಾರರಲ್ಲಿ ಒಮ್ಮತವಿರುವದಿಲ್ಲ. ಆದುದರಿಂದ ಅವರ ವಿಧಾನಗಳಲ್ಲಿ ಆವುದು ಹೆಚ್ಚಿಗೆ ಸಂಭವನೀಯವೆಂಬುದನ್ನು ಗೊತ್ತು ಪಡಿಸುವದು ಈಗಿನ ನಮ್ಮ ವಿಷಯವಾಗಿರುತ್ತದೆ.

ಹದಿನಾಲ್ಕನೆಯ ಶತಮಾನದ ಮಧ್ಯಭಾಗದಲ್ಲಿ ಭೀಮಕವಿಯಿಂದ ರಚಿತವಾದ ಬಸವಪುರಾಣದಲ್ಲಿ ಸಂಗಮೇಶ್ವರನು ಸ್ವತಃ ಜಂಗಮ ಮೂರ್ತಿಯಾಗಿ ಬಂದು, ಬಸವೇಶ್ವರನು ಜನಿಸಿದಾಗ ಅವನಿಗೆ ಲಿಂಗ ಧಾರಣ ಮಾಡಿದನೆಂದು ಹೇಳಲ್ಪಟ್ಟಿದೆ. ಆದರೆ ಸಿಂಗಿರಾಜ ಪುರಾಣದಲ್ಲಿ ಬೇರೊಂದು ಕಥಾನಕವಿರುತ್ತದೆ. ಬಸವೇಶ್ವರನು ಜನಿಸಿದಾಗ ಬಾಲ ಚೇಷ್ಟೆಗಳಿಲ್ಲದೆ ಸ್ತಬ್ಧನಾಗಿರಲು, ಜಾತವೇದ ಮುನಿಗಳೆಂಬುವರು ಆಗ ಬಾಗೇವಾಡಿಯಲ್ಲಿದ್ದು, ಈ ಸಂಗತಿಯನ್ನು ಅವರು ತಿಳಿದು ಮಗುವಿದ್ದೆಡೆಗೆ ಬಂದು ಭಸ್ಮವನ್ನು ತಳಿದು ಲಿಂಗಧಾರಣ ಮಾಡಿದರೆಂದು ಅದರಲ್ಲಿ ಹೇಳಿದೆ. ಇಲ್ಲಿ ಸಂಗಮೇಶ್ವರನು ಬಂದು ಲಿಂಗಧಾರಣ ಮಾಡಿದ ಸಂಗತಿಯು ಇರುವದಿಲ್ಲ. ಹರಿಹರ ಕವಿಯು ಬರೆದ ಬಸವರಾಜದೇವರ ರಗಳೆಯಲ್ಲಿ ತೀರ ಬೇರೊಂದು ವೃತ್ತಾಂತವಿರುತ್ತದೆ. ಬಸ

ವನು ಬ್ರಾಹ್ಮಣ ಮನೆತನದಲ್ಲಿ ಹುಟ್ಟಿ ಬ್ರಾಹ್ಮಣ ಪದ್ಧತಿಯಂತೆ ಬೆಳೆದು ಯಜ್ಞೋಪವೀತ ಸಂಸ್ಕಾರವನ್ನು ಸಹ ಹೊಂದಿದನು. ಆದರೆ ಮುಂದೆ ಅವನಲ್ಲಿ ಶಿವ ಭಕ್ತಿಯುಂಟಾಗಲು ಆ ಯಜ್ಞೋಪವೀತವನ್ನು ತ್ಯಜಿಸಿ ಕಪ್ಪಡಿಯ ಸಂಗಮನಾಥನಲ್ಲಿಗೆ ಬಂದು ಶಿವಭಜನೆಯಲ್ಲಿ ಕಾಲ ಕಳೆಯುತ್ತಿರಲು ಆಗ ಒಂದಾನೊಂದು ದಿವಸ ದೇವಾಲಯದಲ್ಲಿಯ ನಂದಿಯ ವಿಗ್ರಹದ ಮುಖದಿಂದ ಒಂದು ಲಿಂಗವು ಹೊರ ಹೊರಡಲು ಅದನ್ನೇ ಬಸವನು ತನ್ನ ಇಷ್ಟಲಿಂಗವಾಗಿ ಧಾರಣ ಮಾಡಿದನೆಂದು ಈ ಗ್ರಂಥದಲ್ಲಿ ಹೇಳಲ್ಪಟ್ಟಿರುತ್ತದೆ. ಈ ಕಾಲದಲ್ಲಿ ಸಂಗಮ ದೇವಾಲಯದಲ್ಲಿ ಈಶಾನ್ಯ ಗುರುಗಳೆಂಬವರು ಸ್ಥಾನಪತಿಗಳಾಗಿ ಕಾರ್ಯ ಮಾಡುತ್ತಿದ್ದರೆಂದು ಅದರಲ್ಲಿ ಹೇಳಿದೆ. ಆದರೆ ಇವರು ವೀರಶೈವರೋ ಹೇಗೆಂಬುದು ಈ ಕಾವ್ಯದಿಂದ ಏನೂ ತಿಳಿದುಬರುವದಿಲ್ಲ. ಆದರೆ ಇವರಿಂದ ಬಸವನಿಗೆ ಲಿಂಗಧಾರಣವಾಗಲಿಲ್ಲೆಂಬದು ಮೇಲಿನ ಕಥಾನಕದಿಂದ ಗೊತ್ತಾಗುತ್ತದೆ. ಮೇಲಿನ ಯಾವತ್ತೂ ಗ್ರಂಥಕಾರರು ವೀರಶೈವ ವಾಙ್ಮಯದಲ್ಲಿ ಬಹು ಹೆಸರಾದವರು. ಇಂಥವರಲ್ಲಿ ಈ ಮಹತ್ವದ ವಿಷಯವಾಗಿ ಐಕಮತ್ಯವಿಲ್ಲ. ಬಸವೇಶ್ವರನ ತರುವಾಯ ನೂರಿನ್ನೂರು ವರ್ಷಗಳಾದ ಬಳಿಕ ಈ ಕವಿಗಳೆಲ್ಲರೂ ಜೀವಿಸಿದ್ದರು. ಆದ್ದರಿದ ಅವರಲ್ಲಿ ಇಷ್ಟು ಮತಾಂತರಗಳು ಉತ್ಪನ್ನವಾಗಿವೆಂಬುದು ಸ್ಪಷ್ಟವದೆ. ಇವುಗಳಲ್ಲಿ ಅವುದು ಸತ್ಯವಾದುದೆಂಬುದನ್ನು ನಾವು ನಿರ್ಧರಿಸುವದು ಬಹು ಕಷ್ಟಕರವಾದ ಕಾರ್ಯವು. ಆದರೆ ಅವುಗಳಲ್ಲಿ ಯಾವುದು ಹೆಚ್ಚಿಗೆ ಸಂಭವನೀಯವೆಂಬುದನ್ನು ನಾವು ಗೊತ್ತುಪಡಿಸುವದಿಷ್ಟೇ ಈಗಿನ ನಮ್ಮ ಕಾರ್ಯವಾಗಿರುತ್ತದೆ.

ಬಸವೇಶ್ವರನು ಜನಿಸಿದಾಗಳೇ ಸಂಗಮೇಶ್ವರನು ಬಾಗೇವಾಡಿಗೆ ಆಗಮಿಸಿ ಅವನಿಗೆ ಲಿಂಗಧಾರಣ ಮಾಡಿದನೆಂಬ ವಿಷಯವನ್ನೇ ಈಗ ಬಹು ಜನರು ಅಂಗೀಕರಿಸಿರುತ್ತಾರೆ ಆದರೆ ನಾವು ಶಿವಾನುಭವ ಸಂಪುಟ ೧೬ ಸಂಚಿಕೆ ೩ ಇದರಲ್ಲಿ "ಬಸವನಿಗೆ ಯಜ್ಞೋಪವೀತ ಧಾರಣವಾಗಿತ್ತೇ ಹೇಗೆ?" ಎಂಬ ಶಿರೋಲೇಖದ ಕೆಳಗೆ ಈ ವಿಷಯವನ್ನು ಕುರಿತು ವಿಸ್ತೃತವಾಗಿ ವಿವೇಚಿಸಿದ್ದೇವೆ. ಅದರಲ್ಲಿ ನಾವು ಹರಿಹರನ ವೃತ್ತಾಂತವು ಹೆಚ್ಚಿಗೆ ಗ್ರಾಹ್ಯವಾದುದೆಂಬ ಅಭಿಪ್ರಾಯ ಪಟ್ಟು ಬಸವನಿಗೆ ಬ್ರಾಹ್ಮಣ ಸಂಸ್ಕಾರಗಳು ಉಂಟಾಗಿ ಯಜ್ಞೋಪವೀತ ಧಾರಣವಾಗಿತ್ತೆಂದು ಸಿದ್ಧ ಪಡಿಸಿದ್ದೇವೆ. ಮಹಾಪುರುಷರು ಜನನವಾದ ಕಾಲ

ದಲ್ಲಿ ಅಲೌಕಿಕ ಸಂಗತಿಗಳು ಘಟಿಸಿದವೆಂಬುದನ್ನು ನಂಬಿ ಜನರು ಅನೇಕ ದಂತಕಥೆಗಳನ್ನು ಹುಟ್ಟಿಸುವದುಂಟು. ಆದ್ದರಿಂದ ಬಸವನು ಜನಿಸಿದಾಗ ಸಂಗಮೇಶ್ವರನು ಲಿಂಗವನ್ನು ಸ್ವತಃ ಕೊಟ್ಟನೆಂಬ ಕಥೆಯು ಬಸವೇಶ್ವರನ ಮಹತ್ವವನ್ನು ಬೆಳಿಸುವದಕ್ಕೋಸ್ಕರ ಹುಟ್ಟಿಸಲ್ಪಟ್ಟಿರಬೇಕೆಂದು ನಮಗೆ ತೋರುತ್ತದೆ.

ಬಸವ ಪುರಾಣದಲ್ಲಿ ಭೀಮಕವಿಯು ಹೇಳಿದ ಮೇಲಿನ ಕಥೆಯೇ ಸಿಂಗಿರಾಜ ಪುರಾಣದಲ್ಲಿ ಬೇರೆ ರೀತಿಯಾಗಿ ಹೇಳಲ್ಪಟ್ಟಿರುತ್ತದೆ. ಆದರೆ ಸಂಗಮೇಶ್ವರನ ಹೆಸರಿನ ಬದಲು ಜಾತವೇದ ಮುನಿಯ ಹೆಸರು ಇಲ್ಲಿ ಬಂದಿದೆ. ಆದ್ದರಿಂದ ಯಾವ ಕಾರಣಗಳ ಮೂಲಕ ನಾವು ಬಸವನು ಹುಟ್ಟಿದಾಗ ಸಂಗಮೇಶ್ವರನಿಂದ ಲಿಂಗಧಾರಣವಾಗಲಿಲ್ಲವೆಂದು ಭಾವಿಸುತ್ತೇವೆಯೋ ಅವೇ ಕಾರಣಗಳು ಈ ವೃತ್ತಾಂತಕ್ಕೂ ಅನ್ವಯಿಸುತ್ತವೆ. ಆದ್ದರಿಂದ ಈ ಕಥೆಯೂ ಕೂಡ ಗ್ರಾಹ್ಯವಿರುವದಿಲ್ಲ. 'ಜಾತವೇದ' ಈ ಶಬ್ದಕ್ಕೆ 'ಅಗ್ನಿ' ಎಂಬ ಅರ್ಥ ವಿದೆ. ಈ ವಿಧದ ಹೆಸರನ್ನು ಯಾವ ಶೈವ ಪಂಗಡದವರೂ ತಮ್ಮ ಧಾರ್ಮಿಕ ಪುರುಷರಿಗೆ ಇಡುವದಿಲ್ಲ. ಆದ್ದರಿಂದ 'ಜಾತವೇದ ಮುನಿ' ಎಂಬ ಹೆಸರಿನವನು ಅಸ್ತಿತ್ವದಲ್ಲಿದ್ದು ಅವನಿಂದ ಬಸವನಿಗೆ ಲಿಂಗಧಾರಣವಾಯಿತೆಂದು ತಿಳಿಯುವದು ಸಂದೇಹಾಸ್ಪದ ವಾಗಿರುತ್ತದೆ.

ಹರಿಹರ ಮಹಾಕವಿಯು ಬಸವನು ಕೂಡಲ ಸಂಗಮ ದೇವಾಲಯದಲ್ಲಿದ್ದಾಗ್ಗೆ ನಂದಿಯೇ ಸಾಕ್ಷಾತ್ತಾಗಿ ಒಂದು ಬಗೆಯಾಗಿ ಅವನಿಗೆ ಇಷ್ಟಲಿಂಗವನ್ನು ಅನುಗ್ರಹಿಸಿದನೆಂದು ಹೇಳಿದ್ದಾನೆ. ಇದೂ ಕೂಡ ಅಸಂಭವನೀಯವಿರುತ್ತದೆ. ಹರಿಹರನ ಕಾಲವು ಬಸವನಿಗೆ ಸಮೀಪವಾಗಿದ್ದರೂ ಅವನಿದ್ದಕಾಲದಲ್ಲಿ ಬಸವೇಶ್ವರನ ಬಗ್ಗೆ ಅನೇಕ ದಂತಕಥೆಗಳು ಉತ್ಪನ್ನವಾಗಿದ್ದವೆಂಬದು ಅವನು ರಚಿಸಿದ ರಗಳೆಯಿಂದ ಸ್ಪಷ್ಟವಾಗುತ್ತದೆ. ಬಸವನು ನಂದಿಯ ಅವತಾರವೆಂದು ಆಗ ಜನರಲ್ಲಿ ನಂಬಿಗೆಯು ಉತ್ಪನ್ನವಾದದರಿಂದ ಹರಿಹರನು ಹೇಳುವ ಅನೇಕ ಅಲೌಕಿಕ ಆಖ್ಯಾಯಿಕೆಗಳು ಆಗ ಉಂಟಾಗಿರುತ್ತವೆ. ಆದರೆ ಹರಿಹರನು ತನ್ನ ರಗಳೆಯಲ್ಲಿ ಹೇಳಿದ ಲಿಂಗಧಾರಣ ಪದ್ಧತಿಯು ಮಾತ್ರ ಷಟ್ಸ್ಥಲಶಾಸ್ತ್ರಕ್ಕೆ ಎಷ್ಟುಮಾತ್ರವೂ ಹೊಂದಿಕೆಯಾದುದಲ್ಲ. ಯಾಕಂದರೆ ವೀರಶೈವನು ಧಾರಣ ಮಾಡುವ ಲಿಂಗವು ಮಂತ್ರ ಮುಖ

ಯಿಂದ ಹೊರಪಡಿಸಿದ ಅವನ ಚಿತ್ಕಳೆಯೋ ಎಂದು ಅದರ ತತ್ವವಿದೆ. ಅದು ಹೊರಗಿನಿಂದ ತಂದುಕೊಟ್ಟ ವಸ್ತುವಲ್ಲ. ಅದ್ದರಿಂದ ಹರಿಹರನು ಹೇಳುವ ಲಿಂಗಧಾರಣವು ಅಂದರೆ ನಂದಿಯ ಮುಖದಿಂದ ಅದು ಹೊರಬಿದ್ದಿತೆಂಬುದು ವೀರಶೈವ ಧರ್ಮಕ್ಕೆ ಸಮ್ಮತವಾದುದಲ್ಲ. ಷಟ್ಸ್ಥಲಶಾಸ್ತ್ರವನ್ನು ಪ್ರಸಾರ ಪಡಿಸಿದ ಬಸವೇಶ್ವರನಿಗೆ ಈ ವಿಧದ ಲಿಂಗಧಾರಣವಾಯಿತೆಂದು ತಿಳಿಯಲು ಶಕ್ಯವಿರುವದಿಲ್ಲ.

ಈ ಪ್ರಕಾರ ಬಸವೇಶ್ವರನಿಗೆ ಸಂಬಂಧಿಸಿದ ಪುರಾಣಗಳಲ್ಲಿ ಹೇಳಿದ ಯಾವ ವೃತ್ತಾಂತವೂ ಕೂಡ ನಂಬಲರ್ಹವೆಂದು ನಮಗೆ ತೋರುವದಿಲ್ಲ. ಈ ಸ್ಥಿತಿಯಲ್ಲಿ ಬಸವೇಶ್ವರನು ತನ್ನ ವಚನಗಳಲ್ಲಿ ಏನು ಹೇಳಿಕೊಂಡಿದ್ದಾನೆಂಬುದನ್ನು ನಾವು ವಿವೇಚಿಸುವದೇ ಬಹು ಮಹತ್ವವಾದದ್ದು. ಅವನ ಉಕ್ತಿಗಳ ಮೇಲೆಯೇ ನಾವು ಈ ಬಗ್ಗೆ ಅವುದಾದರೂ ಒಂದು ಅನುಮಾನವನ್ನು ಸ್ಥಾಪಿಸ ಬಹುದೋ ಹೇಗೆಂಬುದನ್ನು ನಾವು ವಿಚಾರ ಮಾಡುವದು ಬಹುಮಹತ್ವದ್ದಿದೆ.

ವಚನಕಾರರಲ್ಲಿ ಅನೇಕರಿಗೆ ಗುರುಗಳಿರುವದು ನಿಶ್ಚಿತವಾಗಿರುತ್ತದೆ. ಈ ವಿಷಯವಾಗಿ ಬಸವೇಶ್ವರನ ಬಗ್ಗೆ ಹೇಗೆ ಭಿನ್ನ ಮತಗಳಿರುತ್ತವೆಯೋ ಹಾಗೆ ಅವರ ಬಗ್ಗೆ ಇರುವದಿಲ್ಲ. ಉದಾಹರಣಾರ್ಥವಾಗಿ, ಅಲ್ಲಮ ಪ್ರಭುವಿನ ಮುದ್ರಿಕೆಯು ಗುಹೇಶ್ವರನೆಂದಿದ್ದರೂ ಅವನ ಗುರುವು ಅನುಮಿಷನಾಗಿದ್ದಾನೆ. ಬಸವೇಶ್ವರನಿಗೆ ಸಮಕಾಲೀನನಾದ ಮಡಿವಾಳ ಮಾಚಿದೇವನ ಅಂಕಿತವು ಕಲ್ಲಿನಾಥ ಎಂದಿದ್ದರೂ ಅವನ ಗುರುವಿನ ಹೆಸರು ಮಲ್ಲಿಕಾರ್ಜುನ ಎಂದಿದೆ. ಸಿದ್ಧರಾಮನ ಅಂಕಿತವು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದಿದ್ದರೂ ಚನ್ನ ಬಸವನಿಂದ ಅವನಿಗೆ ಲಿಂಗಧಾರಣವಾಯಿತೆಂದು ಹೇಳಲ್ಪಡುತ್ತಿದೆ. ರೇವಣಸಿದ್ಧೇಶ್ವರನ ಮಗನಾದ ರುದ್ರಮುನಿಯು ಹಾವಿನಹಾಳ ಕಲ್ಲಿದೇವನಿಗೆ ದೀಕ್ಷೆಮಾಡಿದನೆಂದು ಹೇಳಿದೆ. ಈ ರೀತಿ ಅವರವರ ವಚನಗಳಲ್ಲಿಯೂ ಉಲ್ಲೇಖಗಳು ದೊರೆಯುತ್ತವೆ. ಆದರೆ ಬಸವೇಶ್ವರನ ಬಗ್ಗೆ ಮಾತ್ರ ಅವನ ವಚನಗಳಲ್ಲಿ ಇಂಥ ಉಲ್ಲೇಖಗಳು ಎಷ್ಟು ಮಾತ್ರವೂ ದೊರೆಯುವದಿಲ್ಲ. ಅವನು ತನ್ನ ಯಾವ ವಚನದಲ್ಲಿಯೂ ಇಂಥವನೊಬ್ಬನು ಗುರುವಾಗಿ ತನಗೆ ಲಿಂಗಕೊಟ್ಟನೆಂಬುದನ್ನು ಹೇಳಿರುವದಿಲ್ಲ. ಆದರೆ ಅವನು ಕೆಲವು ವಚನಗಳಲ್ಲಿ ಶಿವಶರಣರೂ ಕೂಡಲಸಂಗಮನೂ ತನ್ನ

ಗುರುಗಳೆಂದು ಹೇಳಿದ್ದುಂಟು. ಆದರೆ ಇದು ಅವರಲ್ಲಿದ್ದ ತನ್ನ ಭಕ್ತಿ ಭಾವವನ್ನು ತೋರಿಸುವದಕ್ಕೆ ಮಾತ್ರ. ಆದ್ದರಿಂದ ಬಸವನು ಕೆಲವೊಬ್ಬ ವ್ಯಕ್ತಿಯ ಮೇಲೆ ವಿಶೇಷ ತರದ ಶ್ರದ್ಧೆಯನ್ನು ವಹಿಸಿ ಅವನೊಬ್ಬನನ್ನೇ ತನಗೆ ಗುರುವಾಗಿಟ್ಟುಕೊಂಡು ಅವನು ವರ್ಣಿಸಿದನೆಂಬುದರಲ್ಲಿ ಸತ್ಯಾಂಶವು ತೋರುವದಿಲ್ಲ. ಅವನು ಯಜ್ಞೋಪವೀತವನ್ನು ತ್ಯಜಿಸಿ ಲಿಂಗಧಾರಿ ನಾದದ್ದು ಒಬ್ಬಾನೊಬ್ಬ ವ್ಯಕ್ತಿಯ ಮೂಲಕ ಎಂದು ಅವನು ಎಲ್ಲಿಯೂ ಹೇಳಿಕೊಂಡಿಲ್ಲ. ಆದ್ದರಿಂದ ಸ್ವಾನುಭವವನ್ನು ಹೊಂದಿ ವೀರಶೈವ ಧರ್ಮ ದಲ್ಲಿ ಶ್ರದ್ಧೆಯು ಅವನಲ್ಲಿ ಉಂಟಾಗಿರಬೇಕು, ಆಗ ಹೇಗೆ ಈಗ ಸಮಾಜ ದಲ್ಲಿ ಲಿಂಗಧಾರಣೆಯ ಕಾರ್ಯಗಳು ನಡೆದಿರುತ್ತವೆಯೋ ಹಾಗೆ ಅವನು ಒಬ್ಬಾನೊಬ್ಬ ಜಂಗಮನಿಂದ ಪ್ರತ್ಯಕ್ಷ ಲಿಂಗಧಾರಣವನ್ನು ಹೊಂದಿರಬಹು ದೆಂದು ನಮಗೆ ತೋರುತ್ತದೆ. ಈ ವಿಷಯವಾಗಿ ಅಷ್ಟೊಂದು ಬಸವನು ಮಹತ್ವವನ್ನು ಕೆಲವೊಬ್ಬ ವ್ಯಕ್ತಿಗೆ ಕೊಟ್ಟಂತೆ ನಮಗೆ ತೋರುವ ದಿಲ್ಲ. ವಾಚಕರು ಈ ಕೆಳಗಿನ ವಚನಗಳನ್ನು ತಮ್ಮ ಅವಗಾಹನೆಗೆ ತಂದುಕೊಳ್ಳಬೇಕೆಂದು ನಾವು ಸೂಚಿಸುತ್ತೇವೆ. ಅದು ಯಾವದೆಂದರೆ:—

"ಒಡೆಯರು ಬಂದಡೆ ಗುಡಿ ತೋರಣವ ಕಟ್ಟಿ, ನೆಂಟರು ಬಂದರೆ ಸಮಯವಿಲ್ಲೆಂಬೆ, ಅಂದೇಕೆಬಾರರು ನೀರಿಂಗೆ ನೇಣಿಂಗೆ ಹೊರಗಾದಂದು ಸಮಯಾಚಾರಕ್ಕೆ ಒಳಗಾದಂದು? ಪರುಷ ಮುಟ್ಟಲು ಕಬ್ಬಿನ ಸುವರ್ಣವಾಯಿತ್ತು. ಬಳಿಕ ಬಂಧುಗಳುಂಟೇ ಕೂಡಲ ಸಂಗಮದೇವಾ?"

[ ಬಸವೇಶ್ವರನ ವಚನಗಳು ೪ ನೇ ಆವೃತ್ತಿ ಪುಟ ೮೪ ]

ಇದರಲ್ಲಿ 'ಸಮಯಾಚಾರಕ್ಕೆ ಒಳಗಾದಂದು' ಈ ಶಬ್ದಗಳು ಅರ್ಥ ಗರ್ಭಿತವಾಗಿರುತ್ತವೆ. ಬಸವೇಶ್ವರನ ವಚನಗಳಲ್ಲಿ ವೀರಶೈವ ಧರ್ಮವು 'ಸಮಯಾಚಾರ' ಎಂದು ಆಗಿಂದಾಗ್ಗೆ ಕರೆಯಲ್ಪಟ್ಟಿರುತ್ತದೆ. ಈ ವಿಷ ಯವಾಗಿ ಶಿವಾನುಭವ ಸಂಪುಟ ೧೩ ಸಂಚಿಕೆ ೧೧' ಇದರಲ್ಲಿ ನಾವು 'ವೀರಶೈವರ ಪೂರ್ವದ ಹೆಸರು ಅವುದು?' ಎಂಬ ಶಿರೋಲೇಖದ ಕೆಳಗೆ ಒಂದು ಸವಿಸ್ತಾರವಾದ ಲೇಖವನ್ನು ಬರೆದಿದ್ದು ಅದನ್ನು ವಾಚ ಕರು ನೋಡಬೇಕು. 'ಸಮಯಾಚಾರಕ್ಕೆ ಒಳಗಾದಂದು' ಈ ಶಬ್ದ ಗಳಿಂದ ಬಸವೇಶ್ವರನ ಕಾಲದಲ್ಲಿ ವೀರಶೈವ ಸಮಾಜಕ್ಕೆ ಒಂದು ವಿಶಿ ಷ್ಟಸ್ವರೂಪವು ಪ್ರಾಪ್ತವಾಗಿತ್ತೆಂಬ ಅನುಮಾನವು ಉಂಟಾಗುತ್ತದೆ.

ಅಂದರೆ ಆಗ ವೀರಶೈವ ಸಮಾಜಕ್ಕೆ ಒಂದು ಅಸ್ತಿತ್ವವು ಇತ್ತು, ಮತ್ತು ಅದಕ್ಕೆ ಒಂದು ಬಗೆಯ ಸಮಾಜದ ವ್ಯವಸ್ಥೆಯೂ ಇತ್ತು, ಎಂದು ನಾವು ತಿಳಿಯಬೇಕಾಗುತ್ತದೆ. ಅದರಲ್ಲಿ ಹೊಸದಾಗಿ ಸೇರುವ ಜನರೂ ಇದ್ದರು. ಅವರಂತೆಯೇ ಬಸವೇಶ್ವರನೂ ಲಿಂಗಧಾರಣವನ್ನು ಆರೋ ಒಬ್ಬರಿಂದ ಹೊಂದಿರಬೇಕೆಂಬ ಅಭಿಪ್ರಾಯವು ಮೇಲ್ಕಂಡ ವಚನದಿಂದ ವ್ಯಕ್ತವಾಗುತ್ತದೆ. ಬಸವೇಶ್ವರನು ಎಲ್ಲತರದ ಧರ್ಮ ಗ್ರಂಥಗಳನ್ನು ಮೊದಲು ಮನನ ಮಾಡಿಕೊಂಡಿರಬೇಕು. ಮುಂದೆ ವೀರಶೈವರ ಮೇಲೆ ವಿಶ್ವಾಸವು ಬಲಿಯಲು ಆದರ ಬಗ್ಗೆ ಪ್ರೀತಿಯುಳ್ಳವನಾಗಿ ಕೆಲವೊಬ್ಬರಿಂದ ಲಿಂಗಧಾರಣವನ್ನು ಹೊಂದಿ ಅದರಲ್ಲಿ ಅವನು ಸೇರಿಕೊಂಡಿರಬೇಕೆಂದು ತೋರುತ್ತದೆ.

ಬಸವೇಶ್ವರನ ವಚನಗಳಲ್ಲಿ ಗುರುಕರುಣಸ್ಥಲ, ಪಂಚಾಕ್ಷರಿಯ ಸ್ಥಲ, ಮತ್ತು ಲಿಂಗಧಾರಣಸ್ಥಲ, ಎಂಬ ಸ್ಥಲಗಳಿವೆ. ಅವುಗಳಲ್ಲಿಯ ಉಕ್ತಿಗಳನ್ನು ವಾಚಕರು ಲಕ್ಷಪೂರ್ವಕವಾಗಿ ಅವಲೋಕಿಸಬೇಕು. ಹೀಗೆ ಅವಲೋಕಿಸಿದಲ್ಲಿ ಲಿಂಗಧಾರಣದ ಉದ್ದೇಶವು ಅರ್ಥಾತ್ ಗುರುವಿನ ಕಾರ್ಯವು ಶಿಷ್ಯನಿಗೆ ಒಂದು ವಿಶಿಷ್ಟ ಹಾದಿಯನ್ನು ತೋರಿಸುವದಷ್ಟೇ ಇದ್ದು, ಆದರಂತೆ ನಡೆಯುವ ಮುಖ್ಯ ಭಾರವು ಶಿಷ್ಯನ ಸ್ವಂತ ಪ್ರಯತ್ನದ ಮೇಲೆಯೇ ಅವಲಂಬಿಸಿರುತ್ತದೆಂಬ ಭಾವವು ಅವುಗಳಲ್ಲಿರುತ್ತದೆ. ಆದ್ದರಿಂದ ವೀರಶೈವರಲ್ಲಿ ಶಿಷ್ಯನಾರು, ಗುರುವಾರು ಎಂಬ ವಿಷಯವು ಮಹತ್ವದ್ದಿರುವದಿಲ್ಲ. ಗುರುವು ಯಾರಿದ್ದರೂ ಕೂಡ ಅವನಿಂದ ಲಿಂಗಧಾರಣವನ್ನು ಹೊಂದಿದ ಬಳಿಕ ಶಿಷ್ಯನು ಅಷ್ಟಾವರಣಗಳನ್ನು ತನ್ನಲ್ಲಿ ಪ್ರಕಟಿಸಿಕೊಳ್ಳುವುದು ಅವನ ಬಹು ಮಹತ್ವದ ಕಾರ್ಯವಾಗಿರುತ್ತದೆ. ಈ ವಿಚಾರಗಳು ಮೇಲ್ಕಂಡ ಬಸವೇಶ್ವರನ ವಚನಗಳಲ್ಲಿರುವದರಿಂದ ಬಸವನು ತಾನು ಯಾರಿಂದ ಆರಂಭದಲ್ಲಿ ಲಿಂಗಧಾರಣೆಯನ್ನು ಹೊಂದಿದೆನೆಂಬುದಕ್ಕೆ ಅವನು ಅಷ್ಟೊಂದು ಮಹತ್ವ ಕೊಟ್ಟಿರಲಿಕ್ಕಿಲ್ಲೆಂದು ನಮಗೆ ತೋರುತ್ತದೆ.

ಹಿಂದೂ ಧರ್ಮದಲ್ಲಿ ಗುರುವಿಗೆ ಮಹತ್ವದ ಸ್ಥಾನವಿರುತ್ತದೆಂಬದೇನೋ ನಿಜವು. ವೀರಶೈವ ಸಮಾಜ ವ್ಯವಸ್ಥೆಯಲ್ಲಿಯೂ ಕೂಡ ಅವನೊಬ್ಬ ಮಹತ್ವದ ಅಂಗವಾಗಿ ಎಣಿಸಲ್ಪಟ್ಟಿದ್ದಾನೆ. ಅವನು ಆರಂಭದಲ್ಲಿ ಲಿಂಗಧಾರಣವನ್ನು ಭಕ್ತರಿಗೆ ನೆರವೇರಿಸುತ್ತಾನೆ. ಆದರೆ ಇಷ್ಟರಿಂದಲೇ ಭಕ್ತನ ಮುಂದಿನ ಧಾರ್ಮಿಕ ಪ್ರಗತಿಯು ಉಂಟಾಗಲಾರದು.

ಷಟ್ಸ್ಥಲಶಾಸ್ತ್ರದ ಪ್ರಕಾರ ಭಕ್ತನು ಶಿವಾನುಭವಕ್ಕೋಸ್ಕರ ಸ್ವತಃ ಪ್ರಯತ್ನಿಸಬೇಕು. ಇದರಲ್ಲಿ ಅವನಿಗೆ ಸಹಾಯಕರಾದವರಿಗೆ ಶಿಕ್ಷಾಗುರು, ಜ್ಞಾನಗುರು ಎಂಬ ಹೆಸರುಗಳು ಇವೆ. ದೀಕ್ಷಾಗುರುವಿನ ಮೂಲಕ ಒಬ್ಬನು ದೀಕ್ಷೆಯನ್ನು ಹೊಂದಿ ಸಮಾಜದಲ್ಲಿ ಮೊದಲು ಸೇರ್ಪಡೆಯಾಗುವನು. ಆರೀತಿ ಬಸವೇಶ್ವರನು ಒಬ್ಬಾನೊಬ್ಬ ಗುರುವಿನಿಂದ ಈ ಕಾಲದಲ್ಲಿ ದೀಕ್ಷೆಯನ್ನು ಪಡೆದು 'ಸಮಯಾಚಾರ'ದಲ್ಲಿ ಸೇರಿಕೊಂಡಿದ್ದಾನೆ. ಈ ಗುರುವು ಆಗ ಒಬ್ಬ ಮಹತ್ವದ ವ್ಯಕ್ತಿಯಾಗಿರಲಿಕ್ಕಿಲ್ಲ. ಆದ್ದರಿಂದ ಅವನ ಹೆಸರನ್ನು ಬಸವನು ತನ್ನ ವಚನಗಳಲ್ಲಿ ಹೇಳಿಕೊಂಡಿಲ್ಲ. ಬಸವೇಶ್ವರನು ತನ್ನ ವಚನಗಳಲ್ಲಿ ದಾಸಿಮಯ್ಯ, ಕಿನ್ನರೀ ಬೊಮ್ಮಯ್ಯ, ಮಡಿವಾಳ ಮಾಚಯ್ಯ, ಮೋಳಿಗಯ್ಯ, ಕೆಂಭಾವಿ ಭೋಗಣ್ಣ ಹೀಗೆ ಅನೇಕರ ಹೆಸರುಗಳನ್ನು ಬಹು ಭಕ್ತಿಪೂರ್ವಕವಾಗಿ ಉಲ್ಲೇಖಿಸಿದ್ದಾನೆ. ಹೀಗಿದ್ದ ಬಳಿಕ ಅವನು ಯಾರಿಂದ ತಾನು ಲಿಂಗಧಾರಣವನ್ನು ಹೊಂದಿದನೋ ಅಂಥವನ ಹೆಸರನ್ನು ಏಕೆ ಹೇಳಬಾರದು? ಜಾತವೇದ ಮುನಿ ಅಥವಾ ಈಶಾನ್ಯ ಗುರು ಇವರು ತನಗೆ ಲಿಂಗಧಾರಣ ಮಾಡಿದಾರೆ, ಎಂದು ಅವರ ಹೆಸರುಗಳನ್ನು ಅವನು ತನ್ನ ವಚನಗಳಲ್ಲಿ ಯಾಕೆ ಹೇಳಲಿಲ್ಲ? ಹಾಗೆ ಹೇಳಿರುವದಿಲ್ಲಾದ್ದರಿಂದ ಅವರು ಅವನ ದೀಕ್ಷಾಗುರುಗಳಾಗಿರಲಿಕ್ಕಿಲ್ಲೆಂದು ನಮಗೆ ತೋರುತ್ತದೆ.

ವೀರಶೈವ ಧರ್ಮವು ಬಾಹ್ಯ ಆಚರಣೆಗಿಂತಲೂ ಸ್ವಾನುಭವಕ್ಕೆ ಬಹಳ ಮಹತ್ವ ಕೊಟ್ಟಿರುತ್ತದೆ. ಬಸವನು ಈ ತತ್ತ್ವಕ್ಕನುಸಾರವಾಗಿ ಎಲ್ಲರೂ ಸ್ವಾನುಭವದ ಹಾದಿಯನ್ನು ತಿಳಿಯಬೇಕೆಂದು ಶಿವಾನುಭವ ಮಂಟಪವನ್ನು ಸ್ಥಾಪಿಸಿದನು. ಇಲ್ಲಿ ಶಿವ ಶರಣರು ಆಗಿಂದಾಗ್ಗೆ ನೆರೆದು ಧಾರ್ಮಿಕ ವಿಷಯಗಳನ್ನು ಚರ್ಚಿಸುತ್ತಾ ತಮ್ಮ ನಡೆಗಳನ್ನೂ ವಿಚಾರಗಳನ್ನೂ ತಿದ್ದಿಕೊಳುತ್ತಾ ಇದ್ದರು. ಕೆಲವೊಬ್ಬನಿಗೆ ಅಕಸ್ಮಾತ್ತಾಗಿ ಒಬ್ಬಾನೊಬ್ಬ ಯೋಗ್ಯ ಗುರುವು ದೊರೆಯಲು ಅವನಿಂದ ಅವನು ತನ್ನ ಪ್ರಗತಿಯಮಾರ್ಗವನ್ನು ಕಂಡುಕೊಳ್ಳಬಹುದು. ಆದರೆ ಎಲ್ಲರಿಗೂ ಹೀಗೆ ಯೋಗ್ಯ ಗುರುಗಳು ದೊರೆಯುವದು ಶಕ್ಯವಲ್ಲ. ಈ ಕೊರತೆಯನ್ನು ದೂರಮಾಡಲು ಬಸವೇಶ್ವರನು ಶಿವಾನುಭವ ಮಂಟಪದ ವ್ಯವಸ್ಥೆಯನ್ನು ಮಾಡಿದ್ದಾನೆ. ಅಲ್ಲಿ ದೊರೆತ ಜ್ಞಾನದ ಸಹಾಯದಿಂದ ಪ್ರತಿಯೊಬ್ಬನೂ ಆತ್ಮವಿಕಾಸವನ್ನುಂಟುಮಾಡಿಕೊಳ್ಳಬಹುದು.

ಆದ್ದರಿಂದ ದೀಕ್ಷೆಯನ್ನು ಯಾರು ಮಾಡಿದರೆಂಬುದು ವೀರಶೈವರಲ್ಲಿ ಅಷ್ಟು ಮಹತ್ವದ ಪ್ರಶ್ನೆಯಲ್ಲ. ಆದರೆ ಶಿವಾನುಭವವನ್ನು ತಿಳಿದು ಆಚರಿಸುವದೇ ಬಹು ಮಹತ್ವವಾದದ್ದು.

ನಾವು ಮೇಲೆ ಉದಹರಿಸಿದ ಬಸವೇಶ್ವರನ ವಚನದಲ್ಲಿ 'ಸೀರಿಂಗೆ ನೇಣಿಂಗೆ ಹೊರಗಾದಂದು' ಸಮಯಾಚಾರಕ್ಕೆ ಒಳಗಾದಂದು' ಎಂಬ ಶಬ್ದಗಳು ಇರುತ್ತವಷ್ಟೇ. ಇದರ ಮೇಲಿಂದ ಅವನ ಕಾಲದಲ್ಲಿ ವೀರಶೈವ ಸಮಾಜವು ಅಸ್ತಿತ್ವದಲ್ಲಿತ್ತೆಂಬುದು ನಿಷ್ಪನ್ನವಾಗುತ್ತದೆಂದು ನಾವು ನಿರೂಪಿಸಿದೆವು. ಆದರೆ ಅದರ ಆಗಿನ ಸ್ವರೂಪು ಹೇಗೆ ಇತ್ತು, ಅದರ ತತ್ವಗಳು ಯಾವವು ಮುಂದೆ ವಚನಕಾರರು ಪ್ರತಿಪಾದಿಸಿದ ತತ್ವಗಳು ಆ ಕಾಲದಲ್ಲೂ ರೂಢವಾಗಿದ್ದವೋ ಹೇಗೆ ಈ ಮೊದಲಾದ ವಿಷಯಗಳನ್ನು ನಮಗೆ ನಿಶ್ಚಿತವಾಗಿ ಹೇಳಲಿಕ್ಕೆ ಬರಲಾರದು. ಯಾಕಂದರೆ ಧರ್ಮವು ಒಂದೇಯಾಗಿದ್ದರೂ ಅದರ ಸ್ವರೂಪು ಕಾಲಕಾಲಕ್ಕೆ ಬದಲಾವಣೆ ಹೊಂದುತ್ತ ಹೋಗುತ್ತದೆ. ಹೀಗೆ ಅದು ಬದಲಾವಣೆ ಹೊಂದಿದರೂ ಕೂಡ ಜನರು ಅದಕ್ಕೆ ಹೊಸ ಹೆಸರನ್ನು ಇಡದೆ ಮೊದಲಿನ ಹೆಸರಿನಿಂದಲೇ ಅದನ್ನು ಕರೆಯುತ್ತಾರೆ. ಈ ದೃಷ್ಟಿಯಿಂದ ವಿಚಾರಮಾಡಿ ನೋಡಿದಲ್ಲಿ ಬಸವನಕಿಂತ ಮೊದಲು ವೀರಶೈವ ಧರ್ಮವಿತ್ತೆಂದು ತೋರುತ್ತದೆ. ಬಸವೇಶ್ವರನು ತನ್ನ ವಚನಗಳಲ್ಲಿ ಜಂಗಮರು, ಶರಣರು, ಲಿಂಗವಂತರು ಎಂಬ ಹೆಸರುಗಳನ್ನು ಮೇಲಿಂದಮೇಲೆ ಬಹು ಭಕ್ತಿ ಪೂರ್ವಕವಾಗಿ ಉಲ್ಲೇಖಿಸುತ್ತಾನೆ. ಆದ್ದರಿಂದ ಬಸವನು ಲಿಂಗಧಾರಣವನ್ನು ಹೊಂದಿ ಇವರಿದ್ದ ಸಮಾಜದಲ್ಲಿಯೇ ಸೇರ್ಪಡೆಯಾದನೆಂಬುದು ಸ್ಪಷ್ಟವದೆ.

ಬಸವೇಶ್ವರನ ವಚನಗಳಲ್ಲಿ ಜಂಗಮರು, ಶರಣರು, ಲಿಂಗವಂತರು ಮೊದಲಾದ ಹೆಸರುಗಳು ಮೇಲಿಂದಮೇಲೆ ಬರುತ್ತಿದ್ದು ಇವರು ಯಾರೆಂಬುದನ್ನು ವಿವೇಚಿಸುವದು ಅವಶ್ಯವಿರುತ್ತದೆ. ಈ ಹೆಸರುಗಳಲ್ಲದೆ ಪುರಾತನರು ಅಥವಾ ಪುರಾತರು, ಗಣಗಳು, ಪ್ರಮಥರು, ಒಡೆಯರು, ಮಹಂತರು, ಎಂಬ ಶಬ್ದಗಳೂ ಕೂಡ ಬರುತ್ತವೆ. ಬಸವೇಶ್ವರನು ಭಕ್ತಿ ಭಾವವುಳ್ಳವನಾಗಿ ಇವರನ್ನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಉಲ್ಲೇಖಿಸುತ್ತಾನೆ. ಬಸವೇಶ್ವರನಕಿಂತಲೂ ಮೊದಲು ದೇವರ ದಾಸಿಮಯ್ಯ, ಶಂಕರದಾಸಿಮಯ್ಯ ಮತ್ತು ರೇವಣಸಿದ್ಧ ಇವರು ಉತ್ಪನ್ನರಾಗಿ ವೀರಶೈವ ಧರ್ಮದ ಪ್ರಚಾರಕಾರ್ಯ ಮಾಡಿದರೆಂದು ವೀರಶೈವ ಗ್ರಂಥ

ಗಳಲ್ಲಿ ಹೇಳಲ್ಪಡುತ್ತಿದೆ. ಇವರೆಲ್ಲರೂ ಐತಿಹಾಸಿಕ ಪುರುಷರು. ಇದು ಶಿವಾಲೇಖಗಳಿಂದಲೂ ಅನೇಕ ಐತಿಹಾಸಿಕ ಸಂಶೋಧನ ಲೇಖಗಳಿಂದಲೂ ತಿಳಿದು ಬಂದಿರುತ್ತದೆ. ಇವರ ಧರ್ಮ ಪ್ರಸಾರ ಕಾರ್ಯದ ಪರಿಣಾಮವಾಗಿ ದೇಶದಲ್ಲಿ ಅನೇಕರು ಅವರ ಮತಾನುವರ್ತಿಗಳಾಗಿರಬೇಕೆಂಬದರಲ್ಲಿ ಏನೂ ಸಂದೇಹವಿರಲಾರದು. ಇವರ ಕಾಲದಲ್ಲಿಯೇ ನಾವು ಮೇಲೆ ಹೇಳಿದ ಪುರಾತರು, ಗಣಗಳು, ಜಂಗಮರು ಹೆಚ್ಚುತ್ತ ಬಂದಿರಬೇಕೆಂದು ನಮಗೆ ತೋರುತ್ತದೆ.

ಪುರಾತನರು, ಆದ್ಯರು:— ಪುರಾತನರು ಮತ್ತು ಆದ್ಯರು ಈ ಎರಡೂ ಒಂದೇ ಶಬ್ದಗಳಿರಬಹುದು. ಪುರಾತನರು ತಮಿಳುದೇಶದ ೬೩ ಜನ ಪುರಾತನರೆಂಬ ಅರ್ಥವು ಸಾಮಾನ್ಯವಾಗಿ ಅದಕ್ಕಿದೆ. ಆದರೆ ಜಂಗಮರು' ಎಂಬ ಅರ್ಥದಿಂದ ಈಶಬ್ದವನ್ನು ಬಸವನು ತನ್ನ ವಚನಗಳಲ್ಲಿ ಉಲ್ಲೇಖಿಸಿದ್ದಾನೆ. ಅವನು ಒಂದು ಕಡೆಗೆ "ಬಂದಿಹರಯ್ಯಾ ಪುರಾತರೆನ್ನ ಮನೆಗೆ. ಬಂದಿಹರಯ್ಯಾ ಶರಣರೆನ್ನ ಮನೆಗೆ" ಎಂದು ಹೇಳಿದ್ದಾನೆ. (ಬಸವೇಶ್ವರ ವಚನ ೩ನೇ ಆವೃತ್ತಿ ೯೮ ಪುಟ ನಂ॥೧೦೭ ನೋಡಿರಿ) ಮತ್ತೊಂದು ವಚನದಲ್ಲಿ "ಮುನ್ನಿನ ಆದ್ಯರ ಪಥಂಗಳು ಇನ್ನಾರಿಗೆಯೂ ಅಳವಡದು ನೋಡಾ" ಎಂದು ಹೇಳಿದ್ದಾನೆ. (ಬಸವೇಶ್ವರ ವಚನ ೩ನೇ ಆವೃತ್ತಿ ೯೮ನೇ ಪುಟ ನಂ॥೧೦೭ ನೋಡಿರಿ) ರೇವಣಸಿದ್ಧೇಶ್ವರನು ತಮಿಳುದೇಶದ ಪುರಾತನರಿಗೆ ಬಹಳ ಸಂಬಂಧ ಪಟ್ಟಿದ್ದಾನೆ. ಆದ್ದರಿಂದ ಅವನ ಕಾಲದಲ್ಲಿ ಈ ಶಬ್ದಗಳು ಪ್ರಚಾರದಲ್ಲಿ ಬಂದಿರಬಹುದು.

ಗಣಂಗಳು, ಪ್ರಮಥರು:— ಈ ಶಬ್ದಗಳು ಬಸವೇಶ್ವರನ ವಚನಗಳಲ್ಲಿ ಬಹಳ ಕಡೆಗೆ ಬಂದಿರುತ್ತವೆ. ಈ ಬಗ್ಗೆ ನಾವು ಉದಾಹರಣೆಗಳನ್ನು ಕೊಡುವದು ಅವಶ್ಯದಲ್ಲ. 'ಗಣ' ಈಶಬ್ದವು ಕಾಳಾಮುಖರ ಶಿಲಾಶಾಸನಗಳಲ್ಲಿ ಉಪಲಬ್ಧವಿರುತ್ತದೆ. (ಶಿವಾನುಭವ ಸಂಪುಟ ೨ ಸಂಚಿಕೆ ೭ನೇ ಪುಟ ೬೯ನೇ ನೋಡಿರಿ) ಇದು ಬಸವೇಶ್ವರನಕಿಂತಲೂ ಮೊದಲು ದೇಶದಲ್ಲಿ ಪ್ರಚಾರದಲ್ಲಿತ್ತೆಂದು ತೋರುತ್ತದೆ. 'ಗಣ' ಮತ್ತು 'ಪ್ರಮಥ' ಇವು ಒಂದೇ ಅಭಿಪ್ರಾಯದ ಶಬ್ದಗಳಿರುತ್ತವೆ. 'ಪ್ರಮಥ' ಈ ಶಬ್ದವು ಶಿಲಾಲೇಖಗಳಲ್ಲಿದ್ದದ್ದು ನಮ್ಮ ದೃಷ್ಟಿಗೆ ಇನ್ನೂವರೆಗೂ ಬಿದ್ದಿಲ್ಲ. ಆದರೆ ಈ ಹೆಸರು ಬಸವೇಶ್ವರನಕಿಂತಲೂ ಮೊದಲು ಉಪಯೋಗದಲ್ಲಿತ್ತೆಂದು ನಮಗೆ ತೋರುತ್ತದೆ.

ಜಂಗಮರು ಮಹೇಶ್ವರರು:— ಈ ಎರಡೂ ಶಬ್ದಗಳು ಬಹು ಪುರಾತನ ಕಾಲದವು ಇವೆ. ಇವು ಬಸವೇಶ್ವರನಕಿಂತಲೂ ಹಿಂದಿನ ಕಾಲದ ಅನೇಕ ಸಂಸ್ಕೃತ ಗ್ರಂಥಗಳಲ್ಲಿಯೂ ಅಷ್ಟಾದಶ ಪುರಾಣಗಳಲ್ಲಿಯೂ ಉಪಲಬ್ಧವಿವೆ. ಈ ಹೆಸರಿನವರು ಕರ್ನಾಟದಲ್ಲಿ ಬಸವೇಶ್ವರನಕಿಂತಲೂ ಮೊದಲು ಇದ್ದಿರಬಹುದು

ಒಡೆಯರು:— ಒಡೆಯರು ಈ ಶಬ್ದವು ಬಸವೇಶ್ವರನ ವಚನಗಳಲ್ಲಿ ಕೆಲವು ಕಡೆಗೆ ಬಂದಿರುತ್ತದೆ. ಉದಾ:—"ಒಡೆಯರು ಬಂದಡೆ ಗುಡಿ ತೋರಣವಕಟ್ಟಿ" ಇತ್ಯಾದಿ.

ಶರಣರು:— ಬಸವೇಶ್ವರನು 'ಶರಣರು' ಈ ಶಬ್ದವನ್ನು ವಿಪುಲವಾಗಿ ಉಪಯೋಗಿಸುವುದುಂಟು ಬಸವೇಶ್ವರನ ವಚನ ಗ್ರಂಥದಲ್ಲಿ ಈ ಶಬ್ದವಿಲ್ಲದ ಒಂದು ಪುಟವನ್ನಾದರೂ ಕಾಣುವದು ದುರ್ಲಭವು. ಈ ಶಬ್ದವು ಶಿವಾನುಭವ ಮಂಟಪದಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುತ್ತಿದ್ದು ಮುಂದೆ ಅದು ದೇಶದಲ್ಲೆಲ್ಲ ರೂಢವಾಯಿತೆಂದು ತೋರುತ್ತದೆ. ಆದರೆ ಇದು ಬಸವನಕಿಂತಲೂ ಮೊದಲು ಒಂದು ವರ್ಗಕ್ಕೆ ಉಪಯೋಗಿಸಲ್ಪಟ್ಟಿದ್ದು ನಮಗೆ ತೋರುವದಿಲ್ಲ.

ಈ ಎಲ್ಲ ಶಬ್ದಗಳು ವೀರಶೈವ ಪರವಾಗಿರುತ್ತವೆ. ಅವುಗಳನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಉಪಯೋಗಿಸುತ್ತಾನೆ. ಅವುಗಳಲ್ಲಿ ಕೆಲವು ಪುರಾತನ ಕಾಲದವು ಇರುತ್ತವೆ. ಆದ್ದರಿಂದ ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮವು ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದಿತೆಂದು ನಾವು ತಿಳಿಯಬೇಕಾಗುತ್ತದೆ. ಆದು ದೇವರದಾಸಿಮಯ್ಯನ ಕಾಲದಿಂದ ರೇವಣಸಿದ್ಧೇಶ್ವರನ ಕಾಲದ ವರೆಗೆ ಹೆಚ್ಚಾಗುತ್ತಲೇ ಇತ್ತೆಂದು ತಿಳಿಯಲು ಏನೂ ಪ್ರತ್ಯವಾಯವಿಲ್ಲ. ಇಂಥ ವೀರಶೈವ ಧರ್ಮಕ್ಕೆ ಬಸವೇಶ್ವರನು ಮನಸೋತವನಾಗಿ ತನ್ನ ಯಜ್ಞೋಪವೀತವನ್ನು ತೆಗಿಸಿ ವೀರಶೈವ ದೀಕ್ಷೆಯನ್ನು ಪಡೆದನು.

ಅವನ ದೀಕ್ಷಾಗುರುವು ಯಾರೆಂಬುದು ತಿಳಿಯದೆ ಇದ್ದರೂ ವೀರಶೈವ ಧರ್ಮದ ವಿಷಯವಾಗಿ ಅಭಿಲಾಷೆ ಅವನಲ್ಲಿ ಯಾರಿಂದ

ಹುಟ್ಟಿತು, ಯಾರ ಮೂಲಕ ಅವನ ಮೇಲೆ ಪ್ರೇರಣೆಗಳಾದವು, ಎಂಬ ವಿಷಯದ ಬಗ್ಗೆ ಬಸವೇಶ್ವರನ ವಚನಗಳಲ್ಲಿ ವಿಪುಲವಾದ ಆಧಾರಗಳು ನಮಗೆ ದೊರೆಯುತ್ತವೆ. ಅಂಥ ಮಹಾನುಭಾವರು ಯಾರೆಂಬುದನ್ನು ಕಂಡು ಹಿಡಿಯುವದು ಬಸವೇಶ್ವರನ ದೀಕ್ಷಾ ಗುರುವು ಯಾರೆಂಬುದನ್ನು ತಿಳಿಯುವದರಕಿಂತಲೂ ಬಹು ಮಹತ್ವವಾದದ್ದು. ಬಸವೇಶ್ವರನ ವಚನಗಳನ್ನು ಈ ದೃಷ್ಟಿಯಿಂದ ಅಭ್ಯಾಸ ಮಾಡಿದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ತೋರಿಬರುತ್ತವೆ.

ಬಸವೇಶ್ವರನು ತನ್ನ ವಚನಗಳಲ್ಲಿ ೧೫ ಜನ ಶಿವಶರಣರನ್ನು ಉಲ್ಲೇಖಿಸಿದ್ದಾನೆ. ಇವರಲ್ಲಿ ಕೆಲವರು ಅವನಕಿಂತಲೂ ಮೊದಲಿನವರು ಮತ್ತು ಉಳಿದವರು ಅವನ ಸಮಕಾಲೀನರು ಇದ್ದಾರೆ. ಅವರ ಹೆಸರುಗಳನ್ನು ಅವನು ಅತ್ಯಂತ ಭಕ್ತಿ ಭಾವದಿಂದ ಉಲ್ಲೇಖಿಸಿದ್ದಾನೆ. ಆದ್ದರಿಂದ ಅವರೇ ಅವನ ಮೇಲೆ ಬಲವಾದ ಪರಿಣಾಮಗಳನ್ನು ಮಾಡಿರಬೇಕೆಂದು ತಿಳಿಯಲು ಯಾವ ಪ್ರತ್ಯವಾಯವೂ ಇರುವದಿಲ್ಲ.

ಬಸವೇಶ್ವರನು ತನ್ನಕಿಂತಲೂ ಮೊದಲು ಇದ್ದವರ ಚರಿತ್ರೆಗಳನ್ನು ಕೇಳಿರಬಹುದು. ಅಥವಾ ಓದಿರಬಹುದು. ಒಂದು ವೇಳೆ ಇವುಗಳನ್ನು ಓದಿದ್ದಾದರೆ ಅವನು ಓದಿದ ಗ್ರಂಥಗಳು ಈಗ ಉಪಲಬ್ಧವಿಲ್ಲ. ( ಬಹುಶಃ ಇಂಥ ಗ್ರಂಥಗಳು ಅಸ್ತಿತ್ವದಲ್ಲಿರಬೇಕೆಂದು ನಮ್ಮ ಊಹೆ ಇದೆ. ) ಬಸವೇಶ್ವರನು ಮಾದರ ಚೆನ್ನನನ್ನು ತನ್ನ ವಚನಗಳಲ್ಲಿ ೨೭ ಸಾರೆ ಉಲ್ಲೇಖಿಸಿದ್ದಾನೆ. ಈ ಶಿವಶರಣನು ಕಾಂಚೀಪಟ್ಟಣದಲ್ಲಿ ಆಳಿದ ಕರಿಕಾಲ ಚೋಳನ ಕಾಲದಲ್ಲಿದ್ದನು ಇವನು ಬಸವೇಶ್ವರನಕಿಂತಲೂ ಸುಮಾರು ೧೦೦ ವರ್ಷ ಮೊದಲು ಇದ್ದನು. ದೇವರ ದಾಸಿಮಯ್ಯನನ್ನು ಬಸವೇಶ್ವರನು ೧೩ ಸಾರೆ ಉಲ್ಲೇಖಿಸಿದ್ದಾನೆ. ಇವನು ಚೆನ್ನಯ್ಯನಕಿಂತಲೂ ಹಿಂದಿನವನು. ೧೧ ನೇ ಶತಮಾನದ ಮಧ್ಯಕಾಲದಲ್ಲಿ ಆಳಿದ ಚಾಲುಕ್ಯ ಜಿಯಸಿಂಹನ ಕಾಲದಲ್ಲಿದ್ದವನು. ಸಾಮವೇದಿಶ್ವಪಚಯ್ಯಗಳು ನಾಲ್ಕು ಸಾರೆ, ಸಿಂಧು ಬಲ್ಲಾಳನು ೭ ಸಾರೆ, ನಿಂಬಿಯುವ್ವೆಯು ಒಂದು ಸಾರೆ, ತೆಲುಗು ಜೊಮ್ಮಯ್ಯನು ಎರಡು ಸಾರೆ, ಕೆಂಭಾವಿ ಭೋಗಣ್ಣನು ಒಂದು ಸಾರೆ, ಉಲ್ಲೇಖಿಸಲ್ಪಟ್ಟಿದ್ದಾರೆ. ಇವರೆಲ್ಲರೂ ಬಸವನಕಿಂತಲೂ ಹಿಂದಿನವರು. ಅವರ ವಿಚಾರಗಳಲ್ಲಿಯೂ ಬಸವನ ವಿಚಾರಗಳಲ್ಲಿಯೂ ಸಾಮ್ಯತೆಯು ಇದೆ. ಈ ಪುಂಾ

ಜಂಗಮರು ಮಹೇಶ್ವರರು:— ಈ ಎರಡೂ ಶಬ್ದಗಳು ಬಹು ಪುರಾತನ ಕಾಲದವು ಇವೆ. ಇವು ಬಸವೇಶ್ವರನಕಿಂತಲೂ ಹಿಂದಿನ ಕಾಲದ ಅನೇಕ ಸಂಸ್ಕೃತ ಗ್ರಂಥಗಳಲ್ಲಿಯೂ ಅಷ್ಟಾದಶ ಪುರಾಣಗಳ ಲ್ಲಿಯೂ ಉಪಲಬ್ಧವಿವೆ. ಈ ಹೆಸರಿನವರು ಕರ್ನಾಟದಲ್ಲಿ ಬಸವೇಶ್ವ ರನಕಿಂತಲೂ ಮೊದಲು ಇದ್ದಿರಬಹುದು

ಒಡೆಯರು:— ಒಡೆಯರು ಈ ಶಬ್ದವು ಬಸವೇಶ್ವರನ ವಚನಗ ಳಲ್ಲಿ ಕೆಲವು ಕಡೆಗೆ ಬಂದಿರುತ್ತದೆ. ಉದಾ:—"ಒಡೆಯರು ಬಂದಡೆ ಗುಡಿ ತೋರಣವಕಟ್ಟಿ" ಇತ್ಯಾದಿ.

ಶರಣರು:— ಬಸವೇಶ್ವರನು 'ಶರಣರು' ಈ ಶಬ್ದವನ್ನು ವಿಪುಲ ವಾಗಿ ಉಪಯೋಗಿಸುವುದುಂಟು ಬಸವೇಶ್ವರನ ವಚನ ಗ್ರಂಥದಲ್ಲಿ ಈ ಶಬ್ದವಿಲ್ಲದ ಒಂದು ಪುಟವನ್ನಾದರೂ ಕಾಣುವದು ದುರ್ಲಭವು. ಈ ಶಬ್ದವು ಶಿವಾನುಭವ ಮಂಟಪದಲ್ಲಿ ವಿಶೇಷವಾಗಿ ಉಪಯೋಗಿಸಲ್ಪ ಡುತ್ತಿದ್ದು ಮುಂದೆ ಅದು ದೇಶದಲ್ಲೆಲ್ಲ ರೂಢವಾಯಿತೆಂದು ತೋರು ತ್ತದೆ. ಆದರೆ ಇದು ಬಸವನಕಿಂತಲೂ ಮೊದಲು ಒಂದು ವರ್ಗಕ್ಕೆ ಉಪಯೋಗಿಸಲ್ಪಟ್ಟಿದ್ದು ನಮಗೆ ತೋರುವದಿಲ್ಲ.

ಈ ಎಲ್ಲ ಶಬ್ದಗಳು ವೀರಶೈವ ಪರವಾಗಿರುತ್ತವೆ. ಅವುಗಳನ್ನು ಬಸ ವೇಶ್ವರನು ತನ್ನ ವಚನಗಳಲ್ಲಿ ಆಗಿಂದಾಗ್ಗೆ ಉಪಯೋಗಿಸುತ್ತಾನೆ. ಅವುಗಳಲ್ಲಿ ಕೆಲವು ಪುರಾತನ ಕಾಲದವು ಇರುತ್ತವೆ. ಆದ್ದರಿಂದ ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮವು ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದಿತೆಂದು ನಾವು ತಿಳಿಯಬೇಕಾಗುತ್ತದೆ. ಅದು ದೇವ ದಾಸಿಮಯ್ಯನ ಕಾಲದಿಂದ ರೇವಣಸಿದ್ಧೇಶ್ವರನ ಕಾಲದ ವರೆಗೆ ಹೆಚ್ಚಾ ಗುತ್ತಲೇ ಇತ್ತೆಂದು ತಿಳಿಯಲು ಏನೂ ಪ್ರತ್ಯವಾಯವಿಲ್ಲ. ಇಂಥ ವೀರ ಶೈವ ಧರ್ಮಕ್ಕೆ ಬಸವೇಶ್ವರನು ಮನಸೋತವನಾಗಿ ತನ್ನ ಯಜ್ಞೋ ಪವೀತವನ್ನು ತೆಗಿಸಿ ವೀರಶೈವ ದೀಕ್ಷೆಯನ್ನು ಪಡೆದನು.

ಅವನ ದೀಕ್ಷಾ ಗುರುವು ಯಾರೆಂಬುದು ತಿಳಿಯದೆ ಇದ್ದರೂ ವೀರಶೈವ ಧರ್ಮದ ವಿಷಯವಾಗಿ ಅಭಿಲಾಷೆ ಅವನಲ್ಲಿ ಯಾರಿಂದ

ಹುಟ್ಟಿತು, ಯಾರ ಮೂಲಕ ಅವನ ಮೇಲೆ ಪ್ರೇರಣೆಗಳಾದವು, ಎಂಬ ವಿಷಯದ ಬಗ್ಗೆ ಬಸವೇಶ್ವರನ ವಚನಗಳಲ್ಲಿ ವಿಪುಲವಾದ ಆಧಾರಗಳು ನಮಗೆ ದೊರೆಯುತ್ತವೆ. ಅಂಥ ಮಹಾನುಭಾವರು ಯಾರೆಂಬುದನ್ನು ಕಂಡು ಹಿಡಿಯುವದು ಬಸವೇಶ್ವರನ ದೀಕ್ಷಾ ಗುರುವು ಯಾರೆಂಬುದನ್ನು ತಿಳಿಯುವದರಕಿಂತಲೂ ಬಹು ಮಹತ್ವವಾದದ್ದು. ಬಸವೇಶ್ವರನ ವಚನಗಳನ್ನು ಈ ದೃಷ್ಟಿಯಿಂದ ಅಭ್ಯಾಸ ಮಾಡಿದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ತೋರಿಬರುತ್ತವೆ.

ಬಸವೇಶ್ವರನು ತನ್ನ ವಚನಗಳಲ್ಲಿ ೧೫ ಜನ ಶಿವಶರಣರನ್ನು ಉಲ್ಲೇಖಿಸಿದ್ದಾನೆ. ಇವರಲ್ಲಿ ಕೆಲವರು ಅವನಕಿಂತಲೂ ಮೊದಲಿನವರು ಮತ್ತು ಉಳಿದವರು ಅವನ ಸಮಕಾಲೀನರು ಇದ್ದಾರೆ. ಅವರ ಹೆಸರುಗಳನ್ನು ಅವನು ಅತ್ಯಂತ ಭಕ್ತಿ ಭಾವದಿಂದ ಉಲ್ಲೇಖಿಸಿದ್ದಾನೆ. ಆದ್ದರಿಂದ ಅವರೇ ಅವನ ಮೇಲೆ ಬಲವಾದ ಪರಿಣಾಮಗಳನ್ನು ಮಾಡಿರಬೇಕೆಂದು ತಿಳಿಯಲು ಯಾವ ಪ್ರತ್ಯವಾಯವೂ ಇರುವದಿಲ್ಲ.

ಬಸವೇಶ್ವರನು ತನ್ನಕಿಂತಲೂ ಮೊದಲು ಇದ್ದವರ ಚರಿತ್ರೆಗಳನ್ನು ಕೇಳಿರಬಹುದು. ಅಥವಾ ಓದಿರಬಹುದು. ಒಂದು ವೇಳೆ ಇವುಗಳನ್ನು ಓದಿದ್ದಾದರೆ ಅವನು ಓದಿದ ಗ್ರಂಥಗಳು ಈಗ ಉಪಲಬ್ಧವಿಲ್ಲ. ( ಬಹುಶಃ ಇಂಥ ಗ್ರಂಥಗಳು ಅಸ್ತಿತ್ವದಲ್ಲಿರಬೇಕೆಂದು ನಮ್ಮ ಊಹೆ ಇದೆ. ) ಬಸವೇಶ್ವರನು ಮಾದರ ಚೆನ್ನನನ್ನು ತನ್ನ ವಚನಗಳಲ್ಲಿ ೨೭ ಸಾರೆ ಉಲ್ಲೇಖಿಸಿದ್ದಾನೆ. ಈ ಶಿವಶರಣನು ಕಾಂಚೀಪಟ್ಟಣದಲ್ಲಿ ಆಳಿದ ಕರಿಕಾಲ ಚೋಳನ ಕಾಲದಲ್ಲಿದ್ದನು ಇವನು ಬಸವೇಶ್ವರನಕಿಂತಲೂ ಸುಮಾರು ೧೦೦ ವರ್ಷ ಮೊದಲು ಇದ್ದನು. ದೇವರ ದಾಸಿಮಯ್ಯನನ್ನು ಬಸವೇಶ್ವರನು ೧೬ ಸಾರೆ ಉಲ್ಲೇಖಿಸಿದ್ದಾನೆ. ಇವನು ಚೆನ್ನಯ್ಯನಕಿಂತಲೂ ಹಿಂದಿನವನು. ೧೧ ನೇ ಶತಮಾನದ ಮಧ್ಯಕಾಲದಲ್ಲಿ ಆಳಿದ ಚಾಲುಕ್ಯ ಜಯಸಿಂಹನ ಕಾಲದಲ್ಲಿದ್ದವನು. ಸಾಮವೇದಿಶ್ವಪಚಯ್ಯಗಳು ನಾಲ್ಕು ಸಾರೆ, ಸಿಂಧು ಬಲ್ಲಾಳನು ೬ ಸಾರೆ, ನಿಂಬಿಯವ್ವೆಯು ಒಂದು ಸಾರೆ, ತೆಲುಗು ಜೊಮ್ಮಯ್ಯನು ಎರಡು ಸಾರೆ, ಕೆಂಭಾವಿ ಭೋಗಣ್ಣನು ಒಂದು ಸಾರೆ, ಉಲ್ಲೇಖಿಸಲ್ಪಟ್ಟಿದ್ದಾರೆ. ಇವರೆಲ್ಲರೂ ಬಸವನಕಿಂತಲೂ ಹಿಂದಿನವರು. ಅವರ ವಿಚಾರಗಳಲ್ಲಿಯೂ ಬಸವನ ವಿಚಾರಗಳಲ್ಲಿಯೂ ಸಾಮ್ಯತೆಯು ಇದೆ. ಈ ಪುರಾ

ತನ ಶಿವಶರಣರ ಚರಿತ್ರೆಗಳಿಂದ ಅವರು ಜಾತಿಭೇದವನ್ನು ದೂರವಾ ಡಿದರೆಂತಲೂ ಒಬ್ಬನೇ ದೇವರಿದ್ದಾನೆಂತಲೂ ಕರ್ಮಠ ಮಾರ್ಗವನ್ನು ತೋರಿಸಿದರೆಂತಲೂ ತೋರಿಬರುತ್ತದೆ. ಬಸವೇಶ್ವರನ ವಿಚಾರಗಳಾ ದರೂ ಇವೇ ಇದ್ದು ಅವನು ಅವುಗಳನ್ನು ಈ ಹಿಂದಿನ ಶಿವಶರಣ ರಿಂದಲೇ ತೆಗೆದುಕೊಂಡನೆಂದು ಊಹಿಸಲು ಆಸ್ಪದವಿರುತ್ತದೆ.

ಬಸವೇಶ್ವರನು ಉಲ್ಲೇಖಿಸಿದ ಬೇರೆ ಶಿವಶರಣರು ಅವನ ಸಮ ಕಾಲೀನರು. ಅವರು ಬಸವೇಶ್ವರನೊಂದಿಗೆ ಇದ್ದು ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದ್ದಾರೆ. ಅವರು ತನಗೆ ಸಹಾಯಮಾಡಿದ್ದಕ್ಕೋ ಅವರ ವಿಷಯವಾಗಿ ಬಸವೇಶ್ವರನು ಅತ್ಯಂತ ಕೃತಜ್ಞತಾ ಬುದ್ಧಿಯನ್ನು ವಹಿಸಿದ್ದಾನೆ. ಇದು ಅವನ ವಚನಗಳಿಂದ ಕಂಡು ಬರತ್ತದೆ. ಅವ ರೆಲ್ಲರೂ ಬಸವನೊಡನೆ ಶಿವಾನುಭವ ಮಂಟಪದಲ್ಲಿ ಕಾರ್ಯ ಮಾಡಿ ರಲಿಕ್ಕೆಬೇಕು. ಆದ್ದರಿಂದ ಅವರ ವಿಚಾರಗಳ ಪರಿಣಾಮಗಳು ಬಸ ವೇಶ್ವರನ ಮೇಲೆ ಮತ್ತು ಬಸವೇಶ್ವರನ ವಿಚಾರಗಳು ಅವರ ಮೇಲೆ ಆಗಿರಲಿಕ್ಕೆಬೇಕು. ಈ ಪ್ರಕಾರ ಬಸವೇಶ್ವರನಿಗೆ ದೀಕ್ಷಾಗುರುವು ಯಾರು ಇದ್ದಾರೆಂಬುದು ಗೊತ್ತಾಗದಿದ್ದರೂ ಕೂಡ ಮೇಲೆ ಹೇಳಿದ ಶಿವಶರ ಣರೆಲ್ಲರು ಅವನಿಗೆ ಗುರುಸ್ಥಾನದಲ್ಲಿದ್ದುಕೊಂಡು ವರ್ತಿಸಿದ್ದಾರೆಂದು ಭಾವಿಸಲಿಕ್ಕೆ ಅಡ್ಡಿ ಇಲ್ಲ. ಹಾಗೆ ಬಸವೇಶ್ವರನು ಅವರೊಡನೆ ನಡೆದು ಕೊಂಡಿದ್ದಾನೆ. ವೀರಶೈವ ಧರ್ಮದ ಪ್ರಕಾರ ವಿಚಾರ ಮಾಡಿನೋ ಡಿದಲ್ಲಿ ಗುರು ಜಂಗಮ ಭಕ್ತ ಇವರಲ್ಲಿ ಸಾಮರಸ್ಯ ಭಾವವಿರು ತ್ತದೆ. ಧಾರ್ಮಿಕ ದೃಷ್ಟಿಯಿಂದ ಅವರೆಲ್ಲರೂ ಪರಮಾತ್ಮ ಸ್ವರೂಪ ರೆಂತಲೂ ಭಾವಿಸಿ ಆಚರಿಸತಕ್ಕದ್ದು ಅಷ್ಟಾವರಣಗಳ ರೀತಿಯಾಗಿದೆ. ಅದೇ ರೀತಿಯಾಗಿ ಬಸವ, ಅಲ್ಲಮ, ಚೆನ್ನಬಸವ, ಸಿದ್ಧರಾಮ ಇವರು ಪರಸ್ಪರವಾಗಿ ವರ್ತಿಸಿದ್ದಾರೆ. ಶಿವಾನುಭವ ಮಂಟಪವು ಬಸವನ ಕಾಲದಲ್ಲಿ ಒಂದು ಪ್ರಜಾಪ್ರಭುತ್ವದ ರಾಜ್ಯದಲ್ಲಿ ಸ್ಥಾಪಿಸಲ್ಪಟ್ಟ ಒಂದು ಮಂತ್ರಿಮಂಡಲದಂತೆ ಇದೆ. ಹೇಗೆ ಇಂಥ ಮಂತ್ರಿಮಂಡಲದಲ್ಲಿ ಉಚ್ಚನೀಚ ಭಾವವಿರದೆ ಎಲ್ಲ ಮಂತ್ರಿಗಳ ಮೇಲೆ ಸಂಯುಕ್ತ ಜವಾ ಬುದಾರಿ ಇರುತ್ತದೆಯೋ ಹಾಗೆಯೇ ಶಿವಾನುಭ ಮಂಟಪದ ವ್ಯವ ಸ್ಥೆಯು ಈ ಕಾಲದಲ್ಲಿತ್ತು. ಅಷ್ಟಾವರಣಗಳ ಯೋಜನೆಯು ಈ ವಿಚಾ ರಕ್ಕೆ ಅನುಸರಿಸಿಯೇ ಆಗಿರುತ್ತದೆ. ಆದ್ದರಿಂದ ಗುರುವಿನ ಮಹತ್ವವು ವೀರಶೈವರಲ್ಲಿ ಕೆಲವೊಂದು ಕಾರ್ಯದ ಪೂರ್ತೆ ಇರುತ್ತದೆ.ಯೇ ಹೊರ್ತು

ಅದಕ್ಕೆಯೇ ಸಂಪೂರ್ಣ ಮಹತ್ವಕೊಡಲ್ಪಟ್ಟಲ್ಲಿ ಅದೇ ರೀತಿಯಾಗಿ ಇಷ್ಟಲಿಂಗ ಮತ್ತು ಜಂಗಮ ಇವುಗಳ ವಿಚಾರಗಳಿರುತ್ತವೆ. ಶಿವಾನುಭವ ಶಬ್ದಕೋಶದಲ್ಲಿ ನಾವು ಅಷ್ಟಾವರಣಗಳ ಸಂಬಂಧವಾಗಿ ಬರೆಯುತ್ತಿರುವ ವಿವರಣೆಗಳನ್ನು ವಾಚಕರು ಲಕ್ಷಪೂರ್ವಕವಾಗಿ ಓದಬೇಕು ಅಂದರೆ ನಾವು ಈಗ ಹೇಳುತ್ತಿರುವ ಸಂಗತಿಗಳ ಕಲ್ಪನೆಯು ಅವರಿಗೆ ಬರುವದು. ಅದಕ್ಕೋಸ್ಕರವೇ ಬಸವೇಶ್ವರನು ತನ್ನ ದೀಕ್ಷಾಗುರುವಿಗೆ ಮಹತ್ವಕೊಟ್ಟಂತೆ ತೋರುವದಿಲ್ಲ. ಆದರೆ ಅವನು ಶಿವಾನುಭವ ಮಂಟಪದಲ್ಲಿ ಶಿವಾನುಭವದ ವಿಚಾರಗಳನ್ನು ಹೊರಪಡಿಸಿದವರಿಗೆ ಮಹತ್ವ ಕೊಟ್ಟಿದ್ದಾನೆ. ಆದ್ದರಿಂದ ಅವನು ಒಂದು ವಚನದಲ್ಲಿ ನಾನು ಒಬ್ಬ ಕೇವಲ ಭಕ್ತ' ಆದರೆ ಜಗತ್ತಿನಲ್ಲಿರುವ ಎಲ್ಲರೂ ತನ್ನ ಗುರುಗಳೆಂದು ಹೇಳಿಕೊಂಡಿದ್ದಾನೆ. ಆ ಪ್ರಕಾರ ಅವನು ನಡೆದು ತೋರಿಸಿದ್ದರಿಂದ ಬಸವೇಶ್ವರನು ಜನರ ಪ್ರೀತಿಯನ್ನು ಸಂಪಾದಿಸಿದನು ಮತ್ತು ಲೋಕೋದ್ಧಾರದ ಕಾರ್ಯಗಳನ್ನು ಮಾಡಲು ಶಕ್ತನಾದನು.

ಅವನು ತನ್ನ ವಚನಗಳಲ್ಲಿ ಉಲ್ಲೇಖಿಸಿದ ತನ್ನ ಸಮಕಾಲೀನರಾದ ಶಿವಶರಣರ ಹೆಸರುಗಳು ಯಾವವೆಂದರೆ:—ಮೋಳಿಗೆಯ ಮಾರಯ್ಯನನ್ನು ೧ ಸಾರೆ ಮಡಿವಾಳ ಮಾಚಯ್ಯನನ್ನು ೫ ಸಾರೆ ಡೋಹರ ಕಕ್ಕಯ್ಯನನ್ನು ೧೦ ಸಾರೆ ಚಿಕ್ಕಯ್ಯನನ್ನು ೧ ಸಾರೆ ಕಿನ್ನರೀ ಬ್ರಹ್ಮಯ್ಯನನ್ನು ೧ ಸಾರೆ ಚನ್ನಬಸವನನ್ನು ೪ ಸಾರೆ ತಂಗದೂರು ಮಾರಯ್ಯನನ್ನು ೧ ಸಾರೆ ಮತ್ತು ಅಲ್ಲಮ ಪ್ರಭುವಿನನ್ನು ೧ ಸಾರೆ ಹೀಗೆ ಉಲ್ಲೇಖಿಸಿದ್ದಾನೆ. ಬಸವೇಶ್ವರನು ಈ ಎಲ್ಲರೊಡನೆ ಇದ್ದುಕೊಂಡು ಧರ್ಮೋದ್ಧಾರ ಕಾರ್ಯ ಮಾಡಿದ್ದಾನೆ. ಆದ್ದರಿಂದ ಅವರೆಲ್ಲರೂ ಅವನ ಮನಸ್ಸಿನ ಮೇಲೆ ಬಲವಾದ ಪರಿಣಾಮಗಳನ್ನು ಮಾಡಿದರೆಂದು ಊಹಿಸಲು ಯಾವ ಪ್ರತ್ಯವಾಯವೂ ಇರುವದಿಲ್ಲ.

ಆದರೆ ಬಸವೇಶ್ವರನು ರೇವಣಸಿದ್ಧೇಶ್ವರನ ಉಲ್ಲೇಖವನ್ನು ತನ್ನ ವಚನಗಳಲ್ಲಿ ಎಲ್ಲಿಯೂ ಮಾಡಿರುವದಿಲ್ಲ ರೇವಣಸಿದ್ಧೇಶ್ವರನ ಕಾಲವು ಅವನಿಗೆ ಬಹು ಸಮೀಪವರ್ತಿಯಾದುದು ರೇವಣಸಿದ್ಧನಾದರೂ ಮಹತ್ವದ ಧಾರ್ಮಿಕ ಕಾರ್ಯಗಳನ್ನು ಮಾಡಿದವನಾಗಿದ್ದಾನೆ ಇಂಥವನ ಹೆಸರನ್ನು ಬಸವೇಶ್ವರನು ಯಾಕೆ ತೆಗೆದುಕೊಂಡಿಲ್ಲೆಂಬುದು ಅನೇಕರಿಗೆ ಬಹು ಗೂಢವಾದ ವಿಷಯವಾಗಿದೆ. ಈ ವಿಷಯವನ್ನು ನಾವು ಮುಂದಿನ ಸಂಚಿಕೆಯಲ್ಲಿ ನಿರೂಪಿಸುತ್ತೇವೆ.

# ಗುರು ಲಿಂಗ ಜಂಗಮ.

(ಲೇ:— ಬಸವಪ್ಪ ಚನ್ನಪ್ಪ ಪಟ್ಟೇದ ವಂಟ್ಮುರಿ )

ಅನೇಕ ಮಹನೀಯರು ಆಗಾಗ್ಗೆ "ಗುರು ಲಿಂಗ ಜಂಗಮ ಸೇವೆಯನ್ನು ಸರಿಯಾಗಿ ಜರಗಿಸಿ ಕೃತಾರ್ಥರಾಗುವದೇ ನಮ್ಮ (ಮಾನವ) ಜನ್ಮದ ಗುರಿ" ಎಂಬ ಉದ್ಗಾರ ಹೊರಡಿಸುತ್ತಿರುವದನ್ನು ಬಹು ಜನರು ಕೇಳಿರುವರಷ್ಟೆ? ಹೀಗೆಂದರೇನೆಂಬದನ್ನು ಅರಿತುಕೊಳ್ಳುವದೇ ಮೊದಲು ಪರಮ ಕಷ್ಟವಾಗಿದೆ. ಅರಿಯದಿದ್ದರೆ ಆಚರಿಸುವದೆಂತು? ಆದಕಾರಣ ಇದರ ಮರ್ಮವನ್ನು ಕುರಿತು ಯಥಾಮತಿ "ಸಂಕ್ಷೇಪವಾಗಿ" ವಿವರಿಸುವದೇ ಈ ಲೇಖದ ಉದ್ದೇಶವು.

ನಾವೆಲ್ಲರು ಬಹುಶಃ ಬಹಿರ್ದೃಷ್ಟಿಯುವರೇ ಎದುರು ನೋಡುವವರೇ ಹೊರತು ಅಂತರ್ದೃಷ್ಟಿಯುವರಲ್ಲ. ಪರರನ್ನು ಕುರಿತು ಆಲೋಚಿಸುವದರಲ್ಲಿ ಸದಾ ತೊಡಗಿರವನೇ ಹೊರತು, ನಮ್ಮನ್ನು ನಾವೆಂದಿಗೂ ಆಲೋಚಿಸುವ ಗೋಜಿಗೆ ಹೋಗುವದೇ ಇಲ್ಲ. ಅಂತೇ ನಮ್ಮಲ್ಲಿ ಪರನಿಂದೆಯು ಮನೆಮಾಡಿಕೊಂಡಿದೆ. ಮಂದಿಯ ಕಣ್ಣಲ್ಲಿರುವ ಅಣುವು ನಮಗೆ ಕಾಣುವದಾದರೂ ನಮ್ಮ ಕಣ್ಣಲ್ಲಿರುವ ಮಣವು ನಮಗೆ ಗೋಚರಿಸುವದೇ ಇಲ್ಲ. ದೇವರು ಶಿವನು ಎಂದು ಯಾವಾಗಲೂ ಮಾತಾಡುತ್ತೇವೆ, ಆದರೆ ಅವನ ಸ್ವರೂಪವನ್ನು ಕಂಡವರು ತೀರ ವಿರಳ! ಅವನನ್ನು ಹೊರಗೆಯೇ ಹುಡುಕಲಿಕ್ಕೆ ನಾವೆಲ್ಲರೂ ಓಡಾಡುತ್ತೇವಲ್ಲದೆ "ಮನದೊಳು ದೇವರು ಮನೆಮಾಡಿ ಕೊಂಡಿಹ" ಎಂಬ ಸರ್ಪಭೂಷಣ ಶಿವಯೋಗಿಗಳ ವಾಕ್ಯವನ್ನೇ ಮರೆತು ಬಿಡುವೆವು. ಆತನು ನಮ್ಮ ಒಳಗೂ ಹೊರಗೂ ಅಖಂಡವಾಗಿ ಎಲ್ಲೆಲ್ಲಿಯೂ ವ್ಯಾಪಕನಾಗಿರುವದು ಸತ್ಯವಾದರೂ, ಅವನನ್ನು ಕಾಣಲಿಕ್ಕೆ ಹೊರಗೇ ಜಗತ್ತನ್ನೆಲ್ಲ ಸುತ್ತುವದೇ ತಕ್ಕೆ? ಎಂಬ ವಿವೇಕವು ನಮಗೆ ಬರಲೇ ಒಲ್ಲದು! ಅವನನ್ನು ತನ್ನಲ್ಲೇ ಕಾಣುವದೆಸೆಯಿಂದ ಮಂತ್ರ ಈ ಗುರು ಲಿಂಗ ಜಂಗಮ ಸೇವೆಯನ್ನು ಪ್ರತಿಯೊಬ್ಬನು ಬಿಡದೆ ಆಚರಿಸುವದಿರುತ್ತದೆ. ಅದು ಹೇಗೆಂಬುದನು ಇನ್ನು ನೋಡುವಾ.

ಈ ಜಗತ್ತು. ಚರ (ಪ್ರಾಣಿ) ಅಚರ (ಅಪ್ರಾಣಿ) ವಸ್ತುಗಳಿಂದ ತುಂಬಿರುವದಷ್ಟೇ ಕಣ್ಣಿಗೆ ಹೊರಗೆ ಕಾಂಬುವ ಅವುಗಳ ಸ್ಥೂಲ ಶರೀರವೇ ಗುರು, ಒಳಗಿರುವ ಚೈತನ್ಯವೇ ಲಿಂಗ, ಇವೆರಡಕ್ಕೂ ಮೂಲ ಕಾರಣವಾಗಿರುವ ಅನಾದಿ ಪರಾತ್ಪರ ವಸ್ತುವೇ ಜಂಗಮ "ಸತ್ಯಜ್ಞಾನ ಮಂತಂ ಬ್ರಹ್ಮ" ಎಂಬಂತೆ ಅದು ಕೇವಲ ಜ್ಞಾನಮಯವೂ ಭಾವಗಮ್ಯವೂ ಆಮದು. ಈ ಮಾತನ್ನು ನಾವು ನೆನಪಿಟ್ಟುಕೊಂಡರೆ ಮೇಲಿನ ಮಹಾನುಭಾವರ ಉದ್ಗಾರದ ಗುಟ್ಟೇನೆಂಬುದು ತತ್‍ಕ್ಷಣವೇ ಹೊಳೆದು ಬಿಡುವದು. ಈ ಸಂಗತಿಯನ್ನು ನಮ್ಮ ವ್ಯಕ್ತಿತ್ವಕ್ಕೆ ಸಂಬಂಧಿಸಿ ನೋಡಿದರೆ, ನಮ್ಮ ದೇಹವೇ ಗುರು, ಪ್ರಾಣವೇ ಲಿಂಗ, ಇವೆರಡಕ್ಕೂ ಕಾರಣವಾದ ಪರಾತ್ಪರ ವಸ್ತುವೇ (ಜ್ಞಾನವೇ) ಜಂಗಮವೆಂಬುದು, ಒಡೆದು ಕಾಣುವದಿಲ್ಲವೇ? ಬಂಗಾರವು ಗಟ್ಟಿಯನ್ನೆಲ್ಲ ವ್ಯಾಪಿಸಿರುವಂತೆ ಅದರ ಪ್ರತಿಯೊಂದು ಅಣುವಿನಲ್ಲಾದರೂ ಉಂಟೆಂಬದನ್ನು ಯಾರು ತಾನೇ ಅರಿಯರು? ಬಂಗಾರದ ಜ್ಞಾನ ಮಾಡಿಕೊಳ್ಳಲಿಕ್ಕೆ ಗಟ್ಟಿಯೇ ಏಕೆ ಬೇಕು. ಅದರದೊಂದು ಕಣವು (ಚೂರು) ಸಾಲದೇ? ಹಾಗೆ ಶಿವನು ಜಗದ್ಭರಿತನಾಗಿದ್ದರೂ ಅವನು ತನ್ನಲ್ಲಿಯೇ ಇರುವನೆಂಬದನ್ನು ವಿವೇಕದಿಂದ ಅರಿತುಕೊಂಡು ಅವನನ್ನು ಕೂಡುವದು ತೀರ ಸುಲಭವಾದ ಮಾರ್ಗವಾಗಿರುವದು. ಇವನ್ನೇ ನಮ್ಮ ಶಿವಶರಣರು ಧಾರಳವಾಗಿ ಸಾರಿರುವರು. ಇದು ನೋಡಿರಿ ಃ—(ಶ್ರೀ ಚನ್ನಬಸವೇಶ್ವರ ವಚನ)

"ಕಾಯಗುರು, ಪ್ರಾಣಲಿಂಗ, ಜ್ಞಾನಜಂಗಮ ಕಾಯದಲ್ಲಿ ಶುದ್ಧ ಪ್ರಸಾದ, ಪ್ರಾಣದಲ್ಲಿ ಸಿದ್ಧಪ್ರಸಾದ ಜ್ಞಾನದಲ್ಲಿ ಪ್ರಸಿದ್ಧಪ್ರಸಾದ ಇಂತೀ ತ್ರಿವಿಧ ಪ್ರಸಾದ ನಿರ್ಣಯ, ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ"

ಕಾಯಗುರುಃ — ಎಲ್ಲ ಚರಾಚರ ಪದಾರ್ಥಗಳಿಗೆ ಶರೀರ ವಿರುತ್ತಿದ್ದರೂ, ಮನುಷ್ಯೇತರ ಪ್ರಾಣಿಗಳ ಹಾಗು ವಸ್ತುಗಳ ಶರೀರಗಳ ಗುರುವೆನಿಸಿಕೊಳ್ಳಲಾರವು. ಒಂದು ವೇಳೆ ಅವಕ್ಕೆ ಗುರುವೆಂದರೆ ಸ್ಥೂಲವಾದ ದೃಶ್ಯ ಆಕಾರವೆಂಬದಿಷ್ಟೇ ಅರ್ಥವು. ಆದರೆ ಮಾನವನ ದೇಹದ ಸ್ಥಿತಿ ಹಾಗಲ್ಲ. ಅದು ಜ್ಞಾನ ವಿಶಿಷ್ಟವಾಗಿರುವದರಿಂದ ನಿಜವಾಗಿಯೇ ಗುರು (ಶ್ರೇಷ್ಠ) ವೆಂಬ ಪದವಿಗೆ ತಕ್ಕದಾಗುವ ಸಾಮರ್ಥ್ಯವು ಅದರಲ್ಲುಂಟು. ಆದರೂ ನರದೇಹಿಗಳಿಂದ ನಾವೆಲ್ಲರೂ ಜನ್ಮತಃ ಸುಮ್ಮನೆ ಗುರುಗಳಾಗಲಾರೆವು. ನಮ್ಮಲ್ಲಿ ಸ್ವಾಭಾವಿಕವಾಗಿ ಬೀಜರೂಪ

ದಿಂದ ವಾಸಿಸುವ ಜ್ಞಾನವನ್ನು ಯೋಗ್ಯ ಮಾರ್ಗದಿಂದ ಬೆಳಸಿ ಆ ಜ್ಞಾನಕ್ಕೆ ದೇಹವು ಒಳಗಾಗಿ ಅನಾಚಾರಗಳನ್ನು ತೊರೆದು ಸದಾಚಾರ ಸತ್ಕೃತ್ಯಗಳನ್ನು ಯಾವಾಗಲೂ ಅನುಸರಿಸುತ್ತಲೂ ಅನ್ಯರಿಗೆ ಮಾರ್ಗ ದರ್ಶನ ಮಾಡುತ್ತಲೂ ಹೋಗಬೇಕಾಗುವದು ಹೀಗಾದರೇನೇ ಅದು ಗುರುವಾಗಲು ಪ್ರಾಪ್ತವಾಗುವದು. ವಚನಕಾರರು "ಆಚಾರವೇ ಗುರು" ವೆಂದು ಹೇಳಿದುದರ ತಾತ್ಪರ್ಯವಾದರೂ ಇದೇ. ಕಾಯವು ಆಚಾರ ದಿಂದ ಪುನೀತನಾದಾಗಲೇ ಗುರುವಿನ ಶುದ್ಧ ಪ್ರಸಾದವು ಲಭಿಸುವದು.

ಪ್ರಾಣಲಿಂಗಃ— ಪ್ರಾಣಕ್ಕೆ ಜೀವವೆಂತಲೂ ಮತ್ತೊಂದು ಹೆಸರು ಸಾರ್ವತ್ರಿಕವಾಗಿದೆ ಜೀವದಿಂದಲೇ ಪ್ರಾಣಿಗಳಿಗೆ ಚೈತನ್ಯವುಂಟಾಗು ವದು ಬೇರೆ ಹೇಳಬೇಕಾಗಿಲ್ಲ. ಆದಕಾರಣ ಚೈತನ್ಯವೇ ಲಿಂಗವೆಂ ತಲೂ ಹೇಳುವದುಂಟು. "ಲಿಂಗವು ತನ್ನಲ್ಲಿರುವ ಅರುಹಿನ ಕುರುಹು" ಎಂದು ಶ್ರೀಗುರುವು ॥ ಅದನ್ನು ॥ ಅದನ್ನು ಪೂಜಿಸಲಿಕ್ಕೆ ಕರದಲ್ಲಿ ಕೊಡು ತ್ತಾನೆ. ಆದುದರಿಂದ ಬಹಿರ್ಲಿಂಗವು ದೇಹದೊಳಗಿನ ಚೈತನ್ಯದ ಇಲ್ಲವೆ ಜ್ಞಾನದ ಚಿಹ್ನವಾಯಿತು. ಚೈತನ್ಯವು ಶಿವನ ಚಿತ್ಕಲೆಯಾಗಿ ರುತ್ತದೆ. ಅದು ಸಜ್ಞಾನ ಸ್ವರೂಪವಾದುದೆಂದು ಕೆಳಗಿನ ವಚನದಿಂದ ತಿಳಿಯುತ್ತದೆ.

> "ಅಯ್ಯಾ ನೀನು ನಿರಾಕಾರ ವಾಗಿದ್ದಲ್ಲಿ, ನಾನು ಜ್ಞಾನವೆಂಬ ವಾಹನ ವಾಗಿರ್ದೆ ಕಾಣಾ! ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯವೆಂಬ ವಾಹನ ವಾಗಿರ್ದೆ ಕಾಣಾ! ಅಯ್ಯಾ ನೀನು ಆಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ! ಅಯ್ಯಾ ನೀನೆನ್ನ ಭವವಕೊಂದಿಹೆನೆಂದು ಜಂಗಮ ಲಾಂಛನವಾಗಿ ಬಂದರೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ! ಕೂ. ಸಂ. ದೇವಾ॥

ಆದುದರಿಂದ ಪ್ರಾಣ, ಚೈತನ್ಯ, ಚಿತ್ಕಳೆ, ಅರಿವು, ಸುಜ್ಞಾನ ಇವುಗಳಲ್ಲಿ ಯಾವದಾದರೂ ಲಿಂಗವೇ ಸರಿ. ಈ ಅಂತರಾತ್ಮನೇ ದೇಹದ ಸಂಗತಿ ಯಿಂದ ಮರೆವುಳ್ಳವನಾಗಿ ದೇಹವೇ ತಾನೆಂದು ಅಹಂಕರಿಸಿ ಜೀವ ನಾಗುತ್ತಾನೆ. ಈ ಭಾವನೆಯನ್ನು ತ್ಯಜಿಸಿ ತನ್ನ ನಿಜಸ್ವರೂಪವನರಿ ತರೆ ಆತನೇ ಕೂಟಸ್ಥ ಆತ್ಮನಾಗುವನು.

ಪ್ರಾಣದ ವ್ಯವಹಾರವೆಲ್ಲ ಮನಸ್ಸಿನ ದ್ವಾರವಾಗಿ ಸಾಗುವದರಿಂದ, ಅದು ಪ್ರಾಣದ ಪ್ರತಿನಿಧಿಯುಂತಿರುವದು. ಮನವು ಪ್ರಾಣದಿಂದಲೇ ಜನಿಸಿರುವದು. ಆದಕಾರಣ "ಮನವೇ ಲಿಂಗ" ವೆಂತಲೂ ಹೇಳಿರುವರು. ಆತ್ಮನ ಜೀವಭಾವನೆ ಹೋಗಬೇಕಾದರೆ ಈ ಮನವು ಪರಿಶುದ್ಧವಾಗಬೇಕಾಗುತ್ತದೆ. ಪ್ರಾಣಲಿಂಗಕ್ಕೆ ಮನವೇ ಹಸ್ತ (ಪೀಠ ವಾಗಿರುವದು. ಆಕಾರಣ ಇದು ಪವಿತ್ರ ವಿರುವದು ಅತ್ಯಂತ ಅವಶ್ಯವು. ಹೀಗೆ ಮನವು ಶುದ್ಧವಾಗಿ ಲಿಂಗದಲ್ಲಿ ಲೀನವಾದರೆ ಮಾತ್ರ ಲಿಂಗದ ಸಿದ್ಧ ಪ್ರಸಾದ (ತಾನು ಒಳಹೊರಗ ಲಿಂಗವೇ ಆಹುದೆಂಬ ನಿಶ್ಚಯಾತ್ಮಕ ನಂಬಿಗೆ) ಪ್ರಾಪ್ತವಾಗುವದು.

ಜ್ಞಾನ ಜಂಗಮ:— ಮೇಲೆ ಜ್ಞಾನವು ಲಿಂಗವೆಂದು ಹೇಳಿರುತ್ತದೆ. ಇಲ್ಲಿ ಅದನ್ನು ಜಂಗಮವೆಂದೆನ್ನುವರು. ಇದೇ ಮೇರೆಗೆ "ಅರಿವೇ ಗುರು"ವೆಂತಲೂ ಘೋಷಿಸಿದ್ದಾರೆ. ಒಟ್ಟಿಗೆ ಹೇಳುವದೇನಂದರೆ:— ಜ್ಞಾನವೇ ಗುರು ಲಿಂಗ, ಜಂಗಮವು. ಎಂಬ ತಾತ್ಪರ್ಯವು. "ಏಕ ಏವಶಿವಃ ಸಾಕ್ಷಾತ್ ಸರ್ವಾನುಗ್ರಾಹಕಃ ಪ್ರಭುಃ ಗುರು ಜಂಗಮ ಲಿಂಗಾತ್ಮಾ ವರ್ತತೇ ಭುಕ್ತಿ ಮುಕ್ತಿದಃ ಎಂದು ಸಿದ್ಧಾಂತ ಶಿಖಾಮಣಿಯು ವರ್ಣಿಸಿರುತ್ತದೆ. ಇದಕ್ಕೊಂದು ದೃಷ್ಟಾಂತ:— ವೃಕ್ಷದ ಒಂದೇ ಒಂದು ರಸವು ಹಣ್ಣಿನಲ್ಲಿ ಹೊರಗೆ ತೊಗಟಿ, ಒಳಗೆ ತಿಳಲು ಅದರೊಳಗೆ ರಸ (ರುಚಿ) ಎಂದು ಮೂರು ವಿಧವಾಗಿ ವರ್ತಿಸುವದೆಂಬದನ್ನು ಎಲ್ಲರೂ ಬಲ್ಲರಷ್ಟೇ! ಅದೇ ಪ್ರಕಾರ ಗುರು ಲಿಂಗ ಜಂಗಮವು ಒಂದೇ ಪರವಸ್ತುವಿನ (ಮಹಾಜ್ಞಾನ) ಮೂರು ರೂಪಗಳಾಗಿವೆ. ಶರೀರವು ಅನುಸರಿಸುವ ಜ್ಞಾನವೆಂದರೆ ಆಚಾರ (ಗುರು) ಮನವು ಅನುಸರಿಸುವ ಜ್ಞಾನವೇ ಸುಜ್ಞಾನ (ಲಿಂಗ) ಭಾವವು ಅನುಸರಿಸುವ ಜ್ಞಾನವೇ ಅನುಭಾವ (ಜಂಗಮ).

ಜಂಗಮ ಶಬ್ದವು ಗಮನಾರ್ಥಕವು. ನಿರವಯರ ಶೂನ್ಯ ಲಿಂಗವು ತನ್ನಲ್ಲಿ ತಾನ ಸ್ವಸ್ಥವಾಗಿರುವಾಗ ಒಬ್ಬದಾನೊಂದು ಕಾಲದಲ್ಲಿ ಲೀಲೆಯು ಮಾಡಬೇಕೆಂಬ ಸ್ಫೂರ್ತಿಯು ಉಂಟಾಯಿತು. ಆಗ ಅತನಲ್ಲಿದ್ದ ಮಹಾ ಜ್ಞಾನ ಚಿತ್ತು ಶಕ್ತಿಯಾಗಿ ಉದಯಿಸಿ ಅವನಿಂದಿಳಿದು ಚರಿಸಿ ಜಗತ್ತನ್ನುಂಟು ಮಾಡಿತಲ್ಲವೇ? ಆ ಶಕ್ತಿಯೇ ಜಂಗಮವು. ಅದುವರಿಂದ "ಜ್ಞಾನವೇ ಜಂಗಮ" ವೆಂದು ಹೇದಿದರೆ ತಪ್ಪೇನು? "ಅನು

ಭಾವವೇ ಜಂಗಮ"ವೆಂತಲೂ ಹೇಳಿದ್ದಾರೆ. ಅನುಭಾವವೆಂದರೆ:-- ನಮ್ಮ ಬಹಿದೃಷ್ಟಿಗೆ ಕಾಣುವ ವಿವಿಧ ಒಡವೆಗಳ ನಾಮರೂಪಗಳೆಲ್ಲ ಅಡಗಿ ಒಂದೇ ಒಂದಾದ ಸಚ್ಚಿದಾನಂದಮಯ ಲಿಂಗವು ಎಲ್ಲಕಡೆಯಲ್ಲಿಯೂ ಕಾಣುವ ಸ್ಥಿತಿಯು. ಜ್ಞಾನವು ಪರಿಪಕ್ವ ಸ್ಥಿತಿಗೆ ಬಂದಾಗಲೇ ಇಂತಹ ಏಕತ್ವವು ನೆಲೆಗೊಂಡು ಅನುಭಾವವು ಪೂರ್ಣಾವಸ್ಥೆಗೆ ಮುಟ್ಟುತ್ತದೆ. ಈ ತೆರದ ಅನುಭಾವ ಪಡೆಯಲು ಹವಣಿಸಿದವರು, ಬರಿಯ ಡಾಂಭಿಕ ವೇಷ ಭೂಷಣಗಳಿಂದ ಅದೆಂದೂ ಜಂಗಮರಾಗರು. ಈ ಬಗೆಯ ನಿಜವಾದ ಜಂಗಮತ್ವದಿಂದಲೇ ಪ್ರಸಿದ್ಧ ಪ್ರಸಾದವು (ಎಲ್ಲೆಲ್ಲಿಯೂ ಲಿಂಗವೇ ಅವಿರಳವಾಗಿ ವ್ಯಾಪಿಸಿರುವದೆಂಬ ದೃಢಭಾವನೆಯು) ಒಡಮೂಡುವದು. ಇದೇ ಲಿಂಗಾಂಗ ಸಾಮರಸ್ಯವು.

ಈ ವಿವೇಚನೆಯಿಂದ ವೀರಶೈವರಲ್ಲಿರುವ ಗುರು ಲಿಂಗ ಜಂಗಮ ವಿಷಯಕ ಕಲ್ಪನೆಯು ಏನಿರುತ್ತದೆಂಬುದು ಅಲ್ಪ ಸ್ವಲ್ಪಾದರೂ ಹೊಳೆಯದಿರದೆಂದು ನಂಬಿರುವೆನು. ಇಂತಹ ಗುರು ಲಿಂಗ ಜಂಗಮ ಸೇವೆಯನ್ನೇ ಪ್ರತಿಯೊಬ್ಬನು ಸಾಧಿಸುವದು ಅತ್ಯಂತ ಇಷ್ಟವಾಗಿದೆ. ಆದರೆ ಸಮಾಜದಲ್ಲಿ ಪ್ರತ್ಯಕ್ಷ ನೋಡ ಹೋದರೆ ತೀರ ವಿಪರೀತ ಸ್ಥಿತಿಯು ಕಂಡು ಬರುತ್ತದೆಂದು ಕಡು ಕಷ್ಟದಿಂದ ನಿರುಪಾಯವಾಗಿ ಹೇಳಬೇಕಾಗುತ್ತದೆ. ಈಗ ಬಹುಶಃ ಶಿಕ್ಷಿತರೂ ಅಶಿಕ್ಷಿತರೂ ಕೂಡಿಯೇ ತೀರ ಹೊರನೋಟವುಳ್ಳವರಾಗಿ "ಗುರುವೆಂದರೆ ಹೆಸರಿಗೆ ಮಾತ್ರ ದೀಕ್ಷಾ ಸಂಸ್ಕಾರ ಹೊಂದಿದ ಅಯ್ಯಗಳು ಲಿಂಗವೆಂದರೆ ದೇಹದ ಮೇಲೆ ಧರಿಸಿದ ಶಿಲಾಮಯ ಮೂರ್ತಿ ಜಂಗಮವೆಂದರೆ ವೇಷಧಾರಿಗಳಾದ ವಿರಕ್ತರು" ಎಂದು ತಿಳಿದು, ಯೋಗ್ಯಾಯೋಗ್ಯತೆಯನ್ನು ಲಕ್ಷಿಸದೆ ಕಣ್ಮುಚ್ಚಿಕೊಂಡು ನಡೆಯುತ್ತಿರುವರು. ಈಗ ಕರ್ತವ್ಯದಕ್ಷರಾದ ಪೂಜ್ಯವಾದ ಗುರು ಜಂಗಮರು ಅಪರೂಪವಾಗಿರುವರು. ಈ ಸ್ಥಿತಿಯು ಹೋಗಬೇಕು. ಈ ಬಗ್ಗೆ ನಾನು ನನ್ನ ಹಿಂದಣ ಬೇರೆ ಬೇರೆ ಲೇಖಗಳಲ್ಲಿ ಸಾಕಷ್ಟು ವಿಷದವಾಗಿ ನಿರೂಪಿಸಿರುವೆನು. ಮತ್ತೆ ಇಲ್ಲಿ ಚರ್ವಿತ ಚರ್ವಣವು ಅನವಶ್ಯ.

ನಮಗೆ ಸ್ವಗತ ಹಾಗು ಬಾಹ್ಯ ಇವೆರಡೂ ತರದ ಗುರು ಲಿಂಗ ಜಂಗಮಗಳ ಅವಶ್ಯಕತೆಯುಂಟು. ಆದರೆ ಈಗ ಕರ್ತವ್ಯ ವಿಮುಖ

ರಾದ ಗುರು ಜಂಗಮರ ಯೋಗದಿಂದ ಸಮಾಜವು ಅಧೋಗತಿಗಿಳಿದದೆ. ಹೆಚ್ಚೆಚ್ಚು ಇಳಿಯಹತ್ತಿದೆ. ಅವರು ಮರವೆಯಿಂದ ಅಹಂಕಾರವಶರಾಗಿ ಪರಸ್ಪರ ಹೋರಾಟದಲ್ಲಿ ಮಗ್ನರಾಗಿದ್ದಾರೆ. ಸಮಾಜವನ್ನು ಔದಾಸೀನ್ಯದಿಂದ ಕಾಣುತ್ತಿದ್ದಾರೆ. ಅವರು ಬೇಗ ಎಚ್ಚತ್ತರಷ್ಟು ಎಲ್ಲರಿಗೂ ಹಿತ. ಆದರೆ ಆ ಲಕ್ಷಣವು ಕಾಣುವದಿಲ್ಲ. ಮತ್ತೂ ಒಂದು ಮಾತು ಏನಂದರೆ- ಅಯ್ಯಗಳೆಲ್ಲರು "ತಾವು ಭಕ್ತರಲ್ಲ. ಭಕ್ತರೆಂಬ ವರ್ಗವೇ ಬೇರೆ ಇರುತ್ತದೆ" ಎಂದು ಗ್ರಹಿಸಿಕೊಂಡಂತೆ ಆಗಾಗ್ಗೆ ಕಾಣುವ ಅವರ ವರ್ತನದಿಂದಲೇ ಬೈಲಿಗೆ ಬರಹತ್ತಿದೆ. ಹೀಗಿದ್ದರೆ ಇದು ಬಹು ದೊಡ್ಡ ತಪ್ಪು ತಿಳುವಳಿಕೆಯು. ಮೇಲೆ ಹೇಳಿರುವ "ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ... ಎಂಬ ವಚನವನ್ನು ದಯಮಾಡಿ ಅವಲೋಕಿಸಬೇಕು. ಇದರಿಂದ ಅವರ ಮನಸ್ಸಿನ ಮೇಲೆ ಜಗ್ಗನೆ ಪ್ರಕಾಶಬಿದ್ದು ನಿಜತ್ವವು ಹೊಳೆಯದೆ ಇರಲಾರದು. ಸಕಲರೂ ಭಕ್ತರೇ! ಆದ್ದರಿಂದ ಗುರು ಲಿಂಗ ಜಂಗಮದ ಸತ್ಯಸ್ವರೂಪವನರಿತು, ಅವನಲ್ಲಿ ಬಾಹ್ಯಾಂತರಗಳೆರಡರಲ್ಲಿಯೂ ಸರ್ವರೂ ಆರಾಧಿಸುವದು ಶ್ರೇಯಸ್ಕರವು.

---

**ಹುಬ್ಬಳ್ಳಿಯ ಶ್ರೀಗುರುಬಸವ ಮಂಟಪದ ಚಾಲಕರ**
**ಕ್ರಿಯಾಶಕ್ತಿಯವರಾದ ನೀಲಾಂಬಿಕೆ ಸಾದರಹಳ್ಳಿಯವರು**
ತಾ. ೧-೪-೪೨ ಬುಧವಾರ ಅಕ್ಕನ ಪುಣ್ಯತಿಥಿಯ ದಿವಸ
ಓಲೀಮಠದಲ್ಲಿ ಕೂಡಿದ ಅಕ್ಕನ ಬಳಗದಲ್ಲಿ
**ಭಾಷಣ ಮಾಡಿದ್ದರ ಸಾರಾಂಶ.**

ಸನ್ಮಾನ್ಯ ಅಧ್ಯಕ್ಷಿಣಿಯರೆ, ನನ್ನ ಪೂಜ್ಯ ತಾಯಿಗಳೆ ಇವತ್ತಿನ ದಿವಸ ಶಿವಶರಣ ಶರಣೆಯರ ಆಚಾರವೆತ್ತ ನಮ್ಮ ನಡೆ ಎತ್ತ ಸಾಗಿದೆಂಬುದನ್ನು ವಿಚಾರಿಸೋಣ.

"ಆದ್ಯರ ಅರವತ್ತು ವಚನಕ್ಕೆ, ದಣ್ಣಾಯಕನ ಇಪ್ಪತ್ತು ವಚನ, ದಣ್ಣಾಯಕನ ಇಪ್ಪತ್ತು ವಚನಕ್ಕೆ "ಪ್ರಭುದೇವರ ಹತ್ತು ವಚನ, ಪ್ರಭುದೇವರ ಹತ್ತುವಚನಕ್ಕೆ, ಅಜಗಣ್ಣನ ಐದು ವಚನ, ಅಜಗಣ್ಣನ ಐದು ವಚನಕ್ಕೆ, ಕೂಡಲಚನ್ನಸಂಗಯ್ಯನಲ್ಲಿ, ನಮ್ಮ ಮಹಾದೇವಿಯಕ್ಕನ ಒಂದು ವಚನ ಕಾಣಾ ಸಿದ್ಧರಾಮಯ್ಯ"

ಎಂದು ಚನ್ನಬಸವಣ್ಣನವರು ಸಿದ್ಧರಾಮಯ್ಯನವರಿಗೆ ಹೇಳಿರುವರು. ಅಕ್ಕನವರ ವಚನವನ್ನು ಜ್ಞಾನಿಗಳಾದ ಚನ್ನಬಸವಣ್ಣನವರು ಹೊಗಳಿರುವ ಕಾರಣವೇನು ಹುಡುಕುವಾ.

ಮೇಲಿನ ವಚನದಲ್ಲಿ ಆದ್ಯರೆಂದರೆ ೬೩ ಪುರಾತನರು. ಇವರಲ್ಲಿ ೬೦ ಮಂದಿ ಪುರುಷರು ಮೂವರು ಸ್ತ್ರೀಯರಿದ್ದರು. (ಕಾರಿಕಾಲಮ್ಮ ಮಾಂಗಾಯಕ್ಕ ಯಶ್ಯಜ್ಞಾನಿ) ಅಂತು ಈ ೬೩ರಲ್ಲಿ ಒಬ್ಬರೂ ಲಿಂಗಧಾರಿಗಳಿದ್ದಿಲ್ಲವೆಂದು ಕೆಲವರ ಮತ. ಇವರಲ್ಲಿ ೮ ಮಂದಿ ವೀರಶೈವರಿದ್ದರೆಂದು ಕೆಲವರ ಮತವದೆ. ಅದು ಹ್ಯಾಗೇ ಇರಲಿ. ಇವರು ಸ್ಥಾವರ ಲಿಂಗವನ್ನು ( ಶಿವನನ್ನು ) ನಿಷ್ಠೆಯಿಂದ ಪೂಜಿಸಿದವರಾದ ಕಾರಣ ಶಿವಭಕ್ತರೆಂದು ಅವರನ್ನು ಪೂಜಿಸುವ ರೂಢಿಯನ್ನು ನಾವು ಇಟ್ಟುಕೊಂಡ ಮೇರೆಗೆ ಇಂದಿಗೂ ಅನೇಕ ಸ್ಥಳಗಳಲ್ಲಿ ೬೩ ಮೂರ್ತಿಗಳ ಪೂಜೆಯು ನಡೆಯುತ್ತ ಬಂದಿರುವದೇ ಸಾಕ್ಷಿ. ಈ ರೀತಿ ನಮ್ಮ

ಲಿಂಗಮಾರ್ಗವಿದ್ದು (ಹೆಣ್ಣು ಗಂಡು ಹಿರಿದುಕಿರಿದೆಂಬ ಭೇದಭಾವನೆ ಯಿಲ್ಲದ್ದು) ಯಾರಾದರೂ ಹೆಣ್ಣುಮಕ್ಕಳು ಪೂಜೆಕೊಂಡಿರುವರೋ ಹ್ಯಾಗೆ ಅನ್ನುವದನ್ನು ಸೂಜ್ಞರಾದ ತಾಯಿಗಳು ಚನ್ನಾಗಿ ವಿಚಾರ ಮಾಡಿರಿ.

ಮೇಲಿನ ಪುರಾತನರು ಕೇವಲ ನಿಷ್ಠೆಯಿಂದ ಶಿವನನ್ನು ಪೂಜಿಸಿದವರಾದ ಕಾರಣ ಅವರನ್ನು ನಾವು ಪೂಜೆ ಮಾಡಿರುವೆವು ಆದರೆ ನಾವು ನಿಜೇಷ್ಟಲಿಂಗ ನಿಷ್ಠಾಧುರೀಣರೂ ಶಿವಭಕ್ತಿ ಪರಾಯಣರೂ ಇದ್ದು ಪೂಜೆಗೊಳ್ಳದ ಕಾರಣವೇನು! ಶಿವನ ಕಾರುಣ್ಯಪಡೆಯುವದನ್ನು ಗಂಡಸರು ಗುತ್ತಿಗೆಯನ್ನೇನು ಹಿಡಿದಿರುವರೋ ಹ್ಯಾಗೆ? ಹಾಗಾದರೆ ಇದು ಶೈವಾಚಾರವೇ ಆಗುವದು. ಶೈವರಲ್ಲಿ ಗಂಡಸರಿಗೆ ಪೂಜೆ ಉಪನಯನಗಳಿಗೆ ಅಧಿಕಾರವಿದ್ದಂತೆ ಹೆಂಗಸರಿಗಿಲ್ಲ, ಲಿಂಗಮಾರ್ಗಿಗಳಾದ ನಮಗೆ ಹೆಣ್ಣು ಗಂಡು ಭೇದವಿಲ್ಲವೆಂಬುದಕ್ಕೆ ನಮ್ಮ ಲಿಂಗ ಸಂಸ್ಕೃತಿಯೇ ಕಾರಣ. ಹ್ಯಾಗಂದರೆ ಉದಾ:— ಬಸವಪ್ಪ ಬಸವಮ್ಮ ಲಿಂಗಪ್ಪ ಲಿಂಗವ್ವ ಸಂಗಪ್ಪ ಸಂಗವ್ವ ಇತ್ಯಾದಿಯಾಗಿದ್ದು ಒಂದೇ ಆಚಾರವು ಒಂದೇ ಕ್ರಿಯೆಯೂ ಉಂಟು ಇದರಂತೆ ವಚನಗಳ ಪ್ರಮಾಣವೂ ಅದೆ. ಏನೆಂದರೆ— ಮೊಲೆ ಮುಡಿ ಬಂದರೆ ಹೆಣ್ಣೆಂಬರು, ಗಡ್ಡಮೀಸೆ ಬಂದರೆ ಗಂಡೆಂಬರು ಒಳಗೆ ಸುಳಿವಾತ್ಮನು ಹೆಣ್ಣೂ ಅಲ್ಲ ಗಂಡೂ ಅಲ್ಲ'' ಇತ್ಯಾದಿ ಹಾಡಿಕೊಂಡಿರುವರು. ಹೀಗಿದ್ದೂ ಮಾರ್ಗದರ್ಶಕರೆಂಬವರು ಪ್ರಮಥರ ಆಚಾರವನ್ನು ಸರಿಯಾಗಿ ನಮಗೆ ತಿಳಿಸಲಿಲ್ಲವೆಂಬುದು ತಾನೇ ವಿದಿತವಾಗುವದಿಲ್ಲವೇ? ಇದು ಸ್ವಾರ್ಥದ ಪರಮಾವಧಿಯಲ್ಲದೆ ಮತ್ತೇನು? ಇದು ಕಾರಣದಿಂದಲೆ ಅಕ್ಕನವರು ಗಂಡಸರಂತೆ ವೈರಾಗ್ಯಶಾಲಿಗಳಾಗಲಿಕ್ಕೆ ಬರುತ್ತದೆಂಬುದನ್ನು ಜನಜೀವನದ ಮುಂದೆ ಆದರ್ಶರೂಪವಾಗಿ ನಡೆದು ತೋರಿಸಿದರು ಅಯ್ಯೋ! ಲಿಂಗಮಾರ್ಗವೆ? ಏನು ವಿಚಿತ್ರವಿದು? '' ಕಲ್ಲು ಕಂಚುಗಳಿಂದ ಮಾಡಿದ ಲಿಂಗವು ಪ್ರಾಣಪ್ರತಿಷ್ಠೆಯಾದೊಡನೆ ಪೂಜೆಗೆ ಯೋಗ್ಯವಾಗುವಂತೆ, ನಲ್ನುಡಿಯನ್ನಾಡುವ ಮಾನವನು ಸಂಸ್ಕಾರವಾದ ಮೇಲೆ ಪೂಜೆಗೆ ಯೋಗ್ಯನಾಗಲಾರನೆಂಬ ಅನಾಚಾರಿಗಳ ವಿಡಂಬಿಸುವದೇ ಲಿಂಗಮಾರ್ಗವು." ಇದೇ ಲಿಂಗತತ್ವವು. ಮತ್ತು ಅನಿಷ್ಟವನ್ನು ಹೋಗಲಾಡಿಸುವದೇ ಇಷ್ಟಲಿಂಗದ ಪೂಜೆಯು. ಇದೇ ನಮ್ಮ ಧರ್ಮವು.

ಇದೇ ನಮ್ಮ ಶರಣರ ಮಾರ್ಗವು. ಇದರಂತೆ ಅಕ್ಕನವರ ವಚನವನ್ನು ನೋಡಿರಿ. "ಆದಿ ಅನಾದಿಯಿಂದತ್ತತ್ತ ಮೀರಿ ತೋರುವ ನಿತ್ಯನಿರಂಜನ ಗುರುಲಿಂಗ ಜಂಗಮ ಶಿವಶರಣರ ಸತ್ಯಸನ್ಮಾರ್ಗದ ಗೊತ್ತಿನ ಮರ್ಯಾದೆಯನರಿಯದೆ ಮರ್ತ್ಯದ ಜಡಜೀವಿ ಭವಿಪ್ರಾಣಿಗಳ ಹಾಗೆ, ಗುಹ್ಯಲಂಪಟಕಿಚ್ಚಿಸಿ ದಾಸಿವೇಶಿಯರ ಕೂಡಿಕೊಂಡು ಭುಂಜಿಸಿ ಷಟಸ್ಥಲ ಬ್ರಹ್ಮಾನುಭಾವವ ಕೇಳಿ ಹೇಳುವ ಮೂಳ ಚಕ್ಕೈಯರ ಕಂಡು ಎನ್ನ ಮನ ನಾಚಿತ್ತು ಕಾಣಾ ಚನ್ನಮಲ್ಲಿಕಾರ್ಜುನ." ಇತ್ಯಾದಿಯಾಗಿ ಹಾಡಿಕೊಂಡಿರುವದನ್ನು ಚನ್ನಾಗಿ ನೋಡಿರಿ. ನಿತ್ಯವು ರಂಜನೆಯಿಲ್ಲದಂಥ ಸತ್ಯಶರಣರ ನಡೆಯನ್ನು ಬಿಟ್ಟು ಲೋಕದ ಮಾನವರಂತೆ ಕಾಮಲಂಪಟರಾಗಿ ಮೇಲೆ ಷಟಸ್ಥಲ ಬ್ರಹ್ಮಾನುಭಾವವ ಹೇಳುವಂಥವರಿಗೂ ಕೇಳುವಂಥವರಿಗೂ ಚನ್ನಾಗಿ ಬುದ್ಧಿಯನ್ನು ಹೇಳಿರುವರಲ್ಲದೆ ಮತ್ತೆ

"ಅಯ್ಯಾ ಸರ್ವಮೂಲಾಹಂಕಾರವಿಡಿದು ಕುಲಭ್ರಮೆ. ಛಲಭ್ರಮೆ. ಜಾತಿ ಭ್ರಮೆ. ನಾನಾವರ್ಣ ಆಶ್ರಮಮತ ಶಾಸ್ತ್ರಭ್ರಮೆ. ರಾಜ್ಯಭ್ರಮೆ. ಧನಧಾನ್ಯಪುತ್ರಮಿತ್ರ ಐಶ್ವರ್ಯ ತ್ಯಾಗ ಯೋಗ ಭ್ರಮೆ. ಕಾಯ ಕರಣ ವಿಷಯ ಭ್ರಮೆ. ಮಾಯಾ ಮನ ಭಾವ ಜೀವ ಮೋಹ ಭ್ರಮೆ. ನಾಹಂ ಕೋಹಂ ಭ್ರಮೆ. ಶಿವೋಹಂ ಭ್ರಮೆ ಮಾಯಾ ಭ್ರಮೆ. ಮೊದಲಾದ ಮೂವತ್ತೆರಡು ಪಾಶಾಭ್ರಮಿತರಾಗಿ ತೊಳಲುವ ವೇಷಧಾರಿಗಳ ಕಂಡು. ಶಿವಭಕ್ತಿ ಶಿವಭಕ್ತ ಶಿವಪ್ರಸಾದಿ ಶಿವಶರಣ ಶಿವೈಕ್ಯ ಶಿವ ಜಂಗಮವೆಂದು ನುಡಿಯಲಾರದೆ ಎನ್ನ ಮನ ನಾಚಿ ನಿಮ್ಮಡಿಗಭಿಮುಖವಾಯಿತ್ತಯ್ಯ ಚನ್ನಮಲ್ಲಿಕಾರ್ಜುನಾ. ಎಂದು ಅಂದಿರುವದೊಂದೇ ವಚನವನ್ನು ಮುಂದುಮಾಡಿಕೊಂಡು ಇಂದು ನಾವೆಲ್ಲರೂ ಸಾಗಿದರೆ ಕಂದರ್ಪಹರನು ಸಂದೇಹವಿಲ್ಲದೆ ಇಂದೇ ಒಲಿವನು.

ಮೇಲೆ ವರ್ಣಿಸಿದ ಕುಲ ಛಲ ಜಾತಿ ಮೊದಲಾದ ೩೨ ಪಾಶಾಭ್ರಮೆಗಳಲ್ಲಿ ತುಂಬಿ ತುಳುಕಿರುವಂಥ ವೇಷಧಾರಿಗಳಿಗೆ ಶಿವಭಕ್ತಳು ಶಿವಭಕ್ತನೆಂದು ನುಡಿಯಲಾಗದೆಂದು ಅಕ್ಕನವರು ಹಾಡಿಕೊಂಡಿರುವದಿಲ್ಲವೇ! ಅಂದಮೇಲೆ ಮುಂದಿನ ಶಿವಪ್ರಸಾದಿ ಶಿವಶರಣ ಶಿವೈಕ್ಯ ಶಿವಜಂಗಮವೆನ್ನುವದಂತೂ ದೂರೇ ಉಳಿದಂತಾಯಿತು. ಇರಲಿ. ಈ ವಚನವನ್ನು ಮತ್ತಿಷ್ಟು ಬಿಡಿಸುವೆ. ಚಿತ್ತಿಟ್ಟು ಕೇಳಿರೆಂದು ದಯಮಾಡಿ ಎಲ್ಲರಿಗೂ ಬಿನ್ನೈಸಿಕೊಳ್ಳುವೆ.

ಗುರುದೀಕ್ಷೆಯೆಂದರೆ ಮೇಲಿನ ೩೬ ಭ್ರಮೆಗಳನ್ನಳಿಯುವದರ ದೆಶೆಯಿಂದದೆ ಎಂಬುದನ್ನು ಚನ್ನಾಗಿ ನೆನಪಿನಲ್ಲಿಡಿರಿ. ಆದುದರಿಂದಲೇ ಆ ವೇಳೆಗೆ ನಿಮ್ಮ ಕೊರಳಲ್ಲಿ ಸರಿಯಾಗಿ ೩೬ ಮಣಿಗಳುಳ್ಳ ರುದ್ರಾಕ್ಷ ಮಾಲೆಯನ್ನು ಗುರುಸ್ವಾಮಿಯು ಹಾಕುವದಿಲ್ಲವೇ! ಅಂದಮೇಲೆ ಮೇಲಿನ ೩೬ ಭ್ರಮೆಗಳನ್ನು ಅಳಿಯದಲೆ ಹೋದರೆ ಆ ಮಾಲೆಯು ನಮಗೆ ಭವಮಾಲೆಯಾಗಿ ಪರಿಣಮಿಸುವದೆಂಬುದನ್ನು ಚನ್ನಾಗಿ ಲಕ್ಷ್ಯಕ್ಕೆ ತಂದುಕೊಳ್ಳಿರಿ ಶರಗೊಡ್ಡಿ ಬೇಡಿಕೊಂಬುವೆ.

''ಅತ್ತಿಯಾ ಮರಕಾಯಿ ಹೊತಿರ್ದ ತೆರನಂತೆ । ತತ್ವಭೇದಗಳನರಿಯದಲೆ। ರುದ್ರಾಕ್ಷಿ ಹೊತ್ತು ಫಲವೇನೆಂದು ಸರ್ವಜ್ಞ'' ಮೂರ್ತಿಯು ಅಂದಿರುವಂತೆ. ''ವೇಷವ ಹೊತ್ತು ದೋಷದಲ್ಲಿ ನಡೆದರೆ ಆ ದೋಷಕ್ಕೆ ವೇಷ ಮೇಭಾಂಡ. ಮೊದಲೇ ವೇಷವ ಕಂಡು ಲೇಸೆಂದು ಕೊಂಡಾಡುವ ದೋಷಿಗಳ ನರಕದಲ್ಲಿಕ್ಕುವ ರಾಮನಾಥ''

ಅಂದರೆ ಮೇಲೆ ಹೇಳಿದ ೩೬ ಭ್ರಮೆಗಳನ್ನು ಅಳಿದು ರುದ್ರಾಕ್ಷಿ ವಗೈರೆ ವೇಷವನ್ನು ಮಾಡಿದರೆ ಒಳ್ಳೇದು ಇಲ್ಲವಾದರೆ ಆ ವೇಷವೇ ದೋಷಕ್ಕೆ ಆಶ್ರಯಸ್ಥಾನವಾಗುವದೆಂದೂ ಮತ್ತು ಇಂಥ ವೇಷಧಾರಿಗಳನ್ನು ಕಂಡಕೂಡಲೇ ನಂಬುವವರನ್ನು ನರಕಲ್ಲಿಕ್ಕುವನೆಂದೂ ಹಾಡಿರುವರು. ''ಗುರುವಿನಲ್ಲಿ ಗುಣವನರಿಸಬಾರದೆಂಬ'' ಮೂಢ ನಂಬುಗೆಯುಳ್ಳ ತಾಯಿಗಳೇ ಈ ವಚನವನ್ನು ಚನ್ನಾಗಿ ಪಠಿಸಿರಿ. ಅಂದರೆ ಸಮಾಜದ ಕಲ್ಯಾಣವಾಗುವದು. ಮತ್ತು ಜಾತಿ ಎಂಬ ಭೂತವು ಹೊಕ್ಕು ಕಲ್ಯಾಣದ ನಡೆಯು ಹಸಗೆಟ್ಟು ಕಟುಕರ ಪಾಲಾದಂತಾಗಿರುವದು ಚನ್ನಾಗಿ ಲಕ್ಷ್ಯಕ್ಕೆ ತಂದುಕೊಳ್ಳಿರಿ ಏನೆಂದು ಪುರಾಣ ವೈರಾಗ್ಯದಂತೆ ಆಚರಿಸಬೇಡಿರಿ ತಾಯಿನಾಡು ಬೆಳಕಿಗೆ ಬರಬೇಕಾದರೆ ತಾಯಿಗಳಿಂದ. ಅದು ಕಾರಣದಿಂದಲೇ ಅಕ್ಕನ ಜಯಂತಿಯು ಮೂರು ಮನೆ ಹಳ್ಳಿಗಳಲ್ಲಿದ್ದಲ್ಲಿ ಬೆಳಕಿಗೆ ಬಂದಿರುವದೇ ಸಾಕ್ಷಿ. ಇನ್ನಾದರೂ ಕಣ್ತೆರೆಯಿರಿ ಮೂಢ ನಂಬುಗೆಯನ್ನು ಬಿಟ್ಟು ಜಾತಿ ಎಂಬ ಭೂತವನ್ನು ಹೊಡದೋಡಿಸಿದರೆ ನೂರು ಜಯಂತಿಯನ್ನು ಮಾಡಿದ ಫಲವು ನಮಗೆ ಬರುವದು. ಬರೇ ಜಯಂತಿ ಎಂದು ಜಯಘೋಷಮಾಡಿದರೆ ಆಗುವದೇನೆಂದು ಅಕ್ಕನವರು ತಮ್ಮ ವಚನದಲ್ಲಿ ಹೇಳಿರುವದೇನಂದರೆ-

"ಲಿಂಗವನು ಪುರಾತನರನು ಅನ್ಯರ ಮನೆಗೆ ಹೋಗಿ ಹೊಗಳುವರು. ತಮ್ಮದೊಂದು ಉದರ ಕಾರಣ, ಲಿಂಗವು ಪುರಾತನರು ಅಲ್ಲಿಗೆ ಬರಬಲ್ಲರೇ! ಅನ್ಯವನೆ ಮರೆದು ನಿಮ್ಮ ನೆನೆವರ ಎನಗೊಮ್ಮೆ ತೋರಾ ಚನ್ನಮಲ್ಲಿಕಾರ್ಜುನಾ ಎಂದು ಅಂದಿರುವದೇಕಂದರೆ, ಹಿಂದಿನ ಪುರಾತನರು ಹಾಗಿದ್ದರು. ಹೀಗಿದ್ದರೆಂದು ಹೊಗಳುವದರಲ್ಲಿ ಫಲವೇನು? ಅವರ ಆಚರಣೆಯನ್ನು ನಮ್ಮ ನಡೆಯಲ್ಲಿ ತರಬೇಕೆಂದು ನುಡಿದಿರುವರು. ಆದರೆ ಇತ್ತೀಚೆಗೆ ಕೆಲವರು ಸ್ವಕಪೋಲಕಲ್ಪಿತದಿಂದ ಹಿಂದಿನದು ಹ್ಯಾಗೆ ಇರಲಿ ಅದರಂತೆ ಸಾಗಬೇಕು ಇಲ್ಲವಾದರೆ ಮಹಾದ್ರೋಹಬರುವದೆಂದು ಹೇಳುವರು. ಇಂಥವರ ಮಾತಿಗೆ ಎಳ್ಳಷ್ಟು ಹೆದರಬೇಡಿರಿ. ಯಾಕಂದರೆ ಉದಾ-- ನಾವು ಪೂರ್ವದಲ್ಲಿ ಮುಂಗೈ ತುಂಬ ಬಳೆಯನ್ನಿಟ್ಟು ಮುಂಗೈವರೆಗೆ ಕುಪ್ಪಸವನ್ನು ತೊಟ್ಟು ಗೇಣುದ್ದ ದಡಿಯ ಶೀರೆಯನ್ನು (ಬಿಳಿ ಅತ್ತಿ ಹೂವಿನ ಶೀರೆ) ಉಡುತ್ತಿದ್ದೆವು. ಮತ್ತು ಗಂಡಸರು ಲಂಡಂಗಿ ಗುಂಡ್ಗಿ ಚಣ್ಣ ಹೆಡಗಿ ರುಮಾಲವನ್ನು ಸುತ್ತುತ್ತಿದ್ದರು. ಆದರೆ ಈಗ ಅವುಗಳನ್ನು ಧರಿಸಿದರೆ ಎಷ್ಟು ಅಸಹ್ಯಕಾಣುವದು. ಮತ್ತು ಹಿಂದಿನವರು ಇಂಗ್ಲಿಷ ಭಾಷೆಯನ್ನು ಕಲೆಯಲಿಲ್ಲವೆಂದು ಈಗ್ಗೆ ಯಾರಾದರೂ ಕಲಿತರೆ ಅದು ಪಾಪವಾದಂತಾಯಿತಲ್ಲವೇ! ಹೀಗೆ ನುಡಿಯುವವರು ತಮ್ಮ ಅಜ್ಞಾನವನ್ನು ತಾವೇ ವ್ಯಕ್ತಮಾಡುವದಿಲ್ಲವೆ! ಇರಲಿ ಮೇಲೆ ಹೇಳಿದ ನಮ್ಮ ಉಡುಪುಗಳು ಹೇಗೆ ಬದಲಾಗಿರುವವೋ ಅದರಂತೆ ನಮ್ಮ ಆಚಾರವಿಚಾರಗಳನ್ನು ಬದಲಾಯಿಸಲಿಕ್ಕೆ ಪ್ರಮಥರ ವಚನಗಳೇ ಸಾಕ್ಷಿ ಏನಂದರೆ.

"ಕಾಲು ಮೇಲು ಮಾಡಿ ಕೋಲು ಕೆಳಗೆ ಊರಿ ಕಾಲಕಾಲಕ್ಕೆ ತಪಶ್ಚರ್ಯ ಮಾಡಿದರೆ ಕಾಲಾಂತಕ ನಿಲ್ಲನೋಡಾ.! ದೇಶಕಾಲವಸ್ತುತ್ರಯವರಿದಲ್ಲಿ ಕಾಲಾರಿ ಕಾಲಕಾಲಕ್ಕೆ ಕಾಲತೊಡಕನಾಗಿರುವನೆಂದು ಸಿದ್ಧರಾಮ ಶಿವಯೋಗಿಗಳು ಬುದ್ಧಿಯನ್ನು ಹೇಳಿರುವರು. ಮೇಲಿನವರು ಇಂಥ ವಚನಗಳನ್ನು ಪಠಿಸಿ ಬುದ್ಧಿಗಲಿಯಲೆಂದು ಹೇಳುವೆನು. ಈ ಪ್ರಕಾರ ನಡೆದದ್ದಾದರೆ ನಮ್ಮ ಧರ್ಮವು ಬೇಗನೆ ಸುಧಾರಿಸುವದು. ನಮ್ಮ ಮಾರ್ಗಕ್ಕೆ ಲಿಂಗಮಾರ್ಗವೆನ್ನುವರು. ಮಾರ್ಗವೆಂದರೆ ನಡೆಯುವದು, ನುಡಿಯುವದಲ್ಲವೆಂದು ನೆನಪಿನಲ್ಲಿಡಿರಿ. ಇದನ್ನೇ ಅಕ್ಕನವರು ತಮ್ಮ ವಚನದಲ್ಲಿ ಅಂದಿರುವರು. ಮರೆಯತಕ್ಕ ಮಾ

ತಲ್ಲ ಅಂತೆಯೇ ನಡೆಯತಕ್ಕ ಪಾದವನ್ನು ತೋರಿಸಿರುವೆವು. ಶಿವಶರಣ ಶರಣೆಯರ ಆಚಾರವೆತ್ತ ನಮ್ಮ ಸಮ್ಯದ ನಡೆ ಎತ್ತ ಸಾಗಿದೆಂಬುದನ್ನು ಚನ್ನಾಗಿ ಲಕ್ಷ್ಯಕ್ಕೆ ತಂದುಕೊಳ್ಳಿರಿ. "ಎನ್ನಂಗದಲ್ಲಿ ಆಚಾರವ ತೋರಿದನಯ್ಯ ಬಸವಣ್ಣನು. ಆಚಾರವೆ ಲಿಂಗವೆಂದರುಹಿದನಯ್ಯ ಬಸವಣ್ಣನು. ಎನ್ನ ಪ್ರಾಣದಲ್ಲಿ ಅರಿವು ನೆಲೆಗೊಳಿಸಿದನಯ್ಯ ಬಸವಣ್ಣನು ಅರಿವೇ ಜಂಗಮವೆಂದರುಹಿದನಯ್ಯ ಬಸವಣ್ಣನು ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀಕ್ರಮವನರುಹಿದನಯ್ಯ." ಎಂದು ಅನ್ನುವದೇನಂದರೆ, ಬಸವಣ್ಣನು ಪಂಚ ಆಚಾರಗಳನ್ನು ಕಲಿಸಿ ಆ ಆಚಾರವೇ ಲಿಂಗವೆಂದು ತಿಳಿಸಿದನೆಂದೂ ಮತ್ತು ಆ ಆಚಾರದ ಅರಿವೇ (ಜ್ಞಾನವೇ) ಜಂಗಮವೆಂದು ಅರುಹಿದನೆಂದು ಅಂದಿರುವರು. ಬಸವಣ್ಣನವರು ಹೇಳಿರುವ ಪಂಚ ಆಚಾರಗಳೆಂದರೆ ಯಾವವು— ಲಿಂಗಾಚಾರ ಸದಾಚಾರ ಶಿವಾಚಾರ ಭೃತ್ಯಾಚಾರ ಗಣಾಚಾರ ಎಂಬವುಗಳೇ ಪಂಚ ಆಚಾರಗಳು. ಈ ಪಂಚ ಆಚಾರಗಳನ್ನು ಪಾಲಿಸಬೇಕೇದರೆ ಪಂಚಸೂತಕಗಳನ್ನು ತಿಳಿಯಬೇಕು. ಪಂಚಸೂತಕಗಳೆಂದರೆ, ಜಾತಿ ಜನನ ಮರಣ ಉಚ್ಛಿಷ್ಟ ರಜಸ್ಸೂತಕ ಎಂಬಿವುಗಳೇ ಸೂತಕಗಳು ಪಂಚಸೂತಕಗಳನ್ನು ಅಳಿಯದಲೇ ಪಂಚ ಆಚಾರಗಳೂ ಅರಿಷಡ್ವರ್ಗಗಳನ್ನು ಅಳಿಯದಲೆ ಷಟಸ್ಥಲವೂ ಅಷ್ಟಮದಗಳನ್ನು ಅಳಿಯದಲೆ ಅಷ್ಟಾವರಣಗಳೂ ಎಂದಿಗೂ ಸಂಬಂಧಿಸಲಾರವು ಅನುಭವ ಮಾರ್ಗದಲ್ಲಿ ಒಂದು ಅಳಿಯದಲೇ ಒಂದು ಉಳಿಯಲಾರದು. ಉದಾ-- ದುರ್ಗುಣವು ಅಳಿದರೆ ಸದ್ಗುಣವು ಪ್ರಾಪ್ತವಾಗುವದಿಲ್ಲವೇ! ಅದರಂತೆ ಇನ್ನು ಪಂಚ ಆಚಾರಗಳನ್ನು ಬಿಡಿಸುವಾ.

೧ನೇಯದು ಲಿಂಗಾಚಾರ— ನಮ್ಮ ಇಷ್ಟಲಿಂಗದ ಹೊರ್ತು ಅನ್ಯ ದೇವರನ್ನು ಪೂಜಿಸಕೂಡದು.

೨ನೇಯದು ಸದಾಚಾರ— ಸತ್ಕ್ರಿಯೆಯಿಂದ ಧನವಗಳಿಸಿ ದಾಸೋಹ ದಾನ ಪರೋಪಕಾರ ಮಾಡುವದು.

೩ನೇಯದು ಶಿವಾಚಾರ— ಅಂಗದ ಮೇಲೆ ಶಿವಲಿಂಗವಿದ್ದ ಶಿವಭಕ್ತರನ್ನು ಕಂಡು ಶಿವನೆಂದು ನಮಿಸುವದು.

೪ನೇಯದು ಭೃತ್ಯಾಚಾರ— ತಾನು ಭಕ್ತಳು ಉಳಿದವರೆಲ್ಲರು ಜಂಗಮರೆಂದು ತಿಳಿಯುವದು.

ಐನೇಯದು ಭೃತ್ಯಾಚಾರ— ಮೇಲೆ ವರ್ಣಿಸಿದ ಆಚಾರಗಳನ್ನು ಯಾರು ಪಾಲಿಸುವದಿಲ್ಲವೋ ಅವರನ್ನು ಶಿಕ್ಷಿಸುವದು ಅಥವಾ ಅವರಿಂದ ದೂರಿರುವದು.

ಮೇಲೆ ವರ್ಣಿಸಿದ ಪಂಚ ಆಚಾರಗಳಲ್ಲಿ ಒಂದು ಕೊರತೆಯಾಗದಂತೆ ಯಾವ ಅಂಗನು ಸಂಭವಿಸಲ್ಪಟ್ಟು ಅದರಂತೆ ಆಚರಿಸುವನೋ ಅವನೇ ಲಿಂಗವಾಗುವನು. ಆದುದರಿಂದಲೇ ಪಂಚಸೂತ್ರಕ್ಕೆ ಸರಿಯಾಗಿ ಲಿಂಗವಿರಬೇಕೆಂಬ ಪ್ರಮಾಣವದೆ. (ಪಂಚಸೂತ್ರವು ಅಂಗನಿಗೆ ಬೇಕೆಂಬುವದು ಮರೆಯುಕೂಡದು) ಮತ್ತು ಲಿಂಗವು ಭಿನ್ನವಾದರೆ (ಅಂದರೆ ಯಾವ ಅಂಗನು ಒಂದು ಆಚಾರಕೊರತೆಯುಳ್ಳವನಾದರೆ) ಪೂಜೆಗೆ ಯೋಗ್ಯನಾಗಲಾರನೆಂಬ ಸಿದ್ಧಾಂತವೂ ಇದೆ.

ಬಸವಾದಿ ಪ್ರಮಥ ಪುಂಗವರು ಮೇಲಿನ ಆಚಾರಗಳಂತೆ ನಡೆದು ತೋರಿಸಿದ ಕಾರಣ ಲಿಂಗವಂತ ಸಮಾಜವು ಶೀಘ್ರದಲ್ಲಿಯೇ ಅರ್ಧಕೋಟಿಯಷ್ಟು ಬೆಳೆಯಿತೆಂದು ಇತಿಹಾಸಜ್ಞರ ಅಭಿಪ್ರಾಯವದೆ. ಅವರು ಕಣ್ಮರೆಯಾಗಿ ಇಂದಿಗೆ ಎಂಟುನೂರು ವರ್ಷಗಳಾಗಿ ಹೋದವು. ಅಂದ ಮೇಲೆ ಈ ಲಿಂಗಕ್ಷೇತ್ರವು ಎಷ್ಟು ಕೋಟಿ ಬೆಳೆಯಬೇಕೆಂಬದನ್ನು ಚನ್ನಾಗಿ ವಿಚಾರಿಸಿರಿ. ಅದರ ಬದಲು ಇಪ್ಪತ್ತು ಮೂವತ್ತು ಲಕ್ಷಕ್ಕೆ ಇಳಿದು ಬಂದಿದೆಂಬುದನ್ನು ಕೇಳಿದರೆ ಯಾವ ತಾಯಿಯ ಅಂತಃಕರಣವು ಕರಗಿ ನೀರಾಗಲಿಕ್ಕಿಲ್ಲ ಹಾಯ! ಹಾಯ! ಪ್ರಮಥ ಪುಂಗವನೆ ದ್ವಿತೀಯ ಶಂಭುವೆ. "ತತ್ವವನ್ನು ಹಿಡಿದವರಿಗೆ ನಾನು ತೊತ್ತಾಗಿರುವೆನೆಂದು ಅಮರ ಗಣಂಗಳ ಸಾಕ್ಷಿಯಾಗಿ" ನುಡಿದಿರುವದಿಲ್ಲವೇ! ಇದನ್ನು ಸಟೆಮಾಡದಲೆ ದಿಟಮಾಡಿ ಈ ನಮ್ಮ ಬಳಗವನ್ನು ರಕ್ಷಿಸು ರಕ್ಷಿಸು. ನಿನಗೆ ಶರಗೊಡ್ಡಿ ಬೇಡಿಕೊಂಬೆ.

ತಾಯಿಗಳೇ ಶಿವಶರಣ ಶರಣೆಯರ ಆಚಾರವೆತ್ತ ನಮ್ಮ ನಡೆ ಎತ್ತಸಾಗಿದೆಂಬುದನ್ನು ಚನ್ನಾಗಿ ಲಕ್ಷಕ್ಕೆ ತಂದುಕೊಳ್ಳಿರಿ. ಏನೆಂದು ಸುಮ್ಮನೆ ಮೈಮರೆತು ಕೂಡ್ರಬೇಡಿರಿ. ನಮ್ಮ ಸಮಾಜವು ಕ್ಷಯರೋಗಿಯಂತೆ ದಿನೇ ದಿನೇ ನಶಿಸಿ ಹೋಗಹತ್ತಿದೆ. ಅಯ್ಯೋ! ಲಿಂಗಮಾರ್ಗವೆ ಎಂಥ ಹೀನದೆಶೆಯಲ್ಲಿರುವಿ. ಹಾಯ! ಹಾಯ! ಮಹಾದೇವಿಯಕ್ಕನೆ! ನಿನ್ನ ವಚನಗಳೆತ್ತ ನಮ್ಮ ಹೀನ ಬಾಳುವೆಯೆತ್ತ? ಇನ್ನಾದರೂ ಕಣ್ತೆಯಿರಿ. ಲಿಂಗಮಾರ್ಗವನ್ನು ಪ್ರಸ್ಥಾಪಿಸಿರಿ. ನಂದೀಧ್ವಜವನ್ನು ಎತ್ತಿ ಹಿಡಿಯಿರಿ.

ವಾಲೀಭಾಂಡಾರವನ್ನು ಬೈಲಿಗೆಳೆಯಿರಿ. ಅಂದರೆ ನಿಜವಾದ ಜಯಂತಿಯಾಯಿತು.

ಶಿವಶರಣ ಶರಣೆಯರ ಅನುಭಾವವು ಎಷ್ಟು ವಿಸ್ತೃತವಾಗಿದ್ದರೂ ಇಂದು ನಾವು ಕಣ್ಣಾಣದವರಾಗಿರುವೆವು. (ಇದನ್ನು ಈ ಶಿವಶರಣರ ಅನುಭವವನ್ನು ಮರೆಯಬಾರದೆಂದು ಲಗ್ನದ ವೇಳೆಯಲ್ಲಿ ನಮ್ಮ ಉಡಿಯಲ್ಲಿ ವಾಲೀದವಡನ್ನು ಹಾಕಿರುವರು ಯಾಕಂದರೆ ಶಿವಶರಣರ ಅನುಭವವೆಲ್ಲ ವಾಲೀಗರಿಯ ಮೇಲೆ ಅವೆ. ಅವುಗಳನ್ನು ಅಂದರೆ (ವಚನಗಳನ್ನು) ಮರೆಯಕೂಡದೆಂದು ನೆನಪಿಗಾಗಿ ಉಡಿತುಂಬಿರುವರು. ಇವುಗಳನ್ನು ಬಿಟ್ಟು ಮಠಮಾನ್ಯಗಳಲ್ಲಿ ಪುರಾಣ ಕೀರ್ತನಗಳೇ ನಡೆಯಲಿಕ್ಕೆ ಹತ್ತಿವೆ ಯಾಕಂದರೆ— " ಧರ್ಮಕ್ಕೆ ಕೈಬಾರದೀಕಾಲ। ಪಾಪ ಕರ್ಮಕ್ಕೆ ಮನಸೋಲು ದೀಕಾಲ॥ ದಂಡದ್ರೋಹಕೆ ಉಂಟು। ಪುಂಡಪೋಕರಿಗುಂಡು। ಹೆಂಡತಿ ಮಕ್ಕಳಿಗಿಲ್ಲ ಈ ಕಾಲ॥ ಪುಂಡ ಜಂಗಮಕುಂಟು। ಭಂಡಜಂಗುಳಿಗುಂಟು। ದಂಡಧರ ಭಕ್ತರಿಗಿಲ್ಲ ಈ ಕಾಲ॥ ಮತ್ತೆ ಸುಳ್ಳರಿಗುಂಟು। ನಿತ್ಯ ವೇಷಕೆ ಉಂಟು। ಸತ್ಯಶರಣರಿಗಿಲ್ಲ ಈ ಕಾಲ॥ ಸತ್ತವರ ಕಥೆಗುಂಟು। ಮಂತ್ರತಂತ್ರಕೆ ಉಂಟು। ಸತ್ಯವಚನಗಳಿಗಿಲ್ಲ ಈ ಕಾಲ॥ ಹುಸಿದಿಟವಾಯಿತು। ರಸಕಸವಾಯಿತು। ಶಶಿಧರನ ಕಾಣದೀ ಕಾಲ॥ ವಸುಧಿಯೊಳಗೆ ನಮ್ಮ। ಬಸವಪ್ರಭುವರನ। ಸ್ಮರಿಸುವರಿಗಿಲ್ಲ ಈ ಕಾಲ॥ ಅಕ್ಕನವರಾದರೂ ಶಾಸ್ತ್ರ ಪುರಾಣಗಳನ್ನು ಚನ್ನಾಗಿ ಟೀಕಿಸಿರುವದನ್ನು ನೋಡಿರಿ.

"ವೇದ ಶಾಸ್ತ್ರ ಪುರಾಣಾಮಂಗಳೆಲ್ಲ ಕೊಟ್ಟಣವ ಕುಟ್ಟುತ್ತ ನುಚ್ಚುತೌಡು ಕಾಣಿಭೋ! ಇವ ಕುಟ್ಟಲೇಕೆ! ಅತ್ತಲತ್ತ ಹರಿವ ಮನದ ಶಿರವನರಿದಡೆ ಬಚ್ಚಬರಿಯ ಬೈಲು ಚನ್ನಮಲ್ಲಿಕಾರ್ಜುನ" ಎಂದು ಅಂದಿರುವರು. ಪುರಾಣಗಳೆಂದರೆ ಹಿಂದಿನವು ಅಥವಾ ಹಳೆಯವು ಎಂಬರ್ಥವಾಗುತ್ತದೆ. ಹಿಂದಿನವರು ದ್ವೇಷಭಾವದಿಂದ ಕೂಡಿ ಹೊನ್ನು ಹೆಣ್ಣು ಮಣ್ಣಿಗಾಗಿ ಬಡಿದಾಡಿದಂಥವರ ಜೀವನದ ಕಥೆಗಳೇ ಪುರಾಣಗಳಾಗಿರುತ್ತವೆ. ಇಂಥ ದ್ವೇಷಾಸೂಯಗಳಿಂದ ಪೂರಿತವಾದ ಕಥೆಗಳನ್ನು ಕೇಳುವದರಿಂದ ನಮ್ಮ ಜೀವನದ ಸಾರ್ಥಕತೆಯಾಗಲಾರದು. ಮತ್ತಿಷ್ಟು ರಾಗದ್ವೇಷಗಳು ಹೆಚ್ಚಾಗುತ್ತವೆ. ವಚನಗಳು ಹಾಗಲ್ಲ. ವಚನಗಳೆಂದರೆ ನಮ್ಮ ಜೀವನದ ತೊಡಕನ್ನು ಬಿಡಿಸಿ ಜೀವನಲ್ಲಿ ದೇವ

ಸಾಗುವ ರೀತಿಯನ್ನು ತೋರಿಸುವ ಜ್ಯೋತಿಯಾಗಿವೆ ಅನ್ನುವದಕ್ಕೆ ಚನ್ನಬಸವಣ್ಣನವರು ರುದ್ರಮುನಿಗಳಿಗೆ ಹೇಳಿದ ಕಾಲಜ್ಞಾನವೇ ಸಾಕ್ಷಿ

"ನಮ್ಮ ಪುರಾತನರ ವಚನಂಗಳೆಲ್ಲ ಓದದೆ ಇದ್ದಾರು. ಓದಿ ನಂಬುಗೆ ಇಲ್ಲದೆ ಇದ್ದಾರು. ನೂರಕೊಬ್ಬರಲ್ಲದೆ ನಂಬರು. ನಮ್ಮ ಆದ್ಯರ ವಚನಂಗಳೆಲ್ಲ ಜರಿದಾರು. ತಮ್ಮ ಕವಿತ್ವವ ಮೆರೆದಾರು. ನಮ್ಮ ಆದ್ಯರ ವಚನಗಳಿಂದೊದಗಿದ ಜ್ಞಾನವೆಂಬುದನರಿಯರು. ತಾಯಿಂದ ಮಕ್ಕಳಾವರೆಂಬುದನರಿಯರು. ಊರೆಲ್ಲಕ್ಕೆ ಹುಟ್ಟಿದ ಹಾಗೆ ನುಡಿದಾರು. ನಮ್ಮ ಪುರಾತನರ ವಚನವೇ ತಾಯಿತಂದೆಯೆಂದರಿಯರು. ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು. ನಮ್ಮ ಆದ್ಯರ ವಚನ ಮದ ಮತ್ಸ್ರಯರ್ಗಾದಿ ಅರಿಷಡ್ವರ್ಗ ಸಪ್ತವ್ಯಸನ ಪಂಚೇಂದ್ರಿಯ ದಶವಾಯುಗಳಿಚ್ಛೆಗೆ ಹರಿವ ಮನ ಸ್ವಚ್ಛವಾಗಿ ನಿಲಿಸಿತ್ತು. ನಮ್ಮ ಆದ್ಯರ ವಚನ ನೂರೊಂದು ಸ್ಥಲವ ಮೀರಿದ ಮಹದಲ್ಲಿ ನೆಲಸಿತ್ತು. ನಮ್ಮ ಆದ್ಯರ ವಚನ ಇನ್ನೂರಾ ಹದಿನಾರು ಲಿಂಗಕ್ಕೆ ಸರ್ವೇಂದ್ರಿಯವ ಸಮ್ಮತವಮಾಡಿ ಸಾಕಾರವನರಿದು ನಿರಾಕಾರವನರಿದು ನಿರ್ಮಯಲ ನಿತ್ಯಸುಖದಲ್ಲಿರಿಸಿತ್ತು ಇಂತಪ್ಪ ಆದ್ಯರ ವಚನ ಭಾಂಡಾರವರ ನಮ್ಮ ಪ್ರಭುದೇವರು ಮುಖ್ಯವಾದ ಏಳನೂರೆಪ್ಪತ್ತು ಅಮರಗಣಂಗಳು ಅಸಂಖ್ಯಾತ ಪುರಾತನರು ಪ್ರಮಥಗಣಂಗಳು ಹೇಳಿ ಕೇಳಿ ಕೊಂಡಾಡಿದ ಕಾರಣ ನಮ್ಮ ಕೂಡಲಚೆನ್ನ ಸಂಗಯ್ಯನಲ್ಲಿ ಸರ್ವಸುಖಸೂರೆಗೊಂಡು ಸ್ವಯಂಲಿಂಗವಾದರು. ನಮ್ಮ ಆದಿ ಪುರಾತನರು ಪ್ರಸಾದಕ್ಕೆ ತಪ್ಪದೆ ನಡೆದರು ನಡೆದಪ್ಪದೆ ನುಡಿದರು. ಇಂತಪ್ಪ ಪುರಾತನರ ವಚನಂಗಳ ಎರಡಿಲ್ಲದೆ ಕೊಂಡಾಡಿ, ತನುಮನಧನ ಎರಡಿಲ್ಲದೆ ಸಮರ್ಪಿಸುವ ಭಕ್ತರ ಭೃತ್ಯನಾನು. ಆಳಿನಾಳಯ್ಯ ನಾನು ಕೂಡಲಸಂಗನ ಶರಣರ ಸಾಕ್ಷಿಯಾಗಿ ರುದ್ರಮುನಿಲಿಂಗವೇ! ಇಂಥ ಸದ್ಭಕ್ತರನೇ ತೋರಿ ಬದುಕಿಸಯ್ಯ ಪ್ರಭುವೇ! ಎಂದು ಹಾಡಿಕೊಂಡಿರುವ ವಚನವನ್ನು ಆಳವಾಗಿ ವಿಚಾರಿಸಿರಿ. ಇದರಲ್ಲಿ ಈಗಿನ ನಿಜಸ್ಥಿತಿಯು ಅಡಗಿದೆ. ಏನಂದರೆ ವಚನಗಳೆಲ್ಲ ಜರಿಯುತ್ತಿರುವರೆಂದೂ ತಮ್ಮ ಶ್ರೇಷ್ಠತ್ವವನ್ನೇ ಮೆರೆಯಿಸುತ್ತಿರುವರೆಂದೂ ಚನ್ನಾಗಿ ಹೇಳಿರುವರುವರು. ವಚನಗಳಲ್ಲಿ ಮೇಲು ಕೀಳು ಎಂಬುವದು ಇಲ್ಲವೇ ಇಲ್ಲ. ಅವು ಸಮಾನತ್ವವನ್ನು ಸೂಚಿಸುತ್ತವೆ. ಆದಕಾರಣ ಅವುಗಳನ್ನು ದೂರಮಾಡುತ್ತ ಬಂದಿರು

ವರು. ವಚನಕಾರರು ಅನಾಚಾರಿಗಳಿಗೆ ಎಳ್ಳಷ್ಟೂ ಆಸ್ಪದ ಕೊಡದ ಕಾರಣ ಅವುಗಳನ್ನು ಅಲ್ಲಗಳೆಯುತ್ತ ಬಂದಿರುವರು.

''ಆದ್ಯರ ವಚನವೆಂಬುದು ಸಂತೆಯ ಮಾಲೆ, ಪುಂಡರ ಪುರಾಣವೇ ಲೋಕದಜನರ ಮೆಚ್ಚಿಸುವ ಬೀದಿ ಮಾಲೆ ಶಿವಶಿವಾ ನೀವು ಶಿವಶರಣರ ಕೂಡಾಡಿ ವಚನಂಗಳ ಕಲಿತು ಆ ವಚನಂಗಳ ನಿಮ್ಮ ಊಟವೆಚ್ಚಕ್ಕೆ ಈಡು ಮಾಡಿಕೊಂಡಿರಲ್ಲದೆ ಮುಂದಿನ ಮುಕ್ತಿಯಪಥವ ಕಾಣದೆ ಹೋದಿರಲ್ಲ. ಇದು ಕಾರಣ ಶಿವಜ್ಞಾನ ಉದಯವಾದ ಲಿಂಗಾಂಗಿಗಳಿಗೆ ಎನ್ನ ನುಡಿ ಹಾಲು ಸಕ್ಕರೆಯನುಂಡಂತೆ ಸವಿದೋರುತ್ತಿದೆ. ವೇಷಧಾರಿ ವಿಶ್ವಾಸಘಾತಕರಿಗೆ ಎನ್ನ ನುಡಿ ಅಲಗಿನ ಮೊನೆಯಂತೆ ಇರಿವುತ್ತಿದೆಂದು· ಹೇಳಿದಹಾಗೆ ಶಿವಜ್ಞಾನ ಉದಯವಾದಂಥ ಲಿಂಗಾಂಗಿಗಳೇ ತಮ್ಮ ತಮ್ಮ ಮನೆಗಳಲ್ಲಿ ಶಿವಾನುಭವ ಸಂಘವನ್ನು ಸ್ಥಾಪಿಸಿ ಮನೆಯನ್ನು ಮಡವನ್ನಾಗಿ ಮಾಡಿ ಶಿವಶರಣರ ಉದಯದ ಕುರುಹನ್ನು ದಿಟ ಮಾಡಿರುವರು. (ಯಾವದೆಂದರೆ ಶರಣರು ಬರುವಾಗ್ಗೆ ಪಾಲೀಭಾಂಡಾರ ಪಡದೀತೆಂಬ ಕುರುಹನ್ನು) ಈ ಸಂಘದ ಮೂಲಕ ವಚನ ಭಾಂಡಾರವನ್ನು ಬೈಲಿಗೆಳೆದು ಹಸಗೆಟ್ಟ ಕಲ್ಯಾಣದ ನಡೆಯ ಕಸವನ್ನು ತೆಗೆದು ಬಿಸುಗೆಯನ್ನು ಮಾಡಹತ್ತಿರುವದೇ ಸಾಕ್ಷಿ

ಧರ್ಮದ ಗುಟ್ಟನ್ನು ಸರಿಯಾಗಿ ಇದ್ದಕ್ಕಿದ್ದಂತೆ ಬೋಧಿಸುವ ಸ್ಥಳಕ್ಕೆ ಧರ್ಮಛತ್ರವೆಂದು ಕರೆದಿರುವರು. ಇಂಥ ಧರ್ಮ ಛತ್ರದಲ್ಲಿ ಈಗ್ಗೆ ಛತ್ರಿ ಚಾಮರಗಳು ನಡೆಯುಹತ್ತಿರುವದೇ ಸಾಕ್ಷಿ ಮತ್ತು ಈಗೆಲ್ಲ ಮಠ ಮನೆಗಳಲ್ಲಿ ಅಹಂಕಾರಗಳ ಒದರಾಟ ಮದ ಮತ್ಸರಗಳ ಚೀರಾಟ ಅಸೂಯ ಅನಾದರಗಳ ಬೊಬ್ಬಾಟಗಳಲ್ಲಿ ಎಲ್ಲ ಸ್ಥಲವೂ ತುಂಬಿ ಹೋಗಿದೆ ಅಂದಮೇಲೆ ಶಿವಾನುಭವವು ಇಲ್ಲದಲೆ ಸಮಾಜದ ತಾರಣೋಪಾಯ ವಿಲ್ಲೆಂದು ಈಗೆಲ್ಲ ಕಡೆಗೂ ಶಿವಾನುಭವವು ನಡೆಯಹತ್ತಿರುವದೇ ಸಾಕ್ಷಿ.

ಅಕ್ಕನವರಾದರೂ ಶಿವಾನುಭವ ಸಂಘಕ್ಕೆ ವಿಶೇಷಮಹತ್ವವನ್ನು ಕೊಟ್ಟಿರುವರು. ಮರ ಮರ ಮಥನಿಸಿ ಕಿಚ್ಚುಹುಟ್ಟಿ ಸುತ್ತಣ ತರುಮರಾದಿಗಳ ಸುಡಲಾಯಿತ್ತು ಆತ್ಮ ಆತ್ಮ ಮಥನಿಸಿ ಅನುಭಾವ ಹುಟ್ಟಿ ತನುಗುಣಾದಿಗಳ ಸುಡಲಾಯಿತ್ತು ಇದುಕಾರಣ ನಿಮ್ಮ ಮಹಾನುಭಾವಿಗಳ ಅನುಭಾವ ತೋರಿ ಎನ್ನೊಡಲನುಳುಹಿ ಕೊಳ್ಳಾ ಚನ್ನಮಲ್ಲಿಕಾರ್ಜುನಾ ಎಂದು ಅಂದಿರುವಳಲ್ಲದೆ. ಮತ್ತೆ—

ಅಯ್ಯಾ ನಿಮ್ಮ ಶರಣರ ಕೂಡಿದ ಸುಖವನುಪಮೆಗೆ ತರಬಾರದಯ್ಯಾ. ಅಯ್ಯಾ ನಿಮ್ಮ ಮಹಂತರ ಕೂಡಿಯಗಲುವ ಧಾವತಿಯಿಂದ ಸಾವುದೇ ಕರಲೇಸಯ್ಯಾ. ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ನರುಹಿದ ಮಹಿಮರ ನಗಲಿ ಅನು ನಿಲಲಾರೆನಯ್ಯಾ. ಎಂದು ಹಾಡಿಕೊಂಡಂತೆ ನಾವೆಲ್ಲರೂ ಮಹಾನುಭಾವಿಗಳ ಸಂಗದಲ್ಲಿರಬೇಕು. ಅಂದರೆ ನಮ್ಮ ತನುಗುಣಾದಿಗಳಾದ ಅಹಂಕಾರ ಮಮಕಾರಗಳು ಅಳಿದು ಹೋಗುತ್ತವೆ. ಇವುಗಳನ್ನು ( ತನುಗುಣಾದಿಗಳನ್ನು ) ಅಳಿಯದವರ ಸಂಗಮಾಡಕೂಡದೆಂದು ಅಕ್ಕನು ನಮಗೆ ಆಗಾಗ್ಗೆ ಎಚ್ಚರಕೊಟ್ಟಿರುವಳು.

“ಅರಿಯದವರೊಡನೆ ಸಂಗವಮಾಡಿದರೆ ಕಲ್ಲು ಹೊಯ್ದು ಕಿಡಿಯ ತೆಗೆದುಕೊಂಬಂತೆ ಬಲ್ಲವರೊಡನೆ ಸಂಗವ ಮಾಡಿದರೆ ಹೊಸೆದು ಬೆಣ್ಣೆಯ ತೆಗೆದುಕೊಂಬಂತೆ ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಶರಣರ ಸಂಗ ಕರ್ಪುರ ಗಿರಿಯ ಉರಿಕೊಂಡಂತೆ”

ಪ್ರತಿಒಬ್ಬ ಆತ್ಮರು ನಮ್ಮ ಕುಲಹೆಚ್ಚು ನಮ್ಮ ಜಾತಿಹೆಚ್ಚು ಅದರಲ್ಲಿ ನಾನು ಹೆಚ್ಚಿನವನೆಂದು ಅನ್ನುತ್ತಿರುವರು ಯಾರು ಹೆಚ್ಚಿನವರೋ ನನಗೆ ಮಾತ್ರ ಕಾಣವಲ್ಲರು. ಅಣ್ಣಬಸವಣ್ಣನು “ಎನಗಿಂತ ಕಿರಿಯರಿಲ್ಲ” ಎಂದು ಅನ್ನುವಾಗ್ಗೆ ಹೆಚ್ಚಿನವರನ್ನುವವರಿಗೆ ಶರಣರ ಅನುಭವವೇ ತಿಳಿದಿಲ್ಲವೆಂದು ನನಗೆ ಮಾತ್ರ ಅನಿಸುತ್ತದೆ.

ಅನುಭವವರಿಯದವರ ಸಂಗವ ಮಾಡಕೂಡದೆಂದೂ ಮಹಾನುಭವಿಗಳ ಸಂಘದಲ್ಲಿರಬೇಕೆಂದು ಅಂದಿರುವಳು. ಅಕ್ಕನವರು ಅಂದಿರುವಂತೆ ನಾವೆಲ್ಲರೂ ಈ ಶಿವಾನುಭವ ಸಂಘವೆಂಬದನ್ನು ವಾರಕ್ಕೊಂದಾವರ್ತಿ ನೆರಿಯಿಸಿ ಎಲ್ಲರೂ ಒತ್ತಟ್ಟಿಗೆ ಕೂಡುವದರಿಂದ ಒಬ್ಬರಿಂದೊಬ್ಬರ ಪರಿಚಯವಾಗಿ ಪರಸ್ಪರ ಪ್ರೇಮಾದರ ಹುಟ್ಟಿ ಒಬ್ಬರ ಹಿತಾಹಿತಗಳು ಒಬ್ಬರಿಗೆ ತಿಳಿಯಹತ್ತುವವು. ಒಬ್ಬರ ಸುಖದುಃಖಗಳು ಒಬ್ಬರಿಗೆ ಹೊಳೆಯಹತ್ತುವವು. ಇದರಿಂದ ನಮ್ಮ ಸಮಾಜವು ಬೇಗನೆ ಸುಧಾರಿಸುವದು. ಈಗ್ಗೆ ನಮ್ಮಲ್ಲಿ ಉಪಚಾರದ ಮಾತು ಬಹಳ. ಜನರು ಆಡಂಬರಕ್ಕೆ ಹೆಚ್ಚು ಮನಸ್ಸು ಮಾಡುವರು. ಇವುಗಳಿಂದ ನಮಗೆ ಫಲದೊರೆಯಲಾರದು. ಆದುದರಿಂದ “ಸಾವಿರ ಮಾತಿಗಿಂತ ಒಂದು ಕಣಕೃತಿಯು ಲೇಸು” ಬಣಮಾತಿನಿಂದ ಶಿವನು ಶಿಗಲಾರನು. ಪ್ರತಿ ಒಬ್ಬ ಆತ್ಮರು ತಮ್ಮ ಆತ್ಮೋದ್ಧಾರವನ್ನು ತಾವೇ ಮಾಡಿಕೊಳ್ಳತಕ್ಕದ್ದು ಇದನ್ನೇ

ಅಣ್ಣನು ಶಿವಾನುಭವ ಮಂಟಪದಲ್ಲಿ ಕಲಿಸುತ್ತಿದ್ದನು. ಅದರಂತೆ ನಾವೆಲ್ಲರೂ ವಾರಕ್ಕೊಂದು ದಿನ ಈ ಬಳಗವನ್ನು ನೆರೆಯಿಸಿ ಅದರ ಮೂಲಕ ಶರಣರ ಅನುಭಾವ ವಿದ್ಯೆಯನ್ನು ಸಾಧಿಸಿ ಆತ್ಮೋನ್ನತಿಯನ್ನು ಮಾಡಿಕೊಂಡು ಸ್ವತಂತ್ರವಾಗಿ ಬಾಳುವದೇ ನಮ್ಮ ಲಿಂಗಮಾರ್ಗವು. ಆದುದರಿಂದಲೇ ಪ್ರತಿಯೊಬ್ಬರಿಗೂ ಸ್ವತಂತ್ರವಾಗಿ ಒಂದೊಂದು ಲಿಂಗವು ಆದೆ. ಒಬ್ಬರ ಲಿಂಗವು ಮತ್ತೊಬ್ಬರಿಗೆ ಸತ್ತಮೇಲಾದರೂ ಬರುವದಿಲ್ಲ. ಇದನ್ನು ಮರೆಯಬೇಡಿರಿ. ಚನ್ನಾಗಿ ಲಕ್ಷದಲ್ಲಿಡಿರಿ.

ಹ್ಯಾಗೆ ತಂಬಿಗೆಯನ್ನು ಬೆಳಗದಲೆ ಬಿಟ್ಟರೆ ಜಂಗು ಬರುವದೋ ಅದರಂತೆ ಈ ಮನವೆಂಬ ತಂಬಿಗೆಯನ್ನು ಶಿವಶರಣರ ಅನುಭಾವವೆಂಬ ಹುಳಿಯನ್ನು ಹಚ್ಚಿ ಅಜ್ಞಾನಾಹಂಕಾರವೆಂಬ ಜಂಗನ್ನು ಭಂಗಗೊಳಿಸೋಣ ಅಂದರೆ ಮಂಗಳಾಂಗನು ಸಂಗಸಮರಸವಾಗುವನು ಇಂಥ ಲಿಂಗಾಂಗ ಸಾಮರಸ್ಯದ ಗುಟ್ಟನ್ನು ನಿಮ್ಮ ಮುಂದೆ ಬಿಚ್ಚಿ ಇಟ್ಟಿರುವೆನು.

ಅಕ್ಕನವರು ಯಾವ ಅನುಭಾವಿಗಳ ಸಂಗದಲ್ಲಿದ್ದು ಕೀರ್ತಿ ಶೀಲರಾಗಿ ಬಾಳಿದರೆಂಬುದಕ್ಕೆ ಅವರ ಈ ಕೆಳಗಿನ ವಚನವೇ ಸಾಕ್ಷಿ.

ಬಸವಣ್ಣನ ಭಕ್ತಿ ಚೆನ್ನಬಸವಣ್ಣನ ಜ್ಞಾನ ಮಡಿವಾಳಯ್ಯನ ನಿಷ್ಠೆ ಪ್ರಭುದೇವರ ಜಂಗಮಸ್ಥಲ ಅಜಗಣ್ಣನ ಐಕ್ಯಸ್ಥಲ ನಿಜಗುಣನ ಆರೂಢಸ್ಥಲ ಸಿದ್ಧರಾಮಯ್ಯನ ಸಮಾಧಿಸ್ಥಲ ಇಂಥವರ ಕರುಣ ಪ್ರಸಾದವೆನಗಾಯಿತ್ತು., ಎಂದು ಅಂದಿರುವದನ್ನು ನೋಡಿದರೆ ಎಮ್ಮ ಈಗಿನ ಕರುಣ ಪ್ರಸಾದಕ್ಕೂ ಅಕ್ಕನ ಕರುಣ ಪ್ರಸಾದಕ್ಕೂ ಮಹದಂತರವಾಯಿತು. ಯಾಕಂದರೆ ಕರುಣ ಪ್ರಸಾದವನ್ನು ತೆಗೆದುಕೊಳ್ಳುವದಕ್ಕೆ ಏನನ್ನುತ್ತಾರೆಂದರೆ ಪಡೆದುಕೊಳ್ಳುವದು ಅನ್ನುವದಿಲ್ಲವೆ? ಅಂದಮೇಲೆ, ಮೇಲೆ ವರ್ಣಿಸಿದ ಮಹಾನುಭಾವಿಗಳಲ್ಲಿರುವ ಜ್ಞಾನವನ್ನು ಪಡೆದುಕೊಂಡೆನೆಂದು ಅಕ್ಕನು ಘಂಟಾಘೋಷವಾಗಿ ನುಡಿದಿರುವಳು ತಾಯಿಗಳೇ ನಾವಾದರೂ ಅಕ್ಕನವರಂತೆ ಮಹಾನುಭಾವಿಗಳ ಜ್ಞಾನವನ್ನು ಪಡೆದುಕೊಳ್ಳುವಾ ಅಂದರೆ ನಮ್ಮ ಆತ್ಮೋನ್ನತಿಯಾಗಿ ಅಂಗವು ಲಿಂಗವಾಗುವದು. ಶಿವನ ಕಾರುಣ್ಯವನ್ನು ಪಡೆದಂತವರಿಗೆ ಪಡದಪ್ಪಗಳೆಂದಿರುವರು. ಇಂಥ ಪಡೆದಪ್ಪಗಳಿಂದ ನಾವು ಪಡೆಯತಕ್ಕದ್ದು ಪಡೆಯದಂಥವರಿಂದ ಪಡೆದುಕೊಳ್ಳುವದೇನು.? ನೀವೇ ವಿಚಾರಮಾಡಿರಿ. ಈ

ರೀತಿಯು ಸಮಾಜದಲ್ಲಿ ಬೇರೂರಿ ಲಿಂಗಮಾರ್ಗವು ಭಂಗವಾಗಲಿಕ್ಕೆ ಹತ್ತಿದೆ. ಈ ಶಿವಜ್ಞಾನವನ್ನು ಪಡೆದಂಥ ಮಹಾತ್ಮಗೆ ಹಿರಿದು ಕಿರಿದು ಎಂಬ ಭೇದಭಾವನೆಯು ಎಂದಿಗೂ ಕಾಣಲಾರದೆಂಬುದಕ್ಕೆ ಪ್ರಭುವಿನ ವಚನವೇ ಸಾಕ್ಷಿ.

"ಆದಿ ಅನಾದಿ ಶಕ್ತಿ ಎಂಬರು ಆದನಾರು ಬಲ್ಲರಯ್ಯಾ ಆದಿ ಅಂದರೆ ಗುರುಹಿಂಗೆ ಬಂದಿತ್ತು ಅನಾದಿ ಎಂದರೆ ನಾವಕ್ಕೆ ಬಂದಿತ್ತು ಆದಿ ಇಲ್ಲ ಅನಾದಿ ಅಲ್ಲ ನಾದುವಿಲ್ಲ ಶೀಮೆ ಇಲ್ಲ. ನಿಜಶಕ್ತಿ ಚಿಚ್ಛಕ್ತಿಯಾಗಿತ್ತು ನೋಡಾ ಅಂತರಂಗದ ಪ್ರಭೆ ಬಹಿರಂಗವೆಲ್ಲ ತಾನೇ ಆಗಿ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬ ಕಾಣಾ ಚನ್ನಬಸವಣ್ಣ ಎಂದು ಪ್ರಭುಗಳು ಹಾಡಿಕೊಂಡಿರುದವನ್ನು ಚನ್ನಾಗಿ ನೋಡಿರಿ. ಇದೇ ನಿಜವಾದ ಶಿವಶರಣ ಅನುಭವವು. ಇಂಥ ಅನುಭಾವಿಗಳಿಂದ ಅನುಭಾವವನ್ನು ನಾವು ಪಡೆದುಕೊಳ್ಳತಕ್ಕದ್ದೆಂದು ಇನ್ನೊಮ್ಮೆ ಇಲ್ಲಿ ಒತ್ತಿ ಹೇಳದಿರಲಾರೆನು.

ಒಳಗೆ ತೊಳೆಯಲರಿಯದೆ ಹೊರಗೆ ತೊಳೆತೊಳೆದು ಕುಡಿಯುತ್ತಿದ್ದಾರೆ ಪಾದೋದಕ ಪ್ರಸಾದವ ಬಂದಭವದಲ್ಲಿ ಮುಳುಗುತ್ತಿದ್ದವರಿಗೆ ನಂಬೆನಯ್ಯಾ ಗುಹೇಶ್ವರಾ,,

ಎಂದು ಪ್ರಭುಗಳು ಒಳಗಿನ ಅಜ್ಞಾನ ಅಹಂಕಾರಗಳನ್ನು ಕಳೆದು ಕೊಳ್ಳಿರೆಂದು ಬೋಧಿಸಿರುವರು. ನಾವು ಇಂಥ ಅಜ್ಞಾನಾಹಾಂಕಾರಗಳನ್ನು ತ್ಯಜಿಸಬೇಕಾದರೆ ಮಹಾನುಭಾವಿಗಳ ಸಂಗವೇ ಲೇಸೆಂದು ಹೇಳುವೆ. ಅಧಿಕಾರಿಗಳಲ್ಲದವರು ಅಧಿಕಾರಿಗಳ ವೇಷಹಾಕಿಕೊಂಡಿರುವದರಿಂದ ಅವರಳರಾರು ತಕ್ಕರಾರೆಂಬುವದನ್ನು ಕಂಡು ಹಿಡಿಯುಲು ಬಹು ಕಠಿಣವಾಗಿದೆ.

ಇದರ ಬದಲು ನಿಮ್ಮ ಪತಿಯ ಪಾದಸೇವೆಯನ್ನು ಮಾಡಿ ಪತಿಯ ಅಂತಃಕರಣವನ್ನು ಪಡೆದದ್ದಾದರೆ ನಿಮ್ಮ ಸಂಸಾರವು ಸುಖಮಯವಾಗುವದು ಆದರೆ.

ಸತಿಯು ಪತಿಯನ್ನು ದೇವರೆಂದು ತಿಳಿವಂತೆ ಪತಿಯು ಸತಿಯನ್ನು ದೇವಿಯೆಂದು ತಿಳಿಯಬೇಕೆಂದು ಈರ್ವರಿಗೂ ಬೇಡಿಕೊಳ್ಳುವೆ ಯಾಕಂದರೆ ಒಬ್ಬರು ಅಂತಃಕರಣವಿಟ್ಟು ಬಾಗುವದೂ ಇನ್ನೊಬ್ಬರು ನಿಃಕರು

ಣಿಯಾಗಿ ಬೀಗುವದೆಂದರೆ ಕರುಣರಸವೆಂತು ಚಿಮ್ಮ ಬಹುದು. ಈರ್ವರೂ ಸಮರಸವಾಗಬೇಕೆಂದು ಹೇಳುವೆನು. ಈ ನಡೆಯಿಂದ ಈರ್ವರೂ ನಡೆದದ್ದಾದರೆ ಈ ಜೀವಸಂಸಾರದೊಳಗಿನ ತೆರೆಗಳು ಎಷ್ಟು ದೊಡ್ಡದಾದರೂ ಕ್ಷಣಾರ್ಧದಲ್ಲಿ ಮಾಯವಾಗಿ ಸತಿ ಪತಿಗಳ ಪ್ರೇಮಾದರವು ಹೆಚ್ಚಾಗಿ ಜೀವಸಂಸಾರವೇ ಶಿವಸಂಸಾರವಾಗಿ ಮನೆಯೇ ಮಠವಾಗಿ ಜೀವನೇ ದೇವನಾಗಿ ಇಹಲೋಕವೇ ಸ್ವರ್ಗವಾಗಿ ಪರಿಣಮಿಸುವದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಇದನ್ನೇ ಶಿವಶರಣರು ಜಗತ್ತಿಗೆ ತೋರಿಸಿದ ಕಾರಣ ಅವರ ಸ್ಮರಣಾರ್ಥವಾಗಿ ಮಾಡುವದೇ ಜಯಂತಿಯ ಉದ್ದೇಶವಾಗಿದೆ. ಜಯಂತಿ ಎಂದು ಇಂದು ಕೂಡಿ ಅಗಲುವದಕ್ಕಿಂತ ಮೇಲಿನ ಶರಣರ ಅನುಭಾವವನ್ನು ಆಳವಾಗಿ ವಿಚಾರಿಸಿ ಅದರಂತೆ ನಡೆದುಕೊಳ್ಳಲೆಂದು ಸಕಲರಿಗೂ ಬಿನ್ನವಿಸಿಕೊಳ್ಳುವೆ.

---

## ಟಿಪ್ಪಣಿಗಳು.

**ಬಸವಜಯಂತಿ:**— ಬಸವಜಯಂತಿಯು ಉತ್ಸವವು ಕರ್ನಾಟಕದಲ್ಲೆಲ್ಲ ಈ ವರ್ಷ ಬಹು ವಿಜೃಂಭಣೆಯಿಂದ ಆಚರಿಸಲ್ಪಟ್ಟಿರುವದು ಬಹು ಸಂತೋಷಕರವಾಗಿರುತ್ತದೆ. ಈ ಜಯಂತಿಯನ್ನು ಆಚರಿಸದೆ ಇದ್ದ ಯಾವ ಮಹತ್ವದ ಪಟ್ಟಣವೂ ಉಳಿದಿರುವದಿಲ್ಲೆಂದು ಹೇಳಬಹುದು. ಇಷ್ಟೇ ಅಲ್ಲ ಸಣ್ಣ ಸಣ್ಣ ಗ್ರಾಮಗಳಲ್ಲಿಯೂ ಕೂಡ ಇದು ಆಚರಿಸಲ್ಪಡುತ್ತಲಿದೆ. ಜಯಂತಿಯ ಸಭಾಕಾಲಗಳಲ್ಲಿ ಶಿವಶರಣರ ಉದಾತ್ತ ವಿಚಾರಗಳು ಉಪನ್ಯಾಸಕರಿಂದ ಜನತೆಯ ಲಕ್ಷಕ್ಕೆ ತರಲ್ಪಟ್ಟಿರುತ್ತವೆ. ಒಂದು ಕಾಲದಲ್ಲಿ ಅತ್ಯಂತ ಅಕುಂಚಿತ ವಿಚಾರಗಳು ವೀರಶೈವ ಸಮಾಜದಲ್ಲೆಲ್ಲ ಪಸರಿಸಲ್ಪಡುತ್ತಲಿದ್ದವು. ವೀರಶೈವ ಧರ್ಮದಲ್ಲಿ ಜಾತಿಭೇದಕ್ಕೆ ಮಾನ್ಯತೆ ಇದೆ, ಅದು ಚಾತುರ್ವರ್ಣಗಳನ್ನು ಅಂಗೀಕರಿಸುತ್ತದೆ, ಇವೇ ಮೊದಲಾದ ಅಭಿಪ್ರಾಯಗಳು ನೆಲೆಗೊಳ್ಳಹತ್ತಿದ್ದವು. ಆದರೆ ಶಿವಶರಣರ ಉಚ್ಚವಿಚಾರಗಳನ್ನು ಪ್ರಕಟಮಾಡುವ ಕಾರ್ಯವನ್ನು ಶಿವಾನುಭವ ಪತ್ರಿಕೆಯು ಸುಮಾರು ೧೬ ವರ್ಷಗಳ ಹಿಂದೆ ಮೊದಲು ಪ್ರಾರಂಭಮಾಡಿತು. ಅಂದಿನಿಂದ ವಚನವಾಙ್ಮಯವು ದೇಶದಲ್ಲಿ ಬೆಳಕಿಗೆ ಬರಹತ್ತಿತು. ಪ್ರಾರಂಭದಲ್ಲಿ ಪತ್ರಿಕೆಯ ಕಾರ್ಯದಲ್ಲಿ ಅನೇಕ

ತೊಂದರೆಗಳು ಉಪಸ್ಥಿತವಾದವು. ಆದರೆ ಬರಬರುತ್ತ ಈ ಅನಿಷ್ಟ ವಾತಾವರಣವು ದೂರವಾಗಹತ್ತಿತು. ಮುಂದೆ ವಿದ್ವಜ್ಜನರು ಈ ವಾಙ್ಮಯದ ಮಹತ್ವವನ್ನು ಅರಿತುಕೊಂಡು ಅದರ ವಿಷಯವಾಗಿ ಉಪನ್ಯಾಸಮಾಡಹತ್ತಿದರು. ವಿಶ್ವವಿದ್ಯಾಲಯದಲ್ಲಿ ಮತ್ತು ಪಠ್ಯ ಪುಸ್ತಕಗಳಲ್ಲಿ ಅದು ಸೇರ್ಪಡೆಯಾಗಹತ್ತಿತು. ಪತ್ರಿಕೆಗಳಲ್ಲಿ ಅನೇಕ ವಿಮರ್ಶಾತ್ಮಕ ಲೇಖಗಳು ಬರೆಯಲ್ಪಡಹತ್ತಿದವು ಹಾಗೂ ಅನೇಕ ಗ್ರಂಥಗಳು ರಚಿಸಲ್ಪಟ್ಟವು. ಈ ಪ್ರಕಾರ ಜನತೆಯ ದೃಷ್ಟಿಗೆ ಈ ವಾಙ್ಮಯವು ಬೀಳಹತ್ತಿತು. ಈಗ ಬಸವನ ವಿಚಾರಗಳು ದೇಶದಲ್ಲೆಲ್ಲ ತಾವಾಗಿಯೇ ಪ್ರಸಾರ ಹೊಂದಹತ್ತಿವೆ. ಇವುಗಳ ಮೂಲಕ ಸಮಾಜದಲ್ಲೆಲ್ಲ ಒಂದು ಕ್ರಾಂತಿಯೇ ಉಂಟಾಗುವ ಪರಿಸ್ಥಿತಿಯು ಪ್ರಾಪ್ತವಾಗಿದೆ. ಇದು ಒಂದು ಜೀವಂತ ವಾಙ್ಮಯದ ಲಕ್ಷಣವು. ಈಚಿಗೆ ಗ್ರಾಮಗಳಲ್ಲೆಲ್ಲ ಜನರು ವಿಶೇಷ ಹಣವನ್ನು ಶೇಖರಿಸಿಕೊಂಡು ಜಯಂತಿಯನ್ನು ಬಹು ವಿಜೃಂಭಣೆಯಿಂದ ಆಚರಿಸುತ್ತಲಿದ್ದಾರೆ. ಇದು ಯಾವ ಶಿವಾನುಭವಿಯ ಹೃದಯಕ್ಕೆ ಆನಂದವನ್ನೀಯಲಿಕ್ಕಿಲ್ಲ? ಈಚೆಗೆ ವಚನ ಗಾಯನವು ಜನತೆಯಲ್ಲಿ ಪ್ರಸಾರವಾಗುತ್ತ ನಡೆದದೆ. ಇದಾದರೂ ಶುಭಚಿನ್ಹವಾಗದೆ. ಈ ಕಾರ್ಯವು ಮೊದಲು ಪ್ರಾರಂಭವಾದುದು ಶಿವಾನುಭವ ಪತ್ರಿಕೆಯ ಮೂಲಕವೇ ಇರುತ್ತದೆ. ವಿಜಾಪುರದಲ್ಲಿಯ ಶ್ರೀ ಸಿದ್ಧೇಶ್ವರ ಹೈಸ್ಕೂಲಿನಲ್ಲಿ ವಚನ ಗಾಯನವನ್ನು ಕಲಿಸುವ ಏರ್ಪಾಡು ಮಾಡಲ್ಪಟ್ಟಿತು. ಅಲ್ಲಿಯ ಗಾಯನ ಶಿಕ್ಷಕರಾದ ರಾ॥ ಪಾಟೀಲ ಇವರು ಈ ಗಾಯನವನ್ನು ಶಾಲಾವಿದ್ಯಾರ್ಥಿಗಳಲ್ಲಿ ಪ್ರಾರಂಭಿಸಿದರು. ಅದು ಈಗ ದಾವಣಗೆರೆ, ಬೆಂಗಳೂರು, ಗದಗ ಮೊದಲಾದ ಸ್ಥಳಗಳಲ್ಲೆಲ್ಲ ಬಹಳ ಪ್ರಸಾರ ಹೊಂದಹತ್ತಿದೆ. ವಚನಗಳನ್ನು ಗದ್ಯದಲ್ಲಿ ಹೇಗಾದರೂ ಅನ್ನುವದರಕಿಂತಲೂ ಅದನ್ನು ಗಾಯನ ರೂಪದಲ್ಲಿ ಅನ್ನುವದು ಹೆಚ್ಚಿಗೆ ಪರಿಣಾಮಕಾರಿಯಾಗುತ್ತದೆ. ಆದರೆ ಇದರಲ್ಲಿ ಗಾಯಕರು ವಚನಗಳ ಅರ್ಥವನ್ನು ಸ್ಫುಟವಾಗಿ ತಿಳಿಸುವ ಉದ್ದೇಶವನ್ನು ಇಟ್ಟುಕೊಳ್ಳಬೇಕೇ ಹೊರ್ತು ತಮ್ಮ ಹಾಡುಗಾರಿಕೆಯನ್ನು ಪ್ರಕಟ ಪಡಿಸುವ ಉದ್ದೇಶವನ್ನು ಇಟ್ಟುಕೊಳ್ಳಬಾರದೆಂದು ನಮ್ಮ ಸಲಹೆ ಇದೆ. ಈ ಪ್ರಕಾರ ಶಿವಶರಣರ ಉಚ್ಚ ವಿಚಾರಗಳು ಈಗ ಜನತೆಯಲ್ಲಿ ಪ್ರಸಾರಹೊಂದ ಹತ್ತಿರುವದು ಕರ್ನಾಟಕದಲ್ಲಿ ನಡೆದ ಮಹತ್ವದ ಕಾರ್ಯಗಳಲ್ಲಿ ಒಂದಾಗಿದೆಂಬುದು ನಿರ್ವಿವಾದವು.

**ಶಿವಾನುಭವ ಸಂಘಗಳು:—** ಬಸವ ಜಯಂತಿ ಮತ್ತು ಬೇರೆ ಮಹಾಪುರುಷರ ಜಯಂತಿ ಇವುಗಳಲ್ಲಿ ಮಹದಂತರವಿದೆ. ಬಸವನು ಕೆಲವೊಂದು ಸಂಸ್ಕೃತಿಯನ್ನು ಕರ್ನಾಟಕದಲ್ಲಿ ಉಂಟುಮಾಡಿದ್ದಾನೆ. ಮತ್ತು ಅದನ್ನು ಈಗಿನ ವೀರಶೈವರು ಒಪ್ಪಿಕೊಂಡಿದ್ದಾರೆ ಆದರೆ ಬಸವ ಜಯಂತಿಯ ದಿನ ಬಸವನ ಸಂಸ್ಕೃತಿಯನ್ನು ಹೀಗೆ ಒಪ್ಪಿಕೊಂಡಮಾತ್ರದಲ್ಲಿ ಅವನ ಈ ಜಯಂತಿಯನ್ನು ನೆರದೇರಿಸಿದ ಉದ್ದೇಶವು ಕೊನೆಗಂಡಂತಾಗಲಿಲ್ಲ. ಆ ಸಂಸ್ಕೃತಿಯನ್ನು ತಮ್ಮ ನಡೆಯಲ್ಲಿ ತೋರ್ಪಡಿಸುವ ಇನ್ನೊಂದು ಜವಾಬುದಾರಿಯು ವೀರಶೈವರಲ್ಲಿ ಉತ್ಪನ್ನವಾಗುತ್ತದೆ. ಹೀಗೆಯೇ ಶಿವಾಜಿಮಹಾರಾಜ, ಲಿಂಗರಾಜ ಶಿರಸಂಗೀ, ಅಪ್ಪಾಸಾಹೇಬ ವಾರದ ಇವರೇ ಮೊದಲಾದವರ ಜಯಂತಿಗಳನ್ನು ಆಚರಿಸುವದು ಟು. ಆದರೆ ಅವರಲ್ಲಿದ್ದಂಥ ಶೌರ್ಯಗುಣ ಅಥವಾ ಶ್ರೀಮಂತಿಕೆ ಎಲ್ಲರಲ್ಲಿ ಇರುವದಿಲ್ಲ. ಆದರೆ ಬಸವನಲ್ಲಿರುವಂಥ ವಿಶ್ವಬಂಧುತ್ವಭಾವ, ಭಕ್ತಿ, ನೈತಿಕ ಉಚ್ಚ ವರ್ತನೆ, ಇವುಗಳನ್ನು ಪ್ರತಿಯೊಬ್ಬ ವ್ಯಕ್ತಿಯು ತನ್ನಲ್ಲಿ ಉಂಟುಮಾಡಿಕೊಳ್ಳಬಹುದಾಗಿದೆ. ಇದು ಪ್ರತಿಯೊಬ್ಬನಿಗೆ ಶಕ್ಯವಿದೆ. ಇಂಥ ಕಾರ್ಯಕ್ಕೆ ಎಲ್ಲ ವೀರಶೈವರೂ ಮುಂದುವರಿಯಬೇಕು. ಈ ಕಾರ್ಯವನ್ನು ಮಾಡುವದಕ್ಕೋಸ್ಕರವೇ ಹಿಂದಿನ ಕಾಲದಲ್ಲಿ ಬಸವಾದಿ ಪ್ರಮಥರು ತಮ್ಮ 'ಶಿವಾನುಭವ ಮಂಟಪ'ದ ಯೋಜನೆಯನ್ನು ಮಾಡಿದರು ಅದನ್ನು ನಾವು ಈಗಿನ ಭಾಷೆಯಲ್ಲಿ ಕೆಲವೊಂದು ಸಂಘ, ಸಂಸ್ಥೆ, ಮಂಡಳ ಎಂದು ಕರೆಯಬಹುದು. ಅಂದರೆ ಕೆಲವು ಸಿಕ್ಷಿತ ಜನರು ಕೂಡಿಕೊಂಡು ಹೇಗೆ ಈಗ ಕಾರ್ಯಮಾಡುತ್ತಿರೋ ಹಾಗೆ ಬಸವೇಶ್ವರನ ಕಾಲದಲ್ಲಿ ಕೆಲವು ಶಿವಶರಣರು ಕೂಡಿಕೊಂಡು ಧರ್ಮೋದ್ಧಾರ ಕಾರ್ಯ ಮಾಡಿದ್ದಾರೆ "ಶಿವಾನುಭವ ಸಂಘ" ಅಥವಾ "ಶಿವಾನುಭವ ಮಂಟಪ" ಈ ಹೆಸರುಗಳು ಹಳೆಯದಾಗಿ ನಮಗೆ ತೋರಿದರೂ, ಅದರಲ್ಲಿರುವ ವಿಚಾರಗಳು ಆಧುನಿಕವಾಗಿವೆಂದು ನಾವು ಹೇಳಬಹುದು. ಆದರಿಂದ ಬಸವ ಜಯಂತಿಯ ಉತ್ಸವಗಳು ಮುಗಿದ ಬಳಿಕ ಗ್ರಾಮದಲ್ಲಿಯ ಕೆಲವು ಜನರು ಕೂಡಿಕೊಂಡು ಬಸವಾದಿ ಪ್ರಮಥರ ಉಕ್ತಿಗಳನ್ನು ಓದುವ ಕ್ರಮವನ್ನು ಇಟ್ಟುಕೊಳ್ಳಬೇಕು. ಆರ್ಯಸಮಾಜದಲ್ಲಿ ದಯಾನಂದ ಸರಸ್ವತಿಯವರು ನಿರ್ಮಿಸಿದ 'ತತ್ತ್ವಾರ್ಥಪ್ರಕಾಶ' ಎಂಬ ಗ್ರಂಥವಿದೆಯಷ್ಟೇ. ಆದರೆ ಅದನ್ನು ಓದುವ ಇಚ್ಛೆಯುಳ್ಳ ಜನರ ಕೇಂದ್ರಗಳು ದೇಶಮಧ್ಯದಲ್ಲಿ ಬಹಳ ಪಸರಿಸಿರುತ್ತವೆ. ಹಾಗೆಯೇ ಶಿವಾನುಭವ

ಸಂಘಗಳ ಕೇಂದ್ರಗಳು ದೇಶದಲ್ಲೆಲ್ಲ ಪಸರಿಸಬೇಕು. ಆರ್ಯಸಮಾಜದಲ್ಲಿ ತತ್ತ್ವಾರ್ಥಪ್ರಕಾಶದ ತಿರುಳನ್ನು ಬೋಧಿಸುವಂಥ ಬೋಧಕರ ಸಂಖ್ಯೆಯು ಬಹು ದೊಡ್ಡದಿದೆ. ಅವರಿಗೋಸ್ಕರ ಶಿಕ್ಷಣಾಲಯಗಳೂ ಸ್ಥಾಪಿಸಲ್ಪಟ್ಟಿವೆ. ಇವುಗಳಲ್ಲಿ ಉಚ್ಚ ಶಿಕ್ಷಣ ಕೊಡುವ ವ್ಯವಸ್ಥೆಯೂ ಇದೆ. ಆರ್ಯಸಮಾಜದ ವಿಚಾರಗಳನ್ನು ನಿರೂಪಿಸುವ ಗ್ರಂಥಗಳಂತೂ ಹೇರಳವಾಗಿರುತ್ತವೆ. ಬಾಲಕರಿಗೋಸ್ಕರ ಸುಲಭವಾದ ಗ್ರಂಥಗಳಿವೆ. ವಿದ್ವಜ್ಜನರಿಗೂ ಉಪಯುಕ್ತವಾಗುವ ಗ್ರಂಥಗಳು ಇವೆ. ಈ ರೀತಿ ಈ ಸಮಾಜದವರು ತಮ್ಮ ವಿಚಾರಗಳನ್ನು ಪ್ರಸಾರ ಮಾಡಿ ದೊಡ್ಡ ದೊಡ್ಡ ಕಾಲೇಜಗಳನ್ನೂ ಹೈಸ್ಕೂಲಗಳನ್ನೂ ಸ್ಥಾಪಿಸುವಷ್ಟು ಸಾಮರ್ಥ್ಯವನ್ನು ತಂದುಕೊಂಡಿದ್ದಾರೆ. ಕೆಲವು ದಿವಸಗಳ ಹಿಂದೆ ಅವರು ನಿಜಾಮ ಸಂಸ್ಥಾನದಲ್ಲಿ ಎಂಥ ಶ್ರೇಷ್ಠತರದ ಕಾರ್ಯಮಾಡಿದರೆಂಬದು ಎಲ್ಲರಿಗೂ ತಿಳಿದದ್ದದೆ. ಈ ಕ್ರಮವನ್ನು ವೀರಶೈವರು ಅನುಸರಿಸುವ ಕಾಲವು ಈಗ ಬಂದಿದೆ. ಆದ್ದರಿಂದ ಪ್ರತಿಯೊಂದು ಗ್ರಾಮದಲ್ಲಿ ಶಿವಾನುಭವ ಸಂಘಗಳ ಏರ್ಪಾಡು ಆಗಬೇಕು. ಅವುಗಳಲ್ಲಿ ಬಸವಾದಿ ಪ್ರಮಥರ ವಿಚಾರಗಳ ನಿರೂಪಣೆಗಳು ಯಾವಾಗಲೂ ನಡೆಯಬೇಕು. ಈ ಕಾರ್ಯಕ್ಕೆ ಎಷ್ಟು ಮಾತ್ರವಾದರೂ ವೆಚ್ಚವು ಬೇಕಾಗಿಲ್ಲ. ಮುಖ್ಯವಾಗಿ ಮನಸ್ಸು ಬೇಕು. ಈ ಪ್ರಕಾರ ಸಮಾಜದಲ್ಲಿ ತಳಹದಿಯನ್ನು ಸಿದ್ಧಪಡಿಸಿದಲ್ಲಿ ಮುಂದಿನ ಕಾರ್ಯವು ಬಹು ಸುಲಭವಾದುದು. ಆದರೆ ಈಚೆಗೆ ಕೆಲವರು ಕಾಂಗ್ರೆಸ್ಸಿನ ಪದ್ಧತಿಯನ್ನು ಅನುಸರಿಸಿ ಇಂಥ ಸಂಸ್ಥೆಗಳನ್ನೆಲ್ಲ ತಮ್ಮ ಅಂಕಿತದಲ್ಲಿ ತೆಗೆದುಕೊಳ್ಳುವ ಅಭಿಲಾಷೆಯುಳ್ಳವರಾಗಿದ್ದುದು ತೋರಿಬರುತ್ತದೆ. ಆದರೆ ಶಿವಾನುಭವ ಸಂಘಟನೆಯಲ್ಲಿ ಇಂಥ ವೃತ್ತಿಗೆ ಸ್ಥಾನವಿರಲಾರದು. ಅದರಲ್ಲಿ ಕೇವಲ ಆತ್ಮಸುಧಾರಣೆ ಮತ್ತು ಗೃಹಸುಧಾರಣೆ ಈ ವಿಷಯಗಳಿಗೆ ಪ್ರಾಮುಖ್ಯತೆ ಇದೆ. ಇಂಥ ಉಚ್ಚ ಮನೆತನಗಳ ಸಮೂಹಗಳೇ ಶಿವಾನುಭವ ಸಂಘಗಳ ಕಾರ್ಯಗಳನ್ನು ಚನ್ನಾಗಿ ಮಾಡಬಲ್ಲವು. ಈ ಸಂಗತಿಯನ್ನು ಶಿವಾನುಭವ ಸಂಘಗಳ ಚಾಲಕರು ಅವಶ್ಯವಾಗಿ ಗಮನಿಸಿ ತಮ್ಮ ಕಾರ್ಯಗಳನ್ನು ಎಡೆಬಿಡದೆ ನಡಿಸಬೇಕೆಂದು ನಮ್ಮ ಸೂಚನೆ ಇದೆ.

---

ಪ್ರಸಾದಮೂಲಕವಾಗಿಯೇ ಭಕ್ತನು ಯಾವಾಗಲೂ ಆಚರಿಸುತ್ತಿರಬೇಕು. ಇದು ಮಿಶ್ರಾರ್ಪಣದಲ್ಲಿ ವರ್ಣಿಸಲ್ಪಟ್ಟಿದೆ. ಹಾಗೆಯೇ ನಿತ್ಯದ ಲಿಂಗ ಪೂಜೆಯ ಆಚರಣೆಯಲ್ಲಿಯೂ ಕೂಡ ಈ ತತ್ವಗಳನ್ನಿಟ್ಟುಕೊಳ್ಳಬೇಕು. ಈ ಅರ್ಪಣದ ಮುಖ್ಯ ಆಚರಣೆಯು ಇಷ್ಟಲಿಂಗದ ಆವ ಆವ ಭಾಗಗಳಿಗೆ ಸಂಬಂಧಿಸಿದೆಂಬುದನ್ನು ಅರಿತುಕೊಳ್ಳಬೇಕು. ಈ ಸಂಬಂಧವನ್ನು ಮಂತ್ರಮೂಲಕ ಮಾಡಿಕೊಳ್ಳತಕ್ಕದ್ದು. ಈ ವಿವರ ಹೇಗೆಂದರೆ— (೧) ಆಚಾರಲಿಂಗಕ್ಕೆ ಭೋಜ್ಯ, ಬೋನವೆಂಬ ಪದಾರ್ಥ, ಗಂಧವೆಂಬ ದ್ರವ್ಯ, ಕಠಿಣತೆ, ಪೃಥ್ವೀ ತತ್ವವಿದ್ದು ಓಂ ಹ್ರಾಂ ಮಂತ್ರದಿಂದ ಇಷ್ಟಲಿಂಗದ ಸಂಬಂಧ ಮಾಡತಕ್ಕದ್ದು. (೨) ಗುರುಲಿಂಗಕ್ಕೆ ಪಾನ್ಯ, ಉದಕ ಪದಾರ್ಥ, ಮೃದುತ್ವ ದ್ರವ್ಯ, ಅಪ್ಪು ತತ್ವವಿದ್ದು, ಓಂ ಹ್ರೀಂ ಮಂತ್ರದಿಂದ ಇಷ್ಟಲಿಂಗದ ಕಟಿಯಲ್ಲಿ ಸಂಬಂಧಿಸತಕ್ಕದ್ದು. (೩) ಶಿವಲಿಂಗಕ್ಕೆ ಭಕ್ಷ್ಯ, ರೂಪ ಪದಾರ್ಥ, ಉಷ್ಣತೆ ದ್ರವ್ಯ, ಅಗ್ನಿ ತತ್ವವಿದ್ದು ಓಂ ಹ್ರೂಂ ಮಂತ್ರದಿಂದ ಇಷ್ಟಲಿಂಗದ ವೃತ್ತಕ್ಕೆ ಸಂಬಂಧಿಸತಕ್ಕದ್ದು. (೪) ಜಂಗಮಲಿಂಗಕ್ಕೆ ಚೋಹ್ಯ, ಸ್ಪರ್ಶನ ಪದಾರ್ಥ, ಮಿಶ್ರದ್ರವ್ಯ ವಾಯುತತ್ವವಿದ್ದು ಓಂ, ಹ್ರೈಂ ಮಂತ್ರದಿಂದ ಇಷ್ಟ ಲಿಂಗದ ಗೋಮುಖಕ್ಕೆ ಸಂಬಂಧಿಸತಕ್ಕದ್ದು. (೫) ಪ್ರಸಾದಲಿಂಗಕ್ಕೆ ಲೇಹ್ಯ, ಶಬ್ದ ಪದಾರ್ಥ, ಮಿಶ್ರಸ್ಪರ್ಶನ, ಆಕಾಶತತ್ವವಿದ್ದು ಓಂ, ಹ್ರೌಂ ಮಂತ್ರದಿಂದ ಇಷ್ಟಲಿಂಗದ ನಾಳಕ್ಕೆ ಸಂಬಂಧಿಸತಕ್ಕದ್ದು. (೬) ಮಹಾಲಿಂಗಕ್ಕೆ ಇರವಿಲ್ಲದ ಅರಿವು. ಭೋಜ್ಯಾದಿ ಐದು ಪದಾರ್ಥವೆಂದರಿವು, ಓಂ, ಹ್ರಃ ಮಂತ್ರದಿಂದ ಇಷ್ಟಲಿಂಗದ ಗೋಳಕಕ್ಕೆ ಸಂಬಂಧಿಸತಕ್ಕದ್ದು.

(೧೬೨) ಏಕಾದಶ ಪ್ರಸಾದಗಳು:— ಏಕಾದಶ ಪ್ರಸಾದಗಳಲ್ಲಿ ವೀರಶೈವನ ಪ್ರಗತಿಗೆ ಸಂಬಂಧಿಸಿದ ಎಲ್ಲ ಆಚರಣೆಗಳು ಅಡಕವಾಗಿರುತ್ತವೆ. ಆಚರಣೆಯು ಬೇರೆ ಬೇರೆ ದೃಷ್ಟಿಯಿಂದ ಅವುಗಳ ವರ್ಣನೆಯನ್ನು ವಚನಕಾರರು ಅನೇಕ ಬಗೆಯಾಗಿ ಮಾಡುತ್ತಾರೆ. ಆದರೆ ಅವೆಲ್ಲವೂ ಮೂಲದಲ್ಲಿ ಒಂದೇ ಅರ್ಥವುಳ್ಳವಾಗಿರುತ್ತವೆ. ಆದರೂ ಅವುಗಳಲ್ಲಿ ಅಂತರಂಗಿಕ ಮತ್ತು ಬಾಹ್ಯ ಎಂದು ಎರಡು ವಿಭೇದಗಳನ್ನು ನಾವು ಮಾಡಬಹುದು. ಕೆಲವು ವಚನಗಳಲ್ಲಿ ಇವುಗಳಿಗೆಯೇ ಅನುಕ್ರಮವಾಗಿ ಮಾಹೇಶ್ವರನ ಏಕಾದಶ ಪ್ರಸಾದಗಳು, ಮತ್ತು ಭಕ್ತನ ಏಕಾದಶ ಪ್ರಸಾದಗಳು ಎಂದು ಹೇಳುವದುಂಟು. ಮೊದಲಿನವು ಹೆಚ್ಚಿಗೆ

ತಾತ್ವಿಕವಾಗಿರುತ್ತವೆ. ಈ ಶಬ್ದಗಳಿಗೆ ಅನುಕ್ರಮವಾಗಿ ಮೀರಿದ ಸ್ಥಲಕ್ಕೆ ಸಂಬಂಧಿಸಿದವು, ಮತ್ತು ಮಾರ್ಗಕ್ರಿಯೆಗೆ ಸಂಬಂಧಿಸಿದವು ಎಂತಲೂ ಹೇಳಬಹುದು. ಮೊದಲನೆಯದರಲ್ಲಿ (ಅ) ವಿಧ, (ಬ) ವಿಧ, (ಕ) ವಿಧ, (ಡ) ವಿಧ ಎಂದು ನಾಲ್ಕು ವಿಧಗಳನ್ನು ಮಾಡುತ್ತೇವೆ. ೨ನೇ ವರ್ಗದಲ್ಲಿ ನಾವು ಒಂದೇ ವರ್ಗವನ್ನು ಮಾಡುತ್ತೇವೆ. ಈ ಎರಡಲ್ಲದೆ ಮೂರನೆಯ ವರ್ಗವೂ ಒಂದಿರುತ್ತದೆ. ಅದು ಸಂಪೂರ್ಣ ತಾತ್ವಿಕವು. ನಾವು ಸಂಕ್ಷೇಪವಾಗಿ ಇವುಗಳ ವ್ಯಾಖ್ಯೆಗಳನ್ನು ಆಯಾ ವಚನಕಾರರ ಅಭಿಪ್ರಾಯಗಳ ಪ್ರಕಾರ ವಿವರಿಸುತ್ತೇವೆ.

೧ನೇ ವರ್ಗವು:— ಇದು ತಾತ್ವಿಕವಾದರೂ ಇದನ್ನು ಮೂರು ದೃಷ್ಟಿಯಿಂದ ಹೇಳಬಹುದು. ಅವುಗಳನ್ನು ಮೇಲೆ ಹೇಳಿದಂತೆ (ಅ) ವಿಧ, (ಬ) ವಿಧ, (ಕ) ವಿಧ, (ಡ) ವಿಧ ಎಂದು ಕರೆಯುತ್ತೇವೆ. ಅವು ಯಾವವೆಂದರೆ,

(ಅ) ವಿಧ— (೧) ಶುದ್ಧಪ್ರಸಾದ— ಮಂತ್ರಧ್ಯಾನದಿಂದ ಪದಾರ್ಥದ ಪೂರ್ವಾಶ್ರಯವಳಿದುದೇ ಶುದ್ಧಪ್ರಸಾದವು. (೨) ಸಿದ್ಧ ಪ್ರಸಾದ- ಶುದ್ಧಪ್ರಸಾದವನ್ನು ಲಿಂಗಕ್ಕೆ ನೈವೇದ್ಯ ಮಾಡಲು ಆಗ ಪ್ರಸಾದದ ಕಳೆ ಲಿಂಗದಲ್ಲಿ ನೆಲೆಗೊಳ್ಳುತ್ತದೆ. ಇದು ಸಿದ್ಧಪ್ರಸಾದವು. (೩) ಪ್ರಸಿದ್ಧಪ್ರಸಾದವು:— ಸಿದ್ಧಪ್ರಸಾದವನ್ನು ಜಿಹ್ವೆಯಲ್ಲಿ ಸ್ವೀಕರಿಸುವದು. ಇದು ಜಂಗಮಮುಖವಾದುದೆಂದು ಭಾವಿಸಿ ಹಾಗೆ ಸ್ವೀಕರಿಸಿದಲ್ಲಿ ಪ್ರಸಿದ್ಧಪ್ರಸಾದವು. (೪) ಆಪ್ಯಾಯನ ಪ್ರಸಾದ- ಮೇಲೆ ಹೇಳಿದ ಮೂರು ಪ್ರಸಾದಗಳು ಲಿಂಗಮುಖವಾದವುಗಳೆಂಬ ದೃಢಭಾವವು ನೆಲೆಗೊಳ್ಳಲು ಅದು ಆಪ್ಯಾಯನ ಪ್ರಸಾದವು. (೫) ಸಮಯಪ್ರಸಾದ:— ಈ ಪ್ರಸಾದದ ಸೇವನಾ ಕಾಲದಲ್ಲಿ ಇತರ ಪದಾರ್ಥಗಳಿಗೆ ಲಕ್ಷವಿಡದೆ ಅವು ಅನರ್ಪಿತವೆಂದು ತಿಳಿಯುವದು ಸಮಯಪ್ರಸಾದವು. (೬) ಪಂಚೇಂದ್ರಿಯ ವಿರಹಿತಪ್ರಸಾದ:— ಈ ಪ್ರಸಾದ ಸೇವನೆಯಲ್ಲಿ ಪಂಚೇಂದ್ರಿಯಗಳು ಮುಟ್ಟಿದ ಮುನ್ನವೇ ಅವುಗಳನ್ನು ಸೇವಿಸುವದು ಇದು ಇರುತ್ತದೆ. (೭) ಅಂತಃಕರಣ ಚತುಷ್ಟಯ ವಿರಹಿತಪ್ರಸಾದ:— ಅಂಗದ ಕರಣಗಳಿಗೆ ದೂರನಾಗಿ ಪ್ರಸಾದ ಸೇವಿಸುವದು (೮) ಪ್ರಸಾದಿಯ ಪ್ರಸಾದ— ಪ್ರಸಾದಿಯು ಪ್ರಸಾದವನ್ನು ಜಂಗಮಕ್ಕೆ ಕೊಟ್ಟು ಸಮರಸಭೋಗಮಾಡುವದು. (೯) ಸದ್ಭಾವಪ್ರಸಾದ— ಪ್ರಸಾದವನ್ನು ಸದ್ಭಾವದಿಂದ ಸೇವಿ

ಪುವವೇ ಸದ್ಭಾವಪ್ರಸಾದವು. (೧೦) ಸಮತಾ ಪ್ರಸಾದಃ- ಪಸಿವು ಅಡಗಿ ಶಾಂತಿಸ್ಥೈರಣೆಯಿಂದಾಗುವವೇ ಸಮತಾ ಪ್ರಸಾದವು. (೧೧) ಜ್ಞಾನ ಪ್ರಸಾದ-- ಸಮತಾಪ್ರಸಾದದಲ್ಲಿ ತೃಪ್ತಿಯನ್ನು ಹೊಂದಿ ಕ್ರಿಯಾ ಖಂಡಿತ ಮಾಡುವಲ್ಲಿ ಅಖಂಡಪರಿಪೂರ್ಣಪ್ರಸಾದಿಯಾಗಿರುವದು. ಇದೇ ಜ್ಞಾನ ಪ್ರಸಾದವು.

(ಬ) ವಿಧ- (೧) ಶುದ್ಧಪ್ರಸಾದ- ದೀಕ್ಷೆಯಿಂದ ತನುವನ್ನು ಶುದ್ಧಪಡಿಸಿದಲ್ಲಿ ಅದು ಶುದ್ಧಪ್ರಸಾದವು. (೨) ಸಿದ್ಧಪ್ರಸಾದವು- ಇಷ್ಟ ಲಿಂಗಧಾರಣಮಾಡಿಕೊಂಡು ಮಂತ್ರಸ್ವರೂಪವನ್ನು ನೆನೆವುತ್ತಿರಲು ನೆನೆವ ಮನಸ್ಸಿನಲ್ಲಿ ಮಂತ್ರವು ಸಿದ್ಧಿಸಲು ಆ ಮನವೇ ಸಿದ್ಧಪ್ರಸಾದವು. (೩) ಪ್ರಸಿದ್ಧಪ್ರಸಾದವು ತನುವು ಶುದ್ಧಪ್ರಸಾದ ಮತ್ತು ಮನವು ಸಿದ್ಧಪ್ರ ಸಾದವಾಯಿತ್ತೆಂಬ ಭಾವನೆಯೇ ಪ್ರಸಿದ್ಧಪ್ರಸಾದವು. (೪) ಆಪ್ಯಾಯನ ಪ್ರಸಾದ-- ಈ ಮೂರಕ್ಕೆ ಮೂಲವಾದುದು ಆತ್ಮ. ಅದರಲ್ಲಿ ಪ್ರಸಾ ದವು ವೇಧಿಸಲು ಅದು ಆಪ್ಯಾಯನ ಪ್ರಸಾದವು. (೫) ಸಮಯಪ್ರಸಾದ— ಈ ವಿಧವು ಇತರ ಸಮಾಜದವರಿಗೆ ಸಮನಿಸಲಾರದು. ಆದರೆ ಶರಣ ರಿಗೆ ಮಾತ್ರ ಸಮನಿಸುತ್ತವೆಂಬ ತಿಳವಳಿಕೆಯು ಸಮಯ ಪ್ರಸಾದವು. (೬) ಪಂಚೇಂದ್ರಿಯವಿರಹಿತ ಪ್ರಸಾದ—ಪಂಚೇಂದ್ರಿಯಗಳಲ್ಲಿ ಪಂಚ ಪ್ರಸಾದವನ್ನು ಸಂಬಂಧಿಸಿಕೊಂಡು ಪಂಚವಿಷಯರಹಿತನಾಗಿರುವದು ಪಂಚೇಂದ್ರಿಯವಿರಹಿತ ಪ್ರಸಾದವು. (೭) ಅಂತಃಕರಣ ಚತುಷ್ಟಯವಿರ ಹಿತ ಪ್ರಸಾದವು— ಇದು ಅಂಗಕರಣಗಳು ಲಿಂಗಕರಣಗಳಾಗಿರುವದು ಇದೆ. (೮) ಪ್ರಸಾದಿಯ ಪ್ರಸಾದ— ಸರ್ವಾಂಗವು ಲಿಂಗಮಯವಾಗಿ ಲಿಂಗಭೋಗೋಪಭೋಗಿಯಾಗಿರುವದು ಪ್ರಸಾದಿಯ ಪ್ರಸಾದ. (೯) ಸದ್ಭಾವ ಪ್ರಸಾದ— ಭಾವದಲ್ಲಿ ಸದ್ಭಾವವುಳ್ಳವನಾಗುವದು ಸದ್ಭಾವ ಪ್ರಸಾದ. (೧೦) ಸಮತಾಪ್ರಸಾದ — ಸದ್ಭಾವಿಯಾಗಿ ಪರರ ನಿಂದೆಗ ಳನ್ನು ಸೈರಿಸುತ್ತ ಸರ್ವರಲ್ಲಿ ಸಮತಾಭಾವಿಯಾಗಿರುವದು ಸಮತಾಪ್ರಸಾ ದವು. (೧೧) ಜ್ಞಾನಪ್ರಸಾದಃ — ಸಮತಾಭಾವವೇ ಅಂಗವಾದ ಶರ ಣನು ಗಾಳಿ ಇಲ್ಲದ ದೀಪದಂತೆ ಸಹಜಸುಜ್ಞಾನದಲ್ಲಿರುವದೇ ಜ್ಞಾನ ಪ್ರಸಾದವು.

(ಕ) ವಿಧವು— (೧) ಗುರುಪ್ರಸಾದ-ಗುರುಮುಖದಿಂದ ಬಂದುದು ಗುರುಪ್ರಸಾದವು. ಇದು ಶುದ್ಧಪ್ರಸಾದವೆಂತಲೂ ಹೇಳಬಹುದು. (೨)

ಲಿಂಗಪ್ರಸಾದ— ಗುರುಪ್ರಸಾದವನ್ನು ಲಿಂಗಕ್ಕೆ ಅರ್ಪಿಸುವದು ಲಿಂಗ ಪ್ರಸಾದವು. ಇದು ಸಿದ್ಧಪ್ರಸಾದವೆಂತಲೂ ಹೇಳಬಹುದು. (೩) ಜಂಗಮ ಪ್ರಸಾದ— ಭೋಜನಕ್ಕೆ ಸಿದ್ಧಪಡಿಸಿ ಲಿಂಗಕ್ಕೆ ಕೊಟ್ಟು ಸಲಿಸುವದೇ ಜಂಗಮಪ್ರಸಾದವು. ಇದು ಪ್ರಸಿದ್ಧ ಪ್ರಸಾದವೆಂತಲೂ ಹೇಳಬಹುದು. (೪) ಆಪ್ಯಾಯನಪ್ರಸಾದ— ಲಿಂಗಾರ್ಪಿತದ ಅಪೇಕ್ಷೆಯಿಂದ ಸಲಿಸುವದೇ ಆಪ್ಯಾಯನಪ್ರಸಾದ (೫) ಸಮಯಪ್ರಸಾದ— ಗುರುಲಿಂಗ ಜಂಗಮ ವನ್ನು ಕುರಿತು ತೆಗೆದುಕೊಂಬುವದು ಸಮಯ ಪ್ರಸಾದವು. (೬) ಪಂಚೇಂದ್ರಿಯವಿರಹಿತ ಪ್ರಸಾದ— ಪಂಚೇಂದ್ರಿಯಗಳಲ್ಲಿ ಪಂಚವಿಷಯ ಪದಾರ್ಥಗಳನ್ನು ಪಂಚವಿಧಲಿಂಗಕ್ಕೆ ಸಮರ್ಪಣೆಮಾಡುವದು ಪಂಚೇಂ ದ್ರಿಯ ವಿರಹಿತಪ್ರಸಾದವು. (೭) ಅಂತಃಕರಣವಿರಹಿತ ಚತುಷ್ಟಯ ಪ್ರಸಾದ— ಅಹಂಕಾರದಲ್ಲಿ ಶಿವಚಿಂತನೆಯುಳ್ಳಾತನಾಗಿ ಸಲಿಸುವದು ಅಂತಃಕರಣವಿರಹಿತ ಪ್ರಸಾದವು. (೮) ಪ್ರಸಾದಿಯ ಪ್ರಸಾದ— ಗುರು ಲಿಂಗಜಂಗಮದ ಪ್ರಸಾದವನ್ನು ಅಪೇಕ್ಷಿಸಿಕೊಂಬುವದೇ ಪ್ರಸಾದಿಯ ಪ್ರಸಾದವು. (೯) ಸದ್ಭಾವ ಪ್ರಸಾದ— ತ್ರಿವಿಧಾಂಗದಲ್ಲಿ ತ್ರಿವಿಧಲಿಂಗ ವನ್ನು ಸಂಬಂಧಿಸಿ ಆ ಲಿಂಗವೇ ತಾನೆಂದರಿದು ಆ ತ್ರಿವಿಧ ಲಿಂಗಕ್ಕೆ ಕೊಡುವದು ಸದ್ಭಾವ ಪ್ರಸಾದವು. (೧೦) ಸಮತಾಪ್ರಸಾದ— ಬಹಿರಂಗ ಪ್ರಪಂಚವನ್ನು ನಷ್ಟಮಾಡಿ ಅರುಪವಿಡಿದು ಸಲಿಸುವದು ಸಮತಾ ಪ್ರಸಾದವು. (೧೧) ಜ್ಞಾನಪ್ರಸಾದ— ಗುರುವಿನ ಪ್ರಸನ್ನತ್ವವೇ ಜ್ಞಾನ ಪ್ರಸಾದವು.

ಇದರಲ್ಲಿ (ಅ) ವಿಧವು ಬಾಹ್ಯ ಶರೀರಕ್ಕೆ ಸಂಬಂಧಪಡುತ್ತದೆ. (ಬ) ವಿಧ ಮತ್ತು (ಕ) ವಿಧಗಳು ಪ್ರಾಣ ಮತ್ತು ಜ್ಞಾನಕ್ಕೆ ಹೆಚ್ಚಿಗೆ ಸಂಬಂಧಪಡುತ್ತವೆ ಮುಖ್ಯವಾಗಿ ಶುದ್ಧ ಸಿದ್ಧ ಪ್ರಸಿದ್ಧ ಪದಾರ್ಥಗಳ ಮೂಲಕ ಗುರುಲಿಂಗ ಜಂಗಮವನ್ನು ಮೊದಲು ಅರಿಯಬೇಕು. ಹೀಗೆ ಅರಿತು ಮುಂದೆ ಹೇಗೆ ಆಚರಿಸಬೇಕೆಂಬುದು ಅವುಗಳ ಮುಂದಿನ ಪ್ರಸಾದಗಳಲ್ಲಿ ಹೇಳಲ್ಪಟ್ಟಿರುತ್ತದೆ. (ಅ) ವಿಧವು ಬಾಹ್ಯ ಆಚರಣೆಗೆ ಸಂಬಂಧವಾದುದು. (ಬ) ಮತ್ತು (ಕ) ವಿಧಗಳು ತಾತ್ವಿಕವಾ ಗಿರುತ್ತವೆ. ಅವುಗಳು ಬೇರೆ ವಿಧಗಳಾಗಿ ವ್ಯಾಖ್ಯೆಗಳಲ್ಲಿ ಕಂಡರೂ ಅವೆ ಲ್ಲವೂ ಒಂದೇ ಇರುತ್ತವೆ. ಆದರೆ ಅವುಗಳಲ್ಲಿ ಮಂತ್ರಗಳನ್ನು ಸಂಬಂಧಿ ಸಬೇಕು. ಅಂದರೆ ಅವುಗಳ ವರ್ತನೆಯು ಶಕ್ಯವು. ಅದು (ಡ) ವಿಧ ದಲ್ಲಿ ಹೇಳಲ್ಪಟ್ಟಿದೆ.

(ಡ) ವಿಧವು: (೧) ಶುದ್ಧಪ್ರಸಾದ— ಇದು ಬಕಾರ ಮಂತ್ರವು. ಇದು ಇಷ್ಟಲಿಂಗರೂಪವಾಗಿ ತ್ಯಾಗಾಂಗದಲ್ಲಿ ಸಂಬಂಧಪಡುತ್ತದೆ. (೨) ಸಿದ್ಧ ಪ್ರಸಾದ— ಇದು ನಕಾರ ಮಂತ್ರವು. ಸಿದ್ಧಪ್ರಸಾದವು. ಇದು ಪ್ರಾಣ ಲಿಂಗವಾಗಿ ಭೋಗಾಂಗದಲ್ಲಿ ಸಂಬಂಧವಾಗಿರುತ್ತದೆ. (೩) ಪ್ರಸಿದ್ಧಪ್ರ ಸಾದ— ವಕಾರ ಮಂತ್ರವು ಪ್ರಸಿದ್ಧಪ್ರಸಾದವು. ಅದು ಭಾವಲಿಂಗವಾಗಿ ಯೋಗಾಂಗದಲ್ಲಿ ಸಂಬಂಧವು. (೪) ಆಪ್ಯಾಯನ ಪ್ರಸಾದ— ಅದು ನಕಾರಮಂತ್ರವು. ಆಚಾರಲಿಂಗವಾಗಿ ಭಕ್ತಾಂಗವಾಗಿರುತ್ತದೆ. (೫) ಸಮ ಯಪ್ರಸಾದ— ಮಕಾರವೇ ಸಮಯಪ್ರಸಾದವು. ಅದು ಗುರುಲಿಂಗ ವಾಗಿ ಮಹೇಶ್ವರನಿಗೆ ಸಂಬಂಧವು. (೬) ಪಂಚೇಂದ್ರಿಯ ವಿರಹಿತ ಪ್ರಸಾದ— ಅದು ಶಿಕಾರವು. ಶಿವಲಿಂಗವಾಗಿ ಪ್ರಸಾದಿಯ ಅಂಗದಲ್ಲಿ ಸಂಬಂಧವು. (೭) ಅಂತಃಕರಣವಿರಹಿತ ಪ್ರಸಾದ— ಅದು ವಕಾರವು. ಅದು ಜಂಗಮಲಿಂಗವಾಗಿ ಪ್ರಾಣಲಿಂಗಿಯ ಅಂಗದಲ್ಲಿ ಸಂಬಂಧವು. (೮) ಪ್ರಸಾದಿಯ ಪ್ರಸಾದವು. ಇದು ಯಕಾರವು. ಅದು ಪ್ರಸಾದ ಲಿಂಗವಾಗಿ ಶರಣನ ಅಂಗದಲ್ಲಿ ಸಂಬಂಧವು. (೯) ಸದ್ಭಾವಪ್ರಸಾದ— ಇದು ಓಂಕಾರವು. ಮಹಾಲಿಂಗವಾಗಿ ಐಕ್ಯನ ಅಂಗದಲ್ಲಿ ಸಂಬಂಧವು. (೧೦) ಸಮತಾಪ್ರಸಾದ— ಇದು ಅಕಾರವು. ನಿಃಕಲಲಿಂಗವಾಗಿ ಸ್ಥೂಲಾಂ ಗದಲ್ಲಿ ಸಂಬಂಧವು. (೧೧) ಜ್ಞಾನಪ್ರಸಾದವು— ಇದು ಉಕಾರವು. ಶೂನ್ಯಲಿಂಗವಾಗಿ ಸೂಕ್ಷ್ಮಾಂಗದಲ್ಲಿ ಸಂಬಂಧವು.

ಹೀಗೆ ಏಕಾದಶ ಪ್ರಸಾದಗಳನ್ನು ಆಚರಿಸಿದಲ್ಲಿ ಮುಂದೆ ಮಕಾ ರವೇ ಚಿತ್ಕಲಾ ಪ್ರಸಾದವಾಗುತ್ತದೆ. ಅದೇ ನಿರಂಜನಲಿಂಗವು. ಅದು ಕಾರಣಾಂಗದಲ್ಲಿ ಸಂಬಂಧವು. ಪ್ರಸಾದವೆಂದರೆ ಕೇವಲ ಭೋಜನವಮಾ ತ್ರವಲ್ಲ. ಶರಣರು ಇದರಲ್ಲಿ ಬಹು ದೀರ್ಘ ವಿಚಾರಗಳನ್ನಿಟ್ಟುಕೊಂ ಡಿದ್ದಾರೆ.

೨ನೆ ವರ್ಗವು.— ಇದು ಮೇಲೆ ಹೇಳಿದಂತೆ ಕೇವಲ ಕ್ರಿಯಾ ರೂಪವಾಗಿದೆ. ಮಾರ್ಗಕ್ರಿಯೆಗೆ ಸಂಬಂಧಪಟ್ಟಿದೆ. ಅದು ಹೇಗೆಂದರೆ—

(ಅ) ವಿಧಃ— (೧) ಗುರುಪ್ರಸಾದ— ಮಂತ್ರವಿಧಾನದಿಂದ ಹಸ್ತ ಸ್ಪರ್ಶ ಮಾಡುವದು ಗುರುಪ್ರಸಾದವು. (೨) ಲಿಂಗಪ್ರಸಾದ— ಲಿಂಗಕ್ಕೆ ಮೂರು ವೇಳೆ ಅರ್ಪಿತವಮಾಡುವದು ಲಿಂಗಪ್ರಸಾದವು. (೩) ಜಂಗಮ ಪ್ರಸಾದ— ಲಿಂಗಪ್ರಸಾದವನ್ನು ಜಿಹ್ವೆಗೆ ಮುಟ್ಟಿಸುವದು ಜಂಗಮ

ಪ್ರಸಾದವು. (೪) ಪ್ರಸಾದಿಯ ಪ್ರಸಾದ— ಜಂಗಮಪ್ರಸಾದವನ್ನು ಹಸ್ತಕ್ಕೆ ತರುವದು ಪ್ರಸಾದಿಯ ಪ್ರಸಾದವು. (೫) ಸಮಯಪ್ರಸಾದ— ಪ್ರಸಾದವನ್ನು ನೀಡುವದೇ ಸಮಯಪ್ರಸಾದವು. (೬) ಭೋಜ್ಯಪ್ರಸಾದ— ಇಂಥ ಪ್ರಸಾದವನ್ನು ಸಮರಸಭಾವದಿಂದ ಸೇವನೆಗೆ ತರುವದು ಭೋಜ್ಯ ಪ್ರಸಾದವು. (೭) ಆಪ್ಯಾಯನ ಪ್ರಸಾದ— ಇಂಥ ಪ್ರಸಾದವನ್ನು ಜಿಹ್ವೆಗೆ ಮುಟ್ಟಿಸುವದು ಆಪ್ಯಾಯನಪ್ರಸಾದವು. (೮) ಭಕ್ಷ್ಯಪ್ರಸಾದ— ಮೇಲ್ಕಂಡ ಪ್ರಸಾದವನ್ನು ದಂತದಿಂದ ಜಗಿಯುವದು ಭಕ್ಷ್ಯಪ್ರಸಾದವು. (೯) ಚೋಹ್ಯ ಪ್ರಸಾದ— ಭಕ್ಷ್ಯಪ್ರಸಾದವನ್ನು ಚಪ್ಪರಿಸುವದು ಚೋಹ್ಯಪ್ರಸಾದವು. (೧೦) ಲೇಹ್ಯಪ್ರಸಾದ— ಮುಂದೆ ಅದನ್ನು ಬಟ್ಟಿಲಖಂಡಿತ ಮಾಡುವದು ಲೇಹ್ಯ ಪ್ರಸಾದವು. (೧೧) ತೃಪ್ತಿಪ್ರಸಾದ— ಮುಂದೆ ಈ ಬಟ್ಟಿಲ ಖಂಡಿತ ಮಾಡಿದ್ದನ್ನು ಜಿಹ್ವೆಯಲ್ಲಿ ಖಂಡಿತಮಾಡುವದು ತೃಪ್ತಿಪ್ರಸಾದವು. ಈ ಪ್ರಸಾದಗಳು ಆಹಾರ ಪದಾರ್ಥಗಳನ್ನು ಅರ್ಪಿಸಿ ಭೋಜನ ಮಾಡುವ ರೀತಿಗಳನ್ನು ಹೇಳುತ್ತವೆ.

ಈ ಬಗೆಯ ಅರ್ಪಣಭಾವದಿಂದ ಮನುಷ್ಯನು ಪರಿಪೂರ್ಣವಾಗಿ ಶೂನ್ಯಸ್ಥಿತಿಯನ್ನು ಹೊಂದುತ್ತಾನೆ. ಇದರ ವಿವರಣೆಯು ಈ ಕೆಳಗೆ ಹೇಳಲ್ಪಟ್ಟಿದೆ. ಇದು ೩ನೆಯ ವರ್ಗವೆಂದು ಭಾವಿಸಿ ಬೇರೆಯಾಗಿ ವಿಂಗಡಿಸಿದ್ದೇವೆ. ಅದು ಹೇಗೆಂದರೆ —

೩ನೇ ವರ್ಗಃ- (೧) ಪ್ರಥಮದಲ್ಲಿ— ಮಹಾದೇವನಿಗೆ ಮನವರ್ಪಿತವು (೨) ದ್ವಿತೀಯದಲ್ಲಿ— ಮಹೇಶ್ವರನಿಗೆ ದೃಢಭಾವವು ಅರ್ಪಿತವು. (೩) ತೃತೀಯದಲ್ಲಿ— ಶಂಕರನಿಗೆ ಸಮಾಧಾನವು ಅರ್ಪಿತವು. (೪) ಚತುರ್ಥದಲ್ಲಿ— ನಿರ್ವಿಷಯದ ಅರ್ಪಣವಿದೆ. (೫) ಪಂಚಮದಲ್ಲಿ— ನಿರಿಂದ್ರಿಯದ ಅರ್ಪಿತವಿದೆ. (೬) ಷಷ್ಠಮದಲ್ಲಿ – ರೂಪವು ನಷ್ಟವಾಗುವದು ಅದು ನಿರೂಪಾರ್ಪಿತವು (೭) ಸಪ್ತಮದಲ್ಲಿ— ಆತ್ಮಾರ್ಪಿತವಾಗುವದು. (೮) ಅಷ್ಟಮದಲ್ಲಿ— ಪ್ರಸಾದದ ಅರ್ಪಿತವು. (೯) ನವಮದಲ್ಲಿ— ನಿಃಶ್ಶೂನ್ಯಾರ್ಪಿತವು. (೧೦) ದಶಮದಲ್ಲಿ— ತನ್ನ ಮರೆದು ಮಹದರ್ಪಿತವು. (೧೧) ಏಕಾದಶದಲ್ಲಿ- ಮಹಾಘನವು ತನ್ನನೇ ನುಂಗಿತ್ತು.

ಈಪ್ರಕಾರ ಪಾದೋದಕ ಪ್ರಸಾದಗಳ ವಿವರಣೆಗಳಿರುತ್ತವೆ. ಈ ವಿಚಾರಗಳು ಶಿವಶರಣರ ಉಕ್ತಿಗಳಲ್ಲಿ ಮಾತ್ರ ದೊರೆಯುತ್ತವೆ. ಅವು ಬಹು ಗೂಢವೂ ಉದಾತ್ತವಾದವುಗಳೂ ಇರುತ್ತವೆ. ಹಿಂದೂ ಧರ್ಮವ-

ಬೇರೆ ಯಾವ ಮತಗಳಲ್ಲಿಯೂ ಇಂಥ ವಿಚಾರಗಳು ದೊರೆಯಲಾರವು. ವಚನಾರ್ಥಗಳನ್ನು ಬಹು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿದ್ದೇವೆ. ಪ್ರಸಾದದ ಪರಿಣಾಮಗಳು ಮುಂದೆ ವಿವರಿಸಲ್ಪಟ್ಟಿವೆ.

(೧೬೩) ಪ್ರಸಾದದ ಪರಿಣಾಮಗಳು:— ಶುದ್ಧಪ್ರಸಾದವು ತನುವಿಗೆ ಸಂಬಂಧವು. ಆದ್ದರಿಂದ ಅದರಿಂದ ತನು ವಿಕಾರಗಳಳಿಯುವವು. ಸಿದ್ಧ ಪ್ರಸಾದವು ಮನಸ್ಸಿಗೆ ಸಂಬಂಧವು. ಆದ್ದರಿಂದ ಮನಸ್ಸಿನ ವಿಕಾರಗಳು ದೂರಾಗುವವು. ಪ್ರಸಿದ್ಧ ಪ್ರಸಾದವು ಕಾರಣ ದೇಹಕ್ಕೆ ಸಂಬಂಧವು. ಆದ್ದರಿಂದ ಭಾವದ ಭ್ರಮೆಯು ಕೆಡುವದು. ಮುಂದೆ ಆಪ್ಯಾಯನ ಪ್ರಸಾದದಿಂದ ದುರಾಶೆಗಳು ಅಡಗುವವು. ಸಮಯ ಪ್ರಸಾದದಿಂದ ವಿಷಯಗಳು ಲಿಂಗ ವಿಷಯಗಳಾಗುವವು ಪಂಚೇಂದ್ರಿಯ ವಿರಹಿತ ಪ್ರಸಾದದಿಂದ ಮನುಷ್ಯನ ಇಂದ್ರಿಯಗಳು ಲಿಂಗೇಂದ್ರಿಯಗಳಾಗುವವು. ಮುಂದೆ ಅಂತಃಕರಣ ಚತುಷ್ಟಯ ವಿರಹಿತ ಪ್ರಸಾದದಿಂದ ಕರಣಗಳು, ಸಮತಾಪ್ರಸಾದದಿಂದ ಅಂತರಂಗದ ಒಲವುಗಳು, ಸದ್ಭಾವ ಪ್ರಸಾದದಿಂದ ಭಾವವು, ಜ್ಞಾನ ಪ್ರಸಾದದಿಂದ ಜ್ಞಾನವು, ಶುದ್ಧವಾಗುವವು. ಹೀಗೆ ಪ್ರಸಾಧಿಗಳು ಸರ್ವಸಂಗ ಪರಿತ್ಯಾಗರಾಗಿ ಬಯಲಲ್ಲಿ ಬಯಲಾಗುವರು. ಇತರ ಮತಾನುಯಾಯಿಗಳು ಯಜ್ಞಯಾಗಾದಿ ಕರ್ಮಗಳು, ಯೋಗಾಭ್ಯಾಸ, ತಪಸ್ಸು ಮೊದಲಾದ ಕಷ್ಟವಾದ ಆಚರಣೆಗಳನ್ನು ಆಚರಿಸುವದುಂಟು. ಆದರೆ ವೀರಶೈವರು ಅಷ್ಟಾವರಣ ನಿರತರಾಗಿ ಮಂತ್ರಮೂಲಕ ಪಾದೋದಕ ಪ್ರಸಾದ ಗ್ರಾಹಕರಾಗಿ ನಿಜಸಮಾಧಿ ಅಥವಾ ಬಯಲನ್ನು ಅಥವಾ ನಿರವಯಸ್ಥಿತಿಯನ್ನು ಪಡೆಯುವರು.

(೧೬೪) ಪಾದೋದಕ ಪ್ರಸಾದಗಳ ಪರಸ್ಪರ ಸಂಬಂಧ:- ಮೊದಲು ಪಾದೋದಕವು, ಆ ಮೇಲೆ ಪ್ರಸಾದ ಈ ಪ್ರಕಾರ ಅಷ್ಟಾವರಣಗಳಲ್ಲಿ ಕ್ರಮವಿರುತ್ತದೆ. ಮೊದಲು ಪ್ರಸಾದವು ಆ ಮೇಲೆ ಪಾದೋದಕವೆಂದು ಭಾವಿಸುವದು ತಪ್ಪು ಇರುತ್ತದೆ. ಪ್ರಸಾದವು ಪಾದೋದಕಕ್ಕಿಂತಲೂ ಸೂಕ್ಷ್ಮವಾದುದು ಮತ್ತು ವ್ಯಾಪಕ ಭಾವವುಳ್ಳದ್ದು. ಪಾದೋದಕವು ಮನುಷ್ಯನ ಬಹಿರಂಗ ಮತ್ತು ಅಂತರಂಗಗಳನ್ನು ಶುದ್ಧಗೊಳಿಸುತ್ತದೆ. ಆದರೆ ಪ್ರಸಾದವು ಮನುಷ್ಯನ ಯಾವತ್ತು ಬಾಹ್ಯ ಮತ್ತು ಅಂತರಂಗ ಕ್ರಿಯೆಗಳ ಮೇಲೆ ಪರಿಣಾಮ ಮಾಡುತ್ತಿದೆ. ಅವನ ಸ್ಥೂಲ, ಸೂಕ್ಷ್ಮ,

ಕಾರಣ ಶರೀರಗಳು, ಅವನ ಇಂದ್ರಿಯುಗಳು, ಕರಣಗಳು, ಭಾವ, ಜ್ಞಾನಗಳು ಇವುಗಳ ಮೇಲೆಲ್ಲ ಅದು ತನ್ನ ಪರಿಣಾಮವನ್ನು ಮಾಡು ತ್ತಿದೆ.

(೧೬೫) ಷಡ್ವಿಧಲಿಂಗಗಳಿಗೆ ಪಾದೋದಕ ಪ್ರಸಾದಗಳ ಸಂಬಂಧಃ ಈ ಸಂಬಂಧಗಳು ಹೇಗೆಂದರೆ— (ಅ) ಪಾದೋದಕ ಸಂಬಂಧ—. (೧) ಸ್ಪರ್ಶನೋದಕ ಅವಧಾನೋದಕಗಳು ಅನುಕ್ರಮವಾಗಿ ಆಚಾರ ಲಿಂಗ ಗುರುಲಿಂಗಗಳಿಗೆ ಸಂಬಂಧವು— ಇವು ಗುರುಪಾದೋದಕವಾಗಿ ಇಷ್ಟ ಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಗುರು ಸ್ವರೂಪವು. (೨) ಆಪ್ಯಾಯನೋದಕ, ಹಸ್ತೋದಕಗಳು ಅನುಕ್ರಮವಾಗಿ ಶಿವಲಿಂಗ ಜಂಗಮಲಿಂಗಗಳಿಗೆ ಸಂಬಂಧವು— ಇವು ಲಿಂಗ ಪಾದೋದಕವಾಗಿ ಪ್ರಾಣಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಲಿಂಗ ಸ್ವರೂಪವು. (೩) ಪರಿಣಾಮೋದಕ ನಿರ್ನಾಮೋದಕಗಳು ಅನುಕ್ರಮವಾಗಿ ಪ್ರಸಾದ ಲಿಂಗ ಮಹಾಲಿಂಗಗಳಿಗೆ ಸಂಬಂಧವು. ಇವು ಜಂಗಮ ಪಾದೋ ದಕವಾಗಿ ಭಾವಲಿಂಗಾರ್ಪಿತವಾಗುತ್ತವೆ. ಇದು ಅನಾದಿ ಜಂಗಮ ಸ್ವರೂಪವು. ಕಡೆಗೆ ಉಳಿಯುವ ಸತ್ಯೋದಕವು ಸಕಲ ಪರತತ್ವಕ್ಕೆ ಸಮರ್ಪಣೆಯಾಗುತ್ತದೆ. ಇದು ಅನಾದಿ ಶರಣ ಪ್ರಸನ್ನ ಮೂರ್ತಿಯು.

(ಬ) ಪ್ರಸಾದ ಸಂಬಂಧಃ-- (೧) ಆಪ್ಯಾಯನ ಪ್ರಸಾದ ಮತ್ತು ಸಮಯ ಪ್ರಸಾದಗಳು ಗುರು ಪ್ರಸಾದವೆನಿಸಿಕೊಂಡು ಆಚಾರ ಲಿಂಗ ಗುರುಲಿಂಗಗಳಿಗೆ ಸಂಬಂಧವು-- ಇವು ಸುಚಿತ್ತ ಹಸ್ತ, ಸುಬುದ್ಧಿ ಹಸ್ತ, ನಿರುಪಾಧಿ ಹಸ್ತ, ಇವುಗಳ ಮೂಲಕ ಇಷ್ಟಲಿಂಗದಲ್ಲಿ ಸಂಬಂಧಿಸು ತ್ತವೆ. ಇದು ಅನಾದಿ ಭಕ್ತ ಸ್ವರೂಪವು (೨) ಪಂಚೇಂದ್ರಿಯ ವಿರಹಿತ ಪ್ರಸಾದ, ಕರಣಚತುಷ್ಟಯ ವಿರಹಿತ ಪ್ರಸಾದಗಳು ಲಿಂಗಪ್ರಸಾದವೆ ನಿಸಿಕೊಂಡು ಶಿವಲಿಂಗ, ಜಂಗಮಲಿಂಗಗಳಿಗೆ ಸಂಬಂಧವು-- ಇವು ನಿರಹಂಕಾರ ಹಸ್ತ, ಸುಮನ ಹಸ್ತ, ನಿರಾಲಂಬ ಹಸ್ತಗಳ ಮೂಲಕ ಪ್ರಾಣಲಿಂಗದಲ್ಲಿ ಸಂಬಂಧಿಸುತ್ತವೆ. ಇದು ಅನಾದಿ ಶೂನ್ಯ ಲಿಂಗ ಸ್ವರೂ ಪವು-- (೩) ಸಮತಾ ಪ್ರಸಾದ, ಪ್ರಸಾದಿಯ ಪ್ರಸಾದಗಳು ಜಂಗಮ ಪ್ರಸಾದವೆನಿಸಿಕೊಂಡು ಪ್ರಸಾದಲಿಂಗ ಮಹಾಲಿಂಗಗಳಿಗೆ ಸಂಬಂಧವು. ಇವು ಸುಜ್ಞಾನ ಹಸ್ತ, ಸದ್ಭಾವ ಹಸ್ತ, ನಿಃಪ್ರಪಂಚ ಹಸ್ತ, ಇವುಗಳ ಮೂಲಕ ಭಾವಲಿಂಗದಲ್ಲಿ ಸಂಬಂಧಿಸುತ್ತವೆ. ಇದು ಅನಾದಿ ನಿರಂಜನ

ಜಂಗಮ ಸ್ವರೂಪ (೪) ಆ ಮೇಲೆ ಸದ್ಭಾವಪ್ರಸಾದ ಮತ್ತು ಜ್ಞಾನ ಪ್ರಸಾದಗಳು ಪರತತ್ವ ಜ್ಯೋತಿರ್ಮಯ ಲಿಂಗದೇವನಿಗೆ ನಿಜಾನಂದ ಹಸ್ತದಿಂದ ಸಮರ್ಪಿತವಾಗಲು ಅದೇ ಅನಾದಿ ಪರಿಪೂರ್ಣನಿಜವಸ್ತು ವೆಂದು ಹೇಳಲ್ಪಡುತ್ತಿದೆ. ಈ ವಿವರಣೆಯಲ್ಲಿ ಗುರು ಪ್ರಸಾದ, ಲಿಂಗ ಪ್ರಸಾದ, ಜಂಗಮ ಪ್ರಸಾದಗಳೂ, ಗುರು ಪಾದೋದಕ, ಲಿಂಗ ಪಾದೋದಕ, ಜಂಗಮ ಪಾದೋದಕಗಳೂ ಇವುಗಳನ್ನು ವಚನಕಾರರು ವಿವರಿಸಿಲ್ಲ. ಯಾಕಂದರೆ ಉಳಿದ ಪಾದೋದಕ ಪ್ರಸಾದಗಳ ಆಚರಣೆಯ ಮೂಲಕ ಈ ಎರಡೂ ತ್ರಿವಿಧಗಳು ಆಚರಿಸುವವನಲ್ಲಿ ತಾವಾಗಿಯೂ ಒದಗುವುದ ಹತ್ತುತ್ತವೆಂದು ಭಾವಿಸಿರಬೇಕೆಂದು ತೋರುತ್ತದೆ.

(೧೭೬) ಇಷ್ಟಲಿಂಗಕ್ಕೆ ಪಾದೋದಕ ಪ್ರಸಾದಗಳ ಸಂಬಂಧ:— ಈ ಸಂಬಂಧವು ಏಕೋತ್ತರ ಶತಸ್ಥಲದ ಮೂಲಕ ಇರುತ್ತದೆ. ಈ ಸ್ಥಲಗಳಲ್ಲಿ ೫೨ ಲಿಂಗಸ್ಥಲಗಳಿವೆ. ಅವುಗಳಲ್ಲಿ ಮೊದಲಿನ ೫೪ ಸ್ಥಲಗಳು ಆಚಾರಾದಿ ಆರು ಲಿಂಗಗಳಿಗೆ ಸಂಬಂಧಿಸುತ್ತವೆ. ಆ ಮೇಲೆ ಕಡೆಗೆ ಭಾವಾಭಾವನಷ್ಟಸ್ಥಲ, ಸ್ವಯಂಚರಪರವರಿಯದಸ್ಥಲ ಮತ್ತು ಜ್ಞಾನಶೂನ್ಯ ಸ್ಥಲ ಇವು ಉಳಿಯುತ್ತವೆ. ಇವು ಅನುಕ್ರಮವಾಗಿ ಜ್ಞಾನಗುರು, ಜ್ಞಾನಲಿಂಗ, ಜ್ಞಾನಜಂಗಮಗಳೆಂದು ತಿಳಿಯಲ್ಪಡುತ್ತವೆ. ಇವುಗಳ ಮೂಲಕ ಇಷ್ಟಲಿಂಗದ ಮೂರು ಭಾಗಗಳಲ್ಲಿ ಪಾದೋದಕ ಪ್ರಸಾದ ಗಳ ಸಂಬಂಧವು ಉಂಟಾಗುತ್ತದೆ. ಅದ್ದರಿಂದ ಈ ಪಾದೋದಕ ಪ್ರಸಾದ ಗಳಲ್ಲಿ ೩ ವಿಧಗಳು ಕಲ್ಪಿಸಲ್ಪಟ್ಟಿವೆ.

(ಅ) ಭಾವಾಭಾವನಷ್ಟಸ್ಥಲವು. ಇದು ಗುರುಸ್ವರೂಪವು. ಅದು ಕ್ರಿಯಾಗುರು ಲಿಂಗಜಂಗಮ ಸ್ವರೂಪದ ಇಷ್ಟಮಹಾಲಿಂಗದ ಅಧೋ ಪೀಠಿಕೆಗೆ ಸಂಬಂಧಪಡುತ್ತಿದೆ. ಅಲ್ಲಿ ಸ್ಪರ್ಶನೋದಕ ಮತ್ತು ಅವಧಾನೋದಕಗಳಿವೆ. ಅವು ಗುರುಪಾದೋದಕವೆನಿಸಿಕೊಳ್ಳುತ್ತವೆ. ಹಾಗೆಯೇ ಅಲ್ಲಿ ಆಪ್ಯಾಯನ ಪ್ರಸಾದ ಮತ್ತು ಸಮಯ ಪ್ರಸಾದಗಳಿರುತ್ತವೆ. ಅವು ಗುರುಪ್ರಸಾದವೆನಿಸಿಕೊಳ್ಳುತ್ತವೆ. ಹೀಗೆ ಪಾದೋದಕಪ್ರಸಾದಗಳು ಅಳವಡಲು ಈ ರೀತಿ ಆಚರಿಸುವವರು ಆದಿಪ್ರಸಾದಿ ಮತ್ತು ನಿಚ್ಚಪ್ರಸಾದಿ ಗಳೆಂದು ಹೇಳಲ್ಪಡುತ್ತಾರೆ.

(ಬ) ಸ್ವಯಂಚರಪರವರಿಯದ ಸ್ಥಲವು. ಇದು ಲಿಂಗಸ್ವರೂಪವು. ಜ್ಞಾನ ಗುರುಲಿಂಗಜಂಗಮ ಸ್ವರೂಪದ ಇಷ್ಟಮಹಾಲಿಂಗದ ಗೋಳಕ

ದಲ್ಲಿ ಅದು ಸಂಬಂಧಪಡುತ್ತಿದೆ. ಅಲ್ಲಿ ಆಪ್ಯಾಯನೋದಕ ಮತ್ತು ಹಸ್ತೋದಕಗಳು ಇರುತ್ತವೆ. ಅವುಗಳೇ ಲಿಂಗಪಾದೋದಕಗಳು. ಹಾಗೆಯೇ ಅಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ ಮತ್ತು ಕರಣಚತುಷ್ಟಯವಿರಹಿತ ಪ್ರಸಾದಗಳು ನೆಲಸಿರುತ್ತವೆ. ಅವು ಲಿಂಗಪ್ರಸಾದಗಳು. ಅವು ಇಷ್ಟಲಿಂಗದ ಗೋಳಕದಲ್ಲಿ ಅಳವಡಲು, ಅಂತ್ಯಪ್ರಸಾದಿ ಮತ್ತು ಸಮಯ ಪ್ರಸಾದಿಗಳೆಂದು ಆಚರಿಸುವವರು ಹೇಳಲ್ಪಡುತ್ತಾರೆ.

(ಕ) ಜ್ಞಾನಶೂನ್ಯಸ್ಥಲ. ಇದು ಮೂಲ ಜಂಗಮಸ್ವರೂಪವಾಗಿದೆ. ಅದು ಮಹಾಜ್ಞಾನ ಗುರುಲಿಂಗಜಂಗಮ ಸ್ವರೂಪವಾದ ಇಷ್ಟ ಮಹಾ ಲಿಂಗದ ಜಲರೇಖೆಯನುಳ್ಳ ಪಾಣಿಬಟ್ಟಲಕ್ಕೆ ಸಂಬಂಧಪಡುತ್ತಿದೆ. ಅಲ್ಲಿ ಪರಿಣಾಮೋದಕ ನಿರ್ನಾಮೋದಕ ಮತ್ತು ಸತ್ಯೋದಕಗಳು ನೆಲಸಿರುತ್ತಿವೆ. ಅವುಗಳೇ ಜಂಗಮಪಾದೋದಕಗಳು. ಹಾಗೆಯೇ ಅಲ್ಲಿ ಸಮತಾ ಪ್ರಸಾದ, ಪ್ರಸಾದಿಯ ಪ್ರಸಾದ, ಸದ್ಭಾವ ಪ್ರಸಾದ, ಮತ್ತು ಜ್ಞಾನ ಪ್ರಸಾದಗಳು ಸಂಬಂಧಪಡುತ್ತವೆ. ಅವೇ ಜಂಗಮಪ್ರಸಾದಗಳು. ಹೀಗೆ ಆಚರಿಸುವವರು ಸೇವ್ಯಪ್ರಸಾದಿ ಮತ್ತು ಅಚ್ಚಪ್ರಸಾದಿಗಳೆಂದು ಹೇಳಲ್ಪಡುತ್ತಾರೆ.

ಹೀಗೆ ಸ್ವೀಕರಿಸಿದ ಪಾದೋದಕವೇ ನೇತ್ರದಲ್ಲಿ ಕರುಣಜಲ, ವಾಕ್ಕಿನಲ್ಲಿ ವಿನಯಜಲ, ಅಂತರಂಗದಲ್ಲಿ ಸಮತಾಜಲವಾಗಿರುತ್ತದೆ. ಈ ತ್ರಿವಿಧೋದಕವು ತಿಳಿದುಪ್ಪವು ಹೆರೆದುಪ್ಪವಾದಂತೆ ಇಷ್ಟ ಮಹಾ ಲಿಂಗಕ್ಕೆ ತ್ಯಾಗಾಂಗವಾದ ಶುದ್ಧಪ್ರಸಾದವಾಗುವದು. ಪ್ರಾಣಲಿಂಗಕ್ಕೆ ಭೋಗಾಂಗವಾದ ಸಿದ್ಧಪ್ರಸಾದವಾಗುವದು. ಮತ್ತು ಭಾವಲಿಂಗಕ್ಕೆ ಯೋಗಾಂಗವಾದ ಪ್ರಸಿದ್ಧಪ್ರಸಾದವಾಗುವದು.

ಈ ತ್ರಿವಿಧಪ್ರಸಾದ ಪಾದೋದಕಗಳು ಶರಣನಿಗೆ ಶುದ್ಧಪ್ರಸಾದವಾಗಿ ಅವನ ಜಿಹ್ವೆಯಲ್ಲಿ ಅಚ್ಚಪ್ರಸಾದವಾಗುತ್ತವೆ. ಸಿದ್ಧಪ್ರಸಾದವಾಗಿ ಅವನ ಹಸ್ತದಲ್ಲಿ ನಿಚ್ಚಪ್ರಸಾದವಾಗುತ್ತವೆ. ಪ್ರಸಿದ್ಧಪ್ರಸಾದವಾಗಿ ಅವನ ಪಾದದಲ್ಲಿ ಸಮಯಪ್ರಸಾದವಾಗುತ್ತವೆ. ಇವೆಲ್ಲವು ಶ್ರೀಪ್ರಭುದೇವರ ವಿಚಾರಗಳು.

(೧೬೭) ಚಕ್ರಗಳಿಗೆ ಪಾದೋದಕ ಪ್ರಸಾದಗಳ ಸಂಬಂಧಃ— ಪಾದೋದಕ ಪ್ರಸಾದಗಳು ಭಕ್ತನ ಚಕ್ರಗಳ ಮೇಲೆಯೂ ಪರಿಣಾಮ

ಮಾಡುತ್ತವೆ. ಅವುಗಳಲ್ಲಿ ಬೇರೆ ಬೇರೆ ಮಂತ್ರಸ್ವರೂಪವುಳ್ಳ ಲಿಂಗಗಳು ನೆಲಸಿದ್ದು, ಆಯಾ ಪಾದೋದಕ ಪ್ರಸಾದ ಸೇವನೆಯ ಮೂಲಕ ಆ ಲಿಂಗಗಳಲ್ಲಿ ಮತ್ತು ಆ ಲಿಂಗಗಳಿದ್ದ ಚಕ್ರಗಳಲ್ಲಿ ಚೈತನ್ಯವು ಉಂಟಾಗುತ್ತದೆ. ಇದು ಭಕ್ತನ ಪ್ರಗತಿಗೆ ಕಾರಣವಾಗುತ್ತದೆ. ಈ ಪ್ರಗತಿಯು ಭಕ್ತನ ಕಾಯ, ಮನ, ಭಾವಗಳಲ್ಲಿ ಹಾಗೆಯೇ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ ಈ ಚಕ್ರಗಳು, ಮುಂದೆ ಈ ಚಕ್ರಗಳ ತರುವಾಯ ಇರುವ ಬ್ರಹ್ಮಚಕ್ರ ಮತ್ತು ಶಿಖಾಚಕ್ರ, ಇವುಗಳಲ್ಲೆಲ್ಲ ಜಾಗ್ರತೆಯು ಉತ್ಪನ್ನವಾಗಲು ಎಲ್ಲಕ್ಕೂ ಕಡೆಯದಾದ ಪಶ್ಚಿಮ ಚಕ್ರದಲ್ಲಿಯೂ ಲಿಂಗದ ಕಳೆಯು ಪೂರ್ಣತೆಯನ್ನು ಹೊಂದಲು ಅದೇ ಲಿಂಗಾಂಗ ಸಾಮರಸ್ಯವು. ಈ ಪೂರ್ಣತೆಯು ಗುರುಲಿಂಗಜಂಗಮದ ತಿಳುವಳಿಕೆಯನ್ನುಂಟು ಮಾಡಿಕೊಂಡು ಆಚರಿಸಿದ ಪಾದೋದಕ ಪ್ರಸಾದಗಳ ಮೂಲಕವೇ ಉಂಟಾಗುತ್ತದೆ. ಈ ವಿವರವು ಹೇಗೆಂದರೆ:—

(೧) ಕಾಯದ ಮಧ್ಯದಲ್ಲಿ ಇಷ್ಟಲಿಂಗ ಮಹಾಮಂತ್ರ, ಚಿದ್ವಿಭೂತಿ, ಚಿದ್ರುದ್ರಾಕ್ಷಿಗಳು ನೆಲಸಿದ್ದು, ಇಲ್ಲಿ ದೀಕ್ಷಾಪಾದೋದಕ ಮತ್ತು ಶುದ್ಧಪ್ರಸಾದಗಳಿರುತ್ತದೆ. (೨) ಮನದ ಮಧ್ಯದಲ್ಲಿ ಪ್ರಾಣಲಿಂಗ ಸಪ್ತಕೋಟಿ ಮಹಾಮಂತ್ರವಿದ್ದು, ಇಲ್ಲಿ ಶಿಕ್ಷಾಪಾದೋದಕ ಮತ್ತು ಸಿದ್ಧಪ್ರಸಾದಗಳು ಸಂಬಂಧಪಡುತ್ತವೆ. ಇವುಗಳ ಮೂಲಕವೇ ಮನಸ್ಸು ಪೂರ್ಣತೆಯನ್ನು ಹೊಂದುತ್ತದೆ. (೩) ಭಾವದ ಮಧ್ಯದಲ್ಲಿ ಭಾವಲಿಂಗ ಅಗಣಿತ ಮಂತ್ರವಿದ್ದು ಇಲ್ಲಿ ಜ್ಞಾನಪಾದೋದಕ ಮತ್ತು ಪ್ರಸಿದ್ಧಪ್ರಸಾದಗಳು ಸಂಬಂಧಪಡುತ್ತವೆ. ಇವುಗಳ ಮೂಲಕವೇ ಭಾವವು ಪೂರ್ಣತೆಯನ್ನು ಹೊಂದುತ್ತದೆ.

ಆದರೆ ಈ ಪ್ರಗತಿಯೊಡನೆ ಎಲ್ಲ ಚಕ್ರಗಳಲ್ಲಿ ಜಾಗ್ರತಿಯು ಉಂಟಾದಲ್ಲಿ ಅವೆಲ್ಲವುಗಳಲ್ಲಿ ಪರಸ್ಪರತೆಯುಂಟಾಗಿ ಎಲ್ಲವೂ ಸ್ಥಿರಪಡುತ್ತ ಹೋಗುತ್ತವೆ. ಈ ಜಾಗ್ರತಿಯು ಆಯಾ ಮಂತ್ರಧ್ಯಾನಪೂರ್ವಕವಾಗಿ ಆಯಾ ಲಿಂಗಗಳಲ್ಲಿ ಮತ್ತು ಚಕ್ರಗಳಲ್ಲಿ ಉಂಟಾಗತಕ್ಕದ್ದು. ಈ ಕಾರ್ಯವು ಆಯಾ ಪಾದೋದಕ ಪ್ರಸಾದಗಳ ಮೂಲಕ ಜರಗುವದು. ಅದು ಹೇಗೆಂದರೆ—

(೪) ಪಂಚಾಚಾರ ಮೂರ್ತಿಯಾದ ಆಚಾರಲಿಂಗ ಮಂತ್ರವು ಆಧಾರ ಚಕ್ರಕ್ಕೆ ಸಂಬಂಧಿಸಿದ್ದು ಅಲ್ಲಿ ಸ್ಪರ್ಶನೋದಕ ಮತ್ತು ಆಪ್ಯಾ

ಯುಸ ಪ್ರಸಾದಗಳು ಪರಿಣಾಮ ಮಾಡುತ್ತವೆ. (೫) ಮಂತ್ರಮೂರ್ತಿಯಾದ ಗುರುಲಿಂಗ ಮಂತ್ರವು ಸ್ವಾಧಿಷ್ಠಾನ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಅವಧಾನೋದಕ ಮತ್ತು ಸಮಯಪ್ರಸಾದಗಳು ಪರಿಣಾಮ ಮಾಡುತ್ತವೆ. (೬) ನಿರೀಕ್ಷಣ ಮೂರ್ತಿಯಾದ ಶಿವಲಿಂಗಮಂತ್ರವು ಮಣಿಪೂರಕ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಆಪ್ಯಾಯನೋದಕ ಮತ್ತು ಪ್ರಸಾದಿಯ ಪ್ರಸಾದಗಳು ಪರಿಣಾಮಮಾಡುತ್ತವೆ. (೭) ಯಜನ ಸ್ವರೂಪವಾದ ಜಂಗಮಲಿಂಗಮಂತ್ರವು ಅನಾಹತ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಹಸ್ತೋದಕ ಮತ್ತು ಪಂಚೇಂದ್ರಿಯವಿರಹಿತ ಪ್ರಸಾದಗಳು ಪರಿಣಾಮಮಾಡುತ್ತವೆ. (೮) ಈಳನ ಸ್ವರೂಪವಾದ ಪ್ರಸಾದಲಿಂಗಮಂತ್ರವು ವಿಶುದ್ಧಿಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ಪರಿಣಾಮೋದಕ ಮತ್ತು ಕರಣ ಚತುಷ್ಟಯವಿರಹಿತ ಪ್ರಸಾದಗಳು ಪರಿಣಾಮ ಮಾಡುತ್ತವೆ. (೯) ಮೇಧಾಸ್ವರೂಪವಾದ ಮಹಾಲಿಂಗಮಂತ್ರವು ಆಜ್ಞಾ ಚಕ್ರಕ್ಕೆ ಸಂಬಂಧವಾಗಿದ್ದು ಅಲ್ಲಿ ನಿರ್ನಾಮೋದಕ ಮತ್ತು ಸಮತಾ ಪ್ರಸಾದಗಳು ಪರಿಣಾಮ ಮಾಡುತ್ತವೆ.

ಮೇಲೆ ಹೇಳಿದವುಗಳು ಕೆಳಗಿನ ಆರು ಚಕ್ರಗಳು. ಇವುಗಳ ಮುಂದೆ ಬ್ರಹ್ಮಚಕ್ರ, ಶಿಖಾಚಕ್ರ ಮತ್ತು ಕಡೆಗೆ ಪಶ್ಚಿಮ ಚಕ್ರಗಳು ಇವೆ. ಅಲ್ಲಿಯೂ ಕೂಡ ಮಂತ್ರಗಳೂ ಪಾದೋದಕ ಪ್ರಸಾದಗಳೂ ಸಂಬಂಧಪಡುತ್ತವೆ. ಅದು ಹೇಗೆಂದರೆ —

(೧೦) ಬ್ರಹ್ಮಚಕ್ರಕ್ಕೆ ನಿರಾಲಂಬಮೂರ್ತಿ ನಿಃಕಲಲಿಂಗ ಮಂತ್ರವು ಸಂಬಂಧಪಡುತ್ತಿದ್ದು ಅಲ್ಲಿ ಸತ್ಯೋದಕ ಮತ್ತು ಸದ್ಭಾವಪ್ರಸಾದಗಳು ಪರಿಣಾಮಮಾಡುತ್ತವೆ. (೧೧) ಶಿಖಾಚಕ್ರಕ್ಕೆ ಪರಿಪೂರ್ಣಾನಂದ ನಿಃಪ್ರಪಂಚ ಮೂರ್ತಿಶೂನ್ಯ ನಿರಂಜನ ಲಿಂಗಮಂತ್ರವಿದ್ದು ಅಲ್ಲಿ ಕರುಣಜಲ, ವಿನಯಜಲ, ಸಮತಾಜಲಗಳು ಹಾಗೂ ಚಿತ್ಕಲಾಪ್ರಸಾದ, ನಿಜಪ್ರಸಾದ, ಚಿದ್ರೂಪಪ್ರಸಾದಗಳು ಸಂಬಂಧಪಡುತ್ತವೆ. (೧೨) ಇವುಗಳೇ ಪಶ್ಚಿಮಚಕ್ರದಲ್ಲಿಯೂ ಸಂಬಂಧಪಡುತ್ತವೆ.

ಈ ವಿಧದ ಆಚರಣೆಯಿಂದ ಭಕ್ತನ ಸರ್ವಾಂಗವೆಲ್ಲ ಪಾದೋದಕ ಪ್ರಸಾದಮಯ, ಲಿಂಗಮಯ, ಮಂತ್ರಮಯವಾಗುತ್ತದೆಂದು ತಿಳಿಯುವದು.

(೧೬೮) ಪ್ರಸಾದಿಕರುಃ— ಅವುದೋ ಒಂದು ಕಾರಣದಿಂದ ಸಂಸಾರದಲ್ಲಿ ಹೇಯಬುದ್ಧಿಯು ಉತ್ಪನ್ನವಾಗಲು ಪುನರ್ದೀಕ್ಷೆಯನ್ನು ಹೊಂದಿ ಆಹಾರ ಗ್ರಹಣದ ವಿಷಯವಾಗಿ ವಿಶೇಷನಿರ್ಬಂಧಗಳನ್ನಿಟ್ಟು ಕೊಂಡು ಆಚರಿಸುವವರು ಪ್ರಸಾದಿಕರೆಂದು ರೂಢಿಯಲ್ಲಿ ಹೇಳುವ ದುಂಟು. ಇವರು ಪಾಲ್ಕುರಿಕೆ ಸೋಮಾರಾಧ್ಯರು ವಿವರಿಸಿದ ೬೪ ಶೀಲ ಗಳಲ್ಲಿ ಕೆಲವುಗಳನ್ನು ಸಹ ಆಚರಿಸುತ್ತಿರಬಹುದು. ಆದರೆ ಶಿವಶರಣರ ನಡೆಯ ಮೇರೆಗೆ ಇವರು ಪ್ರಸಾದಿಕರೆಂದು ಹೇಳಲು ಬರಲಾರರು. ಪ್ರಸಾದಿಕರು ಷಟ್‌ಸ್ಥಲ, ಏಕೋತ್ತರಶತಸ್ಥಲಗಳ ಮರ್ಮವನ್ನು ಅರಿತವ ರಾಗಿರಬೇಕು. ಇದನ್ನರಿತುಕೊಂಡು ದಶವಿಧಪಾದೋದಕ, ಏಕಾದಶ ಪ್ರಸಾದಗಳನ್ನು ಆಚರಿಸಬೇಕು. ಇಂಥ ಆಚರಣೆಯಿಂದ ಅವರ ತನು, ಮನ, ಭಾವಗಳು, ಚಕ್ರಗಳು, ಶಕ್ತಿಗಳು, ಇಂದ್ರಿಯಗಳು, ಕರಣ ಗಳು ಇವುಗಳಲ್ಲೆಲ್ಲ ಲಿಂಗದ ಕಳೆಯು ಬೆಳಗಹತ್ತುವದು. ಹೀಗೆ ಆಚ ರಿಸುವವರೇ ಪ್ರಸಾದಿಕರು.

(೧೬೯) ವಿಭೂತಿಃ— ಅದು ಮಹಾವಸ್ತುವಿನ ದಿವ್ಯ ತೇಜವು. ಅದು ಕಾಲ, ಕಾಮ, ಕರ್ಮತ್ರಯ, ತನುತ್ರಯ ಇವುಗಳನ್ನು ಚಿತ್ ಶಿಖಿ ಎಂಬ ಜ್ಞಾನಾಗ್ನಿಯಿಂದ ದಹಿಸಿದ ಚಿನ್ಹವು. ಶಿವಶರಣರು ಅದು ಪರಶಿವನ ಪರಮ ಚೈತನ್ಯವು, ಚಿತ್‌ಸ್ವರೂಪ ಎಂದು ಭಾವಿಸಿ ಅದನ್ನು ಲೇಪಿಸಿಕೊಳ್ಳುತ್ತಾರೆ.

(೧೭೦) ದೀಕ್ಷಾಭಸಿತ, ಶಿಕ್ಷಾಭಸಿತ, ಕ್ರಿಯಾಭಸಿತಃ— ವಿಭೂತಿ ಗಳು ಮೂರು ವಿಧವಾಗಿವೆ. (೧) ಕ್ರಿಯಾಗ್ನಿಯಿಂದ ದಹಿಸಿದ ಬೂದಿ ಯನ್ನು ಧೂಳಪಾದೋದಕದಲ್ಲಿ ಅಥವಾ ಗುರುಪಾದೋದಕದಲ್ಲಿ ಶೋಧಿಸಿ ಘಟ್ಟಿಯ ಮಾಡಿದ್ದು ದೀಕ್ಷಾಭಸಿತವು. (೨) ಗುರುಪಾದೋದಕ ಮತ್ತು ಲಿಂಗಪಾದೋದಕ ಇವುಗಳನ್ನು ಸಮ್ಮಿಶ್ರ ಮಾಡಿ ಷಡಕ್ಷರ ಮಂತ್ರ ವನ್ನು ಸ್ಥಾಪಿಸಿದ್ದು ಶಿಕ್ಷಾಭಸಿತವು. (೩) ಗುರುಪಾದೋದಕದಲ್ಲಿ ಘಟ್ಟಿಯ ಕಟ್ಟಿ, ಲಿಂಗಪಾದೋದಕವನ್ನು ಆ ಘಟ್ಟಿಗೆ ಸಮ್ಮಿಶ್ರಮಾಡಿ ಆದಿ ಪ್ರಣವ ಗಳಾರು, ಅನಾದಿಪ್ರಣವಗಳಾರು, ಚಿತ್ಕಲಾಪ್ರಸಾದ ಪ್ರಣವಗಳಾರು, ನಿಃಕಳಂಕ ಚಿತ್ಕಲಾ ಮೂಲ ಪ್ರಣವ ಮೂರು ಹೀಗೆ ೨೧ ಪ್ರಣವ ಗಳನ್ನು ಸ್ಥಾಪಿಸಿ ತಯಾರಿಸಿದ್ದು ಕ್ರಿಯಾಭಸಿತವು. ಜ್ಞಾನಭಸಿತವೆಂತಲೂ ಇದಕ್ಕೆ ಹೆಸರಿದೆ. ಅಷ್ಟಾವರಣದ ಆಚರಣೆಯಲ್ಲಿ ಆಚರಿಸುವವರ

ಅನುಕೂಲತೆಗೋಸ್ಕರ ಶಿವಶರಣರು, ಈ ವಿಧಗಳನ್ನು ಕಲ್ಪಿಸಿದ್ದಾರೆ. ಈ ದೃಷ್ಟಿಯಿಂದ ಲಿಂಗಧಾರಕ ಭಕ್ತರು, ಉಪಾಧಿಭಕ್ತರು, ನಿರುಪಾಧಿ ಭಕ್ತರು ಎಂಬ ಮೂರು ವರ್ಗಗಳು ಅನುಕ್ರಮವಾಗಿ ಮಾಡಲ್ಪಟ್ಟಿರುತ್ತವೆ. ಅವರು ಆಯಾ ರೀತಿಯಿಂದ ಭಸಿತವನ್ನು ಉಪಯೋಗಿಸುವುದು. ಈ ವಿಧಗಳು ಅವರವರ ಅನುಕೂಲ್ಯತೆಗೋಸ್ಕರ ಮಾಡಲ್ಪಟ್ಟಿರುತ್ತವೆ. ಸಹಜಭಕ್ತ ಮತ್ತು ನಿರ್ವಾಣಭಕ್ತ ಎಂತಲೂ ಇನ್ನು ಎರಡು ವಿಧಗಳನ್ನು ಕಲ್ಪಿಸುವದುಂಟು. ಇವರು ಮೇಲ್ತರಗತಿಯವರು.

(೧೭೧) ವಿಭೂತಿ ಧಾರಣದ ಸ್ಥಳಗಳು:— (೧) ಲಿಂಗಧಾರಕ ಭಕ್ತರು ೮ ಸ್ಥಾನಗಳಲ್ಲಿ ಧರಿಸುವುದು. ಅವು ಮಸ್ತಕ, ಲಲಾಟ, ಗ್ರೀವ, ಎರಡು ಬಾಹುಗಳು, ಹೃದಯ, ನಾಭಿ, ಪೃಷ್ಠ ಹೀಗೆ ಇರುತ್ತವೆ. (೨) ಉಪಾಧಿಭಕ್ತರು ಧರಿಸುವ ಸ್ಥಳಗಳು ೧೬ ಇವೆ. ಅವು— ಶಿರಸ್ಸು, ಭಾಳ, ಎರಡು ಕರ್ಣಗಳು, ಎರಡು ಓಷ್ಠ್ರ, ಕಂಠ, ಎರಡು ಬಾಹುಗಳು, ಎರಡು ಭುಜಗಳು, ಎರಡು ಮಣಿಬಂಧಗಳು, ಹೃದಯ ಅಪರ, ನಾಭಿ ಹೀಗೆ ಇರುತ್ತವೆ. (೩) ನಿರುಪಾಧಿ ಭಕ್ತರು ಧರಿಸುವ ಸ್ಥಾನಗಳು ೩೨ ಇವೆ. ಅವು ಮೂರ್ಧ್ನ, ಲಲಾಟ ಎರಡು ಕರ್ಣಗಳು, ಎರಡು ನೇತ್ರಗಳು, ಘ್ರಾಣ, ಮುಖ, ಎರಡು ಬಾಹುಗಳು. ಎರಡು ಭುಜಗಳು, ಎರಡು ಮಣಿಬಂಧುಗಳು, ಎರಡು ಸ್ತನಗಳು, ವಕ್ಷ, ಉದರ, ಎರಡು ಪಾರ್ಶ್ವಗಳು, ನಾಭಿ, ಮೇಢ್ರ, ಪಾಯು, ಪೃಷ್ಠ, ಉರುದ್ವಯ, ಎರಡು ಜಾನುಗಳು, ಎರಡು ಜಂಘೆಗಳು, ಎರಡು ಪಾದಗಳು ಹೀಗೆ ಇರುತ್ತವೆ.

(೧೭೨) ವಿಭೂತಿ ಧಾರಣದ ಪರಿಣಾಮಗಳು:— ದೀಕ್ಷಾಭಸಿತದಿಂದ ವಿಧಿಲಿಖಿತವು ತೊಡೆದು ಶಿವಲಿಖಿತವು ಲಿಖಿಸಲ್ಪಡುವದು. ಶಿಕ್ಷಾಭಸಿತದಿಂದ ಲಿಂಗನಿಷ್ಠಾಪರ ಭಕ್ತಿಯು ತೋರುವದು. ಜ್ಞಾನ ಅಥವಾ ಕ್ರಿಯಾಭಸಿತದಿಂದ ಸರ್ವಾಚಾರ ಸಂಪತ್ತು, ಜಂಗಮಾನುಭವವು ದೊರೆಯುವವು.

(೧೭೩) ಪಂಚಭಸ್ಮಗಳು:— (೧) ಭೂತಿ- ಇದು ಶಿವಜ್ಞಾನಸುಖ ಮಹದೈಶ್ವರ್ಯವನ್ನುಂಟು ಮಾಡುತ್ತಿದೆ. (೨) ಭಸಿತವು-ಮನುಷ್ಯನ ಸಕಲ ಕಾಂಕ್ಷೆಗಳನ್ನು ಸುಟ್ಟು ನಿಃಕಾಮನನ್ನಾಗಿ ಮಾಡುತ್ತದೆ. (೩) ಭಸ್ಮ— ಇದು

ಪೂರ್ವಕರ್ಮವನ್ನು ದೂರಮಾಡುತ್ತದೆ. (೪) ಕ್ಷರೆ– ಇದು ಮಾಯೆಯನ್ನು ಕೆಡಿಸುತ್ತದೆ. (೫) ರಕ್ಷೆ— ಇದು ಭೂತ, ಪ್ರೇತ. ಪಿಶಾಚ, ರಾಕ್ಷಸ ಬಾಧೆಗಳನ್ನು ತಪ್ಪಿಸುತ್ತದೆ. ಇವೆಲ್ಲವು ನಂದೆ, ಭದ್ರೆ, ಸುರಭಿ, ಸುಶೀಲ, ಸುಮನ ಎಂಬ ಗೋವುಗಳ ಮೂಲಕ ಆಯಾ ಮಂತ್ರಗಳಿಂದ ಉತ್ಪನ್ನವಾಗುತ್ತವೆ.

(೧೭೪) ರುದ್ರಾಕ್ಷಿಗಳು:— ರುದ್ರಾಕ್ಷಿಗಳು ಪರಶಿವನ ಜ್ಞಾನಚಕ್ಷುವಿನಿಂದ ಉದಯವಾದುವೆಂದು ತಿಳಿಯಲ್ಪಡುತ್ತವೆ. ಅವು ಶಿವಾನುಭವದ ಅರಿಕೆಯನ್ನು ಮಾಡಿಕೊಡುವ ತತ್ವಚಿಂತಾಮಣಿಗಳು ಮತ್ತು ರುದ್ರನ ಮುದ್ರೆಗಳು ಎಂದು ಭಾವಿಸಬೇಕು. ಭಕ್ತನು ಜಪದ ರೀತಿಗಳನ್ನು ಮೊದಲು ತಿಳಿಯಬೇಕು. ಇವುಗಳನ್ನು ತಿಳಿದು ಮಂತ್ರಸ್ಮರಣೆಯಿಂದ ರುದ್ರಾಕ್ಷಿಗಳನ್ನು ಆಯಾ ಸ್ಥಾನಗಳಲ್ಲಿ ಧರಿಸಿಕೊಂಡು ತಾನೇ ರುದ್ರನಾಗಿ ಲಿಂಗವನ್ನು ಪೂಜಿಸಬೇಕು. ವಿಭೂತಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಶಿವಲಿಂಗಾರ್ಚನೆಯನ್ನು ಮಾಡಿ, ಪಂಚಾಕ್ಷರಿಯನ್ನು ವಿಧಾನಪೂರ್ವಕ ಜಪಿಸುವದೇ ವೀರಶೈವನ ಮುಖ್ಯ ಆಚರಣೆಯಾಗಿದೆ.

(೧೭೫) ರುದ್ರಾಕ್ಷಿ ಧಾರಣ ಸ್ಥಾನಗಳು:— ಪಶ್ಚಿಮ ಚಕ್ರದಲ್ಲಿ ೧, ಶಿಖಿಯಲ್ಲಿ ಅಥವಾ ಮೂರ್ಧ್ನಿಯಲ್ಲಿ ೩, ಶಿರವನ್ನು ಬಳಸಿ ೩೬, ಪ್ರತಿಯೊಂದು ಕರ್ಣದಲ್ಲಿ ಒಂದೊಂದು, ಕಂಠದಲ್ಲಿ ೩೨, ಉರ ಅಥವಾ ಎದೆಯಲ್ಲಿ ೫೬, ಎರಡು ತೋಳುಗಳಲ್ಲಿ ೧೬, ೧೬, ಎರಡು ಮುಂಗೈಗಳಲ್ಲಿ ೧೨, ೧೨, ವಕ್ಷಸ್ಥಳದಲ್ಲಿ ಹಾರ ಅಥವಾ ಯಜ್ಞೋಪವೀತವಾಗಿ ೧೦೮, ಈ ಪ್ರಕಾರ ರುದ್ರಾಕ್ಷಿಗಳನ್ನು ಭಕ್ತನು ಧರಿಸಬೇಕು. ಈ ರುದ್ರಾಕ್ಷಿಗಳು ಬೇರೆ ಬೇರೆ ಮುಖದವುಗಳಿದ್ದು ಅವುಗಳನ್ನು ಬೇರೆ ಬೇರೆ ವಿಶಿಷ್ಟಸ್ಥಾನಗಳಲ್ಲಿ ಧರಿಸಬೇಕೆಂಬ ನಿಯಮಗಳಿವೆ. ಹಸ್ತದಲ್ಲಿ ಧರಿಸಿದಲ್ಲಿ ದಾನಕೊಡಬಹುದು. ಆದರೆ ದಾನ ತೆಗೆದುಕೊಳ್ಳಬಾರದು. ಬಾಹುವಿನಲ್ಲಿದ್ದರೆ ಪರವಧೂ ಸಂಗವನ್ನು ಮಾಡಕೂಡದು. ಉರದಲ್ಲಿದ್ದರೆ ಅನ್ಯದೈವಕ್ಕೆರಗಬಾರದು. ಹೀಗೆ ರುದ್ರಾಕ್ಷಿಧಾರಣವಾದ ಬಳಿಕ ಉಚ್ಚನೈತಿಕಾಚರಣೆಯುಳ್ಳವನಾಗಿರಬೇಕು. ಜಪಕಾಲದಲ್ಲಿ, ತಪಸ್ಸಿನ ಕಾಲದಲ್ಲಿ ಮತ್ತು ದೇವಪೂಜೆಯಲ್ಲಿ ರುದ್ರಾಕ್ಷಿಗಳನ್ನು ಧರಿಸಬೇಕು. ಹೀಗೆ ಭಕ್ತನು ರುದ್ರಾಕ್ಷಿಯನ್ನರಿದು ಆಚರಿಸಬೇಕು.

(೧೭೬) ರುದ್ರಾಕ್ಷಿಯ ವಿಧಗಳು:— ೧೪ ಮುಖಗಳ ವರೆಗೆ ರುದ್ರಾಕ್ಷಿಗಳಿರುತ್ತವೆ. ಏಕಮುಖ ರುದ್ರಾಕ್ಷಿಯು ಪರಶಿವಗೆ, ೨ ಮುಖವುಳ್ಳ ರುದ್ರಾಕ್ಷಿಯು ಈಶಾನಗೆ, ೩ ಮುಖವುಳ್ಳ ರುದ್ರಾಕ್ಷಿಯು ಅಗ್ನಿಗೆ, ೪ ಮುಖವುಳ್ಳ ರುದ್ರಾಕ್ಷಿಯು ಬ್ರಹ್ಮನಿಗೆ, ೫ ಮುಖವುಳ್ಳ ರುದ್ರಾಕ್ಷಿಯು ಸದಾಶಿವನಿಗೆ, ೬ ಮುಖವುಳ್ಳ ರುದ್ರಾಕ್ಷಿಯು ಷಣ್ಮುಖನಿಗೆ, ೭ ಮುಖವುಳ್ಳ ರುದ್ರಾಕ್ಷಿಯು ಅನಂತನಿಗೆ, ೮ ಮುಖವುಳ್ಳ ರುದ್ರಾಕ್ಷಿಯು ವಿಘ್ನೇಶ್ವರನಿಗೆ, ೯ ಮುಖವುಳ್ಳ ರುದ್ರಾಕ್ಷಿಯು ಭೈರವನಿಗೆ, ೧೦ ಮುಖವುಳ್ಳ ರುದ್ರಾಕ್ಷಿಯು ಮಾಧವನಿಗೆ, ೧೧ ಮುಖವುಳ್ಳ ರುದ್ರಾಕ್ಷಿಯು ಏಕಾದಶ ರುದ್ರರಿಗೆ, ೧೨ ಮುಖವುಳ್ಳ ರುದ್ರಾಕ್ಷಿಯು ದ್ವಾದಿಶಾದಿತ್ಯರಿಗೆ, ೧೩ ಮುಖವುಳ್ಳ ರುದ್ರಾಕ್ಷಿಯು ಮಹೇಶ್ವರನಿಗೆ, ೧೪ ಮುಖವುಳ್ಳ ರುದ್ರಾಕ್ಷಿಯು ಚತುರ್ದಶ ಮನುಗಳಿಗೆ ಸಂಬಂಧಪಡುತ್ತವೆ.

ಶಿಖಾಸ್ಥಾನದಲ್ಲಿ ಏಕಮುಖ ರುದ್ರಾಕ್ಷಿಯನ್ನು, ಮಸ್ತಕದಲ್ಲಿ, ೨ ಮುಖ, ೩ ಮುಖ ಮತ್ತು ೧೨ ಮುಖಗಳುಳ್ಳ ಮೂರು ರುದ್ರಾಕ್ಷಿಗಳನ್ನು, ೧೧ ಮುಖಗಳುಳ್ಳ ರುದ್ರಾಕ್ಷಿಗಳನ್ನು ಶಿರವನ್ನು ಬಳಸಿ, ೫ ಮುಖ ೭ ಮುಖ ಅಥವಾ ೧೦ ಮುಖಗಳುಳ್ಳ ರುದ್ರಾಕ್ಷಿಗಳನ್ನು ಕರ್ಣದಲ್ಲಿ, ಕಂಠದಲ್ಲಿ ೮ ಮುಖಗಳುಳ್ಳ ರುದ್ರಾಕ್ಷಿಗಳನ್ನು, ೬ ಮುಖಗಳುಳ್ಳ ರುದ್ರಾಕ್ಷಿಗಳನ್ನು ೪ ಮುಖಗಳುಳ್ಳ ರುದ್ರಾಕ್ಷಿಗಳನ್ನು ಉರದಲ್ಲಿ, ೧೩ ಮುಖಗಳುಳ್ಳ ರುದ್ರಾಕ್ಷಿಗಳನ್ನು ಬಾಹುವಿನಲ್ಲಿ, ೯ ಮುಖಗಳುಳ್ಳ ರುದ್ರಾಕ್ಷಿಗಳನ್ನು ಮುಂಗೈಯಲ್ಲಿ, ೧೪ ಮುಖಗಳುಳ್ಳ ರುದ್ರಾಕ್ಷಿಗಳನ್ನು ವಕ್ಷಸ್ಥಳದಲ್ಲಿ, ಧರಿಸುವದೆಂದು ವಚನಕಾರರು ಹೇಳುತ್ತಾರೆ.

(೧೭೭) ಚಿದ್ರುದ್ರಾಕ್ಷಿ :— ಚಿದ್ರುದ್ರಾಕ್ಷಿಗಳೆಂತಲೂ ಇದ್ದು ಅವುಗಳ ವಿವರಣೆಯನ್ನು ಮಂತ್ರ ಈ ವಿಷಯದಲ್ಲಿ ವಾಚಕರು ನೋಡತಕ್ಕದ್ದು.

(೧೭೮) ಮಂತ್ರ :— ಪರಮಾತ್ಮನ ನಾಮವೇ ಮಂತ್ರವಾಗಿದೆ. ಇದು ವೀರಶೈವರಲ್ಲಿ 'ಓಂ ನಮಃಶಿವಾಯ' ಎಂದಿದೆ ಇದನ್ನೇ ಅವರು ನೆನೆಯಬೇಕು. ಇದು ಭವಬಂಧನ ದುರಿತಗಳನ್ನು ಗೆಲ್ಲುವದೆಂದು ಬಸವನ ಅಭಿಪ್ರಾಯವು. ವಿವೇಕವು ಹೋದಲ್ಲಿ, ನೆನಹುಗೆಟ್ಟು, ಮತಿ

R. N. B 2554

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ. ೩—೬—೦

ಸಂಪುಟ ೧೬]　　　ಜೂನ ೧೯೪೨.　　　[ಸಂಚಿಕೆ ೯

## ವಿಷಯಾನುಕ್ರಮಣಿಕೆ.

# ರಾ|| ಬ|| ಹಳಕಟ್ಟಿಯವರು



೧೯೫೯ ಜುಲೈ ೨ನೇ ತಾರೀಖಿನ ದಿವಸ ಅಖಿಲಕರ್ನಾಟಕದಲ್ಲೆಲ್ಲ ೮೦ನೆಯ ವರ್ಷದ ವರ್ಧಂತಿಯನ್ನು ಆಚರಿಸಬೇಕೆಂದು ಗೊತ್ತಾಗಿದೆ.

# ಶಿವಾನುಭವ.

ವರ್ಷ ೧೬ | ಜೂನ = ೧೯೪೨. | ಸಂಚಿಕೆ ೯


## ಮಂಗಳವಾಡವು ಬಿಜ್ಜಳನ ರಾಜಧಾನಿಯಾಗಿತ್ತೆ?

(ಶ್ರೀ. ಎನ್. ಲಕ್ಷ್ಮೀನಾರಾಯಣರಾವ್ ಎಮ್. ಎ.)

(ನಾವು ಶಿವಾನುಭವ ಸಂಪುಟ ೧೩ ಸಂಚಿಕೆ ೯-೧೦ ಪುಟ ೪೨೪ ಇವರಲ್ಲಿ "ಬಸವನು ಮೊದಲು ಹೋದದ್ದು ಕಲ್ಯಾಣಕ್ಕೋ ಮಂಗಳವಾಡಕ್ಕೋ" ಎಂಬ ಶೀರ್ಷಿಕೆಯುಳ್ಳ ಲೇಖದಲ್ಲಿ ಬಸವನು ಮೊದಲು ವಿಜಾಪುರ ಜಿಲ್ಲೆಯ ಮಾಯಮ್ಮ ಮೋರೆಯಿಂದ ಸುಮಾರು ೩೦ ಮೈಲು ದೂರವಿರುವ ಮಂಗಳವೇಢೆ' ಎಂಬಲ್ಲಿಗೆ ಮೊದಲು ಹೋದನು, ಅಲ್ಲಿ ಅವನು ಕೆಲವು ವರ್ಷ ಗುಮಾಸ್ತನಾಗಿದ್ದು ಮುಂದೆ ಬರಬರುತ್ತ ಮಂತ್ರಿಪದಾರೂಢನಾದನು, ಅಲ್ಲಿ ಅವನು ೬-೮ ವರ್ಷ ಕಾಲ ಇದ್ದು ದೇಶದಲ್ಲಿ ಪ್ರಸಿದ್ಧನಾದನು ಎಂದು ಬರೆದಿದ್ದೇವೆ. ಆ ಲೇಖದಲ್ಲಿ ನಾವು ಬಿಜ್ಜಳನು ಈ ಪಟ್ಟಣದಲ್ಲಿ ಚಾಲುಕ್ಯರಾಜನ ಮಾಂಡಲಿಕನಾಗಿ ರಾಜ್ಯವಾಳುತ್ತಿದ್ದನೆಂದು ಕೆಲವು ಶಿಲಾಲೇಖಗಳ ಆಧಾರದಿಂದ ಸಿದ್ಧಪಡಿಸಿದ್ದೇವೆ. ಅವನು ಅಲ್ಲಿ ಆಳುತ್ತಿದ್ದಾಗ ರೇವಣಸಿದ್ಧನು ಅವನಲ್ಲಿಗೆ ಬಂದು ಪ್ರಖ್ಯಾತಿಯನ್ನು ಪಡೆದನು, ಆ ಮೇಲೆ ಬಸವನು ಸಹ ಅಲ್ಲಿಗೆ ಬಂದನೆಂತಲೂ ನಿರೂಪಿಸಿದ್ದೇವೆ. ಈ ಲೇಖವನ್ನು ಬರೆಯುವಲ್ಲಿ ಬಸವನು ಸಂಗಮಗ್ರಾಮದಿಂದ ಕಲ್ಯಾಣ ಪಟ್ಟಣಕ್ಕೆ ಮೊದಲು ಹೋಗಲಿಲ್ಲವೆಂಬುದನ್ನು ತಿಳಿಯಪಡಿಸುವದೇ ನಮ್ಮ ಮುಖ್ಯ ಉದ್ದೇಶವಾಗಿತ್ತು. ಈಗ ಶ್ರೀಯುತ ಲಕ್ಷ್ಮೀನಾರಾಯಣರಾವ ಎಮ್. ಎ. ಇವರು ಬಿಜ್ಜಳನ ರಾಜಧಾನಿಯು ಮಂಗಳವಾಡವಾಗಿತ್ತೆಂಬದನ್ನು ಕುರಿತು ಅನೇಕ ಆಧಾರಗಳನ್ನು ಕೊಟ್ಟು "ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯ ಸಂಪುಟ ೨೬ ಸಂಚಿಕೆ ೨ ಇದರಲ್ಲಿ ಒಂದು ಮಹತ್ವದ ಲೇಖವನ್ನು ಪ್ರಸಿದ್ಧಿಸಿದ್ದಾರೆ. ಅದನ್ನು ನಾವು ನಮ್ಮ ವಾಚಕರ ಅವಗಾಹನೆಗಾಗಿ ಇಲ್ಲಿ ಕೊಡುತ್ತೇವೆ— ಸಂಪಾದಕ.)

ಶ್ರೀ ಶ್ರೀಷರಾದ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಹರಿಹರನ 'ಬಸವರಾಜ ದೇವರ ರಗಳೆ'ಯಲ್ಲಿಯೂ ಇದೇ ಕವಿಯಿಂದ ರಚಿತವಾದ 'ರೇವಣಸಿದ್ಧರ ರಗಳೆ'ಯಲ್ಲಿಯೂ ಬಿಜ್ಜಲನ ರಾಜಧಾನಿಯು ಮಂಗಳವಾಡವೆಂದು ಹೇಳಲ್ಪಟ್ಟಿದೆಯೆಂದೂ, ಆದರೆ ಇತರ ವೀರಶೈವ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಈ ಕಳಚುರ್ಯ ಚಕ್ರವರ್ತಿಯ ರಾಜಧಾನಿಯು ಕಲ್ಯಾಣವೆಂದು ಉಕ್ತವಾಗಿದೆಯೆಂದೂ ಹೇಳಿ ಈ ಎರಡು ಪಟ್ಟಣಗಳೂ ಒಂದೇ ಎಂದು ತೋರಬಹುದಾದರೂ ಅವು ಬೇರೆ ಬೇರೆ ಸ್ಥಳಗಳೆಂದೇ ಹರಿಹರನ ಅಭಿಪ್ರಾಯವೆಂಬುದಾಗಿ ನಿರ್ಧರಿಸಿದ್ದಾರೆ.[೧] ಚಾಲುಕ್ಯ ವಂಶದ ರಾಜರಿಗೂ ಕಳಚುರ್ಯ ಮನೆತನದ ಅರಸರಿಗೂ ರಾಜಧಾನಿಯಾಗಿದ್ದ ಕಲ್ಯಾಣವು ಈಗ ಹೈದರಾಬಾದು ಸಂಸ್ಥಾನಕ್ಕೆ ಸೇರಿದ ಬೀದರ್ ಜಿಲ್ಲೆಯಲ್ಲಿರುವ ಕಲ್ಯಾಣಿಯೆಂದೂ, ಮಂಗಳವಾಡವು ಉತ್ತರ ಕರ್ನಾಟಕದ ಸಾಂಗ್ಲಿ ಸಂಸ್ಥಾನದಲ್ಲಿ ಪಂಢರಪುರಕ್ಕೆ ಸುಮಾರು ೧೩ ಮೈಲಿ ದೂರದಲ್ಲಿರುವ ಮಂಗಳವೇಢವೆಂದೂ ತಿಳಿದೇ ಇದೆ. ಹೀಗೆ ಹರಿಹರನಿಗೂ ಮಿಕ್ಕ ವೀರಶೈವ ಕವಿಗಳಿಗೂ ಪ್ರಸಿದ್ಧ ರಾಜನಾದ ಬಿಜ್ಜಲನ ರಾಜಧಾನಿಯ ವಿಷಯದಲ್ಲಿ ಅಭಿಪ್ರಾಯಭೇದವಿರುವುದನ್ನು ನೋಡಿದರೆ ಇವೆರಡರಲ್ಲಿ ಯಾವುದು ನಂಬಿಕೆಗೆ ಅರ್ಹವಾದುದು ಅಥವಾ ಎರಡೂ ವಿಶ್ವಸನೀಯವೇ ಎಂಬ ಪ್ರಶ್ನೆಯು ಹುಟ್ಟುತ್ತದೆ. ವೆಂಕಣ್ಣಯ್ಯನವರು ಹೇಳಿರುವಂತೆ ಬಸವಣ್ಣನವರ ವಿಷಯದಲ್ಲಿ ಜನರಲ್ಲಿ ಪ್ರಚಾರದಲ್ಲಿದ್ದ ಕಥೆಗಳ ಆಧಾರದ ಮೇಲೆಯೇ ವೀರಶೈವ ಕವಿಗಳೆಲ್ಲರೂ ಬಸವಣ್ಣನವರ ಚರಿತ್ರೆಯನ್ನು ಬರೆದರೆಂಬುದು ನಿರ್ವಿವಾದವಾದ ಮಾತು.[೨] ಹಾಗಾದರೆ ಬಸವಣ್ಣನವರ ಚರಿತ್ರೆಯನ್ನು ವರ್ಣಿಸುವ ಗ್ರಂಥಗಳಲ್ಲೆಲ್ಲ 'ಬಸವರಾಜದೇವರ ರಗಳೆ'ಯು ಅತ್ಯಂತ ಪ್ರಾಚೀನವಾದುದರಿಂದಲೂ ಬಿಜ್ಜಲನ ಕಾಲಕ್ಕೂ ಹರಿಹರನ ಕಾಲಕ್ಕೂ ಇರುವ ಅಂತರವು ಹೆಚ್ಚಲ್ಲವಾದುದರಿಂದಲೂ ಈ ಕವಿಯ ಮಾತನ್ನು ಸುಲಭವಾಗಿ ತೆಗೆದುಹಾಕುವುದಕ್ಕಾಗುವದಿಲ್ಲ. ಆದುದರಿಂದ ಬಿಜ್ಜಲನ ರಾಜಧಾನಿಯು ಎಂದಾದರೂ ಮಂಗಳವಾಡವಾಗಿತ್ತೆಂಬುದಕ್ಕೆ ಆಧಾರವೇನಾದರೂ ಇದೆಯೋ ಎಂಬ ಅಂಶವನ್ನು ಪರಿಶೀಲಿಸುವುದು ಅವಶ್ಯ.

---

೧ 'ಬಸವರಾಜ ದೇವರಗಳೆ', ಪೀಠಿಕೆ, ಪುಟ xix.

೨ Ibid ಪುಟ ix.

ಈ ದೃಷ್ಟಿಯಿಂದ ಶಾಸನಗಳನ್ನು ಹುಡುಕಿದರೆ ನಮಗೇನಾದರೂ ಸಹಾಯ ದೊರಕೀತೆಂಬ ಆಶೆಯಿಂದ ಅನೇಕ ಶಾಸನಗಳನ್ನು ಶೋಧಿಸಿದಾಗ ಮಂಗಳವಾಡವು ಕಲಚುರ್ಯ ವಂಶದ ನರಪತಿಗಳ ರಾಜಧಾನಿಗಳಲ್ಲೊಂದಾಗಿತ್ತೆಂದು ಸ್ಪಷ್ಟವಾಗಿ ತಿಳಿಸುವ ಶಾಸನಗಳು ಕೆಲವು ನನಗೆ ಸಿಕ್ಕಿದುವು. ಅವುಗಳಲ್ಲಿ ಮುಖ್ಯವಾದುದು ಉತ್ತರ ಕರ್ನಾಟಕದ ಜತ್ ಸಂಸ್ಥಾನದೊಳಗಿರುವ ಮಾಡಗಿಹಾಳೆಂಬ ಗ್ರಾಮದಲ್ಲಿದೆ.[4] ಇದು ಕಳಚುರಿಯ ಭುಜಬಳಚಕ್ರವರ್ತಿ ರಾಯಮುರಾರಿ ಸೋವಿದೇವನ ಕಾಲದ್ದು. ಶಕವರ್ಷ ೧೦೯೪ನೆಯ ನಂದನ ಸಂವತ್ಸರದ ಫಾಲ್ಗುಣದಮಾವಾಸ್ಯೆಯಾದಿವಾರ ಸೂರ್ಯಗ್ರಹಣದಂದು (ಕ್ರಿ. ಶ. ೧೧೭೩, ಜನವರಿ ೨೭) ತಱಿಕಾಡು ದೇಶದೊಳಗಣ ಮಾಳಿಗೆಯ (ಈಗಿನ ಮಾಡಗಿಹಾಳು) ಪ್ರಭು ಬಿಜ್ಜಯನಾಯಕನು ತಾನು ಆ ಊರಿನಲ್ಲಿ ಕಟ್ಟಿಸಿದ ಶ್ರೀರಾಯಮುರಾರಿ ಸೋಮನಾಥದೇವರ, ಶ್ರೀ ಬಿಜ್ಜೇಶ್ವರದೇವರ ದೇವಾಲಯಗಳಲ್ಲಿ ಅಂಗರಂಗಭೋಗಖಂಡಸ್ಫುಟಿತಜೀರ್ಣೋದ್ಧಾರಕ್ಕಂ ತಪೋಧನರಾಹಾರದಾನಕ್ಕಂ ಆ ಗ್ರಾಮದಲ್ಲಿ ಭೂದಾನ ಮಾಡಿದನೆಂದು ತಿಳಿಯಪಡಿಸುವುದೇ ಈ ಶಾಸನದ ಮುಖ್ಯೋದ್ದೇಶ. ಆದರೂ ಕನ್ನಡ ಶಾಸನಗಳು ಪ್ರಾಯಿಕವಾಗಿ ಅನುಸರಿಸುವ ಪದ್ಧತಿಯಂತೆ ಈ ಶಿಲಾಲೇಖವೂ ಉಕ್ತಕಾಲದಲ್ಲಿ ನಾಡನ್ನು ಆಳುತ್ತಿದ್ದ ರಾಜನು ಇಂತಹನೆಂದು ಹೇಳುವುದಕ್ಕೆ ಮೊದಲು ರಾಜನ ವಂಶಾವಳಿಯನ್ನು ವರ್ಣಿಸಿದೆ. ಈ ವಂಶಾವಳಿಯನ್ನು ವಿವರಿಸುವ ಪದ್ಯಗಳು ನಮ್ಮ ಪ್ರಕೃತ ವಿಷಯಕ್ಕೆ ಸಂಬಂಧಪಟ್ಟ ಅಂಶಗಳನ್ನು ಒಳಕೊಂಡಿವೆಯಾದ ಕಾರಣ ಅವುಗಳನ್ನು ಇಲ್ಲಿ ಕೊಡುತ್ತೇನೆ:

ಸ್ಫುರದಂಭೋನಿಧಿವೇಳೆ ಮೂವಳಸೆ ಜಂಬೂದ್ವೀಪವತ್ಯಂತ ಬಂ
ಧುರವಾದ್ವೀಪದ ಮಧ್ಯದಲ್ಲಿ ಸೊಗಯಿಕ್ಕುಂ ಬಾಂಬರಂ ನೀಳ್ದು ಮಂ
ದರ ವಾಮಂದರದಕ್ಷಿಣಸ್ಥ ಭರತಕ್ಷೇತ್ರಂ ಜಗಂನೇತ್ರ ಭಾ
ಸುರವಾಕ್ಷೇತ್ರವಧೂಶಿರೋಜನಿತ ಲೀಲಾಕುಂತಳಂ ಕುಂತಳಂ ॥

ಎನಿಪಾದೇಶದ ತೊಡವೆಂ
ದೆನಿಕುಂ ತಱಿಕಾರ (ಡ) ನಾಡು ತದ್ವಿಷೆ (ಷ) ಯಕ್ಕಾ

---

4 Epigraphia Indic Vol. XV P.P. 315 ff.

ಸ್ಯನಿಭಂ ಮಂಗಳಿವೇಡಂ
ಜನರಮ್ಯಂ ತತುಪುರೀಶವರಂನ್ವಯದೊಳು ॥

ನೆಗರ್ದಂ ಕಂನಮನಾಕನ
ಮಗನೆಸದಂ ರಾಜಭೂಭುಜಂ ತನುಮಹಿಪಂ
ಗೊಗೆದತ್ರಿಪುರುಶ (ಷ)ರವೊಲ
ಮ್ಮುಗಿ ಸಂಕಮಜೋಗಮಾಂಕರಪಗತಸಂ(ಶಂ)ಕರು ॥

ಆವರೊಳಗೆ॥

ವಿ(ವೃ)॥ ಜಗದೀಶಂ ಚಲದಂಕರಾಮನದಟಂ ವೀರಾರಿಭೂಪಾಪಹಂ
ನೆಗರ್ದಂ ವಿಶ್ರುತನಾದಿರಾಜಬಳವತ್ತೇಜೋಗಮಂ ಜೋಗಮಂ
ನೆಗರ್ದಂ ತತುಸುತನುದ್ಧತಾರಿಬಳಮಂ ಹೆಣ್ಮಾಡಿ ಹೆಮ್ಮಾಡಿ ತಾಂ
ನೆಗರ್ದಂ ತತುಸುತನಿಷ್ಟಚಾತಕನವಾಂಭೋಭೃಜ್ಜಲಂ ಬಿಜ್ಜಲಂ ॥

ಪರನಾರೀಸೋದರಂ ಭೂವಿನುತಸುಭಟಂರಾದಿತ್ಯದೇವಂ ಪ್ರತಾಪೋ
ದ್ಧರಲಂಕಾಧೀಶ್ವರಂ ಗೂರ್ಜ್ಜರಮಗಧಕಳಿಂಗಾಂಧ್ರಸೌರಾಷ್ಟ್ರವೇಂಗೀ
ಶ್ವರಬಾಹಾಭೀಳಸೌ(ಶೌ)ರ್ಯ್ಯಪ್ರಕಟವಿಸ್ಪಾ(ಸ್ಫಾ)ರವಜ್ರಂ ನರೇಂದ್ರಾ
ಭರಣಂ ವೈರೀಭಕಂಠೀರವನತುಳಯೆ(ಯ)ಶಂ ಬಿಜ್ಜಲಕ್ಷೋಣಿಪಾಳಂ ॥

ಲಾಳಂಜಾಳ್ಗೊಟ್ಟುಕೋಳ್ಗೊಟ್ಟುಳಿದನುಳಿದನಾಚೇರಮಂ ಬೀರಮಂನೇ
ಪಾಳಂ ಕಾಡಾಳೆ(ಳ)ಯಕ್ಕೆಯ್ದಿದನತಿಭಯದಿಂ ಸೌ(ಶೌ)ರ್ಯ್ಯಸಂಪತ್ತಿಯಿಂ ಪಾಂ
ಚಾಳಂ ಚಾಳಾದ ನಾಳಾಳೆನಿಸಿ ಬರ್ದುಕಿದಂ ಭೀಮಸಂಗ್ರಾಮಕೇಳೀ
ಲೋಳಂ ಚೋಳಂದಿಟಂ ಬಂದಪನೆನಲದಟಂ ಬಿಜ್ಜಲಕ್ಷೋಣಿಪಾಳಂ ॥

ಅಂತುಮಲ್ಲದೆಯುಂ॥

ರಾಜಮಹಾಭಿದಾನಮನೆ ಚಂದ್ರನೊಳಪ್ರತಿಮಪ್ರತಾಪದಾ
ರಾಜತೆಯಂ ನಿದಾಘಸಮಯಾರ್ಕ್ಕನೊಳೂರ್ಜ್ಜಿತಸಾರ್ಬ್ಬಭೌಮನಂ
ಬೀಜಸಮಂ ದಿಶಾಕರಿಯೊಳಲ್ಲದೆ ವೈರಿನೃಪಾಳರಲ್ಲಿ ರಾ
ರಾಜಿಸಲೀಯದಿಂತು ನೆಗರ್ದ ವಿಭು ದೋರ್ಬ್ಬಳಚಕ್ರಿ ಬಿಜ್ಜಲಂ ॥

ಕಂ॥ ಆತನ ತನಯಂ ಲೋಕ
ಖ್ಯಾತಂ ಕಾಂತಾನಿಕಾಯರಾಜಿತಲಕ್ಷ್ಮೀ

ಜಾತಂ ರಾಯಮುರಾರಿ ಸ
ಭೀತಾನತಭೂಪಕುಮುದಸೋಮಂ ಸೋಮಂ ॥

ಇವುಗಳಲ್ಲಿ ಎರಡನೆಯ ಪದ್ಯದಿಂದ ಬಿಜ್ಜಲನ ಪೂರ್ವಜರು ಕುಂತಲ ದೇಶಕ್ಕೆ ಆಭರಣದಂತಿದ್ದ ತರ್ದವಾಡನಾಡೆಂಬ ವಿಷಯದ ಮುಖಶೋಪಾದಿಯಲ್ಲಿ ಪ್ರಕಾಶಿಸುತ್ತಿದ್ದ ಮಂಗಳವೇಡಪುರದ ಒಡೆಯರಾಗಿದ್ದರೆಂದು ಸ್ಪಷ್ಟವಾಗುತ್ತದೆ. ಬಿಜ್ಜಲನು ಕುಂತಲದೇಶಕ್ಕೆ ಅಧಿಪತಿಯಾಗುವುದಕ್ಕೆ ಮುಂಚೆ ಚಾಲುಕ್ಯರ ಸಾಮಂತನಾಗಿ ಅವರ ಕೈಕೆಳಗೆ ಅನೇಕ ಪ್ರಾಂತಗಳನ್ನು ಆಳುತ್ತಿದ್ದುದೇ ಅಲ್ಲದೆ ಚಾಲುಕ್ಯರ ಸೈನ್ಯಾಧಿಪತಿಯೂ ಆಗಿದ್ದನೆಂಬುದನ್ನು ಹೊಸದಾಗಿ ಹೇಳಬೇಕಾಗಿಲ್ಲ. ಸುಮಾರು ಕ್ರಿ. ಶ ೧೧೫೬ರಲ್ಲಿ ಬಿಜ್ಜಲನು ತನ್ನ ಸ್ಥಾನಬಲದಿಂದ ತನ್ನ ಪ್ರಾಬಲ್ಯವನ್ನು ಬೆಳಸಿ ತನ್ನ ಒಡೆಯರಾದ ಚಾಲುಕ್ಯರಿಗೆ ದ್ರೋಹಮಾಡಿ ಅವರ ರಾಜ್ಯವನ್ನು ಆಕ್ರಮಿಸಿಕೊಂಡನೆಂಬುದೂ ಸರ್ವರಿಗೂ ವಿದಿತವಾದ ಸಂಗತಿಯೇ. ಚಾಲುಕ್ಯ ರಾಜ್ಯವು ಇವನ ಕೈವಶವಾದಮೇಲೆ ಈತನು ಕಲ್ಯಾಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದರೂ ಪೂರ್ವಿಕರ ಕಾಲದಿಂದಲೂ ಸ್ವಸ್ಥಾನವಾಗಿದ್ದ ಮಂಗಳವೇಡವೂ ಇವನ ನೆಲೆವೀಡುಗಳಲ್ಲೊಂದಾಗಿದ್ದಿರಬೇಕೆಂದು ನಿಸ್ಸಂಶಯವಾಗಿ ಹೇಳಬಹುದು. ಶಾಸನಗಳು ಈ ಅಂಶವನ್ನು ಪುಷ್ಟೀಕರಿಸುತ್ತವೆ. ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಸಂಖನಲ್ಲಿರುವ ಬಿಜ್ಜಲದೇವನದೇ ಆದ ಒಂದು ಶಾಸನ[೪]ದಲ್ಲಿ ಆತನು ರಾಜಧಾನಿ ಮಂಗಳವೇಡದಲ್ಲಿ ಆಳುತ್ತಿದ್ದನೆಂದು ನಿಸ್ಸಂದಿಗ್ಧವಾಗಿ ಹೇಳಿದೆ. ಇದರಲ್ಲಿ ಕಾಲವನ್ನು ಒಳಗೊಂಡಿರುವ ಭಾಗ ಶಿಥಿಲವಾಗಿದೆ. ಶಕವರ್ಷದ ಉಲ್ಲೇಖ ನಷ್ಟವಾಗಿದೆ. ಆದರೆ ತಿಂಗಳು ಮುಂತಾದ ವಿವರಗಳು-- ಪುಷ್ಯ, ಅಮಾವಾಸ್ಯೆ, ಸೂರ್ಯಗ್ರಹಣ, ಸೋಮವಾರ--ಉಳಿದಿವೆ. ಈ ಬಿಜ್ಜಲನ ಹಿರಿಯ ಮಗನಾದ ರಾಯಮುರಾರಿ ಸೋಮೇಶ್ವರ ಅಥವಾ ಸೋವಿದೇವನ ಕಾಲದ ಇನ್ನೂ ಮೂರು ಶಾಸನಗಳು ಇದನ್ನು ಸ್ಥಿರಪಡಿಸುತ್ತವೆ. ಇವುಗಳಲ್ಲಿ ಎರಡು ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿಗೆ ಸೇರಿದ ಕಡಲೆವಾಡ ಗ್ರಾಮದಲ್ಲಿವೆ.[೫] ಮೂರನೆಯದು ಬಿಜಾಪುರದ ಪ್ರಾಚ್ಯವಸ್ತು ಪ್ರದರ್ಶನಶಾಲೆ

---

೪ No. 68 of the Bombay Karnatak Epigraphical collection
೫ for 1937-38. Nos. 37 and 41 of 1936--37 of the same Collection.

(ಮ್ಯೂಜಿಯಂ) ಯಲ್ಲಿದೆ.[೬] ಕಡಲೆವಾಡದ ಶಿಲಾಶಾಸನಗಳಲ್ಲೊಂದರ ಕಾಲವು ಶಕ ೧೦೯೦ನೆಯ ವರ್ಷದ ಸರ್ವಧಾರಿ ಸಂವತ್ಸರ (ಕ್ರಿ. ಶ. ೧೧೬೮); ಮತ್ತೊಂದರ ಕಾಲವು ಶಕ ೧೦೯೭ನೆಯ ವರ್ಷದ ಮನ್ಮಥ ಸಂವತ್ಸರ (ಕ್ರಿ. ಶ. ೧೧೭೬). ಬಿಜಾಪುರದ ಶಾಸನವು ವಿಜಯ ಸಂವತ್ಸರದಲ್ಲಿ (ಕ್ರಿ. ಶ. ೧೧೭೩) ಬರೆಯಲ್ಪಟ್ಟಿತೆಂದು ಅದರಲ್ಲಿ ಉಕ್ತವಾಗಿದೆ. ಈ ಮೂರು ಶಿಲಾಲೇಖಗಳೂ ಸೋಮೇಶ್ವರನು 'ಮಂಗಳವಾಡ (ಮಂಗಳವೇಡ) ದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂದ ರಾಜ್ಯಂಗೆಯ್ಯುತ್ತಿದ್ದ' ನೆಂದು ಸ್ಪಷ್ಟವಾಗಿ ಹೇಳುತ್ತವೆ.

---

೬ No. 160 of 1933--34 of the same Collection.

# ಬಸವೇಶ್ವರನ ಚರಿತ್ರೆ '

(ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್‌ಎಲ್. ಬಿ. ವಿಜಾಪುರ)

[ಲೇಖಾಂಕ—೧೦]

## ರೇವಣಸಿದ್ಧ—ಬಸವ

ನಾವು ಹಿಂದಿನ ಸಂಚಿಕೆಯಲ್ಲಿ ಬಸವನಿಗೆ ಗುರುವು ಯಾರಿದ್ದ ರೆಂಬುದನ್ನು ಕುರಿತು ವಿವೇಚಿಸಿದ್ದೇವೆ. ಆದರಲ್ಲಿ ನಾವು ಯಾವ ಮಹತ್ವದ ವ್ಯಕ್ತಿಯು ಬಸವನಿಗೆ ಗುರುವಾಗಿ ಬೋಧಿಸಿರುವದಿಲ್ಲವೆಂತಲೂ, ಬಸವನು ಸ್ವಾನುಭವವನ್ನು ಹೊಂದಿ ಆಗ ಪ್ರಚಲಿತವಿದ್ದ ಧರ್ಮದಲ್ಲಿ ಯಾರೋ ಒಬ್ಬರಿಂದ ಲಿಂಗಧಾರಿಯಾಗಿ ಆದರಲ್ಲಿ ಸೇರ್ಪಡೆಯಾಗಿರಬೇಕೆಂತಲೂ ನಿವೇದಿಸಿದ್ದೇವೆ. ಹೀಗೆ ಬಸವನು ವೀರಶೈವ ಧರ್ಮದಲ್ಲಿ ಪ್ರವೇಶಿಸಿದ ಬಳಿಕ ಅವನೂ ಅವನ ಕಾಲದಲ್ಲಿದ್ದ ಶಿವಶರಣರೂ ಕಲ್ಯಾಣ ಪಟ್ಟಣದಲ್ಲಿ ಕೂಡಿಕೊಂಡು ಶಿವಾನುಭವ ಮಂಟಪವನ್ನು ಏರ್ಪಡಿಸಿದರೆಂತಲೂ ಅಲ್ಲಿ ಪ್ರಕಟವಾದ ಸಿದ್ಧಾಂತಗಳನ್ನು ಅವರು ದೇಶದಲ್ಲಿ ಪ್ರಚಾರ ಪಡಿಸುತ್ತ ಹೋದರೆಂತಲೂ ಆದರಲ್ಲಿ ನಿರೂಪಿಸಿದ್ದೇವೆ. ಹೀಗೆ ಈ ಮಹಾನುಭಾವರು ಪ್ರಕಟಮಾಡಿದ ವಾಙ್ಮಯವೇ ವಚನಶಾಸ್ತ್ರವೆಂದು ಪ್ರಸಿದ್ಧವಾಗಿರುತ್ತದೆ.

ಬಸವೇಶ್ವರನಿದ್ದ ಶತಮಾನದಲ್ಲಿಯೇ ರೇವಣಸಿದ್ಧೇಶ್ವರನೂ ಕೂಡ ಉದಯವಾದನೆಂಬುದು ಅವನ ಚರಿತ್ರೆಯಿಂದ ತಿಳಿದು ಬರುತ್ತದೆ. ಅವನು ಬಿಜ್ಜಳನ ಕಾಲದಲ್ಲಿಯೇ ತರ್ದೇವಾಡಿ ನಾಡಿನಲ್ಲಿರುವ ಮಂಗಳವೇಡೆ ಎಂಬಲ್ಲಿ ಪ್ರಖ್ಯಾತಿಗೆ ಬಂದನು. ಬಸವನು ಸಹ ಬಿಜ್ಜಳನ ಕಾಲದಲ್ಲಿ ಪ್ರಸಿದ್ಧಿಗೆ ಬಂದರೂ ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಬಸವನ ಉಲ್ಲೇಖವಿರುವದಿಲ್ಲ ಮತ್ತು ಬಸವನ ಚರಿತ್ರೆಯಲ್ಲಿ ರೇವಣಸಿದ್ಧೇಶ್ವರನ ಉಲ್ಲೇಖವಿಲ್ಲ ಇದರಿಂದ ಈ ಉಭಯತರು ಬಿಜ್ಜಳನ ಕಾಲದಲ್ಲಿದ್ದರೂ ಅವರು ಅವನ ಆಳಿಕೆಯ ಬೇರೆ ಬೇರೆ ಭಾಗಗಳಲ್ಲಿ ಪ್ರಸಿದ್ಧಿಗೆ ಬಂದಿರಬೇಕೆಂಬ ಅನುಮಾನವು ಉಂಟಾಗುತ್ತದೆ. ರೇವಣಸಿದ್ಧೇಶ್ವ

ರನ ಚರಿತ್ರೆಯಿಂದ ಅವನು ಬಸವನಕಿಂತಲು ಸ್ವಲ್ಪಕಾಲ ಮೊದಲು ಪ್ರಸಿದ್ಧಿಗೆ ಬಂದಿರಬೇಕೆಂದು ತಿಳಿಯಬೇಕಾಗುತ್ತದೆ. ಆದ್ದರಿಂದ ಬಿಜ್ಜಳನು ತರ್ದೆವಾಡಿ ನಾಡಿನಲ್ಲಿ ಚಾಲುಕ್ಯರಾಜನಿಗೆ ಮಾಂಡಲಿಕನಾಗಿ ಮಾತ್ರ ಆಳುತ್ತಿದ್ದಾಗ ಅವನು ಪ್ರಸಿದ್ಧಿಗೆ ಬಂದಿರಬೇಕು. ಅವನ ಕೃತಿಗಳು ಬಸವನಿಗೆ ಬಹುಶಃ ಗೊತ್ತಿರಬಹುದು. ಹೀಗಿದ್ದರೂ ಬಸವನು ತನ್ನ ವಚನಗಳಲ್ಲಿ ಅವನ ಹೆಸರನ್ನು ಏಕೆ ತೆಗೆದುಕೊಂಡಿಲ್ಲೆಂಬ ಮಹತ್ವದ ಪ್ರಶ್ನೆಯು ಹೊರಡುತ್ತದೆ. ಈ ಒಂದು ಸಂಗತಿಯಿಂದ ಈಚೆಗೆ ಜನರಲ್ಲಿ ಅನೇಕ ತಪ್ಪು ಅಭಿಪ್ರಾಯಗಳು ಉಂಟಾಗಿರುತ್ತವೆ. ರೇವಣಸಿದ್ಧೇಶ್ವರನು ಪಂಚಾಚಾರ್ಯರಲ್ಲಿ ಮಹತ್ವಿಕನೆಂದು ಎಣಿಸಲ್ಪಟ್ಟಿರುವದರಿಂದ ಅವನ ಹೆಸರನ್ನು ಬಸವನು ಬುದ್ಧಿಪುರಸ್ಸರವಾಗಿ ಬಿಟ್ಟುಕೊಟ್ಟು ಹೊಸತರದ ಧರ್ಮವನ್ನು ಸ್ಥಾಪಿಸಿದನೆಂತಲೂ ಅವನು ರೇವಣಸಿದ್ಧೇಶ್ವರನಿಗೆ ಕೇವಲ ವಿರೋಧಿಯಾಗಿದ್ದನೆಂತಲೂ ಅನೇಕರು ತಿಳಿದಿದ್ದಾರೆ. ಈಗ ಕೆಲವೆಡೆಗಳಲ್ಲಿ ಕಂಡುಬರುವ ವಿರಕ್ತಪಕ್ಷ ಮತ್ತು ಪಂಚಾಚಾರ್ಯ ಪಕ್ಷನೆಂಬ ಪಕ್ಷಗಳು ಬಲಪಡಲಿಕ್ಕೆ ಇಂಥ ತಪ್ಪು ತಿಳುವಳಿಕೆಗಳೇ ಕಾರಣವಾಗಿರುತ್ತವೆ. ಆದರೆ ಐತಿಹಾಸಿಕ ದೃಷ್ಟಿಯಿಂದ ಈ ವಿಷಯವನ್ನು ವಿಚಾರಮಾಡಿ ನೋಡಿದಲ್ಲಿ ಈ ತರದ ಪರಸ್ಪರ ವೈಷಮ್ಯವು ವೀರಶೈವ ಪುರಾತನ ಕಾಲದ ಧಾರ್ಮಿಕ ಪುರುಷರಲ್ಲಿದ್ದದ್ದು ಕಂಡು ಬರುವದಿಲ್ಲ. ಕಾಲ ನಿಯಮಕ್ಕನುಸರಿಸಿ ವೀರಶೈವ ಧರ್ಮದಲ್ಲಿ ಕೆಲವು ಬದಲಾವಣೆಗಳುಂಟಾಗಿರಬಹುದು. ಆದರೆ ಇದರಲ್ಲಿ ಧಾರ್ಮಿಕ ಭಿನ್ನ ಮತಗಳುಂಟಾಗಿದ್ದು ಅದರ ವಾಙ್ಮಯದಿಂದ ತಿಳಿದುಬರುವದಿಲ್ಲ.

ಹೀಗಿದ್ದರೆ ಬಸವನು ತನ್ನ ವಚನಗಳಲ್ಲಿ ಪಂಚಾಚಾರ್ಯರಲ್ಲಿ ಯಾರನ್ನೂ ಕೂಡ ಏಕೆ ನಿರ್ದೇಶಿಸಿಲ್ಲೆಂದು ಮೇಲ್ಕಂಡ ಆಕ್ಷೇಪಕರು ಪ್ರಶ್ನೆ ಮಾಡುತ್ತಾರೆ. ಆದರೆ ಇವರು ರೇವಣಸಿದ್ಧೇಶ್ವರನಂತೆಯೇ ಬಸವನು ತನ್ನ ವಚನಗಳಲ್ಲಿ ಸಿದ್ಧರಾಮ, ಮಹಾದೇವಿಯಕ್ಕ ಹರಳಯ್ಯ, ಮಧುವರಸ ಇಂಥ ಅನೇಕ ಶಿವಶರಣರ ಹೆಸರುಗಳನ್ನು ಎತ್ತಿರುವದಿಲ್ಲ. ಆದರೆ ಚನ್ನಯ್ಯ, ಕಕ್ಕಯ್ಯ, ದೇವರದಾಸಿಮಯ್ಯ, ಕೆಂಭಾವಿ ಭೋಗಣ್ಣ ಇಂಥವರ ಹೆಸರುಗಳನ್ನು ಅನೇಕಸಾರೆ ಎತ್ತಿದ್ದಾನೆ ಮತ್ತು ಅಲ್ಲಮಪ್ರಭುವಿನ ಹೆಸರನ್ನು ಒಮ್ಮೆ ಮಾತ್ರ ತೆಗೆದುಕೊಂಡಿದ್ದಾನೆ. ಇಷ್ಟರಮೇಲಿಂದ ಬಸವನು ಸಿದ್ಧರಾಮ ಮತ್ತು ಮಹಾದೇವಿಯಕ್ಕಗಳ ವಿರೋ

ಧಿಯಾಗಿದ್ದನು ಮತ್ತು ಅಲ್ಲಮಪ್ರಭುವಿನನ್ನು ವಿಶೇಷವಾಗಿ ಅವನು ಮನ್ನಿಸುತ್ತಿರಲಿಲ್ಲ ಎಂದು ಅನುಮಾನವನ್ನು ತೆಗೆಯುವದು ಬಹು ತಪ್ಪಾದದ್ದು. ಬಸವೇಶ್ವರನ ಮತ್ತು ರೇವಣಸಿದ್ಧೇಶ್ವರನ ಚರಿತ್ರೆಗಳನ್ನು ನಾವು ನಿರೀಕ್ಷಿಸಿದಲ್ಲಿ ಬಸವೇಶ್ವರನು ರೇವಣಸಿದ್ಧೇಶ್ವರನನ್ನು ಉಲ್ಲೇಖಿಸದಿರಲಿಕ್ಕೆ ಕೆಲವು ಕಾರಣಗಳಿರುತ್ತವೆಂದು ನಮಗೆ ತೋರುತ್ತದೆ. ಅವುಗಳನ್ನು ವಾಚಕರ ಅವಗಾಹನೆಗೋಸ್ಕರ ನಾವು ಇಲ್ಲಿ ಇಡುತ್ತೇವೆ

ರೇವಣಸಿದ್ಧೇಶ್ವರನ ಚರಿತ್ರೆಯು ಮೇಲಿಂದ ಅವನು ಕೆಲವು ಕಾಲ ಮಾತ್ರ ಮಂಗಳವಾಡ ಪ್ರಾಂತದಲ್ಲಿದ್ದು ಮುಂದೆ ಅದನ್ನು ಬಿಟ್ಟು ಕೊಟ್ಟು ಬೇರೆಕಡೆಗೆ ಹೋಗಿರಬೇಕೆಂದು ಸ್ಪಷ್ಟವಾಗುತ್ತದೆ. ಅವನು ಹೀಗೆ ಹೋಗುವ ಕಾಲದಲ್ಲಿ ತನ್ನ ಮಗನಾದ ರುದ್ರಮುನಿಗೆ ಪಟ್ಟಗಟ್ಟಿದನೆಂದು ಹರಿಹರನು ಹೇಳುತ್ತಾನೆ. ಮುಂದೆ ಬಸವನು ಪ್ರಸಿದ್ಧಿಗೆ ಬಂದಕಾಲದಲ್ಲಿ ರೇವಣಸಿದ್ಧನು ಪುನಃ ಕಲ್ಯಾಣಕ್ಕಾಗಲಿ ಅಥವಾ ಮಂಗಳವಾಡಕ್ಕಾಗಲಿ ಬಂದು ವಾಸಿಸಿದ್ದು ಅವನ ಚರಿತ್ರೆಯಿಂದ ತಿಳಿದುಬರುವದಿಲ್ಲ. ಅವನು ಮುಂದೆ ದಕ್ಷಿಣದೇಶಕ್ಕೆ ತೆರಳಿ ಅಲ್ಲಿಯೇ ಬಹಳ ಕಾಲವಾಸಮಾಡಿರಲಿಕ್ಕೆಬೇಕೆಂದು ತೋರುತ್ತದೆ. ಅವನು ಮೈಸೂರ ಸಂಸ್ಥಾನದಲ್ಲಿ ಕೊಲ್ಲೇಸಪೇಟೆ ಅಥವಾ ಕೊಲ್ಲಿಪಾಕಿ ಈ ಸ್ಥಳಗಳಲ್ಲಿ ವಾಸಿಸುತ್ತಿರಬೇಕು. ಅಲ್ಲಿ ಅವನ ಅನೇಕ ಕುರುಹುಗಳು ಈಗಲೂ ದೃಗ್ಗೋಚರವಾಗುತ್ತವೆ. ಈ ಪ್ರಕಾರ ಬಸವ ಮತ್ತು ರೇವಣಸಿದ್ಧೇಶ್ವರ ಇವರಲ್ಲಿ ಪರಸ್ಪರ ಸಂಬಂಧವು ತಪ್ಪಿಹೋಗಿರುವದರಿಂದ ಅವರು ಪರಸ್ಪರರನ್ನು ಉಲ್ಲೇಖ ಮಾಡಿಲ್ಲೆಂದು ನಮ್ಮ ಊಹೆ ಇದೆ.

ಮಹತ್ವಿಕ ಪುರುಷರು ಇದ್ದ ಕಾಲದಲ್ಲಿ ಅವರ ಪ್ರಸಿದ್ಧಿಯು ಜನರಲ್ಲಿರುವದಿಲ್ಲೆಂಬ ವಿಷಯವನ್ನು ಸಹ ನಾವು ಲಕ್ಷಿಸತಕ್ಕದ್ದು. ಬಸವನ ಖ್ಯಾತಿಯು ಈಗ ಎಷ್ಟು ಇದ್ದರೂ ಕೂಡ ಅವನು ಜೀವಿಸಿದ್ದಾಗ್ಗೆ ಆರಂಭದಲ್ಲಿ ಅವನು ಧರ್ಮಭ್ರಷ್ಟನು ಎಂದು ಸಮಾಜದಲ್ಲಿ ಹಳಿಯಲ್ಪಟ್ಟಿರಬೇಕು. ಮುಂದೆ ಅವನು ಮಂಗಳವಾಡದಲ್ಲಿ ಬಿಜ್ಜಳನಲ್ಲಿ ನೌಕರಿಯನ್ನು ಸಂಪಾದಿಸಿದ ಬಳಿಕಂತೂ ಅವನು ಜನರಲ್ಲಿ ಯಾವನೋ ಒಬ್ಬ ಸಾಮಾನ್ಯ ಗುಮಾಸ್ತನಿರಬೇಕೆಂದು ತಿಳಿಯಲ್ಪಟ್ಟಿರಲಿಕ್ಕೆಬೇಕು. ಮುಂದೆ ಮಂತ್ರಿಯಾದ ಬಳಿಕ ಸಹ ಅವನ ವಿಷಯವಾಗಿ ರಾಜ್ಯದಲ್ಲಿ

ಅನೇಕ ವಿರೋಧಾಭಿಪ್ರಾಯಗಳು ಉಂಟಾಗಿದ್ದವು. ಅಲ್ಲದೆ ಅವನ ಬೆಂಬಲಿಗರು ಅತಿಸಾಮಾನ್ಯ ಜನರು. ಈ ಸ್ಥಿತಿಯಲ್ಲಿ ಅವನಿದ್ದ ಕಾಲದಲ್ಲಿ ಜನರು ವಿಶೇಷವಾಗಿ ಅವನ ವರ್ಣನೆ ಮಾಡುವ ಸಂಭವವಿಲ್ಲ. ಈ ಕಾರಣದಿಂದ ಬಸವನ ಕಾಲದ ಶಿಲಾಲೇಖಗಳಲ್ಲಿ ಅವನ ಹೆಸರು ಉಪಲಬ್ಧವಿರುವದಿಲ್ಲ. ಆದರೆ ಮುಂದೆ ೭೦-೮೦ ವರ್ಷಗಳ ತರುವಾಯ ಅವನ ಉಲ್ಲೇಖಗಳು ಶಿಲಾಲೇಖಗಳಲ್ಲಿ ದೊರೆಯ ಹತ್ತುತ್ತವೆ. ಇಷ್ಟು ಕಾಲವಾದ ಮೇಲೆ ಅವನು ಮಾಡಿದ ಕಾರ್ಯಗಳ ಮಹತ್ವವು ಜನರಿಗೆ ಗೊತ್ತಾಗಿರಲಿಕ್ಕೆಬೇಕು. ರೇವಣಸಿದ್ಧೇಶ್ವರನ ವಿಷಯವಾಗಿಯೂ ನಾವು ಹೀಗೆಯೇ ಅನುಮಾನ ಮಾಡುತ್ತೇವೆ. ಬಸವೇಶ್ವರನು ತನ್ನ ವಚನಗಳಲ್ಲಿ ತನ್ನಕಿಂತಲೂ ಒಂದು ನೂರು ವರ್ಷಗಳ ಹಿಂದೆ ಇದ್ದ ದೇವರದಾಸಿಮಯ್ಯನನ್ನು ಬಹು ಭಕ್ತಿಭಾವದಿಂದ ಕೊಂಡಾಡುತ್ತಾನೆ. ಆದರೆ ಅವನು ರೇವಣಸಿದ್ಧೇಶ್ವರನ ಹೆಸರನ್ನು ತೆಗೆದುಕೊಂಡಿಲ್ಲ. ಅವನ ಸಮಕಾಲೀನನಾಗಿದ್ದ ಸಿದ್ಧರಾಮೇಶ್ವರನು ಮಾತ್ರ ತನ್ನ ಒಂದು ವಚನದಲ್ಲಿ ಅವನನ್ನು ಉಲ್ಲೇಖಿಸಿದ್ದಾನೆ. ಆದರೆ ಪುರಾತನ ವಚನಕಾರರಲ್ಲಿ ಯಾವನೊಬ್ಬನೂ ಕೂಡ ರೇವಣಸಿದ್ಧೇಶ್ವರನ ಹೆಸರನ್ನು ತೆಗೆದುಕೊಂಡಿಲ್ಲ. ಇಷ್ಟರ ಮೇಲಿಂದ ಇವರೆಲ್ಲರೂ ರೇವಣಸಿದ್ಧೇಶ್ವರನಿಗೆ ವಿರೋಧಿಗಳಾಗಿದ್ದರೆಂದು ತಿಳಿಯಲಿಕ್ಕೆ ಬರುವದಿಲ್ಲ. ಆದರೆ ಅವನು ಈಗಿನಷ್ಟು ಅವರಲ್ಲಿ ಪ್ರಸಿದ್ಧಿಯನ್ನು ಮಾತ್ರ ಹೊಂದಿದ್ದಿಲ್ಲವೆಂದು ನಾವು ತಿಳಿಯಬೇಕಾಗುತ್ತದೆ. ಆಗಿನ ಕಾಲದಲ್ಲಿ ಅವನೊಬ್ಬ ಸಿದ್ಧ ಪುರುಷನೆಂದು ಪ್ರಸಿದ್ಧಿಯನ್ನು ಹೊಂದಿರಲಿಕ್ಕೆಬೇಕು. ಅಲ್ಲಮಪ್ರಭುವೂ ಕೂಡ ಆರಂಭದಲ್ಲಿ ಇಂಥ ಸಿದ್ಧರಲ್ಲಿ ಒಬ್ಬನಾಗಿದ್ದನು. ಆದರೆ ಶಿವಶರಣರ ಮತದ ಪ್ರಕಾರ ಹೀಗೆ ಸಿದ್ಧಿಗಳನ್ನು ಮಾಡುವವರಿಗೆ ಮಹತ್ವವಿರುವದಿಲ್ಲ. ಇಂಥ ಸಿದ್ಧರ ಮಾರ್ಗವನ್ನು ಶಿವಶರಣರು ನಿರಾಕರಿಸಿದ್ದಾರೆ. ಬಸವಾದಿ ಪ್ರಮಥರ ಯಾವ ಮಾರ್ಗವು ಶಿವಶರಣರಿಂದ ಶಿವಾನುಭವ ಮಂಟಪದಲ್ಲಿ ಪ್ರಸ್ಥಾಪಿಸಲ್ಪಟ್ಟಿತೋ ಅದನ್ನು ಪ್ರಚಾರ ಮಾಡುವವರಿಗೆ ಮುಂದೆ ಮಹತ್ವದ ಸ್ಥಾನವು ಪ್ರಾಪ್ತವಾಗಿರುತ್ತದೆ. ಇಂಥ ಕಾರ್ಯವನ್ನು ಮಾಡಿದವರಾದ ಪ್ರಭುದೇವ, ಚನ್ನಬಸವ, ಸಿದ್ಧರಾಮ, ಮಡಿವಾಳ ಮಾಚಿದೇವ, ಮೋಳಿಗೆಯ ಮಾರಯ್ಯ ಮೊದಲಾದವರನ್ನು ಬಸವೇಶ್ವರನು ತನ್ನ ವಚನಗಳಲ್ಲಿ ಬಹು ಪೂಜ್ಯಬುದ್ಧಿಯಿಂದ ಉಲ್ಲೇಖಿಸಿದ್ದಾನೆ. ಹಾಗೆಯೇ ಈ ವಿಶಾಲ

ಧರ್ಮವನ್ನು ಮೊದಲಿಗೆ ಪ್ರಸ್ಥಾಪಿಸಿದ ದೇವರದಾಸಿಮಯ್ಯ, ಕೆಂಭಾವಿ ಭೋಗಣ್ಣ, ತೆಲಗುಜೊಮ್ಮಯ್ಯ ಮೊದಲಾದ ಹಿಂದಿನ ಕಾಲದ ಶರಣರನ್ನೂ ಅವನು ಸ್ತುತಿಸುತ್ತಾನೆ. ಆದರೆ ತನಗೆ ಸಮೀಪವರ್ತಿಯಾಗಿ ಕಾರ್ಯಮಾಡಿದ ರೇವಣಸಿದ್ಧೇಶ್ವರನು ಉಳಿದವರಂತೆ ತನ್ನ ಕಾಲದಲ್ಲಿರದ್ದರಿಂದ ಮತ್ತು ಮೊದಲಿಗೆಯೇ ಈ ದೇಶವನ್ನು ಅವನು ಬಿಟ್ಟು ಹೋದವನಾದ್ದರಿಂದ ಅವನ ಹೆಸರನ್ನು ಬಸವನು ಉಲ್ಲೇಖಿಸದೆ ಇದ್ದದ್ದು ಮಹತ್ವವಲ್ಲ. ಆದರೆ ಇಷ್ಟರಿಂದ ಅವನು ರೇವಣಸಿದ್ಧೇಶ್ವರನಿಗೆ ವಿರೋಧಿಯಾಗಿದ್ದನೆಂದು ಹೇಳಲಿಕ್ಕೆ ಬರಲಾರದು.

ರೇವಣಸಿದ್ಧೇಶ್ವರನ ತರುವಾಯ ಅವನ ಮಗನಾದ ರುದ್ರಮುನಿಯು ಅವನಿಂದ ಗುರುಸ್ಥಾನದಲ್ಲಿ ಪಟ್ಟಗಟ್ಟಲ್ಪಟ್ಟನೆಂದು ಹರಿಹರನು ಹೇಳುತ್ತಾನೆ ಆದರೆ ಅವನು ಶಿವಾನುಭವ ಮಂಟಪದಲ್ಲಿ ಸೇರ್ಪಡೆಯಾಗಿ ಅದರ ಚರ್ಚೆಗಳಲ್ಲಿ ಭಾಗವಹಿಸಿದನೆಂದು ಯಾವ ಗ್ರಂಥದಲ್ಲಿಯೂ ಹೇಳಲ್ಪಟ್ಟಿರುವದಿಲ್ಲ. ಆದರೆ ಇಷ್ಟರಿಂದಲೇ ಅವನು ಬಸವನ ವಿರೋಧಿಯಾಗಿದ್ದನೆಂದು ಹೇಳಲಿಕ್ಕೆ ಬರಲಾರದು. ಯಾಕಂದರೆ ಬಸವನು ಸಂಗಮೇಶ್ವರನಲ್ಲಿ ಐಕ್ಯ ಹೊಂದಿದ ಬಳಿಕ, ಕಲ್ಯಾಣ ಪಟ್ಟಣದಲ್ಲಿ ಅನೇಕ ಅನಾಹುತಗಳು ಸಂಭವಿಸಿದಾಗ, ರುದ್ರಮುನಿಯು ಕಲ್ಯಾಣಕ್ಕೆ ಬಂದು ಶಿವಶರಣರಿಗೆ ಸಹಾಯ ಮಾಡಿದ್ದು ಗ್ರಂಥಗಳಿಂದ ತಿಳಿದು ಬರುತ್ತದೆ. ಇಷ್ಟೇ ಅಲ್ಲ, ಉಳವಿಯವರೆಗೂ ಅವನು ಹೋಗಿ ಶಿವಶರಣರನ್ನು ಪ್ರೋತ್ಸಾಹಿಸಿದನೆಂತಲೂ ಅಲ್ಲಿಂದ ಅವನು ಶ್ರೀಶೈಲಕ್ಕೆ ಸಹ ಹೋಗಿ ಅಲ್ಲಿ ನೆರೆದಿದ್ದ ಶರಣರಲ್ಲಿ ಒಂದು ಬಲವಾದ ಸಂಘಟನೆಯನ್ನುಂಟು ಮಾಡಿದನೆಂತಲೂ ತಿಳಿದು ಬರುತ್ತದೆ. ಮುಂದೆ ಅವನ ಪ್ರೋತ್ಸಾಹದಿಂದಲೇ ಬಾಳೇಹಳ್ಳಿಯಲ್ಲಿ ನಡೆದ ಅನಾಹುತಗಳು ತಡೆಯಲ್ಪಟ್ಟವು. ಮತ್ತು ಇದೇ ಸ್ಥಳದಲ್ಲಿ ಒಂದು ಸಿಂಹಾಸನ ಪೀಠವೂ ಕೂಡ ಸ್ಥಾಪಿಸಲ್ಪಟ್ಟಿತು. ಈ ಎಲ್ಲ ಕಾರ್ಯಗಳಿಗೆ ಕಾರಣನಾದವನು ರುದ್ರಮುನಿಯೇ ಇದ್ದಾನೆ. ಆದ್ದರಿಂದ ಮಹತ್ವಿಕನಾದ ಅವನ ತಂದೆಯೂ ಗುರುವೂ ಆದ ರೇವಣಸಿದ್ಧೇಶ್ವರನ ಹೆಸರಿನಿಂದ ಶಿವಶರಣರು ಈ ಪೀಠವನ್ನು ಸ್ಥಾಪಿಸಿರಲಿಕ್ಕೆ ಬೇಕೆಂದು ತೋರುತ್ತದೆ. ಈ ಪ್ರಕಾರ ಘಟನೆಗಳು ನಡೆದಹಾಗೆ ಶಿವಶರಣರ ಚರಿತ್ರೆಗಳಿಂದ ಕಂಡುಬರುತ್ತದೆ.

ಇದರ ಮೇಲಿಂದ ಶಿವಶರಣರು ರೇವಣಸಿದ್ಧೇಶ್ವರನ ವಿರೋಧಿಗಳಾಗಿರಲಿಲ್ಲೆಂದು ತೋರುತ್ತದೆ. ಇಷ್ಟೇ ಅಲ್ಲ ಅವನ ವಿಷಯವಾಗಿ ಅವರು ಪೂಜ್ಯ ಬುದ್ಧಿಯುಳ್ಳವರಾಗಿದ್ದರೆಂದು ನಿಷ್ಪನ್ನವಾಗುತ್ತದೆ. ಇಲ್ಲದಿದ್ದರೆ ಅವನ ಹೆಸರಿನಿಂದ ಅವರು ಬಾಳೇಹಳ್ಳಿಯಂಥ ಒಂದು ಪೀಠವನ್ನು ಸ್ಥಾಪಿಸುತ್ತಿದ್ದಿಲ್ಲ. ಮುಂದೆ ರೇವಣಸಿದ್ಧ, ರುದ್ರಮುನಿ ಇವರ ಸಾಂಪ್ರದಾಯಿಕರಾಗಿ ಈ ಪೀಠವನ್ನು ಆರೋಹಣ ಮಾಡಿದ ಪೀಠಾಧಿಪತಿಗಳೂ ಕೂಡ ಬಸವೇಶ್ವರನ ಮತ್ತು ಶಿವಶರಣರ ತತ್ವಗಳನ್ನು ಪ್ರಸಾರ ಮಾಡುತ್ತಾ ದೇಶದಲ್ಲೆಲ್ಲ ಮಠಗಳನ್ನು ಸ್ಥಾಪಿಸುತ್ತಿದ್ದಿಲ್ಲ ಈ ಮಠಗಳಲ್ಲಿ ವಚನಶಾಸ್ತ್ರದ ಅಭ್ಯಾಸವು ಯಾವಾಗಲೂ ನಡೆಯುತ್ತಲೆ ಬಂದಿದೆ. ಇದರಿಂದ ಶರಣರ ವಿಶಾಲ ತತ್ವಗಳು ಜನತೆಯಲ್ಲಿ ಪಸರಿಸಲಾಗಿ ಅಸಂಖ್ಯ ಜನರು ದಕ್ಷಿಣ ದೇಶದಲ್ಲೆಲ್ಲ ವೀರಶೈವ ಮತಾನುವರ್ತಿಗಳಾದರು. ಈ ಎಲ್ಲ ಸಂಗತಿಗಳನ್ನು ನಾವು ಲಕ್ಷಿಸಿದಲ್ಲಿ ಪಂಚಪೀಠಾಧಿಕಾರಿಗಳಿಗೂ ಶಿವಶರಣರಿಗೂ ಎಂದೂ ವಿರೋಧವಿರಲಿಲ್ಲೆಂದು ನಾವು ಭಾವಿಸಬೇಕಾಗುತ್ತದೆ.

ಪಂಚಾಚಾರ್ಯರಲ್ಲಿ ಒಬ್ಬರಾದ ಪಂಡಿತಾರಾಧ್ಯರು ಬಸವನ ಸಮಕಾಲೀನರಾಗಿದ್ದರೆಂದು ಅವರ ಚರಿತ್ರೆಯಿಂದ ಕಂಡು ಬರುತ್ತದೆ. ಆದರೆ ಪಂಡಿತಾರಾಧ್ಯರು ಇಬ್ಬರಿದ್ದಾರೆಂದು ಅನೇಕರು ಪ್ರತಿಪಾದಿಸುವದುಂಟು. ಆದರೆ ವೀರಶೈವ ವಾಙ್ಮಯದಲ್ಲಿ ಹೀಗೆ ಪಂಡಿತಾರಾಧ್ಯರು ಇಬ್ಬರಿದ್ದದ್ದು ಎಲ್ಲಿಯೂ ಉಲ್ಲೇಖವಿಲ್ಲ.

ಏಕೋರಾಮಾರಾಧ್ಯರ ಚರಿತ್ರೆಯ ಸಾರವನ್ನು ನಾವು ಶಿವಾನುಭವ ಸಂಪುಟ ೬ ಸಂಚಿಕೆ ೨ ಪುಟ ೬೪ ಇದರಲ್ಲಿ ನಿರೂಪಿಸಿದ್ದೇವೆ. ಅದರ ಮೇಲಿಂದ ಅವರು ಬಸವನಕಿಂತಲೂ ಈಚಿನವರೆಂದು ತೋರಿಬರುತ್ತದೆ. ಏಕೋರಾಮಾರಾಧ್ಯರು ಇಬ್ಬರಿದ್ದದ್ದು ಎಲ್ಲಿಯೂ ಉಲ್ಲೇಖವಿರುವದಿಲ್ಲ.

ಮರುಳಸಿದ್ಧೇಶ್ವರರ ಉಲ್ಲೇಖವು ಶಿವಶರಣರ ಚರಿತ್ರೆಗಳಲ್ಲಿ ಬರುತ್ತದೆ. ಆದ್ದರಿಂದ ಅವರೂ ಕೂಡ ಬಸವೇಶ್ವರನ ಸಮಕಾಲೀನರಾಗಿರಬೇಕೆಂದು ತೋರುತ್ತದೆ.

ವಿಶ್ವಾರಾಧ್ಯರ ಚರಿತ್ರೆಯು ನಮಗೆ ಈ ವರೆಗೂ ಎಲ್ಲಿಯೂ ಉಪಲಬ್ಧವಾಗಿರುವದಿಲ್ಲ.

ವಚನಶಾಸ್ತ್ರವು ಬಸವೇಶ್ವರನ ತರುವಾಯ ಸುಮಾರು ೧೦೦ ೧೫೦ ವರ್ಷಗಳವರೆಗೆ ಪ್ರಗತಿಯನ್ನು ಹೊಂದುತ್ತಲೇ ಬಂದಿದೆ. ನಮಗೆ ಈಗ ಸುಮಾರು ೨೬೦ ಜನ ವಚನಕಾರರ ಹೆಸರುಗಳು ಉಪಲಬ್ಧವಾಗಿದ್ದು, ಇವರೆಲ್ಲರೂ ಇದೇ ಕಾಲದಲ್ಲಿಯವರು. ಅವರು ವಚನಗಳನ್ನು ಬರೆಯುತ್ತ ಶಿವಾನುಭವ ತತ್ವಗಳನ್ನು ದೇಶದಲ್ಲೆಲ್ಲ ಪ್ರಸಾರ ಮಾಡಿದ್ದಾರೆ. ಈ ಪ್ರಸಾರ ಕಾರ್ಯವನ್ನು ಪಂಚಾಚಾರ್ಯರಿಗೆ ಸಂಬಂಧಪಟ್ಟ ಮಠಾಧಿಪತಿಗಳೂ ಕೂಡ ನಡಿಸುತ್ತ ಬಂದಿರುತ್ತಾರೆ. ಈ ಎಲ್ಲರ ಪ್ರಯತ್ನಗಳಿಂದ ಈ ಕಾಲದಲ್ಲಿ ಲಕ್ಷಾವಧಿ ಜನರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಈ ೧೦೦—೧೫೦ ವರ್ಷಗಳು ವೀರಶೈವ ಸಮಾಜದ ಘನತೆಯ ಕಾಲವು. ಆಗ ಸಮಾಜದಲ್ಲೆಲ್ಲ ವಚನಕಾರರ ತತ್ವಗಳು ಪ್ರಸಾರ ಹೊಂದಿದವು. ಈ ಸಮಯದಲ್ಲಿ ಸಮಾಜದಲ್ಲಿ ಪಂಚಾಚಾರ್ಯರು ಮತ್ತು ವಿರಕ್ತರು ಎಂಬ ಭೇದಭಾವಗಳು ಎಷ್ಟುಮಾತ್ರವೂ ಇರಲಿಲ್ಲ.

ಧಾರವಾಡದ ಸಾಹಿತ್ಯ ಸಮಿತಿ ಪತ್ರಿಕೆಯ ಸಂಪುಟ ೨ ಸಂಚಿಕೆ ೧ ಪುಟ ೫ ಇದರಲ್ಲಿ ರೇವಣಸಿದ್ಧನ ಅಂತ್ಯಕಾಲವು ೧೧೦೦ ಮತ್ತು ೧೧೧೦ ಇದರ ಮಧ್ಯದಲ್ಲಿರಬೇಕೆಂದು ಹೇಳಲ್ಪಟ್ಟಿರುತ್ತದೆ. ಆದರೆ ಈ ಕಾಲದಲ್ಲಿ ಚಾಲುಕ್ಯ ಚಕ್ರವರ್ತಿಯಾದ ವಿಕ್ರಮಾದಿತ್ಯನು ಆಳುತ್ತಿದ್ದನು. ರೇವಣಸಿದ್ಧೇಶ್ವರನ ಚರಿತ್ರೆಯಲ್ಲಿ ಈ ವಿಕ್ರಮಾದಿತ್ಯನ ಉಲ್ಲೇಖವು ಎಷ್ಟುಮಾತ್ರವೂ ಬರುವದಿಲ್ಲ. ಆದರೆ ಅವನ ಬದಲು ಬಿಜ್ಜಳನು ಉಲ್ಲೇಖಿಸಲ್ಪಟ್ಟಿರುತ್ತಾನೆ. ಅದರಿಂದ ಬಿಜ್ಜಳನ ಆಳಿಕೆಯ ಆರಂಭ ಕಾಲದಲ್ಲಿ ರೇವಣಸಿದ್ಧೇಶ್ವರನು ಇರಬೇಕೆಂದು ನಮಗೆ ತೋರುತ್ತದೆ. ಅಂದರೆ ರೇವಣಸಿದ್ಧೇಶ್ವರನು ೧೧೩೧ರಿಂದ ೧೧೪೫ರ ಮಧ್ಯಕಾಲದಲ್ಲಿ ಬಹುಶಃ ಪ್ರಸಿದ್ಧಿಗೆ ಬಂದಿರಬೇಕೆಂದು ನಮಗೆ ತೋರುತ್ತದೆ.

---

# ಧಾರಣ ದೀಕ್ಷೆ.

(ಲೇ:— ಶ್ರೀ ಜಿ. ಟಿ. ಅಕ್ಕಲಯ್ಯನವರು ಘಟ್ಟಿ.)

## ಮಾ. ನಂ. ನಂಜಪ್ಪನವರ ಖಂಡನೆಯ ಮಂಡನ.

ಜನವರಿಯಲ್ಲಿ ನಾನು ಬರೆದ ಇದೇ ಹೆಸರಿನ ಲೇಖನಕ್ಕೆ ಶ್ರೀ ಮಾ. ನಂ. ನಂಜಪ್ಪನವರು— "ಉತ್ತರವೀಯುವುದು ಎಳ್ಳಷ್ಟು ಅವಶ್ಯಕತೆಯಿಲ್ಲದಿದ್ದರೂ...... ನಿಜಾಂಶವನ್ನು ಹೊರಗೆಡುವಬೇಕೆಂಬ ಲವಲವಿಕೆಯಿಂದ ಪ್ರತ್ಯುತ್ತರವನ್ನು ಪ್ರಕಟಿಸಿರುತ್ತೇನೆ." ಎಂದು ಸತ್ಯವಂತರಂತೆಯೆ ಆರಂಭಿಸಿ ಆರಂಭದಿಂದಲೆ ನನ್ನ ಲೇಖನಿಯ ಸತ್ಯಾಂಶಗಳನ್ನೆಲ್ಲ ತಪ್ಪು ತಪ್ಪಾಗಿ ತಿಳಿದುಕೊಂಡು ತಮ್ಮ ಮನದ ಕೋಪ ತಾಪಗಳನ್ನೆಲ್ಲ ಬಹಿಷ್ಕರಿಸಿದ್ದಾರೆ. ಪರವಾ ಇಲ್ಲ. ಆದರೆ ನಂಜಪ್ಪನವರೆ ಹೇಳುವಂತೆ 'ನಿಜಾಂಶವು ಈಚೆಗೆ ಬರಬೇಕಾದರೆ' "ಬೈದವರೆನ್ನ ಬಂಧುಗಳೆಂಬೆ" ಎಂದಂದುಕೊಂಡು ಮುಂದೆ ಸಾಗಬೇಕಾಗಿದೆ. ಇಲ್ಲವಾದರೆ ನಿಜಾಂಶವು ತೆರೆಯ ಮರೆಯಲ್ಲಿ ನಿಂತು ಹೋಗಿ ನಂಜಪ್ಪನವರ ದೀಕ್ಷಾವಾದವು ಕೊನೆಯ ದೀಕ್ಷಾವಾದವಾಗಿಯೆ ಉಳಿವಂತೆ ತೋರುತ್ತದೆ ಆದುದರಿಂದ ನನ್ನ ಲೇಖನಿಯ ನಿಜಾಂಶಗಳನ್ನು ಮಾತ್ರ ನಂಜಪ್ಪನವರಿಗೆ ದಿಗ್ದರ್ಶನವಾಗಿ ತಾಳ್ಮೆಯಿಂದ ತೋರಿಸಿ, ಮುಂದೆ ಕೆಲವು ಮುಖ್ಯ ಪ್ರಶ್ನೆಗಳನ್ನು ಮಾಡುತ್ತೇನೆ. ಇದರಿಂದಲಾದರೂ ನಿಜತತ್ವವು ಬೈಲಿಗೆ ಬಂದು ನಂಜಪ್ಪನವರ 'ನಿಜಾಂಶ ಹೊರಬೀಳಲಿ' ಎಂಬ ಸದುದ್ದೇಶವು ಬೇಗ ಸಫಲಗೊಳ್ಳಲು ಸಹಾಯವಾದೀತು. ಇದರಿಂದ ಸಮಾಜಕ್ಕಾದರೂ ಹಿತವಾದೀತು. ಈ ಕಾರಣದಿಂದ ಈ ಮಂಡನಕ್ಕೆ ತೊಡಗಲಾಗಿದೆ.

ಶ್ರೀ ಗುರುಮೂರ್ತಿಗಳವರು ತಮ್ಮ ಅಂತರಂಗದ ಅಭಿಪ್ರಾಯವನ್ನು ಅವರ ಲೇಖದಲ್ಲಿರಿಸಿಲ್ಲವೇನು? ಅದರ ಮುಖದಿಂದ ತಿಳಿಯಲಾಗದೇನು? ಇಂತಹ ಪ್ರಶ್ನೆಯಿಂದ ಪ್ರಸ್ತುತಕ್ಕೆ ಪ್ರಯೋಜನವೇನು?

ನಾವು "ಲಿಂಗಧಾರಣೆಯ ಕಾಲದಲ್ಲಿ (ಕಾಲವಾವುದೊ ತಿಳಿಸಲಿಲ್ಲ.) ಶಿಶುವಿಗೆ ಜ್ಞಾನೋದಯವಾಗುವದಿಲ್ಲ"ವೆಂದು ನಿರಾಧಾರವಾಗಿ

ಒರೆಯುಲಿಲ್ಲ. ಗರ್ಭದ ಎಂಟನೆಯ ತಿಂಗಳಲ್ಲಿರುವ ಮಗುವಿಗೆ ಜ್ಞಾನ ವಿರುವದಿಲ್ಲೆಂದೂ ಅದು ಅವ್ಯಕ್ತವಾಗಿರುವದೆಂದೂ ಹೇಳಿ ಇದಕ್ಕೆ ಅಂದರೆ ಈ ಪಿಂಡಸ್ಥಲಕ್ಕೇನೆ ಬಸವಣ್ಣನವರ 'ಉದಕದೊಳಗೆ...' ಎಂಬ ವಚ ನವನ್ನು ಉದಹರಿಸಲಾಗಿದೆಯೆ ಹೊರ್ತು ನೀವು ಹೇಳುವಂತೆ ಪಿಂಡ ಜ್ಞಾನಸ್ಥಲಕ್ಕಲ್ಲ. ಬೇಕಿದ್ದರೆ ನನ್ನ ಲೇಖವನ್ನು ಮತ್ತೊಮ್ಮೆ ಸಮಾ ಧಾನ ಚಿತ್ತದಿಂದ ದಿಟ್ಟಿಸಬೇಕು.

ಎಂಟನೆಯ ತಿಂಗಳಿನ ಶಿಶುವಿಗೆ ಗರ್ಭದ ಮಲಮೂತ್ರಜಠರಾಗ್ನಿ ಗಳ ಬಾಧೆಯಿಂದ ಕಾರಾಗ್ರಹದ ಕಳ್ಳನಂತೆ ಆಗ ಒಂದು ವಿಧವಾಗಿ ಜ್ಞಾನ ಬಂದಂತಾದರೂ ಅದು ನಾಯಿಯ ಕನಸು. ಆ ಮಗು ಈಚೆಗೆ ಬಂದರೆ ಮರಳಿ ಮಾಯಾ ಪಾಶದಿಂದ ಮತ್ತೆ ಅಜ್ಞಾನಾಂಧಕಾರಾವೃತ ವಾಗಿ ಭವದ ಹಾಳುಭಾವಿಯಲ್ಲಿ ಬೀಳುತ್ತಾನೆಂದು ಅದೇ ಗರ್ಭೋ ಪನಿಷತ್ತು ಮುಂದಿನ ಈ ಪಂಕ್ತಿಗಳಲ್ಲಿ ಸುಸ್ಪಷ್ಟವಾಗಿ ಹೀಗೆ ಹೇಳಿದೆ. "ಪ್ರಸೂತಿ ವಾತೇನ ಜಾತ ಮಾತ್ರಸ್ತು ವೈಷ್ಣವೇನ ವಾಯುನಾ ಸಂಸ್ಪೃ ಶ್ಯತೇ। ತದಾ ನ ಸ್ಮರತಿ, ನೈವ ಕಿಂಚನ ಪಾರತ್ರಿಕಂ ನಾಪರೋಕ್ಷ ದೃಗ್ಭವತಿ। ಭೂಮಿಸಂಸ್ಪರ್ಶನಾಜ್ಜಂತು ರುಗ್ರಗ್ರೃಕ್ಷ್ವಾಮರೋಭವೇತ್।" ಎಂದುದಾಗಿ ಉಲ್ಲಿಖಿತವಾಗಿದೆ. ಇದೇ ಉಪನಿಷತ್ತಿನ ಕೆಲವು ಪಂಕ್ತಿ ಗಳನ್ನು ಒಪ್ಪಿದವರು ಇವನ್ನೂ ಒಪ್ಪದಿರುವರೆ? ಮುಖ ಮಾತ್ರ ಮಲ್ಲಯ್ಯ. ಕಾಲ ಅಲ್ಲಯ್ಯ ಅಂದರಾಗುವದೆ?

ನಂಜಪ್ಪನವರು ಪಿಂಡಸ್ಥಲದಲ್ಲಿಯೆ ಸಂಪೂರ್ಣಜ್ಞಾನವನ್ನು ಒಪ್ಪಿ ಕೊಂಡಿರುವರು. ಇವರ ಈ ಮಾತಿಗಾಗಿ—ಅದೇ ಪಿಂಡಸ್ಥಲದ "ಉದಕ ದೊಳಗೆ ಬೈಚಿಟ್ಟ... ಎಂಬ ಬಸವಣ್ಣನವರ ವಚನದ ಗತಿಯೇನು? ಅವರ ಹೃದಯವೇನು? ಎಂದು ಪುನಃ ನಂಜಪ್ಪನವರನ್ನು ಕೇಳಬೇ ಕಾಯಿತು. ಮತ್ತು "ತಸ್ಮಿನ್ ವಿಜ್ಞಾತೇ ಸರ್ವಂ ವಿಜ್ಞಾತಂ ಭವತಿ" ಎಂದಿರುವದರಿಂದ ಪುನಃ ಮಕ್ಕಳ ಶಿಕ್ಷಣದ ಅವಶ್ಯಕತೆಯೇಕೆ? ಹಾಗು ಎಲ್ಲರೂ ಅಭಿಮನ್ಯು, ಚನ್ನಬಸವಣ್ಣ, ನೇಪೋಲಿಯನ್ ಬೋನಾಪಾರ್ಟ ರಂತಾದರೆ ನಮ್ಮ ಸಮಾಜ ಸಾಮ್ರಾಜ್ಯವು ಇಷ್ಟೊಂದು ಚಿಕ್ಕದಾಗಿ ಕರ್ನಾಟಕದ ಆಚೆಗೇಕೆ ಕಾಲಿಡಲಿಲ್ಲ?

ಸಿದ್ಧಾಂತಶಿಖಾಮಣಿಯ ವಿಚಾರದಲ್ಲಿ ನಂಜಪ್ಪನವರು ಉತ್ತರಿ ಸುತ್ತ— "ವೀರಶೈವ ಧರ್ಮವೆ ಇರುವುದು ಭವಿಗಳ ಉದ್ಧಾರಕ್ಕಾಗಿ"

ಎಂದು ಹೇಳಿ "ವಿಧದತು ಮತಿ ಮಸ್ಮಿನ್ ವೀರಶೈವಾ ವಿಶಿಷ್ಟಾಃ" ಎಂಬುಕ್ತಿಯು ಗತಿಯೇನು? ಎಂದು ಕೇಳಿದ್ದಕ್ಕೆ ಉತ್ತರವೇ ಇಲ್ಲ

ದ್ವೈತಾದ್ವೈತದ ಮೂಲ ವಿಚಾರದಲ್ಲಿ ಜ್ಞಾನಕ್ರಿಯೆಗಳ ಮಾತೆತ್ತಿದ್ದೆ ಮೊದಲನೆಯ ಅಸಂಗತ. ಆದರೂ ಪ್ರವಾಹವಾಗಿ ಬಂದು ಬಿಟ್ಟದೆಯಾದ್ದರಿಂದ ಇಲ್ಲೊಂದು ಮಾತು ಹೇಳದೆ ವಿಧಿಯಿಲ್ಲ. ದ್ವೈತಾದ್ವೈತದ ವಿವಾದದಲ್ಲಿ ಜ್ಞಾನಕ್ರಿಯೆಗಳೆರಡೂ ಬೇಕೆಂದಾಕ್ಷಣ ನೀವು ಹೇಳುವಂತೆ ಏಕಕಾಲದಲ್ಲಿ ಹುಟ್ಟಿಡಗಬೇಕೆಂದು ಎಂದಿಗೂ ಅರ್ಥವಾಗುವದಿಲ್ಲ. ಪಕ್ಷಿಯು ಎರಡು ರೆಕ್ಕೆಗಳು, ಬಂಡಿಯು ಎರಡು ಚಕ್ರಗಳು ಜ್ಞಾನಕ್ರಿಯೆಗಳೆರಡರ ಅವಶ್ಯಕತೆಯನ್ನು ಮಾತ್ರ ತೋರಿಸುತ್ತವೆಯೆ ಹೊರ್ತು ಏಕಕಾಲೋತ್ಪತ್ತಿಯನ್ನು ತೋರುವದಿಲ್ಲ. ನೀವು ಹೇಳುವಂತೆ ಜ್ಞಾನಕ್ರಿಯೆಗಳು ಅನಂತರ ಕೂಡಿಯೆ ಚಲಿಸಬಹುದು. ಆದರೆ ಅವುಗಳ ಉತ್ಪತ್ತಿಯು ಒಂದಾದ ನಂತರ ಮತ್ತೊಂದೆಂದು ಹೇಳುವುದೇ ನನ್ನ ಲೇಖದ ಹೃದಯ. ಅವಶ್ಯಕತೆಯನ್ನು ಮಾತ್ರ ಸೂಚಿಸುವ ಹಕ್ಕಿಯ ರೆಕ್ಕೆಯ ಉದಾಹರಣೆಯನ್ನು ಉತ್ಪತ್ತಿಗೂ ಉದಹರಿಸಬಹುದಲ್ಲವೇ? ಎಂದು ಕೇಳಬಹುದು. ಅದು ಸಾಧ್ಯವಿಲ್ಲ. ಅದರ ಪ್ರಕೃತಿ ರಚನೆ ಅದಕ್ಕೆ, ಇದರ ಪ್ರಕೃತಿ ರಚನೆ ಇದಕ್ಕೆ. ಪ್ರಕೃತಿಸಂಸ್ಥಿತಿಯನ್ನು ಮೀರಿ ಒಂದು ಸಿದ್ಧಾಂತ ಮಾಡಲು ಸಾಧ್ಯವೆ? ಅಥವಾ ಮನುಷ್ಯನ ಕಾಲುಗಳಂತೆ ಜ್ಞಾನಕ್ರಿಯೆಗಳೆರಡೂ ಇರಬೇಕೆಂದು ಹೇಳಿದಾಕ್ಷಣ ಮನುಷ್ಯನ ಕಾಲಗಳೆರಡನ್ನೂ ಏಕಕಾಲಕ್ಕೆ ಎತ್ತಿಡಲು ಸಾಧ್ಯವೆ? ಒಂದಾದಮೇಲೊಂದು ಹೆಜ್ಜೆಯನ್ನಿಕ್ಕಬೇಕು. ಕಾಲುಗಳೆರಡೂ ಒಮ್ಮೆಗೇನೆ ಉತ್ಪತ್ತಿಯಾಗಬಹುದು. ಕ್ರಿಯೆಯಲ್ಲಿ ಮಾತ್ರ ಒಂದಾದ ಮೇಲೊಂದನ್ನು ಇಡಬೇಕು. ಇದು ಇದರ ಸೃಷ್ಟಿಯ ನಿಯಮ. ಹಾಗೆ ಜ್ಞಾನ ಕ್ರಿಯೆಗಳೆರಡು ಉತ್ಪತ್ತ್ಯನಂತರ ಸಮರಸವಾಗಿ ಚಲಿಸಿದರೂ ಉತ್ಪತ್ತಿ ಕಾಲಕ್ಕೆ ಎರಡೂ ಒಂದಾಗಿ ಜನಿಸವು. ಉದಾಹರಣೆಗೇನು ಉಭಯ ಪಕ್ಷಸಮರ್ಥನೆಗೂ ಸಿಕ್ಕುತ್ತವೆ. ಆದರೆ ತತ್ವದ ನೈಜಪ್ರಕೃತಿಯನ್ನು ಚನ್ನಾಗಿ ಗಮನಿಸಬೇಕು.

ಬಸವಪ್ರಭು ರೇವಣಸಿದ್ಧಾದಿಗಳ ದೀಕ್ಷಾವಿಚಾರದಲ್ಲಿ ಸಮಂಜಸವಾದ ಉತ್ತರವನ್ನು ಉತ್ತರಿಸಿದೆಯೆ ಹೊರ್ತು ನೀವು ಹೇಳುವಂತೆ

ಕಳ್ಳತನ ಸುಳ್ಳುತನವನ್ನೇನೂ ಮಾಡಿರುವದಿಲ್ಲ. ಹರಿಹರನ ದೃಷ್ಟಾಂತ ಸುಳ್ಳುತನವೆ? ಬಸವಪ್ರಭುರೇವಣಸಿದ್ಧಾದಿಗಳ ಯುಗದ ಮಾತನ್ನೇ ಕೇಳಿರುವಿರಿ. ಅಂದಮೇಲೆ ಆ ಯುಗದ ಯಾವ ವ್ಯಕ್ತಿಗಳನ್ನಾದರೂ ಉದಹರಿಸಬಹುದಲ್ಲವೇ? ನೀವೇನಾದರೂ ನಿಮ್ಮ ಬರಹದಲ್ಲಿ ಇಂಥ ವರೇ ಎಂದು ವ್ಯಕ್ತಿಗಳ ಹೆಸರುಗಳನ್ನೇನಾದರೂ ಪ್ರಕಟಿಸಿರುವಿರಾ? ಹಾಗೆ ಪ್ರಕಟಿಸಿಯೂ ಅವರನ್ನು ಬಿಟ್ಟು ಬೇರೆಯವರ ಹೆಸರುಗಳನ್ನೇನಾದರೂ ಬರೆದಿರುವೆನೆ? ಇಲ್ಲದಿದ್ದರೆ ಇದು ಕಳ್ಳತನ ಹೇಗೆ? ಅಲ್ಲದೆ ಊರಿಗೂ ಬಾಲಕರಿಗೂ ಗೊತ್ತಿದ್ದ ಬಸವಾದಿಗಳ ವಿಷಯವನ್ನು ಮೊದಲು ನೀವು ಪ್ರಶ್ನೆ ಮಾಡಿದ್ದೆ ಅನುಚಿತವಲ್ಲವೆ?

ಇದನ್ನು ಹೀಗೆಯೆ ಲಂಬಿಸಿ ನಂಜಪ್ಪನವರು— "ಬಸವಣ್ಣನವರು ಪ್ರಭುದೇವರು ರೇವಣಸಿದ್ಧರು ಶ್ರೀಶೈಲದ ಪಂಡಿತಾರಾಧ್ಯರು ಮುಂತಾದವರೆಲ್ಲರೂ ಮೊದಲು ಶೈವರಾಗಿದ್ದು ಶ್ರೀಮತ್ ಬಸವಾದಿಗಳಿಂದಲೆ ಪರಿಷ್ಕೃತನಾಗಿ ರೂಪುಗೊಂಡ ವೀರಶೈವ ಧರ್ಮವನ್ನು ಅನಂತರ ಅವಲಂಬಿಸಿ ಅದನ್ನು ಪ್ರಚಾರ ಮಾಡಿ......" ಎಂದು ಬರೆಯುತ್ತ ರೇವಣಸಿದ್ಧರು ಅನಂತರೇ ಆಗಲಿ ವೀರಶೈವರಾಗಿದ್ದರೆಂದೂ ಶರಣಯುಗದವರೆಂದೂ ಹೃದಯದಿಂದ ಒಪ್ಪಿಕೊಂಡು, ಮುಂದೆ "ಈಗಲೂ ಯಾವ ಪುರಾತನ ಶರಣಚರಿತ್ರೆಯಲ್ಲಿಯಾದರೂ ಶರಣರು ತಮ್ಮ ಮಕ್ಕಳಿಗೆ ಎಂಟನೆಯ ವರ್ಷದಲ್ಲಿ ಅಥವಾ ಅದಕ್ಕೂ ಹೆಚ್ಚಿನ ವಯಸ್ಸಿನಲ್ಲಿ ಎರಡನೆಯ ಸಾರಿ ವೀರಶೈವ ದೀಕ್ಷೆಯನ್ನು ಕೊಡಿಸಿದುದನ್ನು ಯಾರಾದರೂ ಪರಿಶೋಧಿಸಿ ಪ್ರಕಟಿಸುವವರಾಗಬೇಕು....... ಅಕ್ಕುಲಯ್ಯಗಳಾದರೂ ಮಾಡಬಹುದು." ಎಂದು ಕೋರಿದ್ದಾರೆ.

## ಇದಕ್ಕೊಂದು ನಿದರ್ಶನ.

ವೀರಶೈವನಾದ ರೇವಣಸಿದ್ಧನು ತನ್ನ ಹೊಟ್ಟೆಯಲ್ಲಿ ಹುಟ್ಟಿ ಬೆಳೆದ "ಎಂಟನೆಯ ವರುಷದೊಳ್ ಮಗನಂ ನೋಡಿ ಮಿಗೆ ಸಂತಸಂಬಟ್ಟು, ಶೈವೋಪದೇಶಮಂ (ಶೈವ—ಶಿವಸಂಬಂಧವಾದ, ಉಪದೇಶಮಂ—ದೀಕ್ಷೆಯನ್ನು) ತಾವೆ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ ರುದ್ರಮುನಿದೇವರ್ಗೆ ಶಿವಸ್ವರೂಪಜ್ಞಾನಬೋಧೆಯಂ ಬೆಸಸುತ್ತುಂ, ಶಿವಯೋಗಸಂಪನ್ನನೆನಿಪ ಸಿದ್ಧರೇವಣಂ......" ಎಂದು ಹರಿಹರ ಮಹಾಕವಿಯು ಸ್ಪಷ್ಟ

ವಾಗಿ ಹೇಳಿದ್ದಾನೆ. ಈ ವಿಷಯು ನಾಲ್ಕನೆಯ ಸ್ಥಳದ ಕೊನೆಯಭಾಗದಲ್ಲಿರುವದರಿಂದ ಇದು ರೇವಣಸಿದ್ಧನ ಜೀವನಚರನುಸ್ಥಿತಿಯಲ್ಲಿ ನಡೆದುದೆಂದು ಧಾರಾಳವಾಗಿ ಹೇಳಬಹುದು. ಇದರಿಂದ ನಂಜಪ್ಪನವರು ಹೇಳುವ ರೇವಣಸಿದ್ಧರ ಅನಂತರ ವೀರಶೈವತ್ವಕ್ಕೆ ಯಾವ ಬಾಧಕವಿಲ್ಲ. ಇದಲ್ಲದೆ ಹರಿಹರದೇವನೆ ರೇವಣಸಿದ್ಧನನ್ನು ಕುರಿತು "ಶಿವಯೋಗಸಂಪನ್ನ" ಎಂದು ಘಂಟಾಘೋಷವಾಗಿ ಹೇಳಿರುವದರಿಂದ ರೇವಣಸಿದ್ಧನು ತನ್ನ ಮಗನಿಗೆ ಶಿವದೀಕ್ಷೆಯನ್ನು ಮಾಡುವಾಗ ವೀರಶೈವನಾಗಿದ್ದನೆಂದೂ ಮಗನಿಗೆ ಮಾಡಿದುದು ಶಿವದೀಕ್ಷೆಯೆಂದೂ ನಿಸ್ಸಂದೇಹವಾಗಿ ನಿದರ್ಶನವಾಗುತ್ತದೆ.

ಪುನರ್ದೀಕ್ಷೆಯನ್ನು ಪಡೆವವರು ಜಂಗಮರೆಂದು ನಮ್ಮ ಅಭಿಪ್ರಾಯವೇ ಇಲ್ಲ. ಎಂಟನೆಯ ವರ್ಷದ ದೀಕ್ಷೆಯಿಂದ ಜಂಗಮತ್ವವೆಂದು ನಮ್ಮ ಲೇಖದಲ್ಲಿ ನಾವೆಲ್ಲಿಯೂ ಪ್ರತಿಪಾದಿಸಿಲ್ಲ. ನೀವು ಬರಿ ದೀಕ್ಷಾಸಂಸ್ಕಾರದಿಂದ ಜಂಗಮರಾಗಿರೆಂದು ನಾವೆಲ್ಲಿಯೂ ಅಭಯಹಸ್ತವನಿತ್ತಿಲ್ಲ. ಅದೊಂದು ಬೇರೆ ಸಂಸ್ಕಾರ. ಅದಕ್ಕೆ ಜಂಗಮದೀಕ್ಷೆ ಅಥವಾ ಅನುಗ್ರಹವೆಂದು ಕರೆಯಬಹುದು. ವೀರಶೈವರಲ್ಲಿ ನಾಲ್ಕು ದೀಕ್ಷೆಗಳಿರುವುದು ನಿಮಗೆ ತಿಳಿಯದೆ? ಇಲ್ಲವಾದರೆ ಕೇಳಿ! ಮತ್ತೊಮ್ಮೆ ಹೇಳಲಾಗುತ್ತೆ.

ಇವೆಲ್ಲ ನಂಜಪ್ಪನವರು ನನ್ನ ಲೇಖದಲ್ಲಿ ತಪ್ಪು ಕಲ್ಪನೆಗಳನ್ನು ಮಾಡಿಕೊಂಡ ಅಂಶಗಳ ನೈಜೋದ್ಘಾಟನೆಯಾಯಿತು. ಬೇಕಿದ್ದರೆ ನ್ಯಾಯವಾದಿಗಳಾದ ವಾಚಕರು ನನ್ನ ನಿಮ್ಮ ಲೇಖನಗಳನ್ನು ತಾಳೆ ಹಾಕಿ ನೋಡಲಿ. ಇನ್ನು ಮೊತ್ತಮೊದಲು ಹೇಳಿರುವಂತೆ ಕೆಲವು ಪ್ರಶ್ನೆಗಳನ್ನು ತೋರುತ್ತೇನೆ. ಅವಕ್ಕೆ ನಂಜಪ್ಪನವರು ಒಂದನ್ನೂ ಬಿಡದೆ ಹಾರ್ದಿಕ ಮತ್ತು ಮಾರ್ದವಿಕವಾದ ಉತ್ತರವೀಯಬೇಕು.

## ಪ್ರಶ್ನೆಗಳು.

೧. ವೀರಶೈವ ದೀಕ್ಷೆಯು, ವೀರಶೈವ ವಟುಗಳಿಗೆ ಗರ್ಭದಲ್ಲಿರುವಾಗಲೊ? ಜನನವಾದಾಗಲೊ? ಗರ್ಭದಲ್ಲಿರುವಾಗ ಎಂದು ಹೇಳಿದರೆ ಪುನಃ ಜನನ ಕಾಲಕ್ಕೆ ಲಿಂಗಧಾರಣವನ್ನು ಕೆಲವು ವಚನಗಳು

ಪ್ರತಿಪಾದಿಸುತ್ತವೆ? ಇದರಿಂದ 'ಲಿಂಗಧಾರಣ' ವಿಚಾರದಲ್ಲಿಯೆ ವಚನಗಳಲ್ಲಿ ಐಕ್ಯಕಂಠ್ಯವಿಲ್ಲೆಂದು ವ್ಯಕ್ತವಾಗುವದಿಲ್ಲವೆ?

೨. ಶಿವದೀಕ್ಷಾಸ್ಥಲ, ಲಿಂಗಧಾರಣಸ್ಥಲ, ಇವು ಬೇರೆಬೇರೆಯೆ? ಒಂದೆ? ಒಂದೆ ಎಂದು ಹೇಳಿದರೆ ಈ ಹೇಳಿಕೆಗೆ ಸಬಲವಾದ ಪ್ರಮಾಣವಾವುದು?

೩. "ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಾ, ಸಾ ಷೋಡಶಾವಧಿ।
ಗೌಣೀ ತದೂರ್ಧ್ವಮಧಮಾ ವೀರಶೈವಾನ್ವವಾಯಿನಾಂ ॥೧॥

ಎಂಬೀ ಶ್ಲೋಕಕ್ಕೆ ದಯವಿಟ್ಟು ಬಿಡಿಬಿಡಿಯಾಗಿ ಅಂದರೆ ಒಂದೊಂದು ಶಬ್ದಕ್ಕೆ ಟೀಕೆಯನ್ನು ಸಂಪೂರ್ತಿ ಬರೆದು ಪ್ರಕಟಿಸುವಿರಾ?

೪. ಗರ್ಭದ ಎಂಟನೆಯ ತಿಂಗಳಿಗೇನೆ ಸಂಪೂರ್ಣ ಶಿವದೀಕ್ಷೆಯೆಂದು ನಿಮ್ಮ ಸಿದ್ಧಾಂತವಿದೆ. ಇದಕ್ಕೊಂದು ಪ್ರಾಚೀನ ದೀಕ್ಷಾವಿಧಾನವನ್ನು ತೋರುವಿರಾ? ಇಲ್ಲವೆಂದರೆ ನೀವಾದರೂ ಒಂದು ಗರ್ಭದೀಕ್ಷಾವಿಧಾನವನ್ನು ಸವಿಸ್ತಾರವಾಗಿ ಸಾಕಲ್ಯವಾಗಿ ಸಮಂಜಸವಾಗಿ ಬರೆದು ಬೇಗ ಪ್ರಕಟಿಸುವ ಉಪಕಾರ ಮಾಡುವಿರಾ?

೫. ಶಿವದೀಕ್ಷೆಯು ಅಂಗಕ್ಕೊ? ಲಿಂಗಕ್ಕೊ? ಶಿವದೀಕ್ಷೆಯ ಮುನ್ನಿನ ಅಂಗ-ಲಿಂಗಗಳೆರಡು ದ್ವೈತವೊ ಅದ್ವೈತವೊ? ಅದ್ವೈತವೆಂದರೆ ಶಿವದೀಕ್ಷೆ ಯಾತಕ್ಕೆ?

ಈ ಐದು ಪ್ರಶ್ನೆಗಳನ್ನು ಸಮಂಜಸವಾಗಿ ಸೋದಾಹರಣದಿಂದ ಸಮನ್ವಯ ಮಾಡಿದರೆ ಈ ಚರ್ಚೆಯು ಇತ್ಯರ್ಥವಾದಂತೆಯೆ ಸರಿ. ಇದಕ್ಕೆ ನಂಜಪ್ಪನವರು ಮುಂದೆ ಬರುವರೆಂದು ನಂಬೋಣವೆ?

ಸತ್ಯಾರ್ಥೋ ವಿಜಯತೇ"

---

## ರಾ॥ ಬ॥ ಹಳಕಟ್ಟಿಯವರ
## ೭೩ನೆಯ
## ವರ್ಧಂತ್ಯುತ್ಸವವು.

---

**ಶಿವಾನುಭವ ಹಾಗು ನವಕರ್ನಾಟಕ**

ಸಂಪಾದಕರಾದ

**ರಾ॥ ಬ॥ ಹಳಕಟ್ಟಿಯವರು**

ವೀರಶೈವ ವಾಙ್ಮಯ ಸಂಶೋಧನ ಕಾರ್ಯವನ್ನು
ಬಹಳ ಪ್ರಶಂಸನೀಯವಾದ ರೀತಿಯಲ್ಲಿ ಜರಗಿಸಿ
ಸಮಾಜಕ್ಕೆ ಮಹದುಪಕಾರ ಮಾಡಿದ್ದರಿಂದ
**ಇವರ ಸ್ಮರಣೆಗಾಗಿ**
೧೯೫೨ನೇ ಜುಲೈ ೨ನೇ ತಾರೀಖಿನ ದಿವಸ
ಅಖಿಲ ಕರ್ನಾಟಕದಲ್ಲೆಲ್ಲ ಸಭೆ ಸೇರಿ ಅಭಿನಂದನಪರ
ಗೊತ್ತುವಳಿಯನ್ನು ಮಾಡಿ ಕಳಿಸಬೇಕೆಂದೂ ವಿಜಾಪುರದಲ್ಲಿ ಅವರಿಗೆ
ಒಂದು ಗ್ರಂಥವನ್ನೂ ನಿಧಿಯನ್ನೂ ಅರ್ಪಿಸಬೇಕೆಂದೂ
ಅಲ್ಲದೆ ಈ ದಿನ

**"ವೀರಶೈವ ಸಂಸ್ಕೃತಿ ಪ್ರಸಾರಕ ಸಂಸ್ಥೆ"**

ಎಂಬದನ್ನು ಸ್ಥಾಪಿಸಿ ಇವರ ಧ್ಯೇಯ ಉದ್ದೇಶಗಳು ಅಬಾಧಿತವಾಗಿ
ಸಾಗುವಂತೆ ಮಾಡಬೇಕೆಂದೂ ಮಹಾಜನಗಳು ನಿರ್ಧರಿಸಿದುದರಿಂದ
ಕನ್ನಡಾಭಿಮಾನಿಗಳು ಮುಖ್ಯವಾಗಿ ವೀರಶೈವರು
ಈ ಮಹತ್ಕಾರ್ಯಕ್ಕೆ ಮುಕ್ತಹಸ್ತದಿಂದ
ಧನ ಸಹಾಯಮಾಡಬೇಕೆಂದು ಈ ಮೂಲಕ ಬಿನ್ನವಿಸುತ್ತೇವೆ.

ಶಿವಾನುಭವದ ಈ ಸಲದ ವಿಶೇಷ
ಲೇಖನಗಳನ್ನು ಓದಿರಿ.

**ಕೆ. ಡಿ. ಬ್ಯಾಳಿ**
**ಕಾರ್ಯದರ್ಶಿ**
ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿ
ವಿಜಾಪುರ.

# ರಾವಬಹಾದ್ದೂರ ಪಿ. ಜಿ. ಹಳಕಟ್ಟಿ ಅವರು ವೀರಶೈವ ಜನಾಂಗದ ಐತಿಹಾಸಿಕ ಸಂಶೋಧನ ಕ್ಷೇತ್ರದಲ್ಲಿ ಮಾಡಿದ ಮಹತ್ಕಾರ್ಯವು.

(ಶ್ರೀಯುತ ಟಿ. ಜಿ. ಹಿರೇಮಠ ಬಿ. ಎ. ಬಿ. ಟಿ.
ಎಸ್. ಎಸ್ ಹೈಸ್ಕೂಲ್ ವಿಜಾಪುರ.)

---

ಏಶಿಯಾ ಖಂಡದ ಅತಿ ಮುಖ್ಯ ದಿನಪತ್ರಿಕೆಗಳಲ್ಲಿ ಒಂದಾದ ಟಾಯಿಮ್ಸ ಆಫ್ ಇಂಡಿಯಾ (*The Times of India*) ಪತ್ರಿಕೆಯ ಸಂಚಾಲಕರು ಪ್ರತಿವರುಷ ಹೊರಡಿಸುತ್ತಿರುವ ತಮ್ಮ (*Indian year Book*) ದಲ್ಲಿ ಕರ್ಣಾಟಕ ದೇಶವನ್ನು 'ವೀರಶೈವರ ದೇಶ' (*The Land of the Lingayats*) ವೆಂದು ವರ್ಣಿಸಿರುವರು. ಈ ಮಾತು ಅಕ್ಷರಶಃ ನಿಜವಿದ್ದು ವೀರಶೈವರು ಕರ್ಣಾಟಕ ಇತಿಹಾಸದಲ್ಲಿ ಅತ್ಯುಚ್ಚವಾದ ಸ್ಥಾನಕ್ಕೆ ಅರ್ಹರಾಗಿರುವರು. ಆದರೆ ಸದ್ಯದ ವೀರಶೈವ ಸಮಾಜದ ಸ್ಥಿತಿಯನ್ನು ನೋಡಿದರೆ ಇತಿಹಾಸವನ್ನೋದದ ಪರಕೀಯರಿಗೆ ಈ ಮಾತು ಬರಿಯ ಆತ್ಮಪೌರುಷವೆಂದು ಅನಿಸುವದು ಸ್ವಾಭಾವಿಕವಿದೆ. ಸುಮಾರು ಇಪ್ಪತ್ತು ವರ್ಷಗಳಾಚೆ ಪರಕೀಯರಿಗಷ್ಟೇ ಅಲ್ಲ, ವೀರಶೈವರಿಗಾದರೂ ತಮ್ಮ ಐತಿಹಾಸಿಕ ಮಹತ್ವದ ಬಗ್ಗೆ ಅರಿವು ಸಹ ಇದ್ದಿದ್ದಿಲ್ಲ. ಆದರೆ ಈ ತರದ ಅಜ್ಞಾನವನ್ನು ದೂರ ಮಾಡಿ ವೀರಶೈವರಲ್ಲಿಯೂ ಅನೇಕ ಯೋದ್ಧರೂ ರಾಜಕಾರಣಪಟುಗಳೂ ಅರಸು ಅರಸಿಯರೂ ಆಗಿಹೋದರಲ್ಲದೆ ಅವರ ಚರಿತ್ರೆಗಳು ಬರಿಯ ಕರ್ಣಾಟಕ ಇತಿಹಾಸದಲ್ಲಿ ಏಕೆ, ಭಾರತ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂಥವುಗಳಾಗಿವೆಯೆಂಬದನ್ನು ಮೊಟ್ಟಮೊದಲು ಕರ್ಣಾಟಕ ಜನತೆಯ ಮುಂದಿಡಲು ಪ್ರಯತ್ನಿಸಿದವರಲ್ಲಿ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರು ಮೊದಲನೆಯವರೆಂದು ಅನ್ನಬಹುದು. ವೀರಶೈವ ಸಂಸ್ಕೃತಿಯ ಪ್ರಚಾರವಲ್ಲದೆ ವೀರಶೈವರ ಐತಿಹಾಸಿಕ ಸಂಶೋಧನೆಯನ್ನೂ ತಮ್ಮ ಮುಖ್ಯ ಗುರಿಯನ್ನಾಗಿಟ್ಟುಕೊಂಡು ೧೯೨೬ ರಲ್ಲಿ 'ಶಿವಾನುಭವ' ಪತ್ರಿಕೆಯನ್ನು ಪ್ರಾರಂಭಿಸಿದರು. ಕರ್ಣಾಟಕದಲ್ಲೆಲ್ಲ ಸಂಚರಿಸಿ

ಅನೇಕ ಜನರಿಗೆ ಭೆಟ್ಟಿಯಾಗಿ ಹುಳಹತ್ತಿ ಹಾಳಾಗುತ್ತಿರುವ ಅಮೌಲ್ಯ ಗ್ರಂಥಗಳನ್ನೂ, ತಾಡವಾಲಿ ಬರಹಗಳನ್ನೂ, ಸನದುಗಳನ್ನೂ ಸಂಗ್ರಹಿಸಿದರು. ಸಂಶೋಧನೆ ಮಾಡಿದಂತೆ ಅನೇಕ ಮಹತ್ವದ ವಿಷಯಗಳನ್ನು ಶಿವಾನುಭವದಲ್ಲಿ ಪ್ರಕಟಿಸುತ್ತ ಬಂದಿರುವರು. ಅವುಗಳಲ್ಲಿ ಕೆಲವನ್ನು ಮಾತ್ರ ವಾಚಕರ ಮುಂದಿಡಲು ಪ್ರಯತ್ನಿಸುತ್ತೇನೆ.

ವೀರಶೈವರಾಜರಲ್ಲಿ ಅತಿ ಮಹತ್ವದ ಸ್ಥಾನಕ್ಕೆ ಯೋಗ್ಯರೆಂದರೆ ಕೆಳದಿಯವರೆಂದು ಅನ್ನಬಹುದು. ಈ ಮನೆತನದ ಬಗ್ಗೆ ಶಾಲೋಪಯೋಗಿ ಪಠ್ಯಪುಸ್ತಕಗಳಲ್ಲಿ ಏನೂ ಕೊಟ್ಟಿಲ್ಲನೆಂಬುದು ವಿಷಾದಕರ ಸಂಗತಿಯು. ವಿಜಯನಗರ ರಾಜರ ಮಾಂಡಲಿಕರಾಗಿ ಆ ರಾಜ್ಯವು ಹಾಳಾದ ಮೇಲೆಯೂ ನೂರಾರು ವರುಷಗಳ ವರೆಗೆ ಪಶ್ಚಿಮ ಕರ್ನಾಟಕದಲ್ಲಿ ಖ್ಯಾತಿವಂತರಾಗಿ ಆಳಿದರು. ವಿಜಯನಗರದ ಎಲ್ಲ ಅರಸರಲ್ಲಿ ಶ್ರೇಷ್ಠನೆನಿಸಿಕೊಂಡ ಕೃಷ್ಣದೇವರಾಯನ ಕಾಲದಲ್ಲಿ ಬಹಾಮನಿ ಮುಸಲ್ಮಾನ ಅರಸರನ್ನು ಅನೇಕ ಬಾರಿ ಸೋಲಿಸಿ ವಿಜಯನಗರದ ಕೀರ್ತಿಧ್ವಜವನ್ನು ಮೆರೆಯಿಸಿದ ಸದಾಶಿವನಾಯಕನು ಈ ಮನೆತನಕ್ಕೆ ಸೇರಿದವನಿದ್ದಾನೆ. ಕರ್ನಾಟಕದ ಮೊದಲನೆಯ ರಾಣಿಯೆನಿಸಿದ ರಾಣೀ ಚನ್ನಮ್ಮಾಜಿಯೂ ಇತಿಹಾಸ ಪ್ರಸಿದ್ಧಳಾಗಿ ಹೋಗಿದ್ದಾಳೆ. ದಿಲ್ಲಿಯ ಚಕ್ರವರ್ತಿಯಾದ ಔರಂಗಜೇಬ ಬಾದಶಹನು ಮರಾಠರನು ಮುರಿದು ದಕ್ಷಿಣ ಹಿಂದುಸ್ಥಾನವನ್ನೂ ಪಾದಾಕ್ರಾಂತಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಮಹಾರಾಷ್ಟ್ರದ ಮೇಲೆ ಲಕ್ಷಾವಧಿ ಸೈನ್ಯದೊಂದಿಗೆ ಏರಿಬಂದನು. ಶಿವಾಜಿಯ ಮರಣದಿಂದಲೂ ಹಾಗೂ ಸಂಭಾಜಿಯ ಅವಿವೇಕತನದಿಂದಲೂ ಔರಂಗಜೇಬನನ್ನು ಸೋಲಿಸುವದು ಅಸಾಧ್ಯವಾಯಿತು. ಸಂಭಾಜಿಯ ಕೊಲೆಯಾದ ಬಳಿಕಂತೂ ಮಹಾರಾಷ್ಟ್ರದ ಸ್ಥಿತಿಯು ಮತ್ತಿಷ್ಟು ಕೆಟ್ಟುಹೋಯಿತು. ಆದರೂ ಮರಾಟಿಗರು ಧೈರ್ಯಗುಂದದೆ ರಾಜಾರಾಮನನ್ನು ಮುಂದೆಮಾಡಿಕೊಂಡು ಔರಂಗಜೇಬನನ್ನು ಎದುರಿಸಬೇಕೆಂದು ನಿಶ್ಚಯಿಸಿದರು. ಆದರೂ ಅವರಾಟವೇನೂ ನಡೆಯದಂತಾಯಿತು. ರಾಜಾರಾಮ ಹಾಗೂ ಆತನ ಅನುಯಾಯಿಗಳು ವೇಷ ಬದಲಿಸಿಕೊಂಡು ಜೀವ ಉಳಿಸಿಕೊಳ್ಳಲು ಮಹಾರಾಷ್ಟ್ರವನ್ನು ಬಿಟ್ಟು ಕರ್ನಾಟಕಕ್ಕೆ ಬರಬೇಕಾಯಿತು. ಇಂಥ ನಿರುಪಾಯ ಸ್ಥಿತಿಯಲ್ಲಿ ರಾಣೀ ಚನ್ನಮ್ಮಾಜಿಯು ಮುಂದೆ ಬರಬಹುದಾದ ಗಂಡಾಂತರಕ್ಕೆ ಲಕ್ಷ್ಯಕೊ

ಡದೆ ಬೆನ್ನಿಗೆ ಬಿದ್ದವರನ್ನು ಕಾಪಾಡುವದೇ ತನ್ನ ಧರ್ಮವೆಂದೆನಿಸಿ
ರಾಜಾರಾಮನಿಗೆ ತನ್ನ ರಾಜ್ಯದಲ್ಲಿ ಎಷ್ಟೋ ದಿವಸಗಳ ವರೆಗೆ ಆಶ್ರಯ
ಕೊಟ್ಟು ಆತನನ್ನೂ ಅವನ ಸಂಗಡಿಗರನ್ನೂ ಸುರಕ್ಷಿತವಾಗಿ ಜಿಂಜಿ
ಕೋಟೆಗೆ ಮುಟ್ಟಿಸುವಂತೆ ವ್ಯವಸ್ಥೆ ಮಾಡಿದಳು. ದಿಲ್ಲಿ ಸಾಮ್ರಾಟನ
ವಿರುದ್ಧ ಆಕೆಯು ಈ ರೀತಿಯಾಗಿ ಸಾಹಸಮಾಡಿದ್ದು ಅತಿ ಮಹತ್ವ
ದ್ದದೆ. ಮುಂದೆ ಮೊಗಲ ಸೈನ್ಯವು ಆಕೆಯ ರಾಜ್ಯದ ಮೇಲೆ ದಾಳಿ
ಯಿಡಲು ಅದನ್ನೂ ಹಿಮ್ಮೆಟ್ಟಿಸಿ ಸ್ವತಂತ್ರದಿಂದ ಅನೇಕ ಕಾಲ ರಾಜ್ಯ
ವಾಳಿದಳು. ಆಕೆಯು ಅತ್ಯಂತ ಧರ್ಮಿಷ್ಠಳಾಗಿದ್ದಳು. ಆಕೆಯ ರಾಜ್ಯ
ವ್ಯವಸ್ಥೆಯಾದರೂ ಆದರ್ಶಪ್ರಾಯವಾಗಿತ್ತು. ಇಂಥ ರಾಣಿಯರು ಕರ್ನಾ
ಟಕದ ಇತಿಹಾಸದಲ್ಲಿಯಷ್ಟೇ ಅಲ್ಲ, ಹಿಂದುಸ್ಥಾನದ ಇತಿಹಾಸದಲ್ಲಿಯೇ
ಸಿಗುವದು ದುರ್ಲಭವಿದೆ. ಈ ಮನೆತನದ ವಿಷಯಕ್ಕೆ ಅನೇಕ ಗ್ರಂಥ
ಗಳನ್ನು ಪರಿಶೀಲಿಸಿ ಸಾದ್ಯಂತವಾಗಿ ಇತಿಹಾಸವನ್ನು ಮೊಟ್ಟಮೊದಲಿಗೆ
ಪ್ರಸಿದ್ಧಿಸಿದ ಶ್ರೇಯಸ್ಸು ರಾವಬಹಾದ್ದೂರ ಹಳಕಟ್ಟಿಯವರಿಗೆ ಸಲ್ಲುತ್ತದೆ.

ಬೆಳವಡಿ ಮಲ್ಲಮ್ಮನ ಚರಿತ್ರೆಯ ಮೇಲೆ ಬೆಳಕನ್ನು ಚಲ್ಲಿದವರಾ
ದರೂ ಇವರೇ ಇರುವರು. ಇಡೀ ಹಿಂದುಸ್ಥಾನವನ್ನೇ ಗದಗಮಿಸಿದ
ಔರಂಗಜೇಬ ಬಾದಶಹನನ್ನು ಹಣ್ಣುಮಾಡಿದ ಶಿವಾಜಿಮಹಾರಾಜನಾ
ದರೂ ಈ ವೀರ ಮಹಿಳೆಯ ಕೋಟೆಯನ್ನು ಹಸ್ತಗತಮಾಡಿಕೊಳ್ಳಲು
೨೭ ದಿವಸಗಳ ವರೆಗೆ ಯುದ್ಧ ನಡಿಸಬೇಕಾಯಿತು. ಈಕೆಯ ಹೆಸರು
ಮರಾಠಿ ಇತಿಹಾಸಗಳಲ್ಲಿಯೂ ಮತ್ತು ಪರ್ಶಿಯನ್ ಗ್ರಂಥಗಳಲ್ಲಿಯೂ
ಪ್ರಸಿದ್ಧವಾಗಿದೆ. ಈಕೆಯನ್ನು ಮರಾಟಿಗರು 'ಮಲವಾಯಿ' ಯೆಂದೂ
ಪರ್ಶಿಯನ್ ಇತಿಹಾಸಕಾರರು 'ಲಾಲಬಿಯಾ' ಎಂದು ಬರೆದಿರುವರು.
ಅವರೆಲ್ಲರೂ ಆಕೆಯು ತಮ್ಮ ಸಮಾಜಕ್ಕೇ ಸೇರಿದವಳೆಂದು ತೋರಿ
ಸುವ ಉದ್ದೇಶದಿಂದ ಈ ರೀತಿಯಾಗಿ ಆಕೆಯನ್ನು ಕರೆದಿದ್ದಾರೆ. ಆದರೆ
ಮಲ್ಲಮ್ಮ ದೇಸಾಯಿಣಿಯು ವೀರಶೈವಳಿದ್ದಳೆಂದು ಅನೇಕ ಗ್ರಂಥಗಳ
ಆಧಾರದಿಂದ ಸಿದ್ಧಪಡಿಸಿ ಆಕೆಯ ಚರಿತ್ರೆಯನ್ನು ಸರಿಯಾದ ರೀತಿ
ಯಲ್ಲಿ ಮೊಟ್ಟಮೊದಲು 'ಶಿವಾನುಭವ' ಪತ್ರಿಕೆಯಲ್ಲಿ ಪ್ರಸಿದ್ಧಮಾಡಿದ
ವರು ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರೇ ಆಗಿರುವರು. ತರು
ವಾಯ ಅನೇಕ ಜನರು ಅವರ ಪರಿಶೋಧನೆಯನ್ನವಲಂಬಿಸಿ ಬೇರೆ ಬೇರೆ
ರೀತಿಯಿಂದ ಆ ವೀರಸ್ತ್ರೀಯ ಚರಿತ್ರೆಯನ್ನು ಪ್ರಕಟಿಸಿದ್ದಾರೆ.

ಕೆಳದಿ ಅಥವಾ ಇಕ್ಕೇರಿ ಅರಸುಮನೆತನದಷ್ಟೇ ಮಹತ್ವವಾದ ಮತ್ತೊಂದು ವೀರಶೈವ ಅರಸುಮನೆತನವೆಂದರೆ ಕೊಡಗಿನವರದು. ಈ ಮನೆತನದ ಇತಿಹಾಸವನ್ನು ಗೊತ್ತುಹಚ್ಚುವದರಲ್ಲಿ ರಾವಬಹಾದ್ದೂರ ವರು ಬಹಳೇ ಶ್ರಮವಹಿಸಿದ್ದಾರೆ. ಈ ಮನೆತನದವರು ತೋರಿಸಿದ ಪರಾಕ್ರಮವು ಎಲ್ಲರನ್ನೂ ಬೆರಗುಗೊಳಿಸುತ್ತದೆ. ವೀರರಾಜೇಂದ್ರನು ಎಲ್ಲರಲ್ಲಿಯೂ ಶ್ರೇಷ್ಠನೆನಿಸಿಕೊಂಡನು. ಹೈದರಅಲ್ಲಿ, ಟೀಪುಸುಲ್ತಾನ ಇವರ ದಾಳಿಗಳನ್ನು ಎದುರಿಸಿ ಸ್ವತಂತ್ರವಾಗಿ ಕೊಡಗಿನಲ್ಲಿ ರಾಜ್ಯವಾಳಿದನು. ವೀರರಾಜೇಂದ್ರನ ಸಹಾಯದಿಂದಲೇ ಇಂಗ್ಲೀಷರಿಗೆ ಟೀಪುನನ್ನು ಬಗ್ಗುಬಡೆಯುಲು ಅನುಕೂಲವಾಯಿತು. ಶಾಲೆಯಲ್ಲಿ ಓದುವ ಇತಿಹಾಸ ಪುಸ್ತಕಗಳಲ್ಲಿ ಈತನ ಹೆಸರನ್ನು ಕಾಣುವದು ಅಪರೂಪ. ಕರ್ಣಾಟಕ ಇತಿಹಾಸದಲ್ಲಿ ಇಷ್ಟೊಂದು ಖ್ಯಾತಿಯನ್ನು ಪಡೆದ ಅರಸನ ವಿಸ್ತೃತ ಚರಿತ್ರೆಯು 'ಶಿವಾನುಭವ'ದಲ್ಲಿಯೇ ಮೊದಲಿಗೆ ಪ್ರಸಿದ್ಧವಾಯಿತು.

ಹಾಗಲವಾಡಿ ಅರಸುಮನೆತನವಾದರೂ ಮೈಸೂರ ದೇಶದಲ್ಲಿ ನೂರಾರು ವರ್ಷಗಳ ವರೆಗೆ ಮೆರೆಯಿತು. ಈ ಮನೆತನದ ಅರಸರಾದರೂ ಅನೇಕ ಪರಾಕ್ರಮದ ಕಾರ್ಯಗಳನ್ನು ಮಾಡಿ ಕರ್ಣಾಟಕ ಇತಿಹಾಸದಲ್ಲಿ ತಮ್ಮ ಹೆಸರನ್ನು ಅಜರಾಮರ ಮಾಡಿದ್ದಾರೆ. ಅವರಲ್ಲೊಬ್ಬರು ಗ್ರಂಥಕಾರರಿದ್ದು ಅವರ ಗ್ರಂಥವನ್ನು ರಾ. ಬ. ಹಳಕಟ್ಟಿಯವರು ಪ್ರಸಿದ್ಧಿಸಿದ್ದಾರೆ. ಈ ಮನೆತನದ ವಿಷಯವಾಗಿಯೂ ಯಾರಿಗೂ ಗೊತ್ತಿದ್ದಿಲ್ಲ. ಆದರೆ ಈ ಮನೆತನದವರ ಮೂಲ ಇತಿಹಾಸವನ್ನು ಮೊದಲುಗೊತ್ತುಹಚ್ಚಿ 'ಶಿವಾನುಭವ' ಪತ್ರಿಕೆಯಲ್ಲಿ ರಾವಬಹಾದ್ದೂರವರು ಮೊಟ್ಟಮೊದಲು ಪ್ರಸಿದ್ಧಿಸಿದರು.

ಸ್ವಾದಿ ಅರಸರು ಈಗಿನ ಗೋವಾಪ್ರಾಂತದಲ್ಲಿ ಈಗ ಇದ್ದು ಕಾರವಾರ ಜಿಲ್ಹೆಯಲ್ಲಿ ಅನೇಕ-ಕಾಲ ಸ್ವತಂತ್ರದಿಂದ ರಾಜ್ಯವಾಳಿದರು. ಇವರಾದರೂ ಮೊದಲು ವಿಜಯನಗರದ ಮಾಂಡಲಿಕರಾಗಿದ್ದರು. ಆ ರಾಜ್ಯವು ಹಾಳಾದ ಮೇಲೆಯೂ ಸಹ ಈ ಅರಸರು ತಮ್ಮ ಅಧಿಕಾರವನ್ನು ಕಾಯ್ದುಕೊಂಡಿದ್ದರು. ಈ ಮನೆತನದವರು ವ್ಯಾಪಾರೋದ್ಯೋಗಗಳಿಗೆ ಬಹಳ ಪ್ರೋತ್ಸಾಹನೆಯನ್ನು ಕೊಟ್ಟರು. ಈ ಮನೆತ

ನದ ಸಾದ್ಯಂತ ಚರಿತ್ರೆಯನ್ನು ಶಿವಾನುಭವ ಪತ್ರಿಕೆಯ ಬೇರೆ ಬೇರೆ ಸಂಚಿಕೆಗಳಲ್ಲಿ ಓದಲು ಶಕ್ಯವಿದೆ.

ಮೇಲೆ ಹೇಳಿದ ಅರಸುಮನೆತನಗಳಲ್ಲದೆ ವೀರಶೈವರಲ್ಲಿ ಅನೇಕ ದೇಸಗತಿಗಳೂ ಆಗಿಹೋಗಿರುತ್ತವೆ. ಅವುಗಳಲ್ಲಿ ಕಿತ್ತೂರ ದೇಸಗತಿಯು ಎಲ್ಲಕ್ಕೂ ಮಹತ್ವದ್ದದೆ. ಕಿತ್ತೂರ ದೇಸಾಯಿ ಮನೆತನದ ಚರಿತ್ರೆಯು ಮೊದಲು ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧವಾಯಿತು. ಅದರಂತೆ ಕೊಕ್ಕಟನೂರ ದೇಸಗತಿಯ ಇತಿಹಾಸವಾದರೂ ಶಿವಾನುಭವ ಪತ್ರಿಕೆಯಲ್ಲಿ ಪ್ರಸಿದ್ಧಿಸಲ್ಪಟ್ಟಿದೆ. ಅದಕ್ಕೆ ಸಿರಸಂಗಿ ದೇಸಾಯರ ಮನೆತನದ ಸಂಬಂಧವಿದೆ. ಕರ್ಣಾಟಕದಲ್ಲಿ ಅನೇಕ ದೇಸಾಯಿಯರ ಮನೆತನಗಳಿದ್ದು ಅವುಗಳ ಇತಿಹಾಸವನ್ನು ಗೊತ್ತುಹಚ್ಚುವದು ಅತಿ ಮಹತ್ವದ ಕಾರ್ಯವಾಗಿದೆ. ಹೀಗೆ ಮಾಡುವದರಿಂದ ಕರ್ಣಾಟಕ ಹಾಗೂ ದಕ್ಷಿಣ ಹಿಂದುಸ್ಥಾನದ ಇತಿಹಾಸ ಸಂಶೋಧನೆಯ ಕಾರ್ಯವನ್ನೇ ಕೈಕೊಂಡಂತಾಗುತ್ತದೆ. ದೇಸಗತಿ ಪಾಟೀಲ ಮುಂತಾದ ವತನಗಳು ಆಯಾ ಮನೆತನಗಳ ಪೂರ್ವಜರು ಯುದ್ಧದಲ್ಲಿ ತೋರಿಸಿದ ಪರಾಕ್ರಮದ ಕುರುಹುಗಳಾಗಿವೆ. ಮುಂಬಯಿ ಕರ್ಣಾಟಕ, ಹಾಗೂ ನಿಜಾಮ ಕರ್ನಾಟಕದಲ್ಲಿ ವೀರಶೈವ ವತನದಾರರೇ ವಿಶೇಷವಾಗಿರುವರು. ಸುರಪುರದ ದೊರೆಗಳು ಬೇಡಜಾತಿಯವರಿದ್ದರೂ ಆ ಸಂಸ್ಥಾನದಲ್ಲಿ ಅನೇಕ ವೀರಶೈವ ರಾಜಕಾರಣಪಟುಗಳು ಆಗಿಹೋಗಿರುವರು. ಅವರಲ್ಲಿ ಪಿಷ್ಟೀ ವೀರಪ್ಪನೆಂಬುವನು ಅತಿ ಪ್ರಸಿದ್ಧನಿದ್ದನು. ಇನ್ನೂ ವರೆಗಾದರೂ ಈ ವೀರಪ್ಪನ ಹೆಸರನ್ನು ಆ ಭಾಗದಲ್ಲಿ ಎಲ್ಲರೂ ಕೊಂಡಾಡುತ್ತಿರುವರು. ಆದರೆ ಅವನು ಕರ್ನಾಟಕ ಇತಿಹಾಸದಲ್ಲಿ ಇನ್ನೂ ಅಪರಿಚಿತನಾಗಿದ್ದಾನೆ. ಶಿವಾನುಭವ ಪತ್ರಿಕೆಯಲ್ಲಿ ಇವನ ಚರಿತ್ರೆಯನ್ನೂ ರಾವಬಹಾದ್ದೂರ ವರು ಮೊದಲು ಪ್ರಸಿದ್ಧಿಸಿರುವರು.

ವೀರಶೈವ ಅರಸು ಅರಸಿಯರ ವತನದಾರರ ಹಾಗೂ ರಾಜಕಾರಣಪಟುಗಳ ಚರಿತ್ರೆಗಳನ್ನಲ್ಲದೆ ಅನೇಕ ಮಹಾಸ್ವಾಮಿಗಳ ಮತ್ತು ಮಠಾಧಿಕಾರಿಗಳ ಚರಿತ್ರೆಗಳನ್ನಾದರೂ ಐತಿಹಾಸಿಕ ದೃಷ್ಟಿಯಿಂದ ಪರಿಶೋಧಿಸಿ ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾಗಿದೆ. ಅದರಂತೆಯೇ ವೀರಶೈವ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಪುಣ್ಯಕ್ಷೇತ್ರಗಳ [illegible]

ಸವನ್ನಾದರೂ ಶಿವಾನುಭವ ಸಂಚಿಕೆಗಳಲ್ಲಿ ಓದಲು ಶಕ್ಯವಿದೆ. ಇತ್ತಿತ್ತಲಾಗಿ ಶ್ರೀಬಸವೇಶ್ವರ, ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ ಮೊದಲಾದ ಶಿವಶರಣರ ವಿಷಯವಾಗಿ ಪೌರಾಣಿಕ ಭಾಗಗಳನ್ನು ಬಿಟ್ಟು ನಿಜವಾದ ಐತಿಹಾಸಿಕ ಸಂಗತಿಗಳನ್ನು ಪ್ರಕಟಿಸುತ್ತ ಬಂದಿರುವರು. ಇದು ಅವರು ನಡಿಸಿದ ಈಗಿನ ಮಹತ್ವದ ಕಾರ್ಯವು. ಸಂಶೋಧನ ಕಾರ್ಯದಲ್ಲಿ ಆಸಕ್ತಿಯುಳ್ಳವರಿಗೆ ರಾವಬಹಾದ್ದೂರ ಪಿ. ಜಿ ಹಳಕಟ್ಟಿಯವರು ನಿಜವಾದ ಮಾರ್ಗದರ್ಶಕರಾಗಿರುವರು. ವೀರಶೈವ ಸಮಾಜವು ನೂರಾರು ವರ್ಷಗಳಿಂದ ಕರ್ನಾಟಕದಲ್ಲಿ ಮೆರೆದಿರುವದರಿಂದ ಇನ್ನೂ ಎಷ್ಟೋ ಸಂಗತಿಗಳು ಬೆಳಕಿಗೆ ಬಂದಿರುವದಿಲ್ಲ. ಸದ್ಯಕ್ಕೆ ಪ್ರಕಟಿಸಿದ ವಿಷಯಗಳು ಅನೇಕವಾಗಿದ್ದರೂ ಇನ್ನೂ ಸಂಶೋಧಿಸುವ ಭಾಗವು ಮಹಾಸಾಗರದಂತೆ ವಿಶಾಲವಾಗಿರುವದು. ಇಂಥ ಕೆಲಸಕ್ಕೆ ಹಣದ ಅವಶ್ಯಕತೆಯು ವಿಶೇಷವಾಗಿದೆ. ಮುಂದಿನ ಜುಲೈ ತಿಂಗಳಲ್ಲಿ ಜರಗಲಿರುವ ರಾವಬಹಾದ್ದೂರ ಪಿ. ಜಿ. ಹಳಕಟ್ಟಿಯವರ ವರ್ಧಂತ್ಯುತ್ಸವದ ನಿಮಿತ್ತ ವೀರಶೈವ ಸಂಸ್ಕೃತಿ ಪ್ರಚಾರದ ಸಂಘವೊಂದನ್ನು ಸ್ಥಾಪಿಸುವ ವಿಚಾರವಿದೆ. ಹಿಂದುಸ್ಥಾನದಲ್ಲಿಯೇ ಆರ್ಯಸಮಾಜ, ರಾಮಕೃಷ್ಣ ಮಿಶನ್, ಮೊದಲಾದ ಸಂಸ್ಥೆಗಳು ಲಕ್ಷಾಂತರಗಟ್ಲೆ ಹಣಕೂಡಿಸಿ ಪ್ರಚಾರ ಕಾರ್ಯವನ್ನು ಹೇಗೆ ಮಾಡುತ್ತಿರುವರೆಂಬದನ್ನು ವೀರಶೈವರು ಕಲಿಯತಕ್ಕ ಮಾತಾಗಿದೆ. ಸಮಾಜದ ಮುಂದಾಳುಗಳು ರಾವಬಹಾದ್ದೂರವರ ಕಾರ್ಯವನ್ನು ಯಶಸ್ವಿಯಾಗಿ ಮಾಡೇತೀರಬೇಕೆಂದು ದೃಢನಿಶ್ಚಯ ಮಾಡಿ ಮುಂದಿನ ಕಾರ್ಯಕ್ಕೆ ತೊಡಗುವದು ಸಮಾಜದ ಏಳ್ಗೆಯ ದೃಷ್ಟಿಯಿಂದ ಅತಿ ಮಹತ್ವದ್ದಾಗಿದೆ. ವೀರಶೈವ ಸಮಾಜದಲ್ಲಿ ಶ್ರೀಮಂತ ವ್ಯಾಪಾರಿಗಳೂ, ದೇಸಾಯಿ, ದೇಶಪಾಂಡೆ, ಪಾಟೀಲ ಮೊದಲಾದ ವತನದಾರರೂ ಇರುವದರಿಂದ ಈ ಕಾರ್ಯವು ಸುಲಭ ಸಾಧ್ಯವಾಗುವದರಲ್ಲಿ ಏನೂ ಸಂದೇಹವಿಲ್ಲ. ಕಾರಣ ಎಲ್ಲ ಸಮಾಜ ಬಾಂಧವರು ವೀರಶೈವರ ಇತಿಹಾಸ ಸಂಶೋಧನೆ ಹಾಗು ವೀರಶೈವ ಸಂಸ್ಕೃತಿಯ ಪ್ರಚಾರ ಕಾರ್ಯಕ್ಕೆ ತನು ಮನ ಧನಗಳಿಂದ ಸಹಾಯ ಮಾಡುವರೆಂದು ನಂಬಿರುವೆನು.

# ಶಿವಾನುಭವ ಸಂಘಗಳು.

( ಲೇಖಕರು:— ಶ್ರೀಯುತ ಎಮ್. ಎಸ್. ವಾಣಜಗಿ. ಬಿ. ಎ., ಬಿ. ಟಿ. )

'ನವಕರ್ನಾಟಕ' 'ಶಿವಾನುಭವ' ಪತ್ರಿಕೆಗಳ ಓದುಗರಿಗೆ ಈ ವಿಷಯವು ಹೊಸದಲ್ಲ. ಆದರೆ ಈ ಸಂಘಗಳ ವಿಚಾರದ ಉಗಮ, ಅವುಗಳ ಅವಶ್ಯಕತೆ, ಈಗಾಗಲೇ ಸ್ಥಾಪಿತವಾಗಿರುವ ಸಂಘಗಳು, ಅವುಗಳು ಮಾಡುತ್ತಿರುವ ಕಾರ್ಯ, ಇನ್ನುಮುಂದೆ ಅವುಗಳು ಮಾಡಬಹುದಾದ ಮಹತ್ತರವಾದ ಕಾರ್ಯಗಳು ಈ ಬಗ್ಗೆ ಜನರಿಗೆ ತಿಳುವಳಿಕೆ ಮಾಡಿಕೊಡುವದೇ ಈ ಬರಹದ ಉದ್ದೇಶವು.

ಮೊದಲನೆಯದಾಗಿ ಶಿವಾನುಭವ ಸಂಘಗಳ ವಿಚಾರದ ಉಗಮ:- ಈ ಬಗ್ಗೆ ಸ್ವಲ್ಪದಂಲ್ಲಿಯೇ ಹೇಳಬೇಕಾದರೆ ವಚನ ವಾಙ್ಮಯ ಪಿತಾಮಹರೆಂದು ಖ್ಯಾತಿಗೊಂಡಿರುವ ರಾ॥ ಬ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್ ಬಿ ಇವರೇ ಈ ವಿಚಾರದ ಪ್ರವರ್ತಕರೆಂದು ಹೇಳಬಹುದು ಈ ಮಹಾನುಭಾವರು ತಮ್ಮ ಸುದೀರ್ಘವಾದ ಪ್ರಯತ್ನದಿಂದ ವಚನವಾಙ್ಮಯದ ಶೋಧನೆಯನ್ನು ಮಾಡಿ ಚನ್ನಾಗಿ ಅಭ್ಯಸಿಸಿ ಅವುಗಳಲ್ಲಿಯ ಉದಾತ್ತ ತತ್ವಗಳನ್ನರಿತುಕೊಂಡುದಲ್ಲದೆ ಆ ವಚನವಾಙ್ಮಯದ ಉಗಮಕ್ಕೆ ಕಾರಣೀಭೂತವಾದ 'ಶಿವಾನುಭವ ಮಂಟಪ'ದ ನಿರೀಕ್ಷಣೆಯನ್ನು ವಚನವಾಙ್ಮಯದ ಮುಖಾಂತರವಾಗಿ ಕಂಡುಹಿಡಿದು ಅಂಥ ಸಂಸ್ಥೆ ಅಥವಾ ಸಂಘವು ನಮ್ಮ ಸಮಾಜದಲ್ಲಿ ಸದ್ಯಕ್ಕೆ ಎಷ್ಟು ಅವಶ್ಯವಿರುವದೆಂಬದನ್ನು ಅರಿತು 'ಶಿವಾನುಭವ ಸಂಘ'ಗಳ ಸ್ಥಾಪನೆಯ ವಿಚಾರವನ್ನು ಬೇರೆ ಕೆಲವು ವಿಚಾರವಂತರೊಡನೆ ಚರ್ಚಿಸಿ ಬಹಿರಂಗಪಡಿಸಿದರು ಮತ್ತು ಅವರ ಈ ವಿಚಾರಕ್ಕೆ ಬೇರೆ ಬೇರೆ ಭಾಗಗಳಿಂದ ಉತ್ತೇಜನಕಾರಿಯಾದ ಪತ್ರಗಳೂ ಸಂಘಗಳ ಸ್ಥಾಪನಾಕಾರ್ಯದ ವಿವರಗಳೂ ಆಯಾ ಚಾಲಕರಿಂದ ಬರಹತ್ತಿ ಸಂಘಗಳ ಸ್ಥಾಪನೆಯ ಕಾರ್ಯವು ವಿಕಾಸಗೊಂಡಿದೆ. ಈ ರೀತಿಯಾಗಿ ಒಂದೆರಡು ವರ್ಷಗಳ ಅವಧಿಯಲ್ಲಿ ಸ್ಥಾಪಿತವಾಗಿರುವ ಸಂಘಗಳ ಸಂಖ್ಯೆಯು ಒಂದುನೂರಕ್ಕೆ ಸಮೀಪಿಸಿದೆ. ಆ ಸಂಘಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ಸ್ಥಾಪಿ

ತವಾದದ್ದು ಹೆಚ್ಚು ಆನಂದದಾಯಕವಾದ ಸಂಗತಿಯು. ಈ ಸಂಘಗಳು ಬ್ರಿಟಿಶ ಕರ್ನಾಟಕದಲ್ಲಿ ಅಷ್ಟೇ ಅಲ್ಲದೆ ಮಹಾರಾಷ್ಟ್ರ, ಸಂಸ್ಥಾನಗಳಲ್ಲಿಯೂ ಕೂಡ ಸ್ಥಾಪಿತವಾಗಿವೆ. ಅವೆಲ್ಲವುಗಳ ಚಾಲಕರು ಆಯಾ ಗ್ರಾಮಗಳಲ್ಲಿಯ ಮಠಾಧಿಕಾರಿಗಳಾಗಲಿ, ಪಾಟೀಲರಾಗಲಿ, ಮಾಸ್ತರರಾಗಲಿ ಹೀಗೆ ಸಮಾಜದಲ್ಲಿ ಒಂದು ವಿಶಿಷ್ಟ ಸ್ಥಾನವನ್ನು ವಹಿಸಿ ಸಮಾಜದ ನಾಯಕರಾಗಿ ಕಾರ್ಯಸಾಗಿಸುವ ಉತ್ಸಾಹಿಗಳೇ ಆಗಿರುವರು. ಇದಲ್ಲದೆ ಇಂಥ ಕಾರ್ಯಚಾಲಕರಲ್ಲಿ ಕೆಲವು ಮಹಿಳೆಯರು ಕೂಡ ಭಾಗವಹಿಸಿರುವ ಸಂಗತಿಯು ಅಭಿಮಾನಾಸ್ಪದವಾದದ್ದು. ಈ ಎಲ್ಲ ಸಂಘಗಳಲ್ಲಿ ಭಾಗವಹಿಸುತ್ತಿರುವ ಸದಸ್ಯರ ಸಂಖ್ಯೆಯು ೧೫೦೦ ಇರುವದು.

ಈ ಸಂಘಗಳು ಸಾಗಿಸುತ್ತಿರುವ ಸಾಮಾನ್ಯಕಾರ್ಯಗಳೆಂದರೆ ವಾರಕ್ಕೊಮ್ಮೆಯಾಗಲಿ ಹೆಚ್ಚುಸಾರೆಯಾಗಲಿ ಒತ್ತಟ್ಟಿಗೆ ಕೂಡುವದು, ಮೊದಲೇ ಗೊತ್ತುಪಡಿಸಿದ ಮೇರೆಗೆ ಒಬ್ಬರು ಶಿವಶರಣರ ಚರಿತ್ರೆಯನ್ನಾಗಲಿ, ವಚನಗಳನ್ನಾಗಲಿ, ಇಲ್ಲವೆ ವೀರಶೈವಮತ ತತ್ವಗಳನ್ನಾಗಲಿ ಅಭ್ಯಾಸಮಾಡಿಕೊಂಡು ಬಂದು ಎಲ್ಲರಿಗೂ ತಿಳಿಸಿಹೇಳುವದು, ಆ ಕಾಲಕ್ಕೆ ಉಳಿದವರು ತಮ್ಮ ತಮ್ಮ ಸಂಶಯನಿವಾರಣೆ ಮಾಡಿಕೊಳ್ಳಲಿಕ್ಕೆ ಆಸ್ಪದ ಕೊಡುವದು ಇತ್ಯಾದಿ. ಇದಲ್ಲದೆ ತಮ್ಮ ಗ್ರಾಮಕ್ಕೆ ಆಗಮಿಸಿದ ವೀರಶೈವ ಮತದ ಬಗ್ಗೆ ಅಭ್ಯಾಸ ಮಾಡಿರುವ ಅತಿಥಿಗಳ ಪ್ರವಚನ, ಭಾಷಣಗಳನ್ನೇರ್ಪಡಿಸುವದು, ಹೀಗೆ ಬೇರೆ ಬೇರೆ ಚಟುವಟಿಕೆಗಳನ್ನು ನಡೆಯಿಸುತ್ತ ಬಂದಿರುವವು.

ಆದರೆ ಈ ಪ್ರಕಾರ ಸ್ಥಾಪಿತವಾಗಿರುವ ಸಂಘಗಳು ಸ್ಥಳಿಕ ಸಂಘಗಳಾಗಿದ್ದು ಅವುಗಳಲ್ಲಿ ಪರಸ್ಪರ ಸಂಬಂಧ ಉಂಟಾಗುವಂತೆ ಮಾಡಿ ಇಡೀ ಸಮಾಜದ ಸಂಘಟನೆಯನ್ನು ಮಾಡುವದು ಮಹತ್ವದ ವಿಷಯವಾಗಿದೆ. ಈ ಬಗ್ಗೆ ರಾ। ಬ। ಪಿ ಜಿ. ಹಳಕಟ್ಟಿಯವರು ಬಹಳ ವಿಚಾರ ಮಾಡಿ ಒಂದು ಮಧ್ಯವರ್ತಿ ಸಂಘವನ್ನು ಸ್ಥಾಪಿಸಿ ಉಳಿದ ಎಲ್ಲ ಸಂಘಗಳೂ ಆ ಮಧ್ಯವರ್ತಿ ಸಂಘಕ್ಕೆ ಹೊಂದಿಕೊಂಡು ತಮ್ಮ ಕಾರ್ಯವನ್ನು ಸಾಗಿಸುವ ಯೋಜನೆಯೊಂದನ್ನು ಸಿದ್ಧಪಡಿಸಿ ಚರ್ಚೆಗಾಗಿ ಕೆಲ ಮಹನೀಯರ ಮುಂದೆ ಇಟ್ಟರು. ಆದರೆ ಆ ಕಾರ್ಯವು ಇನ್ನೂ ಪೂರ್ಣವಾಗಿಲ್ಲ. ಈ ಮಧ್ಯದಲ್ಲಿ ರಾ. ಬ. ಪಿ. ಜಿ. ಹಳಕಟ್ಟಿಯವರು

ಆಯಾ ಸಂಘಗಳಿಂದ ಎಲ್ಲ ಮಾಹಿತಿಯನ್ನು ದೊರಕಿಸಿರುತ್ತಾರೆ. ಈ ಸಂಘದ ಕಾರ್ಯ ಪದ್ಧತಿಯನ್ನು ನಿರ್ಧರಿಸುವದು ಬಹು ಮಹತ್ವದ ವಿಷಯವಾಗಿದೆ. ಇಂಥ ಸಂಘದಿಂದ ಸಮಾಜಕ್ಕೆ ಬಹಳ ಕಲ್ಯಾಣ ವಾಗಬಹುದೆಂದು ನಿರೀಕ್ಷಿಸಲಾಗಿದೆ. ಈ ಸಂಘವು ಬೋಧಕರನ್ನು ಪ್ರತಿ ಗ್ರಾಮಕ್ಕೂ ಕಳಿಸಿ, ಅವುಗಳಲ್ಲಿ ವಚನ ವಾಙ್ಮಯ ಪ್ರಚಾರ, ವೀರ ಶೈವಮತ ಬೋಧೆ, ಸಾಮಾಜಿಕ, ಆರ್ಥಿಕ, ನೈತಿಕ, ಆರೋಗ್ಯ ಸುಧಾ ರಣೆ ಹೀಗೆ ನಾನಾ ಮುಖವಾಗಿ ಕಾರ್ಯಗಳನ್ನು ಮಾಡಲಿಕ್ಕೆ ಪ್ರಯ ತ್ನಿಸುವದು ಮುಖ್ಯವಾಗಿರತಕ್ಕದ್ದು. ಈ ಬೋಧಕ ವರ್ಗದವರಿಗೆ ಉಪ ಯೋಗವಾಗುವಂತಹ ಪುಸ್ತಕಗಳನ್ನು ಬರೆಯಿಸಿ ಪ್ರಸಿದ್ಧಿಸಬೇಕು. ಕೇವಲ ಭಾಷಣ, ಪ್ರವಚನಗಳಿಂದ ಜನರ ಮನಸ್ಸನ್ನಾಕರ್ಷಿಸುವದು ಅಷ್ಟು ಸುಲಭವಲ್ಲದ್ದರಿಂದ ಜನರಿಗೆ ಮನರಂಜನೆಯ ಮುಖಾಂತರವಾಗಿ ಕಾರ್ಯಸಾಗಿಸಲು ಅನುಕೂಲವಾಗಲಿಕ್ಕೆ ನಾಟಕ, ಪ್ರಹಸನ, ವಚನ ಗಾಯನ, ಭಜನೆ ಇತ್ಯಾದಿಗಳನ್ನು ಉಪಯೋಗಿಸಿಕೊಳ್ಳಲು ಅನುವು ಕಲ್ಪಿಸಿಕೊಡಬೇಕು ಬೇರೆ ಬೇರೆ ಕೇಂದ್ರಗಳಲ್ಲಿ ಬೋಧಕರ ಶಿಕ್ಷಣದ ವರ್ಗಗಳನ್ನು ಏರ್ಪಡಿಸಬೇಕು. ವಚನವಾಙ್ಮಯದಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳುವ ಬಗ್ಗೆ ವ್ಯವಸ್ಥೆಮಾಡಬೇಕು. ಅವುಗಳಲ್ಲಿ ತೇರ್ಗಡೆ ಹೊಂದಿದವರಿಗೆ ಯೋಗ್ಯತಾ ಪತ್ರಗಳನ್ನು ಕೊಡಬೇಕು. ಹೀಗೆ ವಚನ ವಾಙ್ಮಯ, ವೀರಶೈವ ತತ್ವಗಳ ಪ್ರಸಾರಕ್ಕೆ ಅನುಕೂಲತೆಯೊದಗಿಸಿ ಕೊಡುವದಲ್ಲದೆ ಸಮಾಜದಲ್ಲಿ ಐಕ್ಯ, ಪರಸ್ಪರ ಆದರ ವಿಚಾರ ವಿನಿ ಮಯಗಳಿಗೆ ಆಸ್ಪದ ಒದಗಿಸಿಕೊಡಬೇಕು. ಇಂಥ ಪ್ರಯತ್ನಗಳಿಂದ ಸಮಾಜವನ್ನು ಸುಸಂಘಟಿತವಾಗಿ ಮಾಡಲಿಕ್ಕೆ ಆಸ್ಪದವುಂಟಾಗುವದು.

ಯಾವದಾದರೊಂದು ಸಮಾಜವು ಉನ್ನತಿಯನ್ನು ಹೊಂದಬೇಕಾದರೆ ಆದು ಸುಸಂಘಟಿತವಾಗಿರಬೇಕಾಗುವದು. ಕಲಿಯುಗದಲ್ಲಿ ಯಂತೂ ಶಕ್ತಿಯು ಸಂಘದಲ್ಲಿದೆ. ಸಂಘವೆಂದರೆ ಸಮಾಜದವರೆಲ್ಲರೂ ಒತ್ತಟ್ಟಿಗೆ ಸೇರಿ ಒಮ್ಮನಸ್ಸಿನಿಂದ ಸಮಾಜಹಿತವನ್ನು ಸಾಧಿಸುವ ಒಂದು ಸಾಧನವಾಗಿದೆ. ಇಂಥ ಸಾಧನದ ಉಪಯೋಗವನ್ನು ಮಾಡಿಕೊಳ್ಳುವದು ನಮ್ಮೆಲ್ಲರನ್ನು ಕೂಡಿದೆ. ಆದ್ದರಿಂದ ಶಕ್ಯವಿದ್ದ ಮಟ್ಟಿಗೆ ಶಿವಾನುಭವ ಸಂಘಗಳನ್ನು ಹೆಚ್ಚುಕಡೆಗಳಲ್ಲಿ ಸ್ಥಾಪಿಸಿ ಅವೆಲ್ಲವುಗಳೂ ಒಂದು ಮಧ್ಯವರ್ತಿ ಸಂಘಕ್ಕೆ ಸೇರ್ಪಡೆಯಾಗುವ ಯೋಜನೆಯನ್ನು ಬೇಗನೇ

ಕಾರ್ಯರೂಪಕ್ಕೆ ತರುವ ಪ್ರಯತ್ನವನ್ನು ನಾವೆಲ್ಲರೂ ಮಾಡತಕ್ಕದ್ದು. ಈ ವಿಷಯವನ್ನು ಹೆಚ್ಚು ವಿಚಾರಮಾಡಿದ ಮಹನೀಯರು ತಮ್ಮ ತಮ್ಮ ಯೋಜನೆಗಳನ್ನಾದರೂ ಜನತೆಯ ಮುಂದಿಟ್ಟು ಯಾವರೀತಿಯಿಂದ ನಮ್ಮ ಸಮಾಜವು ಸುಸಂಘಟಿತವಾಗಿ ಉನ್ನತಿಹೊಂದಬಹುದೆಂಬ ಬಗ್ಗೆ ತಮ್ಮ ತಮ್ಮ ಅಭಿಪ್ರಾಯಗಳನ್ನು ಪ್ರಕಟಿಸಿ ಶಿವಾನುಭವ ಸಂಘಗಳ ಕಾರ್ಯಕ್ಕೆ ನೆರವಾಗುವರೆಂದು ನನ್ನ ಪೂರ್ಣನಂಬಿಗೆಯಿದೆ.

---

## ವೀರಶೈವರು ಮಾಡಬೇಕಾದ ಮಹತ್ಕಾರ್ಯ.

(ಲೇಖಕ:— ಶ್ರೀಯುತ, ಎಲ್. ಜಿ. ಹಿರೇಮಠ ಎಮ್. ಎ. ಬಿ. ಟಿ. ವಿಜಾಪುರ)

ವೀರಶೈವರು ಕರ್ನಾಟಕದಲ್ಲಿ ಬಹು ಸಂಖ್ಯಾಕರು. ಸಾಕಷ್ಟು ಸಂಘಟನೆ ಇಲ್ಲದ ಮೂಲಕ ಅವರಲ್ಲಿ ಪ್ರಗತಿ ಕಂಡು ಬರುವದಿಲ್ಲ. ಆರ್ಥಿಕ ಪರಿಸ್ಥಿತಿ ಕೆಡುತ್ತಿದೆ. ನಿರಕ್ಷರಿಗಳ ಸಂಖ್ಯೆ ಮಿತಿಮೀರಿದೆ. ಪಂಗಡಗಳು ಹೆಚ್ಚಾಗುತ್ತಿವೆ. ಕರ್ನಾಟಕದಲ್ಲಿ ಬಹು ಸಂಖ್ಯಾಕರಾದ ವೀರಶೈವರ ಪರಿಸ್ಥಿತಿಯು ಹೀಗಿದ್ದಾಗ ಕರ್ನಾಟಕದ ಏಳ್ಗೆ ಹೇಗಾಗಬೇಕು? ಕರ್ನಾಟಕವು ಹಿಂದುಳಿದರೆ ಭರತಖಂಡವು ಉನ್ನತಾವಸ್ಥೆಗೆ ಬರಲಾರದು. ಶರೀರವು ನಿರೋಗಿಯಾಗಿರಬೇಕಾದರೆ, ಸದೃಢವಾಗಬೇಕಾದರೆ, ಅದರ ಎಲ್ಲ ಅವಯವಗಳು ಬಲಪಡಬೇಕಾದುದು ಅವಶ್ಯವಿರುವಂತೆ ಭರತಖಂಡವು ಉನ್ನತಿಯನ್ನು ಹೊಂದಬೇಕಾದರೆ ಅದರಲ್ಲಿಯ ಬೇರೆ ಬೇರೆ ಪ್ರಾಂತಗಳು ಮುಂದೆ ಬರಬೇಕು. ಎಲ್ಲ ಸಮಾಜಗಳೂ ಮುಂದುವರಿಯಬೇಕು. ಪ್ರಾಂತೀಯ ಅಭಿಮಾನ ಬಿಟ್ಟು ಬಿಡಬೇಕು; ಭರತಖಂಡದ ಏಳ್ಗೆಗಾಗಿ ನಾವೆಲ್ಲರೂ ಹೆಣಗಬೇಕು ಎಂದು ಹೇಳುವವರಿದ್ದಾರೆ. ಆದರೆ ವ್ಯವಹಾರ ಸ್ಥಿತಿಯನ್ನು ನಾವು ಲಕ್ಷಿಸಬೇಕಾಗುತ್ತದೆ. 'ನಾನು' 'ನನ್ನದು' ಎಂಬ ಭಾವನೆಯೇ ಎಲ್ಲ ಪ್ರಗತಿಯ ಮೂಲವಾಗಿದೆ; ಆದರೆ ಇದೇ ಕೊನೆಯಾಗಬಾರದು. ಮನುಷ್ಯನು ಮೊದಲು ತಾನು ಆತ್ಮೋನ್ನತಿಯನ್ನು ಹೊಂದಬೇಕು; ಆಮೇಲೆ ತನ್ನ ಸಮಾಜದ ಉನ್ನತಿಗಾಗಿ ಹೆಣಗಬೇಕು ಕೊನೆಗೆ ತನ್ನದು ಅನ್ಯರದು ಎಂಬ ಭಾವನೆ ಹೋಗಿ ವಿಶ್ವ

ಕೌಟುಂಬಿಕ ಭಾವನೆ ಸ್ಥಿರವಾಗಬೇಕು. ಆದ್ದರಿಂದ ವೀರಶೈವರು ಅನ್ಯರಿಗೆ ಅಹಿತನಾಗದಂತೆ ತಮ್ಮನ್ನು ತಾವು ಮೊದಲು ಸುಧಾರಿಸಿಕೊಳ್ಳಬೇಕು.

ವೀರಶೈವ ಸಮಾಜವು ಮುಂದುವರಿಯಬೇಕಾದರೆ ಅದು ಮುಂದುವರಿದ ಸಮಾಜಗಳಿಂದ ಪಾಠಕಲಿಯಬೇಕು. ಹಿಂದೂ ಮತಕ್ಕೆ ಅನ್ಯಮತೀಯರಿಂದ ಆಗುತ್ತಿರುವ ಅನ್ಯಾಯವನ್ನು ತಡೆದು ವೇದಮತವನ್ನು ಎಲ್ಲ ಕಡೆಗೆ ಬೀರಿ, ಶಾಲೆ ಕಾಲೇಜಗಳನ್ನು ಸ್ಥಾಪಿಸಿ ವಿದ್ಯಾಪ್ರಸಾರ ಮಾಡುತ್ತಿರುವ ಆರ್ಯಸಮಾಜವು ಅನುಕರಣೀಯವಾಗಿದೆ. ಈ ಸಮಾಜವು ಇಷ್ಟು ಮುಂದುವರಿಯಲಿಕ್ಕೆ, ನಿಜಾಮಸರಕಾರದಿಂದಲೂ ಮನ್ನಣೆ ಪಡೆಯಲಿಕ್ಕೆ, ಏನು ಕಾರಣ? ಈ ಸಮಾಜದವರ ಸ್ವಾರ್ಥತ್ಯಾಗ, ಸ್ವಧರ್ಮನಿಷ್ಠೆ, ಉಚ್ಚ ಶಿಕ್ಷಣ ಮತ್ತು ಅವರಲ್ಲಿರುವ ಸಂಘಟನೆ ಇವೇ ಅವರ ಮುನ್ನಡೆಗೆ ಪೋಷಕವಾಗಿವೆ. ಯುರೋಪ ಅಮೇರಿಕೆಗಳಲ್ಲಿಯೂ ತಲೆಯೆತ್ತಿನಿಂತ ರಾಮಕೃಷ್ಣ ಮಿಶನ್ ಮತ್ತು ಹಿಂದುಸ್ಥಾನದ ಮೂಲೆಮೂಲೆಗಳಲ್ಲಿ ಪಸರಿಸಿರುವ ಕ್ರಿಶ್ಚನ್ ಮಿಶನ್ ಇವು ಮುಂದುವರಿಯಲಿಕ್ಕಾದರೂ ಇವೇ ಕಾರಣಗಳು. ಮುಸಲ್ಮಾನ ಮತ್ತು ಶೀಖ ಸಮಾಜಗಳು ಸರಕಾರದಿಂದ ಇಷ್ಟೊಂದು ಮನ್ನಣೆ ಪಡೆಯುತ್ತಿರುವದಕ್ಕೆ ಅವರಲ್ಲಿಯ ಸಂಘಟನೆಯೇ ಕಾರಣ. ಆದ್ದರಿಂದ ಯಾವದೇ ಸಮಾಜವು ಮುಂದುವರಿದ ಸಮಾಜವೆಂದೆನಿಸಿಕೊಳ್ಳಬೇಕಾದರೆ, ಆ ಸಮಾಜದ ಜನರು ಸುಶಿಕ್ಷಿತರಿರಬೇಕು, ಸುಸಂಘಟಿತರಾಗಿರಬೇಕು, ಸಮಾಜದ ಏಳ್ಗೆಯ ಬಗ್ಗೆ ಕಳಕಳಿಯುಳ್ಳವರಾಗಿರಬೇಕು, ಅದಕ್ಕಾಗಿ ಸ್ವಾರ್ಥವನ್ನು ಬಲಿಗೊಡಲು ಸಿದ್ಧರಾಗಿರಬೇಕು.

ವೀರಶೈವರಲ್ಲಿ ತಮ್ಮ ಸಮಾಜದ ಏಳ್ಗೆಯ ಬಗ್ಗೆ ಕಳಕಳಿಯುಂಟಾಗಬೇಕಾದರೆ, ಅವರು ಸ್ವಾರ್ಥತ್ಯಾಗಿಗಳಾಗಬೇಕಾದರೆ, ಅವರಲ್ಲಿ ಸಂಘಟನೆ ಬೆಳೆಯಬೇಕಾದರೆ, ಇವೆಲ್ಲವುಗಳ ಅವಶ್ಯಕತೆಯನ್ನು ಸಾಮಾನ್ಯ ಜನತೆಗೆ ತಿಳಿಸಿಕೊಡುವದಕ್ಕಾಗಿ ಪ್ರಚಾರಕರ ಮಂಡಲವೊಂದುಬೇಕು. ವೀರಶೈವ ಮಹಾಸಭೆಯ ಸಂಚಾಲಕರು ಇಂಥ ಮಂಡಲವನ್ನು ಸ್ಥಾಪಿಸಬೇಕು. ಪ್ರಚಾರಕರಿಗೆ ವೇತನ ಗೊತ್ತುಮಾಡಬೇಕು. ಪ್ರಚಾರಕಾರ್ಯವು ಹೆಚ್ಚಾಗಿ ಹಳ್ಳಿಗಳಲ್ಲಿ ಬೇಕಾಗಿದೆ. ಹಳ್ಳಿಗಳಿಗೆ ಹೋಗುವ ಪ್ರಚಾರಕರು ಅಲ್ಲಿ ಕೆಲವು ತಾಸುಗಳವರೆಗೆ ಇದ್ದು ಭಾಷಣ ಮಾಡಿಬಿಟ್ಟರೆ ಸಾಕಾಗದು. ಒಂದೊಂದು ಹಳ್ಳಿಯಲ್ಲಿ ಅವರು ಕೆಲವು ದಿವಸಗಳ

ವರಿಗೆ ಇದ್ದು ಹಳ್ಳಿಗರೊಡನೆ ಬೆರೆತು, ಅವರ ಕುಂದುಕೊರತೆಗಳನ್ನು ತಿಳಿದುಕೊಂಡು, ಅವುಗಳನ್ನು ಹೋಗಲಾಡಿಸಲು ಅಲ್ಲಿಯ ಜನರ ಸಂಘಗಳನ್ನು ಏರ್ಪಡಿಸಿ ಅವುಗಳಿಗೆ ಸಲಹೆಗಳನ್ನು ಕೊಡುತ್ತ ಹೋಗಬೇಕು. ಈ ಕಾರ್ಯವು ಸರಿಯಾಗಿ ಸಾಗಬೇಕಾದರೆ ಒಂದು ತಾಲೂಕಿಗೆ ಒಬ್ಬ ಪ್ರಚಾರಕನು ಬೇಕು. ಅವನು ಪ್ರತಿಯೊಂದು ಹಳ್ಳಿಗೆ ವರ್ಷದಲ್ಲಿ ತೀರ ಕಡಿಮೆಯೆಂದರೆ ಎರಡು ಸಲವಾದರೂ ಹೋಗಬೇಕು.

ವೀರಶೈವರು ಮುಂದೆ ಬರಬೇಕಾದರೆ ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸಬೇಕು. ಹಳ್ಳಿಗಳಲ್ಲಿ ಹುಡುಗರು ಶಾಲೆಗೆ ಬರದಿರುವದಕ್ಕೆ ಬಹುಮಟ್ಟಿಗೆ ಅವರ ಬಡತನವೇ ಕಾರಣವಾಗಿರುತ್ತದೆ. ಹೊಟ್ಟೆತುಂಬ ಅನ್ನ, ಮೈತುಂಬ ವಸ್ತ್ರ, ಇವೇ ದೊರೆಯದಿದ್ದ ಮೇಲೆ ಶಿಕ್ಷಣಕ್ಕೆಲ್ಲಿಯ ಪ್ರೋತ್ಸಾಹ! ಊರೂರಿಗೆ ಒಕ್ಕಲಿಗರ ಸಂಘಗಳನ್ನೂ, ವರ್ತಕರ ಸಂಘಗಳನ್ನೂ, ನೇಕಾರರ ಮತ್ತು ಬೇರೆ ಕೈಗಾರಿಕೆಯವರ ಸಂಘಗಳನ್ನೂ ಏರ್ಪಡಿಸಬೇಕು. ಎಲ್ಲ ಉದ್ಯೋಗಗಳು ಲಾಭದಾಯಕವಾಗುವಂತೆ ಮಾಡಬೇಕು. ಔದ್ಯೋಗಿಕ ಶಿಕ್ಷಣ ಹೊಂದಿದವರ ಸಲಹೆಗಳು ಹಳ್ಳಿಗರಿಗೆ ಮುಟ್ಟುವಂತೆ ಮಾಡಬೇಕು. ಬೇರೆ ಬೇರೆ ಉದ್ಯೋಗದವರ ಪರಿಷತ್ತುಗಳನ್ನೂ ಔದ್ಯೋಗಿಕ ಪ್ರದರ್ಶನಗಳನ್ನೂ ಮೇಲಿಂದ ಮೇಲೆ ಏರ್ಪಡಿಸಬೇಕು. ಮ್ಯಾಟ್ರಿಕ್ ಪಾಸಾಗಿ ಇಲ್ಲವೆ ಬಿ. ಎ. ಪಾಸಾಗಿ ನೌಕರಿಗಾಗಿ ಅಲೆದಾಡುವದನ್ನು ತಪ್ಪಿಸಬೇಕು. ಔದ್ಯೋಗಿಕ ಶಾಲೆ ಕಾಲೇಜುಗಳನ್ನು ಹೆಚ್ಚಿಸಬೇಕು. 'ಕಾಯಕವೇ ಕೈಲಾಸ' ವೆಂಬ ಭಾವನೆಯನ್ನು ಜನರಲ್ಲಿ ಬೀರಿ, ಈಗಿನ ನಿರುದ್ಯೋಗತನವನ್ನು ಹೋಗಲಾಡಿಸಿ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವದು ಅಗತ್ಯವಾಗಿದೆ.

ಸಾಕ್ಷರತೆಯ ಪ್ರಸಾರವೂ ಮಹತ್ವದ ಕಾರ್ಯವಾಗಿದೆ. ಹುಡುಗ ಹುಡಿಗೆಯರಿಗಾಗಿ ಸಣ್ಣ ಸಣ್ಣ ಹಳ್ಳಿಗಳಲ್ಲಿಯೂ ಶಾಲೆಗಳನ್ನು ಸ್ಥಾಪಿಸಬೇಕು. ದೊಡ್ಡವರಿಗೂ ಶಿಕ್ಷಣದ ಮಹತ್ವವನ್ನು ತಿಳಿಸಿಕೊಟ್ಟು ಪ್ರೌಢ ಶಿಕ್ಷಣವರ್ಗಗಳನ್ನು ನಡೆಯಿಸಬೇಕು. ವಾಚನಾಲಯಗಳನ್ನು ಸ್ಥಾಪಿಸಬೇಕು. ಅಂದರೆ ಕಲಿತದ್ದು ಮರೆಯುವದಿಲ್ಲ ಮತ್ತು ಅಕ್ಷರಜ್ಞಾನದ ಸದುಪಯೋಗವಾಗುವದು.

ಶಿವಶರಣರ ವಚನಗಳ ಪ್ರಸಾರವಾಗುವದು ಅವಶ್ಯವಿದೆ. ಅವುಗಳ ಮೇಲೆ ಪ್ರವಚನಗಳನ್ನೇರ್ಪಡಿಸಿ ಜನರು ಅವುಗಳನ್ನು ಓದಲಿಕ್ಕೆ

ಹಾತೊರೆಯುವಂತೆ ಮಾಡಬೇಕು. ಕಡಿಮೆ ಬೆಲೆಗೆ ವಚನಗ್ರಂಥಗಳು ಎಲ್ಲರಿಗೂ ಓದಲಿಕ್ಕೆ ದೊರೆಯುವಂತೆ ಏರ್ಪಡಿಸಬೇಕು. ವಚನಗಳ ವ್ಯಾಸಂಗದಿಂದ ಜನತೆಯು ಸುಸಂಸ್ಕೃತವಾಗುವದು. 'ಕಾಯಕವೇ ಕೈಲಾಸ' ವೆಂಬ ಭಾವನೆ ಜನರಲ್ಲಿ ಬೇರೂರಿತೆಂದರೆ ಅವರ ಆರ್ಥಿಕ ಪರಿಸ್ಥಿತಿಯು ಸುಧಾರಿಸುವದರಲ್ಲಿ ಸಂದೇಹವಿಲ್ಲ. ಶಿವಶರಣ ಶರಣೆಯರ ಚರಿತ್ರೆಗಳನ್ನು ಓದುವದರಿಂದ ಜನರಲ್ಲಿ ತ್ಯಾಗಬುದ್ಧಿಯು ಹುಟ್ಟುವದು. ತ್ಯಾಗ ಭೋಗಗಳ ಸಮನ್ವಯವನ್ನು ಬೋಧಿಸುವ ವಚನಗಳ ಪ್ರಸಾರವು ಅತ್ಯಗತ್ಯವಾಗಿದೆ. ಈ ಕಾರ್ಯದಲ್ಲಿ ಮಠಾಧಿಕಾರಿಗಳು ಮುಂದುವರಿಯಬೇಕು. ಈಗಿನ ಮಠಗಳಿಂದ ಸಾಕಷ್ಟು ಸಮಾಜಸೇವೆ ಆಗುತ್ತಿರುವದಿಲ್ಲ. ಆದರೂ ಕೆಲವು ಸ್ವಾಮಿಗಳು ಕಾಲೇಜಗಳಿದ್ದ ಪಟ್ಟಣಗಳಲ್ಲಿ ವಿದ್ಯಾರ್ಥಿಗಳಿಗಾಗಿ ಭೋಜನಾಲಯಗಳನ್ನು ಮತ್ತು ವಸತಿಗೃಹಗಳನ್ನು ಕಟ್ಟಿಸಿ ಬಡವರಿಗೂ ಉಚ್ಚ ಶಿಕ್ಷಣ ದೊರೆಯುವಂತೆ ಮಾಡಿದ್ದಾರೆ. ಎಲ್ಲ ಸ್ವಾಮಿಗಳೂ ಇವರನ್ನು ಅನುಕರಿಸಿ ತಮ್ಮ ಕರ್ತವ್ಯವನ್ನು ಚನ್ನಾಗಿ ಮಾಡಬೇಕು.

ವೀರಶೈವ ಮುಂದಾಳುಗಳು ಮೇಲೆ ಕಾಣಿಸಿದ ಸಂಗತಿಗಳ ಬಗ್ಗೆ ಪೂರ್ಣ ವಿಚಾರ ಮಾಡಬೇಕು. ಸಮಾಜ ಸುಧಾರಣೆಯ ಕಾರ್ಯವು ಭರದಿಂದ ಸಾಗಬೇಕಾದರೆ ಪ್ರಚಾರ ಕಾರ್ಯಕ್ಕೆ ಸುಶಿಕ್ಷಿತರು ಮುಂದೆ ಬರಬೇಕು. ಶ್ರೀಮಂತರಿಂದ ಹಣಕೂಡಿಸುವ ಚಾಣಾಕ್ಷರು ಬೇಕು. ವೀರಶೈವ ಸಾಹಿತ್ಯದ ವ್ಯಾಸಂಗವನ್ನು ಮಾಡಿದ ವಿದ್ವಾಂಸರು ಬೇಕು. ಔದ್ಯೋಗಿಕ ಶಿಕ್ಷಣವನ್ನು ಹೊಂದಿದ ತಜ್ಞರು ಬೇಕು. ಅರ್ಥಶಾಸ್ತ್ರ ಬಲ್ಲ ಮೇಧಾವಿಗಳು ಬೇಕು. ಈ ಪ್ರಚಾರಕರು ಜನತೆಗೆ ಉನ್ನತಿಯ ಮಾರ್ಗವನ್ನು ತೋರಿಸಿಕೊಡಬೇಕು. ಈಗಿನ ಬಡತನವು ಹೋಗುವಂತೆಯೂ ಸಂಸ್ಕೃತಿಯ ಬೆಳಕು ಹರಡುವಂತೆಯೂ ಯತ್ನಿಸಬೇಕು. ವೀರಶೈವರು ಮುಂದುವರಿದ ಸಮಾಜಗಳಿಂದ ಬುದ್ಧಿಗಲಿತು ತಾವೂ ಮುಂದೆ ಹೋಗಿ ಹಿಂದುಳಿದವರನ್ನು ಉದ್ಧರಿಸಬೇಕು. ಇದೇ ವೀರಶೈವರು ಮಾಡಬೇಕಾದ ಮಹತ್ಕಾರ್ಯ.

ಈ ಮಹತ್ಕಾರ್ಯವನ್ನು ಸರಿಯಾಗಿ ಮಾಡಲಿಕ್ಕೆ ಆರ್ಯಸಮಾಜ ರಾಮಕೃಷ್ಣ ಮಿಶನ್, ಕ್ರಿಶ್ಚನ್ ಮಿಶನ್ ಮೊದಲಾದ ಸಂಸ್ಥೆಗಳಂಥ

ಸುಸಂಘಟಿತ ವೀರಶೈವ-ಸಂಸ್ಥೆಯನ್ನು ತೆಗೆಯಬೇಕು. ಆ ಸಂಸ್ಥೆಯ ಪರವಾಗಿ ಬಾಸೆಲ್ ಮಿಶನ್‌ದ ಹಂಚುಗಳ ಕಾರಖಾನೆಯಂಥ ಕಾರ ಖಾನೆಗಳನ್ನು, ವಿದ್ಯಾಪೀಠಗಳನ್ನು, ಔಷಧಾಲಯಗಳನ್ನು, ಗ್ರಾಮಸುಧಾರಣಾ ಸಂಸ್ಥೆಗಳನ್ನು, ಶಿವಾನುಭವ ಸಂಘಗಳನ್ನು ಸ್ಥಾಪಿಸಿ ವೀರ ಶೈವರ ಸರ್ವತೋಮುಖವಾದ ಉನ್ನತಿಯು ಆಗುವಂತೆ ಯತ್ನಿಸಬೇಕು. ಈ ಮಹತ್ಕಾರ್ಯವನ್ನು ಮಾಡಲಿಕ್ಕೆ ಸುಶಿಕ್ಷಿತರು ತಮ್ಮ ವೈಯಕ್ತಿಕ ವೈಮನಸ್ಸನ್ನು ಮರೆತು ಸಮಾಜ ಸೇವೆಯೇ ತಮ್ಮ ಧ್ಯೇಯವೆಂದಿಟ್ಟುಕೊಂಡು ಮುಂದೆಬರಬೇಕು.

---

## ಶಿವಾನುಭವವು ಸಲ್ಲಿಸಿದ ಸಾಹಿತ್ಯಸೇವೆ.

(ಶ್ರೀಯುತ ಹಣಮಂತರಾಯ ಸಾಸನೂರ ಎಮ್. ಎ. ಬಿ. ಟಿ.)

---

ಸಾಹಿತ್ಯವು ಸಾಂಸ್ಕೃತಿಕ ಜೀವನದ ಅವಶ್ಯವಾದ ಅಂಗ. ಸಾಹಿತ್ಯವಿಲ್ಲದ ಸಂಸ್ಕೃತಿಯಿಲ್ಲ ಸಾಹಿತ್ಯಪ್ರವಾಹವು ಜೀವನಕ್ಕೆ ಅಮರತ್ವವನ್ನು ದಯಪಾಲಿಸುತ್ತದೆ. ಮೃತರಾಷ್ಟ್ರಗಳಲ್ಲಿ ಜೀವಕಳೆಯನ್ನು ತುಂಬುವ ಸಂಜೀವಿನೀ ಶಕ್ತಿಯು ಅದರಲ್ಲಿದೆ; ಭಾವಚಿಂತಾರತ್ನಗಳನ್ನು ಅಂದವಾಗಿ ಪವಣಿಸಿ 'ಭಾವಕರಂತ ರಂಗಮಂ ಮುಗ್ಧಗೊಳಿಸುವ' ಮಹಾಶಕ್ತಿಯಿದೆ. ನಿರಾಶ್ರಿತನಾಗಿ ಅಲೆದಾಡುವವನಿಗೆ ಕಲ್ಪವೃಕ್ಷನಾಗಿದೆ ಇಂತಹ ಅನೇಕಾನೇಕ ಅಗಾಧ ಶಕ್ತಿಗಳನ್ನು ಅಂತರಾಳದಲ್ಲಿಂಬಿಕೊಂಡ ಸಾಹಿತ್ಯಸಂಪತ್ತು ನಿಜವಾದ ಸಂಪತ್ತು. ಈ ಸಂಪತ್ತು ಇಲ್ಲದ ನಾಡು ಕಾಡು ಗುಡಿಗೋಪುರಗಳು ಮಾಯವಾಗಬಹುದು ಸಾಮ್ರಾಜ್ಯ ಸಾಮ್ರಾಜ್ಯಗಳು ಬೇಗನೆ ಕಾಲಪುರುಷನಿಗೆ ತುತ್ತಾಗಬಹುದು. ಅದರೆ ಸಾಹಿತ್ಯವು ಅಮರ.

ರಾಷ್ಟ್ರಕೂಟ ರಾಜ್ಯವು ಲಯವಾಗಿ ಹೋಗಿದೆ ಅದರೆ 'ಕವಿರಾಜಮಾರ್ಗವು' ಇನ್ನೂ ಕವಿಗಳಿಗೆ ರಾಜಮಾರ್ಗವಾಗಿದೆ. ಚಾಳುಕ್ಯ ರಾಜ್ಯವು ಮಾಯವಾಗಿದೆ. ಆದರೆ ಪಂಪನ 'ವಿಕ್ರಮಾರ್ಜುನ ವಿಜ

ಯು'ವು ಇನ್ನೂ ಎಲ್ಲ ಸಾಹಿತಿಗಳ ಕರ್ಣರಸಾಯನವಾಗಿದೆ. ಬಿಜ್ಜಳನ ರಾಜ್ಯವು ಭೂಮಿಯ ಅಂತರಾಳವನ್ನು ಎಂದೋ ಪ್ರವೇಶಿಸಿದೆ. ಆದರೆ ಬಸವಣ್ಣನವರ ವಚನಗಳು ಇನ್ನು ತಮ್ಮ ಜ್ಞಾನ ಸುಧೆಯನ್ನು ಜನರಿಗೆ ನೀಡುತ್ತಿವೆ. ಜಾತಿಹೀನನ ಮನೆಯು ಜ್ಯೋತಿಯಾಗಿ ಬೆಳಗುತ್ತಿವೆ. ಇಂತಹ ಸಾಹಿತ್ಯಸೇವೆಯನ್ನು ಮಾಡುವವರು ನಿಜವಾಗಿ ಪುಣ್ಯ ಪುರುಷರು ಧರ್ಮ ಜೀವಿಗಳು.

ಇವರಲ್ಲಿ ನಮ್ಮ ರಾ॥ ಬ॥ ಫ. ಗು ಹಳಕಟ್ಟಿಯವರು ಅಗ್ರೇಸರರು. ಅವರು 'ಶಿವಾನುಭವ' ಪತ್ರಿಕೆಯ ಮುಖಾಂತರ ಯಾವ ರೀತಿಯಿಂದ ಸಾಹಿತ್ಯಸೇವೆ ಮಾಡಿದ್ದಾರೆಂಬುದನ್ನು ಸ್ಥೂಲವಾಗಿ ವಿಚಾರಿಸುವಾ.

ರಾ॥ ಬ॥ ಹಳಕಟ್ಟಿಯವರನ್ನು ವಚನಪಿತಾಮಹರೆಂದು ಕರೆಯುತ್ತಿದ್ದಾರೆ ಈ ಬಿರುದು ಅವರು ವಚನಸಾಹಿತ್ಯಕ್ಕೆ ಸಲ್ಲಿಸಿದ ಸೇವೆಯ ದ್ಯೋತಕ. ತಮ್ಮ ವಕೀಲಿ ವ್ಯವಸಾಯವನ್ನು ಸುಮಾರು ೩೦ ವರ್ಷಗಳ ವರೆಗೆ ಸಾಗಿಸಿ ಈಚೆಗೆ ಕೋರ್ಟು ಕಚೇರಿಗಳಲ್ಲಿ ಕಾಲಕಳೆಯುವ ಬದಲು, 'ಅನುಭವ ಮಂಟಪ' ವನ್ನು ಹೊಕ್ಕರು. ಅಜ್ಞಾತವಾಸದಲ್ಲಿ ಕೊಳೆಯುತ್ತಿದ್ದ ವಚನರಾಶಿಯನ್ನು ಬೆಳಕಿಗೆ ತಂದರು. ವಚನಕಾರರ ಶಿವಾನುಭವವನ್ನು ಜನರಿಗೆ ನೀಡಲು 'ಶಿವಾನುಭವ' ವನ್ನು ಹೊರಡಿಸಿದರು. ಈ ಶಿವಾನುಭವದ ಮಹತ್ವ ತಿಳಿಯಬೇಕಾದರೆ ವಚನಗಳ ಮಹತ್ವವನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾಗುವದು. ಕಾರಣ ಅವುಗಳ ಮಹತ್ವವನ್ನು ಸ್ವಲ್ಪದರಲ್ಲಿ ವಿಚಾರಿಸುವಾ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸುವರ್ಣ ಯುಗವೆಂದರೆ ೧೦ನೆಯ ಶತಮಾನ; ಕನ್ನಡ ಸಾಹಿತ್ಯದೇವಿ ಮುಕುಟ ಪ್ರಾಯರಾದ ಪಂಪ ಪೊನ್ನ ರನ್ನರು ಬಾಳಿ ಬೆಳಗಿಸಿದ ಕಾಲ. ಆ ಕಾಲದ ಸಾಹಿತ್ಯ ಉದಾತ್ತವಾಗಿದೆ, ಗಂಭೀರವಾಗಿದೆ, ಉದ್ದಾಮವಾಗಿದೆ. ಆದರೆ ಅದು ಪಂಡಿತರ ರಂಜನೆಗೆ ಮಾತ್ರ. ಏನು ಶಬ್ದ ಜೋಡಣೆ! ಎಂಥಹ ಪದ ಗುಂಫನ!! ಎಲ್ಲಿಯ ಅಲಂಕಾರ!!! ಪಂಡಿತರು ಮಾತ್ರ ಓದಿ ನಲಿದಾಡಬಹುದು. ಆದರೆ ಜನಸಾಮಾನ್ಯರಿಗೆ ಅವೆಲ್ಲವೂ ಮುಗಿಲು ಮಲ್ಲಿಗೆ. ಸಾಹಿತ್ಯರಸದೂಟವು ಪಂಡಿತರಿಗೆ ಮಾತ್ರವಲ್ಲ; ಪಂಡಿತಪಾಮರಿಬ್ಬ

ರಿಗೂ. ಈ ತತ್ತ್ವವು ವಚನಗಳಲ್ಲಿ ಸ್ಫುಟವಾಗಿ ಕಾಣುವದು. ಉದಾಹರಣೆಗಾಗಿ ಒಂದೆರಡು ವಚನಗಳನ್ನು ಕೆಳಗೆ ಕೊಟ್ಟಿದೆ.

"ಹೊನ್ನು ಮಾಯೆ ಎಂಬರು. ಹೆಣ್ಣು ಮಾಯೆ ಎಂಬರು. ಮಣ್ಣು ಮಾಯೆಯೆಂಬರು. ಹೊನ್ನು ಮಾಯೆಯಲ್ಲ ಹೆಣ್ಣು ಮಾಯೆಯಲ್ಲ ಮಣ್ಣು ಮಾಯೆಯಲ್ಲ. ಮನದ ಮುಂದಣ ಆಶೆಯೇ ಮಾಯೆ ಕಾಣಾ ಗುಹೇಶ್ವರಾ.

ಎಷ್ಟು ಚೆಲುವಾಗಿ ನುಡಿದಿದ್ದಾರೆ. ನೋಡಿ ನಮ್ಮ ಪ್ರಭುದೇವರು! ಯಾವಾಗಲೂ ಬದಲಾಗಬೇಕಾದದ್ದು ಈಶ ಸೃಷ್ಟಿಯಲ್ಲ; ನಮ್ಮ ದೃಷ್ಟಿ. ದೃಷ್ಟಿಸಂಕುಚಿತವಾದರೆ ಸೃಷ್ಟಿಯು ವಿಷಮಯವಾಗುವದು; ಅದು ಅರಳಿದರೆ ಸೃಷ್ಟಿಯು ಮಧುಮಯವಾಗುವದು.

"ಆನೆಯನೇರಿಕೊಂಡು ಹೋದಿರಿ ನೀವು. ಕುದುರೆಯನೇರಿಕೊಂಡು ಹೋದಿರಿ ನೀವು ಕುಂಕುಮ ಕಸ್ತೂರಿ ಪೂಜಿಸಿಕೊಂಡು ಹೋದಿರಿ ನೀವು. ಸತ್ಯದ ನಿಲವನರಿಯದೆ ಹೋದಿರಲ್ಲ! ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಪೋದಿರಲ್ಲ! ಅಹಂಕಾರವೆಂಬ ಮದಗಜವನೇರಿ ಕೆಟ್ಟು ಹೋದಿರಲ್ಲ! ನಮ್ಮ ಕೂಡಲ ಸಂಗಮದೇವರನರಿಯದೆ ನರಕ ಭಾಜನರಾದಿರಲ್ಲ!

ಎಷ್ಟು ಮೃದುವಾಗಿ ಮುದ್ದಾಗಿ ನುಡಿದಿದ್ದಾರೆ! ಬಸವಣ್ಣನವರು. ತಿಳಿಯಾದ ಭಾಷೆಯಲ್ಲಿ ಉದಾತ್ತ ವಿಚಾರಗಳನ್ನು ಸುರಿದ್ದಾರೆ. ಅಲಂಕಾರದ ಆಡಂಬರವಿಲ್ಲ; ಶಬ್ದಗಳ ತೊಡಕಿಲ್ಲ. ಇಂತಹ ಸಾಹಿತ್ಯವನ್ನು ನಿರ್ಮಿಸಿದ ಶಿವಶರಣರು ಧನ್ಯರು. ಇವರ ಸಾಹಿತ್ಯದಿಂದ ಸಂಸ್ಕೃತಿ ಮಟ್ಟವು ಮೇಲಕ್ಕೇರಿತು. ಕನ್ನಡವು ಎಲ್ಲರಿಗೂ ಕೈಗನ್ನಡಿಯಾಯಿತು.

ಶಿವಾನುಭವ ಸುಖವನ್ನು ಸೂರೆಗೈದು ಜಗತ್ತಿಗೆ ಪರಮಪುರುಷರಾದ ವಚನಕಾರರ ಸೊಳ್ನುಡಿಗಳು ಮೂಲೆಗುಂಪಾಗಿದ್ದವು. ಇವೆಲ್ಲವನ್ನು ಬೆಳಕಿಗೆ ತಂದವರು ಪುಣ್ಯಜೀವಿಗಳಲ್ಲದೆ ಮತ್ತೇನು?

'ಶಿವಾನುಭವ'ವು ವಚನಗಳನ್ನಷ್ಟೇ ಪ್ರಚಾರಕ್ಕೆ ತರದೆ, ವೀರಶೈವ ಕವಿಗಳು ಬರೆದ ರಗಳೆ, ಸಾಂಗತ್ಯ ಇವುಗಳಿಗೂ ಕೂಡಾ ಸ್ಥಾನವನ್ನು ಕೊಟ್ಟಿದೆ. ಕನ್ನಡಸಾಹಿತ್ಯಕ್ಕೆ 'ಗಿರಿಜಾಕಲ್ಯಾಣ' 'ಬಸವರಾಜದೇವರ

ರಗಳೆ' ಇತ್ಯಾದಿ ಗ್ರಂಥಗಳನ್ನು ಸಲ್ಲಿಸಿದ ಹರಿಹರದೇವನ ಅನೇಕ ರಗಳೆಗಳನ್ನು ಜನರಿಗೆ ದೊರಕಿಸಿಕೊಟ್ಟಿದೆ. 'ರಗಳೆ' ಎಂದಾಕ್ಷಣವೇ ಅದೇನೋ ವಿಚಿತ್ರ ವಿಚಾರ ತಲೆಯಲ್ಲಿ ಬರುತ್ತಿದೆ. ಆದರೆ ಅವುಗಳನ್ನು ಓದಿದರೆ ಹೃದಯವು ಮಂತ್ರಮುಗ್ಧವಾಗುವದು; ಅವುಗಳ ತಾಳಲಯಕ್ಕೆ ಓದುಗರ ಹೃದಯವು ಕುಣಿಯುವದು. ಅವುಗಳಲ್ಲಿ ನಿರೂಪಿಸಿದ ಚಿತ್ರವು ಥಟ್ಟನೆ ಕಣ್ಣಮುಂದೆ ನಿಲ್ಲುವದು. ಶಿವಗಣದ ರಗಳೆಗಳಲ್ಲಿ ಸಾಹಿತ್ಯ ತೃಷಾರ್ತರಿಗೆ ಅಮೃತದ ಅರವಟ್ಟಿಗೆಯಿದೆ.

ಸಾಂಗತ್ಯದಲ್ಲಿ ವೀರಶೈವ ಕವಿಗಳು ಬರೆದ ಸಾಂಗತ್ಯಗಳು ಅನೇಕ ಇವೆ. ಚೋಳರಾಜ ಸಾಂಗತ್ಯ, ಚಿಕ್ಕಯ್ಯನ ಸಾಂಗತ್ಯ, ಹರಿಶ್ಚಂದ್ರ ಸಾಂಗತ್ಯ, ಸಾನಂದಗಣೇಶ ಸಾಂಗತ್ಯ, ಕರೂರ ಹೆಣ್ಣಿನ ಸಾಂಗತ್ಯ, ಸಿರಿಯಾಳಸೆಟ್ಟಿಯ ಸಾಂಗತ್ಯ, ನಂಜುಂಡನ ಕುಮಾರರಾಮ ಸಾಂಗತ್ಯ, ಆವುಗಿದೇವಯ್ಯಗಳ ಸಾಂಗತ್ಯ ಇಂಥವುಗಳಿಗೆ ಕೂಡಾ ಶಿವಾನುಭವದಲ್ಲಿ ಸ್ಥಾನಕೊಡಲಾಗಿದೆ.

ಮೇಲಿನ ಚರ್ಚೆಯಿಂದ ಕೆಲವರಿಗೆ ಹೀಗೆ ಅನಿಸಬಹುದು. ಶಿವಾನುಭವವು ವೀರಶೈವ ಕವಿಗಳು ನಿರ್ಮಿಸಿದ ಸಾಹಿತ್ಯಕ್ಕೆ ಮಾತ್ರ ಮೀಸಲಾಗಿದೆ. ವೀರಶೈವ ಮತತತ್ವಗಳೇ ಅದರ ಹಾಸುಹೊಕ್ಕು. ಹೀಗೆ ತೋರುವದೇನೋ ನಿಜ. ಆದರೆ ಕೂಲಂಕಷವಾಗಿ ಪರಿಶೀಲಿಸಿದಲ್ಲಿ ಕಂಡುಬರುವದು ಸಂಕುಚಿತ ದೃಷ್ಟಿಯಲ್ಲ, ವಿಶಾಲದೃಷ್ಟಿ. ಸರ್ವಧರ್ಮಗಳಿಗೂ ಸಮ್ಮತವಾದ ತತ್ವಗಳನ್ನು ಪಸರಿಸುವದು ಅದರ ಅಂತಿಮ ಧ್ಯೇಯ. ವೀರಶೈವ ಸಾಹಿತ್ಯಸಂಸ್ಕೃತಿಗಳ ವೈಶಿಷ್ಟ್ಯವನ್ನು ತೋರಿಸುವಾಗ ಅನ್ಯಮತಗಳ ಅವಹೇಳನೆಯು ಇದರಲ್ಲಿ ಲೇಶಮಾತ್ರವೂ ಇಲ್ಲ. ಶಿವಾನುಭವದ ಸಂಪಾದಕರು ಅನುಭಾವಿಗಳು, ಸರ್ವಧರ್ಮಸಮನ್ವಯಿಗಳು, ಉದಾರ ಹೃದಯಿಗಳು. ಇಂಥವರ ನೇತೃತ್ವದಲ್ಲಿ ಸಂಕುಚಿತ ದೃಷ್ಟಿಗೆ ಅವಕಾಶವೆಲ್ಲಿ?

ರಾ। ಬ। ಹಳಕಟ್ಟಿಯವರಿಂದ ಬೆಳಕನ್ನು ಕಂಡ ಮಧುರತಮವಾದ ವಚನಸಾಹಿತ್ಯವು ಬೇರೆ ಬೇರೆ ಸಾಹಿತ್ಯರೂಪರೀತಿಗಳಿಗೆ ಕಾರಣವಾಗಿದೆ. ಈ ಸಾಹಿತ್ಯ ರಸವನ್ನುಂಡು ತಣಿದು ಆನಂದ ಪುಲಕಿತರಾಗಿ ಶ್ರೀ. ರಂ. ರಾ. ದಿವಾಕರರವರು 'ವಚನಶಾಸ್ತ್ರರಹಸ್ಯ'ವೆಂಬ ಸುಮಾರು

೬೦೦ ಪುಟಗಳ ಒಂದು ವಿವೇಚನಾತ್ಮಕ ಗ್ರಂಥವನ್ನು ಬರೆದಿದ್ದಾರೆ. ವಚನಗಳ ಶೈಲಿಯನ್ನನುಕರಿಸಿ 'ಅಂತರಾತ್ಮನಿಗೆ' ಎಂಬ ವಿಚಾರಪರಿಪ್ಲುತವಾದ ಚಿಕ್ಕಹೊತ್ತಿಗೆಯನ್ನು ಬರೆದಿದ್ದಾರೆ. ಶ್ರೀ. ಪಾಸ್ತಿಯವರು, ಶ್ರೀ. ಸಂಗನಾಳಮಠರವರು, ಶ್ರೀ. ಬಸವನಾಳರವರು ಮತ್ತು ಶ್ರೀ. ಶ್ರೀನಿವಾಸ ಅಯ್ಯಂಗಾರ ಇವರು ಕೆಲವು ವಚನಗಳನ್ನು ಆಂಗ್ಲಭಾಷೆಗೆ ಪರಿವರ್ತಿಸಿ ವಚನ ಸೌಂದರ್ಯವನ್ನು ಆಂಗ್ಲಭಾಷಾವಾಚಕರಿಗೆ ತಿಳಿಸಿಕೊಟ್ಟಿದ್ದಾರೆ. ಫ್ರಾನ್ಸ ಮತ್ತು ಜಪಾನ ದೇಶಗಳಲ್ಲಿ ಸಹ ಈ ವಚನಗಳು ಬಹಳ ಮೆಚ್ಚುಗೆಯನ್ನು ಪಡೆದಿವೆಯೆಂದು ಕೇಳಿಕೆಯಲ್ಲಿದೆ. ಶ್ರೀ. ಮುಗಳಿಯವರು, ಶ್ರೀ. ಕಂಠಿಯವರು, ವಚನಸಾಹಿತ್ಯದಿಂದ ಪ್ರೇರಣೆಯನ್ನು ಪಡೆದು ಮಹಾದೇವಿಯಕ್ಕನವರ ಜೀವನಕ್ಕೆ ಸಂಬಂಧವಾದ ನಾಟಕಗಳನ್ನು ಬರೆದಿದ್ದಾರೆ. ಎಲಿಜಾಬೆತ್‌ರಾಣಿಯ ಕಾಲದ ಆಂಗ್ಲ ಸಾಹಿತ್ಯ ಬೆಳವಣಿಗೆಗೆ '*Plutarch's Lives* ಮತ್ತು *Holinshed's Chronicles*' ಸಹಾಯಕಾರಿಯಾದಂತೆ ವಚನಸಾಹಿತ್ಯವು ಈಗಿನ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಕೆಲವು ರೀತಿಯಿಂದ ಸಹಾಯಕಾರಿಯಾಗಿದೆ. ವಚನಸಾಹಿತ್ಯ ಪ್ರೇರಣೆಯಿಂದ ನಾನಾಬಗೆಯ ಸಾಹಿತ್ಯವು ಹೆಚ್ಚಾಗಿ ಹುಟ್ಟಿ ಬೇಗನೆ ಉಚ್ಛ್ರಾಯ ಕಾಲವೊಂದು ಪ್ರಾಪ್ತವಾಗಲಿ ಎಂಬುದೇ ನಮ್ಮ ಹೆಬ್ಬಾಸೆ.

ಕೊನೆಯದಾಗಿ ಹೇಳಬೇಕಾದರೆ, ವಚನ, ರಗಳೆ ಇತ್ಯಾದಿ ಸಾಹಿತ್ಯ ಪ್ರಸಾರವು ಇನ್ನೂ ಹೆಚ್ಚಾಗಿ ಆಗಬೇಕು. ಹೀಗಾಗಬೇಕಾದರೆ ಇನ್ನೂ ಸರಸವಾದ ಭಾಷೆಯಲ್ಲಿ ವಚನಗಳನ್ನು ಬರೆಯಬೇಕು. ವಚನಗಳಿಗೆ ವಿಸ್ತಾರವಾದ ಅಸಂದಿಗ್ಧವಾದ ಟೀಕೆಟಿಪ್ಪಣಿಗಳನ್ನು ಸಾಹಿತ್ಯದೃಷ್ಟಿಯಿಂದ ಬರೆಯಬೇಕು. ಪಠ್ಯಪುಸ್ತಕಗಳಲ್ಲಿ ವಚನಗಳನ್ನು ರಗಳೆಗಳನ್ನು ಸಾಂಗತ್ಯ ಮೊದಲಾದವುಗಳನ್ನು ಹೆಚ್ಚಾಗಿ ಸೇರಿಸಬೇಕು. ಪರಭಾಷೆಗಳಿಗೆ ವಚನಗಳನ್ನೂ ರಗಳೆಗಳನ್ನೂ ಇತ್ಯಾದಿಗಳನ್ನೂ ಪರಿವರ್ತಿಸಬೇಕು. ಅವುಗಳನ್ನು ಕುರಿತು ವಿಮರ್ಶಾತ್ಮಕ ಗ್ರಂಥಗಳನ್ನು ಪರಭಾಷೆಗಳಲ್ಲಿಯೂ ಕೂಡಾ ಹೊರಡಿಸಬೇಕು.

ಒಟ್ಟಿನಲ್ಲಿ ಲಿಂಗಾಯತರು ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಹಾಡುಗಬ್ಬಗಳ ರೂಪದಲ್ಲಿ ಸಾಹಿತ್ಯವನ್ನು ಬೆಳಸಿ, ಅದರ

ಮೂಲಕ ಮತದಲ್ಲಿ ಸುನೀತಿ, ಸದಾಚಾರ, ಸಮ್ಯಗ್ಜ್ಞಾನ, ಸದ್ಭಕ್ತಿಗಳು ಪ್ರತಿಯೊಬ್ಬರಲ್ಲಿ ಅಂಕುರಿಸಿದ್ದಾದರೆ, ಇಂತಹ ಸುಂದರವೂ ವಿಮರ್ಶಾತ್ಮಕವೂ ಆದ ಸಾಹಿತ್ಯವನ್ನು ಕನ್ನಡ ನಾಡಿಗೆ ಕಾಣಿಕೆಯಾಗಿ ಕೊಟ್ಟು ಮಹದುಪಕಾರ ಮಾಡಿದ್ದಾರೆ. ಅವುಗಳನ್ನು ಬೆಳಕಿಗೆ ತಂದು ಜ್ಞಾನದೀಪವನ್ನು ತೇಜೋಮಯವಾಗಿ ಮಾಡಿದ ಮಹಾಕಾರ್ಯ ಸರಳ ಜೀವಿಗಳಾದ ಹಳಕಟ್ಟಿಯವರದು. ಅವರ ಕಾರ್ಯವು ಅವ್ಯಾಹತವಾಗಿ ಸಾಗಲಿ. ಅವರ ಗುರಿಯು ಪೂರ್ಣ ಸಾಧಿಸಲಿ. ಅವರ ಜೀವನವು ಸುಖಮಯವಾಗಲಿ. ಅವರ ಶಿವಾನುಭವವು ತನ್ನ ಸಂದೇಶವನ್ನು ಇನ್ನಿಷ್ಟು ಹೆಚ್ಚಾಗಿ ಬೀರುವ ಶಕ್ತಿಯನ್ನು ಪಡೆಯಲಿ. ಅವರ ಪುಣ್ಯ ಕಾರ್ಯಪ ರಹಸ್ಯವನ್ನರಿಯುವ ಜನಾಂಗವು ಬೇಗನೆ ಬರಲಿ.

---

# ವೀರಶೈವ ಧಾರ್ಮಿಕ ಸಂಸ್ಕೃತಿ.

(ಲೇಖಕರು:— ಕಲ್ಯಾಣಪ್ಪ ಬ್ಯಾಳಿ ಬಿ. ಎ. ಬಿ. ಟಿ. ವಿಜಾಪುರ)

ವೀರಶೈವ ಧರ್ಮವು ಬಹು ಪ್ರಾಚೀನಕಾಲದಿಂದಲೂ ನಡೆದು ಬಂದದ್ದಾಗಿದೆ. ಅದು ಮೊದಲು ದ್ರಾವಿಡ ಸಂಸ್ಕೃತಿಯಿಂದ ಹುಟ್ಟಿ ಆರ್ಯಸಂಸ್ಕೃತಿಯಿಂದ ಬೆಳೆದು, ಬೌದ್ಧ, ಜೈನ, ಸಾಂಖ್ಯ, ಯೋಗ ಮೊದಲಾದ ಮತಗಳ ಉಚ್ಚತತ್ವಗಳನ್ನೊಳಕೊಂಡು ವಿಕಾಸಹೊಂದಿದೆ. ಜನಸಂಖ್ಯೆಯ ಮಾನದಿಂದ ವೀರಶೈವ ಧರ್ಮವು ಸಣ್ಣದಾಗಿದ್ದರೂ ಉದಾರತತ್ವಗಳಿಂದ ಬಹು ದೊಡ್ಡದೆನಿಸಿಕೊಂಡಿದೆ. ರೇಣುಕಾಚಾರ್ಯರೂ ಬಸವಾದಿಪ್ರಮುಖರೂ ವೀರಶೈವ ತತ್ವಗಳಂತೆ ಆಚರಿಸಿ ಅದರ ಸಂಸ್ಕೃತಿಯ ಮಹತ್ವವನ್ನು ಜನತೆಗೆ ತೋರಿಸಿಕೊಟ್ಟಿದ್ದಾರೆ ಕಾಲಕಾಲಕ್ಕೆ ಎಷ್ಟೋ ಅನ್ಯಮತೀಯರು ಈ ಧರ್ಮದಲ್ಲಿ ಸೇರಿ ಇದು ಒಂದು ದೊಡ್ಡ ಸಮಾಜದ ಸ್ವರೂಪವನ್ನು ಹೊಂದಿದೆ.

೧೨ನೆಯ ಶತಮಾನದಲ್ಲಿ ಬಸವಾದಿ ಶರಣರು ಹುಟ್ಟಿ ವೀರಶೈವ ಧರ್ಮತತ್ವಗಳನ್ನು ಜನಸಾಮಾನ್ಯರಿಗೆ ತಿಳಿಯುವಂತೆ ಬಹು ಸರ

ಳವಾದ ವಚನಗಳಲ್ಲಿ ಬೋಧಿಸಿದರು. ಅನಂತರ ೧೫ನೆಯ ಶತಮಾನದ ವರೆಗೆ ಹರಿಹರ, ರಾಘವಾಂಕ, ಪಾಲ್ಕುರಿಕೆಯ ಸೋಮ, ವಿರುಪಾಕ್ಷ, ಷಡಕ್ಷರಿ, ನಿಜಗುಣಾರ್ಯ, ಸರ್ವಜ್ಞ ಮೊದಲಾದ ಕವಿಗಳು ಆ ಶಿವ ಶರಣರ ಮಹಿಮೆಯನ್ನೂ ವೀರಶೈವ ತತ್ವಗಳ ಪೆರ್ಮೆಯನ್ನೂ ಬಹು ವಿಧವಾಗಿ ಕೊಂಡಾಡಿದರು. ಲಕ್ಕಣ್ಣದಂಡೇಶ, ಜಕ್ಕಣಾರ್ಯ ಮೊದ ಲಾದವರು ಆ ವಚನಗಳ ಆಧಾರದಿಂದ ವೀರಶೈವ ಮತತತ್ವಗಳನ್ನು ಶಾಸ್ತ್ರೀಯವಾಗಿ ನಿರೂಪಿಸಿದರು. ಆದರೆ ೧೫ನೇ ಶತಮಾನದಿಂದ ಮುಂದೆ ವೀರಶೈವ ಮತವು ನಾಮಃಶೇಷವಾಗಿದ್ದಿತು. ಆ ದಿವ್ಯ ವಚನಗಳೂ ಶಾಸ್ತ್ರಗಳೂ ಎತ್ತ ಅಡಗಿದವೋ ಏನೋ. ಆದರೆ ಸುದೈವಯೋಗದಿಂದ ರಾ| ಬ| ಹಳಕಟ್ಟಿಯವರು ಹೂಳಿಟ್ಟ ಆ ವಚನರತ್ನಗಳ ರಾಶಿಯನ್ನು ಬೈಲಿಗೆ ತಂದದ್ದರಿಂದ ಅವುಗಳ ಪ್ರಕಾಶವು ೨೦ನೆಯ ಶತಮಾನದಲ್ಲಿ ಪುನಃ ಜಾಜ್ವಲ್ಯಮಾನವಾಗಿ ಹೊಳೆಯಲಾರಂಭಿಸಿದೆ. ಆದ್ದರಿಂದ ವೀರ ಶೈವ ಧಾರ್ಮಿಕ ಸಂಸ್ಕೃತಿಯ ಪ್ರಸಾರಕ್ಕೆ ರಾ| ಬ| ಹಳಕಟ್ಟಿಯವರು ಮಾಡಿದ ಸೇವೆಯು ನಿಜವಾಗಿಯೂ ಹೊಗಳತಕ್ಕಂತಹದು.

ವೀರಶೈವ ಧರ್ಮಕ್ಕೆ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಗಳೇ ಮುಖ್ಯ ಆಧಾರಗಳು. ಇವುಗಳು ವೀರಶೈವ ಧಾರ್ಮಿಕ ಸಂಸ್ಕೃ ತಿಯ ದ್ಯೋತಕಗಳಾಗಿವೆ. ಗುರು, ಲಿಂಗ, ಜಂಗಮ, ಪಾದೋದಕ ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳೆಂಬವು ಅಷ್ಟಾವರಣಗಳು. ಶಿವಾಚಾರ, ಲಿಂಗಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರಗ ಳೆಂಬವು ಪಂಚಾಚಾರಗಳು. ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬಿವು ಷಟ್‌ಸ್ಥಲಗಳು.

ಅಷ್ಟಾವರಣಗಳಲ್ಲಿ ಅಂತರಷ್ಟಾವರಣ, ಬಾಹ್ಯಅಷ್ಟಾವರಣಗಳೆಂದು ಎರಡು ವಿಧವುಂಟು. ಅಂತರಷ್ಟಾವರಣಗಳನ್ನು ಈ ರೀತಿಯಾಗಿ ವಿವ ರಿಸಿದ್ದಾರೆ— "ತನ್ನ ತಾನರಿದೊಡೆ ತನ್ನ ಅರಿವೇ ಗುರುವು. ಆತ್ಮವೇ ಲಿಂಗ, ಸುಜ್ಞಾನವೇ ಜಂಗಮ, ರಸನೆಯೇ ಪಾದೋದಕ, ನೇತ್ರವೇ ರುದ್ರಾಕ್ಷಿ, ಶ್ರವಣವೇ ಮಂತ್ರ. ಅಂತರಷ್ಟಾವರಣದಂತೆ ನಡೆಯುವದೆಂದರೆ ಜೀವನು ಇಂದ್ರಿಯಗಳ ಪ್ರಾಕೃತಗುಣವನ್ನಳಿದು ಅಪ್ರಾಕೃತ ಅಥವಾ ಉದಾತ್ತಸ್ಥಿತಿಗೆ ಹೋಗುವದು, ಅಂದರೆ ಶಿವಸ್ವರೂಪವನ್ನು ಹೊಂದು ವದು."

ಬಾಹ್ಯ ಅಷ್ಟಾವರಣಗಳನ್ನು ಈ ರೀತಿಯಾಗಿ ನಿರೂಪಿಸಿದ್ದಾರೆ. "ಭಕ್ತನಂ ಉದ್ಧರಿಸುವವನೇ ಗುರು. ಶ್ರೀಗುರುವು ಶಿಷ್ಯನ ಕರಸ್ಥಲಕ್ಕೆ ಕರುಣಿಸಿಕೊಟ್ಟ ಪರಶಿವನ ಚಿತ್ಕಳೆಯೇ ಲಿಂಗ. ಲೋಕಸಂಗ್ರಹ ಕಾರ್ಯಕ್ಕಾಗಿ ಬಿಟ್ಟೂಬಿಡದೆ ದೇಶಸಂಚಾರ ಮಾಡುವ ವಿಭೂತಿಯೇ ಜಂಗಮ. ಇಂದ್ರಿಯ ಗುಣಂಗಳನ್ನಡಗಿಸುವ ಗುರುಲಿಂಗಜಂಗಮ ಪಾದತೀರ್ಥವೇ ಪಾದೋದಕ. ಲಿಂಗಾರ್ಪಿತವ ಮಾಡಿ ಸೇವಿಸುವ ಪರಿಶುದ್ಧವಾದ ಆಹಾರವೇ ಪ್ರಸಾದ. ಪರಸ್ತ್ರೀಯರ ಬಗ್ಗೆ ಕಾಮವಾಸನೆಯನ್ನು ಸುಟ್ಟೆನೆಂದು ಧರಿಸುವ ಪವಿತ್ರ ಭಸ್ಮವೇ ವಿಭೂತಿಯು. ಪರದ್ರವ್ಯವನ್ನು ಮುಟ್ಟೆನೆಂದು ಅದರ ಕಡೆಗೆ ಸಿಟ್ಟಿನಿಂದ ನೋಡುವ ಕೆಂಗಣ್ಣೇ ರುದ್ರಾಕ್ಷಿ. ಮನದ ಪವಿತ್ರತೆಗಾಗಿ ಉಚ್ಚರಿಸುವ ಪ್ರಣವ ಪಂಚಾಕ್ಷರಿಯೇ ಮಂತ್ರವು." ಈ ಬಾಹ್ಯ ಅಷ್ಟಾವರಣಗಳಿಂದ ಶಿವನ ಸ್ವರೂಪಿಗಳಾದ ಗುರುಲಿಂಗ ಜಂಗಮರಲ್ಲಿ ಭಕ್ತಿಯನ್ನಿರಿಸಿ ಪರಧನ ಪರಸ್ತ್ರೀಯರ ಹಂಬಲವನ್ನು ತೊರೆದು ತನ್ನ ಮನಸ್ಸನ್ನು ಪವಿತ್ರವಾಗಿಟ್ಟುಕೊಳ್ಳಬೇಕೆಂಬ ತತ್ವವು ನಮಗೆ ವಿದಿತವಾಗುತ್ತದೆ.

ಮನುಷ್ಯನು ದೂರು ಸಿಡಿದುಬಿದ್ದ ವ್ಯಕ್ತಿಯಲ್ಲ ಆತನು ಸಮಾಜದಲ್ಲಿ ಸುಳಿದಾಡುವ ಪ್ರಾಣಿಯು. ಕಾರಣ ಸಮಾಜದಲ್ಲಿ ಶಿಷ್ಟಾಚಾರದಿಂದ ಹೇಗೆ ನಡೆಯಬೇಕೆಂಬವನ್ನು ನಮ್ಮವರು ಪಂಚಾಚಾರಗಳಿಂದ ತೋರಿಸಿಕೊಟ್ಟಿದ್ದಾರೆ. ಅದು ಹೇಗೆಂದರೆ "ಶಿವನೊಬ್ಬನೇ ದೈವವಲ್ಲದೆ ಅನ್ಯ ದೈವವಿಲ್ಲೆಂದು ಭಾವಿಸಿ ಶಿವಭಕ್ತರಾದವರೊಡನೆ ಎಲ್ಲ ತರದ ವ್ಯವಹಾರ ಸಂಬಂಧವನ್ನು ಬೆಳೆಯಿಸುವವೇ ಶಿವಾಚಾರ. ಕೊರಳಲ್ಲಿ ಲಿಂಗ ಧರಿಸಿದವರೊಡನೆ ಜಾತಿಭೇದ, ಲಿಂಗಭೇದವನ್ನೆಣಿಸದೆ ಅವರೊಡನೆ ಅನ್ನೋದಕ ಶರೀರಸಂಬಂಧವನ್ನು ಬೆಳೆಯಿಸುವದೇ ಲಿಂಗಾಚಾರ ಪರಧನ ಪರಸ್ತ್ರೀಯರಿಗೆ ಆಶೆಮಾಡದೆ ಸ್ವಾರ್ಥವಂ ತೊರೆದು ಪರಹಿತ ಮಾಡುವದೇ ಸದಾಚಾರ. ತನ್ನ ಸಮಾಜದವರಲ್ಲಿ ತಾನು ಎಲ್ಲರಿಗಿಂತಲೂ ಹೆಚ್ಚಿನವನೆಂದು ಭಾವಿಸದೆ ತಾನು ಎಲ್ಲರಿಗಿಂತಲೂ ಕಿರಿಯನೆಂಬ ಭಾವವನ್ನಿಟ್ಟುಕೊಂಡು ಸಮಾಜಸೇವೆ ಮಾಡುವದೇ ಭೃತ್ಯಾಚಾರ. ಗುರುಲಿಂಗಜಂಗಮ ದ್ರೋಹಿಗಳಿಗೆ ತಕ್ಕ ಶಾಸನಮಾಡುವದೇ ಗಣಾಚಾರ.

ವ್ಯಕ್ತಿಯ ಸುಖಕ್ಕೆ ಅಷ್ಟಾವರಣಗಳೂ ಸಮಾಜಹಿತಕ್ಕೆ ಪಂಚಾಚಾರಗಳೂ ಬೇಕಾಗಿರುವಂತೆ ಸದ್ಗತಿ ಅಥವಾ ಮೋಕ್ಷಕ್ಕೆ ಷಟ್‌ಸ್ಥಲ

ಗಳು ಅತ್ಯಾವಶ್ಯಕವಾಗಿವೆ. ಷಟ್‌ಸ್ಥಲಗಳು ಶಿವಜೀವೈಕ್ಯದ ಇಲ್ಲವೆ ಲಿಂಗಾಂಗಸಾಮರಸ್ಯದ ಜ್ಞಾನವನ್ನು ಪ್ರತಿಪಾದಿಸುತ್ತವೆ. ಮನುಷ್ಯನು ಶಿವನಲ್ಲಿ ಭಕ್ತಿಬೆಳಸಿ ಶಿವಭಕ್ತಿಯಲ್ಲಿಯೇ ತನ್ಮಯನಾಗಿ ಕೊನೆಗೆ ಶಿವನೇ ತಾನಾಗುವ ಪರಿಯನ್ನು ಷಟ್‌ಸ್ಥಲವು ಬೋಧಿಸುತ್ತದೆ. ಆದ್ದರಿಂದ ವೀರಶೈವ ಧರ್ಮದಲ್ಲಿ ಷಟ್‌ಸ್ಥಲಕ್ಕೆ ಹೆಚ್ಚು ಪ್ರಾಮುಖ್ಯತೆಯುಂಟು. ಷಟ್‌ಸ್ಥಲವು ಸಾಮಾನ್ಯರ ತಂತ್ರಲ್ಲ. ಅದು ಮಹಾಮಹಿಮರ ಸೊತ್ತು. ಶ್ರೀಬಸವಾದಿ ಶರಣರು ಈ ಷಟ್‌ಸ್ಥಲ ಮಾರ್ಗವನ್ನನುಸರಿಸಿಯೇ ಸದ್ಗತಿಯನ್ನು ಹೊಂದಿದರು. ಅನಂತರ ಎಷ್ಟೋ ಸ್ವಾಮಿಗಳೂ ಶಿವಯೋಗಿಗಳೂ ಬಸವಾದಿಗಳ ಮಾರ್ಗವನ್ನೇ ಅನುಸರಿಸಿ ಶಿವಸಾಯುಜ್ಯವನ್ನು ಪಡೆದರು.

ಷಟ್‌ಸ್ಥಲಗಳು ಕೊಂಡಿಯಂತೆ ಒಂದಕ್ಕೊಂದು ಕೂಡಿಕೊಂಡು ಸರಪಳಿಯಂತೆ ಬೆಸಿಗೆಯನ್ನು ಹೊಂದಿರುತ್ತವೆ. ಷಟ್‌ಸ್ಥಲದಿಂದ ಮೋಕ್ಷಾನಂದವು ಹೇಗೆ ಲಭಿಸುತ್ತದೆಂಬ ಮಾತನ್ನು ಪ್ರಭುದೇವರು ಈ ರೀತಿಯಾಗಿ ನಿರೂಪಿಸಿದ್ದಾರೆ. "ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಅವಧಾನದಿಂ ಪ್ರಸಾದಿಯಾಗಿ, ಆ ಅವಧಾನದೊಳಗಣ ಅನುಭಾವದಿಂ ಪ್ರಾಣಲಿಂಗಿಯಾಗಿ, ಆ ಅನುಭಾವದೊಳಗಣ ಸಮರಸದಿಂ ಶರಣನಾಗಿ, ಆ ಸಮರಸದೊಳಗಣ ಆನಂದದಿಂದೈಕ್ಯನಾದೆನು ಕಾಣಾ ಗುಹೇಶ್ವರಾ" ಈ ವಚನವು ಷಟ್‌ಸ್ಥಲದಲ್ಲಿ ಹುದುಗಿರುವ ಶ್ರದ್ಧಾ, ನಿಷ್ಠಾ, ಅವಧಾನ, ಅನುಭಾವ, ಸಮರಸ, ಆನಂದಗಳೆಂಬ ಷಡ್ವಿಧ ಭಕ್ತಿಗಳನ್ನು ವಿವರಿಸುತ್ತದೆ.

ವೀರಶೈವ ಮತವು ಪರವಸ್ತುವಿನ ಸಾಕಾರ ಮತ್ತು ನಿರಾಕಾರ ಇವೆರಡೂ ಉಪಾಸನೆಗಳನ್ನು ಪ್ರತಿಪಾದಿಸುತ್ತದೆ. ಇಷ್ಟಲಿಂಗಪೂಜೆಯೇ ಸಾಕಾರೋಪಾಸನೆಯು. ಭಾವಲಿಂಗಪೂಜೆಯೇ ನಿರಾಕಾರೋಪಾಸನೆಯು. ಆದರೆ ಸಾಕಾರ ನಿರಾಕಾರಗಳ ನಡುವೆ ಇನ್ನೊಂದು ಸ್ಥಿತಿಯುಂಟು. ಅದು ಸಾಕಾರ-ನಿರಾಕಾರಗಳೆರಡನ್ನೂ ಕೂಡಿಕೊಂಡಿರುತ್ತದೆ. ಅದಕ್ಕೆ ಪ್ರಾಣಲಿಂಗಪೂಜೆಯೆಂದು ಹೇಳುವರು. ಶ್ರದ್ಧಾನಿಷ್ಠಾ ಭಕ್ತಿಗಳಿಂದ ಇಷ್ಟಲಿಂಗವನ್ನೂ, ಅವಧಾನ ಅನುಭಾವ ಭಕ್ತಿಗಳಿಂದ ಪ್ರಾಣಲಿಂಗವನ್ನೂ ಸಮರಸ ಆನಂದಭಕ್ತಿಗಳಿಂದ ಭಾವಲಿಂಗವನ್ನೂ ಆರಾಧಿಸಬೇಕೆನ್ನುವದೇ ಷಟ್‌ಸ್ಥಲದ ರಹಸ್ಯವು.

ಇಷ್ಟ ಪ್ರಾಣ ಭಾವಲಿಂಗೋಪಾಸನೆಗೆ ಭಕ್ತಿಯು ಸಾಧಾರಣ ಧರ್ಮವಾದರೂ ಇಷ್ಟಲಿಂಗ ಪೂಜೆಗೆ ಕ್ರಿಯೆಯೆಂದೂ, ಪ್ರಾಣಲಿಂಗಾನುಸಂಧಾನಕ್ಕೆ ಶಿವಯೋಗವೆಂದೂ, ಭಾವಲಿಂಗದಲ್ಲಿ ಬೆರೆಯುವದೇ ಜ್ಞಾನವೆಂದೂ ನಮ್ಮವರು ಹೇಳುತ್ತಾರೆ. ಪತ್ರಿ ಪುಷ್ಪ ಗಂಧಾಕ್ಷತೆಗಳಿಂದ ಲಿಂಗವನ್ನು ಸಿಂಗರವಾಗಿ ಪೂಜಿಸಿ ಆನಂದಿಸುವದೇ ಕ್ರಿಯೆಯು. ತನ್ನ ಇಷ್ಟಲಿಂಗವನ್ನು ಅನನ್ಯಮನಸ್ಕನಾಗಿ ನಿರಂತರ ಧ್ಯಾನಿಸುವದೇ ಶಿವಯೋಗವು. ಲಿಂಗದ ನಿರಂತರ ನೆನಹಿನಿಂದ ಲಿಂಗವೇ ತಾನಾಗಿ ಸ್ಥಿತಪ್ರಜ್ಞ ಅಥವಾ ಸಿದ್ಧಾವಸ್ಥೆಗೇರುವದೇ ಜ್ಞಾನವು. ಬಸವಣ್ಣನು ಭಕ್ತಿಯ ಕಣಿಯು. ಸಿದ್ಧರಾಮ-ಚನ್ನಬಸವಾದಿಗಳು ಯೋಗಮಾರ್ಗಿಗಳು. ಪ್ರಭುದೇವನು ಜ್ಞಾನಪೂರ್ಣಜಂಗಮಜ್ಯೋತಿಯು.

ವೀರಶೈವ ಧರ್ಮವು ಭಾವಿಕತನ, ಅಜ್ಞಾನ, ಡಂಭಾಚಾರಗಳನ್ನೆಲ್ಲ ನಿಷೇಧಿಸುತ್ತದೆ. ಪ್ರಾಯಶ್ಚಿತ್ತ, ಜ್ಯೋತಿಷ್ಯ, ಯಜ್ಞಮಾರ್ಗ, ತೀರ್ಥಕ್ಷೇತ್ರ, ಮೂರ್ತಿಪೂಜೆ ಮುಂತಾದ ನಡಾವಳಿಗಳಿಗೆ ವೀರಶೈವ ಧರ್ಮದಲ್ಲಿ ಎಡೆಯಿಲ್ಲ. ಸನ್ಯಾಸಿಯಾಗಿ ಅರಣ್ಯವನ್ನು ಸೇರೆಂದು ವೀರಶೈವ ಧರ್ಮವು ಹೇಳುವದಿಲ್ಲ. ಆದರೆ ಪ್ರಪಂಚಿಯಾಗಿ ಗುರುಲಿಂಗ ಜಂಗಮ ಸೇವೆಯನ್ನು ಮಾಡೆಂದು ಹೇಳುತ್ತದೆ. ಭಿಕ್ಷುಕನಾಗಿ ಮನೆ ಮನೆ ತಿರುಗೆಂದು ವೀರಶೈವ ಧರ್ಮವು ಸಾರುವದಿಲ್ಲ. ಆದರೆ ಕಾಯಕವ ಮಾಡಿ ಕೈಲಾಸವನ್ನು ಕಾಣೆಂದು ಬೋಧಿಸುತ್ತದೆ. 'ದೇವನೊಬ್ಬ ನಾಮ ಹಲವು. ಪರಮ ಪತಿವ್ರತೆಗೆ ಗಂಡನೊಬ್ಬ. ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ಯುವನು" ಎಂಬೀ ವಚನದಿಂದ ಒಬ್ಬನೇ ದೇವರ ಉಪಾಸನೆ ಮಾಡಬೇಕಲ್ಲದೆ ಕಂಡ ಕಂಡ ದೈವಂಗಳಿಗೆ ಅಡ್ಡ ಬೀಳುವವರು ವ್ಯಭಿಚಾರಿ ಸ್ತ್ರೀಯರಂತೆ, ಪಾತಕಿಗಳೆಂದು ವೀರಶೈವ ಧರ್ಮವು ಖಂಡತುಂಡವಾಗಿ ಹೇಳುತ್ತದೆ.

ವೀರಶೈವ ಮತವು "ನಾರೀ ಪ್ರತ್ಯಕ್ಷ ರಾಕ್ಷಸೀ, ನ ಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ಸಂಕುಚಿತ ಭಾವಗಳಿಗೆಡೆಗೊಡದೆ ಪರಸ್ತ್ರೀಯರನ್ನು ಪಾರ್ವತಿಯ ಸಮಾನರೆಂದು ತಿಳಿದು ಗೌರವಿಸುತ್ತದೆ. ತಮ್ಮ ಆಧ್ಯಾತ್ಮಿಕೋನ್ನತಿಗಾಗಿ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿರುತ್ತದೆ. ವೀರಶೈವ ಧರ್ಮವು ಗುರುಲಿಂಗ ಜಂಗಮ ಸೇವಾರ್ಥವಾಗಿ ಅರ್ಥಾತ್ ಲೋಕಸಂಗ್ರಹಕ್ಕಾಗಿ ದುಡ್ಡನ್ನು ಧಾರೆಯೆರೆಯಬೇಕೆಂದು ಹೇಳುವದೇ ವಿನಾ ತನ್ನ ಹೆಂಡರು ಮಕ್ಕಳ ಸುಖಕ್ಕಾಗಿ ಅದನ್ನು ಕೂಡಿ

ಡಬೇಕೆಂದು ಹೇಳುವದಿಲ್ಲ. "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಕೂಡಲಸಂಗನ ಶರಣರೇ ಕುಲಜರು" ಎಂಬ ವಿಶ್ವಪ್ರೇಮದ ವಿಚಾರಗಳನ್ನೇ ಹೇಳುವದಲ್ಲದೆ ತನ್ನ ದೇಶದ ಹಿತಕ್ಕಾಗಿ ಪರರಾಷ್ಟ್ರಗಳ ರಕ್ತವನ್ನು ಹೀರಿ ಹಿಂಡಿಹಿಪ್ಪೆ ಮಾಡಬೇಕೆಂಬ ಪಾಪದ ವಿಚಾರವನ್ನೆಂದಿಗೂ ಹೇಳಲಾರದು.

"ಜಗದೊಳತ್ಯಧಿಕವೆನಿಪ ಶಾಂತಿಮತವನು ಬೇಡುವೆನಭವಾ" ಎಂದು ನಿಜಗುಣಾರ್ಯರು ಹಾಡಿಕೊಂಡಂತೆ ಜಗತ್ತಿನಲ್ಲಿ ಶಾಂತಿ ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬುದೇ ವೀರಶೈವರ ಮತವಲ್ಲದೆ ಯುದ್ಧದಿಂದ ಸರ್ವಸ್ವನ್ನೇ ನಾಶಮಾಡಬೇಕೆಂದು ಅದು ಹೇಳುವದಿಲ್ಲ. ಸದ್ಭಕ್ತಿ ಸದಾಚಾರಗಳೇ ವೀರಶೈವ ಧರ್ಮದ ಅಡಿಗಲ್ಲುಗಳು. ಭಕ್ತಿನೀತಿಗಳೆರಡು ಒಂದು ನಾಣ್ಯದ ಎರಡು ಮಗ್ಗಲುಗಳಂತಿರುವವು. ಯಾವದೇ ಮತದವನಿರಲಿ ಆತನು ಒಮ್ಮೆ ದೀಕ್ಷೆಹೊಂದಿ ವೀರಶೈವನಾದ ಬಳಿಕ ಅವನ ಹಿಂದಿನ ಕುಲಗೋತ್ರಗಳನ್ನೆಣಿಸದೆ ಆತನೊಡನೆ ಅನ್ನಪಾನ ಶರೀರಸಂಬಂಧ ಮಾಡಲಿಕ್ಕೆ ವೀರಶೈವ ಧರ್ಮದ ಪ್ರತಿಬಂಧವಿರುವದಿಲ್ಲ. ಇದರಲ್ಲಿ ಸ್ಪೃಶ್ಯಾಸ್ಪೃಶ್ಯತೆಯ ಭೇದವಿಲ್ಲ. ಎಷ್ಟೋ ಜನ ಕೀಳುಕುಲದವರು ಮಹಾ ಶರಣರಾಗಿ ಹೋಗಿದ್ದಾರೆ. ವೀರಶೈವರಲ್ಲಿ ಸದಾಚಾರಿಯೇ ಕುಲಜನು, ದುರಾಚಾರಿಯೇ ಹೊಲೆಯನು.

ಇವೆಲ್ಲ ದಿವ್ಯತತ್ವಗಳನ್ನೊಳಕೊಂಡ ವೀರಶೈವ ಧಾರ್ಮಿಕ ಸಂಸ್ಕೃತಿಯು ನಿಜವಾಗಿಯೂ ಆದರಣೀಯವು. ಇಂಥ ಉದಾರ ತತ್ವಗಳನ್ನು ಸಂಶೋಧಿಸಿ, ರಾ| ಬ| ಹಳಕಟ್ಟಿಯವರು ತಮ್ಮ ಅಮೌಲ್ಯವಾದ 'ವಚನಶಾಸ್ತ್ರಸಾರದ ಆಯಾ ಗ್ರಂಥಗಳಲ್ಲಿ ಪ್ರಕಟಿಸಿದ್ದರಿಂದ ಆ ಸಂಸ್ಕೃತಿಯ ಪ್ರಭಾವವು ಸುಜ್ಞಜನರಿಗೆ ವಿದಿತವಾಗಿಯೇ ಇದೆ. ಇನ್ನು ಮುಂದೆ ರಾವಬಹಾದ್ದೂರರವರು "ವೀರಶೈವ ಸಂಸ್ಕೃತಿ ಪ್ರಸಾರಕ ಸಂಸ್ಥೆ" ಎಂಬ ಸಂಸ್ಥೆಯ ಮುಖಾಂತರವಾಗಿ ಜನಸಾಮಾನ್ಯರಲ್ಲಿಯೂ ಕೂಡ ಆ ದಿವ್ಯ ತತ್ವಗಳನ್ನು ಹರಡಬೇಕೆಂಬ ಧ್ಯೇಯವನ್ನಿಟ್ಟುಕೊಂಡಿದ್ದುದು ಒಳ್ಳೇ ಸ್ತುತ್ಯವಾದುದು. ಅಂಥ ಸುದಿನಗಳು ಶೀಘ್ರವೇ ಬರಲೆಂದೂ ಪರಮಾತ್ಮನು ರಾ. ಬ ಹಳಕಟ್ಟಿಯವರು ಕೈಕೊಳ್ಳಲು ಯತ್ನಿಸುವ ಕಾರ್ಯಕ್ಕೆ ಸಂಪೂರ್ಣ ಯಶಸ್ಸನ್ನು ಕೊಡಲೆಂದೂ ಹಾರೈಸುತ್ತೇನೆ.

---

## ರಾ|| ಬ|| ಹಳಕಟ್ಟಿಯವರ

# ೬೩ನೆಯ ವರ್ಷ ವರ್ಧಂತ್ಯುತ್ಸವದ ಪ್ರಕಟನೆ.

ಶ್ರೀ. ಬಸವಜಯಂತಿಯ ದಿವಸ ಪೂಜ್ಯಪಾದರಾದ ಶ್ರೀ. ಬಂಥನಾಳ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ರಾ|| ಬ|| ಹಳಕಟ್ಟಿಯವರ ೬೩ನೇ ವರ್ಷದ ವರ್ಧಂತ್ಯುತ್ಸವವನ್ನು ೨-೬-೧೯೪೨ನೇ ದಿವಸ ನೆರವೇರಿಸಬೇಕೆಂದು ಗೊತ್ತಾದುದು ಈ ಮೊದಲೇ ಪ್ರಕಟವಾಗಿದೆಯಷ್ಟೇ. ರಾ|| ಬ|| ಹಳಕಟ್ಟಿಯವರ ವರ್ಧಂತ್ಯುತ್ಸವವನ್ನು ಯಾವ ರೀತಿ ಆಚರಿಸಿದರೆ ಅದು ಅವರ ಜೀವನದ ನಿಜವಾದ ಉಸಿರಾಗಬಹುದೆಂಬ ಬಗ್ಗೆ ಮಹಾಜನಗಳಲ್ಲಿ ಅರಿಕೆ ಮಾಡಿಕೊಳ್ಳಲು ಅನೇಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದುದು ಅಭಿನಂದನೀಯವಾದುದು. ರಾ|| ಬ|| ಹಳಕಟ್ಟಿಯವರು ಒಂದು ವ್ಯಕ್ತಿಯಲ್ಲ, ಅವರೊಂದು ವಿವಿಧ ಕಾರ್ಯಗಳ ಸಂಸ್ಥೆಯಾಗಿದ್ದಾರೆಂಬುದು ಅವರು ಕರ್ನಾಟಕದಲ್ಲಿ ಮಾಡಿದ ಅನೇಕ ಉಪಯುಕ್ತ ಹಾಗೂ ಮಹತ್ವದ ಕಾರ್ಯಗಳಿಂದ ಯಾರಿಗಾದರೂ ಸಹಜ ಹೊಳೆಯದಿರಲಾರದು. ಅವರು ವಿಜಾಪುರ ಜಿಲ್ಲಾ ವಿದ್ಯಾವರ್ಧಕ ಸಂಘ, ಶ್ರೀ ಸಿದ್ಧೇಶ್ವರ ಹಾಯಸ್ಕೂಲ, ಶಿಪರ್ಡಹಾಲ, ಮುಂತಾದವುಗಳನ್ನು ಸ್ಥಾಪಿಸಿದ್ದಲ್ಲದೆ ಪವಿತ್ರವಾದ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ವಿಧವಾದ ಕಾರ್ಯ ಮಾಡಿದ್ದಾರೆ. ಶ್ರೀ ಸಿದ್ಧೇಶ್ವರ ಧರ್ಮಾದಾಯ ಸಂಸ್ಥೆ, ಅಪ್ಲಿಪೆ ಕೋ-ಆಪರೇಟಿವ್ಹ ಸೊಸಾಯಿಟಿಗಳು, ಕಾಟನ್ ಸೇಲ ಸೊಸಾಯಿಟಿ, ಶ್ರೀ ಸಿದ್ಧೇಶ್ವರ ಅರ್ಬನ್ ಬ್ಯಾಂಕ, ವಿಜಾಪುರ ಒಕ್ಕಲತನದ ಸಂಘ, ವಿಜಾಪುರ ತಾಲೂಕಾ ಡೆವ್ಹಲಪ್‌ಮೆಂಟ ಅಸೋಶಿಯೇಶನ್, ಆ್ಯಂಟಿ ಫಾಮಿನ್ ಇನ್‌ಸ್ಟಿಟ್ಯೂಟ ಮುಂತಾದ ಸಂಘಗಳಲ್ಲಿ ಸೇರಿ ಪ್ರೆಸಿಡೆಂಟ ಅಥವಾ ಸೆಕ್ರೆಟರಿಗಳಾಗಿ ನಾಡಿನ ಆರ್ಥಿಕ ಬೆಳವಣಿಗೆಗೆ ಮತ್ತು ಗ್ರಾಮೋದ್ಧಾರಕ್ಕೆ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ಇದಲ್ಲದೆ ಮುಂಬಯಿ ಶಾಸನಮಂಡಲ, ಕರ್ನಾಟಕ ಏಕೀಕರಣ ಸಂಸ್ಥೆ, ಮುಂಬಯಿ ವಿಶ್ವವಿದ್ಯಾಲಯದ ಸಿನೇಟ, ಬ್ರಾಹ್ಮಣೇತರ ಪಕ್ಷ, ಇವುಗಳಲ್ಲಿಯೂ ಪ್ರವೇಶಿಸಿ ತಮ್ಮ ಯೋಗ್ಯತೆಯನ್ನು ತೋರಿಸಿದ್ದಾರೆ. ಇವೆಲ್ಲ ಕಾರ್ಯಗಳಿಗಿಂತ ಮಿಗಿಲಾಗಿ ಅವರು ಶಿವಶರಣರ ವಚನ ಗ್ರಂಥಗಳ ಸಂಶೋಧನೆ ಮತ್ತು ಪ್ರಕ

ಟನೆಗಳಿಂದ ಮಾಡಿದ ಸಾಹಿತ್ಯ ಸೇವೆಯಂತೂ ಅತ್ಯಂತ ಅಮೌಲ್ಯವಾದುದು. ಇದರಿಂದ ಅವರ ಉಜ್ವಲವಾದ ಕೀರ್ತಿಯು ನಿರಂತರ ದೇದೀಪ್ಯಮಾನವಾಗಿ ಬೆಳಗುವುದು. ಅವರು ಅನೇಕ ಕಾರ್ಯ ರಂಗಗಳಲ್ಲಿ ಭಾಗವಹಿಸಿದ್ದರೂ ತಮ್ಮ ಆಯುಷ್ಯದ ಮಹತ್ವದ ಭಾಗವನ್ನೆಲ್ಲ ವಚನ ಸಾಹಿತ್ಯ ಸಂಶೋಧನೆಗಾಗಿಯೇ ಮೀಸಲಾಗಿರಿಸಿ ಆ ಮೂಲಕ ವೀರಶೈವ ಸಂಸ್ಕೃತಿಯನ್ನು ಎಲ್ಲೆಡೆಯಲ್ಲಿಯೂ ಬೀರುತ್ತಿರುವ ಅವರ ಪ್ರಯತ್ನವು ಬಹು ಪ್ರಶಂಸನೀಯವಾಗಿದೆ. ಅವರು ಕಳೆದ ೧೬ ವರ್ಷಗಳಿಂದಲೂ ಶಿವಾನುಭವ ಪತ್ರಿಕೆಯನ್ನು ಹೊರಡಿಸಿ ಅದರ ಮುಖಾಂತರ ವೀರಶೈವ ಸಾಹಿತ್ಯ, ಇತಿಹಾಸ, ತತ್ವಜ್ಞಾನ ಮೊದಲಾದವುಗಳನ್ನು ಹೊರಪಡಿಸುತ್ತಿರುವ ಅವರ ಪವಿತ್ರ ಸೇವೆಯು ಚಿರಸ್ಮರಣೀಯವಾಗಿದೆ. ಅದೇ ಮೇರೆಗೆ "ನವಕರ್ನಾಟಕ" ಪತ್ರಿಕೆಯ ಮುಖಾಂತರವಾಗಿ ೧೪ ವರ್ಷಗಳಿಂದಲೂ ಧಾರ್ಮಿಕ, ಸಾಮಾಜಿಕ, ರಾಜಕೀಯ ವಿಷಯಗಳನ್ನು ಪಕ್ಷಪಾತಗಳಿಗೆ ಇಂಬುಗೊಡದೆ ಬಹು ಉದಾರ ಮತ್ತು ಉದಾತ್ತ ಧೋರಣದಿಂದ ಪ್ರಸ್ತಾಪಿಸುತ್ತಿರುವದು ಅವರ ಸೌಜನ್ಯದ ದ್ಯೋತಕವಾಗಿದೆ. ಇಲ್ಲಿಯ ವರೆಗೆ ಅವರು ತಮಗೊದಗಿದ ಕಷ್ಟನಷ್ಟಗಳಿಗೆ ಎದೆಗೆಡದೆ ಕೇವಲ ಸ್ವಾರ್ಥತ್ಯಾಗದಿಂದಲೂ ಧೈರ್ಯದಿಂದಲೂ ಶರಣರ, ಹರಿಹರಕವಿ ಮೊದಲಾದ ಪುರಾತನ ಗ್ರಂಥಕರ್ತರ ಸುಮಾರು ೬೦ ಗ್ರಂಥಗಳನ್ನು ಪ್ರಕಟಗೊಳಿಸಿದ್ದಾರೆ ಮತ್ತು ಇನ್ನೂ ಪ್ರಕಟಿಸುತ್ತಲೂ ಇದ್ದಾರೆ.

ರಾ॥ ಬ॥ ಹಳಕಟ್ಟಿಯವರು ಮಾಡಿದ ಸ್ತುತ್ಯವಾದ ಈ ಸಾಹಿತ್ಯಸೇವೆಯೇ ಬಹು ಜನರಿಗೆ ಹೆಚ್ಚು ಮಹತ್ವದ್ದಾಗಿ ತೋರಿ ಈ ಮಹನೀಯರಿಗೆ ಒಂದು ನಿಧಿಯನ್ನು ಆ ಕಾರ್ಯಪ್ರಸಾರಕ್ಕಾಗಿ ಅರ್ಪಿಸಬೇಕೆಂದು ಎಲ್ಲಕ್ಕೂ ಹೆಚ್ಚಾಗಿ ಸಲಹೆ ಸೂಚನೆಗಳು ಬಂದದ್ದರಿಂದ ತಾ॥ ೨೩-೫-೪೨ ನೇ ದಿವಸ ಸರದಾರ ರಾ॥ ಬ॥ ಸಿ. ಜೆ. ದೇಶಮುಖ ಇವರ ಅಧ್ಯಕ್ಷತೆಯಲ್ಲಿ ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿಯ ಸಭೆ ಸೇರಿದಾಗ ಕೆಳಗಿನಂತೆ ಗೊತ್ತುವಳಿಗಳು ಮಾಡಲ್ಪಟ್ಟಿರುತ್ತವೆ.

(೧) ರಾ॥ ಬ॥ ಹಳಕಟ್ಟಿಯವರು ಜನ್ಮವೆತ್ತಿ ತಾ॥ ೨--೭--೧೯೪೨ ನೆಯ ದಿವಸಕ್ಕೆ ೬೨ ವರ್ಷಗಳು ಪೂರ್ತಿಯಾಗುವದರಿಂದ ಆ ದಿನ ೬೩ನೆಯ ವರ್ಷ ವರ್ಧಂತ್ಯುತ್ಸವವನ್ನು ಜರಗಿಸಬೇಕು.

(೨) ಆ ಕಾಲಕ್ಕೆ "ಶ್ರೀ. ಹಳಕಟ್ಟಿ ಗೌರವ ಗ್ರಂಥ" ಎಂಬುವೊಂದನ್ನು ಸಿದ್ಧಗೊಳಿಸಿ ಅವರಿಗೆ ಅರ್ಪಿಸಬೇಕು.

(೩) ಆ ದಿನ ಇವರಿಗೆ ಅರ್ಪಿಸುವ ನಿಧಿಯನ್ನು ಕೂಡಿಸಲು ಯುಕ್ತ ಕಂಡ ಏರ್ಪಾಟುಗಳನ್ನು ಈ ಸಮಿತಿಯವರು ಮಾಡಬೇಕು.

(೪) ಈ ನಿಧಿಗೆ ಸಹಾಯ ಮಾಡುವ ಮಹನೀಯರು ಹಣವನ್ನು ಶ್ರೀ ಕಲ್ಯಾಣಪ್ಪ ಬ್ಯಾಳಿ ಕಾರ್ಯದರ್ಶಿ ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿ ವಿಜಾಪುರ" ಇವರ ಕಡೆಗೆ ಕಳಿಸಿಕೊಡತಕ್ಕದ್ದು. ಆ ಹಣವನ್ನು ಸ್ವೀಕರಿಸಲಿಕ್ಕೆ ಸಮಿತಿಯವರು ಕಾರ್ಯದರ್ಶಿಯವರಿಗೆ ಅಧಿಕಾರ ಕೊಟ್ಟಿದ್ದಾರೆ. ಕಾರ್ಯದರ್ಶಿಯವರು ಹಣಕೊಟ್ಟವರ ಹೆಸರುಗಳನ್ನು ಶರಣ ಸಂದೇಶ ಪತ್ರಿಕೆಯಲ್ಲಿ ಪ್ರಕಟಿಸುತ್ತ ಹೋಗಬೇಕು. ಮತ್ತು ಆ ಹಣವನ್ನು ರಾ॥ ಬ॥ ಹಳಕಟ್ಟಿ ವರ್ಧಂತ್ಯುತ್ಸವ ಸಮಿತಿಯ ಅಧ್ಯಕ್ಷರ ಹೆಸರಿನಿಂದ ವಿಜಾಪುರ ಶ್ರೀ ಸಿದ್ಧೇಶ್ವರ ಬ್ಯಾಂಕಿನಲ್ಲಿಡತಕ್ಕದ್ದು.

(೫) ವರ್ಧಂತ್ಯುತ್ಸವದ ದಿನ "ವೀರಶೈವ ಸಂಸ್ಕೃತಿ ಪ್ರಸಾರಕ ಸಂಸ್ಥೆ" ಎಂಬುದೊಂದು ಸಂಸ್ಥೆಯ ಸ್ಥಾಪನೆಯಾಗಿ ಅದರ ಮೂಲಕ ಈ ಕೆಳಗಿನ ಕಾರ್ಯಗಳಿಗಾಗಿ ಈ ನಿಧಿಯು ವಿನಿಯೋಗಿಸಲ್ಪಡಬೇಕು.

(೬) ರಾ॥ ಬ॥ ಹಳಕಟ್ಟಿಯವರ ಜೀವನದ ಉದಾತ್ತ ಧ್ಯೇಯಕ್ಕನುಗುಣವಾಗಿ ಜನತೆಯಲ್ಲಿ ಆಯಾಯ ಭಾಷೆಗಳ ಮುಖಾಂತರ ವೀರಶೈವ ಸಂಸ್ಕೃತಿಯ ತತ್ವಗಳನ್ನು ನಾನಾ ರೀತಿಯಾಗಿ ಎಲ್ಲ ಕಡೆಗೂ ಪ್ರಸಾರಗೊಳಿಸಲು ಕೆಳಗೆ ಕಾಣಿಸಿದಂತೆ ಕಾರ್ಯಗಳನ್ನು ಕೈಕೊಳ್ಳತಕ್ಕದ್ದು.

[ಅ] ಶಿವಾನುಭವ ಪ್ರಚಾರಕರ ವರ್ಗಗಳನ್ನೇರ್ಪಡಿಸುವದು.

[ಬ] ಅಲ್ಲಲ್ಲಿ ಶಿವಾನುಭವ ಪ್ರಚಾರಕರನ್ನು ನೇಮಿಸುವದು.

[ಕ] ವೀರಶೈವ ಶರಣರ, ಕವಿಗಳ, ರಾಜರ, ಮತ್ತು ಐತಿಹಾಸಿಕ ಪುರುಷರ ಚರಿತ್ರೆಗಳು, ಭಾವಚಿತ್ರ, ಇತಿಹಾಸ, ಕಥೆ, ಲಾವಣಿ, ಹಾಡು, ಮುಂತಾದವುಗಳನ್ನು ಸುಲಭ ಭಾಷೆಯಲ್ಲಿ ಬರೆಯಿಸಿ ಪ್ರಕಟಿಸುವದು ಮತ್ತು ಇದೇ ಪ್ರಕಾರ ಸಾಮಾಜಿಕ, ಧಾರ್ಮಿಕ, ವಾಙ್ಮಯಾತ್ಮಕ, ಉಪಯುಕ್ತ ಗ್ರಂಥಗಳನ್ನು ಮುದ್ರಿಸಿ ಪ್ರಸಾರಗೊಳಿಸುವುದು.

(೭) ವೀರಶೈವ ಸಂಸ್ಕೃತಿಯ ಸಂಶೋಧನೆಗಾಗಿ ಒಂದು ಧಾರ್ಮಿಕ ಗ್ರಂಥ ಭಾಂಡಾರವನ್ನು ಸ್ಥಾಪಿಸುವದು.

(೮) ಮೇಲ್ಕಂಡ ಕಾರ್ಯಕಲಾಪಗಳನ್ನು ನಿರ್ವಹಿಸಲಿಕ್ಕೆ ವೀರ ಶೈವ ಸಂಸ್ಕೃತಿ ಪ್ರಸಾರಕ ಸಂಸ್ಥೆಯು ಒಂದು ಕಾಯಂ ಕಾರ್ಯಾಲಯ ವನ್ನು ಸ್ಥಾಪಿಸುವದು.

ರಾ॥ ಬ॥ ಹಳಕಟ್ಟಿಯವರ ೭೩ ನೆಯ ವರ್ಷ ವರ್ಧಂತ್ಯುತ್ಸವವು ಎಷ್ಟು ಪರಿಣಾಮಕಾರಿಯಾಗಿ ಮಾಡಲ್ಪಡವದೋ ಅಷ್ಟು ವೀರಶೈವ ಸಮಾಜಕ್ಕೂ ಕನ್ನಡ ನಾಡಿಗೂ ಪ್ರಯೋಜನವೆಂಬುದು ಮೇಲಿನ ಕಾರ್ಯ ಕ್ರಮದಿಂದ ಮಹಾಜನರಿಗೆ ವೇದ್ಯವಾಗದೆ ಇರಲಾರದು. ಆದ ಕಾರಣ ಆ ದಿನ ಅವರಿಗೆ ಅರ್ಪಿಸಲ್ಪಡುವ ನಿಧಿಯು ಆದಷ್ಟು ಹೆಚ್ಚು ವಂತೆ ಉದಾರಿಗಳು ತುಂಬಾ ಧನ ಸಹಾಯ ಮಾಡಿ ಈ ಕಾರ್ಯವು ವಿಶೇಷ ಫಲಕಾರಿಯಾಗುವಂತೆ ಮಾಡುವರೆಂದು ನಂಬಿದ್ದೇವೆ.

## ಸಮಿತಿಯ ಸದಸ್ಯರು.

ಸರದಾರ ರಾ॥ ಬ॥ ಸಿ. ಜೆ. ದೇಶಮುಖ (ಚೇರ್ಮನ್)
ರಾ॥ ಸಾ॥ ಎಮ್. ಎಸ್ ಸಿಂಹಾಸನ.
ಶ್ರೀ. ವ್ಹಿ. ಎಸ್. ಜತ್ತಿ.
ಶ್ರೀ. ಏ. ಸಿ. ಅಂಗಡಿ. ವಕೀಲರು. ಬಿ. ಎ. ಎಲ್ಎಲ್, ಬಿ.
ಡಾ॥ ಎಸ್. ಬಿ. ಪಾಟೀಲ
ಶ್ರೀ. ವ್ಹಿ. ವ್ಹಿ. ಮುಧೋಳಕರ ಬಿ. ಎ. ಎಲ್ಎಲ್, ಬಿ.
ಶ್ರೀ. ಮಲ್ಲಪ್ಪ ಸುರಪುರ
ಶ್ರೀ. ಆರ್. ಎಸ್. ಬೀಳಗಿ.
ಶ್ರೀ. ಸದಾಶಿವಪ್ಪ ತೆಸಿಹಳ್ಳಿ
ರಾ॥ ಸಾ॥ ಜಿ. ಕೆ. ದೇಸಾಯಿ ಕೊಣ್ಣೂರ.
ಶ್ರೀ. ಎಸ್. ಎಸ್. ಹೇರಲಗಿ.
ಶ್ರೀ. ಎನ್. ಎಲ್ ಸುಗಂಧಿ.
ಶ್ರೀ. ಆರ್. ಎಸ್ ಸಾವದಗಿ.
ಶ್ರೀ. ಮುರಿಗೆಪ್ಪಾ ಹುಂಡೇಕಾರ
ಶ್ರೀ. ಬಿ. ಡಿ. ಪಾಟೀಲ. ಕೊಣ್ಣೂರ
ಶ್ರೀ. ಮಲ್ಲಪ್ಪಾ ತಾಳೀಕೋಟಿ
ಶ್ರೀ. ವೀರಪ್ಪ ಲಾಳಿ
ಶ್ರೀ. ಎಸ್. ಬಿ. ಸೋಮಾ.
ಶ್ರೀ. ಸಂಗಪ್ಪಾ ತರನಳ್ಳಿ.

---

ವಿಜಾಪುರ.
ತಾ॥ ೨೩-೫-೧೯೪೨.

ತಮ್ಮ
**ಕಲ್ಯಾಣಪ್ಪ ಬ್ಯಾಳಿ.**
ಕಾರ್ಯದರ್ಶಿ

ಪ್ರಂದವಾದಲ್ಲಿ ಮಂತ್ರವನ್ನು ನೆನೆಯುಬೇಕು. ಇದನ್ನೇ ವೀರಶೈವನು ಜಪಿಸಬೇಕು. ಶಿವಪಂಚಾಕ್ಷರಿಯು ಹೀಗಿದ್ದು ಇದೇ ಎಲ್ಲ ಮಂತ್ರಗಳಿಗೆ ಉತ್ಪತ್ತಿ ಲಯ ಸ್ಥಾನವಾಗಿದೆ. ಇದೇ ಶಿವಮಂತ್ರವೆನಿಸುತ್ತದೆ. ಏಳು ಕೋಟಿ ಮಹಾಮಂತ್ರಗಳಿವೆ. ಉಪಮಂತ್ರಗಳಿಗೆ ಲೆಕ್ಕವಿಲ್ಲ. ಆದರೆ ಭಕ್ತನು ಅವುಗಳಲ್ಲಿ ವ್ಯಾಕುಲನಾಗದೆ ಈ ಶಿವಮಂತ್ರ ಒಂದನ್ನೇ ನೆನೆಯುಬೇಕು.

(೧೨೯) ಶಿವಪಂಚಾಕ್ಷರ ಮಂತ್ರಃ— ಆರಂಭದಲ್ಲಿ ಜಗತ್ತು ತಲೆದೋರದೆ ಇದ್ದ ಕಾಲದಲ್ಲಿ ನಿತ್ಯ ನಿರಂಜನ ಪರವಸ್ತುವು ಒಂದೇ ಇದ್ದು ಅದು ನಿರಂಜನ ಪ್ರಣವುವೆಂದು ಹೇಳಲ್ಪಡುತ್ತದೆ. ಅದರಲ್ಲಿ ಮೂಲ ಚಿತ್ತು ಉದಯುವಾಗುತ್ತದೆ. ಆ ಚಿತ್ತು ಸಚ್ಚಿದಾನಂದಸ್ವರೂಪುಳ್ಳದಾಗಿ ಚಿತ್‌ಪ್ರಣವುವೆಂದೆನಿಸಿಕೊಳ್ಳುತ್ತದೆ. ಅದರಲ್ಲಿ ಚಿತ್‌ಶಕ್ತಿಯು ಉದಯುವಾಗುತ್ತದೆ. ಇದರಲ್ಲಿ ನಾದ ಬಿಂದು ಕಳೆಗಳು ಉಂಟಾಗುತ್ತವೆ. ಅಕಾರವೇ ನಾದವು ಉಕಾರವೇ ಬಿಂದುವು ಮಕಾರವೇ ಕಳೆಯು. ಇವು ಮೂರು ಮತ್ತು ಚಿತ್‌ಶಕ್ತಿ ಒಂದಾದಲ್ಲಿ ಮೂಲಪ್ರಣವುವು ಅಂದರೆ ಓಂಕಾರವು ಉಂಟಾಗುತ್ತದೆ. ಈ ಪ್ರಣವುವು ತಾರಕಾಕೃತಿ, ದಂಡಕಾಕೃತಿ, ಕುಂಡಲಾಕೃತಿ, ಅರ್ಧಚಂದ್ರಾಕೃತಿ, ಬಿಂದ್ವಾಕೃತಿ ಎಂದು ಐದು ಆಕೃತಿಗಳನ್ನು ಒಳಗೊಂಡಿದೆ. ಅವು ಇದರಲ್ಲಿ ಅಡಕವಾಗಿವೆ. ತಾರಕಾಕೃತಿಯಲ್ಲಿ ನಕಾರ ಜನನ, ದಂಡಕಾಕೃತಿಯಲ್ಲಿ ಮಕಾರ ಜನನ, ಕುಂಡಲಾಕೃತಿಯಲ್ಲಿ ಶಿಕಾರ ಜನನ, ಅರ್ಧಚಂದ್ರಾಕೃತಿಯಲ್ಲಿ ವಕಾರ ಜನನ, ಬಿಂದ್ವಾಕೃತಿಯಲ್ಲಿ ಯಕಾರ ಜನನ ಈ ಪ್ರಕಾರ ಪಂಚಾಕ್ಷರಗಳ ಉತ್ಪತ್ತಿಯು ಇದೆ. ಈ ಅಕ್ಷರಗಳಲ್ಲಿ ಓಂ ಪ್ರಣವುವು ಕೂಡಲು ಅದು ಶಿವಪಂಚಾಕ್ಷರೀ ಮಂತ್ರವೆಂದು ಹೇಳಲ್ಪಡುತ್ತದೆ. ಇದಕ್ಕೆ ಪ್ರಣವು ಪಂಚಾಕ್ಷರೀ ಮಂತ್ರ, ಷಡಕ್ಷರೀ ಮಂತ್ರ ಎಂಬ ಬೇರೆ ಹೆಸರುಗಳಿವೆ.

(೧೮೦) ಪ್ರಣವುಪಂಚಾಕ್ಷರೀ ಮಂತ್ರದ ಜಪದ ಪರಿಣಾಮುಗಳುಃ- ಮನುಷ್ಯನು ಮೂಲದಲ್ಲಿ ಶಕ್ತಿಮಯನಾಗಿದ್ದಾನೆ. ಆದರೆ ಅದು ಪ್ರಕಟವಾಗಿರುವದಿಲ್ಲ. ಅದನ್ನು ಪ್ರಕಟಗೊಳಿಸುವದೇ ಮಂತ್ರಜಪದ ಉದ್ದೇಶವು. ಈ ಮಂತ್ರವು ಅವನ ಶಕ್ತಿಯನ್ನೆಲ್ಲ ಆವರಿಸತಕ್ಕದ್ದಾಗಿದೆ. ಮಂತ್ರಜಪಿಸುವದೂ ಪರಮಾತ್ಮನನ್ನು ನೆನೆಯುವದೂ ಒಂದೇಯಾಗಿವೆ. ದೇವರ

ಪ್ರಾರ್ಥನೆ ಎಂದರೆ ಪರಮಾತ್ಮನ ಹೆಸರನ್ನು ತೆಗೆದುಕೊಂಡು ಅವನಿಂದ ಒಂದು ಭಿಕ್ಷೆ ಬೇಡುವದು ಅಲ್ಲ. ಯಾಕಂದರೆ ವೀರಶೈವರಲ್ಲಿ ಭಿಕ್ಷೆ ಬೇಡುವದು ಇಲ್ಲ. ಆದ್ದರಿಂದ ಅಲ್ಲಿ ಪಂಚಾಕ್ಷರೀ ಜಪವನ್ನು ಮಾಡುವ ಅವರ ಉದ್ದೇಶವು ಆತ್ಮಶಕ್ತಿಯನ್ನು ಬೆಳಿಸುವದಿರುತ್ತದೆ. ಹೀಗೆ ಶಕ್ತಿಯನ್ನು ಬೆಳಿಸಿ ಕಾಯಕಗಳನ್ನು ಮಾಡುತ್ತ ತಮ್ಮ ಎಲ್ಲ ಗುಣಗಳನ್ನು ವಿಕಾಸ ಪಡಿಸಬೇಕು. ಈ ವಿಕಾಸದ ಪೂರ್ಣಾವಸ್ಥೆಯೇ ಲಿಂಗಾಂಗಸಾಮರಸ್ಯವು. ಮಂತ್ರಜಪದ ಉದ್ದೇಶವು ಹೀಗಿರುವದರಿಂದ ಅದನ್ನು ಕೇವಲ ಯಾಂತ್ರಿಕ ರೀತಿಯಿಂದ ಮಾಡಕೂಡದು. ಅದರ ಅರ್ಥವನ್ನು ತಿಳಿದು ಜಪವನ್ನು ಮಾಡಬೇಕು. ಮನುಷ್ಯನ ಗುಣಗಳಾವವೆಂಬುದು ಷಟ್‌ಸ್ಥಲ ಶಾಸ್ತ್ರದಲ್ಲಿ ಹೇಳಿದೆ. ಇವನ್ನು ತಿಳಿದುಕೊಂಡು ಮಂತ್ರಶಕ್ತಿಯನ್ನು ಅವುಗಳಲ್ಲಿ ಬೆರಿಸಬೇಕು. ಪಂಚಾಕ್ಷರದಲ್ಲಿ ಪ್ರಣಮಗೂಡಿ ಆರು ವಿಭಾಗಗಳಿವೆ. ಅವು ನ, ಮ, ಶಿ, ವ, ಯ, ಓಂ ಎಂದಿವೆ. ಅವುಗಳು ಮನುಷ್ಯನ ಆಯಾ ಗುಣಗಳಿಗೆ ಸಂಬಂಧಪಡುತ್ತವೆ. ಅವುಗಳ ಉಚ್ಚರಣೆಯಲ್ಲಿ ಈ ಗುಣಗಳ ವಿಕಾಸದ ಉತ್ಕಟ ಭಾವನೆಯು ಇರಬೇಕು. ಈ ಗುಣಗಳಲ್ಲಿ ವಚನ ಶಾಸ್ತ್ರವು ೫ ಮುಖ್ಯ ವಿಭಾಗಗಳನ್ನು ಮಾಡುತ್ತದೆ. ಅವು:— (೧) ಶರೀರಕ್ಕೆ ಸಂಬಂಧಿಸಿದವು. (೨) ಬಾಹ್ಯ ವರ್ತನೆಗೆ ಸಂಬಂಧಿಸಿದವು. (೩) ಅಂತರಂಗದ ಆಚರಣೆಗೆ ಸಂಬಂಧಿಸಿದವು (೪) ಮನುಷ್ಯನ ಯೌಗಿಕ ಜೀವನಕ್ಕೆ ಸಂಬಂಧಿಸಿದವು (೫) ಮನುಷ್ಯನ ಲೈಂಗಿಕ ವರ್ತನೆಗೆ ಸಂಬಂಧಿಸಿದವು. ಹೀಗೆ ಐದು ವಿಭಾಗಗಳನ್ನು ಸ್ಥೂಲವಾಗಿ ಮಾಡಬಹುದು. ಯಾವ ಯಾವ ಗುಣಗಳು ಯಾವ ಯಾವ ಪ್ರಣಮಗಳಿಗೆ ಸಂಬಂಧಪಡುತ್ತವೆಂಬುದನ್ನು ವೀರಶೈವರು ಅರಿತು ಆಚರಿಸಬೇಕು. ಆಚರಿಸಿದಲ್ಲಿ ಆಯಾ ಗುಣಗಳು ಬಲಪಡುತ್ತವೆ.

ನಕಾರ ಮಂತ್ರ:— ಪೃಥ್ವೀತತ್ವ, ರುಧಿರಮಯ ದಶೇಂದ್ರಿಯಗಳು ಮತ್ತು ಆಧಾರಚಕ್ರ ಇವು ಶರೀರಕ್ಕೆ ಸಂಬಂಧಪಡುತ್ತವೆ. ಸುಚಿತ್ತ ಹಸ್ತ ಮತ್ತು ಶ್ರದ್ಧಾಭಕ್ತಿ ಇವು ಬಾಹ್ಯಾಚಾರಕ್ಕೆ ಸಂಬಂಧಿಸುತ್ತವೆ. ಅಂತರ್ಯಾಮಿತ್ವ, ಕ್ರಿಯಾಶಕ್ತಿ ಮತ್ತು ಪೀತವರ್ಣ ಇವು ಅಂತರಂಗಿಕ ಆಚರಣೆಗೆ ಸಂಬಂಧಿಸುತ್ತವೆ. ಬ್ರಹ್ಮತತ್ವ, ಕರ್ಮಸಾದಾಖ್ಯ, ಸದ್ಯೋಜಾತ ಮಂತ್ರ ಮೂರ್ತಿ, ಸತ್‌ಸ್ವರೂಪ ಇವು ಯೌಗಿಕ ಜೀವನಕ್ಕೆ ಸಂಬಂಧಪಡುತ್ತವೆ. ಆತ್ಮತತ್ವ, ಈಶಾನ್ಯಮಂತ್ರ ಮೂರ್ತಿ,

ಬ್ರಹ್ಮ, ಭಕ್ತ್ಯಾಂಗ ಸ್ವರೂಪ ಭಕ್ತ ಮತ್ತು ಆಚಾರಲಿಂಗ ಇವು ಲೈಂಗಿಕ ವರ್ತನೆಗೆ ಸಂಬಂಧಪಡುತ್ತವೆ. ನಕಾರ ಪ್ರಣವವು ಇವುಗಳಿಗೆಲ್ಲ ಸಂಬಂಧಿಸಿರುವದರಿಂದ ಅದರ ಪ್ರಭಾವದ ಮೂಲಕ ಈ ಗುಣಗಳ ವಿಕಾಸವು ಉಂಟಾಗುತ್ತದೆ.

(೨) ಮಕಾರ ಮಂತ್ರ:— ಅಪ್ಪು ತತ್ವ, ಮಾಂಸಮಯ, ಮನ ಪಂಚಕಗಳು ಮತ್ತು ಸ್ವಾಧಿಷ್ಠಾನಚಕ್ರ ಇವು ಶರೀರಕ್ಕೆ ಸಂಬಂಧವು. ಸುಬುದ್ಧಿಹಸ್ತ, ನೈಷ್ಠಿಕಾಭಕ್ತಿ ಇವು ಬಾಹ್ಯಾಚಾರಕ್ಕೆ ಸಂಬಂಧಿಸುತ್ತವೆ. ಚೈತನ್ಯ, ಜ್ಞಾನಶಕ್ತಿ ಮತ್ತು ನೀಲವರ್ಣ ಇವುಗಳು ಆಂತರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ವಿಷ್ಣುತತ್ವ, ಕರ್ತೃಸಾದಾಖ್ಯ, ವಾಮದೇವ ಮಂತ್ರಮೂರ್ತಿ, ಚಿತ್‌ಸ್ವರೂಪ ಇವು ಯೌಗಿಕ ಜೀವನಕ್ಕೆ ಸಂಬಂಧಿಸುತ್ತವೆ. ವಿದ್ಯಾತತ್ವ, ಈಶ್ವರಮಂತ್ರಮೂರ್ತಿ, ಪಿಂಡಬ್ರಹ್ಮ, ವಿದ್ಯಾಂಗಸ್ವರೂಪ, ಮಾಹೇಶ್ವರ ಮತ್ತು ಗುರುಲಿಂಗ ಇವು ಭಕ್ತನ ಲೈಂಗಿಕ ವರ್ತನೆಗೆ ಸಂಬಂಧಪಡುತ್ತವೆ. ಇವುಗಳಿಗೆ ಮಕಾರ ಪ್ರಣವವು ಸಂಬಂಧವಾಗಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣಗಳ ವಿಕಾಸವು ಉಂಟಾಗುತ್ತದೆ.

(೩) ಶಿಕಾರಮಂತ್ರ: – ಅಗ್ನಿತತ್ವ, ಮೇಧಸ್ಸು ಮಯ, ಪ್ರಾಣಸ್ವರೂಪು, ಮಣಿಪೂರಕ ಚಕ್ರ, ಇವು ಶರೀರಕ್ಕೆ ಸಂಬಂಧಿಸಿದವು. ನಿರಹಂಕಾರಹಸ್ತ ಮತ್ತು ಅವಧಾನಭಕ್ತಿ ಇವು ಬಾಹ್ಯ ಆಚರಣೆಗೆ ಸಂಬಂಧಪಡುತ್ತವೆ. ಭಾವ, ಇಚ್ಛಾಶಕ್ತಿ ಮತ್ತು ಕುಂಕುಮವರ್ಣ ಇವು ಆಂತರಂಗಿಕ ಆಚರಣೆಗೆ ಸಂಬಂಧ ಪಡುತ್ತವೆ. ರುದ್ರತತ್ವ, ಮೂರ್ತಿಸಾದಾಖ್ಯ, ಅಘೋರಮಂತ್ರ ಮೂರ್ತಿ, ಆನಂದಸ್ವರೂಪ ಇವು ಯೌಗಿಕ ಜೀವನಕ್ಕೆ ಸಂಬಂಧ ಪಡುತ್ತವೆ. ಶಿವತತ್ವ, ಮಾಹೇಶ್ವರಮಂತ್ರ ಮೂರ್ತಿ, ಕಲಾಬ್ರಹ್ಮ, ಪ್ರಸಾದಿ, ಶಿವಲಿಂಗ ಇವು ಲೈಂಗಿಕ ಆಚರಣೆಗೆ ಸಂಬಂಧ ಪಡುತ್ತವೆ. ಶಿಕಾರಪ್ರಣವವು ಇವುಗಳಿಗೆ ಸಂಬಂಧಿಸಿರುವದರಿಂದ ಅದರ ಧ್ಯಾನ ಮೂಲಕ ಈ ಗುಣಗಳ ವಿಕಾಸವು ಉಂಟಾಗುತ್ತದೆ.

(೪) ವಕಾರಮಂತ್ರ:— ವಾಯುತತ್ವ, ಅಸ್ಥಿಮಯ, ದಶವಾಯುಗಳ ಸ್ವರೂಪು, ಅನಾಹತಚಕ್ರ, ಇವು ಶರೀರಕ್ಕೆ ಸಂಬಂಧ ಪಡುತ್ತವೆ.

ಸುಮನಹಸ್ತ ಮತ್ತು ಅನುಭಾವಭಕ್ತಿಗಳು ಬಾಹ್ಯಾಚಾರಕ್ಕೆ ಸಂಬಂಧ ಪಡುತ್ತವೆ. ಕರ್ತಾರ, ಆದಿಶಕ್ತಿ ಮತ್ತು ಶ್ವೇತವರ್ಣಗಳು ಅಂತರಂಗಿಕ ಆಚರಣೆಗೆ ಸಂಬಂಧಪಡುತ್ತವೆ. ಈಶ್ವರತತ್ವ, ಅಮೂರ್ತಿಸಾದಾಖ್ಯ, ತತ್ಪುರುಷಮಂತ್ರ ಮೂರ್ತಿ, ಮತ್ತು ನಿತ್ಯಸ್ವರೂಪ ಇವುಗಳು ಯೌಗಿಕ ಜೀವನಕ್ಕೆ ಸಂಬಂಧಿಸುತ್ತದೆ. ಈಶ್ವರತತ್ವ, ಈಶಮಂತ್ರಮೂರ್ತಿ, ಆನಂದಬ್ರಹ್ಮ, ಕಾಮಾಂಗಸ್ವರೂಪವಪ್ಪ ಪ್ರಾಣಲಿಂಗಿ ಮತ್ತು ಜಂಗಮ ಲಿಂಗ, ಇವು ಲೈಂಗಿಕ ಆಚರಣೆಗೆ ಸಂಬಂಧಪಡುತ್ತವೆ. ವಕಾರ ಕ್ರಣಮವು ಇವುಗಳಿಗೆ ಸಂಬಂಧಿಸಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣ ಗಳ ವಿಕಾಸವು ಉಂಟಾಗುತ್ತದೆ.

(೫) ಯಕಾರಮಂತ್ರಃ— ಆಕಾಶತತ್ವ, ಮಜ್ಜಾಮಯ, ತ್ರಿಗುಣ ಸ್ವರೂಪು, ವಿಶುದ್ಧಿಚಕ್ರ, ಇವು ಶರೀರಕ್ಕೆ ಸಂಬಂಧಿಸುತ್ತವೆ. ಸುಜ್ಞಾನ ಹಸ್ತ ಮತ್ತು ಆನಂದಭಕ್ತಿಗಳು ಬಾಹ್ಯಾಚಾರಕ್ಕೆ ಸಂಬಂಧ ಪಡು ತ್ತವೆ. ಕ್ಷೇತ್ರಜ್ಞ, ಪರಾಶಕ್ತಿ, ಸ್ಫಟಿಕವರ್ಣ ಇವು ಅಂತರಂಗಿಕ ಆಚ ರಣೆಗೆ ಸಂಬಂಧಪಡುತ್ತವೆ. ಸದಾಶಿವತತ್ವ, ಶಿವಸಾದಾಖ್ಯ, ಈಶಾನ್ಯ ಮಂತ್ರಮೂರ್ತಿ, ಪರಿಪೂರ್ಣಸ್ವರೂಪು, ಇವು ಆಧ್ಯಾತ್ಮಿಕ ಜೀವನಕ್ಕೆ ಸಂಬಂಧಿಸುತ್ತವೆ. ಸದಾಶಿವತತ್ವ, ಸದಾಶಿವಮಂತ್ರಮೂರ್ತಿ, ವಿಜ್ಞಾನ ಬ್ರಹ್ಮ, ಭೂತಾಂಗಸ್ವರೂಪನಪ್ಪ ಶರಣ, ಪ್ರಸಾದಲಿಂಗ ಇವು ಲಿಂಗವಿಕಾ ಸಾವಸ್ಥೆಯನ್ನು ತೋರಿಸುತ್ತವೆ. ಇವುಗಳಿಗೆ ಯಕಾರಮಂತ್ರವು ಸಂಬಂಧಿ ಸಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣಗಳೆಲ್ಲ ವಿಕಾ ಸವನ್ನು ಹೊಂದುತ್ತವೆ

(೬) ಓಂಕಾರ ಮಂತ್ರಃ— ಆತ್ಮತತ್ವ, ಶುಕ್ಲಮಯ, ಪಂಚಭೂ ತಾತ್ಮಮಯ, ಆಜ್ಞಾಚಕ್ರ ಇವುಗಳು ಶರೀರಕ್ಕೆ ಸಂಬಂಧಪಡುತ್ತವೆ. ಸದ್ಭಾವ ಹಸ್ತ ಮತ್ತು ಸಮರಸಭಕ್ತಿ ಇವುಗಳು ಬಾಹ್ಯಾಚಾರಕ್ಕೆ ಸಂಬಂ ಧಪಡುತ್ತವೆ. ಶಿವ, ಚಿತ್‌ಶಕ್ತಿ, ಮತ್ತು ಜ್ಯೋತಿರ್ಮಯ ವರ್ಣ, ಇವು ಅಂತರಂಗಿಕ ಆಚರಣೆಗೆ ಸಂಬಂಧಿಸುತ್ತವೆ. ಮಹತ್ ತತ್ವ, ಮಹಾ ಸಾದಾಖ್ಯ, ಮಹಾಮಂತ್ರಮೂರ್ತಿ ನಿರಂಜನಸ್ವರೂಪು, ಇವುಗಳು ಯೌಗಿಕ ಜೀವನಕ್ಕೆ ಸಂಬಂಧಿಸುತ್ತವೆ. ಪರತತ್ವ ಶಿವಮಂತ್ರಮೂರ್ತಿ ಪರ ಬ್ರಹ್ಮ, ಶಿವಲಿಂಗಸ್ವರೂಪನಪ್ಪ ಐಕ್ಯ, ಮಹಾಲಿಂಗ ಇವುಗಳು ಲಿಂಗ

ವಿಕಾಸಾವಸ್ಥೆಯನ್ನು ತೋರಿಸುತ್ತವೆ. ಇವುಗಳಿಗೆ ಓಂಕಾರವು ಸಂಬಂಧಿಸಿರುವದರಿಂದ ಅದರ ಧ್ಯಾನದ ಮೂಲಕ ಈ ಗುಣಗಳೆಲ್ಲ ವಿಕಾಸವನ್ನು ಹೊಂದುತ್ತವೆ.

ಪಂಚಾಕ್ಷರಮಂತ್ರ ಜಪಿಸುವವನು ಮೇಲೆ ಹೇಳಿದಂತೆ ಬಾಹ್ಯಾಚಾರ ಮತ್ತು ಅಂತರಂಗಿಕ ಆಚರಣೆಗಳಂತೆ ನಡೆಯಬೇಕು. ಅದರಿಂದ ಅವನ ಆಧ್ಯಾತ್ಮಿಕ ಜೀವನವೂ ಉಚ್ಚತರದ್ದಾಗುತ್ತದೆ. ಇದರಿಂದ ಅವನ ಶರೀರವೂ ಅವನ ಲೈಂಗಿಕ ಸ್ಥಿತಿಯೂ ಶ್ರೇಷ್ಠತರದ್ದಾಗುತ್ತವೆ. ಆದರೆ ಈ ಕಾರ್ಯದಲ್ಲಿ ಪಂಚಾಕ್ಷರಗಳನ್ನು ಜಪಿಸಿ ಅವುಗಳ ಮೂಲಕ ತನ್ನ ಶರೀರವನ್ನೆಲ್ಲ ಮಂತ್ರಮಯವಾಗಿ ಮಾಡತಕ್ಕದ್ದು. ಈ ಭಾವವು ಮೇಲ್ಕಂಡ ವಿವರಣೆಯಲ್ಲಿರುತ್ತದೆ.

(೧೮೧) ನಿರಂಜನ ಪ್ರಣವಃ— ಏನೂ ಏನೂ ಎನಲಿಲ್ಲದ ಮಹಾಘನ ನಿರಂಜನಾತೀತವಾದ ನೆನಹು ಮಾತ್ರದಲ್ಲಿ ನಿರಂಜನ ಪ್ರಣಮವು ಉತ್ಪತ್ತಿಯನ್ನು ಹೊಂದುತ್ತದೆ. ಸೃಷ್ಟಿಯು ಆವಿರ್ಭಾವವಾಗುವ ಮೊದಲು ಪರಮಾತ್ಮನ ಶೂನ್ಯಧ ಮೊದಲಿನ ಸ್ಥಿತಿಯು ದ್ಯೋತಕವು ಇದಾಗಿದೆ.

(೧೮೨) ಅವಾಗ್ಜಃ— ನಿರಂಜನ ಪ್ರಣವದ ನೆನಹು ಮಾತ್ರದಿಂದ ಇದಾಗುತ್ತದೆ. ಇದಕ್ಕೆ ನಿರಂಜನ ಹಕಾರವೆಂಬ ಹೆಸರಿದೆ. ಅದು ಅವಾಚ್ಯ ಎಂದರೆ ಹೇಳಲಿಕ್ಕೆ ಬಾರದ ಪ್ರಣಮವೆಂದು ವಚನಕಾರರು ಹೇಳುತ್ತಾರೆ. ಅಲ್ಲಿ ನಾದವು ದಿವ್ಯವಾದದ್ದು, ಬಿಂದುವು ನಿರಾವರಣವಾದದ್ದು, ಮತ್ತು ಕಳೆಯು ನಿರುಪಮವಾದದ್ದೆಂದು ಹೇಳಲ್ಪಡುತ್ತಿದೆ. ಇಂಥ ಇವು ಮೂರು ಕೂಡಿದಲ್ಲಿ ಈ ಅವಾಗ್ಜ ಪ್ರಣಮವಾಗುವದು.

(೧೮೩) ಹಕಾರಃ— ಅದು ವಾಚ್ಯಪ್ರಣಮವು. ಅದಕ್ಕೆ ವಾಗ್ಜವೆಂಬ ಹೆಸರಿದೆ. ಅದು ಪರಮ ತೇಜೋರಾಶಿಯಾದ ಪರವಸ್ತು ಸ್ವರೂಪವಾಗಿರುತ್ತದೆ. ಅದು ಸರ್ವ ಚೈತನ್ಯಾತ್ಮಕವಾಗಿರುತ್ತದೆ ಅನಿರ್ವಾಚ್ಯವು ವಾಚ್ಯವಾದಲ್ಲಿ ಹಕಾರವಾಗುತ್ತದೆ. ಅದು ನಿರಂಜನ ಮತ್ತು ಅವಾಗ್ಜಕ್ಕಿಂತಲೂ ಸ್ಥೂಲವು.

(೧೮೪) ಹಂ, ಕ್ಷಂ: — ಪರಶಿವ ಮತ್ತು ಶಕ್ತಿ ಇವುಗಳನ್ನು ಈ ಅಕ್ಷರಗಳು ಸೂಚಿಸುತ್ತವೆ.

(೧೮೫) ಕಲಾಪ್ರಣವಃ— ಅವಾಚ್ಯ ಪ್ರಣವದ ನೆನಹು ಮಾತ್ರದಲ್ಲಿ ಕಲಾಪ್ರಣವದ ಉತ್ಪತ್ತಿಯು. ಅವಾಚ್ಯ ಪ್ರಣವದ ನೆನಹಿನಿಂದ ಚಿನ್ನಾದ, ಚಿದ್ಬಿಂದು, ಚಿತ್ಕಲೆಗಳು ಉದಯವಾಗುತ್ತವೆ. ಇದಕ್ಕೆ ಚಿತ್ಕಲಾಪ್ರಣವವೆಂತಲೂ ಹೇಳುತ್ತಾರೆ. ಅದರ ಚಿನ್ನಾದ ಕಲೆಯಲ್ಲಿ ೧೨ ಕಲೆಗಳು, ಚಿದ್ಬಿಂದು ಕಲೆಯಲ್ಲಿ ೧೬ ಕಲೆಗಳು, ಚಿತ್ಕಲೆಯಲ್ಲಿ ೧೦ ಕಲೆಗಳು ಅಂತು ೩೮ ಕಲೆಗಳು ಕೂಡಿ ಕಲಾಪ್ರಣವವಾಗುತ್ತದೆ. ಈ ಪ್ರತಿಯೊಂದು ಕಲೆಯು ಬಹು ಪ್ರಕಾಶಮಾನವಾದುದು. ಅದು ಬಹು ಸೂಕ್ಷ್ಮವಾದುದು.

(೧೮೬) ಅನಾದಿಪ್ರಣವಃ— ಚಿತ್ಕಳಾ ಪ್ರಣವದ ನೆನಹು ಮಾತ್ರದಿಂದ ಅನಾದಿ ಪ್ರಣವದ ಉತ್ಪತ್ತಿಯು. ಆದಿ ಅಕಾರ, ಉಕಾರ, ಮಕಾರವಿಲ್ಲದಂದು ಆದಿ ನಾದ ಬಿಂದು ಕಳೆಗಳಿಲ್ಲದಂದು ಅನಾದಿ ಪ್ರಣವ ಓಂಕಾರವು ಉಂಟಾಗುತ್ತದೆ.

(೧೮೭) ಬಕಾರಪ್ರಣವಃ— ಕಲಾಪ್ರಣವದಲ್ಲಿ ಉದಯವಾದ ಚಿನ್ನಾದದಿಂದ ಬಕಾರಪ್ರಣವವು ಉಂಟಾಗುತ್ತದೆ. ಅದಕ್ಕೆ ಪರನಾದವೆಂಬ ಹೆಸರು ಇದೆ. ಪರಶಕ್ತಿ ಸುನಾದ ಚೈತನ್ಯವೇ ಈ ಬಕಾರವು.

(೧೮೮) ಸಕಾರಪ್ರಣವಃ— ಕಲಾಪ್ರಣವದ ಚಿದ್ಬಿಂದುವಿನಿಂದ ಸಕಾರಪ್ರಣವದ ಉತ್ಪತ್ತಿಯು. ಅದಕ್ಕೆ ಪರಬಿಂದುವೆನ್ನುವರು. ಪರಶಕ್ತಿಯು ಚಿತ್‌ಪ್ರಭಾವರಣವೇ ಸಕಾರವು.

(೧೮೯) ವಕಾರ ಪ್ರಣವಃ— ಕಲಾಪ್ರಣವದ ಚಿತ್ಕಳೆಯಿಂದ ವಕಾರ ಪ್ರಣವದ ಉತ್ಪತ್ತಿಯು. ಅದಕ್ಕೆ ಪರಕಳೆ ಎಂದೆನ್ನುತ್ತಾರೆ. ಪರಶಕ್ತಿಯು ಚಿತ್ಕಲಾತೇಜದ ಪುಂಜವೇ ಈ ವಕಾರವು.

(೧೯೦) ಬ, ಸ, ವಾಕ್ಷರತ್ರಯಃ— ಈ ಪ್ರಣವಗಳು ಪರನಾದ ಪರಬಿಂದು ಪರಕಳೆಗಳು. ಇವುಗಳ ಮೇಲೆ ಮೂಲ ಪ್ರಕೃತಿಯು ಅವಲಂಬಿಸಿರುವದು. ಈ ಮೂರು ಅಕ್ಷರಗಳು ಮುಂದಿನ ಅ, ಉ, ಮ ಇವುಗಳಿಗೂ ಆಧಾರವಾಗಿವೆ. ಈ ಅ, ಉ, ಮ ಪ್ರಣವಗಳು ಹೆಚ್ಚಿಗೆ ಸ್ಥೂಲವಾದವುಗಳು ಮತ್ತು ಇವು ಅನಾದಿಪ್ರಣವದ ನೆನಹುಮಾತ್ರದಿಂದ ಉಂಟಾಗುತ್ತವೆ.

(೯೯೧) ಅಕಾರ ಪ್ರಣವು:— ಅದು ಆದಿನಾದವು. ಅದಾದರೂ ಚಿನ್ನಾದವೆಂದು ಹೇಳಲ್ಪಡುತ್ತದೆ. ಜಗತ್ತಿನಲ್ಲಿ ಸಂಹಾರಕೃತ್ಯವನ್ನೆಸಗುತ್ತದೆ. ಆದ್ದರಿಂದ ಅದು ರುದ್ರತತ್ತ್ವವು. ಓಂಕಾರ ಪ್ರಣವುದ ತಾರಕಾಕೃತಿ ಮತ್ತು ದಂಡಕಾಕೃತಿಗಳು ಅಕಾರಪ್ರಣವುದಲ್ಲಿ ಸಂಬಂಧಪಡುತ್ತವೆ.

(೯೯೨) ಉಕಾರ ಪ್ರಣವು:— ಇದು ಆದಿ ಬಿಂದುವು. ಅಥವಾ ಚಿದ್ಬಿಂದುವು. ಇದು ತಿರೋಧಾನ ಕೃತ್ಯವನ್ನೆಸಗುತ್ತದೆ. ಆದ್ದರಿಂದ ಅದು ಈಶ್ವರತತ್ತ್ವವು. ಓಂಕಾರಪ್ರಣವುದ ತಾರಕಾಕೃತಿ ಮತ್ತು ಅರ್ಧಚಂದ್ರಾಕೃತಿಗಳು ಇದಕ್ಕೆ ಸಂಬಂಧಪಡುತ್ತವೆ.

(೯೯೩) ಮಕಾರ ಪ್ರಣವು:— ಇದು ಆದಿಕಳೆಯು ಅಥವಾ ಚಿತ್ಕಳೆಯು ಇದೆ. ಇದು ಅನುಗ್ರಹಕೃತ್ಯವನ್ನೆಸಗುತ್ತದೆ. ಆದ್ದರಿಂದ ಅದು ಸದಾಶಿವತತ್ತ್ವವು. ಓಂಕಾರದ ಜ್ಯೋತಿರಾಕೃತಿ ಮತ್ತು ದರ್ಪಣಾಕೃತಿ ಇವುಗಳಿಗೆ ಸಂಬಂಧಿಸುತ್ತದೆ.

(೯೯೪) ಬೀಜಾಕ್ಷರಗಳು:— ಅ, ಉ, ಮ, ಬ, ಸ, ವ ಇವುಗಳಿಗೆ ಬೀಜಾಕ್ಷರಗಳೆಂದು ಹೆಸರಿದೆ. ಬ ಸ ವಾಕ್ಷರಗಳು ಚಿನ್ನಾದ ಚಿದ್ಬಿಂದು ಚಿತ್ಕಲಾ ಸ್ವರೂಪಗಳು. ಅ, ಉ, ಮಾಕ್ಷರಗಳು ಶಿವಶಕ್ತ್ಯಾತ್ಮಕವಾಗಿವೆ. ಅವೂ ಕೂಡ ಚಿತ್‌ಸ್ವರೂಪವುಳ್ಳವು. ಅವುಗಳಿಂದ ಮೂಲ ಪ್ರಣವವು ಉಂಟಾಗುತ್ತದೆ.

(೯೯೫) ಶಕ್ತಿಸಂಬಂಧದ ಪ್ರಣವುಗಳು:—ಉ, ಮ, ಅ ಈ ಕ್ರಮದಿಂದ ಜಪಗಳಿದ್ದಲ್ಲಿ, ಅವು ಶಕ್ತಿಸ ಬಂಧದಪ್ರಣವುಗಳೆಂದೆನಿಸಿಕೊಳ್ಳುತ್ತವೆ.

(೯೯೬) ಶಿವಸಂಬಂಧದ ಪ್ರಣವುಗಳು: – ಇಲ್ಲಿಯು ಜಪದ ಕ್ರಮವು ಅ, ಉ, ಮ ಹೀಗಿರುತ್ತದೆ.

(೯೯೭) ಶಿವಶಕ್ತಿರಹಿತಪ್ರಣವುಗಳು:— ಇಲ್ಲಿಯು ಜಪದ ಕ್ರಮವು ಮ, ಅ, ಉ ಹೀಗಿರುತ್ತದೆ.

(೯೯೮) ಶಿವಸಂಬಂಧ, ಶಕ್ತಿಸಂಬಂಧ ಮತ್ತು ಶಿವಶಕ್ತಿರಹಿತ ಪ್ರಣವುಗಳ ಕೂಟವು: – ಶಿವಸಂಬಂಧವಾದ ಪ್ರಣವುಗಳು, ಶಕ್ತಿಸಂಬಂಧವಾದ ಪ್ರಣವುಗಳು, ಶಿವಶಕ್ತಿರಹಿತ ಪ್ರಣವುಗಳು, ಇವು ಮೂರು ಕೂಡಿ ಏಕಾರ್ಥವಾದಲ್ಲಿ ಅಖಂಡ ಅಪ್ರಮಾಣ ವಾಚಾಮಗೋಚರಕ್ಕತ್ತತ್ತವಾದ

ಮಹಾಘನಕ್ಕೆ ಘನವಾದ ಉಪಮಾತೀತಕ್ಕೆ ಅತ್ಯತ್ತಮವಾದ ಸ್ಥಿತಿಯು ಇರುತ್ತದೆ.

(೧೯೯) ಶಿವಸಂಬಂಧದ ಪ್ರಣಮಗಳಿಂದಾದ ವಸ್ತುಗಳು:— ಇದರಲ್ಲಿ ಜ್ಯೋತಿಸ್ವರೂಪಪ್ರಣವು, ದರ್ಪಣಾಕಾರಪ್ರಣವ, ಅರ್ಧಚಂದ್ರಕಪ್ರಣವ, ಕುಂಡಲಾಕಾರಪ್ರಣವ, ದಂಡಸ್ವರೂಪಪ್ರಣವ, ತಾರಕಸ್ವರೂಪಪ್ರಣವ ಎಂದು ಆರು ಪ್ರಕಾರಗಳಿರುತ್ತವೆ.

(ಬ) ದರ್ಪಣಾಕಾರ ಪ್ರಣವದಲ್ಲಿ ಈಶಾನ್ಯಮುಖ, ಅರ್ಧಚಂದ್ರಕ ಪ್ರಣವದಲ್ಲಿ ತತ್ಪುರುಷಮುಖ, ಕುಂಡಲಾಕಾರ ಪ್ರಣವದಲ್ಲಿ ಅಘೋರಮುಖ, ದಂಡಸ್ವರೂಪ ಪ್ರಣವದಲ್ಲಿ ವಾಮದೇವಮುಖ, ತಾರಕಸ್ವರೂಪದಲ್ಲಿ ಸದ್ಯೋಜಾತಮುಖ ಉಂಟಾಗುತ್ತವೆ.

(ಕ) ಈಶಾನ್ಯಮುಖದಲ್ಲಿ ಸಾಯುಜ್ಯಪ್ರಣವು, ತತ್ಪುರುಷಮುಖದಲ್ಲಿ ಸಾಕಲ್ಯಪ್ರಣವು, ಅಘೋರಮುಖದಲ್ಲಿ ಶಾಂಭವಪ್ರಣವು, ವಾಮದೇವಮುಖದಲ್ಲಿ ಸ್ಯಾಸ್ಯಪ್ರಣವು (?) ಸದ್ಯೋಜಾತಮುಖದಲ್ಲಿ ಸೌಖ್ಯಪ್ರಣವು (?) ಉಂಟಾಗುತ್ತವೆ.

(೨೦೦) ಶಕ್ತಿ ಸ್ವರೂಪ ಪರಮ ಪ್ರಣಮಗಳಿಂದಾದ ವಸ್ತುಗಳು:— ಅವು ತಾರಕಸ್ವರೂಪ ಪ್ರಣವು, ದಂಡಕಸ್ವರೂಪ ಪ್ರಣವು, ಕುಂಡಲಾಕಾರ ಪ್ರಣವು, ಅರ್ಧಚಂದ್ರಕ ಪ್ರಣವು, ದರ್ಪಣಾಕಾರ ಪ್ರಣವು, ಜ್ಯೋತಿಸ್ವರೂಪ ಪ್ರಣವು ಎಂದು ಇರುತ್ತವೆ. ಇವು ಶಿವಸಂಬಂಧದ ಪ್ರಣಮಗಳ ಕ್ರಮಕ್ಕೆ ವಿರುದ್ಧ ಕ್ರಮದಲ್ಲಿರುತ್ತವೆ.

(೨೦೧) ಶಿವಶಕ್ತಿರಹಿತ ಪ್ರಣಮಗಳಿಂದಾದ ವಸ್ತುಗಳು:— ಅಖಂಡ ಮಹಾಜ್ಯೋತಿ ಪ್ರಣಮದಲ್ಲಿ ಮೂರ್ತಿಬ್ರಹ್ಮಪ್ರಣವು, ಪಿಂಡಬ್ರಹ್ಮಪ್ರಣವು, ಕಲಾಬ್ರಹ್ಮಪ್ರಣವು, ಬ್ರಹ್ಮಾನಂದಪ್ರಣವು, ವಿಜ್ಞಾನಬ್ರಹ್ಮಪ್ರಣವು, ಪರಬ್ರಹ್ಮಪ್ರಣವು ಇವುಗಳು ಉಂಟಾಗುತ್ತವೆ.

(೨೦೨) ಆದಿಪ್ರಣವ:— ಓಂಕಾರವೆಂಬ ಅನಾದಿ ಪ್ರಣವದ ನೆನಹುಮಾತ್ರದಿಂದ ಆದಿ ಅಕಾರ, ಆದಿ ಉಕಾರ, ಆದಿಮಕಾರಗಳು ಉಂಟಾಗುತ್ತವೆ. ಇವು ಅನುಕ್ರಮವಾಗಿ ಚಿನ್ನಾದ ಚಿದ್ಬಿಂದು ಚಿತ್ಕಲೆಗಳಾಗಿವೆ.

ಇವು ಮೂರು ಮತ್ತು ಮೂಲ ಚಿತ್ತು ಇವು ಕೂಡಿದಲ್ಲಿ ಓಂಕಾರ ಪ್ರಣವುವು ಉಂಟಾಗುತ್ತದೆ. ಇದು ಆದಿಪ್ರಣವುವು ಅದು ನಿತ್ಯಪರಿಪೂರ್ಣ ಪರಂಜ್ಯೋತಿ ಪರಬ್ರಹ್ಮವೆಂದು ತಿಳಿಯಬೇಕು. ಇದಕ್ಕೆಯೇ ಗೋಳಕಾಕಾರ ಪ್ರಣವು, ಮೂಲ ಪ್ರಣವುಗಳೆಂಬ ಹೆಸರುಗಳಿವೆ.

(೨೦೩) ಷಡ್ವಿಧ ಪ್ರಣವುಗಳು:— ಇವು ಜ್ಯೋತಿಸ್ವರೂಪ ಪ್ರಣವು, ದರ್ಪಣಾಕಾರ ಪ್ರಣವು, ಅರ್ಧಚಂದ್ರಕ ಪ್ರಣವು, ಕುಂಡಲಾಕಾರ ಪ್ರಣವು, ದಂಡಸ್ವರೂಪ ಪ್ರಣವು, ತಾರಕಸ್ವರೂಪ ಪ್ರಣವು ಹೀಗೆ ಇರುತ್ತವೆ. ಇವುಗಳಲ್ಲಿ ಪ್ರಣವಾದ ಮತ್ತು ಪಂಚಾಕ್ಷರಗಳ ಉದಯವು. ಇವು ಆರು ಆದಿಪ್ರಣವು ಅನಾದಿಪ್ರಣವು ಮತ್ತು ಚಿತ್ಕಲಾಪ್ರಣವು ಇವುಗಳಲ್ಲಿಯೂ ಕೂಡ ಆಯಾ ಸ್ವರೂಪಗಳಿಂದ ಇವೆ ಎಂದು ಭಾವಿಸಿ ಜಪಿಸಬೇಕು.

(೨೦೪) ಅಷ್ಟಾಕ್ಷರಗಳು:— ಇವು ಬ, ಸ, ವ; ಅ, ಉ, ಮ; ಹಂ, ಕ್ಷಂ ಎಂದು ಇವೆ. ಜಗತ್ತಿನ ಆಯಾ ಸ್ವರೂಪಗಳನ್ನು ಇವು ಸೂಚಿಸುತ್ತವೆ. ಈ ಬಗ್ಗೆ ಈ ಮೊದಲಿಗೇ ಹೇಳಲ್ಪಟ್ಟಿದೆ

(೨೦೫) ಐವತ್ತೆರಡಕ್ಷರಗಳ ಉತ್ಪತ್ತಿ:— ಗೋಳಕಾಕಾರ ಪ್ರಣವದ ಯಕಾರ ಬೀಜದಲ್ಲಿ ಅಕಾರದಿಂದ ಅಃಕಾರದ ವರೆಗೆ ಶೋಡಶಾಕ್ಷರಗಳ ಉತ್ಪತ್ತಿ, ವಕಾರ ಬೀಜವಲ್ಲಿ ಕಕಾರದಿಂದ ಠಕಾರದ ವರೆಗೆ ದ್ವಾದಶಾಕ್ಷರಗಳ ಉತ್ಪತ್ತಿ, ಶಿಕಾರ ಬೀಜದಲ್ಲಿ ಡಕಾರದಿಂದ ಫಕಾರದ ವರೆಗೆ ದಶಾಕ್ಷರಗಳ ಉತ್ಪತ್ತಿ, ಮಕಾರ ಬೀಜದಲ್ಲಿ ಬಕಾರದಿಂದ ಲಕಾರದ ವರೆಗೆ ಆರಕ್ಷರಗಳ ಉತ್ಪತ್ತಿ. ನಕಾರ ಬೀಜದಲ್ಲಿ ವಕಾರದಿಂದ ಸಕಾರದ ವರೆಗೆ ನಾಲ್ಕಕ್ಷರಗಳ ಉತ್ಪತ್ತಿ ಹೀಗೆ ಇರುತ್ತದೆ. ಈ ಅಕ್ಷರಗಳನ್ನು ಅರಿವಿನಿಂದ ಅರಿದರೆ ಅವು ಪುನಃ ನ ಮ ಶಿ ವಾ ಯ ಆರಕ್ಷರಗಳಾಗುತ್ತವೆ. ಮುಂದೆ ಆರಂಭದ ಸ್ವರಾಕ್ಷರಗಳು ಅಕಾರ ಪ್ರಣವುದಲ್ಲಿ ಕಕಾರಾದಿ ಭಕಾರಾಂತ್ಯವಾದ ೨೫ ವಿಕಲಾಕ್ಷರಗಳು ಉಕಾರ ಪ್ರಣವುದಲ್ಲಿ ಕಡೆಯ ಮಕಾರಾದಿ ಕ್ಷಕಾರಾಂತ್ಯವಾದ ೧೧ ವ್ಯಾಪಕಾಕ್ಷರಗಳು ಮಕಾರ ಪ್ರಣವುದಲ್ಲಿ ಲಯವಾಗುತ್ತವೆ. ಇವುಗಳನ್ನು ಸಹ ಬೀಜಾಕ್ಷರಗಳೆಂತಲೂ ಒಮ್ಮೊಮ್ಮೆ ಕರೆಯುವದುಂಟು.

(೨೦೬) ಪಂಚಾಕ್ಷರಃ— ನ ಮಃ ಶಿ ವಾ ಯ ಇದು ಪಂಚಾಕ್ಷರ ಮಂತ್ರವು. ಇದು ಪ್ರಣವರಹಿತವಾಗಿರುತ್ತದೆ. ಕೇವಲ ಶಕ್ತಿದ್ಯೋತಕವಾಗಿದೆ. ಹಾಗೆಯೇ ಪಂಚ ಬ್ರಹ್ಮದ ದ್ಯೋತಕವೂ ಇರುತ್ತದೆ.

(೨೦೭) ಮೂಲಪಂಚಾಕ್ಷರ ಮಂತ್ರಃ — ಓಂ ನ ಮಃ ಶಿ ವಾ ಯ ಇದು ಮೂಲ ಪಂಚಾಕ್ಷರ ಮಂತ್ರ. ಇದಕ್ಕೆ ಷಡಕ್ಷರಿ ಮಂತ್ರ, ಶಿವಷಡಕ್ಷರಿ ಮಂತ್ರ ಎಂದು ಬೇರೆ ಹೆಸರುಗಳೂ ಇವೆ. ಇದರ ಅಂಗಗಳನ್ನರಿಯದೆ ಜಪಿಸಿದ್ದಾದರೆ ಅದು ನಿಷ್ಫಲವೆಂದು ವಚನಕಾರರ ಅಭಿಪ್ರಾಯವು. ಈ ಷಡಕ್ಷರವು ಜಗತ್ತನ್ನೆಲ್ಲ ವ್ಯಾಪಿಸಿರುತ್ತದೆ. ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವಿನ ವ್ಯಾಪಾರವು ಈ ಷಡಕ್ಷರಿಯಲ್ಲಿರುವ ಪ್ರಣವಾಕ್ಷರಗಳಿಂದ ಹೊರಡುವ ಶಕ್ತಿಗಳ ಮೂಲಕ ನಡೆಯುತ್ತಿದೆ. ಜಗತ್ತಿನಲ್ಲಿಯ ಎಲ್ಲ ವಸ್ತುಗಳನ್ನು ೫ ವಿಭಾಗಗಳನ್ನಾಗಿ ವಚನಕಾರರು ವಿಭಾಗಿಸುವದುಂಟು. ಈ ಪ್ರತಿಯೊಂದು ವಿಭಾಗದ ಮೇಲೆ, ಒಂದೊಂದು ಪ್ರಣಮವು ಪರಿಣಾಮ ಮಾಡುತ್ತದೆ. ಈ ಐದಕ್ಕೆಲ್ಲ ಪ್ರಾಣಮೂರ್ತಿಯಾಗಿರುವದು ಓಂಕಾರವು. ಪಂಚಾಕ್ಷರಗಳಿಗೆ ಈ ಪ್ರಣಮವು ಕೂಡಿದಲ್ಲಿ ಅದು ಪ್ರಣಮ ಪಂಚಾಕ್ಷರೀ ಮಂತ್ರವು ಅಥವಾ ಷಡಕ್ಷರೀ ಮಂತ್ರವು ಎಂದು ಹೇಳಲ್ಪಡುತ್ತಿದೆ. ಇದು ಆರು ಅವಯವಗಳುಳ್ಳದ್ದು. ಅವು ಅನುಕ್ರಮವಾಗಿ ಪರಮಾತ್ಮನ ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತೃತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತಿತ್ವ ಈ ಗುಣಗಳನ್ನು ಸೂಚಿಸುತ್ತವೆ. ಇದರ ಅಕ್ಷರಗಳು ಯಾವ ಯಾವ ವಿಷಯಗಳನ್ನು ಸೂಚಿಸುತ್ತವೆಂಬುದನ್ನು ನಾವು ಹಿಂದೆಯೇ ನಂ॥ ೧೮೦ ಇದರಲ್ಲಿ ವಿವರಿಸಿದ್ದೇವೆ.

(೨೦೮) ಪಂಚಾಕ್ಷರ ಮತ್ತು ಷಡಕ್ಷರಗಳ ಪರಸ್ಪರ ಸಂಬಂಧ -- ಪಂಚಾಕ್ಷರವು ಕೇವಲ ಶಕ್ತಿ ಮಂತ್ರವು. ಆದರೆ ಷಡಕ್ಷರವು ಶಿವಮಂತ್ರವೆಂದು ಹೇಳಲ್ಪಡುತ್ತದೆ. ಶಕ್ತಿ ಮಂತ್ರದಲ್ಲಿ ಓಂಕಾರ ಸಂಬಂಧಿಸಿದಲ್ಲಿ ಅದು ಶಿವ ಮಂತ್ರ ಅಥವಾ ಶಿವಶಕ್ತಿಮಂತ್ರವೆಂದು ಹೇಳಲ್ಪಡುತ್ತದೆ. ಓಂಕಾರದ ಸಂಬಂಧದಿಂದ ಶಕ್ತಿಗಳು ವ್ಯವಸ್ಥಿತವಾಗಿ ಲಿಂಗದೊಡನೆ ಹರಿಯುವವು. ಇದನ್ನೇ ವೀರಶೈವರು ಜಪಿಸುವುದು.

(೨೦೯) ಮೂರು ಶರೀರಗಳಿಗೆ ಪ್ರಣವ ಸಂಬಂಧ— ಶರೀರಗಳು ಸ್ಥೂಲ, ಸೂಕ್ಷ್ಮ, ಕಾರಣಗಳೆಂದು ಇವೆ. ಸ್ಥೂಲ ಶರೀರದಲ್ಲಿ ಬಕಾ

ರವು, ಸೂಕ್ಷ್ಮ ಶರೀರದಲ್ಲಿ ಸಕಾರವು, ಕಾರಣ ಶರೀರದಲ್ಲಿ ವಕಾರವು ಇರುತ್ತವೆ.

(೨೧೦) ನಾದಬಿಂದ ಕಳೆಗಳಿಗೆ ಪ್ರಣವ ಸಂಬಂಧಃ—

ನಾದದಲ್ಲಿ ಅಕಾರವು, ಬಿಂದುವಿನಲ್ಲಿ ಉಕಾರವು ಕಳೆಯಲ್ಲಿ ಮಕಾರವು ಇರುತ್ತವೆ.

(೨೧೧) ಜೀವತ್ರಯಗಳಿಗೆ ಪ್ರಣವ ಸಂಬಂಧಃ— ವಿಶ್ವ ತೈಜಸ, ಪ್ರಾಜ್ಞ ಇವು ಜೀವತ್ರಯಗಳು. ವಿಶ್ವದಲ್ಲಿ ಅಕಾರವು, ತೈಜಸದಲ್ಲಿ ಉಕಾರವು ಪ್ರಾಜ್ಞದಲ್ಲಿ ಮಕಾರವು, ಇರುತ್ತವೆ.

(೨೧೨) ಶೂನ್ಯಚಕ್ರಗಳಲ್ಲಿ ಪ್ರಣವ ಸಂಬಂಧಃ— ಬ್ರಹ್ಮರಂಧ್ರದಲ್ಲಿ ಓಂಕಾರ, ಅಕಾರ, ಬಕಾರಗಳು ಶಿಖಿಯಲ್ಲಿ ಕ್ಷಕಾರ, ಉಕಾರ, ಸಕಾರಗಳು ಮತ್ತು ಪಶ್ಚಿಮ ಚಕ್ರದಲ್ಲಿ ಹಕಾರ, ಮಕಾರ, ವಕಾರಗಳು ಇರುತ್ತವೆ.

(೨೧೩) ಪಂಚಭೂತಗಳಿಗೆ ಪ್ರಣವ ಸಂಬಂಧ— ಪ್ರಕೃತಿ ಅಥವಾ ಆತ್ಮನಲ್ಲಿ ಓಂಕಾರವು. ಪೃಥ್ವಿಯಲ್ಲಿ ನಕಾರವು ಅಪ್ಪುವಿನಲ್ಲಿ ಮಕಾರವು ಅಗ್ನಿಯಲ್ಲಿ ಶಿಕಾರವು ವಾಯುವಿನಲ್ಲಿ ವಕಾರವು ಆಕಾಶದಲ್ಲಿ ಯಕಾರವು ಇರುತ್ತವೆ.

(೨೧೪) ಕರ್ಮೇಂದ್ರಿಯಗಳಿಗೆ ಪ್ರಣವ ಸಂಬಂಧ—

(ಅ) ಇವು ವಾಕ್ಕು ಪಾಣಿ ಪಾದ ಪಾಯುಗಳಿವೆ. ವಾಕ್ಕಿನಲ್ಲಿ ಯಕಾರ ಪಾಣಿಯಲ್ಲಿ ವಕಾರ ಪಾದದಲ್ಲಿ ಶಿಕಾರ ಪಾಯುವಿನಲ್ಲಿ ಮಕಾರ ಮತ್ತು ಗುಹ್ಯದಲ್ಲಿ ನಕಾರ ಇರುತ್ತವೆ.

(ಬ) ಮಸ್ತಕ, ಮುಖ, ಹೃದಯ, ಗುಹ್ಯ ಮತ್ತು ಪಾದಗಳು ಶರೀರದ ಅವಯವಗಳು. ಮಸ್ತಕದಲ್ಲಿ ಯಕಾರವು, ಮುಖದಲ್ಲಿ ವಕಾರವು, ಹೃದಯದಲ್ಲಿ ಶಿಕಾರವು, ಗುಹ್ಯದಲ್ಲಿ ಮಕಾರವು, ಪಾದದಲ್ಲಿ ನಕಾರವು ಇರುತ್ತವೆ.

(೨೧೫) ಜ್ಞಾನೇಂದ್ರಿಯಂಗಳಿಗೆ ಪ್ರಣವ ಸಂಬಂಧಃ—

(ಅ) ಶ್ರೋತ್ರ, ತ್ವಕ್ಕು, ನೇತ್ರ, ಜಿಹ್ವೆ, ಘ್ರಾಣ, ಹೃದಯೇಂದ್ರಿಯ ಇವು ಜ್ಞಾನೇಂದ್ರಿಯಗಳು. ಶ್ರೋತ್ರಕ್ಕೆ ಯಕಾರ, ತ್ವಕ್ಕಿಗೆ ವಕಾರ, ನೇತ್ರಕ್ಕೆ

ಶಿಕಾರ, ಜಿಹ್ವೆಗೆ ಮಕಾರ, ಘ್ರಾಣಕ್ಕೆ ನಕಾರ ಮತ್ತು ಹೃದಯೇಂದ್ರಿಯಕ್ಕೆ ಓಂಕಾರ ಸಂಬಂಧವಿರುತ್ತವೆ.

(ಬ) ಲಲಾಟ, ಶ್ರೋತ್ರ, ತ್ವಕ್ಕು, ನೇತ್ರ. ಜಿಹ್ವೆ, ನಾಸಾ ಪುಟ ಇವು ಶರೀರದ ಅವಯವಗಳು. ಲಲಾಟದಲ್ಲಿ ಓಂಕಾರ, ಶ್ರೋತ್ರದಲ್ಲಿ ಯಕಾರ, ತ್ವಕ್ಕಿಯಲ್ಲಿ ವಕಾರ, ನೇತ್ರದಲ್ಲಿ ಶಿಕಾರ, ಜಿಹ್ವೆಯಲ್ಲಿ ಮಕಾರ, ನಾಸಾಪುಟದಲ್ಲಿ ನಕಾರ ಇವುಗಳು ಇರುತ್ತವೆ.

(೨೧೬) ವಿಷಯುಗಳಿಗೆ ಪ್ರಣವು ಸಂಬಂಧ:— ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಶರೀರ ವಿಷಯುಗಳು ಶಬ್ದಕ್ಕೆ ಯಕಾರ ಸ್ಪರ್ಶನಕ್ಕೆ ವಕಾರ, ರೂಪಕ್ಕೆ ಶಿಕಾರ, ರಸಕ್ಕೆ ಮಕಾರ, ಗಂಧಕ್ಕೆ ನಕಾರ, ಸಂಬಂಧವಿರುತ್ತವೆ.

(೨೧೭) ಅಂತಃಕರಣಗಳಿಗೆ ಪ್ರಣವು ಸಂಬಂಧಃ--- ಇವು ಚಿತ್ತ ಬುದ್ಧಿ, ಅಹಂಕಾರ, ಮನ, ಜ್ಞಾನಗಳಿರುತ್ತವೆ. ಚಿತ್ತಿಗೆ ನಕಾರವು, ಬುದ್ಧಿಗೆ ಮಕಾರವು, ಅಹಂಕಾರಕ್ಕೆ ಶಿಕಾರವು, ಮನಕ್ಕೆ ವಕಾರವು, ಜ್ಞಾನಕ್ಕೆ ಯಕಾರವು, ಸಂಬಂಧಪಡುತ್ತವೆ.

(೨೧೮) ವಾಯುಗಳಿಗೆ ಪ್ರಣವು ಸಂಬಂಧಃ- ಪ್ರಾಣ, ಅಪಾನ ವ್ಯಾನ, ಉದಾನ, ಸಮಾನ ಇವು ವಾಯುಗಳು. ಪ್ರಾಣಕ್ಕೆ ನಕಾರವು ಅಪಾನಕ್ಕೆ ಮಕಾರವು, ವ್ಯಾನಕ್ಕೆ ಶಿಕಾರವು, ಉದಾನಕ್ಕೆ ವಕಾರವು, ಸಮಾನಕ್ಕೆ ಯಕಾರವು ಸಂಬಂಧಪಡುತ್ತವೆ.

(೨೧೯) ಸಪ್ತಧಾತುಗಳಿಗೆ ಪ್ರಣವು ಸಂಬಂಧಃ--

೧ನೇ ವಿಧಃ-- ತ್ವಕ್ಕು, ರುಧಿರ, ಮಾಂಸ, ಮೇಧಸ್ಸು, ಅಸ್ತಿ ಮಜ್ಜೆ, ಇವು ಧಾತುಗಳು. ತ್ವಕ್ಕಿಗೆ ಓಂಕಾರ ರುಧಿರಕ್ಕೆ ನಕಾರ, ಮಾಂಸಕ್ಕೆ ಮಕಾರ, ಮೇಧಸ್ಸಿಗೆ ಶಿಕಾರ, ಅಸ್ತಿಗೆ ವಕಾರ, ಮಜ್ಜೆಗೆ ಯಕಾರ ಸಂಬಂಧಿಸುತ್ತವೆ.

(ಬ) ೨ನೇ ವಿಧಃ— ಚರ್ಮ, ಅಸ್ತಿ, ಮಾಂಸ, ಮಜ್ಜೆ, ರಕ್ತ, ಪ್ರಾಣ ಇವು ಧಾತುಗಳು. ಚರ್ಮದಲ್ಲಿ ನಕಾರವು, ಅಸ್ತಿಯಲ್ಲಿ ಮಕಾರವು, ಮಾಂಸದಲ್ಲಿ ಶಿಕಾರವು, ಮಜ್ಜೆಯಲ್ಲಿ ವಕಾರವು, ರಕ್ತದಲ್ಲಿ ಯಕಾರವು, ಪ್ರಾಣದಲ್ಲಿ ಓಂಕಾರವು, ಸಂಬಂಧಪಡುತ್ತವೆ.

(೨೨೦) ಶ್ಲೇಷ್ಮ, ಶುಕ್ಲ, ರಸ, ಪಿತ್ತ ಇವುಗಳಿಗೆ ಪ್ರಣವು ಸಂಬಂಧಃ— ಶ್ಲೇಷ್ಮಕ್ಕೆ ಯಕಾರ, ಶುಕ್ಲಕ್ಕೆ ಶಿಕಾರ, ರಸಕ್ಕೆ ನಕಾರ, ಪಿತ್ತಕ್ಕೆ ವಕಾರ ಸಂಬಂಧಪಡುತ್ತವೆ.

(೨೨೧) ಮನುಷ್ಯನಿಗೆ ಕ್ಷುಧೆ. ತೃಷ್ಣೆ, ನಿದ್ರೆ, ಆಲಸ್ಯ, ಸಂಗ ಇವುಗಳಿರುತ್ತವೆ. ಕ್ಷುಧೆಯಲ್ಲಿ ನಕಾರವು, ತೃಷ್ಣೆಯಲ್ಲಿ ಮಕಾರವು, ನಿದ್ರೆಯಲ್ಲಿ ಶಿಕಾರವು, ಆಲಸ್ಯದಲ್ಲಿ ವಕಾರವು, ಸಂಗದಲ್ಲಿ ಯಕಾರವು ಸಂಬಂಧಪಡುತ್ತವೆ. ಇವುಗಳಿಂದ ಇಂಥವುಗಳ ಆಸಕ್ತಿಯನ್ನು ದೂರ ಮಾಡಬಹುದು.

(೨೨೨) ಮನುಷ್ಯನಿಗೆ ಮೋಹ, ಭಯ, ರಾಗ, ಲಜ್ಜೆ ದ್ವೇಷಗಳಿರುತ್ತವೆ. ಮೋಹದಲ್ಲಿ ಯಕಾರ, ಭಯದಲ್ಲಿ ವಕಾರ, ರಾಗವಲ್ಲಿ ಶಿಕಾರ, ಲಜ್ಜೆಯಲ್ಲಿ ಮಕಾರ, ದ್ವೇಷದಲ್ಲಿ ನಕಾರ ಸಂಬಂಧಪಡುತ್ತವೆ. ಇವುಗಳ ಮೂಲಕ ಈ ದೋಷಗಳನ್ನು ದೂರ ಮಾಡಬಹುದು.

(೨೨೩) ಪದಾರ್ಥಗಳಿಗೆ ಕಠಿಣ ಅಥವಾ ಮೃದು ಹೀಗೆ ಧರ್ಮಗಳಿರುತ್ತವೆ. ಕ್ಲಂ ಇದು ಕಠಿಣಕ್ಕೆ, ಕ್ಲಿಂ ಇದು ಮೃದುವಿಗೆ ಸಂಬಂಧವಿರುತ್ತವೆ.

(೨೨೪) ಮನುಷ್ಯನಿಗೆ ಅಸ್ಥಿ, ಮಾಂಸ, ತ್ವಕ್ಕು, ನಾಡಿ, ರೋಮಗಳಿವೆ. ಇವುಗಳಲ್ಲಿ ಅಸ್ಥಿಗೆ ನಕಾರ, ಮಾಂಸಕ್ಕೆ ಮಕಾರವು, ತ್ವಕ್ಕಿಗೆ ಶಿಕಾರವು, ನಾಡಿಗೆ ವಕಾರವು, ರೋಮಕ್ಕೆ ಯಕಾರವು ಸಂಬಂಧಪಡುತ್ತವೆ.

(೨೨೫) ಶರೀರದ ಪಾರ್ಶ್ವಗಳಿಗೆ ಪ್ರಣವು ಸಂಬಂಧಃ— ಶರೀರದ ಬಲಭಾಗದಲ್ಲಿ ಓಂಕಾರ, ಎಡಭಾಗದಲ್ಲಿ ಉಕಾರ, ಮುಂಭಾಗದಲ್ಲಿ ಅಕಾರ, ಹಿಂಭಾಗದಲ್ಲಿ ಮಕಾರ, ಊರ್ಧ್ವಭಾಗದಲ್ಲಿ ಹಕಾರಗಳಿರುತ್ತವೆ.

(೨೨೬) ಶರೀರಕ್ಕೆ ಪ್ರಣವು ಸಂಬಂಧಃ—

(ಅ) ಶರೀರಕ್ಕೆ ಮುಖ, ಎರಡು ಭುಜಗಳು, ದೇಹಮಧ್ಯ, ಎರಡು ಪಾದಗಳು ಇರುತ್ತವೆ ಮುಖದಲ್ಲಿ ಓಂಕಾರ, ಎರಡು ಭುಜಗಳಲ್ಲಿ

ವಕಾರ ಯಕಾರಗಳು, ದೇಹಮಧ್ಯದಲ್ಲಿ ಶಿಕಾರ ಎರಡು ಪಾದಗಳಲ್ಲಿ ನಕಾರ ಮಕಾರಗಳು ಇರುತ್ತವೆ.

(ಬ) ಶರೀರಕ್ಕೆ ಬಲಪಾದ, ಎಡಪಾದ, ಮಧ್ಯನಾಭಿ, ಬಲಹಸ್ತ, ಎಡಹಸ್ತ, ಮತ್ತು ಮಸ್ತಕಗಳಿವೆ. ಬಲಪಾದದಲ್ಲಿ ನಕಾರ ಎಡಪಾದದಲ್ಲಿ ಮಕಾರ, ಮಧ್ಯನಾಭಿಯಲ್ಲಿ ಶಿಕಾರ, ಬಲಹಸ್ತದಲ್ಲಿ ವಕಾರ, ಎಡಹಸ್ತದಲ್ಲಿ ಯಕಾರ ಮತ್ತು ಮಸ್ತಕದಲ್ಲಿ ಓಂಕಾರಗಳಿರುತ್ತವೆ.

(೨೨೭) ಶರೀರದ ಉಪಾಂಗಗಳಲ್ಲಿ ಪ್ರಣವ ಸಂಬಂಧ –

(ಅ) ಬಲಹಸ್ತದ ಮಧ್ಯದಲ್ಲಿ ಓಂಕಾರ, ಹೆಬ್ಬೆರಳಿನಲ್ಲಿ ಯಕಾರ ಉಳಿದ ನಾಲ್ಕು ಬೆರಳುಗಳಲ್ಲಿ ನ, ಮ, ಶಿ, ವ ಈ ಪ್ರಣವಗಳು ಸಂಬಂಧಿಸುತ್ತವೆ.

ಹಸ್ತದ ಮೇಲುಭಾಗಕ್ಕೆ ಅಕಾರ, ಮುಂಗಯ್ಯಿಗೆ ಬಕಾರ, ಮೊಳಕೆಯ್ಯಿಗೆ ಉಕಾರ, ರಟ್ಟೆಯಲ್ಲಿ ಸಕಾರ, ಭುಜದಲ್ಲಿ ಮಕಾರ, ಹೆಗಲಲ್ಲಿ ವಕಾರ ಸಂಬಂಧಿಸುತ್ತವೆ.

(ಬ) ಉಭಯ ತಳಪಾದದಲ್ಲಿ ಓಂಕಾರ, ಉಭಯ ಪಾದಾಂಗುಷ್ಠದಲ್ಲಿ ಯಕಾರ, ಉಭಯ ನಾಲ್ಕು ಬೆರಳುಗಳಲ್ಲಿ ನ, ಮ, ಶಿ, ವ ಈ ನಾಲ್ಕು ಪ್ರಣವಗಳು ಸಂಬಂಧಿಸುತ್ತವೆ.

ಉಭಯ ಪಾದ ಮೇಲು ಭಾಗದಲ್ಲಿ ಅಕಾರ, ಉಭಯ ಪಾದದ ಹರಡಿನಲ್ಲಿ ಉಕಾರ, ಉಭಯಪಾದದ ದಂತದ ಹರಡಿನಲ್ಲಿ ಬಕಾರ, ಉಭಯ ಪಾದದ ಹಿಮ್ಮಡದಲ್ಲಿ ಮಕಾರ, ಉಭಯ ಕಣಕಾಲಲ್ಲಿ ನಕಾರ, ಉಭಯಪಾದ ಮೊಳಕಾಲಲ್ಲಿ ಹಕಾರ, ಕಿರುದೊಡೆಗಳಲ್ಲಿ ಅಕಾರ, ಹಿಂದೊಡೆಯಲ್ಲಿ ಉಕಾರ, ಉಭಯಾಂಗದಲ್ಲಿ ಮಕಾರ ಸಂಬಂಧಿಸುತ್ತವೆ.

(೨೨೮) ಉಭಯ ಬರಕಿಯಲ್ಲಿ ನಮಶ್ಶಿವಾಯ, ಉಭಯ ಮೊಲೆಯಲ್ಲಿ ಓಂಕಾರ; ಕಕ್ಷೆಯಲ್ಲಿ ಅಕಾರ, ಹೃದಯದಲ್ಲಿ ಉಕಾರ, ಕಂಠದಲ್ಲಿ ಮಕಾರ; ಉಭಯ ಬಗಲಲ್ಲಿ ಬಕಾರ, ಹೆಡಕಿನಲ್ಲಿ ಸಕಾರ, ಹೆಡಕಿನ ಎಡಬಲದಲ್ಲಿ ವಕಾರ; ಉಭಯಕರ್ಣದಲ್ಲಿ ಓಂಕಾರ ಆಲಿಯಲ್ಲಿ ಯಕಾರ ಕಿರಿಯಾಲಿಯಲ್ಲಿ ವಕಾರ; ಕರ್ಣ ಮತ್ತು ಊರ್ಧ್ವ ಭಾಗ

ನಯನಗಳಲ್ಲಿ ಅಕಾರ ಬಕಾರಗಳು, ಎಡಭಾಗದ ನಯನಗಳಲ್ಲಿ ಉಕಾರ ಸಕಾರಗಳು ಉಭಯ ನಯನ ಮಧ್ಯದಲ್ಲಿ ಮಕಾರ ವಕಾರಗಳು, ಉಭಯ ಗಲ್ಲಗಳಲ್ಲಿ ಓಂಕಾರ ಇವುಗಳು ಸಂಬಂಧಪಡುತ್ತವೆ.

(೨೯) ಚಕ್ರಗಳಿಗೆ ಪ್ರಣವ ಸಂಬಂಧಃ— ಆಧಾರದಲ್ಲಿ ನಕಾರ, ಸ್ವಾಧಿಷ್ಠಾನದಲ್ಲಿ ಮಕಾರ, ಮಣಿಪೂರಕದಲ್ಲಿ ಶಿಕಾರ, ಅನಾಹತದಲ್ಲಿ ವಕಾರ, ವಿಶುದ್ಧಿಯಲ್ಲಿ ಯಕಾರ, ಆಜ್ಞೆಯಲ್ಲಿ ಓಂಕಾರಗಳು ಇರುತ್ತವೆ.

(೨೩೦) ರೇಚಕದಲ್ಲಿ ಅಕಾರ, ಪೂರಕವಲ್ಲಿ ಉಕಾರ, ಕುಂಭಕದಲ್ಲಿ ಮಕಾರ ಸಂಬಂಧಿಸುತ್ತವೆ.

ಟೀಪುಃ— ಶಿವಶರಣರು ಶರೀರ, ಪದಾರ್ಥ, ಗುಣ ಮತ್ತು ಅವಯವ ಇವುಗಳು ಯಾವ ಪ್ರಣವಕ್ಕೆ ಸಂಬಂಧಿಸಿವೆ ಎಂಬುದನ್ನು ಹೇಳುವಲ್ಲಿ ಅವರು ಕೆಲವೊಂದು ಕಾರಣವನ್ನು ಮುಂದಿಟ್ಟುಕೊಂಡು ಸಂಬಂಧವನ್ನು ಹೇಳುವದುಂಟು. ಪಂಚಭೂತಗಳಿಂದ ಜಗತ್ತಿನಲ್ಲಿಯ ಪ್ರತಿಯೊಂದು ಪದಾರ್ಥವು ಉತ್ಪನ್ನವಾಗುತ್ತದೆಂದು ಹಿಂದೂ ಜನರ ಮುಖ್ಯ ತತ್ವವಿದೆ. ಇದಕ್ಕನುಸರಿಸಿಯೇ ಶಿವಶರಣರಲ್ಲಿ ಪ್ರಣವ ಪಂಚಾಕ್ಷರಿಯ ರಚನೆ ಇದೆ. ಅದರ ಪ್ರತಿಯೊಂದು ಪ್ರಣವವು ಒಂದೊಂದು ಭೂತಕ್ಕೆ ಸಂಬಂಧಿಸಿದೆ. (ವ॥ ೨೧೩ ನೋಡಿರಿ.) ಆದ್ದರಿಂದ ಪಂಚಭೂತಗಳ ಗುಣಗಳನ್ನು ಮೊದಲು ಅರಿತುಕೊಳ್ಳಬೇಕು. ಉದಾಃ – ಪೃಥ್ವಿಯ ತತ್ವವು ಎಲ್ಲಕ್ಕೂ ಸ್ಥೂಲವಾದದ್ದು. ಭೂತಗಳು ಮುಂದೆ ಸೂಕ್ಷ್ಮವಾಗುತ್ತವಾಗುತ್ತ ಆಕಾಶತತ್ವದ ವರೆಗೂ ಹೋಗುತ್ತವೆ. ಹೀಗೆ ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ ಇವುಗಳ ಗುಣಗಳಂತೆ ಪದಾರ್ಥಗಳಲ್ಲಿಯೂ ವಿಭಾಗಗಳು ಉಂಟಾಗಿವೆ. ಹೀಗೆ ಆಯಾ ಇಂದ್ರಿಯಗಳಲ್ಲಿ, ವಿಷಯಗಳಲ್ಲಿ, ಪದಾರ್ಥಗಳ ಗುಣಗಳಲ್ಲಿ, ರಚನೆಯಲ್ಲಿ, ಕ್ರಿಯೆಗಳಲ್ಲಿ ಪಂಚಮಹಾಭೂತಗಳ ಪ್ರಕಾರ ಐದೈದು ವಿಭಾಗಗಳು ಕಲ್ಪಿಸಲ್ಪಟ್ಟಿವೆ. ಈ ವಿಭಾಗಗಳು ಮೊದಲು ಸ್ಥೂಲವಾಗಿದ್ದು ಬರಬರುತ್ತ ಅವು ಸೂಕ್ಷ್ಮವಾಗುತ್ತ ಹೋಗುತ್ತವೆ. ಹೀಗಾಗಲಿಕ್ಕೆ ಅವುಗಳಲ್ಲಿರುವ ಪಂಚಭೂತ ತತ್ವಗಳೇ ಕಾರಣಗಳಾಗಿವೆ. ಮಂತ್ರಗಳನ್ನು ಸಂಬಂಧಿಸುವಲ್ಲಿ ವಾಚಕರು ಈ ತೆರದ ಭೇದಗಳನ್ನು ಮೊದಲು ಅರಿತುಕೊಳ್ಳಬೇಕು. ಅರಿತುಕೊಂಡಲ್ಲಿ ಕೆಲವೊಂದು ಪದಾರ್ಥಕ್ಕೆ ಒಂದು ವಿಶಿಷ್ಟ ಪ್ರಣವನ್ನು ಏಕೆ ಶಿವ

ಶರಣರು ಇಟ್ಟಿರುವರೆಂಬುದು ತಿಳಿಯುತ್ತದೆ. ಬೇರೆ ಬೇರೆ ಪ್ರಣವಗಳಿಂದಲೇ ಆಯಾ ಗುಣಗಳು ಆಯಾ ಪದಾರ್ಥಗಳಲ್ಲಿ ಉಂಟಾಗಿರುತ್ತವೆಂದು ಅವರ ತತ್ವವಿದೆ. ಆದ್ದರಿಂದ ಆಯಾ ಪದಾರ್ಥಗಳನ್ನು ಆ ಪ್ರಣವಕ್ಕೆಯೇ ಸಂಬಂಧಿಸತಕ್ಕದ್ದು. ಹೀಗೆಯೇ ಶರೀರವು, ಶರೀರದ ಮುಖ್ಯಭಾಗಗಳು, ಅದರ ಅವಯವಗಳು ಸಹ ಬೇರೆ ಬೇರೆ ಪ್ರಣವಗಳಿಗೆ ಸಂಬಂಧಪಡುತ್ತವೆ. ಒಮ್ಮೊಮ್ಮೆ ಪದಾರ್ಥಗಳ ಕೆಲವೊಂದು ವರ್ಗವನ್ನು ಕಲ್ಪಿಸುವಲ್ಲಿ ಒಂದು ದೃಷ್ಟಿಯನ್ನಿಟ್ಟುಕೊಂಡು ಅದನ್ನು ರಚಿಸಿರುತ್ತಾರೆ. ಆದರೆ ಬೇರೊಂದು ವರ್ಗವನ್ನು ಕಲ್ಪಿಸುವಲ್ಲಿ ಬೇರೊಂದು ದೃಷ್ಟಿಯು ಅಥವಾ ಉದ್ದೇಶವು ಅವರಿಗೆ ಇರುವದರಿಂದ ಆಗ ಮೊದಲಿನ ವರ್ಗದಲ್ಲಿ ಕೆಲವೊಂದು ಸ್ಥಾನಹೊಂದಿದ ಪದಾರ್ಥವು ಬೇರೆ ವರ್ಗದಲ್ಲಿ ಬೇರೆ ಸ್ಥಾನವನ್ನು ಹೊಂದಬಹುದು. ಆದ್ದರಿಂದ ಪ್ರಣವಗಳು ಆಯಾ ವರ್ಗಗಳ ಪ್ರಕಾರ ಬೇರೆ ಬೇರೆಯಾಗುತ್ತವೆಂಬುದನ್ನು ವಾಚಕರು ಲಕ್ಷಿಸಬೇಕು. ( ನಂ॥ ೩೮೯, ೭೭೪ ನೋಡಿರಿ. ) ಮನುಷ್ಯನಿಗೆ ವಿಕಾರಗಳೂ ಉಂಟು. ಅವುಗಳನ್ನು ದೂರಮಾಡುವಲ್ಲಿ ಅವುಗಳಿಗೂ ಕೂಡ ಪ್ರಣವಗಳನ್ನು ಸಂಬಂಧಿಸಬೇಕು. ಇವು ಸಹ ಮಂತ್ರಸಂಬಂಧದಲ್ಲಿ ಬರುತ್ತವೆ. ಮನುಷ್ಯನು ಕ್ರಿಯಾರಹಿತನಾಗಬೇಕಾಗುತ್ತದೆ. ಅಂದರೆ ಅವನು ಯಾವ ಗುಣಗಳಿಗೂ ಕೂಡ ಅಲಿಪ್ತನಾಗಿರಬೇಕಾಗುತ್ತದೆ. ಇದರಿಂದ ಕರ್ಮವು ಅವನಿಗೆ ಅಂಟಿಕೊಳ್ಳುವದಿಲ್ಲ. ಇದು ಈ ಪ್ರಣವಗಳನ್ನು ಸಂಬಂಧಿಸುವದರಿಂದ ಸಾಧ್ಯವಾಗುತ್ತದೆ. ಈ ತತ್ವವನ್ನು ಶಿವಶರಣರು ಅಂಗೀಕರಿಸಿ ಮಂತ್ರಸಂಬಂಧ ಮಾಡಿದ್ದಾರೆ. ಇದರಿಂದ ದುರ್ವ್ಯಾಪಾರಗಳು ಮನುಷ್ಯನಲ್ಲಿ ಅಡಗುವವೆಂದು ಅವರು ಭಾವಿಸಿರುತ್ತಾರೆ.

ಈ ಪ್ರಣವಗಳಲ್ಲಿ ಬ, ಸ, ವ, ಅ, ಉ, ಮ ಎಂಬ ಸೂಕ್ಷ್ಮ ಪ್ರಣವಗಳಿವೆ. ಇವುಗಳಲ್ಲಿ ಅ ಉ, ಮ ಪ್ರಣವಗಳು ಬ, ಸ, ವ ಪ್ರಣವಗಳಿಗಿಂತ ಹೆಚ್ಚಿಗೆ ಸ್ಥೂಲವಾದವುಗಳು. ಆದ್ದರಿಂದ ಯಾವ ಕ್ರಿಯೆಗಳು ಇನ್ನಿತರ ಕ್ರಿಯೆಗಳಿಂದ ಅಥವಾ ಅವಯವಗಳಿಂದ ಉತ್ಪನ್ನವಾಗಿರುತ್ತವೆಯೋ ಅಂಥ ಮೂಲ ಕ್ರಿಯೆಗಳು ಅಥವಾ ಶರೀರದ ಮುಖ್ಯ ಭಾಗಗಳು ಅವುಗಳ ಉಪಭಾಗಗಳಿಗಿಂತಲೂ ಸೂಕ್ಷ್ಮವಾದವುಗಳು. ಇದಕ್ಕನುಸರಿಸಿ ಅ, ಉ, ಮ, ಬ, ಸ, ವ ಪ್ರಣವಗಳನ್ನು ವಚನಕಾರರು ಇಟ್ಟಿದ್ದಾರೆ. ಅವು ಮೊದಲು ಶೂನ್ಯಸ್ಥಲಗಳಿಂದ ಹೊರ

R. N. B. 2554

ಶ್ರೀ.




ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೬—೦

ಸಂಪುಟ ೧೬] ಸಪ್ಟೆಂಬರ ೧೯೪೨. [ಸಂಚಿಕೆ ೧೨

## ವಿಷಯಾನುಕ್ರಮಣಿಕೆ.

# ಶಿವಾನುಭವ.

| ವರ್ಷ ೧೬ | ಸಪ್ಟಂಬರ ೧೯೪೨. | ಸಂಚಿಕೆ ೧೨ |
| --- | --- | --- |

## ಪ್ರಸಾದವೂ ಪ್ರಸಾದಿಸ್ಥಲವಿವೇಚನೆಯೂ.

(ಲೇಖಕಃ— ಎಂ, ಸಿದ್ಧವೀರಯ್ಯಾ ವ್ಯವಸ್ಥಾಪಕ ಶಿವಾನುಭವ ಸಂಘ
ಶಾಂತಿವರ್ಧಕಶಾಲಾ ಸಂಗಮ ಜಿ. ಬೀದರ್.)

ಪ್ರಸಾದವೆಂದರೇನು? ಅದರ ತತ್ವಾರ್ಥವೇನಿದೆ? ಅಂತಪ್ಪ ಪ್ರಸಾದ ಗ್ರಾಹ್ಯತೆಯಿಂದ ಸಾಧಕನ ಮೇಲಾಗತಕ್ಕ ಪರಿಣಾಮವಾವುದು? ಎಂಬ ವಿಚಾರತರಂಗವು ನನ್ನ ಮನದಲ್ಲಿ ಬಹು ದಿವಸದಿಂದಲೂ ಏಳುತ್ತಿರಲು ಇದರ ಬಗ್ಗೆ ಪ್ರಮುಥರ ವಚನಶಾಸ್ತ್ರವನ್ನು ಅವಲೋಕಿಸುತ್ತಿರಲಾಗಿ ಪ್ರಸಾದ ಮತ್ತು ಪ್ರಸಾದಿಸ್ಥಲದ ಬಗ್ಗೆ ನನಗೆ ಹೊಳೆದ ವಿಚಾರಗಳನ್ನು ಜಿಜ್ಞಾಸುಗಳ ಮುಂದಿಡಲು ಉಪಯುಕ್ತತೆ ಎನಿಸಬಹುದೆಂದು ಸಾಹಸಪಟ್ಟಿದ್ದೇನೆ.

ಪಾದೋದಕದ ಬಗ್ಗೆ ಅನಂತ ತರುಣಬಾಂಧವರು ಸಂಶಯ ಗ್ರಸ್ಥರಾಗಿರುವಂತೆ ಪ್ರಸಾದದ ವಿಷಯಕ್ಕೂ ಸಂಶಯ ಭಾವನೆಯುಳ್ಳವರಾಗಿದ್ದಾರೆ. ಈ ಭಾವನೆ ಹೋಗಲಾಡಿಸಿ ನಿಜವಾದ ತತ್ವವನ್ನು ಅನುಭವಕ್ಕೆ ತಂದುಕೊಡುವ ತತ್ವಾನ್ವೇಷಣಿಗಳು ಈಗ ನಮ್ಮ ಸಮಾಜದಲ್ಲಿ ಅಲ್ಲಲ್ಲಿ ಕೆಲವು ಜನರು ಉದಯವಾಗುತ್ತಲಿದ್ದರೂ ಹಲವು ಜನರು ಕೇವಲ ಕರ್ಮಠರಂತೆ ಪ್ರಸಾದದ ಸ್ಥೂಲಕ್ರಿಯೆಗಳಿಗೆ ಮನಸೋತು ಇದರ ಅಂತರಂಗದ ಮರ್ಮವನ್ನರಿಯದೆ ಜಡಮತಿಗಳಾಗಿ ವರ್ತಿಸುತ್ತಿರುವವರನ್ನು ನಾನು ಅಲ್ಲಲ್ಲಿ ವಿಪುಲವಾಗಿ ಕಾಣುತ್ತಲಿದ್ದೇನೆ.

# ಶಿವಾನುಭವ.

| ವರ್ಷ ೧೬ | ಸಪ್ಟಂಬರ ೧೯೪೨. | ಸಂಚಿಕೆ ೧೨ |
| --- | --- | --- |

## ಪ್ರಸಾದವೂ ಪ್ರಸಾದಿಸ್ಥಲವಿವೇಚನೆಯೂ.

(ಲೇಖಕರು— ಎಂ, ಸಿದ್ಧವೀರಯ್ಯಾ ವ್ಯವಸ್ಥಾಪಕ ಶಿವಾನುಭವ ಸಾಂಘ
ಶಾಂತಿವರ್ಧಕಶಾಲಾ ಸಂಗಮು ಜಿ. ಬೀದರ್.)

ಪ್ರಸಾದವೆಂದರೇನು? ಅದರ ತತ್ವಾರ್ಥವೇನಿದೆ? ಅಂತಪ್ಪ ಪ್ರಸಾದ ಗ್ರಾಹ್ಯತೆಯಿಂದ ಸಾಧಕನ ಮೇಲಾಗತಕ್ಕ ಪರಿಣಾಮವಾವುದು? ಎಂಬ ವಿಚಾರತರಂಗವು ನನ್ನ ಮನದಲ್ಲಿ ಬಹು ದಿವಸದಿಂದಲೂ ಏಳುತ್ತಿರಲು ಇದರ ಬಗ್ಗೆ ಪ್ರಮಥರ ವಚನಶಾಸ್ತ್ರವನ್ನು ಅವಲೋಕಿಸುತ್ತಿರಲಾಗಿ ಪ್ರಸಾದ ಮತ್ತು ಪ್ರಸಾದಿಸ್ಥಲದ ಬಗ್ಗೆ ನನಗೆ ಹೊಳೆದ ವಿಚಾರಗಳನ್ನು ಜಿಜ್ಞಾಸುಗಳ ಮುಂದಿಡಲು ಉಪಯುಕ್ತತೆ ಎನಿಸಬಹುದೆಂದು ಸಾಹಸಪಟ್ಟಿದ್ದೇನೆ.

ಪಾದೋದಕದ ಬಗ್ಗೆ ಅನಂತ ತರುಣಬಾಂಧವರು ಸಂಶಯ ಗ್ರಸ್ಥರಾಗಿರುವಂತೆ ಪ್ರಸಾದದ ವಿಷಯಕ್ಕೂ ಸಂಶಯ ಭಾವನೆಯುಳ್ಳವರಾಗಿದ್ದಾರೆ. ಈ ಭಾವನೆ ಹೋಗಲಾಡಿಸಿ ನಿಜವಾದ ತತ್ವವನ್ನು ಅನುಭವಕ್ಕೆ ತಂದುಕೊಡುವ ತತ್ವಾನ್ವೇಷಣಿಗಳು ಈಗ ನಮ್ಮ ಸಮಾಜದಲ್ಲಿ ಅಲ್ಲಲ್ಲಿ ಕೆಲವು ಜನರು ಉದಯವಾಗುತ್ತಲಿದ್ದರೂ ಹಲವು ಜನರು ಕೇವಲ ಕರ್ಮಟರಂತೆ ಪ್ರಸಾದದ ಸ್ಥೂಲಕ್ರಿಯೆಗಳಿಗೆ ಮನಸೋತು ಇದರ ಅಂತರಂಗದ ಮರ್ಮವನ್ನರಿಯದೆ ಜಡಮತಿಗಳಾಗಿ ವರ್ತಿಸುತ್ತಿರುವವರನ್ನು ನಾನು ಅಲ್ಲಲ್ಲಿ ವಿಪುಲವಾಗಿ ಕಾಣುತ್ತಲಿದ್ದೇನೆ.

ಪ್ರಸಾದವು ಅಷ್ಟಾವರಣದಲ್ಲಿ ಅತಿ ಮಹತ್ವಸ್ಥಾನ ಉಳ್ಳದ್ದು. ಇದು ಸಾಧಕನಿಗೆ ಫಲಪ್ರದವಾದದ್ದು. ವೀರಶೈವ ಸಾಧಕನು ಗುರುಲಿಂಗ ಜಂಗಮದ ಉಪಾಸನೆಯೊಂದಿಗೆ, ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ, ಮಂತ್ರಶಕ್ತಿಯನ್ನು ಮೂರು ದೇಹಗಳಲ್ಲಿ ಆವರಿಸಿಕೊಂಡು ಪಾದೋದಕ ಪ್ರಸಾದವೆಂಬ ಫಲವನ್ನು ಪ್ರಾಪ್ತಮಾಡಿಕೊಳ್ಳುವನು. ಪಾದೋದಕವು ಸುಖಾಸ್ಪದವಾದದ್ದು. ಪ್ರಸಾದವು ಶಾಂತಿದಾಯಕವಾದದ್ದು. ಆತ್ಮನಿಗೆ ದುಃಖಮಯ ಸಂಸಾರದಿಂದ ವಿಮುಕ್ತತೆ ಪ್ರಾಪ್ತವಾಗಿ ಚಿರ ಶಾಂತಿಯು ದೊರೆಯದ ವಿನಃ ನಿತ್ಯಾನಂದ ಪ್ರಾಪ್ತವಾಗಲಾರದು. ಕಾರಣ ಆತ್ಮನಿಗೆ ಇಂಥ ಚಿರಶಾಂತಿಜನಕವಾದ ಪ್ರಸಾದವಿಲ್ಲದೆ ಮುಕ್ತಿ ದೊರಕೊಳ್ಳದೆಂಬದೇ ಶರಣರ ಮತವು.

ಈಗ ನಾನು ಪ್ರಸಾದಿಯ ಬಾಹ್ಯಾಭ್ಯಂತರ ಲಕ್ಷಣಗಳಾವುವೆಂಬದನ್ನು ವಿಚಾರಿಸುವ ಪೂರ್ವದಲ್ಲಿ ಪ್ರಸಾದದ ಸ್ವರೂಪವೇನೆಂಬುದನ್ನು ವಿಚಾರಿಸುತ್ತೇನೆ.

ಪ್ರಸಾದವೆಂದರೆ ಪರಾತ್ಪರ ಚಿದ್ಘನ ವಸ್ತು, ಶಿಷ್ಯನ ಬ್ರಹ್ಮರಂಧ್ರದಲ್ಲಿ ಬೆಳಗುವ ಅಖಂಡಜ್ಯೋತಿ, ಪ್ರಸಾದವೆಂಬುದ ಪರಿಪೂರ್ಣಜ್ಞಾನಾಮೃತವು ಅದೇ ಶಿವನ ಚಿತ್ಕಳೆಯು. ಇಂತಪ್ಪ ಪ್ರಸಾದವು ಕಾಯ, ಮನ, ಭಾವಗಳಲ್ಲಿ ವ್ಯಾಪಿಸಿ ಅವುಗಳ ಪ್ರಕೃತಿ ಸ್ವಭಾವವಳಿದು ಪ್ರಸಾದಮಯವಾಗಿ ಬಯಲು ಬಯಲಲ್ಲಿ ಬೆರಸಿದಂತಾಗುವದೇ ಆತ್ಮೀಯತೆಯ ಪರಮ ಧ್ಯೇಯವಾಗಿದೆ. ಇಂತಪ್ಪ ಪ್ರಸಾದದ ಘನನೆಲೆಯನ್ನು ಪ್ರಮಥರು ಅನಂತ ರೀತಿಯಿಂದ ವರ್ಣಿಸಿದ್ದಾರೆ. ಅವುಗಳಲ್ಲಿ ಕೆಲವನ್ನಿಲ್ಲಿ ಉದಹರಿಸುತ್ತೇನೆಃ— 'ಹರ ತನ್ನ ರೂಪ ತೋರಬೇಕೆಂದು ಗುರುವಾಗಿ ಬಂದು ಮನಸ್ಥಳಕ್ಕೆ ಮಂತ್ರವಾದ, ತನುಸ್ಥಳಕ್ಕೆ ಪ್ರಸಾದವಾದ, ಕರಸ್ಥಳಕ್ಕೆ ಲಿಂಗವಾದ ಇಂತೀ ತ್ರಿವಿಧದಲ್ಲಿ ತ್ರಿವಿಧಸಾಹಿತ್ಯವಾದನಯ್ಯಾ ಕೂಡಲಚನ್ನಸಂಗನಬಸವಣ್ಣ.'

'ಗುರುಲಿಂಗಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು, ಆ ಭಾವವೇ ಎನಗೆ ಮಹಾಪ್ರಸಾದವಾಗಿ ಎನಗೆ ಬೇರೆ ಪ್ರಸಾದವೆಂಬುದಿಲ್ಲ ಕೂಡಲಸಂಗಮದೇವ' 'ಅಗ್ನಿಮುಟ್ಟಲು ತೃಣವಗ್ನಿವಪ್ಪದು ತಪ್ಪದಯ್ಯ, ಗುರುಪ್ರಸಾದವಂಗವ ಸೋಂಕಿದಲ್ಲಿ ಸರ್ವಾಂಗ ಗುರುವಪ್ಪುದು

ತಪ್ಪದಯ್ಯ. ಲಿಂಗಪ್ರಸಾದ ಮನಸೋಂಕಿದಲ್ಲಿ ಮನಲಿಂಗವಪ್ಪುದು ತಪ್ಪದಯ್ಯ. ಜಂಗಮಪ್ರಸಾದ ಅರಿವ ಸೋಂಕಿದಲ್ಲಿ ಅಖಂಡಿತಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯಾ. ಶಿವಶಿವಾ ಪ್ರಸಾದದ ಮಹಿಮೆಯನೇನೆಂದು ಉಪಮಿಸುವೆ? ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಮಾನಂದ, ಪ್ರಸಾದವೇ ಪರಮಾಮೃತ, ಪ್ರಸಾದವೇ ಪರಮಜ್ಞಾನ, ಪ್ರಸಾದವೇ ವಾಙ್ಮನಾತೀತ, ಪ್ರಸಾದವೇ ನಿತ್ಯಪರಿಪೂರ್ಣ, ಇಂತಪ್ಪ ಪ್ರಸಾದವಕೊಂಡು ಬದುಕಿದೆನಯ್ಯ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ' ಈ ರೀತಿ ಅನಂತ ಶರಣರು ಅನಂತಮುಖವಾಗಿ ಪ್ರಸಾದದ ಅನಾದಿ ಸ್ವರೂಪತೆಯನ್ನು ವರ್ಣಿಸಿದ್ದಾರೆ. ಇಂಥ ಚಿದ್ಘನ ಮಹಾಪ್ರಸಾದವು ಶರೀರ ಮನ, ಪ್ರಾಣ, ಭಾವನೆಗಳನ್ನು ವೇಧಿಸಿ ಸರ್ವಾಂಗವನ್ನು ಪ್ರಸಾದಮಯವಾಗಿ ಮಾರ್ಪಡಿಸುವದು. ಇಂತಪ್ಪ ಶರಣನ ಕಾಯವು ಪ್ರಸಾದ ಕಾಯವೆನಿಸುವದು.

ಇನ್ನು ಇಂಥ ಮಹಾ ಪ್ರಸಾದವು ಸದ್ಭಕ್ತನ ಸರ್ವಾಂಗವನ್ನೆಲ್ಲ ಆವರಿಸಿ ಪ್ರಸಾದ ಕಾಯವನ್ನಾಗಿ ಮಾಡಬೇಕಾದರೆ ಇಂತಪ್ಪ ಚಿತ್ ಪ್ರಸಾದದಲ್ಲಿ ಸರ್ವಾಂಗವನ್ನು ನಿವೇದಿಸಬೇಕಾಗುತ್ತದೆ. ಆಗ್ಗೆ ಇದರ ಪ್ರಕೃತಿಸ್ವಭಾವವಳಿದು ಕೇವಲ ಪ್ರಸಾದಸ್ವರೂಪವಾಗುತ್ತದೆ. ಕರಣೇಂದ್ರಿಯ, ಮನ, ಭಾವಗಳೆಲ್ಲಾ ತಮ್ಮ ನಿಸರ್ಗವಾಸನೆಗಳನ್ನಳಿದು ಪ್ರತ್ಯಕ್ಷ ಪ್ರಸಾದವೇ ತಾವಾಗಬೇಕಾಗುತ್ತದೆ. ಆಗ್ಗೆ ಇಂಥ ಪ್ರಸಾದ ಹಸ್ತದಿಂದ ಲಿಂಗಾರ್ಪಿತವೆಂದು ಸೇವಿಸುವ ರೂಪ ಪದಾರ್ಥವು ಪ್ರಸಾದವೆನಿಸಿ ಸರ್ವಾಂಗದಲ್ಲಿ ವೇದಿಸುತ್ತದೆ. ಯಾವುದಾದರೊಂದು ರೂಪ ಪದಾರ್ಥವನ್ನು ಸದ್ಭಕ್ತನು ಲಿಂಗಾರ್ಪಿತ ಮಾಡಿದರೆ ಅದರ ಪೂರ್ವಾಶ್ರಯವಳಿದು ಪ್ರಸಾದವಾಗುತ್ತದೆ; ಕಾರಣ ಆ ಪ್ರಸಾದವಕೊಂಬುವ ಇಂದ್ರಿಯಮನಾದಿ ಕರಣಗಳು ಮೊದಲೇ ಪ್ರಸಾದಮಯವಾಗಿರಬೇಕಾಗುತ್ತದೆ. ಸಕಲ ಸುಯಿಧಾನ ಪದಾರ್ಥಂಗಳನರ್ಪಿಸುವ ಕಾಲಕ್ಕೆ ತನುಗುಣಾದಿಗಳನ್ನು ದೂರಮಾಡಿ ತನ್ನನ್ನು ಮೊದಲು ಲಿಂಗದಲ್ಲಿ ಅರ್ಪಿಸಬೇಕು. ತಾನೆಂಬ ಭಾವನೆ ಅಳಿದು ಲಿಂಗನೇ ಭೋಗಿಸುವನೆಂಬ ಭಾವನೆ ಬೆಳೆಯಬೇಕು. ಈ ಬಗ್ಗೆ ಪ್ರಮಥರ ವಚನಗಳ ಆಧಾರಃ— 'ರೂಪವನರ್ಪಿಸಬಹುದಲ್ಲದೆ ರುಚಿಯನರ್ಪಿಸುವ ಪರಿವಂ

ತಯ್ಯ? ಉರವಣಿಸಿ ಬಂದ ತನುಗುಣಾದಿಗಳ ಲಿಂಗದಲ್ಲಿ ನಿಕ್ಷೇಪವ ಮಾಡಲರಿಯದಿದ್ದರೆ ಪ್ರಾಣಲಿಂಗನಾಸ್ತಿ ಪ್ರಸಾದವೆಲ್ಲಿಹುದಯ್ಯಾ ಕೂಡಲ ಚೆನ್ನಸಂಗಯ್ಯ' 'ಕಾಯ ಲಿಂಗಾರ್ಪಿತವಾದ ಬಳಿಕ ಕರ್ಮತ್ರಯಂಗಳು ಇರಲಾಗದು ನೋಡಾ. ಜೀವ ಲಿಂಗಾರ್ಪಿತವಾದ ಬಳಿಕ ಸಂಸಾರ ವ್ಯಾಪ್ತಿಯಾದ ಜೀವನ ಗುಣ ಇರಲಾಗದು ನೋಡಾ, ಅದು ಅರ್ಪಿತವಲ್ಲ ನೋಡಾ; ಕರಣಂಗಳು ಅರ್ಪಿತವಾದ ಬಳಿಕ ಕರಣಂಗಳಿಲ್ಲವು ಲಿಂಗದ ಕಿರಣಂಗಳಾಗಿ ಆ ಲಿಂಗದ ಕಿರಣಂಗಳೇ ಹರಣವಾಗಿರಬೇಕು ನೋಡಾ. ಕಾಯದ ಜೀವದ ಕರಣದ ಗುಣವ ಕಳೆಯದೆ ಲಿಂಗಾರ್ಪಿತ ಪ್ರಸಾದಿಗಳೆಂಬ ಪ್ರಪಂಚಿಗಳ ಮೆಚ್ಚನು ಕಾಣಾ ಗುರು ಶಿವಸಿದ್ಧೇಶ್ವರ ಪ್ರಭುವೆ' 'ಲಿಂಗಕ್ಷೇತ್ರವೆಂಬ ಪವಿತ್ರಸ್ಥಳದಲ್ಲಿ ಪ್ರಸಾದಿ ಭಕ್ತಿ ಬೀಜವ ಬಿತ್ತಿ ಶುದ್ಧ ಪದಾರ್ಥವ ಬೆಳೆದು, ಆ ಪದಾರ್ಥವ ಲಿಂಗಾರ್ಪಿತವ ಮಾಡಿ ಆ ಪ್ರಸಾದವ ತಾನಿಲ್ಲದೆ ಭೋಗಿಸಿ, ನಿತ್ಯ ಸುಖಿಯಾದನಯ್ಯಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ ನಿಮ್ಮ ಪ್ರಸಾದಿ' 'ಕರಣಂಗಳು ಕೇಳುವ ಶಬ್ದದಿಂದಾದ ಸುಖವನು ನೇತ್ರಂಗಳು ನೋಡಿದ ರೂಪಿಂದಾದ ಸುಖವನು ರಸನೆಯು ಸವಿಯುವ ರಸದಿಂದಾದ ಸುಖವನು ವಾಸಿಸುವ ಘ್ರಾಣದಿಂದಾದ ಗಂಧಸುಖವನು ಮುಟ್ಟುವ ತ್ವಕ್ಕಿನ ಸ್ಪರ್ಶದಿಂದಾದ ಸುಖವನು ಅರ್ಪಿತವ ಮಾಡಿ ಅನುಭವಿಸುವವನು ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರನ ಪ್ರಸಾದಿಯು'

ಮೇಲಿನ ಪ್ರಮಥರ ಉಕ್ತಿಗಳಿಂದ ವ್ಯಕ್ತವಾದುದೇನಂದರೆ ಅಲ್ಲಲ್ಲಿ ಇಂದ್ರಿಯಗಳ ದ್ವಾರ ತಗಲುವ ಭೋಗಂಗಳು ಅಂಗಭೋಗಂಗಳೆನಿಸದೆ ಲಿಂಗಭೋಗಂಗಳೆನಿಸಿ ಹೃದಯಸಿಂಹಾಸನಾರೂಢನಾದ ಮಹಾಲಿಂಗನಿಗೆ ಅರ್ಪಿತವಾಗುತ್ತಿರಬೇಕು. ನಾಭೋಗಿಸುವೆನೆಂಬ ಭಾವವಳಿದು ಲಿಂಗತಾ ಭೋಗಿಸುವದೆಂಬ ಭಾವ ಬೆಳೆಯಬೇಕು ಇದಕ್ಕಾಗಿ ಕಾಯಮನಭಾವಗಳು ಲಿಂಗಾರ್ಪಿತವಾಗಿ ಪ್ರಸಾದ ಮಯವಾಗಬೇಕು. ಅವುಗಳ ಅರ್ಪಣಕ್ರಮ ಕೆಳಗೆ ವಿವರಿಸಲ್ಪಟ್ಟಂತಿದೆ:—

ಅಂಗನಿಗೆ ಸುಜ್ಞಾನೋದಯವಾಗಿ ಗುರುಕಾರುಣ್ಯವ ಹಡೆದು ಮಲತ್ರಯ ದೂರೀಕೃತನಾಗಿ, ಸ್ಥೂಲತನುವಿಗೆ ಇಷ್ಟಲಿಂಗ, ಸೂಕ್ಷ್ಮತನುವಿಗೆ ಪ್ರಾಣಲಿಂಗ, ಕಾರಣತನುವಿಗೆ ಭಾವಲಿಂಗ ಸಾಹಿತ್ಯವನ್ನು ಹೊಂದುವನಷ್ಟೆ; ಇಂತಪ್ಪ ಸದ್ಭಕ್ತನು ಸ್ಥೂಲತನುವಿಡಿದು ಆಚರಿಸುವ

ಸತ್ಕ್ರಿಯೆಗಳಿಂದ ಸ್ಥೂಲತನುವಿನ ಪ್ರಕೃತಿವಾಸನೆ ಅಳಿದು ಶುದ್ಧೀಕರಿಸಿ ಗುರುವಿಗೆ ಅರ್ಪಿಸುವನು. ಉಳಿದ ಶೇಷವನ್ನು ಶುದ್ಧಪ್ರಸಾದವೆಂದು ಗ್ರಹಿಸುವನು. ಮತ್ತು ಈ ಇಷ್ಟಲಿಂಗದ ಚಿತ್ಕಳಾಸ್ವರೂಪವಾದ ಪ್ರಾಣ ಲಿಂಗದ ಉಪಾಸನೆಯನ್ನು ಸುಜ್ಞಾನದಿಂದ ಗೈದು, ಮನಸ್ಸಿನ ಸಂಕಲ್ಪ ವಿಕಲ್ಪಾತ್ಮಕ ಪ್ರಕೃತಿ ಧರ್ಮವನ್ನು ನೀಗಿ ಅದನ್ನು ಲಿಂಗದನೆಲೆಯಲ್ಲಿ ಸಿದ್ಧಗೊಳಿಸಿ, ಪ್ರಾಣಲಿಂಗಕ್ಕರ್ಪಿಸುವನು, ಉಳಿದ ಶೇಷವನ್ನು ಸಿದ್ಧ ಪ್ರಸಾದವೆಂದು ಗ್ರಹಿಸುವನು. ಈ ಇಷ್ಟಪ್ರಾಣ ಸ್ವರೂಪವಾದ ಭಾವ ಲಿಂಗದ ಧ್ಯಾನವನ್ನು ಸದ್ಭಕ್ತನು ಮಹಾಜ್ಞಾನದಿಂದ ಗೈದು ಕಾರಣ ತನುವೆನಿಸಿದ ಆತ್ಮನ ಪ್ರಕೃತಿವಾಸನೆಯನ್ನು ಲಯಗೊಳಿಸಿ, ಶುದ್ಧತನು ಮತ್ತು ಸಿದ್ಧಮನಸ್ಸಿನಿಂದ ಅರ್ಜಿಸಿದ ಧನವನ್ನು ಶಿವಭಕ್ತಿಭಾವನೆ ಯಿಂದ ಜಂಗಮಾಂತರ್ಗತವಾದ ಭಾವಲಿಂಗಕ್ಕೆ ಅರ್ಪಿಸಿ ಪ್ರಸಿದ್ಧ ಪ್ರಸಾದವನ್ನು ಗ್ರಹಿಸುವನು. ಈ ರೀತಿ ಇಷ್ಟಪ್ರಾಣ ಭಾವಲಿಂಗತ್ರಯು ಏಡಿದು, ಗುರುಲಿಂಗಜಂಗಮಕ್ಕೆ ಸದ್ಭಕ್ತನು ತನುಮನಧನಗಳನ್ನರ್ಪಿ ಸುವನು. ಗುರುಮುಖದಿಂದರಿತು ಸ್ವಾನುಭಾವನಾವರಿಸಿದ ಭಕ್ತನು ಗುರುಲಿಂಗಜಂಗಮವನ್ನು ತನ್ನಂತರಂಗದಲ್ಲೇ ನಿರೀಕ್ಷಿಸುವನು. ತನ್ನ ರಿವು ತನಗುಂಟಾದಲ್ಲಿ ಇವುಗಳ ಸ್ವರೂಪಜ್ಞಾನ ತನಗಾಗುವದು. ಆಗ್ಗೆ ಇಷ್ಟಲಿಂಗವೇ ಗುರುಸ್ವರೂಪ, ಪ್ರಾಣಲಿಂಗವೇ ಲಿಂಗಸ್ವರೂಪ, ಭಾವಲಿಂಗವೇ ಜಂಗಮಸ್ವರೂಪವೆಂದು ಭಾವಿಸಿ ಇವುಗಳ ಅಂತರ್ಬಾ ಹ್ಯನಿತ್ಯ ಸಹಜ ಸಂಬಂಧವನ್ನು ಹೊಂದುವನು. ಇಂಥ ಭಕ್ತನು ಗುರುಲಿಂಗಜಂಗಮನ್ನು ಭಿನ್ನವಿಟ್ಟು ಕಾಣುವದಿಲ್ಲ. ತನುವೆಂದರೆ ರೂಪು, ಮನವೆಂದರೆ ರುಚಿ, ಧನವೆಂದರೆ ತೃಪ್ತಿ (ಆನಂದ)ವೆಂಬ ಪಾರಿಭಾಷಿಕ ದ್ವಂದ್ವಾರ್ಥವು ಇವುಗಳನ್ನು ಅರ್ಪಿಸಿ ಪ್ರಸಾದಮಯವಾಗಿ ಮಾಡುವ ಬಗೆಯನ್ನು ಶ್ರೀಚನ್ನಬಸವರಾಜದೇವರು ಹೀಗೆ ವಿವರಿಸಿದ್ದಾರೆ:— 'ರೂಪಾಗಿ ಬಂದುದ ಕಾಯದ ಕೈಯಲ್ಲಿ ಕೊಡುವುದು, ರುಚಿಯಾಗಿ ಬಂದುದ ಮನದ ಕೈಯಲ್ಲಿ ಕೊಡುವುದು ತೃಪ್ತಿಯಾಗಿ ಬಂದುದ ಭಾವದ ಕೈಯಲ್ಲಿ ಕೊಡುವುದು ಅರ್ಪಿಸುವ ತೆರನಿದು, ರೂಪುರುಚಿ ತೃಪ್ತಿಯು ಅನುವನರಿದಡೆ ಪ್ರಸಾದಿಯಯ್ಯ......ಕೂಡಲ ಚನ್ನಸಂಗಮದೇವನಲ್ಲಿ.

ಇನ್ನು ಕರಣಾರ್ಪಣದ ವಿವರವನ್ನು ಸ್ವಲ್ಪ ವಿಚಾರಿಸುವ:— ಭಕ್ತನು ಪಂಚೇಂದ್ರಿಯಗಳ ಭೌತಿಕ ಸ್ವರೂಪವನ್ನು ನಾಶಗೊಳಿಸಿ, ಅವು

ಗಳಲ್ಲೆಲ್ಲ ಲಿಂಗದ ಕಿರಣಗಳನ್ನು ಬಿತ್ತಿ ಲಿಂಗೇಂದ್ರಿಯಗಳನ್ನಾಗಿ ಮಾಡಿ ಅವುಗಳನ್ನು ಪಂಚಲಿಂಗಗಳಿಗರ್ಪಿಸಿ, ಅಲ್ಲಲ್ಲಿ ಅರ್ಪಿತವಾಗುವ ಗಂಧಾದಿ ವಿಷಯಗಳನ್ನು ಆಯಾ ಲಿಂಗಗಳಿಂದ ಪರಿಶೋಧಿಸಿ ಪ್ರಸಾದಮಯವಾಗಿ ಮಾಡಿ ಕೂಟಸ್ಥಮಹಾಲಿಂಗಕ್ಕೆ ಅರ್ಪಿಸುವನು. ಇದೇ ಕರ್ಣಾರ್ಪಣಗಳೊಂದಿಗೆ ಷಡ್ರುಚಿಗಳ ಅರ್ಪಣದ ಬಗೆ. ಈ ರೀತಿ ಸದ್ಭಕ್ತನು ಕರಣೇಂದ್ರಿಯಗಳನ್ನು ಲಿಂಗಕರ್ಪಿಸಿ ಕರಣಪ್ರಸಾದವನ್ನು ಪಡೆವನು. ಈ ಅರ್ಪಣದ ಬಗೆಯನ್ನು ಶ್ರೀಬಸವರಾಜದೇವರು ಈ ರೀತಿ ಚಿತ್ರಿಸಿದ್ದಾರೆ:— 'ಅಧರ ತಾಗುವ ರುಚಿಯ ಉದರ ತಾಗುವ ಸುಖವ ಲಿಂಗಾರ್ಪಿತವಿಲ್ಲದೆ ಕೊಂಡರೆ ಕಿಲ್ಬಿಷ ನೋಡಾ, ನೇತ್ರ, ಶ್ರೋತ್ರ, ಜಿಹ್ವೆ, ಘ್ರಾಣ, ತ್ವಕ್ಕು ಮೊದಲಾದ ಸರ್ವೇಂದ್ರಿಯಂಗಳಲ್ಲಿ ಮುಟ್ಟುವ ಸಕಲಪದಾರ್ಥಂಗಳನ್ನು ಸಾವಧಾನದಿಂದ ಲಿಂಗಕ್ಕೆ ಕೊಟ್ಟುಕೊಂಡರೆ ಅದು ಮಹಾಪ್ರಸಾದವಯ್ಯಾ ಕೂಡಲಸಂಗಮದೇವ.' ಆತ್ಮನೊಡಗೂಡಿ ಷಡಿಂದ್ರಿಯಗಳೇ ಷಡ್ಲಿಂಗಗಳಿಗೆ ಮುಖಗಳು-ಮತ್ತು ಚಿತ್ತ, ಬುದ್ಧಿ, ನಿರಹಂಕಾರ, ಮನಜ್ಞಾನಹೃದಯಗಳೆಂಬ ಕರಣ ಷಟ್ ವಿಭಾಗಗಳೇ ಹಸ್ತಂಗಳು-ಇವುಗಳಿಂದ ಗಂಧ, ರುಚಿ, ರೂಪ, ಸ್ಪರ್ಶ, ಶಬ್ದ, ಪರಿಣಾಮುಗಳನ್ನು ಪರಿಶೋಧಿಸಿ ಗ್ರಹಿಸಲ್ಪಡುವದು.

ಇನ್ನು ಶುದ್ಧ ಜೀವನ ಅಂಗಗಳಾದ ಅಂಗ ಮನ ಪ್ರಾಣ ಭಾವನೆಗಳನ್ನು ಜ್ಞಾನಮುಖದಿಂದ ಲಿಂಗದೊಳಗೆ ಬೆರಸಿ ಲಿಂಗತಾನೆಂಬ ಭಾವ ಭ್ರಾಂತಿ ಅಳಿದು ನಿರ್ಭಾವದಲ್ಲಿ ಉಳಿವದು, ಆಗ್ಗೆ ಅಂಗಲಿಂಗವೆಂಬ ದ್ವಂದ್ವ ಭಾವವಳಿದು ಲಿಂಗವೇ ತಾನಾಗುವದು ಇದೇ ಭಾವಾರ್ಪಣದ ಕ್ರಮವು. ಈ ರೀತಿ ಸದ್ಭಕ್ತನು ದೇಹ, ಕರಣೇಂದ್ರಿಯ ಭಾವವನು ಲಿಂಗಾರ್ಪಿತವ ಮಾಡಿ ಪ್ರಸಾದಮಯವಾಗಿ ಮಾಡಿ ಉಳಿಸುವನಾದ ಕಾರಣ ಸಕಲೇಂದ್ರಿಯ ಭೋಗಗಳು ಪ್ರಸಾದಭೋಗಗಳಾಗುವವು. ಆತ ಸದ್ಯೋನ್ಮುಕ್ತನೆನಿಸುವನು. ಇಂಥ ಭಕ್ತನು ಮೂರು ದೇಹ, ಮೂರು ಜೀವ ಮತ್ತು ಮೂವಿಧಭಾವನೆಗಳನ್ನು ಒಟ್ಟುಗೂಡಿಸಿ ಇವುಗಳ ವ್ಯವಹಾರಗಳಾದ ಸುಖದುಃಖ, ಗುಣನಿರ್ಗುಣಗಳನ್ನೆಲ್ಲ ಲಿಂಗದಲ್ಲಿ ಮುಳುಗಿಸಿ ಬಿಡುವನು. ಒಟ್ಟಿನ ಮೇಲೆ ಪ್ರಸಾದಿಯು ಸಕಲೇಂದ್ರಿಯಗಳನ್ನೂ ಅವುಗಳಲ್ಲಿ ಹುದುಗಿದ ಭೂತ (ತತ್ವ)ಗಳನ್ನೂ ಅವುಗಳದ್ವಾರ ಮುಟ್ಟುವ ವಿಷಯಗಳನ್ನೂ ಲಿಂಗಾರ್ಪಿತವ ಮಾಡಿ

ಶೇಷ ಪ್ರಸಾದವಂ ಪಡೆದು ತನ್ನನಳಿದು ಸುಖಿಸುವನು. ಪ್ರಸಾದವೆಂದರೆ ಶೇಷ. ಗುರುಲಿಂಗಜಂಗಮಕ್ಕೆ ಅರ್ಪಿಸಲಾಗಿ ಉಳಿದದ್ದೇ ಪ್ರಸಾದವು. ಕರಣೇಂದ್ರಿಯಗಳಿಂದೊಡಗೂಡಿದ ಕಾಯವು ಲಿಂಗಧೊಡನಾಟದಿಂದ ಪ್ರಕೃತಿ ಸ್ವಭಾವವನಳಿದುಳಿದುದೇ ಕಾಯಪ್ರಸಾದವು: ಪ್ರಕೃತಿ ಕಳೆದು ಳಿದ ಕರಣೇಂದ್ರಿಯಗಳೆಲ್ಲ ಕರಣಪ್ರಸಾದ ಇಂದ್ರಿಯಪ್ರಸಾದವಾದ ಕಾರಣ ಅವುಗಳ ದ್ವಾರ ಮುಟ್ಟುವ ಸುಖವೆಲ್ಲ ಲಿಂಗಸುಖವು. ಭ್ರಾಂತಿ ಅಳಿದ ಭಾವವು ಜ್ಞಾನಮುಖದಿಂದ ತೃಪ್ತಿಗೆಡೆಯಾಗಿ ಭಾವ ಪ್ರಸಾದವೆನಿಸಿ ನಿರ್ಭಾವದಲ್ಲಿ ಲಯಿಸುವದು. ಆದಕಾರಣ ಸದ್ಭ ಕ್ತನ ಸರ್ವಾಂಗವೆಲ್ಲ ಪ್ರಸಾದಮಯವಾಗಿ ಪ್ರಸಾದಕಾಯವೆನಿಸುವದು. ಕಾರಣ ಇಂಥ ಪ್ರಸಾದ ಕಾಯವುಳ್ಳಾತನು ಅಲ್ಲಲ್ಲಿ ಇಂದ್ರಿಯಗಳ ಮುಖದಿಂದ ಮುಟ್ಟುವ ಭೋಗವನ್ನು ಶುದ್ಧೀಕರಿಸಿ ಲಿಂಗಾರ್ಪಿತ ಭಾವನೆಯಿಂದ ಭೋಗಿಸುವನು. ಆತನ ಷಡೀಂದ್ರಿಯಗಳೇ ಷಡ್ ಲಿಂಗಗಳಾಗಿರ್ಪವು. ಇಂಥ ಪ್ರಸಾದಿಯ ಲಿಂಗಸ್ಥಿತಿಯನ್ನು ಚನ್ನಬಸವ ರಾಜದೇವರು ಹೀಗೆ ಚಿತ್ರಿಸಿದ್ದಾರೆ— 'ನಾಸಿಕವಾಚಾರ, ಜಿಹ್ವೆಗುರು, ಕಂಗಳು ಲಿಂಗ, ಕರ್ಣಪ್ರಸಾದ, ಹಸ್ತಜಂಗಮ, ಭಾವಮಹಾಲಿಂಗ ಕೂಡಲಚನ್ನಸಂಗಮದೇವಾ ನಿಮ್ಮ ಶರಣ ಇಂತು ಸರ್ವಾಂಗಪ್ರಸಾದಿ' ಈ ರೀತಿ ಪ್ರಸಾದಗ್ರಾಹಕನಾದ ಶರಣನು ಪ್ರಸಾದದ ಮರ್ಮವನ್ನರಿತು ಆಚರಿಸಿ ಅದನ್ನು ಸರ್ವಾಂಗದಲ್ಲಿ ಅಳವಡಿಸಿಕೊಂಡು ಅಂತಪ್ಪ ಮಹಾ ಪ್ರಸಾದ ಸ್ವರೂಪವೇ ತಾನಾಗುವನು.

ಇಂಥ ಚಿತ್ಸ್ವರೂಪವಪ್ಪ ಪ್ರಸಾದದ ಮರ್ಮವನ್ನರಿದು ಅದನ್ನು ಸರ್ವಾಂಗದಲ್ಲಿ ವೇದಿಸಿಕೊಂಡು ಅದುವೇ ತಾನಾಗತಕ್ಕದ್ದೇ ವೀರ ಶೈವ ಸಾಧಕನ ಅಧ್ಯಾತ್ಮಿಕ ಧ್ಯೇಯವಾಗಿದೆ. ಇಂಥ ಸಾಧಕನು ಪ್ರಸಾದಿಸ್ಥಲದಲ್ಲಿ ನಿಂತು ಶ್ರದ್ಧಾನಿಷ್ಠೆಯೊಳಗಿನ ಅವಧಾನಭಕ್ತಿಯನ್ನು ಚೇತರಿಸುವನು. ಸಾಧಕನು ಹಿಂದಿನವೆರಡು ಸ್ಥಲದಲ್ಲಿ ಶ್ರದ್ಧಾನಿಷ್ಠೆ ಯಿಂದ ಶಿವತತ್ವವನ್ನು ಪೂಜಿಸುವನು. ಈ ನಿಷ್ಠೆಯೇ ಪ್ರಸಾದಿಸ್ಥಲದಲ್ಲಿ ಅವಧಾನರೂಪ ತೊಡುವದು. ಯಾವ ವಸ್ತುವಿನ ಮೇಲೆ ನಿಷ್ಠೆ ಹೆಚ್ಚಿ ರುತ್ತದೆಯೋ? ಅಂಥ ವಸ್ತುವನ್ನು ಎಚ್ಚರದಿಂದ ನೋಡಿಕೊಳ್ಳುವದು ಸಹಜವು. ಇಂಥ ಎಚ್ಚರಿತಭಕ್ತಿಯಿಂದ ಪ್ರಸಾದಿಯು ನೇತ್ರಂಗಳಲ್ಲಿ ಪರಿಸ್ಫುಟವಾದ ಇಚ್ಛಾಶಕ್ತಿವಿಶಿಷ್ಟ ಶಿವಲಿಂಗವನ್ನು ನಿರಹಂಕಾರ ಹಸ್ತ

ದಲ್ಲಿ ಪಿಡಿದು ರೂಪು ವಿಷಯುಗಳನ್ನು ನೇತ್ರದ್ವಾರ ಅರ್ಪಿಸುವನು. ಆ ಅರ್ಪಿತದ ಆನಂದವನ್ನು ಮಹಾಲಿಂಗದಲ್ಲಿ ಹೊಂದುವನು. ಈ ಮರ್ಮ ವನ್ನರಿತು ಪ್ರಸಾದಿಯು ಸಕಲ ಮಂಗಲ ಪದಾರ್ಥಗಳನ್ನು ಶುಚಿದೇಹ ಶುದ್ಧಮನದಿಂದ ಶಿವಲಿಂಗಕ್ಕರ್ಪಿಸುವನು. ಈ ಸ್ಥಲದಲ್ಲಿ ಭಕ್ತನ ಅಂತಃ ಕರಣವು ಥಳಥಳ ಹೊಳೆಯುತ್ತಿರುವದು.

ವೀರಶೈವ ಸಾಧಕನು ಇಂಥ ಷಟ್‌ಸ್ಥಲಾಚರಣೆಯಿಂದ ಷಡ್ ಲಿಂಗಗಳನ್ನು ಷಡ್‌ವಿಧ ಭಕ್ತಿಯ ಸಮರಸ ಭಾವನೆಯಿಂದ ಪೂಜಿಸಿ ಅಂಗಗುಣವಳಿದು ಲಿಂಗ ಗುಣವಳವಡಿಸಿ, ಅಂಗಲಿಂಗದೊಳ್ ಮುಳುಗಿ ಲಿಂಗಮಹದೊಳ್ ಮುಳುಗಿ ಕಡೆಗೆ ನಿಶ್ಶೂನ್ಯ ನಿಶ್ಶಬ್ದನಾಗಿಪ್ಪುದೇ ನಿವೃತ್ತಿ ಕ್ರಿಯೆಯು. ಇಂಥ ಕ್ರಿಯೆಯ ಮರ್ಮವನ್ನರಿಯದೆ ಬರುಮಾತಿನಲ್ಲಿ ಪ್ರಸಾ ದಿಗಳಾದೆವೆಂದು ನುಚ್ಚುರೊಟ್ಟೆ ವ್ಯಾಖ್ಯಾನ್ನವನ್ನು ಯಥೇಚ್ಛವಾಗಿ ಉಂಡು ಅಂಗಗುಣಗಳನ್ನಳಿಯದೆ ಲಿಂಗಾರ್ಪಿತವಮಾಡಿದೆವೆಂದು ಹೇಳುತ್ತ ತೊಳೆ ತೊಳೆದು ಕುಡಿದು ಬಾಹ್ಯಶುಷ್ಕ ಕ್ರಿಯೆಗಳನ್ನೇ ಆಚರಿಸುತ್ತ ಅಂತರಂಗ ಜ್ಞಾನವನ್ನು ಬಿಚ್ಚಿ ಬೆರಿಸಿ ಪರಿಣಮಿಸದೆ ಅನರ್ಥಕ್ಕೀಡಾದ ಹಲವು ಪ್ರಸಾದ ಗ್ರಾಹಿಗಳನ್ನು ಶರಣರು ಕಟುತರವಾಗಿ ನಿಷೇಧಿಸಿದ್ದಾರೆ. ಇಂಥ ಜನರು ಶರಣ ಮಾರ್ಗವನ್ನು ಚಿಕಿತ್ಸ ಭಾವನೆಯಿಂದ ಅಂಗೀಕರಿಸಿ ಸಹಜ ಪ್ರಸಾದಿಗಳಾಗಬೇಕಾಗಿದೆ. ವೀರಶೈವಾಚರಣೆಗಳು ಅಂತರಂಗ ತತ್ವ ಸಮಾವಿಶಿಷ್ಟವಾಗಿವೆ. ಸಾಧಕನ ಬಾಹ್ಯಕ್ರಿಯೆಗಳಲ್ಲೆಲ್ಲ ಅಂತರಂಗದ ಅರುಹಿನ ಛಾಯೆಯು ಮಿರ್ರನೆ ಮಿಂಚುತ್ತಿರಬೇಕು. ಜ್ಞಾನ ಕ್ರಿಯೆ ಗಳ ಸಮಿಶ್ರ ಪ್ರಭೆಯಲ್ಲಿ ಅಂತಃಸ್ಫೂರ್ತಿ ಮಿನುಗುತ್ತಿರಬೇಕು. ಕೇವಲ ಕರ್ಮಠಾಚರಣೆಗೆ ವೀರಶೈವತ್ವದಲ್ಲಿ ಎಡೆಯಿಲ್ಲ. ವೀರಶೈವವು ಆತ್ಮನ ಪುನರ್ಘಟನೆಯ ವೈಜ್ಞಾನವು. ಕರ್ಪುರದೊಳಗಿಪ್ಪ ಅಗ್ನಿಯನ್ನು ಹೊರ ಗೆಡವಿ ತೋರ್ಪಡಿಸಿ ಕೆಲಕಾಲ ನಂತರ ಅಗ್ನಿ ಕರ್ಪುರ ಎರಡೂ ಇಲ್ಲ ದಂತಾಗುವ ಹಾಗೆ ಅಂಗದೊಳಗಿಪ್ಪ ಚಿಲ್ಲಿಂಗವನ್ನು ಪ್ರವೃತ್ತಿ ಮಾರ್ಗ ದಿಂದ ಬೆರ್ಪಡಿಸಿ ನಿವೃತ್ತಿ ಮಾರ್ಗದೋಳ್ ಅಂಗ ಲಿಂಗ ಉಭಯ ವನಳಿಸಿ ನಿಸ್ಸಂಗ ನಿಶ್ಶೂನ್ಯವಾಗಿಪ್ಪುದೇ ವೀರಶೈವ ಶಾಸ್ತ್ರದ ಮೂಲ ಸೂತ್ರವು. ಇದನರಿದಾಚರಿಸುವದೇ ತತ್ವಗ್ರಾಹಕರ ಆದ್ಯ ಕರ್ತವ್ಯವಾ ಗಿದೆ. ಕೇವಲ ಡಂಭಾಚಾರಿಗಳನ್ನು ನಮ್ಮ ಶರಣರು ಈ ರೀತಿ ಖಂ ಡಿಸಿದ್ದಾರೆಃ – "ಅಯ್ಯಾ ಪದಾರ್ಥವನರ್ಪಿಸಿ ಪ್ರಸಾದವಪಡದೆವೆಂಬರ

ನಾವಿದನರಿವೆಯಯ್ಯಾ, ಪದಾರ್ಥವಾವುದು ಪ್ರಸಾದವಾವುದೆಂದರಿಯರು ಪದಾರ್ಥವೇ ಆತ್ಮನು ಪ್ರಸಾದವೇ ಅಖಿಳಕೋಟಿ ಬ್ರಹ್ಮಾಂಡಂಗಳ ಗರ್ಭೀಕರಿಸಿಕೊಂಡಂಥ ಇಷ್ಟಲಿಂಗಕ್ಕೆ ಚಿತ್‌ಚೈತನ್ಯ ಸ್ವರೂಪವಾದಂಥ ಪರವಸ್ತು. ಆ ಆತ್ಮನೆಂಬ ಪದಾರ್ಥವನೆ ಆ ಪರವಸ್ತುವಿನಲ್ಲಿ ಭಿನ್ನವಿಲ್ಲದೆ ಅರ್ಪಿಸಿ ಪದಾರ್ಥ ಭಾವವಿಲ್ಲದೆ ಪ್ರಸಾದವಾದುದೇ ಪ್ರಸಾದ. ಈ ಭೇದವನರಿಯದೆ ಪರದ್ರವ್ಯ ಸಕಲ ಪದಾರ್ಥವನರ್ಪಿಸಿ ಪ್ರಸಾದವ ಪಡೆದೆವೆಂದೆಂಬ ಭ್ರಾಂತ ಬಾಲಕರಿಂದ ಬಿಟ್ಟು ಬಾಲಕರುಂಟೆ ನಿಜ ಗುರುಸ್ವತಂತ್ರಸಿದ್ಧಲಿಂಗೇಶ್ವರಾ."

ಈ ರೀತಿ ಶರಣರು ಪ್ರಸಾದ ತತ್ವ ಮತ್ತು ಪ್ರಸಾದಿಸ್ಥಲದ ಲಕ್ಷಣದ ಬಗ್ಗೆ ಸ್ವಾನುಭಾವ ಸಲಹೆಗಳನ್ನು ಹೃದಯಂಗಮವಾಗುವಂತೆ ಚಿತ್ರಿಸಿದ್ದಾರೆ. ಸಾಧಕರೆಲ್ಲರೂ ಶರಣರ ಉಕ್ತಿಗಳ ಅನುಭಾವ ಹೊಂದಿ ವೀರಶೈವತ್ವದ ನಿಜವಾದ ರಹಸ್ಯವನ್ನು ಕಂಡು ಹಿಡಿದು ಅಂಥಾಚರಣೆಯನ್ನು ನೀಗಿ ಪರಿಶುದ್ಧ ಮನದಿಂದ ಶುದ್ಧ ಜೀವನ ಗುರಿಯನ್ನು ಸಾಧಿಸಿ ನಿತ್ಯ ಸುಖಿಗಳಾಗಿ ಬಾಳಿ ಬೆಳೆಯಲೆಂದೇ ಈ ಲೇಖಕನ ಸದೀಚ್ಛೆ.

---

# ಶಿವಶರಣರ ಶಿವದೀಕ್ಷಾಕಾಲ

(ಲೇಖಾಂಕಃ—೩)

ಲೇ:— ಶ್ರೀಗುರುಮೂರ್ತಿದೇವರು ಜಗದ್ಗುರು ಶ್ರೀಮನ್ನಿಡುಮಾಮಿಡಿ
ಶ್ರೀಶೈಲ ಸಂಸ್ಥಾನ.

ಕಳೆದ ಲೇಖಾಂಕದಲ್ಲಿ 'ದೀಕ್ಷೆ' ಯೆಂದರೇನು? ಅದನ್ನು ಪಡೆಯುವವನು ಹೇಗಿರಬೇಕು? ಶಿವಶರಣರು ಆ ಶಿವದೀಕ್ಷೆಯನ್ನು ಎಂಥವರಿಗೆ ಯಾವಕಾಲಕ್ಕೆ ಉಪಯೋಗಿಸುತ್ತಿದ್ದರು? ಎಂಬ ವಿಷಯಗಳನ್ನು ವಿವೇಚಿಸಲಾಯ್ತು. ಇನ್ನು ಕೆಲವರು ವೀರಶೈವ ಮಕ್ಕಳು ಹುಟ್ಟಿದೊಡನೆ ಸಂಪೂರ್ಣ ಶಿವದೀಕ್ಷೆಯನ್ನು ಮಾಡಬೇಕೆಂದು ವಾದಿಸುವರು. ಇದರ ನಿಜಾಂಶವೇನೆಂಬುದನ್ನು ಇಲ್ಲಿ ನೋಡೋಣ!

### ಜನನವೆಂದರೆ ಯಾವುದು?

ವೀರಶೈವ ತಾತ್ವಿಕ ವಾಙ್ಮಯದಲ್ಲಿರುವ 'ಜನನ' ಶಬ್ದದ ನಿಜಾರ್ಥವನ್ನು ತಿಳಿಯದಿರುವದರಿಂದಲೆ ಈ ಶುಷ್ಕವಾದಕ್ಕೆ ಸಾವಕಾಶ ದೊರೆತಿದೆ. "ಪ್ರತ್ಯಕ್ಷದಂತೆಕಂಡರೂ ಪ್ರಮಾಣಿಸಿ ನೋಡಬೇಕು" ಎಂಬುದನ್ನು ಜೀರ್ಣಿಸಿಕೊಂಡರೆ ವಾದಕ್ಕೆ ಎಡೆಯಿಲ್ಲ; ಅಪಾರ್ಥಕ್ಕೆ ಅವಕಾಶವಿಲ್ಲ.

ದೀಕ್ಷೆಯ ವಿಚಾರದಲ್ಲಿ, ಹುಟ್ಟುವಿಕೆಯೆಂದರೆ ತಾಯಿಯ ಗರ್ಭದಿಂದ ಎಂದರ್ಥವಲ್ಲ. ತಾಯಿಯಗರ್ಭದಿಂದ ಎಂದು ಹೇಳುವದರಿಂದ ತುದಿಯಿಲ್ಲದಷ್ಟು ತೊಂದರೆ ತೊಡಕಾಗುತ್ತವೆ. ಈ ವಿಚಾರವನ್ನು ಹಿಂದಿನ ಲೇಖದಲ್ಲಿ ಲಿಖಿಸಲಾಗಿದೆ; ಮುಂದೆಯೂ ಲಿಖಿಸಲಾಗುತ್ತದೆ. ಹಾಗಾದರೆ ಜನನವೆಂದರೆ ಯಾವುದು ಎಂದರೆ, ಈ ವಿಚಾರದಲ್ಲಿ ಶಿವಶರಣರ ವಚನಪ್ರಮಾಣಗಳನ್ನೆ ಪರಿವಿಡಿದು ಪರಿಕಿಸೋಣ; ಪರಿಶೀಲಿಸೋಣ!

"......ಗುರುಕರಜಾತರಾಗಿ ಇಷ್ಟಲಿಂಗಸಂಬಂಧಿಗಳಾಗಿ
ಭಕ್ತ ಜಂಗಮ ಲಾಂಛನಯುಕ್ತರಾಗಿ ಆಚರಿಸುತ್ತಿಪ್ಪ
ಶಿವಭಕ್ತ, ಜಂಗಮರ ಪೂರ್ವಕುಲ ವರ್ಣಾಶ್ರಮಂಗಳ ವಿಚಾರಿಸದೆ
ಸಮಯಾಚಾರದಿಂದೆ ಲಿಂಗಾರ್ಪಿತ ಮಾಡುವುದೇ ಶಿವಾಚಾರವು."

ಇಲ್ಲಿ ಶಿವಶರಣರು ಹೇಳುವ ಜನನವು ಗುರುಕರಜನನವು. ಇದು ಒಪ್ಪತಕ್ಕ ವಿಚಾರ. ಇದರಿಂದ ದೀಕ್ಷಾಧಿಕಾರಿಗೆ ಗುಣವುಂಟು; ಫಲ

ವುಂಟು. ವಟುವು ಗುರುಕೃಪೆಗೆ ಪಾತ್ರನಾಗುವುದೆ ಒಂದು ಹುಟ್ಟು. ಈ ಗುರುಕರ ಜನನವಾದ ತಕ್ಷಣವೆ ಶಿವದೀಕ್ಷೆಯು ಮಾಡುವದು ಹೆಚ್ಚು ಸಾರ್ಥಕ. ತಾಯಿಯು ಉದರದಿಂದ ಜನಿಸಿದಾಗ ಸಂಪೂರ್ಣ ಶಿವ ದೀಕ್ಷೆಯನ್ನು ಮಾಡುವದರಿಂದ ಯಾವ ಸಾರ್ಥಕವಿಲ್ಲೆಂದು ತಿಳಿದು ಈ ತಾತ್ವಿಕ ಜನನ ಕಲ್ಪನೆಯನ್ನು ಸೂಕ್ತವಾಗಿ ಸಮರ್ಥನೆ ಮಾಡಿದ್ದಾರೆ. ಈ ಗುರುಕರ ಸಂಜನನವು ತಾಯಿಯು ಗರ್ಭದಿಂದ ಹುಟ್ಟಿದ ಶಿಶುಗಳಿಗೆ ಸಾಧ್ಯವಿಲ್ಲ. ಇದು ಕೆಮ್ಮನೆ ಕೈಗೂಡತಕ್ಕುದಲ್ಲ. ಇದಕ್ಕೆ ತಕ್ಕ ಶಕ್ತಿ ಭಕ್ತಿ ಮೈಗೂಡಬೇಕು. ನಂತರ ಗುರುಸೇವೆಯು ಮಾಡಿ ಗುರುವನೊಲಿಸ ಬೇಕು. ಇಲ್ಲಿ ನೋಡಿ !

"......ಗುರೂಪಾವಸ್ಥೆಯಿಂದ ಗುರುಪ್ರತ್ಯಕ್ಷವಮಾಡಿ,
ಆಗುರುವಿನಿಂದ ಚಿದ್ಘನ ಮಹಾಲಿಂಗವ ಪಡೆದು, ಆ ಲಿಂಗಸಹಿತವಾಗಿ
ಭಕ್ತಿ, ಜ್ಞಾನ, ವೈರಾಗ್ಯ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ
ಮೊದಲಾದ ಷಟ್‌ಸ್ಥಲಮಾರ್ಗದಲ್ಲಿ ನಿಂದ ಭಕ್ತಗಣಂಗಳಲ್ಲಿ
ಪಂಚಸೂತಕಗಳ ಕಲ್ಪಿಸದೆ......"

ಈ ವಚನವೂ ಸಹ ಮೇಲ್ಕಂಡ ಅಭಿಪ್ರಾಯುವನ್ನೆ ಎತ್ತಿ ಮೆರೆಯು ತ್ತಿದೆ. 'ಗುರೂಪಾವಸ್ಥೆಯಿಂದ ಗುರು ಪ್ರತ್ಯಕ್ಷವ ಮಾಡಿ' ಎಂದು ಹೇಳು ವದರಿಂದ ಬರಿ ಗರ್ಭಜನನವು ಶಿವದೀಕ್ಷೆಗೆ ಅನರ್ಹವೆಂಬುದು ಪರಿಸ್ಫುಟ ವಾಗುತ್ತಿದೆಯಲ್ಲದೆ ಗುರೂಪಾವಸ್ಥೆಯೊಡನೆ ಗುರುಕರಕಂಜಾತತ್ವವೆ ಪ್ರತಿ ಪಾದಿತವಾಗಿ ಪರಿಶೋಭಿಸುತ್ತದೆ. ಇದಲ್ಲದೆಃ—

"ಮಲ ಮಾಯಾ ಪಾತಕ ಸೂತಕ ರಹಿತನಾದ
ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರುವಿಂದ
ವೇಧಾಮಂತ್ರಕ್ರಿಯಾದೀಕ್ಷೆಯು ಪಡೆದು
ದ್ವಾದಶ ಮಲಪಾಶ ಕರ್ಮವ ತ್ಯಜಿಸಿ
ಮನಮಾರುತ ಮೊದಲಾದ ದ್ವಾದಶ ಇಂದ್ರಿಯಂಗಳ
ಗುರುಪಾದಜಲದಿಂದ ಪ್ರಕ್ಷಾಲಿಸಿ, ದಂತಪಂಕ್ತಿಕ್ರಿಯೆಗಳಮಾಡಿ,
ಕಟಿಸ್ನಾನ-ಕಂಠಸ್ನಾನ-ಮಂಡೆಸ್ನಾನ-ಸರ್ವಾಂಗಸ್ನಾನವ ಮಾಡಿ,
ಕ್ರಿಯಾಭಸಿತದಿಂದ ಸ್ನಾನ-ಧೂಳನ-ಧಾರಣಮರ್ಮಂಗಳ ತಿಳಿದಾಚರಿಸಿ,

ಸಾಕಾರನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ
ಲಿಂಗಜಂಗಮವನರ್ಚಿಸಿ, ನಿರ್ವಂಚಕತ್ವದಿಂದ
ಘನಪಾದತೀರ್ಥಪ್ರಸಾದಮಂತ್ರದಲ್ಲಿ
ನಿಂದ ನಿಜಾವಸ್ಥೆಯೇ ಕ್ರಿಯಾಚಾರವೆಂಬೆನಯ್ಯ."

ದೀಕ್ಷೆಯೊಡನೆಯೆ ಬರತಕ್ಕ ಅಥವಾ ಇರತಕ್ಕ ಈ ಕ್ರಿಯಾಚರಣೆಯು ಈ ಕಟಿ-ಕಂಠ ಮುಂತಾದ ಸ್ಥಾನಗಳು ಗರ್ಭಜನ್ಮಶಿಶುವಿಗೆ ಎಂದಾದರೂ ಶಕ್ಯವಿದೆಯೆ? ಇವೆಲ್ಲ ಗುರುಕರಸಂಜಾತನಿಗೆ ಮಾತ್ರ ಸಾಧ್ಯವೂ ಗುರುಕರಸಂಜಾತನಾಗಬೇಕಾದರೆ ಕಾಲಾವಧಿಯೂ ಬೇಕೆಂಬುದೆ ಈ ವಚನದ ಮುಖ್ಯ ತಾತ್ಪರ್ಯ.

ಮಾತೃಗರ್ಭಜನ್ಮದಿನವೆ ಗುರುಕರಕಂಜಾತನಾಗಲು ಸಾಧ್ಯವಿಲ್ಲೆಂಬುದನ್ನು ಮೇಲ್ಕಂಡ ಎರಡು ವಚನಗಳಿಂದ ಪ್ರತಿಪಾದಿಸಲಾಯ್ತು. ಗುರುಕರ ಜನನಕ್ಕೆ ಇನ್ನೆರಡು ವಚನಗಳನ್ನು ತೋರಲಾಗುತ್ತದೆ.

"ಅಸ್ತಿತೇ, ಜಾಯುತೇ, ವಿಪರಿಣಮತೇ, ವಿವರ್ಧತೇ, ಅಪಕ್ಷಯತೇ,
ವಿನಶ್ಯತೇ ಎಂಬ ಷಡ್ಭಾವಂಗಳು ಕೆಡುವದಕ್ಕೆ ವಿವರವೆಂತೆಂದೊಡೆ—

ಶ್ರೀಗುರುವಿನ ಕೃಪಾಗರ್ಭ ಮಧ್ಯದಲ್ಲಿ ಇದ್ದವ— 'ನಾನಹುದು' ಎಂದರಿದಾಗಳೇ ಅಸ್ತಿತೇ ಎಂಬ ವಿಕಾರ ಕೆಟ್ಟಿತ್ತು.

ಗುರುಕರುಣದಲ್ಲಿ ಜನಿಸಿದನಾಗಿ 'ನಾಹಂಯೋನಿಜ' ವೆಂದರಿ
ದಾಗಳೇ ಜಾಯುತೇ ಎಂಬ ವಿಕಾರ ಕೆಟ್ಟಿತ್ತು.........
ಇಂತೀ ಲಿಂಗಸಂಗದಿಂದ ಷಡ್ಭಾವ ವಿಕಾರವಳಿದು ನಿಮ್ಮ ವಿಕಾರ
ವೆಡೆಗೊಂಡಿತ್ತು ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ ನಿಮ್ಮ ಭಕ್ತಂಗೆ"

ಷಡ್ಭಾವ ವಿಕಾರಗಳನ್ನು ಕಳೆದು ಸದ್ಭಕ್ತನಾಗುವವನ ಗರ್ಭ ತಾಯಿ ಗರ್ಭವಲ್ಲ, ಶ್ರೀಗುರುವಿನ ಕೃಪಾಗರ್ಭ; ಜನನ ಶ್ರೀಗುರುವಿನ ಕರುಣ; ಎಂದು ಹೇಳಿದೆ. ಸದ್ಭಕ್ತನಾಗಬೇಕಾದರೆ ಷಡ್ಭಾವವಿಕಾರಗಳನ್ನು ಕಳೆಯಬೇಕು. ಷಡ್ಭಾವವಿಕಾರಗಳು ವಿನಾಶವಾಗಬೇಕಾದರೆ ಶ್ರೀಗುರುವಿನ ಕೃಪಾಗರ್ಭದಲ್ಲಿ ಬಾರದೆ ವಿಧಿಯಿಲ್ಲ. ಶ್ರೀಗುರುವಿನ ಕರಕಂಜಾತನಾಗದೆ ಸಾಧ್ಯವಿಲ್ಲ. ಭಾವಿಸಿದರೆ ಮಾತೃಗರ್ಭದಿಂದುದಿಸಿದ ಮಗುವಿಗೆ ಆ ಗಳಿಗೆಯಲ್ಲಿ ಭಾವವಿಕಾರಗಳೆಲ್ಲಿ? ವಿಕಾರವಿಲ್ಲದ ಮೇಲೆ ವಿನಾಶವೆಲ್ಲಿ? ಆದ್ದರಿಂದ ಭಾವವಿಕಾರ ಬೀಜ ಮೊಳೆದೋರಬೇಕಾದರೆ ಕೆಲವು ಕಾಲಾವಧಿಯು ಬೇಕು. ಆ ಕಾಲಾವಧಿಯೆ ಶಿವದೀಕ್ಷೆಗೆ ತಕ್ಕ ವಯಸ್ಸು.

ಶಿವದೀಕ್ಷಾಧಿಕಾರಿಗೆ ಶ್ರೀಗುರುಕೃಪಾಗರ್ಭವಾಸ ಶ್ರೀಗುರುಕರುಣಕರಸಂಜನನಗಳೆ ಮುಖ್ಯವಾದವುಗಳು.

"...ಶ್ರೀಗುರು ತನ್ನ ಕರುಣಾಕಟಾಕ್ಷ ನಿರೀಕ್ಷಣೆಯಿಂದ
ಕರಕಮಲದಲ್ಲಿ ಬಿಸಲಾದನಾಗಿ... "

ಶ್ರೀಗುರುವಾಗಿ ಕರುಣಿಸಿ ತಮ್ಮ ಪ್ರಸನ್ನ ಹಸ್ತದಿಂದೆನಗೆ
ಜನನ ಮಾಡಿದ ಮಾತಾಪಿತನು ತಾನೆಯಾದನು.
ಮಹಾದೀಕ್ಷೆಯಿಂ ಮಾಡಿ ಶ್ರೀಗುರುವಾದನು
— ಉರುಲಿಂಗಪೆದ್ದಿ.

ಈ ವಚನದಲ್ಲಿ ದೀಕ್ಷಾಧಿಕಾರಿಯ ಹುಟ್ಟು ಯಾವುದು? ತಂದೆ ತಾಯಿಗಳಾರು? ರಕ್ತಸಂಬಂಧದ ತಾಯ್ತಂದೆಗಳು ಭಕ್ತಸಂಬಂಧಕ್ಕೆ ಸರಿಬೀಳರು. ಈ ತಾಯ್ತನವೆ ಬೇರೆ. ಈ ಹುಟ್ಟುವಿಕೆಯೆ ಬೇರೆ. ಶ್ರೀಗುರುವಿನ ಕರಕಮಲದಲ್ಲಿ ಹುಟ್ಟಿದೊಡನೆಯೆ ದೀಕ್ಷೆಯ ಮಾಡಬೇಕೆಂದು ಹೇಳುವದೇ ನಿಜವಾದ ಅರ್ಥ ಎಂಬಂಶಗಳು ಸುಸ್ಪಷ್ಟವಾಗಿವೆ. ಇದೇ ಅಭಿಪ್ರಾಯವನ್ನು ಇನ್ನೂ ಚನ್ನಾಗಿ ಎತ್ತಿ ಹೇಳುವ ಮಹಾದೇವಿಯಕ್ಕಗಳ ಈ ವಚನವನ್ನು ನೋಡಿ!

"......ಹುಟ್ಟಿದೆ ಶ್ರೀಗುರುವಿನ ಹಸ್ತದಲ್ಲಿ
ಬೆಳೆದೆನು ಅಸಂಖ್ಯಾತರ ಕರುಣದೊಳಗೆ
ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ,
ಪರಮಾರ್ಥವೆಂಬ ಸಕ್ಕರೆಯ ನಿಕ್ಕಿದರು ನೋಡಾ!
ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದರು

ಈ ಹುಟ್ಟಿನ ಗುಟ್ಟು, ಈ ಬೆಳೆವಣಿಗೆಯ ಭಾವ, ಈ ಆಹಾರದ ವಿಚಾರ, ಈ ಸಲಹುವಿಕೆಯ ಸುಕದ ಸುಳಿ–ಏನೆಂಬುದನ್ನು ಆಳವಾಗಿ ಆಲೋಚಿಸಬೇಕು. ಪಾರಮಾರ್ಥಿಕ ಶಿಶುವಿನ ಹುಟ್ಟು, ಪ್ರಾಪಂಚಿಕ ಹುಟ್ಟಲ್ಲ; ಬೆಳವಣಿಗೆ ಪ್ರಾಕೃತಿಕ ಪ್ರೇಮ (ಮೋಹ)ದಿಂದಲ್ಲ; ಮತ್ತು ಭೌತಿಕ ಆಹಾರದಿಂದಲ್ಲ; ಬಾಳಿಕೆ ಕಷ್ಟಸುಖಹುಟ್ಟುಸಾವುಗಳಿಂದಲ್ಲ; ಈ ಹುಟ್ಟು ಬೆಳೆವಣಿಗೆ ಈ ಬೆಳೆದು ಬಾಳಿಕೆಗಳ ರೀತಿಯೆ ಬೇರೆ; ಅವಸ್ಥೆಯೆ ಬೇರೆ. ಈ ಹುಟ್ಟಿನಲ್ಲಿ ಔದರ್ಯದ ಯಾತನೆಗಳಿಲ್ಲ. ಈ ಬೆಳೆವಣಿಗೆಯಲ್ಲಿ ಮೋಹದ ಸೊಗಡಿಲ್ಲ; ಆಹಾರದ ವಿರಸತೆ-ಕ್ಷಣಿಕತೆಗಳಿಲ್ಲ. ಈ ಬಾಳಿಕೆಯಲ್ಲಿ ಸಾವಿನ ಸಂಶಯವಿಲ್ಲ. ಜೀವನದ ಅನಂತತೆ ಮತ್ತು

ಅಖಂಡಾನಂದತ್ವವನ್ನು ಸೂಚಿಸುವ ಈ ವಚನದ ಸೌಂದರ್ಯವನ್ನು ನಮ್ಮ ಈ ಅಲ್ಪ ಕುಂಚಿ (ಲೇಖನಿ) ನಿಂದ ರೂಹಿಸಲು ಸಾಧ್ಯವಿಲ್ಲ. ಒಟ್ಟಿನಲ್ಲಿ ಈ ವಚನವೂ ಶಿವದೀಕ್ಷಾಧಿಕಾರಿಗೆ ಗುರುಕರ ಜನನವೆ ಅತಿ ಪ್ರಾಮುಖ್ಯ ವಾದುದೆಂಬುದನ್ನೂ ಭೇರಿನಿನಾದದಲ್ಲಿ ಬಿತ್ತರಿಸುತ್ತದೆ.

ದೀಕ್ಷಾಧಿಕಾರಿಯು ಗುರುಕರ ಜನನ ವಿಷಯದಲ್ಲಿ ಹೀಗೆ ಬೇಕಾದಷ್ಟು ವಚನಗಳನ್ನು ಉದಹರಿಸಬಹುದು. ಆದರೆ ವೃಥಾ ಲೇಖ ಲಂಬಿಸುವದೆಂದು ನಿಲ್ಲಿಸಲಾಗಿದೆ. ಇನ್ನೂ ಕಾಣಬೇಕೆನ್ನುವವರು ವಚನ ವಾಙ್ಮಯದ ಪ್ರತಿ ಪುಟದಲ್ಲಿಯೂ ಕಾಣಬಹುದು. ಒಟ್ಟಿನಲ್ಲಿ ಶಿವಶರಣರ ವಚನಗಳಿಂದ ಸಂಪೂರ್ಣ ಶಿವದೀಕ್ಷೆಯು ಮಾತೃಗರ್ಭ ಜನನದಲ್ಲಿಲ್ಲದೆ ಗುರುಕರ ಸಂಜನನದಲ್ಲಿ ಮಾಡಬೇಕೆಂದು ನಿರ್ದಿಷ್ಟವಾಗುತ್ತದೆಯಲ್ಲದೆ ಹುಟ್ಟಿದೊಡನೆಯೆಂದರೆ ಗುರುಕರಕಂಜಾತರಾದೊಡನೆ ಎಂದು ಅರ್ಥಮಾಡಬೇಕೆಂದು ಅಭಿವ್ಯಕ್ತವಾಗುತ್ತದೆ.

ಈ ವಿಷಯದಲ್ಲಿ ವೀರಶೈವ ತತ್ವಜ್ಞಾನದಲ್ಲಿ ವಿಶೇಷ ಪಾಂಡಿತ್ಯವುಳ್ಳ ಮತ್ತು ಆಚರಿಸಿ ಅನುಭವವುಳ್ಳ 'ಸದ್ಧರ್ಮದೀಪಿಕೆ' ಯು ಸಂಪಾದಕರಾದ ಶ್ರೀ ಚನ್ನಮಲ್ಲಿಕಾರ್ಜುನರು ತಾವು ಬರೆದ "ವೀರಶೈವ" ಎಂಬ ಗ್ರಂಥದಲ್ಲಿ:—

"ಹುಟ್ಟಿದಾಗ ಎಂಬುದಕ್ಕೆ ವೀರಶೈವನು ಎನಿಸಿಕೊಂಡು ಜನಿಸಿದಾಗ
ಎಂದರೆ ಮಾಂಸದ ಪಿಂಡವನ್ನು ಕಳೆದು ಮಂತ್ರಪಿಂಡದ ಸ್ವರೂಪವನ್ನು
ಹೊಂದಿ ಹುಟ್ಟಿದಾಗ ಅಥವಾ "ಗುರುವಿನ ಮಗನಾದಾಗ"
ಎಂದು ಅರ್ಥವನ್ನು ಮಾಡಬೇಕು.

ಎಂದು ಸ್ಪಷ್ಟವಾಗಿ ನಿರ್ದುಷ್ಟವಾಗಿ ಶಿವಶರಣರ ವಚನಗಳ ಹೃದಯಾಭಿಪ್ರಾಯವನ್ನೆ ಎತ್ತಿ ಹೇಳಿದ್ದಾರೆ. ಇದರಿಂದಲಾದರೂ "ಹುಟ್ಟಿದಾಗ" ಎಂಬುದಕ್ಕೆ ಯಾವುದು ಸಹಜಾರ್ಥವೆಂಬುದನ್ನು ವಾದಿಗಳೂ ಇತರ ವೀರಶೈವ ಸಹೃದಯರೂ ನಿಷ್ಪಕ್ಷದೃಷ್ಟಿಯಿಂದ ನಿಜಾರ್ಥಸಂತುಷ್ಟಿಯಿಂದ ವಿವೇಚಿಸಿ ನೋಡಬೇಕು; ವಿವರಿಸಿ ಬರೆಯಬೇಕು; ವಿಚಾರಿಸಿ ಆಚರಿಸಬೇಕು.

---

# ನವಯುಗದ ನಾಗರಿಕನೆಂದರೆ ಯಾರು?

(ಶ್ರೀ. ಸದಾಶಿವಪ್ಪ ತೆನಿಹಳ್ಳಿ ವಿಜಾಪುರ)

ಪ್ರಪಂಚದಲ್ಲಿ ನಾಗರಿಕತೆಯು ಅಭಿವೃದ್ಧಿಯಾದಂತೆ ಮಾನವ ಜಾತಿಯು ಸುಖಸಂಪತ್ತನ್ನು ಪಡೆಯಲು ನಿರಂತರವೂ ಹೊಸ ವಿಚಾರಗಳೂ ಸಿದ್ಧಾಂತಗಳೂ ಉತ್ಪನ್ನವಾಗುತ್ತಿರುತ್ತವೆ. ಮಾನವ ಜಾತಿಯು ಜ್ಞಾನಸಂಪರ್ಕವಿಲ್ಲದೆ ಎಷ್ಟೋ ದಿವಸ ತನ್ನ ಆಯುಷ್ಯವನ್ನು ಕಳೆದಿರುವದು. ಜ್ಞಾನಕಿರಣಗಳ ಸ್ಪರ್ಶವಾದಂದಿನಿಂದ ಅದು ದಟ್ಟಡಿ ಇಡುತ್ತಾ ಈಗಿನ ನಾಗರಿಕತೆಯ ಮೆಟ್ಟಿಲಕ್ಕೆ ಬಂದು ನಿಂತಿರುವದು, ಪಾಶ್ಚಿಮಾತ್ಯರ ವಿಜ್ಞಾನ ಶೋಧನೆಯಿಂದ ಇಡೀ ಜಗತ್ತನ್ನೇ ಒಂದು ಕನ್ನಡಿಯಲ್ಲಿ ನೋಡುವಂತಾಗಿದೆ. ಜಗತ್ತಿನ ಒಂದು ಭಾಗದ ಜನಾಂಗವು ಮತ್ತೊಂದು ಭಾಗದ ಜನಾಂಗವನ್ನು ಗುರುತಿಸಬಲ್ಲದು, ಮಾತಾಡಿಸಬಲ್ಲದು. ಹಿಂದಕ್ಕೆ ಕನಸಾಗಿ ಕಂಡದ್ದನ್ನು ಇಂದು ನನಸಾಗಿ ನೋಡುತ್ತೇವೆ. ಅಂತೂ ಜಗತ್ತಿನ ಯಾವ ಭಾಗದೊಳಗೆ ನೋಡಿದರೂ ಕ್ರಾಂತಿಯ ಕಹಳೆಯು ಕೇಳುವದು ಪ್ರತಿಯೊಂದು ಜನಾಂಗವು ಜಗತ್ತಿನ ಈ ಹೋರಾಟದಲ್ಲಿ ನಾಗರಿಕತೆಗೆ ತಕ್ಕಂತೆ, ತನ್ನ ಸ್ಥಾನವನ್ನು ಭದ್ರಮಾಡಿಕೊಳ್ಳಲು ಹವಣಿಸುವದು. ಆದರೆ ಅದು ರಕ್ತಮಯ ಕ್ರಾಂತಿಯಿಂದಾಗಬೇಕಾಗಿಲ್ಲ ಆತ್ಮಜ್ಞಾನದ ಬೆಳಕಿನಿಂದ ಏಳಬೇಕಾಗಿದೆ. ಪ್ರಸ್ತುತ ಲೇಖನದ ಗುರಿಯಾದರೂ ಇದೇ.

## ನಮ್ಮ ದೇಶದ ಅಧೋಗತಿ ಎಲ್ಲಿ?

ಜೀವನದ ಪರಿಪೂರ್ಣತೆಗೆ ಆತ್ಮಜ್ಞಾನದ ಅವಶ್ಯಕತೆ ಎಷ್ಟು ಇದೆಯೋ ಅಷ್ಟೇ ಭೌತಿಕ ಜ್ಞಾನದ ಅವಶ್ಯಕತೆಯೂ ಉಂಟು. ಭೌತಿಕ ಜ್ಞಾನದಿಂದ ಆತ್ಮಸಾಕ್ಷಾತ್ಕಾರವಾಗದಿದ್ದರೂ ಪ್ರಕೃತಿಯ ಗೂಢಶಕ್ತಿಯನ್ನು ಬೈಲಿಗೆಳೆದು ನಮ್ಮ ಜೀವನದ ವ್ಯವಹಾರವನ್ನು ಸರಾಗವಾಗಿ ಸಾಗುವಂತೆ ಮಾಡುವದು. ಉದಾ:— ರೇಡಿಯೋ ಮೂಲಕ ಸಾವಿರಾರು ಮೈಲುಗಳಾಚೆಗಿರುವ ವ್ಯವಹಾರವನ್ನು ನಾವು ನಿಮಿಷಾರ್ಧದಲ್ಲಿ ಕೇಳುವೆವು. ಸೂಕ್ಷ್ಮದರ್ಶಕ ಯಂತ್ರದಿಂದ ಆಕಾಶದಲ್ಲಿರುವ ಚಿತ್ರವಿಚಿತ್ರವಾದ ನೋಟಗಳನ್ನು ಕಾಣುವೆವು. ಜಲಾಂತರ್ಗಾಮಿಗಳಿಂದ ನೀರಿನ

ತಳದಲ್ಲಿರುವ ನಾನಾತರದ ಪ್ರಾಣಿಗಳನ್ನು ನಾವು ಸಂಶೋಧಿಸಬಹುದು. ವಿಮಾನಗಳ ಸಹಾಯದಿಂದ ಪ್ರಕೃತಿ ಸೌಂದರ್ಯವನ್ನು ಕಣ್ತುಂಬ ನೋಡಲು ಅನುಕೂಲವಾಗುವದು. ಇವೆಲ್ಲವುಗಳು ಭೌತಿಕ ಜ್ಞಾನಿಗಳು ನಾಗರಿಕ ಪ್ರಪಂಚಕ್ಕೆ ಮಾಡಿದ ಉಪಕಾರಗಳು. ಅಂತು ಭೌತಿಕ ಜ್ಞಾನಿಯು ಪ್ರಕೃತಿ ಮಾತೆಯ ಗೂಢಶಕ್ತಿಯನ್ನು ಹೊರಗೆಡಹಿ ಜೀವನದ ವ್ಯವಹಾರಗಳನ್ನು ಮೇಲಿನ ಮಟ್ಟಕ್ಕೇರಿಸುವನು. ಆದರೆ ಅವನಿಗೆ ಆತ್ಮಜ್ಞಾನದ ಅರಿವು ಇಲ್ಲದೆ ಹೋದರೆ ಒಮ್ಮೊಮ್ಮೆ ಉಪಕಾರಕ್ಕೆ ಬದಲು ಅಪಕಾರವಾಗುವುದು. ಯಾಕಂದರೆ ನಾಗರಿಕತೆಯ ಶಿಖರಕ್ಕೆ ಮುಟ್ಟಿದ ಯುರೋಪವು ಇಂದು ಶಾಂತಿಯ ಹೆಸರಿನಿಂದ ಎಂದೂ ಕಾಣದಂಥ ರಕ್ತಮಯ ಹೋರಾಟವನ್ನು ಹೂಡಿದೆ. ಇದಕ್ಕೆ ಆತ್ಮಜ್ಞಾನದ ಅಭಾವವೆಂದೇ ಹೇಳಬೇಕಾಗುವದು.

ನಮ್ಮ ದೇಶದಲ್ಲಿ ಆತ್ಮಜ್ಞಾನದ ಅಭಾವವಿಲ್ಲದಿದ್ದರೂ ಕೂಡ ಅದು ವ್ಯವಹಾರಿಕ ಧರ್ಮ (ರಾಷ್ಟ್ರೀಯ ಧರ್ಮ)ವಾಗದೆ ವ್ಯಕ್ತಿಯ ಧರ್ಮವಾಯಿತು. ಯಾವನು ಆತ್ಮಸಾಕ್ಷಾತ್ಕಾರಿಯೋ ಅವನಿಗೆ ಸ್ವರ್ಗಮುಂತಾದ ಕಾಲ್ಪನಿಕ ಜಗತ್ತಿನ ಅರಿವೆ ಉಂಟಾಯಿತು. ನಮ್ಮ ಕಣ್ಣಿಗೆ ಕಾಣಿಸುವ ಈ ಜಗತ್ತನ್ನು ಸುಳ್ಳುಮಾಡಿ ಕಾಲ್ಪನಿಕ ಜಗತ್ತಿನ ಬೆನ್ನು ಹತ್ತಿದರು. ಇದರಿಂದ ಆತ್ಮಜ್ಞಾನಿಗೂ ಸಾರ್ವಜನಿಕರಿಗೂ ಸಂಬಂಧವು ತಪ್ಪಿತು. ಅವನಲ್ಲಿರತಕ್ಕ ಜ್ಞಾನವು ಅವನಲ್ಲಿಯೇ ಲೀನವಾಯಿತೇ ಹೊರ್ತು ಸಾರ್ವಜನಿಕ ಜೀವನದಲ್ಲಿ ಸೇರ್ಪಡೆಯಾಗಲಿಲ್ಲ. ಮುಂದೆ ಬರಬರುತ್ತ ಪುರಾಣ ಕಾಲವು ಆರಂಭವಾದಂದಿನಿಂದ ನಾವು ಮತ್ತಿಷ್ಟು ಕೆಳಗಿನ ತರಗತಿಗೆ ಇಳಿದೆವು. ಧರ್ಮದ ಹೆಸರಿನಿಂದ ಸ್ವಾರ್ಥಸಾಧಕ ಉಪದೇಶಕರು ಜನರ ಮನಸ್ಸನ್ನು ಮೂರ್ತಿಯ ಪೂಜೆಯ ಕಡೆಗೆ ಎಳೆದರು. ಮುಂದೆ ಪಂಥಗಳು ಬೆಳೆದವು. ಪಂಥಗಳು ಬೆಳೆದಂತೆ ಬಡದಾಟಗಳು ಆರಂಭವಾದವು. ಜನಾಂಗದಲ್ಲಿ ಮೂಢ ನಂಬಿಕೆಯು ಮನೆಮಾಡಿಕೊಂಡಿತು. ನಮ್ಮ ದೇಶದ ಹಿಂದಿನ ಇತಿಹಾಸವನ್ನು ನೋಡಿದರೆ ಅದೊಂದು ಬಡಿದಾಟದ ಕಾಲವೆಂದೇ ಹೇಳಬೇಕಾಗುವದು. ಧರ್ಮದ ಹೆಸರಿನಲ್ಲಿ ವ್ಯಕ್ತಿಯ ಮಹತ್ವಾಕಾಂಕ್ಷೆಗಾಗಿ ನಮ್ಮ ಜನಾಂಗವು ಬಡದಾಡಿತೇ ಹೊರ್ತು ಸಾರ್ವಜನಿಕ ಹಿತಕ್ಕಾಗಿ ಒಂದೂ ಕೂಡ ಯುದ್ಧವಾಗಿಲ್ಲ. ಧರ್ಮೋಪದೇಶಕರು ಸಮಾಜದಲ್ಲಿ ತಮ್ಮ

ಮೇಲ್ಮೆಯನ್ನು ನಿರಂತರವಾಗಿ ಉಳಿಸಿಕೊಳ್ಳುವ ಸಲುವಾಗಿ ಸಮಾಜದಲ್ಲಿ ಚಾತುರ್ವರ್ಣವನ್ನು ನಿರ್ಮಿಸಿದರು. ಅದ್ದರಿಂದಲೆ ಇಂದಿಗೂ ೬ ಕೋಟಿ ಜನಸಂಖ್ಯೆಯುಳ್ಳ ಒಂದು ಪ್ರಬಲ ಹರಿಜನ ಜನಾಂಗವು ನಮಗೆ ವಿರೋಧಿಯಾಗಿ ನಿಂತಿರುವದು.

ವಿಜ್ಞಾನ ಮತ್ತು ಆತ್ಮಜ್ಞಾನ ಇವುಗಳೆರಡೂ ಒಂದೇ ಆತ್ಮದಿಂದ ಹೊರಟ ಎರಡು ಶಾಖೆಗಳು. ಭೌತಿಕ ಜ್ಞಾನವು ವಿಶ್ವದ ಒಂದೊಂದು ಕೋಶವನ್ನು ಬಿಡಿಸಿ ಅದನ್ನು ನಮ್ಮ ಹಿಡಿತಕ್ಕೆ ತಂದುಕೊಡುವದು. ಆತ್ಮಜ್ಞಾನವು ಅವುಗಳನ್ನೆಲ್ಲ ಒಂದುಗೂಡಿಸಿ ವಿಶ್ವಾತ್ಮನ ಪರಿಚಯ ಮಾಡಿಕೊಡುವದು. ವಿಶ್ವಸತ್ಯ ಆತ್ಮಮಿಥ್ಯ ಎಂದು ನಂಬುವವರಿಗೆ ವಿಶ್ವವು ಒಂದು ಬರೇ ಬಂಡೆಗಲ್ಲಾಗಿ ಕಾಣಿಸುವದು. ಆತ್ಮಸತ್ಯ ವಿಶ್ವ ಮಿಥ್ಯ ಎಂದು ನಂಬುವವರಿಗೆ ಈ ಜಗತ್ತೇ ಶೂನ್ಯಮಯವಾಗಿ ಕಾಣಿಸುವದು. ಆದ್ದರಿಂದ ನಮಗೆ ಕಾಣಿಸುವ ಈ ಜಗತ್ತು ಸತ್ಯ, ಮತ್ತು ಆದರಲ್ಲಿ ಅಡಿಗಿಕೊಂಡಿರುವ ಅದೃಶ್ಯ ಶಕ್ತಿಯೂ ಸತ್ಯ. ನಮ್ಮ ದೇಹವೂ ಸತ್ಯ, ನಮ್ಮ ದೇಹದೊಳಗಿರತಕ್ಕ ಆತ್ಮವೂ ಸತ್ಯ, ಭೌತಿಕಜ್ಞಾನ ಆತ್ಮಜ್ಞಾನಗಳೆರಡೂ ಒಂದೇ ನಾಣ್ಯದ ಇಕ್ಕೆಲಬುಗಳಿದ್ದಂತೆ. ನಮ್ಮ ಪೂರ್ವಿಕರು ಭೌತಿಕಪ್ರಪಂಚವು ಸುಳ್ಳೆಂದು ನಂಬಿ ಬರೇ ಆತ್ಮಜ್ಞಾನದ ಬೆನ್ನು ಹತ್ತಿದರಿಂದಲೇ ನಮ್ಮ ಬಾಳು ಶೂನ್ಯಮಯವಾಗಿ ಹೋಯಿತು. ಅದ್ದರಿಂದ ನಾವು ಪ್ರಗತಿಯ ಮಾರ್ಗವನ್ನು ಕಾಣದೇ ಅಧೋಗತಿಯ ಹಾದಿಯನ್ನು ಹಿಡಿದೆವು.

## ನಮ್ಮ ಮುಂದಿನ ಮಾರ್ಗ.

ಇಲ್ಲಿಯ ವರೆಗೆ ಜೀವನಕ್ಕೆ ಭೌತಿಕ ಮತ್ತು ಆತ್ಮಜ್ಞಾನದ ಅವಶ್ಯಕತೆ ಎಷ್ಟಿದೆ ಎಂಬುದನ್ನು ಹೇಳಿದ್ದಾಯಿತು. ಇನ್ನು ಮುಂದೆ ನಾವು ಮಾಡತಕ್ಕ ಕರ್ತವ್ಯಗಳ ಬಗ್ಗೆ ಸ್ವಲ್ಪ ವಿಚಾರಿಸೋಣ. ನಮ್ಮ ದೇಶದ ಯಾವ ಭಾಷೆಯಲ್ಲಿ ನೋಡಿದರೂ ಕೂಡ ಉಚ್ಚತರದ ಸಾಹಿತ್ಯವು ಇದ್ದೇ ಇರುವದು. ಆದರೆ ಅದರಿಂದ ಧರ್ಮವು ಕೇವಲ ಗ್ರಂಥಸ್ಥವಾಗಿದೆಯೇ ಹೊರ್ತು ಸಾರ್ವಜನಿಕ ಜೀವನದಲ್ಲಿ ಸಮರಸವಾಗಿರುವದಿಲ್ಲ. ಜೀವನಕ್ಕೆ ಎಲ್ಲಿಯ ವರೆಗೆ ಆತ್ಮಜ್ಞಾನದ ಸಂಪರ್ಕವಿಲ್ಲವೋ ಅಲ್ಲಿಯ ವರೆಗೆ ಸ್ವಾರ್ಥವು ನಮ್ಮ ಬೆನ್ನು ಬಿಡಲಾರದು. ಈಗಿನ ಯಾಂತ್ರಿಕ ಯುಗದಲ್ಲಿ ಸಾಹಿತ್ಯವನ್ನು

ಪ್ರಸಾರ ಮಾಡಲು ಒಳ್ಳೇ ಅನುಕೂಲವಿರುವದು. ಮತ್ತು ನಮ್ಮಲ್ಲಿ ಸಾಹಿತಿಗಳೇನು ಕಡಿಮೆಯಿರುವದಿಲ್ಲ. ನೋಬೆಲ್ ಪಾರಿತೋಷಕವನ್ನು ಪಡೆದ ವಿಶ್ವಕವಿ ರವೀಂದ್ರನಾಥ ಟಾಗೋರರವರ ಆತ್ಮಗೀತೆಗಳನ್ನೂ, ಮಹರ್ಷಿ ಅರವಿಂದಘೋಷರಂಥ ಅಖಂಡ ಆತ್ಮಜ್ಞಾನಿಗಳ ಅಮರವಾಣಿಯನ್ನೂ, ರಾವಬಾಪೂರೂ ಹಳಕಟ್ಟಿಯವರಿಂದ ಪುನಃ ತಲೆಯತ್ತಿನಿಂತ ವಚನವಾಙ್ಮಯವನ್ನೂ ನಾವು ನಮ್ಮ ದೇಶದ ಮೂಲೆ ಮೂಲೆಯಲ್ಲಿ ಮುಟ್ಟಿಸಬೇಕು. ಜನಾಂಗದಲ್ಲಿಯ ಜಾತಿವಿಶಿಷ್ಟವಾದ ಕಿರುಕಳ ಭಾವನೆಯನ್ನು ಹೊಡೆದು ಹಾಕಿ ನಾವೆಲ್ಲರೂ 'ವಿಶ್ವಾತ್ಮನ ಮಕ್ಕಳು' ಎಂಬ ವಿಶ್ವಭಾವನೆಯನ್ನು ಜನರಲ್ಲಿ ತುಂಬಬೇಕು, ಇದುವೇ ನಮ್ಮ ನಿಜವಾದ ಸ್ವರಾಜ್ಯದ ಬೀಜವು. ಇಲ್ಲದೇಹೋದರೆ ನಮಗೆ ಸ್ವರಾಜ್ಯ ಸಿಕ್ಕರೂ ಕೂಡ ಅದು ಸ್ವಲ್ಪೇ ದಿವಸಗಳಲ್ಲಿ ಪರರ ಪಾಲಾಗುವದು ಖಂಡಿತ. ಈಗ ನಾವು ಹೊಸ ಜಗತ್ತಿನಲ್ಲಿ ಕಾಲಿಡಹತ್ತಿದ್ದೇವೆ. ನಮ್ಮ ಜೀವನ ರಥವು ವಿಜ್ಞಾನ ಮತ್ತು ಆತ್ಮಜ್ಞಾನಗಳ ಚಕ್ರಗಳಿಂದ ಮುಂದರಿಯಬೇಕು. ವಿಜ್ಞಾನದ ಶಸ್ತ್ರಚಿಕಿತ್ಸೆಯಿಂದ ಕುರುಡ ನಂಬಿಕೆಗಳನ್ನು ಕತ್ತರಿಸಬೇಕು. ಕಾಲ್ಪನಿಕ ದೇವತೆಗಳನ್ನೂ ಸ್ವರ್ಗ ನರಕಗಳನ್ನೂ ಮರೆತು ಅವುಗಳ ಸ್ಥಾನದಲ್ಲಿ ಪ್ರಕೃತಿದೇವಿಯ ಉಪಾಸನೆಯನ್ನು ಮಾಡಬೇಕು. ನಮ್ಮ ಜನಾಂಗವು ನಾಗರಿಕತೆಯ ಬೆಳಕನ್ನು ಕಾಣಬೇಕಾದರೆ ಅದು ಸುಲಭವಾದ ಕೆಲಸವಲ್ಲ. ಅದು ಬುದ್ಧಿ ಪೂರ್ವಕವಾದ ಪ್ರಯತ್ನ ಸಾಹಸ ಮತ್ತು ತ್ಯಾಗ ಪೂರ್ಣ ತಪಸ್ಸುಗಳಲ್ಲಿದೆ. ಪ್ರಕೃತಿಯು ನಮ್ಮ ಹುಟ್ಟಿನೊಡನೆ ಬಂದರೂ ನಾಗರಿಕತೆಯು ಮಾತ್ರ ನಮ್ಮ ದುಡಿಮೆಯ ಮೇಲಿಂದ ಬರುವದು.



# ವೀರಶೈವರಲ್ಲಿ ಜಾತಿವಾರ ಶಿಕ್ಷಣದ ಅವಶ್ಯಕತೆ.

(ಲೇಖಕ:— ಶಿವಮೂರ್ತಿ.)

---

ಶಿಕ್ಷಣವು ಜಾತಿವಾರ ಇರುವದು ಲೇಸು. ಅಂದರೆ ಅವರವರ ಸಂಸ್ಕೃತಿಯು ಅವರಲ್ಲಿ ಬಂಧುರವಾಗಿ ನೆಲೆಗೊಳ್ಳುವದು; ಐಕ್ಯತೆಯು ಹೆಚ್ಚುವದು; ಪ್ರಗತಿಯು ಬೆಳೆಯುವದು. ಈಗಿನ ಶಿಕ್ಷಣವು ಕೇವಲ ನೌಕರಿಗಾಗಿಯೇ ನೇರ್ಪಟ್ಟದ್ದರಿಂದ ಎಳೆಯ ಮಕ್ಕಳು ಬರೇ ಯಂತ್ರಗಳಾಗಿ ಬಿಟ್ಟಿದ್ದಾರೆ. ಅವರಲ್ಲಿ ಚೈತನ್ಯವೇ ಇಲ್ಲದಂತಾಗಿದೆ. ಅವರು ಒಳ್ಳೆಯ ನಾಗರಿಕರೂ, ರಾಷ್ಟ್ರವೀರರೂ, ವ್ಯವಹಾರಕುಶಲರೂ ಆಗಲು ಆಸ್ಪದವೇ ಇಲ್ಲ. ಈಗಿನ ಶಿಕ್ಷಣವು ಎಲ್ಲ ಜಾತಿಯವರಿಗೂ ಸರಿಸಮಾನವಾಗಿರುವದರಿಂದ ಅವರವರ ಧರ್ಮತತ್ವಗಳಾಗಲಿ ಆಚಾರವಿಚಾರಗಳಾಗಲಿ ಚೆನ್ನಾಗಿ ತಿಳಿಯಲಾರದಂತಾಗಿವೆ. ಧರ್ಮತತ್ವಗಳ ತಿಳುವಳಿಕೆಯಾಗದಿದ್ದರೆ ಮನುಷ್ಯನ ಜೀವಿತವೇ ವ್ಯರ್ಥ. ಧರ್ಮವೇ ಶಿಕ್ಷಣದ ತಿರುಳು. ಆ ಸ್ಫೂರ್ತಿಯೊಂದಿಲ್ಲದಿದ್ದರೆ ಮನುಷ್ಯನಿಗೆ ವ್ಯಕ್ತಿಗತವಾಗಿಯಾಗಲಿ ಸಂಘಟನಾರೂಪದಿಂದಾಗಲಿ ಯಾವ ಮಹತ್ವದ ಕೆಲಸವನ್ನು ಮಾಡಲಿಕ್ಕೂ ಶಕ್ಯವಿಲ್ಲ. ತನ್ನ ಅರಿವು ತನಗಾಗದೆ ಜಗತ್ತಿನ ಜ್ಞಾನವನ್ನು ಮಾಡಿಕೊಂಡರೆ ಪ್ರಯೋಜನವೇನು? ತನ್ನವರ ಬಗ್ಗೆ ತನಗೆ ಅಭಿಮಾನವಿಲ್ಲದೆ ತಾನು ವಿಶ್ವಕುಟುಂಬಿಯೆಂದು ಹೆಮ್ಮೆಪಡುವದು ಮೂರ್ಖತನವಲ್ಲದೆ ಮತ್ತೇನು? ತನ್ನ ಧರ್ಮ, ಭಾಷೆ, ನಾಡುಗಳಿಗೆ ಪ್ರೇಮ ತೋರಿಸದೆ ಪರಧರ್ಮ, ಪರಭಾಷೆ, ಪರದೇಶಗಳಿಗೆ ಗೌರವಾದರಗಳನ್ನು ತೋರಿಸುವದು ನಗೆಗೇಡಲ್ಲವೇ? ತತ್ವ ತಿಳಿಯದೆ ವ್ಯಸೊಕ್ಕಿನಿಂದ ತನ್ನ ಧರ್ಮವನ್ನಲ್ಲಗಳೆದು ಸ್ವಾರ್ಥಸಾಧಿಸುವ ಪ್ರಸಂಗ ಬಂದಾಗ ಮಾತ್ರ ತನ್ನ ಜಾತಿಯನ್ನು ಮುಂದೆ ಮಾಡುವದು ತಿಳಿಗೇಡಿತನವಲ್ಲವೇ? "ಮನೆ ಗೆದ್ದು ಮಾರು ಗೆದೆ" ಎಂಬ ನಾಣ್ನುಡಿಗನುಸರಿಸಿ ತನ್ನದನ್ನು ತಾನರಿತು ಹಿಂದುಗಡೆ ಉಳಿದುದನ್ನು ಅರಿತುಕೊಳ್ಳುವದು ಸಜ್ಜನರ ಲಕ್ಷಣ. ಅದಕ್ಕಾಗಿಯೇ ಜಾತಿವಾರ ಶಿಕ್ಷಣವು ಅವಶ್ಯವಾಗಿ ಬೇಕು.

ಈಗ ವೀರಶೈವರಲ್ಲಿ ಐಕ್ಯಭಾವವಿಲ್ಲ. ತಮ್ಮ ಸಂಸ್ಕೃತಿಯ ಅರಿವು ತಮಗಿಲ್ಲ. ತಮ್ಮ ಧರ್ಮತತ್ವಗಳಾವವೆಂಬದನ್ನು ತಿಳಿದುಕೊಳ್ಳಬೇಕೆಂಬ

ಲವಲವಿಕೆಯಿಲ್ಲ. ತಮ್ಮ ವ್ಯವಹಾರ ಉದ್ಯೋಗಗಳಾವು, ಅವುಗಳನ್ನು ಸುಧಾರಿಸುವ ಬಗೆ ಹೇಗೆ, ಎಂದು ವಿಚಾರ ಮಾಡುವ ಭಾಗ್ಯಶಾಲಿಗಳಾರೂ ಇಲ್ಲ. ನಮ್ಮ ಇತಿಹಾಸವೇನು ನಮ್ಮ ಗತಿವೈಭವವನ್ನು ಹೇಗೆ ತಿರುಗಿ ಸಂಪಾದಿಸಬೇಕು, ಎಂಬ ಕಳಕಳಿಯು ಒಬ್ಬರಿಗೂ ಇಲ್ಲ. ವೀರಶೈವರ ಸಾಹಿತ್ಯವೆಂಥಹದು, ಅದರಲ್ಲಿ ಗೂಢವಾಗಿರುವ ತತ್ವಗಳೆಷ್ಟು ಉದಾತ್ತವಾಗಿವೆಯೆಂಬದನ್ನು ಸೋಸಿ ನೋಡಬೇಕೆಂದು ಯಾರ ಮನಸ್ಸಿನಲ್ಲಿಯೂ ಹುಟ್ಟಿದಂತಾಗಿದೆ. ಇದಕ್ಕೆ ನಮ್ಮ ಶಿಕ್ಷಣವು ಜಾತಿವಾರ ಆಗದಿರುವದೇ ಮುಖ್ಯ ಕಾರಣ.

ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲಗಳೆಂದರೇನು? ಯಾರಿಗೆ ಗೊತ್ತು? ವೀರಶೈವ ಕವಿಗಳಾರು, ಯಾವ ಯಾವ ದಿವ್ಯಗ್ರಂಥಗಳನ್ನು ಬರೆದಿದ್ದಾರೆ, ಆರು ಬಲ್ಲರು? ಅವುಗಳೊಳಗಿನ ಸೊಬಗು ಸೌಂದರ್ಯಗಳನ್ನರಿತವರೆಷ್ಟು ಜನ? ವೀರಶೈವರಲ್ಲಿ ಎಷ್ಟು ಜನ ಶಿವಶರಣರಾಗಿ ಹೋದರು, ಅವರ ಜೀವನವು ಎಷ್ಟು ಉದಾತ್ತವಾಗಿದ್ದಿತು, ಅವರು ಜನತೆಯಲ್ಲಿ ಉಜ್ವಲವಾದ ಭಕ್ತಿ ನೀತಿ ತತ್ವಗಳನ್ನು ಹೇಗೆ ನೆಲೆಗೊಳಿಸಿದರು, ಎಂಬೀ ಪ್ರಶ್ನೆಗಳಿಗೆ ಸರಿಯಾಗಿ ಯಾರು ಉತ್ತರ ಕೊಡುವರು? ನಮ್ಮ ಸಮಾಜದ ಸರ್ವಾಂಗಸುಂದರವಾದ ಬೆಳವಣಿಗೆಗೆ ನೇರ್ಪಟ್ಟ ಕಾಯಕಗಳಾವು? ಅವುಗಳ ಪರಿಸ್ಥಿತಿಯೇನಾಗಿದೆ? ಎಂಬದನ್ನು ತಿಳಿದುಕೊಂಡು ಆ ಬಗ್ಗೆ ಹೋರಾಡುವ ಪುಣ್ಯಾತ್ಮರಾರಿದ್ದಾರೆ? ವೀರಶೈವ ರಾಜ್ಯಗಳೂ ಸಂಸ್ಥಾನಗಳೂ ಕನ್ನಡನಾಡಿನಲ್ಲಿ ಎಷ್ಟೆಷ್ಟಿದ್ದವು? ಅವುಗಳ ಪೂರ್ವ ಇತಿಹಾಸವೇನು? ಈ ಸಂಗತಿಗಳನ್ನು ಶೋಧಿಸಿ ತಿಳಿದುಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯು ಯಾರಿಗಿರುವದು? ಪ್ರಸಂಗ ಬಂದರೆ ಇಡೀ ಜಗತ್ತಿಗೇನೇ ತನ್ನ ಪರ್ವೆಯನ್ನು ತೋರಿಸಿಕೊಡಲು ಸಮರ್ಥವಾಗಿರುವ ವೀರಶೈವ ಸಮಾಜವು ಯಾರಿಗೂ ತಿಳಿಯದಂತೆ ಮೂಲೆಗುಂಪಾದ ಕಾರಣವೇನು? ನಮಗೆ ಜಾತಿವಾರ ಶಿಕ್ಷಣವಿಲ್ಲದಿರುವದೊಂದು ದೊಡ್ಡ ಕುಂದು.

ಶಿಕ್ಷಣವು ಜಾತಿವಾರವಾಗಿರುವದು ಯುಕ್ತವೆನಿಸಿದರೂ ಅದನ್ನು ಬಳಿಕೆಯಲ್ಲಿ ತರುವದು ಬಹು ಪ್ರಯಾಸದ ಕೆಲಸವೇನೋ ನಿಜ. ಆದರೆ ಧನಾಢ್ಯವಾದ ನಮ್ಮ ಸಮಾಜವು ಮನಸ್ಸು ಮಾಡಿದರೆ ಅದು ಅಶಕ್ಯವಲ್ಲವೆಂಬ ಮಾತು ನಿರ್ವಿವಾದವಾದದ್ದು. ಮೊದಮೊದಲು ಜಾತಿ

ವಾರ ಶಿಕ್ಷಣಕ್ಕೆ ಸರಕಾರದ ಗ್ರ್ಯಾಂಟು ಸಿಗಲಿಕ್ಕಿಲ್ಲ. ಸರಕಾರಿ ನೌಕರಿಗಳು ದೊರೆಯಲಿಕ್ಕಿಲ್ಲ. ಆದರೆ ಯಾವ ಯಾವ ಸಮಾಜದಿಂದ ಸರಕಾರಕ್ಕೆ ಬಿಂದಿ, ಕರ ಮುಂತಾದವುಗಳ ರೂಪದಿಂದ ಎಷ್ಟೆಷ್ಟು ಹಣವು ಸಲ್ಲುವದೋ ಆ ಪ್ರಮಾಣದಿಂದ ಗ್ರ್ಯಾಂಟು ಪಡೆಯಲಿಕ್ಕೆ ನಮ್ಮ ಮುಂದಾಳುಗಳು ಯತ್ನಿಸಿದರೆ ಅದು ಅಸಾಧ್ಯವಾದ ಮಾತೇನೂ ಅಲ್ಲ. ವೀರಶೈವ ಶಿಕ್ಷಣಕ್ಕನುಗುಣವಾಗಿ ಬರಬರುತ್ತ ಅಖಿಲವೀರಶೈವರದೊಂದು ವಿಶ್ವವಿದ್ಯಾಲಯವು ನೇರ್ಪಟ್ಟರೆ ಎಷ್ಟು ಕಲ್ಯಾಣವಾದೀತು. ಆ ಬಗ್ಗೆ ವೀರಶೈವ ಮುಖಂಡರು ಪ್ರಯತ್ನಿಸಿದರೆ ಎಷ್ಟು ಸ್ತುತ್ಯವಾದೀತು. ಕ್ಷುದ್ರವಾದ ನೌಕರಿಯಾಶೆಯನ್ನಿಟ್ಟುಕೊಳ್ಳದೆ ವ್ಯವಹಾರ-ಉದ್ಯೋಗ-ಕಲಾಕೌಶಲ್ಯ-ಕಾರ್ಯಾಲಯ ಮುಂತಾದ ಉಪಯುಕ್ತಕಾರ್ಯಗಳ ಕಡೆಗೆ ಶಿಕ್ಷಣದ ದಿಶೆಯನ್ನೇಕೆ ತಿರುಗಿಸಬಾರದು? ಮತ್ತು ಆ ಬಗ್ಗೆ ಸರಕಾರಿ ಗ್ರ್ಯಾಂಟಿನ ಲಾಭವನ್ನೇಕೆ ಪಡೆಯಬಾರದು? ಈಗಿನ ಶಿಕ್ಷಣವು ಕೇವಲ ನೌಕರಿ ಸ್ಪರ್ಧೆಗಾಗಿ ಏರ್ಪಟ್ಟದ್ದರಿಂದಲೇ ನಮ್ಮ ಸರ್ವಾಂಗಸುಂದರವಾದ ಬೆಳವಣಿಗೆಯಾಗಲಾರದು. ಆದಕ್ಕೆ ಜಾತಿವಾರ ಶಿಕ್ಷಣವು ಆವಶ್ಯವಾಗಿ ಬೇಕೆಂದು ನನ್ನಮತ.

ಹಿಂದಕ್ಕೆ ವೀರಶೈವರ ಮಠಗಳಲ್ಲಿ ಅಯ್ಯನವರು ಶಾಲೆಗಳನ್ನು ಹಾಕುತ್ತಿದ್ದರು. ಅವರು ವಿದ್ಯಾರ್ಥಿಗಳಿಗೆ ಓದುಬರಹ, ಲೆಕ್ಕಪತ್ರ, ಜಮಾಖರ್ಚು ಮುಂತಾದ ವ್ಯವಹಾರೋಪಯೋಗಿ ವಿಷಯಗಳ ಶಿಕ್ಷಣವನ್ನು ಕೊಡುತ್ತಿದ್ದರಷ್ಟೇ ಅಲ್ಲ, ಪ್ರೌಢಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಳ್ಳುವಷ್ಟು ಶಕ್ತಿಯನ್ನು ವಿದ್ಯಾರ್ಥಿಗಳಿಗೆ ಕಲ್ಪಿಸಿಕೊಡುತ್ತಿದ್ದರು. ಆಗಿನವರು ರಾಜಶೇಖರವಿಳಾಸ, ಜೈಮಿನಿ, ಚೆನ್ನಬಸವಪುರಾಣ, ಮುಂತಾದ ಕಾವ್ಯಗಳನ್ನು ಸಾದ್ಯಂತವಾಗಿ ಅಭ್ಯಾಸಮಾಡಿ ಒಳ್ಳೆ ವ್ಯುತ್ಪತ್ತಿಯನ್ನು ಪಡೆಯುತ್ತಿದ್ದರು. ಆದರೆ ಈಗ ಬಿ. ಎ; ಎಂ. ಎ; ಆದ ಪದವೀಧರರಿಗೆ ಸಹ ಅಷ್ಟು ಪಾಂಡಿತ್ಯವು ಬರಲಾರದೆಂದು ಹೇಳಬಹುದು. ಆಗಿನ ಅಂಕಿಯಮೊಗ್ಗೆ, ಬಾಯಿಲೆಕ್ಕ, ಜಮಾಖರ್ಚುಗಳ ಜ್ಞಾನವು ಈಗಿನವರಿಗಿಂತ ಎಷ್ಟೋಪಟ್ಟು ಮಿಗಿಲಾಗಿತ್ತೆಂದು ಧೈರ್ಯದಿಂದ ಹೇಳಬಹುದು. ವ್ಯವಹಾರಿ ಶಿಕ್ಷಣದ ಜೊತೆಗೆ ಶರಣರ ವಚನ, ರಗಳೆ, ಪುರಾಣ, ಕಾವ್ಯ ಮುಂತಾದವುಗಳನ್ನು ಕೂಡ ಒಳ್ಳೆ ಆಸ್ಥೆಯಿಂದ ಬಂಧುರವಾಗುವಂತೆ ಕಲಿಸುತ್ತಿದ್ದರು. ಆಗ ಜನತೆಯಲ್ಲಿ ಅಕ್ಷರಜ್ಞಾನವು ಕಡಿಮೆಯಾಗಿದ್ದರೂ ವ್ಯವಹಾರಜ್ಞಾನ, ಸಾಹಿತ್ಯಜ್ಞಾನ, ತತ್ವಜ್ಞಾನಗ

ಳಿಗೆ ಯಾವ ಕೊರತೆಯೂ ಇರಲಿಲ್ಲ. ಆದರೆ ಈಗ ಅದೆಲ್ಲ ಸ್ವಪ್ನ ಸೃಷ್ಟಿಯಾಗಿಬಿಟ್ಟಿದೆ. ಇದಕ್ಕೆ ನಮ್ಮಲ್ಲಿ ಜಾತಿವಾರ ಶಿಕ್ಷಣವು ಲೋಪ ವಾದುದೇ ಮುಖ್ಯ ಕಾರಣ.

ಹಿಂದಕ್ಕೆ ನಮ್ಮ ಸ್ವಾಮಿಗಳು ತಮ್ಮ ಮರಿಗಳಿಗೆ ವಚನಗ್ರಂಥ, ಕರಣಹಸಿಗೆ, ಷಟ್‌ಸ್ಥಲ ಪ್ರದೀಪಿಕೆ, ವಿವೇಕಚಿಂತಾಮಣಿ, ಶೂನ್ಯಸಂಪಾದನೆ ಮೊದಲಾದ ಉದ್ಗ್ರಂಥಗಳ ಅಭ್ಯಾಸವನ್ನು ಮಾಡಿಸಿ ಅವುಗಳಲ್ಲಿ ಅವರು ಪಾರಂಗತರಾದ ಮೇಲೆಯೇ ಮಠಾಧಿಕಾರಕೊಡುತ್ತಿದ್ದರು. ಆದರೆ ಈಗ ಎಷ್ಟೋ ಸ್ವಾಮಿಗಳಿಗೆ ಸಂಸ್ಕೃತವಂತೂ ಚೆನ್ನಾಗಿ ಬರುವದಿಲ್ಲ. ಕನ್ನಡ ಗ್ರಂಥಗಳ ಪರಿಚಯವು ಕೂಡಾ ಇರುವದಿಲ್ಲ. ಅಂದ ಮೇಲೆ ತಮ್ಮ ಧರ್ಮದ ತತ್ವಾರ್ಥಗಳ ಪ್ರತಿಪಾದನೆಯನ್ನು ಯಾರು ಮಾಡಬೇಕು. ಎಷ್ಟೋ ಜನ ಸ್ವಾಮಿಗಳು ತತ್ವಾರ್ಥ ತಿಳಿಯದೆ ಕ್ರಿಯಾಚಾರಗಳನ್ನು ಕೇವಲ ಯಂತ್ರದಂತೆ ಸಾಗಿಸಿಕೊಂಡು ಹೋಗುತ್ತಿರುವದು ಶೋಚನೀಯವೇ ಸರಿ. ಇವೆಲ್ಲ ಅನರ್ಥಗಳಿಗೆ ವೀರಶೈವರಲ್ಲಿ ಸ್ವತಂತ್ರವಾದ ಜಾತಿವಾರ ಶಿಕ್ಷಣವು ಇಲ್ಲದಿರುವದೇ ಮುಖ್ಯ ಕಾರಣವೆಂದು ನಮ್ಮ ಗ್ರಹಿಕೆ.

ಸುಖಶಾಂತಿಯನ್ನುಂಟು ಮಾಡುವದೇ ಶಿಕ್ಷಣದ ಮುಖ್ಯ ಗುರಿಯಲ್ಲವೇ? ವೀರಶೈವರಲ್ಲಿ ಎಲ್ಲರಿಗೂ ಹೊಟ್ಟೆಬಟ್ಟೆಗೆ ಸರಿಯಾಗಿ ದೊರೆತು ಸುಖಿಗಳಾಗುವಂತೆ ಮಾಡುವದು ಒಂದನೆಯ ಕೆಲಸ. ಅವರ ಜೀವಕ್ಕೆ ಶಾಂತಿಯನ್ನೀಯುವಂಥ ಧಾರ್ಮಿಕ ನೈತಿಕ ತತ್ವಗಳು ಅವರ ಹೃದಯದಲ್ಲಿ ಅಳವಡುವಂತೆ ಮಾಡುವದು ಎರಡನೆಯ ಕೆಲಸ. ಆ ಪ್ರಕಾರ ಪ್ರಾಥಮಿಕ, ಮಾಧ್ಯಮಿಕ, ಉಚ್ಚ ಶಿಕ್ಷಣಗಳಲ್ಲಿ ತಜ್ಞರು ಯೋಜನೆಗಳನ್ನು ಮಾಡಿ ಆ ಕ್ರಮವು ಸಮಾಜದಲ್ಲೆಲ್ಲ ಹರಡುವಂತೆ ಅಖಿಲ ವೀರಶೈವ ಮಹಾಸಭೆಯಲ್ಲಿ ಗೊತ್ತುಪಡಿಸುವದು ಅವಶ್ಯಕವಾಗಿದೆ ಈಗಿನ ಪುರುಳಿಲ್ಲದ ಶಿಕ್ಷಣಕ್ಕೆ ಲಕ್ಷಾಂತರ ರೂಪಾಯಿಗಳನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳುವದಕ್ಕಿಂತಲೂ ರಸಭರಿತವಾದ, ಸುಖದಾಗರವಾದ ಶಾಂತಿಪೂರ್ಣವಾದ ಶಿಕ್ಷಣಕ್ಕೆ ಆ ಹಣವನ್ನು ವೆಚ್ಚಮಾಡಿದರೆ ಸಮಾಜಕ್ಕೆ ಕ್ಷೇಮವಲ್ಲವೇ? ಅದು ಕಾರಣ ಜಾತಿವಾರ ಶಿಕ್ಷಣವನ್ನು ಪ್ರಚಾರದಲ್ಲಿ ತರಲು ವೀರಶೈವ ಮುಂದಾಳುಗಳು ಏಕೆ ಟೊಂಕ ಕಟ್ಟಬಾರದು?

---

# ಧಾರಣ, ದೀಕ್ಷೆ.

( ಲೇ:— ಜಿ. ಟಿ. ಅಕ್ಕಲಯ್ಯನವರು, ಘಟ್ಟಿ. )

## ನಂಜಪ್ಪಗಳ ನ್ಯಾಯಹೀನ ಖಂಡನೆಯ ಮಂಡನ.

ಜೂನ ತಿಂಗಳ "ಶಿವಾನುಭವ" ೯ ನೆಯ ಸಂಚಿಕೆಯಲ್ಲಿ ತಾಳ್ಮೆಯಿಂದ ಉತ್ತರ ಕೊಡಬೇಕೆಂದು ಕೇಳಿದ್ದರೆ ಈ ನಂಜಪ್ಪಗಳು ೧೧ ನೆಯ ಸಂಚಿಕೆಯಲ್ಲಿ ಸಂಪೂರ್ತಿ ತಾಳ್ಮೆಗೆಟ್ಟು ಕೀಳ್ನುಡಿಯ ಬೈಗಳ ಮೇಳ ಹಾಕಿದ್ದಾರೆ. ಈ ಹಾಳ್ನುಡಿಗಳೆಲ್ಲವನ್ನೂ ಮೇಳೈಸಲಿಕ್ಕೇನೆ ಈ ಮಧ್ಯೆ ಒಂದು ತಿಂಗಳ ಅವಕಾಶ ತಕ್ಕೊಂಡಂತೆ ತೋರುತ್ತದೆ. ಪಾಪ! ಅದೇ ಸಮಯವನ್ನು ಸೂಕ್ತ ಸದುತ್ತರಗಳಿಗೆ ತಕ್ಕೊಂಡಿದ್ದರೆ ಅವರ ಬುದ್ಧಿ ಪುಟವಿಟ್ಟ ಚಿನ್ನದಂತೆ ಹೊಗರೇರುತ್ತಿದ್ದಿತು. ಆಡಿದ ಮಾತುಗಳು ಮುತ್ತಿನ ಹಾರದಂತೆ ಮೆರಗುತ್ತಿದ್ದವು. ಹಾಗೆ ಮಾಡದೆ ತಾಳ್ಮೆಯ ದಾರಿಗೆ ಮುಳ್ಳಿನ ಕೊಂಪೆಯನ್ನು ಎಳದಿದ್ದಾರೆ. ತತ್ವದ ವಾದಕ್ಕೆ ತಮ್ಮ ದ್ವೇಷದ ದಳ್ಳುರಿಯನ್ನಿಕ್ಕಿದ್ದಾರೆ. ಇಡಲಿ.

ಬೈಗಳ ಬಲ್ಲವರು ಬೇಕಾದಷ್ಟು ಬೈಯಲಿ. ಕಣ್ಣಿಂಜಲ ಸ್ವಭಾವವುಳ್ಳವರ ಕಣ್ಣು ಕೊನೆಯಿಲ್ಲದೆ ಕೆಂಪೇರಲಿ. ಆದಕಾರು ಗುರಿ? ಅವರ ಮನದ ಕಿಚ್ಚಿಗೆ ಅವರಲ್ಲದೆ ಬೇರೆ ಯಾರಾದಾರು ಆಹುತಿ? ಅವರ ಆ ಬಗೆಯ ಬರಹ ಶೈಲಿಯಿಂದ ಅವರ ಶೀಲಸ್ವಭಾವಗಳು ಎಂಥವಿವೆಯೆಂಬುದು ಮಾತ್ರ ಸಹೃದಯ ವಾಚಕರ ಮನಸ್ಸಿಗೆ ಬಂದರೆ ಅಷ್ಟೆ ಸಾಕು. ಅದೆ ಅದಕ್ಕೆ ತಕ್ಕ ಪ್ರತಿಫಲ.

ನಂಜಪ್ಪಗಳೊಡನೆ ವಾದಿಸುವದೆಂದರೆ ಸುಖವಿಲ್ಲದೆ ಧಾವತಿಗೊಂಡಂತೆ. ಇವರು ಕೇಳಿದ ಪ್ರಶ್ನೆಗೆ ಒಂದೂ ಉತ್ತರ ಕೊಟ್ಟಿಲ್ಲವಂತೆ. ಇವರು ಕೇಳಿದ ಯಾವ ಪ್ರಶ್ನೆಗಳೂ ನಿಂತುಬಂದಿಲ್ಲ. ಇವರು ಪುಡಿಪುಡಿಯಾಗಿ ಪ್ರಕಟಿಸಿದ ಯಾವ ಪ್ರಮಾಣವೂ ನಮ್ಮ ಖಂಡನೆಗೆ ಒಳಗಾಗದೆ ನಿಂತಿಲ್ಲ. ಇದಕ್ಕೆ ಬದಲು ನಾವೇನಾದರೂ ಕೇಳಿದರೆ ತಾವೇನಾದರೂ ಬರೆದು ಬೈದು ಎರೆಗೂ ಕೆರೆಗೂ ಸಂಬಂಧವಿಲ್ಲದಂತೆ ಮಾಡಿಬಿಡುತ್ತಾರೆ. ಇದರಿಂದ ವಾಚಕವೃಂದಕ್ಕೂ ಬೇಜಾರವಾಗಿರಬಹುದು. ಆದರೆ ನಮ್ಮ ಪ್ರಶ್ನೆಗಳಿಗೆ ಸಮರ್ಪಕ ಉತ್ತರ ಬಾರದ್ದರಿಂದ ಆ ಉತ್ತರ

ಗಳ ಅಸಮರ್ಪಕತೆಯ ದಿಗ್ದರ್ಶನವನ್ನು ಮಾತ್ರ ಮಾಡಿ ಈ ವಾದವನ್ನು ಇದೇ ಲೇಖಕ್ಕೆ ಕೊನೆಗಾಣಿಸಲಾಗುತ್ತದೆ. ಇದರ ಮೇಲೆ ಈ ವಾದದ ಸತ್ಯಾಸತ್ಯಗಳ ನಿರ್ಣಯವನ್ನು ಮಾತ್ರ ಸಹೃದಯ ವಾಚಕರ ಭಾಗಕ್ಕೆ ಬಿಡಲಾಗಿದೆ.

ಈ ನಂಜಪ್ಪಗಳು ಮೊದಲು ದಿಕ್ಕು ತೋಚದೆ ಮುಂದರಿಯದೆ ಗರ್ಭೋಪನಿಷತ್ತಿಗೆ ಶರಣುಹೊಕ್ಕರು. ಅಲ್ಲಿ ನಿಮಗಾಶ್ರಯವಿಲ್ಲೆಂದು ಅದೇ ಉಪನಿಷತ್ತಿನಿಂದ ದಿಗ್ದರ್ಶನ ಮಾಡಿಕೊಟ್ಟರೆ ಮನಸ್ವಿ ಬೈಗಳಿಗೆ ಪ್ರಾರಂಭವಾಯ್ತು. ಬೈದರೇನು ಬಗೆಹರಿಯುವುದೆ ಸಮಸ್ಯೆ?

"ಮುಖ ಮಾತ್ರ ಮಲ್ಲಯ್ಯ ಕಾಲ ಅಲ್ಲಯ್ಯ." ಅಂದರಾಗುವದೆ? ಎಂಬ ಮಾತಿನ ಮರ್ಮವನ್ನರಿಯದೆ ಏನೇನೋ ಪುಟಗಟ್ಲೆ ಬರೆದು ವ್ಯವಹಾರ ಜಾಣರಾಗಬಯಸಿದ್ದಾರೆ. ನಂಜಪ್ಪಗಳು ತಿಳಿದಂತೆ "ಅಲ್ಲ" ಎಂಬುದು ಕ್ರಿಯಾಪದವಲ್ಲ; ನಾಮಪದ. ಒಂದು ಗ್ರಂಥದಲ್ಲಿ ಒಂದನ್ನು ಗ್ರಹಿಸಿ ಇನ್ನೊಂದನ್ನು ಬಿಡಬಾರದೆಂಬುದೇ ಆ ವಾಕ್ಯದ ಒಳತಿರುಳು. ವಾಕ್ಯಾರ್ಥ ತಿಳಿಯದೆ ವ್ಯವಹಾರಜ್ಞರಾಗಬಯಸುವದೂ ಒಂದು ಜಾಣತನವೆ? ಸಮಸ್ಯೆ ಸಮಸ್ಯೆಯಾದರೆ ರಹಸ್ಯ ರಟ್ಟಾಗುವದೆ?

ಈ ನಂಜಪ್ಪಗಳು ಅವ್ಯಕ್ತವಾದವನ್ನು ಎಷ್ಟುಮಾತ್ರಕ್ಕೂ ಒಪ್ಪುವದಿಲ್ಲ. ಇದಕ್ಕೆ ಅವ್ಯಕ್ತವಾದವನ್ನು ಪ್ರತಿಪಾದಿಸುವ ಬಸವಣ್ಣನವರ "ಉದಕದೊಳಗೆ ಬೈಚಿಟ್ಟ......" ಎಂಬೀ ವಚನದ ಗತಿಯೇನು ಎಂದು ಕೇಳಿದರೆ ಇದಕ್ಕೆ ನಿರುತ್ತರ.

ಈ ನಂಜಪ್ಪಗಳು "ಮತ್ತೊಂದು ಉದಾಹರಣೆ" ಎಂದು ಹಣೆಬರಹ ಹಾಕಿ, ಎಂಟು ವರುಷದ ಮೇಲಿನ ದೀಕ್ಷೆಯು ವೀರಶೈವ ಮಕ್ಕಳಿಗೆ ಮಾಡತಕ್ಕದ್ದಲ್ಲವೆಂತಲೂ ಇದು ಅನುಕರಣವೆಂತಲೂ ಇದಕ್ಕೆ ಮತ್ತೊಂದು ಅದ್ಭುತ ಉದಾಹರಣೆಯನ್ನು ಕೊಡುತ್ತೇನೆಂದೂ ಪ್ರಾರಂಭಿಸಿ ಷಡಕ್ಷರ ಕವಿಯ ವೃಷಭೇಂದ್ರವಿಜಯದ ಈ ಶ್ಲೋಕವನ್ನು ಬಹು ಪ್ರಯಾಸದಿಂದ ಪತ್ತೆಹಚ್ಚಿ ಉದಹರಿಸಿದ್ದಾರೆ. ಅದೂ ಜನನದ ದೀಕ್ಷೆಗಂತೆ. ಅದಿದು.

"ಪರಮಕೃಪಾರಸಾರ್ದ್ರನಯನಾಂಚಲದಿಂ ನಡೆನೋಡಿ ಪಾಣಿಪಂ।
ಕುರುಹಮನಿಟ್ಟು ಮಸ್ತಕದೊಳುದ್ದ ವಿಭೂತಿಯನೊಲ್ದು ಫಾಲದೋ।

ಳ್ಧರಿಯಿಸಿ ಲಿಂಗಸಂಗತ ನಿಜಾಂಗನನಾಗಿಸಿ ಮೂಲಮಂತ್ರಮಂ ।
"ತರುಣನ" ಕರ್ಣದೊಳ್ ತಿಳುಪಿ ದೀಕ್ಷೆಯನಿತ್ತನವಂ ಸದಾಶಿವಂ॥

ಇದು ನಂಜಪ್ಪಗಳ ಯಾವ ವಾದವನ್ನೂ ಸಮರ್ಥಿಸುವದಿಲ್ಲ. ಈ ಶ್ಲೋಕದಲ್ಲಿ ಉಕ್ತವಾದ ಸಂಸ್ಕಾರವು ಇತಿಹಾಸದ ಒರೆಗಲ್ಲಿಗೆ ನಿಲ್ಲುವದಿಲ್ಲ. ಹೀಗಿದ್ದರೂ ಇದನ್ನು ನಂಜಪ್ಪಗಳು ಉದಹರಿಸಿದ್ದನ್ನು ನೋಡಿದರೆ ಪರಮಾಶ್ಚರ್ಯವಾಗುತ್ತದೆ. ಇದು ಗರ್ಭದೀಕ್ಷೆಯನ್ನು ಹೇಳುತ್ತದೆಯೆ? ಇಲ್ಲವೆ ಬಸವೇಶ್ವರನಿಗೆ ಜನ್ಮದಿನವೆ ದೀಕ್ಷೆಯಾಗಿತ್ತೆಂದು ಹೇಳಿದರೆ ಇತಿಹಾಸಜ್ಞರು ಒಪ್ಪುತ್ತಾರೆಯೆ? ಹರಿಹರನ ಬಸವೇಶ್ವರನಿಗೆ ಯಾವ ವಯಸ್ಸಿನ ವರೆಗೂ ಜುಟ್ಟು ಜನಿವಾರಗಳಿದ್ದವೆಂಬುದನ್ನು ವಾದಿಗಳರಿಯರೇನು? ಇದಾವುದನ್ನೂ ಯೋಚಿಸದೆ—ಇಷ್ಟೊಂದು ಎಡರುತೊಡರುಗಳು ಬಂದಾವೆಂದು ಭಾವಿಸದೆ ಇದನ್ನು ಉದಹರಿಸಿದ ನಂಜಪ್ಪಗಳ ಉದ್ದೇಶವೇನೊ ತಿಳಿಯದಾಗಿದೆ. ಅಲ್ಲದೆ ಈ ಶ್ಲೋಕವನ್ನು ವಿಮರ್ಶೆಯ ದೃಷ್ಟಿಯಿಂದ ನೋಡಿದರೆ ಕವಿಯ ಹೃದಯ ಉದ್ದೇಶವು ಜನನ ದೀಕ್ಷೆಯು ಅಲ್ಲೆಂದು ವ್ಯಕ್ತವಾಗುತ್ತದೆ. ಶ್ಲೋಕದ ಕೊನೆಯ ಚರಣದ ಆದಿಯಲ್ಲಿ "ತರುಣ" ಪದವು ಪ್ರಯೋಗಿಸಲ್ಪಟ್ಟಿದೆ. ಈ ತರುಣ ಶಬ್ದಕ್ಕೆ ಸಹಜಾರ್ಥವನ್ನು ಹೇಳುವದಾದರೆ ಈ ಶ್ಲೋಕವು ನಮ್ಮ ವಾದಕ್ಕೇನೆ ವಿಶೇಷ ಪುಷ್ಟಿಯನ್ನು ತಂದುಕೊಡುತ್ತದೆಯಲ್ಲದೆ ಷಡಕ್ಷರನಂಥ ಮಹಾ ಕವಿಯು, ಹರಿಹರಕವಿಗೂ ಇತಿಹಾಸಕ್ಕೂ ಅವಿರುದ್ಧವಾಗಿ ಹೇಳಿದಂತಾಗುತ್ತದೆ. ಆಗ ಷಡಕ್ಷರನ ಕಾವ್ಯವೂ ಇತಿಹಾಸದ ಒರೆಗಲ್ಲಿಗೆ ನಿಂತು ಬಣ್ಣವೇರಿ ಮಾನ್ಯತೆಗೆ ಅರ್ಹವಾಗುತ್ತದೆ. ಈ ಕಾರಣಗಳಿಂದ ನಂಜಪ್ಪಗಳ ಹಣೆಬರಹಕ್ಕೆ ಇದು ತಕ್ಕ ಉದಾಹರಣೆಯಲ್ಲ; ಉದಹರಿಸಿದ್ದು ಎಷ್ಟಕ್ಕೂ ಸಮಂಜಸವಿಲ್ಲ; ಅವರು ಮಾಡಿದ ಅರ್ಥದಲ್ಲಿ ಅವರ ಐತಿಹಾಸಿಕ ಜಿಜ್ಞಾಸಕ್ಕೆ ಎಳ್ಳಷ್ಟೂ ಎಡೆಯಿಲ್ಲ.

ಇದರಂತೆ ಈ ನಂಜಪ್ಪಗಳು ಇಲ್ಲಿಯ ವರೆಗೆ ದೀಕ್ಷಾವಾದವನ್ನು ಮಾಡಿದರೂ ಇವರ ಗರ್ಭದೀಕ್ಷೆಯನ್ನು ಪ್ರತಿಪಾದಿಸುವ ಒಂದೂ ಪ್ರಬಲವಾದ ಪ್ರಕೃಷ್ಟವಾದ ಪ್ರಮಾಣವನ್ನು ಉದಹರಿಸಲಿಲ್ಲ. ಧಾರಣ-ದೀಕ್ಷೆಗಳು ಏಕೈಕ ಸಂಸ್ಕಾರಗಳೆಂಬುದಕ್ಕೂ ಯಾವೊಂದೂ ಸಮಂಜಸವಾದ ಸಾರ್ಥವಾದ ಪ್ರಮಾಣವನ್ನು ಪ್ರಕಟಿಸಲಿಲ್ಲ.

ಈ ನಂಜಪ್ಪಗಳು "ವಿಧದತುಮತಿಮುಸ್ಮಿನ್ ವೀರಶೈವಾವಿಶಿಷ್ಟಾಃ" ಎಂಬ ಶ್ಲೋಕಕ್ಕೆ ಉತ್ತರಿಸುವಾಗ ಸಿದ್ಧಾಂತಶಿಖಾಮಣಿಯು ದೀಕ್ಷಾ ಕ್ರಮವು ಭವಿಗಳನ್ನು ಭಕ್ತರನ್ನಾಗಿಸುವದೇ ಹೊರ್ತು ವೀರಶೈವರಿಗಲ್ಲ— ಎಂದು ನಿರಾಧಾರವಾಗಿ ಬರೆಯುತ್ತ ಕೊನೆಗೆ ವೀರಶೈವರೆಲ್ಲರೂ ಪೂಜ್ಯ ಬುದ್ಧಿಯನ್ನಿಡಬೇಕೆಂದು ವ್ಯಂಗ್ಯವಾಗಿಯಾದರೂ ಪರವಾ ಇಲ್ಲ ಒಪ್ಪಿದ್ದಾರೆ. ಗ್ರಂಥಕರ್ತನು ಹೇಳದೆ ಇದ್ದುದನ್ನು ವಾದಿಸುತ್ತ ಹೇಳಿದ್ದನ್ನು ಬಿಟ್ಟರಾದೀತೇನು? ವೀರಶೈವರಿಗಾಗಿ ಇದೆಯೆಂದರೆ ಭವಿಗಳ ಉದ್ಧಾರಕ್ಕೆ ಬಾರದೇನು? ಹೇಗಾದರಾಗಲಿ ವಿಧಿಯಿಲ್ಲದೆ ಒಪ್ಪಿಕೊಳ್ಳುವ ಪ್ರಸಂಗದಲ್ಲಿಯೂ ಸಹ ಕೀಳ್ಮಾತುಗಳನಾಡಿ ದೊಡ್ಡಿಸ್ತನ ಗಳಿಸಬಯಸಿವರೆ ಬರುವದೇನು? ಅಥವಾ ಬೈದು ಒಪ್ಪಿದರೆ ಒಪ್ಪಿದಂತಲ್ಲವೇನು?

ಕ್ರಿಯಾಜ್ಞಾನ ಸಮುಚ್ಚಯ ವಾದದಲ್ಲಿ— ಕ್ರಿಯೆ ಮುಗಿಯುವದರೊಳಗಾಗಿಯೆ ಜ್ಞಾನ ಹುಟ್ಟಬಹುದು, ಜ್ಞಾನ ಮುಗಿಯುವದರೊಳಗಾಗಿಯೆ ಕ್ರಿಯೆ ಜನಿಸಬಹುದು. ಆದರೆ ಕ್ರಿಯೆದ ಉತ್ಪತ್ತಿಯು ಆರಂಭಕ್ಕೇನೆ ಜ್ಞಾನ.— ಜ್ಞಾನದ ಉತ್ಪತ್ತಿಯ ಆರಂಭಕ್ಕೇನೆ ಕ್ರಿಯೆ ಹುಟ್ಟಲಾರವೆಂಬುದೇ ನಮ್ಮ ವಾದದ ಒಳತಿರುಳು. ಇದನ್ನು ಈ ನಂಜಪ್ಪಗಳು ಪರ್ಯವಸಾನದಲ್ಲಿ ಪರ್ಯಾಯವಾಗಿಯಾದರೂ ಪರವಾ ಇಲ್ಲ ಒಪ್ಪಿಕೊಂಡದ್ದೊಂದು ಸಂತೋಷದ ವಿಷಯವೇ ಸರಿ.

ಎಂಟನೆಯ ವರುಷದಲ್ಲಿ ದೀಕ್ಷೆಯಾದ ರುದ್ರಮುನಿಯ ಉದಾಹರಣೆ ಕೊಟ್ಟದ್ದಕ್ಕೆ ಈ ನಂಜಪ್ಪಗಳು ಏನೇನೋ ತಿರುಳಿಲ್ಲದ ತೊದಲ್ನುಡಿಗಳನ್ನು ಹಾಕಿದ್ದಾರೆ. ರಗಳೆಯ ವಾಕ್ಯಗಳ ಹಿಂದುಮುಂದು ನೋಡ ಹೋಗಿ ತಮ್ಮ ಹಿಂದುಹಿಂದಿನ ಇಂದುಇಂದಿನ ಉದಾಹರಣೆಗಳ ಅವಸ್ಥೆ ಏನಾಗಿದೆಯೆಂಬುದನ್ನೆ ಮರೆತುಬಿಟ್ಟಿದ್ದಾರೆ.

ಗ್ರಂಥವಿಸ್ತಾರದ ಅಪೇಕ್ಷೆಯಿಲ್ಲದ ಕಾರಣ ಬಾಲ್ಯದ ವರ್ಣನದೊಡನೆ ಹೊಂದಿ ಕೌಮಾರ್ಯದ ವರ್ಣನೆ ಬಂದ ಮಾತ್ರಕ್ಕೇನೆ ಎಂಟು ವರುಷದ ಕೌಮಾರಾವಸ್ಥೆಯ ಹುಡುಗನನ್ನು ಕೈಯಲ್ಲಿ ತಾಯಿಗಳು ಆಡಿಸುವರೆ? ರೇವಣಸಿದ್ದನು ಅನಂತರ ವೀರಶೈವನಾಗಿದ್ದನೆಂದು ಈ ಮೊದಲು ನೀವೇ ಒಪ್ಪಿಕೊಂಡು—ನಿಮ್ಮ ಆ ವಾಕ್ಯವನ್ನು ಉದಹರಿಸಿ ತೋರಿದ್ದರೂ ಈಗ ನೀವೇ ಇಲ್ಲೆಂದರೆ ಇದೆಂತಹ ಪ್ರಾಮಾಣಿಕ ವಾದವೊ

ದೇವರೇ ಬಲ್ಲ. ಇದಕ್ಕಾಗಿಯೆ 'ಇವರೊಡನೆ ವಾದಿಸುವದು ಸುಖವಿಲ್ಲದೆ ದಾವತಿಗೊಂಡಂತೆ' ಎಂದು ಮೊದಲಿಗೆ ಹೇಳಿದ್ದು. ಅಲ್ಲದೆ ರುದ್ರಮುನಿ ದೇವರಿಗೆ ಶಿವದೀಕ್ಷೆಯಾಗುವಾಗ ರೇವಣಸಿದ್ಧನು ವೀರಶೈವನಾಗಿದ್ದ ನೆಂಬುದಕ್ಕೆ ಹಿಂದಿನ ಲೇಖದಲ್ಲಿ ಸಕಾರಣವನ್ನು ತೋರಿದ್ದರೂ ಅದನ್ನು ಈ ನಂಜಪ್ಪಗಳು ಕಣ್ಮರೆ ಮಾಡಿಬಿಟ್ಟಿದ್ದಾರೆ. ಆದರೇನು ಅದು ಮರೆ ಯಾಗುವದೆ? ಅದನ್ನೆ, ಪುನಃ ವಾದಿಗಳ ಎದುರಿಗೆ ತೋರುತ್ತೇವೆ. ಅದೇ ಹರಿಹರಮಹಾಕವಿಯು ಅದೇ ವಾಕ್ಯದಲ್ಲಿ ಹೇಳಿದ "...ಶಿವಯೋಗ ಸಂಪನ್ನನೆನಿಪಸಿದ್ಧರೇವಣಂ" ಎಂಬೀ ಮಾತೇ ಸಾಕು ರೇವಣಸಿದ್ಧನ ವೀರಶೈವತ್ವಸಿದ್ಧಿಗೆ. ಇದಕ್ಕೆ ಆದಿಕವಿಯಾದ ಹರಿಹರ ಮಹಾಕವಿಯ ಒಪ್ಪಿಗೆಯಿದ್ದಮೇಲೆ ಇನ್ನಾರ ಒಪ್ಪಿಗೆ ಬೇಕು? ಇದು ಎಂದಿಗೂ ನಿರ್ವಿ ವಾದವಾದ ಅಂಶವೆ.

ಇದಲ್ಲದೆ ಈ ನಂಜಪ್ಪಗಳು ಇನ್ನೊಂದು ಗಹನ ಪ್ರಶ್ನೆಯನ್ನು ಶೋಧಿಸಿ ತೆಗೆದಿದ್ದಾರೆ. ಅದಿದು— "ಈ ಮೇಲಣ ಉದ್ಧರಿತ ವಾಕ್ಯಗಳಲ್ಲಿ ವೀರಶೈವ ಲಿಂಗಧಾರಣ-ದೀಕ್ಷೆ ಮುಂತಾದ ಯಾವ ವಾಕ್ಯವೂ ಇಲ್ಲದೆ ಕೇವಲ 'ಶೈವೋಪದೇಶ' ಎಂದಿಷ್ಟು ಮಾತ್ರ ಇರುವಾಗ ಅದನ್ನು ವೀರ ಶೈವದೀಕ್ಷೆಯೆಂದು ಕರೆಯಲು ಹೇಗೆ ಸಾಧ್ಯ?......" ಎಂದು ಅಂದಿ ದ್ದಾರೆ; ಅಂಗೀಕರಿಸಲು ಅಂಜಿದ್ದಾರೆ.

ಇದು ಅಂದಿನ ವಾಡಿಕೆಯ ಶಬ್ದವೆಂದು ಅವರು ತಿಳಿದುಕೊಂಡಿ ದ್ದರೆ ಅವರ ಈ ಕೇಳಿಕೆಗೂ ಹೆದರಿಕೆಗೂ ಯಾವ ಕಾರಣವಿರಲಿಲ್ಲ. ಶಿವಶಬ್ದವನ್ನೆ ಸಂಬಂಧಾರ್ಥದಲ್ಲಿ ಉಪಯೋಗಿಸಿದ್ದರೆ ಆ ಶೈವ ಶಬ್ದಕ್ಕೆ 'ಮತ' ಅಥವಾ ಜಾತಿಯೆಂದು ಅರ್ಥವಾಗಲಾರದೆಂದು ಅರಿತುಕೊಂಡಿ ದ್ದರೆ ಲೇಸಾಗಿತ್ತು. ಇಲ್ಲಿ ನೋಡಿ! ಶಿವಸಂಬಂಧವಾದ ಜ್ಞಾನವನ್ನುಂಟು ಮಾಡಿಕೊಡುವ ದೀಕ್ಷೆಯೆ ಶಿವದೀಕ್ಷೆ ಅಥವಾ ಶೈವದೀಕ್ಷೆ. ಈ ಪದಗ ಳಲ್ಲಿರುವ ಶಿವ ಅಥವಾ ಶೈವ ಶಬ್ದಗಳನ್ನು ವೀರಶೈವರು ಒಪ್ಪಿಯೆ ಇದ್ದಾರೆ. ಇನ್ನುಳಿಯಿತು 'ಉಪದೇಶ' ಶಬ್ದದ ಮಾತು. ಉಪದೇಶ ಶಬ್ದವು ದೀಕ್ಷೆಯ ಪರ್ಯಾಯವಾಚಿ ಶಬ್ದವು. ೧೨ನೆಯ ಶತಮಾನ ದಲ್ಲಿ ಶಿವಶರಣರಲ್ಲಿಯೂ ಸಹ ದೀಕ್ಷೆಗೆ 'ಉಪದೇಶ' ವೆಂಬುದಾಗಿಯೆ ಕರೆಯುವ ಪದ್ಧತಿಯಿತ್ತೆಂದು ಅವರವರ ವಚನಗಳಿಂದಲೆ ಸಿದ್ಧವಾಗು

ತ್ತದೆ. ಶಿವಶರಣರು ತಮ್ಮತಮ್ಮ ವಚನಗಳಲ್ಲಿ ದೀಕ್ಷೆ ಪದಕ್ಕೆ ಹೆಚ್ಚಾಗಿ 'ಉಪದೇಶ' ಶಬ್ದವನ್ನೇ ಉಪಯೋಗಿಸಿದ್ದಾರೆ. ಉದಾಹರಣೆಗಾಗಿ--

"ಕಂಗಳ ಕತ್ತಲೆಯು ಕೆಡಿಸಿದ ರವಿಯು
ಚಂದದಂತಾಯಿತ್ತೆನ್ನ ಗುರುವಿನುಪದೇಶ.
ಕನ್ನಡಿಯು ರವಿಯು ತನ್ನೊಳಗೆ
ಇರಿಸಿಕೊಂಡಂತಾಯಿತ್ತೆನ್ನ ಗುರುವಿನುಪದೇಶ.
ಜಲದ ನಿರ್ಮಳ ಗಗನವ
ನೊಳಕೊಂಡಂತಾಯಿತ್ತೆನ್ನ ಗುರುವಿನುಪದೇಶ
ಚಂದ್ರಕಾಂತದ ಶಿಲೆಯು ಚಂದ್ರಮನ
ಸೋಂಕಿದಂತಾಯಿತ್ತೆನ್ನ ಗುರುವಿನುಪದೇಶ.
ಕೊಡನೊಳಗಣ ಬಯಲ ಹಂಚಿಕೊಂಡ
ಪರಿಯಂತಾಯಿತ್ತೆನ್ನ ಗುರುವಿನುಪದೇಶ.
ಇದುಕಾರಣ ಮಹಾಘನ ಸದ್ಗುರುಸಿದ್ಧಸೋಮನಾಥನೆಂಬ
ಲಿಂಗದಂತಾಯಿತ್ತೆನ್ನ ಗುರುವಿನುಪದೇಶ."

ಈ ಕಾರಣದಿಂದ ಉಪದೇಶ ಶಬ್ದವೂ ದೀಕ್ಷೆಯನ್ನೇ ಬೋಧಿಸುತ್ತದೆ. ಅಂದಿನ ವಾಡಿಕೆಯ— ಪರ್ಯಾಯದ ಶಬ್ದಗಳನ್ನು ತಿಳಿದುಕೊಳ್ಳದೆ ಇದು ಶೈವರದೆಂದು ವಾದಿಸುವದು ವಿಚಾರ ರಮಣೀಯವಾದ ಮಾತಲ್ಲ. ಈ ನಂಜಪ್ಪಗಳಂತೆ ಸಮರ್ಥನೆಗೊಳಗಾಗದ ಪ್ರಮಾಣಗಳನ್ನು ಉದಹರಿಸುವದು ನಮ್ಮಿಂದ ಅದೆಂದಿಗೂ ಸಾಧ್ಯವಿಲ್ಲ.

## ಇನ್ನು ಐದು ಪ್ರಶ್ನೆಗಳ ಮಾತು.

ಈ ನಂಜಪ್ಪಗಳು ಇವುಗಳಲ್ಲಿ ಒಂದಕ್ಕಾದರೂ ಸರಿಯಾದ ಉತ್ತರ ಕೊಡಬಹುದೆಂದು ನಂಬಲಾಗಿತ್ತು, ನಿರೀಕ್ಷಿಸಲಾಗಿತ್ತು. ಅದೆಲ್ಲ ನೀರಾಯಿತು—ಹೋಗಲಿ. ಈ ನಂಜಪ್ಪಗಳ ನ್ಯಾಯಹೀನೋತ್ತರಗಳನ್ನೊಂದೊಂದನ್ನೆ ಹಿಂಜೋಣ!

೧ನೇ ಪ್ರಶ್ನೆಗೆ ಈ ನಂಜಪ್ಪಗಳು ಮೊದಲು—"ದೀಕ್ಷೆಯು ವೀರಶೈವ ವಟುಗಳಿಗೆ ಗರ್ಭದಲ್ಲಿರುವಾಗಲೆ ಮಾಡಬೇಕೆಂದು ಹೇಳಿ, ಮುಂದೆ ಜನನಾನಂತರ ಸ್ವತಃ ಶಿಶುವಿಗೇ ಮಾಡುವ ಲಿಂಗಧಾರಣವನ್ನು ಕೆಲವು

ವಚನಗಳು ಪ್ರತಿಪಾದಿಸುತ್ತವೆ. ಕೆಲವು ಅದನ್ನೆ ಪ್ರತ್ಯೇಕವಾಗಿ ಪ್ರತಿಪಾದಿಸದಿದ್ದರೂ ಖಂಡನೆಯನ್ನಂತೂ ಎಲ್ಲಿಯೂ ಮಾಡಿಲ್ಲ!......" ಎಂದು ಬರೆದಿದ್ದಾರೆ. ಇವರ ಈ ಉತ್ತರದಲ್ಲಿಯೇ ಅನೈಕ್ಯಗ್ರೀವವು ಎದ್ದು ಕಾಣುತ್ತಿರುವಾಗ---ಇದೆಷ್ಟು ಸಮಂಜಸವಾದ ಉತ್ತರವೆಂಬುದನ್ನು ವಾಚಕರೇ ವಿಚಾರಿಸಲಿ.

೨ನೆಯ ಪ್ರಶ್ನೆಗೆ ಈ ನಂಜಪ್ಪಗಳು "ಶಿವದೀಕ್ಷಾಸ್ಥಳ ಎಂಬದೊಂದು ಹೊಸ ಸ್ಥಳವನ್ನೀ ಅಕ್ಕಲಯ್ಯಗಳು ಎಲ್ಲಿ ಕಂಡುಹಿಡಿದರೆಂಬುದೇ ನಮಗೊಂದು ಕೌತುಕವಾಗಿದೆ!... ನೂರೊಂದು ಸ್ಥಲಗಳಲ್ಲಿ "ಲಿಂಗಧಾರಣಸ್ಥಲ"ವೆಂಬುದೊಂದೇ ಇದ್ದು ಶಿವದೀಕ್ಷಾಸ್ಥಲ ಎಂಬ ವಾಕ್ಯವೇ ಇಲ್ಲದಿರುವ ಒಂದೇ ಒಂದು ಪ್ರಬಲ ಪ್ರಮಾಣವಿದಕ್ಕೆ ಸಾಕು." ಎಂಬ ತಿಳಿವಿಲ್ಲದ ಉತ್ತರಕ್ಕೆ ಏನನ್ನಬೇಕೋ ನಮಗೇನೂ ತೋಚದಾಗಿದೆ. ಅವರಂತೆ ಮಾತುಮಾತಿಗೂ ಹರಿಹಾಯುವ ಹೀನ ಕೆಲಸವೇ ಬೇಡ. ಆದರೆ ಅವರ ಬುದ್ಧಿಗೆ ನಿಲುಕದ ಆ ಸ್ಥಲವನ್ನು ನಿಲುಕಿಸಿಬಿಡೋಣ!

ಸಿದ್ಧಾಂತ ಶಿಖಾಮಣಿಯ ಭಕ್ತಸ್ಥಲದ ಒಳಭೇದಗಳ ವಿವರವನ್ನು ಸೂಚಿಸುವ ಈ ಶ್ಲೋಕಗಳನ್ನು ಓದಿ!

"ಪಿಂಡತಾ, ಪಿಂಡವಿಜ್ಞಾನಂ, ಸಂಸಾರಗುಣಹೇಯತಾ, ।
ದೀಕ್ಷಾ, ಲಿಂಗಧೃತಿಶ್ಚೈವ, ವಿಭೂತೇರಪಿಧಾರಣಂ ॥
ರುದ್ರಾಕ್ಷಧಾರಣಂ, ಪಶ್ಚಾತ್ ಪಂಚಾಕ್ಷರ ಜಪಸ್ತಥಾ ।
........................................" ಇತ್ಯಾದಿ.

ಇವುಗಳಲ್ಲಿ ನಾಲ್ಕನೆಯ ಸ್ಥಲಕ್ಕೆ ಯಾವ ನಾಮನಿರ್ದೇಶವಿದೆಯೆಂಬುದನ್ನು ಗುರಿಯಿಟ್ಟು ಗುರ್ತಿಸಿ ನೋಡಿ! ಗ್ರಹಿಗ್ರಹಿಸಿ ಓದಿ! ಗುರುಕಾರುಣ್ಯಸ್ಥಲವೇ ಶಿವದೀಕ್ಷಾಸ್ಥಲವೆಂದು ಆಗ ಗೊತ್ತಾಗುತ್ತದೆ. ಅದು ಪರ್ಯಾಯವಾಚಿ ಶಬ್ದವೆಂಬುದು ಆಗ ಗಮನಕ್ಕೆ ಬರುತ್ತದೆ; ಆಗ ನಿಮ್ಮ ಕೌತುಕವು ಕಾಲ್ದೆಗೆಯುತ್ತದೆ. ಇದರಿಂದ ಈ ನಂಜಪ್ಪಗಳು "ಶಿವದೀಕ್ಷಾಸ್ಥಲ—ಲಿಂಗಧಾರಣಸ್ಥಲ ಇವು ಬೇರೆ ಬೇರೆಯಲ್ಲ. ಇವೆರಡೂ ಒಂದೇ ಅರ್ಥದಲ್ಲಿ ಪ್ರಯೋಗವಾಗುತ್ತವೆ...." ಎಂಬದಾಗಿ ಉತ್ತರವಿತ್ತ ಮಾತುಗಳು ವೀರಶೈವ ತಾತ್ವಿಕ ಪರ್ಯಾಯ ಶಬ್ದಗಳ ಪರಿಚಯವಿಲ್ಲದವುಗಳೆಂಬುದು ಈಗ ಓದುಗರಿಗೂ ಅರ್ಥವಾಗದಿರದು. ಅಲ್ಲದೆ ಲಿಂಗಧಾರಣಸ್ಥಲಕ್ಕೇನೆ ಶಿವದೀಕ್ಷಾಸ್ಥಲವೆಂಬುದಾಗಿ ಪ್ರಯೋಗ

ವಾಗುತ್ತದೆಂಬ ಈ ನಂಜಪ್ಪಗಳ ವಿಚಾರಕ್ಕೆ ಬರೀ ನಮಗಲ್ಲ ವಾಚಕ ರಿಗೂ ವಿಸ್ಮಯವಾಗುತ್ತದಲ್ಲವೆ? ಎಂದು ಇವರನ್ನು ಕೇಳಬಯಸುತ್ತೇವೆ.

೩ನೆಯ ಪ್ರಶ್ನೆಗೆ ಇತ್ತ ನಂಜಪ್ಪಗಳ ಉತ್ತರವನ್ನು ನೋಡಿದರೆ ನಗಬೇಕೊ ಅಳಬೇಕೊ ತಿಳಿಯದು. "ಗರ್ಭಾಷ್ಟಮೇ ಕೃತಾದೀಕ್ಷಾ ಎಂಬ ಶ್ಲೋಕದಲ್ಲಿ 'ಗರ್ಭ' ಪದವಿರುವದರಿಂದ ತಿಂಗಳೆಂದು ಅರ್ಥ ವಾಗುತ್ತದೆಯಂತೆ. ವರ್ಷವೆಂಬರ್ಥವಾಗಬೇಕಾದರೆ ವರ್ಷ ಎಂಬರ್ಥದ ಪದವೆ ಇರಬೇಕಾಗಿತ್ತಂತೆ. ಇರಬಹುದು ಇವರ ಅಜ್ಞಾನಕ್ಕೆ. ಹೀಗೆ ಅರ್ಥಮಾಡಲು ಇಷ್ಟಕ್ಕೇನೆ ಶ್ಲೋಕವು ಮುಗಿಯಲಿಲ್ಲ. ಮುಂದೆ 'ಷೋಡ ಶಾವಧಿ' ಪದವಿದೆ. 'ತದೂರ್ಧ್ವಂ' ಪದವಿದೆ. ಇವುಗಳಿಗೇನಾರ್ಥವೋ ಹೇಳಲಿಲ್ಲ. ಇವೆರಡು ಪದಗಳಿಗೆ ಇವರು ಅರ್ಥ ಹೇಳಿದರೆ ಯಾರದು ಅನರ್ಥದ ಅಪಾರ್ಥವೆಂಬುದು ಅವರಿಗೇನೆ ಅವಗತವಾಗುತ್ತದೆ.

೪ನೇ ಪ್ರಶ್ನೆಗೆ ಉತ್ತರವಾದಿಗಳಾಗದೆ ತೇಲಿಕೊಂಡಿದ್ದಾರೆ. ಇಂದು ಸಮಸ್ತ ವೀರಶೈವರ ಮನೆಗಳಲ್ಲಿ ಶಿಶುಗಳಿಗೆ ನೆರವೇರುತ್ತಿರುವ ಪುರಾತನ ಲಿಂಗಧಾರಣ ವಿಧಾನವೆ ಇದಕ್ಕೊಂದು ಪ್ರತ್ಯಕ್ಷ ಪ್ರಮಾಣ. ......" ಎಂದಿದ್ದಾರೆ. ಈ ಮಾತು ಪ್ರತಿವಾದಿಗಳಾದ ನಮಗೇನೆ ಹೆಚ್ಚು ಸಮನ್ವಯವಾಗಿದೆ. ಇಂದು ವೀರಶೈವರಲ್ಲಿ ಪದ್ಧತಿಯಿರುವದೂ ಸಹ ಭಿನ್ನ ಸಂಸ್ಕಾರ ಪದ್ಧತಿಯೆ. ವೀರಶೈವರಲ್ಲಿ ಯಾರೂ ಗರ್ಭಕ್ಕೆ ಪೂರ್ತಿ ದೀಕ್ಷೆಯನ್ನು ಮಾಡಿಸುವದಿಲ್ಲ; ಮಾಡುವವರಿಲ್ಲ. ಅದರಲ್ಲಿಯೂ ಹೆರಿಗೆ ಆಸ್ಪತ್ರೆಗಳ ಈ ಕಾಲದಲ್ಲಿ.

೫ನೇ ಪ್ರಶ್ನೆಯು ವೀರಶೈವಾಚರಣೆಯ ಪರಿಚಯಸ್ಥನದಲ್ಲವಂತೆ. ಇದು ವ್ಯವಹಾರಹೀನಬುದ್ಧಿಯಂತೆ. ನೋಡಿದಿರಾ ಈ ಉನ್ಮಾದದ ಉತ್ತರವನ್ನು! ಶಿವದೀಕ್ಷೆಯಾಗಿ ಅದರ ಮರ್ಮವನ್ನು ತಿಳಿದ ಯಾವ ವೀರಶೈವನೂ ಹೀಗೆ ಉತ್ತರ ಹೇಳಲಾರ.

ಶಿವದೀಕ್ಷೆಯು ಅಂಗಕ್ಕೆ ಮಾತ್ರ. ಇದು ಅಂಗ ಸಂಸ್ಕಾರ. ಶಿವ ದೀಕ್ಷೆಯ ಮುನ್ನ ಮಾರ್ಗಕ್ರಿಯೆಯಲ್ಲಿರುವ ಅಂಗ ಲಿಂಗಕ್ಕೆ ದ್ವೈತನಾ ಗಿಯೆ ಇರುತ್ತಾನೆ. ಶಿವಜ್ಞಾನವನ್ನುಂಟುಮಾಡಿಕೊಡುವ ಶಿವದೀಕ್ಷೆಯು ಅಂಗಕ್ಕೇನೆ. ಲಿಂಗಸಂಸ್ಕಾರ ಬೇರೆ ಅವೆ. ಆದ್ದರಿಂದ ಶಿವದೀಕ್ಷೆಯ ಮುನ್ನಿನ ಅಂಗ ಬೇರೆ; ಲಿಂಗ ಬೇರೆ. ಈ ಕಾರಣದಿಂದಲೆ ವೀರಶೈವ ರಲ್ಲಿ ಶಿವಾದ್ವೈತವನ್ನು ಸಾಧಿಸುವ ಶಿವದೀಕ್ಷೆಯು ಎಂಟು ವರುಷದ

ಮೇಲೆ ಅಂಗಕ್ಕೆ ಮಾಡುವ ಸಂಸ್ಕಾರವಾಗಿ ರೂಢಿಯಲ್ಲಿ ಬಂದಿರುವದು ಸಮಂಜಸವಾಗಿದೆ; ಸಾರ್ಥಕವಾಗಿದೆ. ಈ ನಿಜಾರ್ಥವು ಬೈಲಿಗೆ ಬರಲೆಂದೇ ಈ ಪ್ರಶ್ನೆಯನ್ನು ಹಾಕಿದ್ದು. ಇನ್ನಾದರೂ ಇದು ಮಕ್ಕಳಾಟಿಕೆಯಲ್ಲ, ಮಂಕು ಕವಿದ ಮಂದಮತಿಗೆ ಲಕ್ಕು ತಂದುಕೊಡುವ ಮಿಕ್ಕ ಸಾಧನವೆಂದು ಈ ನಂಜಪ್ಪಗಳು ತಿಳಿದರೆ ಲೇಸು.

## ಕಡೆಯ ಮಾತು.

ಒಂದು ವಿಷಯದಲ್ಲಿ ಭಿನ್ನಾಭಿಪ್ರಾಯ ಹುಟ್ಟಿದಮೇಲೆ ಅದು ಹೀಗೇ ಎಂದು ನಿಶ್ಚಯವಾಗಬೇಕಾದರೆ ಆ ವಿಷಯದಲ್ಲಿ ವಿವಿಧವಾಗಿ ವಾದ-ವಿವಾದಗಳೆರಡೂ ಜರಗಬೇಕಾದುದು ಸರ್ವಸಾಮಾನ್ಯವಷ್ಟೆ. ಈ ನಿಯಮಕ್ಕನುಸರಿಸಿ ಪ್ರತಿವಾದಿಗಳಾಗಿನಿಂತರೆ, ಪ್ರಶ್ನೆಗಳನ್ನು ಕೇಳಿದರೆ ವಾದಿಗಳಾದ ಈ ನಂಜಪ್ಪಗಳು ಸಮರ್ಥಿಸಲು ಶಕ್ತಿಸಾಲದೆ, ಶೇಮುಷಿಯು ಸಾಗದೆ-ಬಾಯಿಗೆ ಹಿಡಿಯದ ಅವಾಚ್ಯಪದಗಳಿಂದ ಅನಾಗರಿಕರಿಗೂ ಅನಭ್ಯಾಸಿಗಳಿಗೂ ಸಹ ಸಹಜವೆನಿಸದ ಸಹ್ಯವೆನಿಸದ ಬೈಗಳನ್ನು ಬರೆಯುವದು ನಗರವಾಸಿಗಳೂ, ವಿಚಾರಶೀಲರೂ, ವಿದ್ಯಾಭಿಮಾನಿಗಳೂ, ವಿಷಯಜಿಜ್ಞಾಸುಗಳೂ ಆದ ಈ ವಾದಿಗಳಿಗೆ ಯೋಗ್ಯವೇ ಎಂಬುದನ್ನು ವಾಚಕರೇ ವಿಚಾರಿಸಲಿ. ಮಹಾಮಹಿಮರಾದ ಶಿವಶರಣರ ಅಮೌಲ್ಯ ವಚನಗಳ ಮತ್ತು ಋಷಿಕವಿಗಳ ಕಮನೀಯ ಕಾವ್ಯಗಳ ಆಳ, ಅನುಭವ, ಆಚರಣೆಗಳು ಇವರ ಹೃದಯವನ್ನು ಹಿಸುಕಿ ಮಿದುವಾಗಿಸಿದ್ದರೆ ಪಂಕ್ತಿಪಂಕ್ತಿಗೂ ಹೃದಯವನ್ನು ಕೊರೆಯುವ ಕಲಕುವ ಕೀಳ್ಮಾತುಗಳ ಮೇಳನವನ್ನು ಇವರು ಅದೆಂದಿಗೂ ಮಾಡುತ್ತಿರಲಿಲ್ಲ. ಒಂದುವೇಳೆ ವಾದಿಗಳು ನ್ಯಾಯಪಕ್ಷಪಾತಿಗಳಾಗಿದ್ದರೆ ಈ ಮದಮಾತ್ಸರ್ಯಗಳಿಗೂ ಈ ಹಟಸಟೆಗಳಿಗೂ ಎಳ್ಳಷ್ಟೂ ಅವಕಾಶವನ್ನು ಕೊಡುತ್ತಿರಲಿಲ್ಲ. ಇದು ವಿಚಾರಶೀಲರ ಲಕ್ಷಣವೂ ಅಲ್ಲ.

ಇನ್ನಾದರೂ ಈ ವಾದಿಗಳು "ಶಿವಾನುಭವ" ದಲ್ಲಿ ಪ್ರಕಟವಾಗುತ್ತಿರುವ ವಿಚಾರಪೂರಿತ "ಶಿವಶರಣರ ಶಿವದೀಕ್ಷಾಕಾಲ" ಎಂಬ ಲೇಖಾಂಕಗಳನ್ನು ವಿಚಾರದೃಷ್ಟಿಯಿಂದ ವಿವೇಚಿಸಿ ಓದಿ, ತಮ್ಮ ವಿವೇಕವನ್ನು ವಿಪರ್ಯಾಸಗೊಳಿಸದಿರಲೆಂದು ಆಶಿಸಲಾಗಿದೆ.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ ಜಿ. ಹಳಕಟ್ಟಿ ಬಿ. ಏ ಎಲ್. ಎಲ್. ಬಿ. ವಿಜಾಪುರ.)

[ಲೇಖಾಂಕ— ೧೩.]

---

## ಸಂಗಮದಲ್ಲಿ ವಾಸ.

ಬಸವೇಶ್ವರನು ಬಾಗೇವಾಡಿಯಿಂದ ಸಂಗಮಕ್ಷೇತ್ರಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದ ಬಳಿಕ ಅವನು ಅಲ್ಲಿ ಹೇಗೆ ಕಾಲಕಳೆದನೆಂಬುದನ್ನು ವಿವರಿಸುವದು ಪ್ರಕೃತ ಲೇಖದ ಮುಖ್ಯೋದ್ದೇಶವಾಗಿದೆ. ಆಗ ಅವನಿಗೆ ಬಹುಶಃ ೧೬ ವರ್ಷಗಳಾಗಿರಬೇಕು. ಈ ವಿಷಯದಲ್ಲಿ ಹರಿಹರ ಕವಿಯ ಹೇಳಿಕೆಯು ಹೆಚ್ಚಿಗೆ ನಂಬಲರ್ಹವಾದುದೆಂದು ನಾವು ಹಿಂದೆ ವಿವರಿಸಿದ್ದೇವೆ. (ಶಿವಾನುಭವ ಸಂಪುಟ ೧೬ ಸಂಚಿಕೆ ೨ ಪುಟ ೧೫ ನೋಡಿರಿ.) ಆಗ ಅವನು ತನ್ನ ಯಜ್ಞೋಪವೀತವನ್ನು ತ್ಯಜಿಸಿ ಲಿಂಗಧಾರಿಯಾಗಿದ್ದಾನೆ. ಅವನಿಗೆ ಬ್ರಾಹ್ಮಣ ಧರ್ಮದ ಪ್ರಕಾರ ಉಪನಯನವಾಗಿತ್ತೆಂದು ಬಸವೇಶ್ವರನ ವಚನಗಳ ಆಧಾರದಿಂದಲೇ ನಾವು ನಮ್ಮ ಹಿಂದಿನ ಲೇಖದಲ್ಲಿ ಸಿದ್ಧಪಡಿಸಿದ್ದೇವೆ. ಉಪನಯನವಾದ ಬಳಿಕ ಹೀಗೆ ಯಜ್ಞೋಪವೀತವನ್ನು ತ್ಯಜಿಸಬೇಕಾದರೆ, ಬಸವೇಶ್ವರನಿಗೆ ಅಷ್ಟರಲ್ಲಿ ವೀರಶೈವ ಧರ್ಮದ ತಿಳುವಳಿಕೆಯಾಗಿತ್ತೆಂದು ನಾವು ಅನುಮಾನ ಮಾಡಬೇಕಾಗುತ್ತದೆ. ಅವನಿಗೆ ಹೀಗೆ ತಿಳುವಳಿಕೆಯಾಗಿತ್ತಷ್ಟೇ ಅಲ್ಲ, ಆಗಲೇ ಅವನು ವಚನಗಳನ್ನು ಸಹ ರಚಿಸಹತ್ತಿದ್ದನೆಂತಲೂ ನಾವು ಹಿಂದಿನ ಒಂದು ಲೇಖದಲ್ಲಿ ಅವನ ಒಂದು ವಚನದ ಆಧಾರದಿಂದ ವಾಚಕರಿಗೆ ವಿದಿತಪಡಿಸಿದ್ದೇವೆ. (ಶಿವಾನುಭವ ಸಂಪುಟ ೧೬ ಸಂಚಿಕೆ ೧೦ ಪುಟ ೪೮೨ ನೋಡಿರಿ) ಮಹಾಪುರುಷರ ಕೃತ್ಯಗಳು ಬಹುತರವಾಗಿ ಅವರು ಚಿಕ್ಕಂದಿನಲ್ಲಿ ಇವರುವಾಗಿನಿಂದಲೇ ಪ್ರಾರಂಭವಾಗುತ್ತವೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಈ ನಿಯಮಕ್ಕೆ ಬಸವೇಶ್ವರನು ಅಪವಾದವಾಗಲಾರನು. ಅವನು ಮಂತ್ರಿಪದಾರೂಢನಾಗುವ ವರೆಗೆ ಆವ ತರದ ಧರ್ಮ ಕಾರ್ಯಗಳನ್ನು ಮಾಡದೆ, ಮಂತ್ರಿಯಾದ ಕೂಡಲೆ ಧಾರ್ಮಿಕ ವಿಚಾರಗಳು ಅವನಲ್ಲಿ ಅಕಸ್ಮಾತ್ತಾಗಿ ತಲೆದೋರಿದವು. ಅವು

ಗಳನ್ನು ಪ್ರಸಾರ ಮಾಡುವ ಕಾರ್ಯವನ್ನು ಆಗ್ಗೆಯೇ ಕೈಕೊಂಡನು, ಹೀಗೆ ಕೈಕೊಂಡ ಕೂಡಲೇ ದೇಶದಲ್ಲೆಲ್ಲ ಧಾರ್ಮಿಕ ಕ್ರಾಂತಿಯುಂಟಾಯಿತು, ಎಂಬುದು ನಂಬಲಿಕ್ಕೆ ಅರ್ಹವಾದುದಲ್ಲ. ಬಸವೇಶ್ವರನಿದ್ದ ಕಾಲದಲ್ಲಿ ಕರ್ನಾಟಕವು ರಾಜಕೀಯ, ಸಾಮಾಜಿಕ, ವಾಙ್ಮಯಕ್ಷೇತ್ರದಲ್ಲಿ ಹಿಂದುಸ್ತಾನದಲ್ಲೆಲ್ಲ ಬಹು ಮುಂದುವರಿದ ದೇಶವಾಗಿತ್ತು. ಇಲ್ಲಿ ಬ್ರಾಹ್ಮಣ ಜೈನ ಮೊದಲಾದ ಧರ್ಮೀಯರು ಆಗ ಉನ್ನತ ಸ್ಥಿತಿಯಲ್ಲಿದ್ದರು. ಅವರಲ್ಲಿ ಮಹತ್ವದ ವಾಙ್ಮಯವು ಉಂಟಾಗಿತ್ತು. ದೇಶದ ಇಂಥ ಪರಿಸ್ಥಿತಿಯಲ್ಲಿ ಬಸವೇಶ್ವರನು ಏನೂ ಶ್ರಮ ಪಡದೆ, ಕೇವಲ ರಾಜಕೀಯ ಪ್ರಾಬಲ್ಯದಿಂದ ಒಂದು ಘನತರವಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿಯನ್ನುಂಟು ಮಾಡಿದನೆಂದು ತಿಳಿಯುವದು ಶಕ್ಯವಲ್ಲ. ಆದ್ದರಿಂದ ಬಸವೇಶ್ವರನ ಧರ್ಮಜಾಗ್ರತಿಯ ಕಾರ್ಯಗಳು ಸಂಗಮ ಕ್ಷೇತ್ರಕ್ಕೆ ಬರುವ ಪೂರ್ವದಲ್ಲಿಯೇ ಅವನಿಂದ ಪ್ರಾರಂಭವಾಗಿದ್ದವು, ಮತ್ತು ಅವನು ಅಲ್ಲಿಗೆ ಬಂದ ಬಳಿಕ ಆ ಕಾರ್ಯಗಳನ್ನು ಮತ್ತಿಷ್ಟು ಬಲವಾದ ರೀತಿಯಿಂದ ಮುಂದುವರಿಸಿದನು, ಎಂದು ನಮಗೆ ತೋರುತ್ತದೆ. ಹೀಗೆ ತಿಳಿಯಲಿಕ್ಕೆ ಅವನು ರಚಿಸಿದ ವಚನಗಳೇ ಸಾಕ್ಷಿಯಾಗಿವೆ. ಅವುಗಳನ್ನು ನಾವು ವಿವೇಚಿಸುವ ಪೂರ್ವದಲ್ಲಿ ಕೆಲವು ಗ್ರಂಥಕಾರರು ಸಂಗಮ ಕ್ಷೇತ್ರದಲ್ಲಿ ಬಸವೇಶ್ವರನು ಇದ್ದಾಗ ಅವನು ಹೇಗೆ ಕಾಲ ಕಳೆದನು, ಆಗ ಅವನು ಯಾವ ರೀತಿಗಳನ್ನು ಅನುಸರಿಸಿದನು, ಮತ್ತು ಧರ್ಮ ಪ್ರಸಾರ ಮಾಡುವ ಅವನ ಕಾರ್ಯಗಳು ಹೇಗೆ ಸಿದ್ಧಿಗೆ ಹೋದವು, ಈ ವಿಷಯಗಳನ್ನು ಕುರಿತು ಯಾವ ಸಂಗತಿಗಳನ್ನು ಅವರು ನಿರೂಪಿಸಿರುವರೆಂಬದನ್ನೂ ಇವುಗಳ ಸತ್ಯಾಸತ್ಯತೆಯನ್ನೂ ವಿವೇಚಿಸುವದು ಅವಶ್ಯವಿರುತ್ತದೆ.

## ಹರಿಹರಕವಿಯು ಬಸವೇಶ್ವರನು.

ಬಸವೇಶ್ವರನ ಚರಿತ್ರೆಯನ್ನು ಬರೆದವರಲ್ಲಿ ಹರಿಹರಕವಿಯೇ ಮೊದಲಿಗನಾಗಿದ್ದಾನೆ. ಬಸವೇಶ್ವರನು ಸಂಗಮ ಕ್ಷೇತ್ರಕ್ಕೆ ಬಂದ ಬಳಿಕ ಅವನು ಹೇಗೆ ವೇಳೆಗಳೆಯುತ್ತಿದ್ದನೆಂಬುದನ್ನು ಈ ಕವಿಯು ವಿವರಿಸುವಲ್ಲಿ ಅವನು ತನ್ನ ಕವಿತಾ ಸಾಮರ್ಥ್ಯವನ್ನು ಬಹು ಚನ್ನಾಗಿ ಹೊರಗೆಡವಿದ್ದಾನೆ. ಯಾವನು ಭಕ್ತಿ ಯೋಗದಲ್ಲಿ ನಿರತನಾಗಿರುತ್ತಾನೋ ಅವನಿಗೆ ಆ ವರ್ಣನೆಯು ಬಹು ಚನ್ನಾಗಿ ಸಲ್ಲುತ್ತದೆ. ಕವಿಯು

ಹೇಳುವದೇನಂದರೆ, ಬಸವನು ಪ್ರಭಾತಸಮಯದಲ್ಲಿದ್ದು ಹೂದೋಟಕ್ಕೆ ಹೋಗುತ್ತಾನೆ, ಅಲ್ಲಿ ಅವನು ಪುಷ್ಪಾವಚಯುವನ್ನು ಮಾಡಿ ಕೃಷ್ಣೆಯ ಸ್ನಾನವಮಾಡುತ್ತಾನೆ, ಮತ್ತು ಅಮೇಲೆ ಸಂಗಮೇಶ್ವರನ ದೇವಾಲಯವನ್ನು ಪ್ರವೇಶಿಸಿ ದೇವರನ್ನು ಕುರಿತು ಪ್ರಾರ್ಥನೆ ಮಾಡುತ್ತಾನೆ. ಹರಿಹರನು ಮಾಡಿದ ಇವುಗಳ ಸವಿಸ್ತಾರ ವರ್ಣನೆಗಳು ಬಹು ಹೃದಯಂಗಮವಾಗಿವೆ. ಬಸವೇಶ್ವರನು ಹೀಗೆ ದೇವರನ್ನು ಪ್ರಾರ್ಥಿಸಿ ಮುಂದೆ ನವಶಾಕಪಾಕಾದಿಗಳ ಭೋಜನ, ಪರಮಾತ್ಮನಿಗೆ ಅವುಗಳ ಸಮರ್ಪಣೆ, ಸಂಗಮೇಶ್ವರನ ಸ್ತುತಿ, ಸಂಗಮೇಶ್ವರನ ಮುಂದೆ ಅವನು ಮಣಿಮಣಿದು ಕುಣಿಕುಣಿದಾಡುವದು, ಈ ಕಾರ್ಯಗಳನ್ನು ಅವನು ಮಾಡುವದರಲ್ಲಿ ತಲ್ಲೀನನಾಗುತ್ತಾನೆ. ಹೀಗಿರುವಲ್ಲಿ ಒಂದು ದಿನ ರಾತ್ರಿ ಸಂಗಮೇಶ್ವರನು ಅವನ ಸ್ವಪ್ನದಲ್ಲಿ ಬಂದು ಮಂಗಳವಾಡಕ್ಕೆ ನೀನು ಹೋಗು, ಬಿಜ್ಜಳನಲ್ಲಿರು ಎಂದು ಅಜ್ಞಾಪನೆಯಾಗಲು, ಬಸವೇಶ್ವರನು ಸಂಗಮನಾಥನ ಸಾಮೀಪ್ಯವನ್ನು ಬಿಡಲು ಮನಸ್ಸೊಪ್ಪದಿದ್ದರೂ ಅವನು ಪರಮಾತ್ಮನ ಅಜ್ಞೆಯನ್ನು ಶಿರಸಾ ವಹಿಸಿ ಮಂಗಳವಾಡಕ್ಕೆ ಹೋಗಿ ಅಲ್ಲಿ ಒಂದು ನೌಕರಿಯನ್ನು ಹಿಡಿದು ವಾಸಿಸಹತ್ತುತ್ತಾನೆ. ಅಲ್ಲಿ ಅವನಿಗೆ ಅಸಂಖ್ಯ ಮಾಹೇಶ್ವರರ ದರ್ಶನವಾಗುತ್ತದೆ. ಅವನು ಅವರೊಡನೆ ಯಾವಾಗಲೂ ಲಿಂಗಪೂಜಾಸಂಭ್ರಮದಲ್ಲಿರುತ್ತಾನೆ. ಈ ರೀತಿಯಾಗಿ ಬಸವೇಶ್ವರನು ತನ್ನ ಪೂರ್ವ ವಯಸ್ಸನ್ನು ಕಳೆದನೆಂದು ಹರಿಹರ ಕವಿಯು ವರ್ಣಿಸುತ್ತಾನೆ. ಇದು ಕೇವಲ ಭಕ್ತಿಮಾರ್ಗವು. ಆದರೆ ಬಸವೇಶ್ವರನು ಕೇವಲ ಭಕ್ತಿಮಾರ್ಗದವನಲ್ಲ, ಅವನು ಕರ್ಮಯೋಗಿಯೂ ಇದ್ದಾನೆ. ಇದು ಅವನ ವಚನಗಳಿಂದ ತಿಳಿದುಬರುತ್ತದೆ. ಅವನು ಒಂದು ವಚನದಲ್ಲಿ "ಕೆಂಚಕರಿಕನ ನೆನೆದರೆ ಕರಿಕನಾಗಬಲ್ಲನೇ? ಕರಿಕ ಕೆಂಚನ ನೆನೆದರೆ ಕೆಂಚನಾಗಬಲ್ಲನೇ......ಮುನ್ನಿನ ಪುರಾತನರ ನೆನೆದು ಧನ್ಯರಾದಿಹೆನೆಂಬ ಮಾತಿನ ರಂಜಕರನೇನೆಂಬೆ ಕೂಡಲಸಂಗಮದೇವಾ" ಎಂದು ಹೇಳಿದ್ದಾನೆ. (ವಚನ ೫೯೭) ಈ ವಚನದಲ್ಲಿ ಅವನು ಕೇವಲ ಪರಮಾತ್ಮನ ಧ್ಯಾನಾಸಕ್ತನಾದರೆ ಉದ್ದಿಶ್ಯ ಕಾರ್ಯಗಳು ಸಾಧ್ಯವಾಗಲಾರವೆಂದು ಹೇಳುತ್ತಾನೆ. ಶಿವಶರಣರೆಲ್ಲರ ಬೋಧೆಯು ಹೀಗೆಯೇ ಇದೆ. ವೀರಶೈವರಲ್ಲಿ ಕರ್ಮಕಾಂಡ, ಭಕ್ತಿಕಾಂಡ, ಜ್ಞಾನಕಾಂಡ, ಇವೆಲ್ಲವೂ ಕೂಡಿರುತ್ತವೆಂದು ಬಸವೇಶ್ವರನು ಪ್ರತಿಪಾದಿಸುತ್ತಾನೆ. "ಯಸ್ಯಕ್ರಿಯಾ ತಸ್ಯ

ಸಿದ್ಧಿರ್ಭವತಿ ಎಂದು ಕಟ್ಟಾಚಾರದಲಿದ್ದರ್ ಆನು ಅನುಸರಿಸಿಕೊಂಡು ನಡೆವನ್ನಕ್ಕ ಕರ್ಮಕಾಂಡಿಯಲ್ಲ. ಉತ್ಪತ್ತಿ ಸ್ಥಿತಿ ಭೋಗ ಭುಕ್ತಿ ಕಾಯ ವುಳ್ಳನ್ನಕ್ಕ ಭಕ್ತಿಕಾಂಡಿಯಲ್ಲ. ಪರವು ಸಾಧ್ಯವಾಯಿತ್ತೆಂದು ಕ್ರಿಯೆಯಿಲ್ಲವ ಮೀರಿ ನಡೆವೆನು, ಪರತತ್ವವನರಿದೆನು, ಎಂಬನ್ನಕ್ಕ ಜ್ಞಾನಕಾಂಡಿಯಲ್ಲ. ಇನ್ನು ಕರ್ಮಕಾಂಡ, ಭಕ್ತಿಕಾಂಡ, ಜ್ಞಾನಕಾಂಡ ಈ ತ್ರಿವಿಧದಲ್ಲಿ ವಂಚಕನಾದಡೆ ಈಸು ವಿಧದೊಳಗೆ ಲಿಂಗವಿಲ್ಲ, ಮೇಲೆ ಸತ್ಪುರುಷರ ಸಂಗವಿಲ್ಲ, ಯುಕ್ತಿ ಇಲ್ಲ, ಎನಗೆ ಭಕ್ತಿ ಎಂತಪ್ಪುದಯ್ಯ?" (ವಚನ ೬೦೩) ಎಂದು ಬಸವೇಶ್ವರನು ಕೇವಲ ಭಕ್ತಿಮಾರ್ಗವನ್ನು ಅನುಸರಿಸುವ ದನ್ನು ಬಹು ಮಾರ್ಮಿಕ ರೀತಿಯಿಂದ ಖಂಡಿಸಿದ್ದಾನೆ. ಹರಿಹರನು ವರ್ಣಿ ಸಿದ ಬಸವನು ನಿಜವಾದ ಬಸವನಾಗಲಾರನೆಂದು ನಮಗೆ ತೋರುತ್ತದೆ. ಅವನು ತನ್ನ ಸ್ವಂತದ ವಿಚಾರಗಳನ್ನು ತನ್ನ ಕಾವ್ಯದಲ್ಲಿ ಪ್ರಕಟಿಸಿದ್ದಾ ನೆಯೋ ಹೊರತು ಅವು ಬಸವನಿಗೆ ಅನ್ವಯಿಸತಕ್ಕ ನಿಜವಾದ ಸಂಗತಿ ಗಳಲ್ಲೆಂದು ಬಸವೇಶ್ವರನು ರಚಿಸಿದ ವಚನಗಳಿಂದವೇ ತೋರಿಬರು ತ್ತದೆ. ಇದರಲ್ಲಿ ಹರಿಹರನನ್ನು ನಂಬುವದಕ್ಕಿಂತ ಬಸವೇಶ್ವರನ ವಚನ ಗಳನ್ನೇ ನಾವು ನಂಬುವದು ಯೋಗ್ಯವೆಂದು ನಮಗೆ ತೋರುತ್ತವೆ.

## ಪಂಚ ಪರುಷ ಸಾಧಿಸಿದ ಬಸವನು

ಬಸವೇಶ್ವರನು ಮಾಡಿದ ಮಹತ್ವದ ಕಾರ್ಯಗಳನ್ನು ನೋಡಿ ಅವನಿಗೆ ವಾಕ್ಪರುಷ, ಹಸ್ತಪರುಷ, ಮೊದಲಾದ ಪಂಚಪರುಷಗಳು ಸಾಧ್ಯವಾಗಿದ್ದವು, ಆದ್ದರಿಂದ ಅವನಿಂದ ಅನೇಕ ಪವಾಡಗಳಾದವು, ಈ ಪವಾಡಗಳ ಮೂಲಕ ಜನರು ಅವನನ್ನು ಹಿಂಬಾಲಿಸುವವ ರಾದರು, ಎಂಬ ತಿಳವಳಿಕೆಯು ಜನರಲ್ಲಿ ಉತ್ಪನ್ನವಾಗಿರುತ್ತದೆ. ಹೀಗೆ ಅವನ ಪವಾಡಗಳನ್ನು ವರ್ಣಿಸುವ ವೀರಶೈವ ಗ್ರಂಥಗಳೂ ಕೆಲವಿವೆ. ಆದರೆ ವೀರಶೈವ ಧರ್ಮದ ಪ್ರಕಾರ ಹೀಗೆ ಪವಾಡ ಮಾಡುವದು ನಿಷಿದ್ಧವಿದೆ. ಬಸವೇಶ್ವರನೂ ಕೂಡ ಇದೇ ಅಭಿಪ್ರಾ ಯದವನು. "ಗುರು ತೋರಿದ ಲಿಂಗವು ಮನಸ್ಥಲವಾಗಿರಲು ಪವನ ಭೇದದಿಂದರಿದಿಹೆನೆಂಬರೆ, ಅದೇ ದ್ರೋಹ. ಈಡಾ ಪಿಂಗಳ ಸುಷುಮ್ನ ನಾಳವಿಡಿದು ಅರಿದಿಹೆನೆಂದರೆ ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಣ್ಬನೇ" ಎಂದು ಅಷ್ಟಾವರಣಕ್ಕೆ ಬಸವೇಶ್ವರನು ಮಹತ್ವ ಕೊಟ್ಟು ಹಠಯೋಗಿಗಳನ್ನೂ ಸಾಧಕರನ್ನೂ ಸಿದ್ಧರನ್ನೂ ಇಲ್ಲಿ ಹ[illegible]

ತ್ತಾನೆ. ಯಾವ ಮಹಾತ್ಮನು "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ. ನಿಮ್ಮ ಪಾದ ಸಾಕ್ಷಿ, ಎನ್ನ ಮನಸಾಕ್ಷಿ ಕೂಡಲಸಂಗಮದೇವ ಎನಗಿದೇ ದಿಬ್ಯ. ( ವಚನ ೨೫೮ ) ಎಂತಲೂ ಯಾವನು "ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾವದಿನಿತಿಲ್ಲ. ಎನ್ನ ಭಕ್ತನೆಂಬರು ಎನ್ನ ಸಮಯಾಚಾರಿ ಎಂಬರು. ನಾನೇನ ಪಾಪ ಮಾಡಿಹೆನು?" (ವಚನ ೨೬೪) ಎಂದು ಹೇಳುತ್ತಾನೋ. ಯಾವ ಮಹಿಮನು "ಬಸವ ಬಾರಯ್ಯ, ಮರ್ತ್ಯ ಲೋಕದೊಳಗೆ ಭಕ್ತರುಂಟೇ ಹೇಳಯ್ಯ. ಮತ್ತಾರೂ ಇಲ್ಲಯ್ಯಾ, ಮತ್ತಾರೂ ಇಲ್ಲಯ್ಯಾ. ನಾನೊಬ್ಬನೇ ಭಕ್ತ, ಮರ್ತ್ಯ ಲೋಕದೊಳಗಣ ಭಕ್ತರೆಲ್ಲರು ಜಂಗಮಲಿಂಗ ನೀನೇ ಅಯ್ಯಾ ಕೂಡಲಸಂಗಮದೇವಾ" ಎಂದು ಅಹಂಭಾವರಹಿತನಾಗಿ ನುಡಿಯುತ್ತಾನೋ, ಅಂಥವನು ಸಿದ್ಧಿಗಳನ್ನು ಸಾಧಿಸಿ ಜನರಿಗೆ ಮೋಹ ಮಾಡಿ ಅವರನ್ನು ಅಂಧಶ್ರದ್ಧೆಗೆ ಗುರಿ ಮಾಡಿ ಅವರನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಮುಂದಾದನೆಂದು ಭಾವಿಸುವದು ಬಸವನ ಚಾರಿತ್ರ್ಯವನ್ನು ಅರಿಯದವರಿಗೆ ಯುಕ್ತವೇ ಹೊರ್ತು, ಅದು ಬಸವೇಶ್ವರನ ನಿಜಸ್ಥಿತಿಯಲ್ಲವೆಂದು ನಮಗೆ ತೋರುತ್ತದೆ. ಇದು ಅವನ ವಚನಗಳಿಂದಲೇ ಸಿದ್ಧವಾಗುತ್ತದೆ. ಅವನ ಯಾವ ವಚನದಲ್ಲಿಯೂ ಅವನಿಗೆ ಪಂಚ ಪರುಷಗಳು ಸಾಧ್ಯವಾಗಿದ್ದವೆಂಬುದರ ಉಲ್ಲೇಖವಿಲ್ಲ. ಭಾವಿಕರು ಹಿಂದುಗಡೆ ಅವನ ವಿಷಯವಾಗಿ ಪೂಜ್ಯ ಭಾವವನ್ನು ತೊಟ್ಟು ನಂಬಿದ ಅಂಧ ಶ್ರದ್ಧೆಯೇ ಹೊರ್ತು ಬೇರೊಂದಲ್ಲ. ಅದು ಅವನ ನಿಜವಾದ ಚಾರಿತ್ರ್ಯವಲ್ಲ. ಆ ರೀತಿಯನ್ನು ಕೈಕೊಂಡು ವೀರಶೈವ ಧರ್ಮವನ್ನು ಬಸವೇಶ್ವರನು ನಾಡಿನಲ್ಲಿ ಪ್ರಸಾರ ಮಾಡಿರುವದಿಲ್ಲ.

## ಪುರಾಣಗಳಲ್ಲಿಯ ಬಸವೇಶ್ವರನು

ವೀರಶೈವ ಪುರಾಣಗಳು ಅನೇಕವಿರುತ್ತವೆ. ಅವುಗಳಲ್ಲಿ ಅನೇಕವು ವಾಙ್ಮಯ ದೃಷ್ಟಿಯಿಂದ ಬಹು ಉಚ್ಚ ತರಗತಿಯನ್ನು ಹೊಂದಿವೆ. ಆ ದೃಷ್ಟಿಯಿಂದ ಅವು ಆದರಣೀಯವು. ಆದರೆ ಚಾರಿತ್ರಿಕ ದೃಷ್ಟಿಯಿಂದ ಅವುಗಳಿಗೆ ತುಂಬಾ ಮಾನ್ಯತೆ ಕೊಡುವದರಿಂದ ಬಸವೇಶ್ವರನ ನಿಜಸ್ಥಿತಿಯು ನಮಗೆ ತಿಳಿಯಲಾರದು. ಅವುಗಳಲ್ಲಿ ಬಹುತರವಾಗಿ ವರ್ಣಿಸಲ್ಪಟ್ಟ ವಿಷಯಗಳು ಜಂಗಮರು, ಗಣಂಗಳು, ಅಥವಾ ಮಹೇಶ್ವರರು ಇಂಥವರನ್ನು ಬಸವೇಶ್ವರನು ನೆರಹಿ ಅವರಿಗೆ ಇಚ್ಛಾ ಭೋಜನವನ್ನು

ಸಲ್ಲಿಸುತ್ತ ಕಲ್ಯಾಣ ಪಟ್ಟಣದಲ್ಲಿ ಕಾಲಕಳೆದನೆಂತಲೂ, ಇಂಥ ಗಣಂಗಳು ಅವನೊಡನೆ ಕಲ್ಯಾಣದಲ್ಲಿ ೧ ಲಕ್ಷ ೯೬ ಸಾವಿರ ಜನರಿದ್ದರೆಂತಲೂ, ಅವರ ಪ್ರಸಾದ ಸೇವನೆಯೇ ಅವನಿಗೆ ಪ್ರಾಣ ಪ್ರಾಯವಾಗಿತ್ತೆಂತಲೂ ಅವರನ್ನು ಅವನು ನಾನಾ ರೀತಿಯಿಂದ ಸಂತೋಷ ಪಡಿಸುವದೇ ಅವನ ಮುಖ್ಯ ಕಾರ್ಯವಾಗಿತ್ತೆಂತಲೂ ಹೀಗೆ ಭಾವಿಸುತ್ತ ಅವನು ಕಲ್ಯಾಣ ಪಟ್ಟಣದಲ್ಲಿ ಕಾಲ ಕಳೆದನೆಂತಲೂ ಅವುಗಳಲ್ಲಿ ವರ್ಣನೆಗಳು ಆಗಿಂದಾಗ್ಗೆ ಬರುತ್ತವೆ. ಅವು ಬಹುಶಃ ಪ್ರತಿಯೊಂದು ಸಂಧಿಯಲ್ಲಿಯೂ ಬರುವದುಂಟು. ಆದರೆ ವಚನ ಶಾಸ್ತ್ರದ ಪ್ರಕಾರ ಅಷ್ಟಾವರಣಗಳ ವಿಚಾರಗಳು ತೀರ ಬೇರೆಯಾಗಿವೆ. ಅವುಗಳ ಪೂರ್ಣ ವಿವರಣೆಗಳು ಬಸವೇಶ್ವರನ ವಚನಗಳು ೮೩೨ ರಿಂದ ೯೬೦ ವರೆಗೆ ಬಂದಿವೆ. ಶಿವಾನುಭವ ಶಬ್ದಕೋಶದಲ್ಲಿಯೂ ಇವುಗಳ ವಿಸ್ತೃತ ವಿವರಣೆಯು ಇರುತ್ತದೆ. ಆದರೆ ಪುರಾಣಗಳಲ್ಲಿಯ ಇಂಥ ಕಥೆಗಳು ಬಸವೇಶ್ವರನ ನಿಜವಾದ ಚರಿತ್ರಕ್ಕೆ ಅನ್ವಯಿಸಲಾರವೆಂದು ನಮಗೆ ತೋರುತ್ತದೆ. ಕಲ್ಯಾಣ ಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರು ಆ ಕಾಲಕ್ಕೆ ನೆರೆದಿದ್ದರೆಂಬ ಸಂಗತಿಯಲ್ಲಿ ತಥ್ಯಾಂಶವಿದ್ದ ಹಾಗೆ ನಮಗೆ ತೋರುವದಿಲ್ಲ. ೧೯೪೧ನೆಯ ಜನಗಣತಿಯಲ್ಲಿ ಸಹ ಇಷ್ಟು ಜನ ಜಂಗಮರು ವೀರಶೈವ ಸಮಾಜದಲ್ಲಿರುವರೋ ಹೇಗೆಂಬುದನ್ನು ಅದರಲ್ಲಿ ಕಾಣುವದು ಸಂದೇಹಾಸ್ಪದವಾದದ್ದು. ಆದ್ದರಿಂದ ಪುರಾಣಗಳಲ್ಲಿ ಇರುವ ಇಂಥ ಕಥೆಗಳಿಂದ ಬಸವೇಶ್ವರನ ಚರಿತ್ರೆಯನ್ನು ಕಂಡುಹಿಡಿಯುವದು ಶಕ್ಯವಿಲ್ಲ.

ಜೈನ ಗ್ರಂಥಗಳಲ್ಲಿ ಬಸವೇಶ್ವರನು ದುರ್ವ್ಯಸನಿಗಳೂ ದುರಾಚಾರಿಗಳೂ ಆದ ಜನರಿಗೆ ಆಶ್ರಯಕೊಟ್ಟು ಧರ್ಮಪ್ರಸಾರ ಕಾರ್ಯಮಾಡಿದನೆಂಬ ಉಲ್ಲೇಖಗಳು ಬರುತ್ತವೆ. ಇವಂತೂ ಎಷ್ಟು ಮಾತ್ರವೂ ನಂಬಲರ್ಹವಾದುವಲ್ಲ. ಈ ವಿಷಯವನ್ನು ಕುರಿತು ನಾವು ಅನೇಕ ಸಾರೆ ಈ ಪತ್ರಿಕೆಯಲ್ಲಿ ನಿರೂಪಿಸುತ್ತಾ ಬಂದಿದ್ದೇವೆ. ಆದ್ದರಿಂದ ಆ ನಿರೂಪಣೆಗಳನ್ನು ನಾವು ಇಲ್ಲಿ ಪುನಃ ವಿವರಿಸುವದಿಲ್ಲ. ವೀರಶೈವವು ಕೇವಲ ಶುದ್ಧ ನೈತಿಕ ಧರ್ಮವು. ಇದನ್ನು ಅಭಿವೃದ್ಧಿಗೆ ತಂದ ಬಸವೇಶ್ವರನು ಯಾವ ತರದ ಅನೀತಿಗೆ ಆಸ್ಪದಕೊಡುವ ಸಂಭವವಿಲ್ಲ. ಕೆಲವು ಜೈನ ಗ್ರಂಥಗಳಲ್ಲಿ ಬಸವೇಶ್ವರನು ಮಾಂತ್ರಿಕನಾಗಿದ್ದು ತನ್ನ ಮಂತ್ರ ಬಲದಿಂದ ಬಿಜ್ಜಳನನ್ನು ತನ್ನ ಅಧೀನದಲ್ಲಿ ತೆಗೆದುಕೊಂಡು ಧರ್ಮಪ್ರಸಾರ

ಮಾಡಿದನೆಂದು ಹೇಳಿದೆ. ಆದರೆ ಯಾವ ಕಾರಣಗಳಮೂಲಕ ಪೊವಾಡಗಳು ನಂಬಲಿಕ್ಕೆ ಅರ್ಹವಾದುವಲ್ಲವೋ, ಅದೇ ಕಾರಣಗಳ ಮೂಲಕ ಜೈನರ ಈ ವಿಧಾನಗಳನ್ನು ನಂಬಲಿಕ್ಕೆ ಬರಲಾರದು.

ಆದರೆ ನಿಜವಾದ ಬಸವೇಶ್ವರನನ್ನು ಅವನ ವಚನಗಳಲ್ಲಿಯೇ ನಾವು ಕಾಣಬಹುದು. ಅವುಗಳೇ ಅವನ ನಿಜವಾದ ಶೀಲ, ಗುಣ, ನಡತೆ, ಮತಗಳನ್ನು ಹೇಳುತ್ತವೆ. ಜನತೆಯು ಕೂಡ ಅವನು ಹೇಗೆ ವರ್ತಿಸಿದನೆಂಬುದನ್ನು ಅವುಗಳೇ ಚನ್ನಾಗಿ ಹೇಳುತ್ತವೆ. ಅವುಗಳನ್ನೇ ನಾವು ಹೆಚ್ಚುಹೆಚ್ಚು ಅಭ್ಯಾಸಮಾಡಬೇಕು. ಹೀಗೆ ಮಾಡಿದಲ್ಲಿ ಅವುಗಳ ಆಧಾರದಿಂದ ಬಸವೇಶ್ವರನು ಧರ್ಮ ಜಾಗ್ರತಿಯ ಕಾರ್ಯಗಳನ್ನು ಹೇಗೆ ಮಾಡಿದನೆಂಬುದನ್ನು ನಾವು ಬಹುಮಟ್ಟಿಗೆ ಊಹಿಸಬಹುದಾಗಿದೆ.

ಬಸವೇಶ್ವರನನ್ನು ಅನುಸರಿಸಿದವರ ಸಂಖ್ಯೆಯು ಅವನಿದ್ದ ಕಾಲದಲ್ಲಿ ಯಾವಾಗಲೂ ಹೆಚ್ಚುತ್ತ ಬಂದಿತೆಂಬುದು ನಿರ್ವಿವಾದವು. ಇದಕ್ಕೆ ಬಸವೇಶ್ವರನು ಪ್ರಸಾರ ಪಡಿಸಿದ ಉಚ್ಚ ಉದಾರ ತತ್ವಗಳೇ ಹೊರ್ತು ಮತ್ತೊಂದು ಕಾರಣವಿಲ್ಲ. ಅವನು ಲಿಂಗಧಾರಿಯಾದ ಬಳಿಕ ಕೂಡಲ ಸಂಗಮೇಶ್ವರನನ್ನು ಭಜನೆ ಮಾಡುತ್ತ ಸಂಗಮ ಗ್ರಾಮದಲ್ಲಿ ಏಕಾಕಿಯಾಗಿ ಕುಳಿತಿಲ್ಲೆಂದು ನಮಗೆ ತೋರುತ್ತದೆ. ಅವನು ವೀರಶೈವ ಧರ್ಮದ ತತ್ವಗಳನ್ನು ಬಹು ಜನ ಸಮಾಜದಲ್ಲಿ ಪ್ರಸಾರ ಪಡಿಸುತ್ತ ಉತ್ತರ ಕರ್ನಾಟಕ ಪ್ರಾಂತದಲ್ಲೆಲ್ಲ ಸಂಚಾರ ಮಾಡಿದ್ದಾನೆಂದು ನಮ್ಮ ನಿಶ್ಚಿತ ಅಭಿಪ್ರಾಯವಿದೆ. ಈ ಸಂಗತಿಯನ್ನು ನಾವು ಈಗ ಪ್ರಕಟವಾಗಿರುವ ಆತನ ವಚನಗಳಿಂದಲೇ ಊಹಿಸಬಹುದಾಗಿದೆ. ಅವನ ವಿಚಾರಗಳು ಬಹುಜನ ಸಮಾಜಕ್ಕೆ ಒಗ್ಗಿದ್ದರಿಂದಲೇ ಅವನ ಅನುಯಾಯಿಗಳ ಸಂಖ್ಯೆಯು ದಿನೇ ದಿನೇ ಬೆಳೆಯುತ್ತ ನಡೆಯಿತು. ಹೇಗೆ ಬುದ್ಧ, ಕ್ರೈಸ್ತರು ಬಡವರಲ್ಲಿ, ದೀನರಲ್ಲಿ, ದುಃಖಿತರಲ್ಲಿ ಬೆರೆದು ಅವರನ್ನು ಉದ್ಧಾರಮಾಡಲಿಕ್ಕೆ ಪ್ರಯತ್ನಿಸಿದರೋ, ಹಾಗೆಯೇ ಬಸವೇಶ್ವರನೂ ಆಚರಿಸಿದ್ದಾನೆ. ಅವನು ಯಾವ ಪೊವಾಡನ್ನು ಮಾಡಿಲ್ಲ, ಮಾಡಲಿಕ್ಕೆ ಪ್ರಯತ್ನಿಸಿಲ್ಲ. ತಾನು ಪೊವಾಡ ಪುರುಷನೆಂದು ಅವನು ಎಲ್ಲಿಯೂ ಹೇಳಿಕೊಂಡಿಲ್ಲ. ಆದರೆ ಅವನು ಬಹುಜನ ಸಮಾಜದಲ್ಲಿ ಬೆರೆದುಕೊಂಡು ಜನರ ರೀತಿ ನಡೆಗಳನ್ನು ಸುಧಾರಿಸಲು ಮಾಡಿದ ಮಹತ್

ಪ್ರಯತ್ನಗಳ ಮೂಲಕವೇ ಅವನಿಂದ ವೀರಶೈವ ಧರ್ಮದ ಪ್ರಸಾರವಾಗಿರುತ್ತದೆ.

ನೀತಿ, ಧರ್ಮ, ಸದಾಚಾರ ಇವುಗಳ ಬೋಧೆಯೇ ಬಸವೇಶ್ವರನ ವಚನಗಳ ಮುಖ್ಯ ತಿರುಳಾಗಿದೆ. ವೀರಶೈವ ಧರ್ಮದಲ್ಲಿ ಷಟ್‌ಸ್ಥಲಗಳೆಂಬುವಿದ್ದು ಅವುಗಳಲ್ಲಿಯ ಯಾವ ಸ್ಥಲವನ್ನು ತೆಗೆದುಕೊಂಡರೂ ಅಲ್ಲಿ ಬಸವೇಶ್ವರನು ನೀತಿಯನ್ನು ಬೋಧಿಸದೆ ಬಿಟ್ಟಿಲ್ಲ. ಉತ್ತಮ ರೀತಿಯಿಂದ ವ್ಯವಹಾರವನ್ನು ಹೇಗೆ ಸಾಗಿಸಬೇಕೆಂಬುದನ್ನು ಅವನು ಅಲ್ಲಿ ಬೋಧಿಸುತ್ತಲೇ ಇದ್ದಾನೆ. ಈ ಲೋಕದಲ್ಲಿಯೇ ಅನಂತ ಲೋಕಗಳಿವೆ, ಸದಾಚಾರವೇ ಸ್ವರ್ಗ, ಅನಾಚಾರವೇ ನರಕವೆಂದು ಹೇಳಿದ್ದಾನೆ. ಇಹ ಲೋಕದಲ್ಲಿ ಸಲ್ಲುವವರು ಪರಲೋಕದಲ್ಲಿಯೂ ಸಲ್ಲುತ್ತಾರೆಂದು ಹೇಳುತ್ತಾನೆ. (ನಂ. ೧೮೪.) ನುಡಿಯಲ್ಲಿ ಎಚ್ಚತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿರ್ದ ಲಿಂಗವು ಘಟಸರ್ಪವಯ್ಯಾ (ವಚನ ೮೪೦) ಎಂದು ಹೇಳಿದ್ದಾನೆ. ಅಂದರೆ ಲಿಂಗಧಾರಕನಾದ ಬಳಿಕ ಸದಾಚಾರಿಯಾಗಿರಬೇಕೆಂತಲೇ ಅವನ ಅಭಿಪ್ರಾಯವು. ಅವನಿದ್ದ ಕಾಲದಲ್ಲಿ ಅನೇಕ ಶಿವಶರಣರು ಉದ್ಭವಿಸಿ ಅನೇಕ ವಚನಗಳನ್ನು ನುಡಿದಿದ್ದಾರೆ. ಅವರೆಲ್ಲರೂ ಬಸವೇಶ್ವರನ ಈ ಮೇಲುಪಙ್ತಿಯನ್ನೇ ತೆಗೆದುಕೊಂಡು ಬಸವೇಶ್ವರನಂತೆಯೇ ನೀತಿ ಬೋಧೆಯನ್ನು ಮಾಡಿದ್ದಾರೆ. ಹೀಗೆ ವಚನಕಾರರಷ್ಟು ಜನರಲ್ಲಿ ನೀತಿಯನ್ನು ಬೋಧೆ ಮಾಡಿ ಅವರನ್ನು ಸುಧಾರಿಸಲು ಯತ್ನ ಮಾಡಿದವರು ಹಿಂದುಸ್ಥಾನದಲ್ಲಿ ಬೇರೆ ಯಾವ ಧರ್ಮದಲ್ಲಿಯೂ ಇರುವದಿಲ್ಲೆಂದು ನಾವು ಖಂಡಿತವಾಗಿ ಹೇಳಬಹುದು. ಇದರಲ್ಲಿ ಎಷ್ಟು ಮಾತ್ರವೂ ಅತಿಶಯೋಕ್ತಿಯು ಇರುವದಿಲ್ಲ. ಮಹಾರಾಷ್ಟ್ರದಲ್ಲಿ ಅನೇಕ ಸಂತರೂ, ತಮಿಳು ದೇಶದಲ್ಲಿ ಅನೇಕ ಶೈವ ವೈಷ್ಣವ ಸತ್ಪುರುಷರೂ, ಕರ್ನಾಟಕದಲ್ಲಿ ವೈಷ್ಣವ ದಾಸರೂ, ಉತ್ತರಹಿಂದುಸ್ಥಾನದಲ್ಲಿ ಅನೇಕ ಸಾಧುಗಳೂ ಆಗಿ ಹೋಗಿದ್ದಾರೆ. ಆದರೆ ಅವರೆಲ್ಲರೂ ಸಂಸಾರವು ನಿಃಸ್ಸಾರವು, ದುಃಖಮಯವು, ತ್ಯಾಜ್ಯವು, ಎಂದು ಹೇಳಿರುವರೇ ಹೊರ್ತು, ಸಂಸಾರವು ಸೌಂದರ್ಯವುಳ್ಳದ್ದೆಂದು ಯಾರೂ ಹೇಳಿಲ್ಲ. “ಇಂದ್ರಿಯ ನಿಗ್ರಹ ಮಾಡಿದರೆ ಹೊಂದುವವು ದೋಷಂಗಳು ಎಂತಲೂ ಹಾಗೆ ಮಾಡಿದಲ್ಲಿ ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು ಎಂತಲೂ ಹೇಗೆ ಬಸವೇಶ್ವರನು ಧೈರ್ಯ

ದಿಂದ ಹೇಳಿದ್ದಾನೋ ಹಾಗೆ ಅವರಲ್ಲಿ ಯಾರೂ ಹೇಳಿಲ್ಲ. ಅವನು ಹೇಳುವ ಅರ್ಥಗರ್ಭಿತವಾದ ಕೆಳಗಿನ ವಚನವನ್ನು ವಾಚಕರು ವಿಚಾರ ಮಾಡಬೇಕು. "ಒಲ್ಲೆನೆಂಬುದು ವೈರಾಗ್ಯ, ಒಲಿದೆನೆಂಬುದು ಕಾಯದ ಗುಣ. ಆವ ಪದಾರ್ಥವಾದಡೆಯೂ ತಾನಿದ್ದೆಡೆಗೆ ಬಂದುದ ಲಿಂಗಾರ್ಪಿತ ಮಾಡಿ ಭೋಗಿಸುವದೇ ಆಚಾರ. ಕೂಡಲಸಂಗಮದೇವರನೊಲಿಸಬಂದ ಪ್ರಸಾದ ಕಾಯುವ ಕೆಡಿಸಲಾಗದು" (ವ ೭೦೫) ಎಂದು ಅವನು ಹೇಳುತ್ತಾನೆ. ಒಲ್ಲೆನು, ಒಲಿದೆನು, ಎಂಬೆರಡೂ ಭಾವಗಳು ಸರಿಯಾದುವಲ್ಲ. ಆದರೆ ಪರಮಾತ್ಮನಿಗೆ ಅರ್ಪಿಸಿ ಭೋಗಿಸಬೇಕೆಂತಲೂ ದೇಹವನ್ನು ಪೀಡಿಸಲಾಗದೆಂತಲೂ ಬಸವೇಶ್ವರನು ಇಲ್ಲಿ ಹೇಳಿದ್ದಾನೆ. ಹಿಂದುಸ್ತಾನದಲ್ಲಿ ನೀತಿಗೆ ಹೀಗೆ ಮೊದಲು ಮಹತ್ವ ಕೊಟ್ಟವರು ಬೌದ್ಧರು. ಬುದ್ಧನು ಸದಾಚಾರವನ್ನು ಬೋಧಿಸುತ್ತ ಸಂಚರಿಸಿದನು. ಅವನು ಪರಲೋಕದ ವಿಷಯಗಳನ್ನು ಕುರಿತು ಆಲೋಚಿಸುತ್ತ ಕುಳ್ಳಿರದೆ, ದುಃಖದಲ್ಲಿರುವ ಜನರನ್ನು ಸಮಾಧಾನ ಮಾಡುತ್ತಲೂ ಅವರಿಗೆ ಸರಿಯಾದ ಮಾರ್ಗವನ್ನು ಬೋಧಿಸುತ್ತಲೂ ದೇಶದಲ್ಲೆಲ್ಲ ಸಂಚರಿಸಿದನು. ಅದ್ದರಿಂದಲೇ ಇಡೀ ದೇಶವು ಬುದ್ಧನನ್ನು ಅನುಸರಿಸಿತು, ಮತ್ತು ಬೌದ್ಧ ಮತವು ಪ್ರಸಾರ ಹೊಂದಿತು. ಹಾಗೆಯೇ ಬಸವೇಶ್ವರನ ಕಾಲದ ಶಿವಶರಣರೂ ಆಚರಿಸಿದ್ದಾರೆ. ಈಗಿರುವ ವಿರಕ್ತಾಶ್ರಮಿಗಳು ಅಲ್ಲಮಪ್ರಭುವು ತಮ್ಮ ಮೂಲ ಪುರುಷನೆಂದು ಹೇಳಿಕೊಳ್ಳುತ್ತಾರೆ. ಆದರೆ ಅಲ್ಲಮನು ಸಮಾಜೋದ್ಧಾರದ ಸಲುವಾಗಿ ಸಂಚಾರಕ್ಕೆ ಹೊರಟಾಗ ದಾರಿಯಲ್ಲಿ ಒಬ್ಬ ತೋಟಿಗನನ್ನು ಕಂಡು ಹೇಗೆ ಆಯುಷ್ಯವನ್ನು ಹದಗೊಳಿಸಬೇಕೆಂಬುದನ್ನು ಅವನಿಗೆ ಬೋಧಿಸುತ್ತಾನೆ. ಮುಂದೆ ಅವನು ಹೋಗುತ್ತಿರಲು ತನ್ನ ಪ್ರೀತಿಯ ಅಣ್ಣನು ತೀರಿಕೊಂಡಿದ್ದರಿಂದ ದುಃಖಿಸುತ್ತಿದ್ದ ಅಬಲೆಯನ್ನು ನೋಡಿ ಕನಿಕರಪಟ್ಟು ಅವಳನ್ನು ಸಂತೈಸಿ ಮುಂದೆ ಹೋಗುತ್ತಾನೆ. ಮುಂದೆ ಗುಡಿಗುಂಡಾರಗಳನ್ನು ಕಟ್ಟಿಸುತ್ತ ಬಹಳ ಹಣವ್ಯಯ ಮಾಡುವವನೊಬ್ಬ ಯೋಗಿಯನ್ನು ಕಂಡು ಇದು ಮೋಕ್ಷದ ಹಾದಿಯಲ್ಲೆಂದು ಅವನಿಗೆ ಬೋಧಿಸುತ್ತಾನೆ. ಬಸವೇಶ್ವರನಾದರೂ ಸಂಗಮ ಕ್ಷೇತ್ರದಲ್ಲಿ ಇದ್ದಾಗ್ಗೆ ಇದೇ ಹಾದಿಯನ್ನು ಅನುಸರಿಸಿದ್ದಾನೆ. ಹೇಗೆ ಬುದ್ಧಧರ್ಮವು ಬುದ್ಧನಿಂದ ಪ್ರಸಾರ ಹೊಂದಿತೋ ಹಾಗೆಯೇ ವೀರಶೈವ ಧರ್ಮವೂ ನಾಡಿನಲ್ಲಿ ಬಸವೇಶ್ವರನು ಬೋಧಮಾಡುತ್ತ ಸಂಚರಿಸಿದ್ದರಿಂದ ಪ್ರಸಾರಹೊಂದಿರುತ್ತದೆ.

ಬಸವೇಶ್ವರರ ಯಾವ ವಚನವನ್ನು ತೆಗೆದುಕೊಂಡರೂ ಅವನು ಅದರಲ್ಲಿ ಲೋಕದ ರೂಢಿಯನ್ನು ವಿವೇಚಿಸಿ ಜನರಿಗೆ ಮಾಡತಕ್ಕ ಬೋಧೆಯನ್ನು ಮಾಡದೆ ಬಿಟ್ಟಿಲ್ಲ. ಅವನಿಗೆ ಜಗತ್ತಿನಲ್ಲಿರುವ ಎಲ್ಲ ತರದ ಜನರು ಮಾಡುವ ವ್ಯವಹಾರದ ಪೂರ್ಣ ತಿಳುವಳಿಕೆ ಇದೆ. ಅವನು ಕೇವಲ ಶ್ರೀಮಂತರ ಪ್ರೀತಿಯನ್ನು ಹೊಂದಲಿಕ್ಕೆ ಎಂದೂ ಬಯಸಿಲ್ಲ. "ಕಾಡಸೊಪ್ಪ ತಂದು ಓಡಿನಲ್ಲಿ ಹುರಿದಿಟ್ಟು ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರು" (ವಚನ ೩೨೩) ಎಂದು ಹೇಳಿದ್ದಾನೆ. ಮತ್ತೊಂದು ವಚನದಲ್ಲಿ "ಅಡ್ಡ ದೊಡ್ಡ ನಾನಲ್ಲಯ್ಯ, ದೊಡ್ಡ ಬಸಿರು ಎನಗಿಲ್ಲಯ್ಯಾ, ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರಯ್ಯ, ದೊಡ್ಡತನವೆನಗಿಲ್ಲಯ್ಯಾ, ಅಂಜುವೆ ಅಂಜುವೆ ನಿಮ್ಮ ಪ್ರಮಥರಿಗೆ. ಅನಾಥ ನಾನಯ್ಯ ಕೂಡಲಸಂಗಮದೇವಾ" ಎಂದು ಹೇಳುತ್ತಾನೆ. (ವ. ೨೭೩) ಈ ವಚನ ಬರೆಯುವ ಕಾಲದಲ್ಲಿ ಬಸವನು ಇನ್ನೂ ಪ್ರಧಾನಿಯಾಗಿರದೆ ಇನ್ನೂ ಸಂಗಮಕ್ಷೇತ್ರದಲ್ಲಿ ಒಬ್ಬ ಸಾಮಾನ್ಯ ಮನುಷ್ಯನಂತೆ ಇದ್ದ ಹಾಗೆ ನಮಗೆ ತೋರುತ್ತದೆ. ಆಗ ಯಾರೋ ಶ್ರೀಮಂತ ಮಹೇಶ್ವರರೊಡನೆ— ಅವರನ್ನು ಬಸವೇಶ್ವರನು ಇಲ್ಲಿ ಶರಣರೆಂದು ಕರೆದಿದ್ದಾನೆ— ಕೆಲವೊಂದು ಘಟನೆ ನಡೆಯಲು ಆಗ ಅವನು ಉಚ್ಚರಿಸಿದ ವಚನವಿದಾಗಿ ತೋರುತ್ತದೆ. ಮತ್ತೊಂದು ವಚನದಲ್ಲಿ ಅವನು ಬಡವರನ್ನು ಲಕ್ಷಿಸಿ "ಮನೆ ನೋಡಾ ಬಡವರು. ಮನ ನೋಡಾ ಘನ. ಸೋಂಕಿನಲ್ಲಿ ಸುಖಿ. ಸರ್ವಾಂಗ ಕಲಿ. ಪಸಾರಕ್ಕನುವಿಲ್ಲ. ಬಂದ ತತ್ಕಾಲಕ್ಕುಂಟು. ಕೂಡಲಸಂಗನಶರಣರು ಸ್ವತಂತ್ರರು ಧೀರರು" (ವ. ೪೦೫) ಎಂದು ಬಡವರನ್ನು ಶ್ಲಾಘಿಸಿ ನುಡಿದಿದ್ದಾನೆ. ಶ್ರೀಮಂತರು ಆರಂಭದಲ್ಲಿ ಬಸವೇಶ್ವರನ ಧರ್ಮಕಾರ್ಯದಲ್ಲಿ ಅವನಿಗೆ ಏನೂ ಸಹಾಯ ಮಾಡಿಲ್ಲೆಂದು ತೋರುತ್ತದೆ. ಆದ್ದರಿಂದ ಅವನು ಒಂದು ಕಡೆ ಸಿಟ್ಟಿನ ಭರದಲ್ಲಿ "ಹಾವ ತಿಂದವರ ನುಡಿಸಬಹುದು. ಗರ ಹೊಡೆದವರ ನುಡಿಸಬಹುದು. ಸಿರಿ ಗರ ಹೊಡೆದವರ ನುಡಿಸಲು ಬಾರದು ನೋಡಯ್ಯ. ಬಡತನವೆಂಬ ಮಂತ್ರವಾದಿ ಹೊಗಲು ಒಡನೆ ನುಡಿವರಯ್ಯ ಕೂಡಲಸಂಗಮದೇವಾ" ಎಂದು ಉದ್ರೇಕದಿಂದ ನುಡಿದಿದ್ದಾನೆ.

ಆಗಿನ ವ್ಯಾಪಾರಸ್ಥರೂ ಕೂಡ ಬಸವೇಶ್ವರನಿಗೆ ಸಹಾಯ ಮಾಡಿಲ್ಲ. ಆದ್ದರಿಂದ ಅವರನ್ನು ಅವನು ಯಾವಾಗಲೂ ಚೇಷ್ಟೆ, ಅಥವಾ ಟೀಕೆ

ಮಾಡುತ್ತ ಇದ್ದಾನೆ. ಬಣಜಿಗರ ವರ್ತನೆಯನ್ನು ಕುರಿತು ಅವನು "ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ. ಒಮ್ಮ ನಮಾದಡೆ ಒಡನೆ ನುಡಿವನು. ಇಮ್ಮನಾದಡೆ ನುಡಿಯನು ಕಾಣಿಯ ಸೋಲ. ಅರ್ಧಗಾಣಿಯ ಗೆಲ್ಲ. ಜಾಣನೋಡವ್ವ ನಮ್ಮ ಕೂಡಲಸಂಗಮದೇವ" ಎಂದು ಹೇಳುತ್ತಾನೆ. ಇನ್ನೊಂದೆಡೆಯಲ್ಲಿ ''ಬಣಜಿಗನೇಸು ಭಕ್ತನಾದಡೆಯೂ ಒಟ್ಟಿಲ ಬೆನಕನ ಹಂಗಬಿಡ. ನಾನಾವ ಹಿಂಗಿನವನಲ್ಲ ನಿಮ್ಮ ಶರಣರ ಹಂಗಿನವನಯ್ಯಾ ಕೂಡಲಸಂಗಮದೇವಾ'' (ವ. ೨೨೮) ಎಂದು ಹೇಳುತ್ತಾನೆ. ಇಂಥ ಅವನ ಅನೇಕ ವಚನಗಳಿವೆ ಇದರಿಂದ ಬಸವೇಶ್ವರನಿಗೆ ಆಗಿನ ಪ್ರಬಲರಾದ ಶ್ರೀಮಂತರೂ, ವ್ಯಾಪಾರಸ್ತರೂ ಸಹಾಯ ಮಾಡಿಲ್ಲ ಅವರ ಸಹಾಯವನ್ನು ಅವನು ಅಪೇಕ್ಷಿಸಿಲ್ಲ. ಆದರೆ ಕೇವಲ ಬಡವರು, ಒಕ್ಕಲಿಗರು, ಹೊಲೆಯರು, ಕೈಗಾರಿಕೆಯವರು. ಅಗಸರು ಇಂಥವರೊಡನೆ ಇದ್ದು ಅವರನ್ನುದ್ದೇಶಿಸಿ ಬಸವೇಶ್ವರನು ಬೋಧೆ ಮಾಡುತ್ತ ಬಂದಿದ್ದಾನೆ. ಇಂಥ ಅವನ ಉಕ್ತಿಗಳೆಲ್ಲವನ್ನೂ ನಾವು ಸವಿಸ್ತಾರವಾಗಿ ವಿವರಿಸಬೇಕಾದರೆ ಬೇರೊಂದು ಲೇಖವೇ ಬೇಕು. ಹೀಗೆ ಬರೆಯುತ್ತ ಹೋಗುವದು ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ್ದಲ್ಲ. ಬಸವನು ಸಾಮಾನ್ಯ ಜನರಲ್ಲಿದ್ದು ಅವರಲ್ಲಿ ಬೆರೆದು ಅವರನ್ನು ಯೋಗ್ಯ ಹಾದಿಗೆ ಹಚ್ಚುವದರಲ್ಲಿ ಬಹಳ ಕಷ್ಟಪಟ್ಟಿದ್ದಾನೆ, ಈ ಕಾರ್ಯವನ್ನು ಮಾಡುತ್ತ ಇಡೀ ದೇಶವನ್ನು ಸಂಚರಿಸಿದ್ದಾನೆ, ಅವನು ಬರೀ ಸಂಗಮೇಶ್ವರ ದೇವಾಲಯದಲ್ಲಿ ಕಾಲ ಕಳೆದಿಲ್ಲ ಎಂದು ಹೇಳುವದೇ ನಮ್ಮ ಮುಖ್ಯ ಅಭಿಪ್ರಾಯವಾಗಿದೆ.

ಇದೇ ರೀತಿಯಾಗಿ ಅವನು ಸ್ತ್ರೀಯರನ್ನೂ ಜಾಗ್ರತೆ ಪಡಿಸಿದ್ದಾನೆ. ಅವರಲ್ಲಿ ಉಚ್ಚ ವಿಚಾರಗಳನ್ನು ಪ್ರಸಾರಮಾಡಿದ್ದಾನೆಂದು ಅವನ ವಚನಗಳಿಂದ ತೋರುತ್ತದೆ. ಅವನು ಸ್ತ್ರೀಯರ ವಿಷಯವಾಗಿ ಅತ್ಯಂತ ಆದರಭಾವವುಳ್ಳವನು. "ಗಂಡ ಶಿವಲಿಂಗದೇವರ ಭಕ್ತ. ಹೆಂಡತಿ ಮಾರಿಮಸಣಿಯ ಭಕ್ತೆ" (ವ. ೨೯೩) ಗೃಹದಲ್ಲಿ ಇಂಥ ಸ್ಥಿತಿ ಇರುವದು "ಹೆಂಡದ ಮಡಿಕೆಯ ಹೊರಗೆ ತೊಳೆದಂತೆ" ಎಂದು ಹೇಳುತ್ತಾನೆ. ಅವನು ''ಪರವಧುವನು ಮಹಾದೇವಿ ಎಂಬೆ'' ಎಂದು ಹೇಳುತ್ತಾನೆ. ಬುದ್ಧನ ಧರ್ಮವನ್ನು ಪ್ರಸಾರ ಮಾಡಲು ಮೊದಲು ಮುಂದಾದವರು ಸ್ತ್ರೀಯರು. ಹಾಗೆಯೇ ಬಸವೇಶ್ವರನಿಗೆ ಮೊದಲು ಸಹಾಯವಾದವರು ಸ್ತ್ರೀಯರಿದ್ದಾರೆ. ಸ್ತ್ರೀಯರಲ್ಲಿ

ಬಸವೇಶ್ವರನಿಗೆ ಮೊದಲು ಸಹಾಯವಾದವಳೂ ಅವನೊಡನೆ ಕಷ್ಟಪಟ್ಟವಳೂ ಅವನ ಅಕ್ಕನಾದ ನಾಗಲಾಂಬಿಕೆಯು. ವೀರಶೈವ ಶಿವಶರಣರಲ್ಲಿ ಧರ್ಮೋದ್ಧಾರ ಮಾಡಿದ ಮತ್ತು ವಚನಗಳನ್ನು ರಚಿಸಿದ ಸ್ತ್ರೀಯರ ಸಂಖ್ಯೆಯು ಬಹಳ ದೊಡ್ಡದಿದೆ. ಸಮಾಜ ಸುಧಾರಣೆಯಲ್ಲಿ ಸ್ತ್ರೀಯರು ಮಾಡತಕ್ಕ ಕಾರ್ಯವು ಬಹು ಮಹತ್ವದ್ದಿದೆ. ಬಸವೇಶ್ವರನು ಈ ವಿಷಯವನ್ನು ತಿಳಿದು ಹಾಗೆ ಆಚರಿಸಿದ್ದಾನೆ.

ಬಸವನು ತನ್ನ ಬೋಧೆಯಲ್ಲಿ ಅತಿ ಸಾಮಾನ್ಯ ಜನರು ಉಪಯೋಗಿಸುತ್ತಿರುವ ಜಿನಸುಗಳನ್ನೇ ದೃಷ್ಟಾಂತಗಳನ್ನಾಗಿಟ್ಟುಕೊಂಡು ಅನೇಕ ರೀತಿಯಾಗಿ ಬೋಧಿಸಿದ್ದಾನೆ. ಎಲವದ ಮರ (೧೮೯) ಹಾವು ಮೆಕ್ಕೆಯ ಕಾಯಿ (೧೮೯) ಎಕ್ಕೆಯ ಕಾಯಿ (೧೯೨) ಅವಲಕ್ಕಿ (೧೯೪) ಯರದೆಲೆ (೨೪೫) ಚಿತ್ರರಟ್ಟೆಯ ಕಾಯಿ (೨೪೬) ಹೊಲದಲ್ಲಿ ಬೆಳೆಯುವ ಕಸದ ಕಡ್ಡಿ (೩೭೪) ಹಸುರು ಹುಲ್ಲು (೩೭೭) ನೇಗಿಲು, ಬೇವಿನಗಿಡ (೯೧೮) ಹೀಗೆ ಅನೇಕ ತರದ ಉದ್ಭಿಜಗಳು, ವೃಕ್ಷಗಳು, ಮತ್ತು ತೊಗಲ ಬಾವುಲಿ, ಕಾಗೆ, ಮಂಗ, ಗಿಳಿ, ಓಡ, ನಾಯಿ ಇಂಥ ಪ್ರಾಣಿಗಳು, ಇಂಥವುಗಳ ಉದಾಹರಣೆಗಳನ್ನು ಕೊಟ್ಟು ಧಾರ್ಮಿಕ ಉಚ್ಚತತ್ವಗಳನ್ನು ಬೋಧಿಸುತ್ತಾನೆ. ಬಸವೇಶ್ವರನು ಬಹುಜನಸಮಾಜದಲ್ಲಿದ್ದುಕೊಂಡು ಬೋಧೆ ಮಾಡುವವನಾದ್ದರಿಂದ ಅವನು ಈ ರೀತಿಯನ್ನನುಸರಿಸಿದ್ದಾನೆ. ತಾನೊಬ್ಬ ಶ್ರೇಷ್ಠ ಅಧಿಕಾರಿ, ಮಂತ್ರಿ ಅಥವಾ ಸೇನಾಪತಿ ಎಂಬ ವಿಚಾರಗಳು ಅವನಲ್ಲಿ ಎಷ್ಟು ಮಾತ್ರವೂ ಇರುವದಿಲ್ಲ. "ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯ" (ವಚನ ೨೭೦) ಎಂದು ಅವನು ತನ್ನನ್ನು ತಾನು ಹೇಳಿಕೊಳ್ಳುತ್ತಾನೇ ಹೊರತು ಅವನಲ್ಲಿ ಅಹಂಭಾವವಿಲ್ಲ. ಇನ್ನೊಂದು ಕಡೆಗೆ ಅವನು "ನಮ್ಮ ಕೂಡಲಸಂಗಮದೇವ, ನಿಮ್ಮ ಶರಣರು ಸ್ವತಂತ್ರರು, ಎನ್ನ ಬಚ್ಚಬರಿಯ ಬಸವನೆನಿಸಯ್ಯ" (ವ. ೨೬೭) ಎಂದು ಬೇಡಿಕೊಳ್ಳುತ್ತಾನೆ. ಈ ಪ್ರಕಾರ ಬಸವನು ಸಾಮಾನ್ಯ ಜನರಲ್ಲಿ ವ್ಯವಹರಿಸಿದ್ದಾನೆ. ಅವರ ರೀತಿ ನಡೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ್ದಾನೆ, ತಿಳಿದುಕೊಂಡಿದ್ದಾನೆ. ಅವರನ್ನು ಉಚ್ಚಸ್ಥಿತಿಗೆ ಒಯ್ಯಬೇಕೆಂಬ ಉತ್ಕಟ ಅಪೇಕ್ಷೆ ಅವನಲ್ಲಿ ಉಂಟು. ಅವರಲ್ಲಿ ಎಂಥವರಿದ್ದರೂ ಕೂಡ ಬೋಧೆ ಮಾಡುವದನ್ನು ಬಿಟ್ಟಿಲ್ಲ. ಬಹಳ ಮೃದುವಾಗಿ ಗಂಭೀರವಾಗಿ ಅವರ ಮನಸ್ಸನ್ನು ಹೊಕ್ಕು ಬೇಡಿಕೊಳುತ್ತಾನೆ. ಅವನಲ್ಲಿ

ಇವರು ಬ್ರಾಹ್ಮಣರು ಆದ್ದರಿಂದ ಇವರು ಪೂಜ್ಯರು, ಅವರು ಹೊಲೆಯರು ಆದ್ದರಿಂದ ಅವರು ತ್ಯಾಜ್ಯರು ಎಂಬ ಭಾವವಿಲ್ಲ. ನಾನು ಮಾದರನ ಮಗನೆಂದು ಆಗಿಂದಾಗ್ಗೆ ತನ್ನನ್ನು ಕುರಿತು ಹೇಳಿಕೊಳ್ಳುತ್ತಾನೆ. ಇದು ಬಸವೇಶ್ವರನ ಉಜ್ವಲ, ಉದಾರ ವರ್ತನೆಯಾಗಿದೆ.

ಬಸವೇಶ್ವರನ ವಚನಗಳಂಥ ಹೃದಯಸ್ಪರ್ಶಿಯಾದ ಉಕ್ತಿಗಳು ಬೇರೆ ಧರ್ಮಗ್ರಂಥಗಳಲ್ಲಿ ದೊರೆಯುವದು ದುರ್ಲಭ. ಅವನು ಜನಸಾಮಾನ್ಯರಲ್ಲಿ ವರ್ತಿಸಿದವನಾದ್ದರಿಂದಲೇ ಅವನು ತನ್ನ ನಾಡನ್ನು ಉದ್ಧರಿಸಲು ಸಮರ್ಥನಾದನು. ಇಂಥ ಅವನ ನಿಃಸ್ವಾರ್ಥ ಕೃತಿಗಳ ಮೂಲಕವೇ ವೀರಶೈವ ಧರ್ಮವು ನಾಡಿನಲ್ಲೆಲ್ಲ ಪಸರಿಸಿದೆ. ಅವುಗಳೇ ಅವನನ್ನು ಮುಂದೆ ಪೊವಾಡ ಪುರುಷನನ್ನಾಗಿ ಮಾಡಿವೆ.

[ಮುಂದುವರಿಯುವದು]

---

ಓಂ ಹ್ರೈಂ ಕವಚಾಯ ಭಂ ಇದು ಕವಚಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರೌಂ ನೇತ್ರತ್ರಯಾಯ ವೌಷಟ್ ಇದು ನೇತ್ರಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರಃ ಅಸ್ತ್ರಾಯ ಫಟ್ ಇದು ಅಸ್ತ್ರಮಂತ್ರವೆಂದು ಹೇಳಲ್ಪಡುತ್ತಿದೆ.

(೨೫೭) ವದನಾಕ್ಷರ ಮಂತ್ರಃ— ಇದಕ್ಕೆ ಪಂಚಬ್ರಹ್ಮಮಂತ್ರವೆಂಬ ಬೇರೊಂದು ಹೆಸರು ಇದೆ. ಇದರಲ್ಲಿ ಆರು ಮಂತ್ರಗಳು ಸೇರ್ಪಡೆಯಾಗುತ್ತವೆ. ಪರಶಿವನಿಗೆ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ಎಂದು ಪಂಚಮುಖಗಳಿವೆಯಷ್ಟೇ. ಈ ಮಂತ್ರಗಳು ಈ ಪಂಚಮುಖಗಳಿಗೆ ಸಂಬಂಧಿಸುತ್ತವೆ. ಪಂಚಮುಖಗಳು ವಚನಶಾಸ್ತ್ರದಲ್ಲಿ ಅಂಗೀಕರಿಸಲ್ಪಟ್ಟಿವೆ. ಜಗತ್ತಿನ ಉತ್ಪತ್ತಿಯ ಕಾಲದಲ್ಲಿ ಆಗುವ ಆರು ವಿಧಗಳು ಅಥವಾ ಸಾದಾಖ್ಯಗಳು ಈ ಮುಖಗಳಲ್ಲಿಯೇ ಉಂಟಾಗುವವೆಂದು ಹೇಳಲ್ಪಡುವದುಂಟು. ಸ್ಥಾನಶುದ್ಧಿ, ಸಂಪ್ರೋಕ್ಷಣ, ಭಸ್ಮೋದ್ಧೂಳನ, ತ್ರಿಪುಂಡ್ರಧಾರಣ ಈ ಕಾರ್ಯಗಳಲ್ಲಿ ಈ ಮಂತ್ರಗಳ ಉಪಯೋಗವಿರುತ್ತದೆ. ದೀಕ್ಷಾ ಕಾಲದಲ್ಲಿ ಇವುಗಳು ಬಹಳಕಡೆ ಉಪಯೋಗಿಸಲ್ಪಡುತ್ತವೆ. ಮಂತ್ರನ್ಯಾಸದಲ್ಲಿಯೂ ಇವುಗಳ ಉಪಯೋಗವಿರುತ್ತದೆ. ಇದನ್ನು ಒಮ್ಮೊಮ್ಮೆ ಷಡಂಗಮಂತ್ರವೆಂತಲೂ ಸಹ ಕರೆಯುವದುಂಟು. ಇವು ಯಾವವೆಂದರೆಃ—

ಓಂ ಹ್ರಾಂ ನಾಂ ಸದ್ಯೋಜಾತಾಯ ನಮಃ ಇದು ಪಾದಕ್ಕೆ ಸಂಬಂಧವಾಗುತ್ತದೆ.

ಓಂ ಹ್ರೀ ಮಾಂ ವಾಮದೇವಾಯ ನಮಃ— ಇದು ಗುಹ್ಯಕ್ಕೆ ಸಂಬಂಧವಾಗುತ್ತದೆ.

ಓಂ ಹ್ರೂಂ ಶೀಂ ಅಘೋರಾಯ ನಮಃ ಇದು ಹೃದಯಕ್ಕೆ ಸಂಬಂಧಿಸುತ್ತದೆ.

ಓಂ ಹ್ರೈಂ ವಾಂ ತತ್ಪುರುಷಾಯ ನಮಃ ಇದು ಮುಖಕ್ಕೆ ಸಂಬಂಧವಾಗುತ್ತದೆ.

ಓಂ, ಹ್ರೈಂ ಯಾಂ ಈಶಾನಾಯ ನಮಃ ಇದು ಶಿರಸ್ಸಿಗೆ ಸಂಬಂಧವಾಗುತ್ತದೆ.

ಓಂ ಹ್ರಃ ಓಂ ಹೃದಯಾಯ ನಮಃ ಇದು ಸರ್ವಾಂಗದಲ್ಲಿ ಸಂಬಂಧವಾಗುತ್ತದೆ.

ಈ ಮಂತ್ರಗಳಿಗೆ ಅನುಕ್ರಮವಾಗಿ ಸದ್ಯೋಜಾತಮಂತ್ರ, ವಾಮದೇವಮಂತ್ರ, ಅಘೋರಮಂತ್ರ, ತತ್ಪುರುಷಮಂತ್ರ, ಈಶಾನಮಂತ್ರ, ಹೃದಯಮಂತ್ರ ಎಂದು ಹೆಸರುಗಳಿರುತ್ತವೆ. ಭಸ್ಮೋದ್ಧೂಳನ ಕಾಲದಲ್ಲಿ ಈ ಮಂತ್ರಗಳನ್ನು ನಿಶ್ಚಿತ ಸಂಖ್ಯೆಯಿಂದ ಉಚ್ಚರಿಸುತ್ತ ಆಯಾ ಸ್ಥಾನಗಳಲ್ಲಿ ಭಸಿತವನ್ನು ಸಂಬಂಧಿಸಿಕೊಳ್ಳತಕ್ಕದ್ದು. ಅಂಗನ್ಯಾಸವು ಮಾತ್ರ ಮೇಲೆ ಉದಹರಿಸಿದ ಮಂತ್ರಗಳಲ್ಲಿ ಉಲ್ಲೇಖಿಸಲ್ಪಟ್ಟಿರುತ್ತದೆ.

(೨೫೮) ಶಕ್ತಿಷಡಂಗಮಂತ್ರಃ—ಇದರಲ್ಲಿಯೂ ಆರು ಮಂತ್ರಗಳು ಸೇರ್ಪಡೆಯಾಗುತ್ತವೆ. ಮನುಷ್ಯನು ಷಟ್‌ಸ್ಥಲಕ್ಕನುಗುಣವಾಗಿ ಆಚರಿಸಿದಲ್ಲಿ ಅವನಲ್ಲಿ ಶಕ್ತಿಗಳು ಉಂಟಾಗಿ ಕೆಲವು ಪರಿಣಾಮಗಳು ಸಂಭವಿಸುತ್ತವೆ. ಆಗ ಈ ಶಕ್ತಿಷಡಂಗಮಂತ್ರವು ಉಪಯೋಗಿಸಲ್ಪಡುತ್ತದೆ. ಈ ಮಂತ್ರದ ಮೂಲಕ ಅವನಲ್ಲಿಯ ಆಯಾ ಶಕ್ತಿಗಳು ಸರಿಯಾದ ಮಾರ್ಗದಿಂದ ಚಲಿಸುತ್ತವೆ. ಈ ಮಂತ್ರಗಳು ಯಾವವೆಂದರೆಃ—

ಓಂ ಹ್ರಾಂ ನಾಂ ಸರ್ವಜ್ಞ ಸರ್ವಶಕ್ತಿ ಧಾಮ್ನೇ ನಮಃ
ಓಂ ಹ್ರೀಂ ಮಾಂ ತೃಪ್ತಿಶಕ್ತಿ ಧಾಮ್ನೇ ನಮಃ
ಓಂ ಹ್ರೂಂ ಶೀಂ ಅನಾದಿಶಕ್ತಿ ಧಾಮ್ನೇ ನಮಃ
ಓಂ ಹ್ರೈಂ ವಾಂ ಸ್ವತಂತ್ರ ಶಕ್ತಿ ಧಾಮ್ನೇ ನಮಃ
ಓಂ ಹ್ರೌಂ ಯಾಂ ನಿತ್ಯ ಶಕ್ತಿ ಧಾಮ್ನೇ ನಮಃ
ಓಂ ಹ್ರಃ ಓಂ ಅಲುಪ್ತ ಶಕ್ತಿ ಧಾಮ್ನೇ ನಮಃ

ಈ ಪ್ರಕಾರ ಇದರಲ್ಲಿ ಆರು ಮಂತ್ರಗಳಿವೆ.

(೨೫೯) ಲಿಂಗ ಷಡಕ್ಷರ ಮಂತ್ರಃ—ಇವಾದರೂ ಆರು ಇರುತ್ತವೆ. ಇವು ಕೇವಲ ವೀರಶೈವ ಮಂತ್ರಗಳು. ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಇವುಗಳಿಗೆ ಇವು ಸಂಬಂಧಿಸುತ್ತವೆ. ಇವು ಯಾವವೆಂದರೆ—

ಓಂ ಹ್ರಾಂ ನಾಂ ಆಚಾರಲಿಂಗಾಯ ನಮಃ
ಓಂ ಹ್ರೀಂ ಮಾಂ ಗುರುಲಿಂಗಾಯ ನಮಃ
ಓಂ ಹ್ರೂಂ ಶೀಂ ಶಿವಲಿಂಗಾಯ ನಮಃ
ಓಂ ಹ್ರೈಂ ವಾಂ ಜಂಗಮಲಿಂಗಾಯ ನಮಃ
ಓಂ ಹ್ರೌಂ ಯಾಂ ಪ್ರಸಾದಲಿಂಗಾಯ ನಮಃ
ಓಂ ಹ್ರಃ ಓಂ ಮಹಾಲಿಂಗಾಯ ನಮಃ

ಲಿಂಗ ಜಪದಲ್ಲಿ ಇವುಗಳು ಯಾವಾಗಲೂ ಉಪಯೋಗಿಸಲ್ಪಡುತ್ತವೆ.

(೨೬೦) ಉಪಾಧಿಭಕ್ತ, ನಿರುಪಾಧಿಭಕ್ತ, ಸಹಜಭಕ್ತ:— ಉಪಾಧಿಭಕ್ತನು ಕ್ರಿಯಾದೀಕ್ಷೆಯುಕ್ತನಾಗಿರುತ್ತಾನೆ. ಈತನಿಗೆ ಗುರುಮಂತ್ರವು ಸಲ್ಲುತ್ತದೆ. ನಿರುಪಾಧಿಭಕ್ತನು ಕ್ರಿಯಾದೀಕ್ಷೆಯನ್ನು ಹೊಂದುವದಲ್ಲದೆ ಗುರುಲಿಂಗಜಂಗಮದಲ್ಲಿ ತನ್ನದೆಲ್ಲವನ್ನು ನಿರ್ವಂಚಕತ್ವದಿಂದ ಸಮರ್ಪಿಸಿ ನಡೆನುಡಿ ಸಂಪನ್ನನಾಗಿರುತ್ತಾನೆ. ಈತನಿಗೆ ಲಿಂಗಮಂತ್ರವನ್ನು ಹೇಳುವುದು. ಹೀಗೆ ಈ ಉಭಯತರ ಆಚರಣೆಯನ್ನು ಹೊಂದಿದ್ದಲ್ಲದೆ ಸಮಸ್ತ ಭೋಗಾದಿಗಳನ್ನು ನೀಗಿದವನು ಸಹಜಭಕ್ತನು. ಈತನಿಗೆ ಜಂಗಮ ಮಂತ್ರವು ಸಲ್ಲುತ್ತದೆ. (ಹಿಂದೆ ನಂ॥ ೧೬೦ ಮತ್ತು ನಂ॥ ೧೬೧ ಸಹ ನೋಡಿರಿ.)

(೨೬೧) ಗುರುಮಂತ್ರ, ಲಿಂಗಮಂತ್ರ, ಜಂಗಮಮಂತ್ರ:— ಶಕ್ತಿಪ್ರಣಮಮಂತ್ರಗಳು, ಶಿವಪ್ರಣಮಮಂತ್ರಗಳು, ಶಿವಶಕ್ತಿರಹಿತ ಪ್ರಣಮಮಂತ್ರಗಳು ಎಂದು ಮೂರುವಿಧ ಮಂತ್ರಗಳು ಇವೆ. ಈ ಪ್ರತಿಯೊಂದರಲ್ಲಿ ೧೨, ೧೨ ಪ್ರಣವಗಳು ಇರುತ್ತವೆ. ಶಕ್ತಿಪ್ರಣಮ ಮಂತ್ರಗಳು ಗುರುವಿಗೆ, ಶಿವಪ್ರಣಮಮಂತ್ರಗಳು ಲಿಂಗಕ್ಕೆ, ಶಿವಶಕ್ತಿರಹಿತ ಪ್ರಣಮಮಂತ್ರಗಳು ಜಂಗಮಕ್ಕೆ, ಸಂಬಂಧಪಡುತ್ತವೆ. ಈ ಪ್ರಣಮಗಳು ಭಕ್ತ, ಗುರು, ಜಂಗಮ ಹೀಗೆ ಬೇರೆ ಬೇರೆ ವರ್ಗದವರಿಗೆ ಬೇರೆ ಬೇರೆಯಾಗಿ ಸಂಬಂಧಪಡುತ್ತವೆಂದು ಭಾವಿಸಕೂಡದು. ಯಾಕೆಂದರೆ ಷಟ್‌ಸ್ಥಲಶಾಸ್ತ್ರದ ಪ್ರಕಾರ ಪ್ರತಿಯೊಬ್ಬನಲ್ಲಿ ಗುರು, ಲಿಂಗ, ಜಂಗಮಗಳು ಇವೆ. ಈ ತ್ರಿವಿಧಗಳು ಅವನಲ್ಲಿ ಪ್ರಕಟವಾದಂತೆ ಅವನು ಉಪಾಧಿಭಕ್ತ, ನಿರುಪಾಧಿಭಕ್ತ, ಸಹಜಭಕ್ತ ಎಂದು ಕರೆಯಲ್ಪಡುತ್ತಾನೆ.

(೨೬೨) ನಿರಾಭಾರಿ ಜಂಗಮ ಶರಣಗಣಂಗಳುಃ— ಶುದ್ಧಪ್ರಸಾದ ಪ್ರಣವ ೧೨, ಸಿದ್ಧಪ್ರಸಾದ ಪ್ರಣವ ೧೨, ಪ್ರಸಿದ್ಧ ಪ್ರಸಾದ ಪ್ರಣವ ೧೨ ಹೀಗೆ ಒಟ್ಟು ೩೬ ಪ್ರಣವಗಳಿದ್ದು ಅವುಗಳನ್ನೊಡಗೂಡಿರುವವರೇ ನಿರಾಭಾರಿ ಜಂಗಮ ಶರಣ ಗಣಗಳು. ಶುದ್ಧಪ್ರಸಾದ ಪ್ರಣವಮಗಳು ಆಚಾರ ಲಿಂಗ ಗುರುಲಿಂಗಗಳಿಗೆ ಸಂಬಂಧಿಸುತ್ತವೆ. ಇವುಗಳನ್ನು ಇಷ್ಟಲಿಂಗಕ್ಕೆ ಮಾಡುವುದು. ಸಿದ್ಧಪ್ರಸಾದ ಪ್ರಣವಮಗಳು ಶಿವಲಿಂಗ ಜಂಗಮಲಿಂಗಕ್ಕೆ ಸಂಬಂಧಿಸುತ್ತವೆ. ಇವನ್ನು ಪ್ರಾಣಲಿಂಗಕ್ಕೆ ಮಾಡುವುದು. ಪ್ರಸಿದ್ಧ ಪ್ರಸಾದ ಪ್ರಣವಮಗಳು ಪ್ರಸಾದಲಿಂಗ ಮಹಾಲಿಂಗಕ್ಕೆ ಸಂಬಂಧಿಸುತ್ತವೆ. ಇವನ್ನು ಭಾವಲಿಂಗಕ್ಕೆ ಮಾಡುವುದು.

ಟೀಪುಃ— ಅ, ಉ, ಮ; ಬ, ಸ, ವ; ಓಂ ನ ಮಃ ಶಿ ವಾ ಯ ಇವು ೧೨ ಪ್ರಣವಮಗಳು. ಇವುಗಳ ಸ್ಥಾನಭೇದದಿಂದ ಶುದ್ಧಪ್ರಸಾದ ಪ್ರಣವಮಗಳು, ಸಿದ್ಧಪ್ರಸಾದ ಪ್ರಣವಮಗಳು, ಪ್ರಸಿದ್ಧಪ್ರಸಾದ ಪ್ರಣವಮಗಳು ಉಂಟಾಗುತ್ತವೆಂದು ತಿಳಿಯುವುದು. ಅದೇ ಪ್ರಕಾರ ಶಕ್ತಿಪ್ರಣವಮಂತ್ರಗಳು, ಶಿವಪ್ರಣವಮಂತ್ರಗಳು, ಶಿವಶಕ್ತಿರಹಿತಪ್ರಣವಮಂತ್ರಗಳು ಉಂಟಾಗುತ್ತವೆ. ಇವುಗಳ ವಿವರಗಳು ಮುಂದೆ ಹೇಳಲ್ಪಡುವವು.

(೨೬೩) ಪಂಚಾಸ್ತ್ರ ಮಹಾಮಂತ್ರಗಳುಃ— ಇವು ಶಿವಾಸ್ತ್ರ ಮಂತ್ರ, ಕ್ಷುರಿಕಾಸ್ತ್ರಮಂತ್ರ, ಪಾಶುಪತಾಸ್ತ್ರಮಂತ್ರ, ವ್ಯೋಮಾಸ್ತ್ರಮಂತ್ರ, ಅಘೋರಾಸ್ತ್ರಮಂತ್ರ ಎಂದಿರುತ್ತವೆ. ಅವುಗಳ ವಿವರಃ—

(೧) ಶಿವಾಸ್ತ್ರಮಂತ್ರಃ— ಇದು ಓಂ, ಹಃ, ಅನಂತಶಕ್ತಿ ಧಾಮ್ನೆ ಜ್ಯೋತಿರೂಪಾಯ ಎಂದಿರುತ್ತದೆ.

(೨) ಕ್ಷುರಿಕಾಸ್ತ್ರಮಂತ್ರಃ— ಇದು ಓಂ ತಿಕ್ಷ್ಣಕ್ಷ್ಣಿಭಿ ಚಿಚ್ಛಿದ ಕ್ಷುಂ ಕೃತ ಕ್ಷುರಿಕಾಸ್ತ್ರಾಯ ಫಟ್ ಎಂದಿರುತ್ತದೆ.

(೩) ಪಾಶುಪತಾಸ್ತ್ರಮಂತ್ರಃ— ಇದು ಓಂ, ಶೀಂ, ಪಶು, ಹುಂ ಫಟ್ ಎಂದಿರುತ್ತದೆ.

(೪) ವ್ಯೋಮಾಸ್ತ್ರಮಂತ್ರಃ— ಇದು ಓಂ, ಅಂ, ಈಂ, ಊಂ, ವ್ಯೋಮವ್ಯಾಪಿನೇ ವ್ಯೋಮಾಸ್ತ್ರಾಯ ಫಟ್ ಎಂದಿರುತ್ತದೆ.

(೫) ಅಘೋರಾಸ್ತ್ರಮಂತ್ರಃ— ಓಂ ಸ್ಫುರ ಸ್ಫುರಘೋರ ಘೋರ ತಮ ತನುರೂಪ ಚಟಚಟ ಪ್ರಚಟ ಪ್ರಚಟ ಕಹ ಕಹ ವಮ ವಮ ಬಂಧ ಬಂಧ ಘೂತಾಯ ಘೂತಾಯ ಹುಂ ಫಟ್ ಎಂದಿದೆ.

ಈ ಮಂತ್ರಗಳು ವೀರಶೈವಪರವಾದುವಲ್ಲ. ಆದರೂ ಇವು ರೂಢಿಯಿಂದ ಅವುಗಳಲ್ಲಿ ಮುಖ್ಯವಾಗಿ ಶಿವಾಸ್ತ್ರಮಂತ್ರವು ವೀರಶೈವರ ಕೆಲವು ವಿಧಿವಿಧಾನಗಳಲ್ಲಿ ಉಪಯೋಗಿಸಲ್ಪಡುವದುಂಟು.

(೨೬೪) ಸಿದ್ಧಿ ಮಂತ್ರಗಳುಃ— ಕೆಲವು ಮಂತ್ರಗಳನ್ನು ಸಾಧಕರು ಉಪಯೋಗಿಸುವದುಂಟು. ಆದರೆ ಅವು ವೀರಶೈವ ಪರವಾದುವಲ್ಲ. ಸಿದ್ಧಿಗಳನ್ನು ವೀರಶೈವರು ಮಾಡತಕ್ಕದ್ದಲ್ಲ. ಆಯಾ ಮಂತ್ರಗಳ ಕೆಳಗೆ ಕಾಣಿಸಿದ ಹೆಸರುಗಳೇ ಅವುಗಳಿಂದ ಆಗುವ ಸಿದ್ಧಿಗಳನ್ನು ಸೂಚಿಸುತ್ತವೆ.

(ಅ) ಪಂಚೋಪಾಸ್ತ್ರ ಮಂತ್ರಗಳುಃ— ಅವು ಐದು ಇರುತ್ತವೆ. ಯಾವವೆಂದರೆಃ— ಬ್ರಹ್ಮಾಸ್ತ್ರ ಮಂತ್ರ, ನಾಗಾಸ್ತ್ರ ಮಂತ್ರ, ಗರುಡಾಸ್ತ್ರ ಮಂತ್ರ, ಅನಲಾಸ್ತ್ರಮಂತ್ರ, ಅರುಣಾಸ್ತ್ರಮಂತ್ರ, ಅಘೋರಾಸ್ತ್ರಮಂತ್ರ ಎಂದಿವೆ. ಈ ಮಂತ್ರಗಳಿಂದ ಕೆಲವೊಂದು ಶಕ್ತಿಯನ್ನು ಉಂಟುಮಾಡಿಕೊಳ್ಳಬಹುದು.

(ಬ) ಸಂಜೀವನತ್ರಯ ಮಂತ್ರಃ— ಇವು ಮೂರು ಇವೆ. ಯಾವವೆಂದರೆಃ— ವಿದ್ಯಾಸಂಜೀವನಮಂತ್ರ, ಆತ್ಮಸಂಜೀವನಮಂತ್ರ, ಮೃತಸಂಜೀವನಮಂತ್ರ ಎಂದಿವೆ.

(ಕ) ಪಂಚಶಕ್ತಿಮಂತ್ರಗಳುಃ— ಅವು ಜೃಂಭಕ, ಪ್ರಸ್ವಾಪನ, ಅಪ್ರತಿಹತ, ನಿಶ್ಚೇಷ್ಟೀಕರಣ, ಜೀವಗ್ರಾಹ ಎಂದಿವೆ.

(ಡ) ಪಂಚಮಾಯಾಮಂತ್ರಗಳುಃ— ಇವು ಕಾಮರೂಪ, ಘೋರದರ್ಶನ, ಸಮ್ಮೋಹನ, ವಿಶ್ವರೂಪ, ಗುಲ್ಮಸೃಷ್ಟಿ, ಎಂದಿವೆ.

(ಇ) ಏಕಾದಶ ರೌದ್ರಾಸ್ತ್ರಮಂತ್ರಗಳುಃ— ಅವು ರುದ್ರಶೂಲ, ರುದ್ರಶಕ್ತಿ, ರುದ್ರಚಕ್ರ, ರುದ್ರವಜ್ರ, ರುದ್ರಪಾಶ, ರುದ್ರದಂಡ, ರುದ್ರಪಿನಾಕ, ರುದ್ರನಾರಾಯಣ, ರುದ್ರಬಾಣ, ರುದ್ರಗದಾ, ರುದ್ರಖಡ್ಗ, ಎಂದಿವೆ.

ಇವಲ್ಲದೆ ಧನಮಂತ್ರಗಳು, ಉಪಶಕ್ತಿಮಂತ್ರಗಳು, ತಾಂತ್ರಿಕ ಸಿದ್ಧಿ ಮಂತ್ರಗಳು ಎಂದು ಬೇರೆ ಅನೇಕ ಮಂತ್ರಗಳಿವೆ. ಆದರೆ ಇವೆಲ್ಲವೂ ವೀರಶೈವರಿಗೆ ವರ್ಜ್ಯವಾದವುಗಳು. ಅವುಗಳ ನಾಮನಿರ್ದೇಶವನ್ನು ಮಾತ್ರ ಇಲ್ಲಿ ಮಾಡಿದ್ದೇವೆ.

(೨೬೫) ಅಜಪಗಾಯತ್ರೀಮಂತ್ರಃ— ಪ್ರಾಣಾಯಾಮಪೂರ್ವಕವಾಗಿ ಇದನ್ನು ಎಲ್ಲ ವೈದಿಕರು ಜಪಿಸುವದುಂಟು. ಈ ಮಂತ್ರವೂ ಕೂಡ ವೀರಶೈವರಿಗೆ ಸಂಬಂಧಿಸಿದುದಲ್ಲ. ಇದು ಮೂಲದಲ್ಲಿ ಸೂರ್ಯನಿಗೆ ಸಂಬಂಧಿಸಿದ್ದಿದೆ. ವೈದಿಕಧರ್ಮಗಳಲ್ಲಿ ಇದರ ಮಹತ್ವವು ಬಹಳ ಇದ್ದದರಿಂದ, ಇದನ್ನು ಲಿಂಗಪರವಾಗಿ ಅರ್ಥಮಾಡಲು ಕೆಲವು ವೀರಶೈವ ಗ್ರಂಥಗಳಲ್ಲಿ ಪ್ರಯತ್ನಗಳು ಮಾಡಲ್ಪಟ್ಟಿದ್ದು ತೋರಿಬರುತ್ತದೆ. ಆದರೆ ಶಿವಶರಣರು ಈ ಮಂತ್ರವನ್ನು ಉಪಯೋಗಿಸುವದಿಲ್ಲ. ಅವರು ಯಾವಾಗಲೂ ಷಟ್‌ಸ್ಥಲಕ್ಕೆ, ಆಯಾ ಲಿಂಗಗಳಿಗೆ, ಪಂಚಾಕ್ಷರಗಳಿಗೆ ಸಂಬಂಧಪಟ್ಟ ಮಂತ್ರಗಳನ್ನೇ ಉಪಯೋಗಿಸುತ್ತಾರೆ. ಆದರೆ ಕೆಲವು ಸಂದರ್ಭಗಳಲ್ಲಿ ಮಾತ್ರ ಅಪವಾದಾತ್ಮಕವಾಗಿ ತಮ್ಮ ಮೇಲಿನ ಮಂತ್ರಗಳಿಗೆ ವಿರೋಧವಲ್ಲದ ಸಹಾಯಕಮಂತ್ರಗಳನ್ನು ಮಾತ್ರ ಉಪಯೋಗಿಸುವದುಂಟು.

(೨೬೬) ಬೀಜಾಕ್ಷರಗಳ ಸಮೂಹಗಳುಃ— ಶಿವಾನುಭವ ಶಾಸ್ತ್ರದಲ್ಲಿ ಬೀಜಾಕ್ಷರಗಳನ್ನು ಎರಡು ಗುಂಪುಗಳನ್ನಾಗಿ ಮಾಡಿದ್ದು ಕಂಡುಬರುತ್ತದೆ. ಒಂದು ಗುಂಪಿನಲ್ಲಿ ೮ ಬೀಜಾಕ್ಷರಗಳು ಇವೆ. ಅವು ಬ, ಸ, ವ, ಅ, ಉ, ಮ, ಹಂ, ಕ್ಷಂ, ಎಂದಿವೆ. ಎರಡನೆಯದರಲ್ಲಿ ೫೨ ಬೀಜಾಕ್ಷರಗಳು ಇವೆ. (ನಂ॥ ೨೦೫ ನೋಡಿರಿ)

(೨೬೭) ಪ್ರಣವಗಳ ಸಮೂಹಗಳುಃ— ಮೇಲ್ಕಂಡ ಬೀಜಾಕ್ಷರಗಳ ಸಮೂಹಗಳಂತೆಯೇ ಪ್ರಣವಗಳ ಸಮೂಹಗಳೂ ಶಿವಾನುಭವ ಶಾಸ್ತ್ರದಲ್ಲಿ ಕೆಲವು ಹೇಳಲ್ಪಡುತ್ತವೆ. ಅವು ಅನೇಕ ವಿಧವಾಗಿವೆ. ಹೇಗೆಂದರೆಃ—

ತ್ರಿವಿಧಪ್ರಣವ, ಷಡ್ವಿಧಪ್ರಣವ, ನವವಿಧಪ್ರಣವ, ದ್ವಾದಶವಿಧ ಪ್ರಣವ, ಏಕವಿಶಂತಿಪ್ರಣವ, ೨೪ ಪ್ರಣವಗಳು, ೩೬ ಪ್ರಣವಗಳು, ೪೮ ಪ್ರಣವಗಳು, ದಶಪಂಚಪ್ರಣವಗಳು, ಏಕವಿಶಂತಿಪ್ರಣವಗಳು

ಇತ್ಯಾದಿ. ಶಿವಾನುಭವ ಶಾಸ್ತ್ರಕಾರರು ಈ ಪ್ರಕಾರ ಅನೇಕ ವಿಧವಾಗಿ ಮಂತ್ರ ವಿಷಯಗಳನ್ನು ಹೇಳಿರುತ್ತಾರೆ. ಪ್ರತಿಯೊಂದು ಪ್ರಣಮವು ಕೆಲವೊಂದು ವಿಶಿಷ್ಟ ವಿಷಯ ಅಥವಾ ತತ್ವವನ್ನು ಸೂಚಿಸುತ್ತದೆ. ಆ ವಿಷಯವು ಅಥವಾ ತತ್ವವು ಷಟ್‌ಸ್ಥಲ ಶಾಸ್ತ್ರಕ್ಕೆ ಸಂಬಂಧಿಸಿದ್ದಿರುತ್ತದೆ. ಈ ಸಂಬಂಧವನ್ನು ತಿಳಿದಲ್ಲಿ, ಕೆಲವೊಂದು ಪ್ರಣಮಗಳ ಗುಂಪು ಆವ ಆವ ವಿಷಯಗಳನ್ನು ನಿರೂಪಿಸುತ್ತದೆಂಬುದನ್ನು ಕಂಡುಹಿಡಿಯಬಹುದು. ವಾಚಕರು ಈ ವಿಷಯವನ್ನು ಸ್ವತಂತ್ರ ಗ್ರಂಥಗಳಲ್ಲಿಯೇ ಸಂದರ್ಭಾನುಸಾರ ತಿಳಿದುಕೊಳ್ಳಬೇಕು. ಈಗಿನ ಸಂಕ್ಷಿಪ್ತ ಗ್ರಂಥದಲ್ಲಿ ಇವುಗಳನ್ನು ತಿಳಿಸುವದು ಶಕ್ಯವಿಲ್ಲ. ಹೀಗೆ ಈ ಎಲ್ಲ ರೀತಿಗಳನ್ನು ತಿಳಿದುಕೊಂಡು ಮಂತ್ರಾರ್ಥವನ್ನು ಮಾಡಿ ಆಚರಿಸತಕ್ಕದ್ದು. ಮಂತ್ರಜಪದಲ್ಲಿ ಆ ಮಂತ್ರಾರ್ಥವನ್ನು ಲಕ್ಷಿಸಿ ತಮ್ಮ ವಿಧಿಗಳನ್ನು ನೆರವೇರಿಸಿದಲ್ಲಿ ಅವು ಪರಿಣಾಮಕಾರಿಗಳಾಗುವವು. ಇವುಗಳಲ್ಲಿ ಮುಖ್ಯವಾದಗಳು ಕೆಳಗೆ ಹೇಳಲ್ಪಟ್ಟಿವೆ. ಪ್ರತಿಯೊಬ್ಬ ವೀರಶೈವನು ಅವುಗಳ ಜ್ಞಾನವನ್ನು ಮಾಡಿಕೊಂಡು ಉಪಯೋಗಿಸತಕ್ಕದ್ದು.

(೨೬೮) ಶತಮಂತ್ರಾಕ್ಷರಗಳು:— ಇವು ಪೂರ್ಣ ವೀರಶೈವಪರವಾದವುಗಳು.

| ಹೆಸರು. | ಪ್ರಣಮ ಸಂಖ್ಯೆ. | |
|---|---|---|
| (೧) ಮೂಲ ಪಂಚಾಕ್ಷರ | ೬ | (ನಂ॥ ೨೪೮) |
| (೨) ಸ್ಥೂಲ ಪಂಚಾಕ್ಷರ | ೯ | (ನಂ॥ ೨೪೯) |
| (೩) ಸೂಕ್ಷ್ಮ ಪಂಚಾಕ್ಷರ | ೫ | (ನಂ॥ ೨೫೦) |
| (೪) ಮಾಯಾಖ್ಯ ಪಂಚಾಕ್ಷರ | ೮ | (ನಂ॥ ೨೫೧) |
| (೫) ಪ್ರಸಾದ ಪಂಚಾಕ್ಷರ | ೧೦ | (ನಂ॥ ೨೫೨) |
| (೬) ನಿರಂಜನ ಪ್ರಣವ, ಶೂನ್ಯ ಪ್ರಣವ, ನಿಷ್ಕಲ ಪ್ರಣವ, ಮತ್ತು ಮೂಲ ಪ್ರಣವಗಳು. | ೪ | |
| (೭) ಷಡಕ್ಷರ ಮಂತ್ರ | ೬ | (ನಂ॥ ೨೦೭) |
| (೮) ಬೀಜಾಕ್ಷರಗಳು | ೫೨ | (ನಂ॥ ೨೦೫) |
| ಒಟ್ಟು | ೧೦೦ | |

(೨೬೯) ನೂರೆಂಟು ಪ್ರಣವುಗಳು:— ಇವು ಕೂಡ ಪೂರ್ಣ ವೀರ ಶೈವಪರವಾದವುಗಳು.

| | | |
|---|---|---|
| (೧) | ಬ, ಸ, ವ | ೩ |
| (೨) | ಅ, ಉ, ಮ | ೩ |
| (೩) | ಪಂಚಾಕ್ಷರ | ೬ |
| | | ೧೨ |

ವೀರಶೈವರಲ್ಲಿ ಯಾವ ಮಂತ್ರ ತೆಗೆದುಕೊಂಡರೂ ಅದರಲ್ಲಿ ಈ ೧೨ ಪ್ರಣವುಗಳು ಮುಖ್ಯ ಸ್ಥಾನವನ್ನು ಹೊಂದಿರುತ್ತವೆ. ಈ ೧೨ ಪ್ರಣವುಗಳನ್ನ ಒಂಭತ್ತು ವೇಳೆ ಪುನಶ್ಚರಣೆ ಮಾಡಲು ನೂರೆಂಟು ಪ್ರಣವುಗಳಾಗುತ್ತವೆ. ಇವುಗಳಲ್ಲಿರುವ ಬ, ಸ, ವ ಅಕ್ಷರಗಳು ಆತ್ಮ ತ್ರಯುವನ್ನು ಸೂಚಿಸುತ್ತವೆ. ಅವು ಗುರುಲಿಂಗಜಂಗಮ ಸ್ವರೂಪವು. ಅವು ಸೂಕ್ಷ್ಮವು. ಅ, ಉ, ಮ ಅಕ್ಷರಗಳು ತನುತ್ರಯಗಳು. ಅವು ಇಷ್ಟ, ಪ್ರಾಣ, ಭಾವಲಿಂಗಗಳ ಸ್ವರೂಪಗಳು. ಹೆಚ್ಚಿಗೆ ಸ್ಥೂಲವು. ಷಡಕ್ಷರೀ ಮಂತ್ರದ ಆಯಾ ಪ್ರಣವಗಳು ಷಟ್‌ತತ್ವಗಳನ್ನು ತೋರಿಸುತ್ತವೆ. ಅವೆ ಲ್ಲವೂ ಷಡ್ವಿಧಲಿಂಗಸ್ವರೂಪವು. ಇವುಗಳು ಹಿಂದೆ ವಿವರಿಸಲ್ಪಟ್ಟಿವೆ. ಇವುಗಳ ಧ್ಯಾನದಿಂದ ಶಿವಯೋಗವು ಲಭಿಸುತ್ತದೆ.

(೨೭೦) ೧೩೬ ವರ್ಣಗಳು:— ಮೇಲೆ ನಂ॥ ೨೬೮ ರಲ್ಲಿಯ ಶತಮಂತ್ರಕ್ಷರಗಳು ಒಂದುನೂರು ಮತ್ತು ನಂ॥ ೨೫೩ ರಲ್ಲಿಯ ಷಟ್ ತ್ರಿಂಶನ್ಮಂತ್ರಗಳು ೩೬ ಈ ಉಭಯ ಕೂಡಿ ೧೩೬ ವರ್ಣಗಳಾಗುವವು. ಇವುಗಳ ಪೂರ್ಣ ಜ್ಞಾನವುಳ್ಳವನಾಗಿ ಆಚರಿಸುವವನೇ ಮಂತ್ರಶರೀ ರಿಯು, ಲಿಂಗಾಂಗಿಯು ಎಂದೆನಿಸಿಕೊಳ್ಳುತ್ತಾನೆ.

(೨೭೧) ಜಪಲಕ್ಷಣ:— ಕರಸ್ಥಲದಲ್ಲಿರುವ ಶಿವಲಿಂಗದ ಬಾಹ್ಯೋ ಪಚಾರಗಳಲ್ಲಿ ಲೋಲುಪ್ತನಾಗಿರಲು ಆ ಲಿಂಗವು ಅಂತರಂಗದಲ್ಲಿ ವೇಧಿಸಿ ಅಲ್ಲಿ ಬೇರೆಬೇರೆ ಲಿಂಗಗಳಾಗಿ ನೆಲೆಗೊಳ್ಳುವದು. ಈ ಕಾರ್ಯ ದಲ್ಲಿ ಲಿಂಗ ಜಪವು ಲಿಂಗಧ್ಯಾನಿಗೆ ಸಹಾಯಕವಾಗಿರುತ್ತದೆ. ಈ ರೀತಿ ಯನ್ನು ವೀರಶೈವನು ತಿಳಿದು ಆಚರಿಸುವದೇ ಜಪದ ಲಕ್ಷಣವು.

(೨೭೨) ಲಿಂಗಜಪ:— ಚಕ್ರಗಳಲ್ಲಿ ಬೇರೆಬೇರೆ ದಳಗಳಿವೆ. ಈ ದಳಗಳಿಗೆ ಕೆಲವೊ ದು ಸಂಖ್ಯೆಯ ಜಪಗಳಿದ್ದು ಅವೆಲ್ಲವೂ ಕೂಡಿ

೨೧೬೦೦ ಆಗುವವು. ಇವುಗಳನ್ನರಿತು ಆಚರಿಸುತ್ತಿರಲು ಆಗ ರೇಚಕವೇ ಪಂಚಾಕ್ಷರಿ, ಪೂರಕವೇ ಓಂಕಾರ, ಕುಂಭಕವೇ ಚಿತ್‌ಶಕ್ತಿರೂಪವಾಗುವದು. ಈ ರೀತಿಯನ್ನರಿತು ಆಚರಿಸುವದೇ ಲಿಂಗ ಜಪವು ಅಥವಾ ಶಿವಜಪವು.

(೨೭೩) ಚಿದ್ರುದ್ರಾಕ್ಷಿ:— ಇದಕ್ಕೆ ಚಿದಕ್ಷಮಣಿ ಎಂತಲೂ ಹೆಸರಿದೆ. ಕರದಲ್ಲಿರುವ ಇಷ್ಟ ಲಿಂಗವು ಷಡಾಧಾರ ಚಕ್ರಗಳಲ್ಲಿ ಆರು ತೆರನಾದ ಲಿಂಗವಾಗಿ ಪ್ರಕಟವಾಗುತ್ತದೆ. ಆಧಾರದಲ್ಲಿ ಚತುರ್ವಿಧ ಬಿಂದುಲಿಂಗ, ಸ್ವಾಧಿಷ್ಠಾನದಲ್ಲಿ ಷಡ್ವಿಧಧಾತುಲಿಂಗ, ಮಣಿಪೂರಕದಲ್ಲಿ ದಶವಿಧ ಕ್ಷೇತ್ರಲಿಂಗ, ಅನಾಹತದಲ್ಲಿ ದ್ವಾದಶವಿಕೃತಿಲಿಂಗ, ವಿಶುದ್ಧಿಯಲ್ಲಿ ಷೋಡಶಕಳಾಲಿಂಗ, ಆಜ್ಞೆಯಲ್ಲಿ ಆತ್ಮವಿದ್ಯಾಲಿಂಗ ಎಂದು ಅದು ಕರೆಯಲ್ಪಡುತ್ತದೆ. ಅಂತರಂಗದಲ್ಲಿ ಹೀಗೆ ಲಿಂಗವು ಸ್ಥಾಪಿತವಾಗುವದರಿಂದ ವೀರಶೈವನು ಪ್ರಾಣಲಿಂಗಿ ಎಂದೆನಿಸಿಕೊಳ್ಳುತ್ತಾನೆ. ಷಟ್‌ಚಕ್ರಗಳಲ್ಲಿಯ ಈ ಲಿಂಗಗಳಲ್ಲಿ ರುದ್ರರು ಸಂಬಂಧಪಟ್ಟಿರುತ್ತಾರೆ. ಈ ರುದ್ರರು ಒಟ್ಟು ೫೦ ಜನರು. ಆಧಾರದಲ್ಲಿ ೪ ರುದ್ರರು, ಸ್ವಾಧಿಷ್ಠಾನದಲ್ಲಿ ೬ ರುದ್ರರು, ಮಣಿಪೂರಕದಲ್ಲಿ ೧೦ ರುದ್ರರು, ಅನಾಹತದಲ್ಲಿ ೧೨ ರುದ್ರರು, ವಿಶುದ್ಧಿಯಲ್ಲಿ ೧೬ ರುದ್ರರು, ಆಜ್ಞೆಯಲ್ಲಿ ಇಬ್ಬರು, ಹೀಗೆ ೫೦ ರುದ್ರರು ಇದ್ದಾರೆ. ಅವರು ಲೋಮವಿಲೋಮದಲ್ಲಿ ಒಂದುನೂರು ರುದ್ರರಾಗುತ್ತಿದ್ದು ಅವರೊಡನೆ ಮಾಯಾಖ್ಯ ಪಂಚಾಕ್ಷರಿ ಓಂ, ಹ್ರಾಂ ಹ್ರೀಂ ನಮಃ ಶಿವಾಯ ಈ ಎಂಟು ಕೂಡಲು ನೂರೆಂಟು ರುದ್ರಬೀಜಗಳಾಗುತ್ತವೆ. ಇವುಗಳೇ ಚಿದ್ರುದ್ರಾಕ್ಷಿಗಳು ಎಂದೆನಿಸಿಕೊಳ್ಳುತ್ತವೆ.

ಈ ರುದ್ರರಿಗೆ ನೂರೆಂಟು ಶಕ್ತಿಗಳು ಸತಿಪತಿಭಾವದಿಂದಿರುತ್ತಾರೆ. ಆಯಾ ಚಕ್ರಗಳಲ್ಲಿ ಎಷ್ಟು ಜನ ರುದ್ರರು ಇದ್ದಾರೋ, ಅಷ್ಟೇ ಸಂಖ್ಯೆಯಿಂದ ಶಕ್ತಿಯರೂ ಇದ್ದು ಮಾಯಾಖ್ಯಗೂಡಿ ೧೦೮ ಶಕ್ತಿಗಳಾಗಿ ರುದ್ರರೊಡನೆ ಬೆರೆದು ಚಿದ್ಗ್ರಂಥಿಗಳೆಂದೆನಿಸಿಕೊಳ್ಳುತ್ತಾರೆ.

ಆಗ ಲಿಂಗವೇ ಮಂತ್ರ, ಮಂತ್ರವೇ ಚಿತ್ತು ಎಂದು ಅರಿದು ಜಪಿಸಲು ಪ್ರಾಣವಾಯುವಿಕಾರವಳಿಯುತ್ತದೆ, ಸುಜ್ಞಾನವೇ ಸೂತ್ರವಾಗುತ್ತದೆ. ಚಿದ್ರುದ್ರಾಕ್ಷಿಯ ಈ ತೆರನನ್ನು ಅರಿದು ಜಪಿಸುವುದು. ಇದನ್ನರಿತು ಜಪಿಸಲು, ಭಕ್ತನಲ್ಲಿ ಲಿಂಗಶಕ್ತಿಯು ಉದ್ಭವಿಸುತ್ತದೆ.

(೨೭೪) ಕಂಠಸ್ಥಾನದಲ್ಲಿಯ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ವಿವರಿಸಿದಂತೆ ಇವೆ. ಇವರು ಸ್ವರಾಕ್ಷರ ಮೂರ್ತಿಗಳೆಂದು ಹೇಳಲ್ಪಡುತ್ತಾರೆ.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಶ್ರೀಕಂಠ | ಪೂರ್ಣೋದರಿ | ಅ |
| ಅನಂತ | ವಿರಜೆ | ಆ |
| ಸೂಕ್ಷ್ಮ | ಶಾಲ್ಮಲಿ | ಇ |
| ತ್ರಿಮೂರ್ತಿ | ಲೋಲಾಕ್ಷಿ | ಈ |
| ಅಮರೇಶ | ವರ್ತುಳಾಕ್ಷಿ | ಉ |
| ಅರ್ಘೀಶ | ದೀರ್ಘನಾಸಿಕೆ | ಊ |
| ಭಾರಭೂತಿ | ದೀರ್ಘಮುಖಿ | ಋ |
| ಅರಿಲೇಶ | ಗೋಮುಖಿ | ೠ |
| ಸ್ಥಾಣುಕ | ದೀರ್ಘ ಜಿಹ್ವೆ | ಌ |
| ಹರ | ಕುಂಡೋದರಿ | ೡ |
| ಝುಂಟೀಶ | ಉರ್ಧ್ವಕೇಶಿ | ಏ |
| ಜಾತುಕ | ವಿಕೃತಮುಖಿ | ಐ |
| ಸದ್ಯೋಜಾತ | ಜ್ವಾಲಾಮುಖಿ | ಓ |
| ಅನುಗ್ರಹೇಶ್ವರ | ಉಲ್ಕಾಮುಖಿ | ಔ |
| ಅಕ್ರೂರ | ಶ್ರೀಮುಖಿ | ಅಂ |
| ಮಹಾಸೇನ | ವಿದ್ಯಾಮುಖಿ | ಅಃ |

(೨೭೫) ಹೃದಯಸ್ಥಾನದಲ್ಲಿರುವ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ವಿವರಿಸಿದಂತೆ ಇವೆ. ಇವರು ವಿಕಲಾಕ್ಷರಾದಿ ದೇವತೆಗಳು ಮತ್ತು ದ್ವಾದಶಾಕ್ಷರರು. ಇದು ಅನಾಹತ ಚಕ್ರವು.

| ರುದ್ರರು. | ಶಕ್ತಿಯರು. | ಅಕ್ಷರಗಳು. |
|---|---|---|
| ಕ್ರೋಧೀಶ | ಮಹಾಕಾಳಿ | ಕ |
| ಚಂಡೀಶ | ಸರಸ್ವತಿ | ಖ |
| ಪಂಚಾಂತಕಶಿವೋತ್ತಮ | ಗೌರಿ | ಗ |
| ಶಿವೋತ್ತಮ | ಮಂತ್ರಶಕ್ತಿ | ಘ |
| ಏಕರುದ್ರ | ಆತ್ಮಶಕ್ತಿ | ಙ |

| | | |
|---|---|---|
| ಕೂರ್ಮ | ಭೂತಮಾತೆ | ಚ |
| ಏಕನೇತ್ರ | ಲಂಬೋದರಿ | ಛ |
| ಚತುರಾಸನ | ದ್ರಾವಿಣಿ | ಜ |
| ಅಜೇಶ | ನಗರಿ | ಝ |
| ಸರ್ವ | ಖೇಚರಿ | ಞ |
| ಸೋಮೇಶ | ಮಂಜರಿ | ಟ |
| ಲಾಂಗುಲಿ | ರೂಪಿಣಿ | ಠ |

(೨೭೬) ಉದರ ಸ್ಥಾನದಲ್ಲಿರುವ ರುದ್ರರು ಮತ್ತು ಶಕ್ತಿಯರು ಕೆಳಗೆ ವಿವರಿಸಿದಂತೆ ಇದ್ದಾರೆ. ಇವರು ೧೦ ಜನರು ಇದ್ದಾರೆ. ಇದು ಮಣಿಪೂರಕ ಚಕ್ರವು.

| **ರುದ್ರರು.** | **ಶಕ್ತಿಯರು.** | **ಅಕ್ಷರಗಳು.** |
|---|---|---|
| ದಾರುಕ | ನಿರಜೆ | ಡ |
| ಅರ್ಧನಾರೀಶ್ವರ | ಕಾಲೋದರಿ | ಢ |
| ಸೋಮ | ಪೂತನಿ | ಣ |
| ಉಮಾಕಾಂತ | ಭದ್ರಕಾಳಿ | ತ |
| ಆಷಾಢದಂಡಿ | ಯೋಗಿನಿ | ಥ |
| ಸ್ಪುರ | ಶಂಖಿನಿ | ದ |
| ಅತ್ರಿರುದ್ರ | ಘರ್ಜಿನಿ | ಧ |
| ಮೀನರುದ್ರ | ಕಾಲರಾತ್ರಿ | ನ |
| ಮೇಷರುದ್ರ | ಕುರ್ದಿನಿ | ಪ |
| ಲೋಹಿತ | ಕಪರ್ದಿನಿ | ಫ |

(೨೭೭) ಗುಹ್ಯಸ್ಥಾನದಲ್ಲಿರುವ ಸ್ವಾಧಿಷ್ಠಾನ ಚಕ್ರದಲ್ಲಿರುವ ರುದ್ರರ ಮತ್ತು ಶಕ್ತಿಯರ ಹೆಸರುಗಳು ಕೆಳಗೆ ಕಾಣಿಸಿದಂತೆ ಇವೆ.

| **ರುದ್ರರು.** | **ಶಕ್ತಿಯರು.** | **ಅಕ್ಷರಗಳು.** |
|---|---|---|
| ಶಿಖಿ | ವಾಗ್ನವೆ | ಬ |
| ಸಕಲಂಡ | ಜಯೆ | ಭ |
| ದ್ವಿಲಂಡ | ಸುಮುಖಿ | ಮ |
| ಮಹಾಕಾಲ | ಈಶ್ವರಿ | ಯ |
| ಸಾಲ | ರೇವತಿ | ರ |
| ಭುಜಂಗೇಶ | ಮಾಧವಿ | ಲ |

(೨೭೮) ಗುದಸ್ಥಾನದಲ್ಲಿಯ ಆಧಾರಚಕ್ರದಲ್ಲಿರುವ ರುದ್ರರು ಮತ್ತು ಶಕ್ತಿಯರು ನಾಲ್ವರು. ಇವರ ಹೆಸರುಗಳು ಕೆಳಗೆ ಕಾಣಿಸಿದಂತೆ

| ರುದ್ರರು. | ಶಕ್ತಿಯರು. | ಅಕ್ಷರಗಳು. |
| --- | --- | --- |
| ಪಿನಾಕೇಶ | ವಾರುಣಿ | ವ |
| ಖಡ್ಗೀಶ | ವಾಯುವಿ | ಶ |
| ಬಕ | ರಕ್ಷಾವಧಾರಿಣಿ | ಷ |
| ಶ್ವೇತಭೃಗ್ವೀಶ | ಸಹಜೆ | ಸ |

(೨೭೯) ಲಲಾಟಸ್ಥಾನದಲ್ಲಿ ಇಬ್ಬರು ರುದ್ರರು ಶಕ್ತಿಯರು ಇದ್ದಾರೆ. ಇದು ಆಜ್ಞಾಚಕ್ರವು.

| ರುದ್ರರು. | ಶಕ್ತಿಯರು. | ಅಕ್ಷರಗಳು. |
| --- | --- | --- |
| ಶಿವ | ವ್ಯಾಪಿನಿ | ಹಂ |
| ಸಂವರ್ತಕ | ಮಾಯಾನ್ವಿತೆ | ಕ್ಷಂ |

ಸೂಚನೆಃ— ಮೇಲೆ ನಂ॥ ೨೭೩ ರಿಂದ ೨೭೯ ರ ವರೆಗೆ ಹೇಳಿದ ವಿವರಣೆಗಳು ಚಿದ್ರುದ್ರಾಕ್ಷಿಯ ವಿಷಯದಲ್ಲಿ ಬರುತ್ತವೆ. ಬಾಹ್ಯ ಇಷ್ಟ ಲಿಂಗದ ಮೂಲಕ ಅಂತರಂಗದಲ್ಲಿ ಲಿಂಗಗಳು ಪ್ರಕಟವಾಗುತ್ತವೆ. ಇದು ಲಿಂಗಧ್ಯಾನದ ಮೂಲಕ ಜರಗುತ್ತದೆ. ಹೀಗೆ ನೆಲೆಗೊಂಡ ಲಿಂಗಗಳ ಹೆಸರುಗಳು ನಂ॥ ೨೭೩ ರಲ್ಲಿ ಇವೆ. ಅವೇ ಆಚಾರಲಿಂಗ, ಗುರು ಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗಗ ಳಾಗಿರುತ್ತವೆ. ಹೀಗೆ ನೆಲೆಗೊಳ್ಳುವಲ್ಲಿ ಆ ಚಕ್ರಗಳಲ್ಲಿರುವ ದಳಗಳಲ್ಲಿ ರುದ್ರರೂ ಶಕ್ತಿಯರೂ ಇವರ ಸಂಗಮವಾಗುವದು. ಈ ಸಂಗಮವು ಜರಗಿ ದಲ್ಲಿ ಅದು ಚಿದ್ಗ್ರಂಥಿ ಎಂದು ಹೇಳಲ್ಪಡುತ್ತದೆ. ಸಾಮಾನ್ಯ ಜನರಲ್ಲಿಯ ಗ್ರಂಥಿಗಳಲ್ಲಿ ರಕ್ತ, ಸ್ನಾಯುಗಳನ್ನು ಮಾತ್ರ ಕಾಣಬಹುದು. ಆದರೆ ಲಿಂಗಜಪಗಳಿಂದ ಪಕ್ವವಾದ ಲಿಂಗಾಂಗಿಯ ಶರೀರದಲ್ಲಿರುವ ಈ ಗ್ರಂಥಿಗ ಳಲ್ಲಿ ಲಿಂಗಶಕ್ತಿಯು ಇರುತ್ತದೆ. ಆದ್ದರಿಂದ ಅವು ಚಿದ್ಗ್ರಂಥಿಗಳೆಂದು ಹೇಳಲ್ಪಟ್ಟಿರುತ್ತವೆ. ಇದು ವೀರಶೈವನ ಲಿಂಗಮಂತ್ರಜಪವು.

(೨೮೦) ಲಿಂಗಜಪಗಳಲ್ಲಿ ಅರ್ಪಣಭಾವವುಃ— ವೀರಶೈವರು ಲಿಂಗಾ ರ್ಪಣ ಭಾವದಿಂದ ತಮ್ಮ ಲಿಂಗಜಪಗಳನ್ನು ಮಾಡತಕ್ಕದ್ದು. ಅರ್ಪ ಣಭಾವದಿಂದ ಲಿಂಗವು ಅಂತರಂಗವನ್ನು ವೇಧಿಸುತ್ತದೆ. ಜಪಮಾಡು ವದೆಂದರೆ ಕೇವಲ ನಾಮಸಂಕೀರ್ತನವಲ್ಲ. ಅದರೊಡನೆ ಆಯಾ ಲಿಂಗಗಳ

ನೆನಹು, ಮತ್ತು ಆ ನೆನಹಿನೊಡನೆ ಅರ್ಪಣಭಾವ ಇವುಗಳೂ ಇರತಕ್ಕದ್ದು. ವೀರಶೈವರಲ್ಲಿ ಲಿಂಗಜಂಗಮಗಳು ಈ ರೀತಿಯಾಗಿರುತ್ತವೆ.

(೨೮೧) ಲಿಂಗಜಪಗಳ ಭೇದಗಳುಃ— ಇವು ಮುಖ್ಯ ಎರಡು ಇವೆ. ಈ ಒಂದೊಂದು ಭೇದದಲ್ಲಿ ಅನೇಕ ಉಪಭೇದಗಳೂ ಇರುತ್ತವೆ. ಮುಖ್ಯ ಭೇದಗಳು ಯಾವವೆಂದರೆಃ— (೧) ಪ್ರಣವೋಚ್ಚಾರಣೆಗಳು. ಇಲ್ಲಿ ಪ್ರಣಮಗಳ ಪುನಶ್ಚರಣೆ ಇರುತ್ತದೆ. ಮನುಷ್ಯನಲ್ಲಿ ಹುದುಗಿರುವ ಅಂತಃ ಶಕ್ತಿಯನ್ನು ಒಟ್ಟಾಗಿ ಹೆಚ್ಚಿಸುವದೇ ಇದರ ಉದ್ದೇಶವು. (೨) ಪ್ರಣಮಗಳನ್ನು ಆಯಾ ಲಿಂಗಗಳಿಗೆ ಸಮರ್ಪಣ ಮಾಡುತ್ತ ಉಚ್ಚರಿಸುವುದು. ಇಲ್ಲಿ ಅಂತಃ ಶಕ್ತಿಯನ್ನು ಆಯಾ ಲಿಂಗಗಳಿಗೆ ಸಮರ್ಪಿಸುವದಿರುತ್ತದೆ. ಹೀಗೆ ಇವುಗಳಲ್ಲಿ ಎರಡು ಮುಖ್ಯ ಭೇದಗಳನ್ನು ಮಾಡಬಹುದು.

(೨೮೨) ಪ್ರಣವೋಚ್ಚಾರಣೆಃ— ವೀರಶೈವರಲ್ಲಿ ಅ, ಉ, ಮ; ಬ, ಸ, ವ; ಓಂ ನಮಃ ಶಿವಾಯ ಹೀಗೆ ೧೨ ಮುಖ್ಯ ಪ್ರಣಮಗಳು ಇರುತ್ತವೆ. ಇವುಗಳ ಉಚ್ಚರಣೆಯ ಮುಖ್ಯ ವಿಧಗಳು ಯಾವವೆಂದರೆಃ—

೧ನೇ ವಿಧಃ—

ಬಾಂ ಸಾಂ ವಾಂ; ನಾಂ ಮಾಂ ಶೀಂ ವಾಂ ಯಾಂ ಓಂ; ಅಂ ಊಂ ಮಾಂ ಎಂದಿಡೆ.

೨ ನೇ ವಿಧವುಃ—

ಓಂ; ನಾಂ ಮಾಂ; ಅಂ ಬಾಂ; ಹ್ರಾಂ ಹ್ರೀಂ, ನಮಃಶಿವಾಯ.
ಓಂ, ಶೀಂ ವಾಂ ಊಂ ಸಾಂ ಹ್ರೂಂ ಹ್ರೈಂ, ನಮಃಶಿವಾಯ
ಓಂ, ಯಾಂ ಮಾಂ ವಾಂ ಹ್ರೌಂ ಹ್ರಃ, ನಮಃಶಿವಾಯ.

ಒಂದನೇ ವಿಧವು ಸಾಮಾನ್ಯವಾದುದು. ಎರಡನೇ ವಿಧವು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅನುಕ್ರಮವಾಗಿ ಸಂಬಂಧಿಸಿ ಹೇಳಲ್ಪಟ್ಟಿದೆ.

(೨೮೩) ಲಿಂಗಾರ್ಪಣ ಜಪಗಳುಃ— ಇದರಲ್ಲಿ ತ್ರಿಲಿಂಗಾರ್ಪಣ ಜಪವು, ನವಲಿಂಗಾರ್ಪಣ ಜಪವೆಂತಲೂ ಕಾಯಾರ್ಪಣ ಜಪವು,

ಕರಣಾರ್ಪಣ ಜಪವೆಂತಲೂ ಭೇದಗಳು ಇರುತ್ತವೆ. ಅಲ್ಲದೆ, ವೀರ ಶೈವರು ತಮ್ಮ ಅಂಗದ ಮೇಲೆ ಧರಿಸುವ ಇಷ್ಟಲಿಂಗಕ್ಕೆ ಸಂಬಂಧಿಸಿದ ಜಪವೂ ಇದೆ.

(೨೮೪) ತ್ರಿಲಿಂಗಾರ್ಪಣ ಜಪವು: —

ಓಂ ಹ್ರಾಂ ನಾಂ ನಮಃಶಿವಾಯ ಆಚಾರಲಿಂಗಾಯನಮಃ
ಓಂ ಹ್ರೀಂ ಮಾಂ ನಮಃಶಿವಾಯ ಗುರುಲಿಂಗಾಯನಮಃ
ಇಷ್ಟಲಿಂಗವೇ ನಿಮಗರ್ಪಿತವು.
ಓಂ ಹ್ರೂಂ ಶೀಂ ನಮಃಶಿವಾಯ ಶಿವಲಿಂಗಾಯನಮಃ
ಓಂ ಹ್ರೈಂ ವಾಂ ನಮಃಶಿವಾಯ ಜಂಗಮಲಿಂಗಾಯನಮಃ
ಪ್ರಾಣಲಿಂಗವೇ ನಿಮಗರ್ಪಿತವು.
ಓಂ ಹ್ರೌಂ ಯಾಂ ನಮಃಶಿವಾಯ ಪ್ರಸಾದಲಿಂಗಾಯನಮಃ
ಓಂ ಹ್ರಃ ಓಂ ನಮಃಶಿವಾಯ ಮಹಾಲಿಂಗಾಯನಮಃ
ಭಾವಲಿಂಗವೇ ನಿಮಗರ್ಪಿತವು.

(೨೮೫) ನವಲಿಂಗಾರ್ಪಣ ಜಪವು:— ಇದರಲ್ಲಿ ಷಡ್ಲಿಂಗ ಜಪವೂ ಸೇರಿಕೊಂಡಿರುತ್ತದೆ. ಇದರಲ್ಲಿ ಎರಡು ವಿಧಗಳಿವೆ.

೧ನೇ ವಿಧ: —

| | | | |
|---|---|---|---|
| ಓಂ | ಹ್ರಾಂ | ನಾಂ | ಆಚಾರಲಿಂಗಾಯನಮಃ |
| ಓಂ | ಹ್ರೀಂ | ಮಾಂ | ಗುರುಲಿಂಗಾಯನಮಃ |
| ಓಂ | ಹ್ರೂಂ | ಶೀಂ | ಶಿವಲಿಂಗಾಯನಮಃ |
| ಓಂ | ಹ್ರೈಂ | ವಾಂ | ಜಂಗಮಲಿಂಗಾಯನಮಃ |
| ಓಂ | ಹ್ರೌಂ | ಯಾಂ | ಪ್ರಸಾದಲಿಂಗಾಯನಮಃ |
| ಓಂ | ಹ್ರಃ | ಓಂ | ಮಹಾಲಿಂಗಾಯನಮಃ |
| ಓಂ | ಆಂ | | ಇಷ್ಟಲಿಂಗಾಯನಮಃ |
| ಓಂ | ಊಂ | | ಪ್ರಾಣಲಿಂಗಾಯನಮಃ |
| ಓಂ | ಮಾಂ | | ಭಾವಲಿಂಗಾಯನಮಃ |

ಇವುಗಳಲ್ಲಿ ಮೊದಲನೆಯ ಆರು ಷಟ್‌ಸ್ಥಲಕ್ಕೂ ಉಳಿದ ಮೂರು ಅವುಗಳಿಗೆ ಮೇಲಿರುವ ಶೂನ್ಯ ಸ್ಥಲಗಳಿಗೂ ಸಂಬಂಧಿಸುತ್ತವೆ.

೨ನೇ ವಿಧಃ— ಕೆಳಗಿನದರಲ್ಲಿ ಬ, ಸ, ವ; ಅ, ಉ, ಮ ಪ್ರಣವ ಗಳನ್ನೊಡಗೊಂಡು ಮಾಡತಕ್ಕ ಜಪದ ಕ್ರಮವಿದೆ. ಅದರಲ್ಲಿ ಪ್ರಣವ ಗಳಲ್ಲಿ ಮಂತ್ರಶಕ್ತಿಯನ್ನು ಹೆಚ್ಚಿಸುವದಕ್ಕೋಸ್ಕರ ಒಂದಕ್ಕಿಂತಲೂ ಹೆಚ್ಚು ಸಾರೆ ಅವು ಇಡಲ್ಪಟ್ಟಿವೆ. ಅದು ಹೇಗೆಂದರೆಃ—

(೧) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಆಚಾರಲಿಂಗಾಯನಮಃ

(೨) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಗುರುಲಿಂಗಾಯನಮಃ.

(೩) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಒಂ ವಾಂ ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಶಿವಲಿಂಗಾಯನಮಃ.

(೪) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಜಂಗಮಲಿಂಗಾಯನಮಃ.

(೫) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ, ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ ಓಂ ಮಾಂ ಪ್ರಸಾದಲಿಂಗಾಯನಮಃ.

(೬) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ, ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಮಹಾಲಿಂಗಾಯನಮಃ.

(೭) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಇಷ್ಟಲಿಂಗಾಯನಮಃ.

(೮) ಓಂ ಬಾಂ ಓಂ ಸಾಂ ಓಂ ವಾಂ, ಓಂ ನಾಂ ಓಂ ಮಾಂ, ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ ಓಂ, ಅಂ ಓಂ ಊಂ, ಓಂ ಮಾಂ ಪ್ರಾಣಲಿಂಗಾಯನಮಃ.

(F) ಓಂ ಬಾಂ ಓಂ ಸಾಂ ಓಂ ವಾಂ, ಓಂ ಸಾಂ ಓಂ ಮಾಂ ಓಂ ಶೀಂ ಓಂ ವಾಂ ಓಂ ಯಾಂ, ಓಂ ಓಂ, ಓಂ, ಆಂ ಓಂ ಊಂ, ಓಂ ಮಾಂ ಭಾವಲಿಂಗಾಯನಮಃ.

(೨೮೬) ಕಾಯಾರ್ಪಣ ಜಪವು:—

(ಅ) ಭೋಜ್ಯವನ್ನು ಓಂ ಹ್ರಾಂ ನಾಂ ನಮಃಶಿವಾಯ ಈ ಮಂತ್ರದಿಂದ ಆಚಾರಲಿಂಗಕ್ಕೆ ಅರ್ಪಿಸುವುದು.

(ಬ) ಪಾನ್ಯವನ್ನು ಓಂ ಹ್ರೀಂ ಮಾಂ ನಮಃಶಿವಾಯ ಎಂಬ ಮಂತ್ರದಿಂದ ಗುರುಲಿಂಗಕ್ಕೆ ಸಮರ್ಪಿಸುವುದು.

(ಕ) ಭಕ್ಷ್ಯವನ್ನು ಓಂ ಹ್ರೂಂ ಶೀಂ ನಮಃಶಿವಾಯ ಎಂಬ ಮಂತ್ರದಿಂದ ಶಿವಲಿಂಗಕ್ಕೆ ಅರ್ಪಿಸುವುದು.

(ಡ) ಚೋಹ್ಯವನ್ನು ಓಂ ಹ್ರೈಂ ವಾಂ ನಮಃಶಿವಾಯ ಎಂಬ ಮಂತ್ರದಿಂದ ಜಂಗಮಲಿಂಗಕ್ಕೆ ಅರ್ಪಿಸುವುದು.

(ಇ) ಲೇಹ್ಯವನ್ನು ಓಂ ಹ್ರೌಂ ಯಾಂ ನಮಃಶಿವಾಯ ಎಂಬ ಮಂತ್ರದಿಂದ ಪ್ರಸಾದಲಿಂಗಕ್ಕೆ ಅರ್ಪಿಸುವುದು.

(ಫ) ಇಲ್ಲದಲ್ಲಿಯ ರೂಪನ್ನು ಪರಿಣಾಮವೆಂಬ ದ್ರವ್ಯವನ್ನು ತೃಪ್ತಿ ಎಂಬ ಪದಾರ್ಥವನ್ನು ಓಂ ಹ್ರಃ ಓಂ ನಮಃ ಶಿವಾಯ ಎಂಬ ಮಂತ್ರದಿಂದ ಮಹಾಲಿಂಗಕ್ಕೆ ಅರ್ಪಿಸುವುದು.

(೨೮೭) ಕರಣಾರ್ಪಣ ಜಪವು:— ರೂಪು, ರುಚಿ, ತೃಪ್ತಿಗಳನ್ನು ಯಾವ ಜಪದಿಂದ ಅರ್ಪಿಸತಕ್ಕದ್ದೋ ಅದೇ ಕರಣಾರ್ಪಣ ಜಪವೆಂದು ಹೇಳಲ್ಪಡುತ್ತಿದೆ. ಅದು ಹೇಗೆಂದರೆ:—

ಓಂ ಹ್ರಾಂ ಹ್ರೀಂ, ಬಾಂ ಆಂ ನಾಂ ಮಾಂ, ನಮಃಶ್ಶಿವಾಯ

ಎಂದು ರೂಪು ಪದಾರ್ಥವನ್ನು ಇಷ್ಟಲಿಂಗಕ್ಕೆ ಅರ್ಪಿಸುವುದು.

ಓಂ ಹ್ರೂಂ ಹ್ರೈಂ, ಸಾಂ ಊಂ ಶೀಂ ವಾಂ, ನಮಶ್ಶಿವಾಯ

ಎಂದು ರುಚಿ ಪದಾರ್ಥವನ್ನು ಪ್ರಾಣಲಿಂಗಕ್ಕೆ ಅರ್ಪಿಸುವುದು.

ಓಂ ಹ್ರೌಂ ಹ್ರಃ, ವಾಂ ಮಾಂ ಯಾಂ, ಓಂ, ನಮಶ್ಶಿವಾಯ

# ವೀರಶೈವ
# ರಾಜಮನೆತನಗಳ ಚರಿತ್ರೆಗಳು.

## ೧ನೇ ಪ್ರಕರಣ.

ಕರ್ನಾಟಕದಲ್ಲಿ ಅನೇಕ ಮಹತ್ವದ ರಾಜಮನೆತನಗಳೂ ಶೂರ ಪುರುಷರೂ ಆಗಿ ಹೋಗಿದ್ದಾರೆ. ಈ ರಾಜಮನೆತನಗಳಲ್ಲಿಯ ಅನೇಕ ರಾಜರು ದಕ್ಷಿಣಕ್ಕೆ ಕನ್ಯಾಕುಮಾರೀ ಭೂಶಿರದಿಂದ ಉತ್ತರಕ್ಕೆ ನರ್ಮದಾ ಗಂಗಾ ನದಿಗಳ ವರೆಗೂ ತಮ್ಮ ಪರಾಕ್ರಮವನ್ನು ಮೆರೆಯಿಸಿ ರಾಜ್ಯ ವಾಳಿದ್ದಾರೆ. ಕರ್ನಾಟಕಸ್ತರೇ ಅವರ ದಂಡಾಳುಗಳು. ಇಲ್ಲಿಯವರೇ ಅವರ ಶೂರ ಸೇನಾಪತಿಗಳು. ಅವರಲ್ಲದೆ ಕರ್ನಾಟಕದಲ್ಲಿ ಅನೇಕ ಬಲಶಾಲಿಗಳಾದ ಮಾಂಡಲಿಕರೂ ರಾಜ್ಯವಾಳಿದ್ದಾರೆ. ಅವರು ಯುದ್ಧ ಕಾಲದಲ್ಲಿ ತಮ್ಮ ಸೈನ್ಯದೊಂದಿಗೆ ರಣರಂಗಕ್ಕೆ ತಮ್ಮ ಚಕ್ರವರ್ತಿಗಳಿ ಗೋಸ್ಕರ ತೆರಳಿ ಶೂರ ಕೃತ್ಯಗಳನ್ನು ಜರಗಿಸಿದ್ದಾರೆ. ಈ ಮಾಂಡಲಿ ಕರಿಗೆ ಅಧೀನರಾಗಿ ಸಣ್ಣ ದೊಡ್ಡ ನಾಡುಗಳ ಅಧಿಕಾರಿಗಳೂ ದೇಸ ಗತಿಯವರೂ ಇದ್ದು ಅವರಲ್ಲಿಯೂ ಕೂಡ ಅನೇಕ ಶೂರಪುರುಷರು ಆಗಿದ್ದಾರೆ. ಇವರೆಲ್ಲರ ಚರಿತ್ರೆಗಳು ನಮಗೆ ಇನ್ನೂ ಪೂರ್ಣ ಉಪಲ ಬ್ಧವಾಗಿಲ್ಲ. ಆದರೂ ನಮಗೆ ದೊರೆತ ಸಾಮಗ್ರಿಗಳ ಮೇಲಿಂದ ಕರ್ನಾಟಕವು ರಾಜಕೀಯ ಕ್ಷೇತ್ರದಲ್ಲಿ ಮತ್ತು ಶೌರ್ಯ ಸಾಹಸಗ ಳಲ್ಲಿ ಹಿಂದುಸ್ತಾನದ ಯಾವ ದೇಶಕ್ಕೂ ಹಿಂದಿಲ್ಲವೆಂಬುದು ಗೊತ್ತಾ ಗುತ್ತದೆ.

ಕರ್ನಾಟಕದಲ್ಲಿ ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಗಂಗರು, ಕಲಚೂರ್ಯರು, ಹೊಯಿಸಳರು ಬಹು ಮಹತ್ವದ ರಾಜ ಮನೆತನಗಳು. ಇವರಲ್ಲಿ ಕಲಚೂರ್ಯರು ೧೨ನೆಯ ಶತಮಾನದ ಮಧ್ಯ ಭಾಗದಲ್ಲಿ ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳಿದರು. ಕಲಚೂರ್ಯರ ಮೊದ ಲನೆಯ ಅರಸನು ಬಿಜ್ಜಳನು. ಅವನು ತನ್ನ ಪರಾಕ್ರಮದಿಂದ ಉತ್ತ

ರಕ್ಕೆ ಈಗಿನ ಸೊಲ್ಲಾಪುರ ಜಿಲ್ಲೆ, ನಿಜಾಮುರಾಜ್ಯದಲ್ಲಿರುವ ಬೀದರ ಮತ್ತು ಉಸ್ಮಾನಾಬಾದ ಜಿಲ್ಲೆಗಳಿಂದ ದಕ್ಷಿಣಕ್ಕೆ ಹಾಸನ ತುಮಕೂರು ಜಿಲ್ಲೆಗಳ ವರೆಗೂ ಪ್ರಾಂತವನ್ನು ಆಕ್ರಮಿಸಿ ರಾಜ್ಯವಾಳುತ್ತಿದ್ದನು. ಎರೆಯಂಬರಾಗೆ (ರಾಯಚೂರು ಜಿಲ್ಲೆಯಲ್ಲಿಯ ಈಗಿನ ಯಲಬುರ್ಗಿ) ಯ ಸಿಂದರಾಜರೂ, ಕರ್ಹಾಡದ ಶಿಲಾಹಾರರೂ, ಸವದತ್ತಿಯ ರಟ್ಟ ರಾಜರೂ, ಗುತ್ತಲದ ಗುತ್ತರಸರೂ, ಹಾನಗಲ್ಲಿನ ಕದಂಬರೂ ಈಗಿನ ಚಿತ್ರಕಲ್ಲದುರ್ಗ ಜಿಲ್ಲೆಯಲ್ಲಿರುವ ನೋಣಂಬವಾಡಿ ಮತ್ತು ಸಾಂತಲಿಗೆ ಈ ಭಾಗಗಳನ್ನಾಳುತ್ತಿದ್ದ ಉಚ್ಚಂಗಿ ದುರ್ಗದ ಪಾಂಡ್ಯರೂ, ನೋಳಂಬ ಪಲ್ಲವರೂ ಬಹು ಪರಾಕ್ರಮಿಗಳಾಗಿದ್ದು ಬಿಜ್ಜಳ ರಾಜನಿಗೆ ಅಧೀನರಾಗಿ ಕರ್ನಾಟಕದಲ್ಲಿ ರಾಜ್ಯವಾಳಿದರು. ಕೇಶಿರಾಜ, ಬರ್ಮದಂಡನಾಯಕರಂಥ ಶೂರ ಸೇನಾಪತಿಗಳೂ ಅವನ ಸೈನ್ಯಾಧಿಪತಿಗಳಾಗಿದ್ದರು. ೧೧೪೪ರಲ್ಲಿ ಹೊಯಸಳ ರಾಜನೊಡನೆ ಯುದ್ಧವು ಒದಗಲು, ಬಿಜ್ಜಳನ ಮಾಂಡಲಿಕನಾದ ಎರೆಯಂಬರಾಗೆಯ ಪೆರ್ಮಾಡಿ ರಾಜನು ಅವನನ್ನು ಪೂರ್ಣ ಸೋಲಿಸಿ ಅವನ ರಾಜಧಾನಿಯಾದ ದ್ವಾರಸಮುದ್ರವನ್ನು ಮುತ್ತಿ ಅವನನ್ನು ಅಪಜಯ ಪಡಿಸಿದನು. ಈ ಶೂರ ಕೃತ್ಯಗಳಿಗೋಸ್ಕರ ಬಿಜ್ಜಳನು 'ವೀರ ಬಿಜ್ಜಳ' ಎಂದು ಇತಿಹಾಸದಲ್ಲಿ ಹೆಸರುಗೊಂಡಿದ್ದಾನೆ. ಬಸವನು ಈ ಬಿಜ್ಜಳ ರಾಜನಲ್ಲಿ ಮೊದಲು ಒಂದು ಸಣ್ಣ ನೌಕರಿಯನ್ನು ಸಂಪಾದಿಸಿ, ಬರಬರುತ್ತ ಅವನ ಭಂಡಾರಿಯಾಗಿಯೂ, ಮುಂದೆ ದಂಡಾಧಿಪತಿಯಾಗಿಯೂ, ಕಡೆಗೆ ಮಂತ್ರಿಯಾಗಿಯೂ ಉನ್ನತ ಸ್ಥಾನಗಳನ್ನು ಪಡೆದು ರಾಜ್ಯಭಾರವನ್ನು ನಡಿಸಿದನು. ಈ ಪ್ರಕಾರ ಬಸವನು ಕೇವಲ ರಾಜಕೀಯ ಪುರುಷನಾಗಿದ್ದನಷ್ಟೇ ಅಲ್ಲ, ಕರ್ನಾಟಕದಲ್ಲಿ ಒಂದು ಮಹತ್ತರವಾದ ಧಾರ್ಮಿಕ ಕ್ರಾಂತಿಯನ್ನೆಸಗಿದ ಮಹಾತ್ಮನೂ ಇದ್ದಾನೆ. ಈ ಕ್ರಾಂತಿಯ ಫಲವಾಗಿ ಕರ್ನಾಟಕದಲ್ಲಿಯ ರಡ್ಡಿಗಳು, ಪಂಚಮಸಾಲಿಗಳು, ಕುಡುವೊಕ್ಕಲಿಗರು, ಸಾದರು, ಮಲವರು, ನೊಣಬರು ಮೊದಲಾದ ಶೂರ ಸಮಾಜಗಳು ವೀರಶೈವ ಮತಾನುವರ್ತಿಗಳಾಗಿ ಯುದ್ಧಕಾಲದಲ್ಲಿ ಅನೇಕ ಶೌರ್ಯದ ಕೆಲಸಗಳನ್ನು ಮಾಡಿರುತ್ತಾರೆ. ಈ ಸಮಾಜಗಳಿಂದ ಸ್ಥಾಪಿಸಲ್ಪಟ್ಟ ಇಲ್ಲಿಯ ರಾಜಮನೆತನಗಳು, ದೇಸಗತಿಗಳು ಮತ್ತು ಪಾಳ್ಯಗಳು ಕರ್ನಾಟಕದ ಕೀರ್ತಿಯನ್ನು ಹಬ್ಬಿಸಿವೆ. ಈ ಸಮಾಜಗಳೆಲ್ಲವೂ ರಣಗೆಲಸದಲ್ಲಿ ಬಲ್ಲಿದವು, ಯುದ್ಧಾಟೋಪದಲ್ಲಿ ಮುಂ

ದಾದವುಗಳು. ಇವು ದೇವಗಿರಿಯ ಯಾದವರು ಮತ್ತು ವಿಜಯನಗರದ ರಾಜರುಗಳಲ್ಲಿಯೂ ಮೈಸೂರು, ಕೊಡಗು, ಇಕ್ಕೇರಿ, ಹಾಗಲವಾಡಿ ಈ ಪಟ್ಟಣಗಳಲ್ಲಿ ಸ್ಥಾಪಿತವಾದ ವೀರಶೈವ ರಾಜ್ಯಗಳಲ್ಲಿಯೂ ತಮ್ಮ ಸಾಮರ್ಥ್ಯವನ್ನೂ ಸಾಹಸವನ್ನೂ ಚನ್ನಾಗಿ ತೋರಿಸಿ, ಕರ್ನಾಟಕದ ಕೀರ್ತಿಧ್ವಜವನ್ನು ಮೆರೆಯಿಸಿರುತ್ತವೆ.

ಬಸವೇಶ್ವರನ ಕಾಲದಲ್ಲಿ ಕರ್ನಾಟಕ ದೇಶದಲ್ಲಿ ಅಸಂಖ್ಯ ಶಿವ ಶರಣರು ಉದ್ಭವಿಸಿ ದೇಶದಲ್ಲೆಲ್ಲ ಒಂದು ಅದ್ಭುತವಾದ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನೆಸಗಿದ್ದಾರೆ. ಅವರ ಉದಾರ ವಿಚಾರಗಳು ಹೊಲೆಯ, ಮಾದಿಗ ಮೊದಲ್ಗೊಂಡು ಬ್ರಾಹ್ಮಣ ಮೊದಲಾದ ಉಚ್ಚ ವರ್ಣದವರಲ್ಲಿ ಸಹ ಸೇರ್ಪಡೆಯಾದವು. ಆಗ ದೇಶದಲ್ಲಿ ಶೈವ, ವೈಷ್ಣವ, ಜೈನಧರ್ಮಗಳು ಅಸ್ತಿತ್ವದಲ್ಲಿದ್ದವು. ಆದರೆ ಅವುಗಳಲ್ಲಿ ಅನೇಕ ಭೇದ ಉಪಭೇದಗಳು ಉಂಟಾಗಿದ್ದರಿಂದ ಕರ್ನಾಟಕದ ಸಮಾಜಗಳಲ್ಲಿ ಅವ್ಯವಸ್ಥೆಯುಂಟಾಗಿತ್ತು. ಆದರೆ ಶಿವಶರಣರ ವಿಚಾರಗಳು ಈ ಕಾಲದಲ್ಲಿ ವಚನ ವಾಙ್ಮಯದ ಮೂಲಕ ಪ್ರಸಾರಗೊಳಿಸಲ್ಪಡಲು ಕರ್ನಾಟಕ ಸಮಾಜಗಳಲ್ಲೆಲ್ಲ ಒಂದು ಬಲವಾದ ಕಟ್ಟು ಉತ್ಪನ್ನವಾಯಿತು. ಬ್ರಾಹ್ಮಣರು ಹೊಲೆಯರೊಡನೆ ಸಹ ಅನ್ನೋದಕವ್ಯವಹಾರ ಮತ್ತು ಶರೀರ ಸಂಬಂಧವನ್ನಿಡಲು ಮುಂದಾದ ಉದಾಹರಣೆಗಳು ಅನೇಕವಿರುತ್ತವೆ. ನಾಡಿನಲ್ಲಿ ಸಿರಿವಂತರೂ ಬಡವರೂ ಕೈಗಾರಿಕೆಯವರೂ ಅಲ್ಲದೆ ಬಹುಜನ ಜಮೀನುದಾರರೂ ಸೇನಾಧಿಪತಿಗಳೂ ರಾಜರೂ ವೀರಶೈವಮತಾವಲಂಬಿಗಳಾದರು. ಆಗ ಹೊಸ ಬಗೆಯ ಕನ್ನಡ ವಾಙ್ಮಯವು ಉದ್ಭವಿಸಿತು. ಈ ವಾಙ್ಮಯವು ವಚನ, ರಗಳೆ, ಷಟ್ಪದಿ, ತ್ರಿಪದಿ, ಚೌಪದಿಗಳ ಮೂಲಕ ದೇಶದಲ್ಲೆಲ್ಲ ಪ್ರವಹಿಸತೊಡಗಿತು. ಇದರಿಂದ ಮೊದಲಿನ ಸಮಾಜದ ಪರಿಸ್ಥಿತಿಯು ಬದಲಾವಣೆ ಹೊಂದಿತು. ಸಮಾಜದ ಕೃತ್ರಿಮತೆಯು ಹೊರಟು ಹೋಯಿತು. ನೈಜವೂ, ಸಾಧುವೂ, ಸುಲಭವೂ ಆದ ವಚನಕಾರರ ವಿಶಾಲ ವಿಚಾರಗಳು ಎಲ್ಲ ಕಡೆಗೂ ಪ್ರಸಾರ ಹೊಂದಿದವು. ಇದರಿಂದ ೧೨ನೆಯ ಮತ್ತು ೧೩ನೆಯ ಶತಮಾನಗಳಲ್ಲಿ ಅನೇಕ ಶಿವಶರಣರು ಉತ್ಪನ್ನರಾದರು ಮತ್ತು ಅವರು ರಾಜರಿಂದ ಮನ್ನಣೆ ಹೊಂದಿದರು. ಇಂಥ ಅನೇಕರಲ್ಲಿ ಏಕಾಂತದ ರಾಮಯ್ಯನೊಬ್ಬನಿದ್ದಾನೆ.

**ಏಕಾಂತದ ರಾಮಯ್ಯ:**—ಬಿಜ್ಜಳ ಭೂಪಾಲನು ಕಲ್ಯಾಣ ಪಟ್ಟಣದಲ್ಲಿ ಚಕ್ರವರ್ತಿಯಾಗಿ ೧೧೬೨ರಿಂದ ೧೧೬೮ರ ವರೆಗೆ ಆಳಿದನು. ಅವನ ಕಾಲದಲ್ಲಿ ಬನವಾಸಿ, ಬಳ್ಳಿಗಾವಿ ಪಟ್ಟಣಗಳಿದ್ದ ಪ್ರಾಂತ ವಿಭಾಗವು ವೀರಶೈವ ಮತಕ್ಕೆ ಕೇಂದ್ರ ಸ್ಥಾನವಾಗಿತ್ತು. ಇಲ್ಲಿಯೇ ಮಹಾದೇವಿಯಕ್ಕ, ಅಲ್ಲಮಪ್ರಭು, ಸತ್ಯಕ್ಕ, ಅನಮಿಷ ಮೊದಲಾದ ಶಿವಶರಣಶರಣೆಯರೂ ವಚನಕಾರರೂ ಉದ್ಭವಿಸಿದರು. ಧಾರವಾಡ ಜಿಲ್ಲೆಯಲ್ಲಿ ಈಗಿನ ತಾಲೂಕು ಸ್ಥಾನವಾದ ಹಿರೇಕೆರೂರಿನಿಂದ ೪ ಮೈಲಿನ ಮೇಲೆ ಅಬ್ಬಲೂರು ಎಂಬ ಗ್ರಾಮವಿದೆ. ಈ ಗ್ರಾಮಕ್ಕೆ ಏಕಾಂತದ ರಾಮಯ್ಯನೆಂಬ ಶಿವಶರಣನು ಬಿಜ್ಜಳನ ಕಾಲದಲ್ಲಿ ಆಗಮಿಸಿ ಅಲ್ಲಿಯ ಜಿನಾಲಯಗಳನ್ನು ಶಿವಾಲಯಗಳನ್ನಾಗಿ ಮಾಡಿದನು. ಈ ಸಂಗತಿಯು ಅಲ್ಲಿಯ ಶಿಲಾಶಾಸನದಲ್ಲಿ ಉಲ್ಲೇಖವಾಗಿದೆ. ಇದರಿಂದ ಏಕಾಂತದ ರಾಮಯ್ಯನ ಕೀರ್ತಿಯು ಎಲ್ಲ ಕಡೆಗೂ ಹಬ್ಬಿತು. ಅವನು ಮಹತ್ವ ಮಾಡಿ ತೋರಿಸಿದ ದೇವಾಲಯಕ್ಕೆ ಆಗಿನ ಇಲ್ಲಿಯ ಮುಖ್ಯ ಸೇನಾಧಿಪತಿಗಳೂ ಪ್ರಾಂತಾಧಿಪತಿಗಳೂ ರಾಜರೂ ಅನೇಕ ಉಂಬಳಿಗಳನ್ನು ಹಾಕಿಕೊಟ್ಟಿದ್ದಾರೆ. ೧೧೮೮ ರಿಂದ ೧೨೧೧ ರ ವರೆಗೆ ಹಾನಗಲ್ಲಿನಲ್ಲಿ ಆಳುತ್ತಿದ್ದ ಕದಂಬರಾಜನಾದ ಕಾಮದೇವನು ಒಂದು ದಿನ ಅಬ್ಬಲೂರಿಗೆ ಹೋದಾಗ್ಗೆ ಏಕಾಂತದ ರಾಮಯ್ಯನನ್ನು ತನ್ನ ರಾಜಧಾನಿಗೆ ಕರೆದುಕೊಂಡು ಹೋಗಿ, ಮಲ್ಲವಳ್ಳಿ ಎಂಬ ಗ್ರಾಮವನ್ನು ಅವನಿಗೆ ಉಂಬಳಿ ಹಾಕಿಕೊಟ್ಟನು. ಕೇಶಿರಾಜನು ಈ ಭಾಗದಲ್ಲಿ ಬಹು ಪ್ರಸಿದ್ಧನಾದ ಸೇನಾಪತಿಯು, ಮತ್ತು ಅತ್ಯಂತ ಪರಾಕ್ರಮಿಯು. ಹಾಗೆಯೇ ಕುಮಾರ ಬೊಮ್ಮರಸನೆಂಬ ಸೇನಾನಾಯಕನು 'ಚಾಲುಕ್ಯ ರಾಜ್ಯ ಪ್ರತಿಷ್ಠಾಪಕ"ನೆಂದು ಹೆಸರ್ಗೊಂಡಿದ್ದಾನೆ. ಈ ಉಭಯತರು ತಮ್ಮ ರಾಜನಾದ ಚಾಲುಕ್ಯ ತ್ರಿಭುವನಮಲ್ಲ ಸೋಮೇಶ್ವರ ದೇವರೊಡನೆ ಅಬ್ಬಲೂರಿಗೆ ಬಂದಾಗ್ಗೆ ಅವರು ಏಕಾಂತದ ರಾಮಯ್ಯನನ್ನು ತಮ್ಮಲ್ಲಿಗೆ ಬರಮಾಡಿಕೊಂಡು ಅವನನ್ನು ಇದಿರ್ಗೊಂಡು ಅರಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿ ಅವನನ್ನು ಪೂಜಿಸಿದ್ದಾರೆ, ಮತ್ತು ಪುರಾತನರಾದ ಮತ್ತು ನೂತನರಾದ ಶಿವಭಕ್ತರ ಗುಣಸ್ತವನದಲ್ಲಿ ಕಾಲಕಳೆದಿದ್ದಾರೆ. ಈ ಪ್ರಕಾರ ಈ ಶಾಸನದಲ್ಲಿ ವರ್ಣಿಸಲ್ಪಟ್ಟಿದೆ. ಈ ಸಂಗತಿಗಳು ಏನು ತೋರಿಸುತ್ತವೆ ? ಅವು ವೀರಶೈವ ಶರಣರ ಮತ್ತು ವಚನಕಾರರ ವಿಚಾ

ರಗಳು ಆಗಿನ ರಾಜರಲ್ಲಿಯೂ ಸೇನಾಪತಿಗಳಲ್ಲಿಯೂ ಸಾಮಾನ್ಯ ಜನರಲ್ಲಿಯೂ ನಿಬಿಡವಾಗಿ ಪ್ರಸಾರ ಹೊಂದಿದ್ದವೆಂಬುದನ್ನು ತೋರಿಸುತ್ತವೆ. ಇದು ಬಸವೇಶ್ವರನಿಗೆ ಸಮೀಪವಾಗಿದ್ದ ಕಾಲವು. ಆಗ ವಚನ ಶಾಸ್ತ್ರದ ಉಚ್ಚ ವಿಚಾರಗಳು ಜನರಲ್ಲೆಲ್ಲ ಪೂರ್ಣವಾಗಿ ನೆಲೆಗೊಂಡಿದ್ದವು. ಆದ್ದರಿಂದ ಅವು ಇಡೀ ನಾಡಿನಲ್ಲಿ ಪಸರಿಸಿ, ಸ್ತ್ರೀಯರನ್ನೂ ಪುರುಷರನ್ನೂ ರಾಜರನ್ನೂ ಮಾಂಡಲಿಕರನ್ನೂ ಎಲ್ಲ ಜಾತಿಯವರನ್ನೂ ವೀರಶೈವತ್ವಕ್ಕೆ ಎಳೆದವೆಂಬುದು ಸ್ಪಷ್ಟವಾಗುತ್ತಿದೆ. ಹಿಂದುಸ್ತಾನವಲ್ಲಿ ಇಂಥ ಕಾರ್ಯವನ್ನು ಮಾಡಿದ ಧರ್ಮಗಳಲ್ಲಿ ವೀರಶೈವ ಧರ್ಮವು ಬಹಳ ಮಹತ್ವದ್ದದೆ.

---

## ೨ನೇ ಪ್ರಕರಣ.

### ಗುತ್ತರಸರು.

ಈಗಿನ ಹಾವೇರಿ ತಾಲೂಕಿನಲ್ಲಿ ಗುತ್ತಲ ಎಂಬ ಹೆಸರಿನ ಗ್ರಾಮವಿದೆ. ಅದರ ಪುರಾತನ ಹೆಸರು 'ಗುತ್ತವೊಳಲ್' ಎಂದಿತ್ತು. ಗುತ್ತ ವಂಶದ ರಾಜರು ಆಳಿದ ಪಟ್ಟಣವೆಂದು ಇದಕ್ಕೆ ಈ ಹೆಸರು ಬಂದಿದೆ. ಗುತ್ತರಸರ ಬಿರುದುಗಳಲ್ಲಿ 'ಚಂದ್ರಗುಪ್ತಾನ್ವಯ' 'ಉಜ್ಜಯಿನಿ ಪುರವರಾಧೀಶ್ವರ' 'ಪನ್ನಿರ್ಬರ ಗಂಡ' ಎಂಬವುಗಳಿವೆ. ಚಂದ್ರಗುಪ್ತಾನ್ವಯ ಇದರಿಂದ ಇವರು ಪಾಟಲೀಪುತ್ರವನ್ನು ಬಿಟ್ಟು ಮೈಸೂರುಸೀಮೆಗೆ ಬಂದು ಶ್ರವಣಬೆಳ್ಗೊಳದಲ್ಲಿ ವಾಸಮಾಡಿದ ಚಂದ್ರಗುಪ್ತನ ವಂಶದವರಿರಬಹುದೆಂದು ಊಹಿಸಲ್ಪಟ್ಟಿದೆ. ಇವರು ಕಲಚೂರ್ಯ ರಾಜವಂಶದವರ ಸಮಕಾಲೀನರಿದ್ದು ಮುಂದೆ ದೇವಗಿರಿ ಯಾದವ ರಾಜರಿಗೆ ಮಾಂಡಲಿಕರಾಗಿ ಕಡೆಗೆ ಹೊಯಿಸಳರಿಂದ ಗೆಲ್ಲಲ್ಪಟ್ಟರು. ಅವರು ಧಾರವಾಡ ಜಿಲ್ಲೆಯ ದಕ್ಷಿಣ ಭಾಗ ಅಂದರೆ ಹಾವೇರಿ, ರಾಣೇಬಿನ್ನೂರು, ಹಾನಗಲ್ಲ ಈ ತಾಲೂಕುಗಳಿದ್ದ ಭಾಗಗಳನ್ನು ಆಳಿದ್ದಾರೆ. ಇವರ ವಂಶವೃಕ್ಷವು ಕೆಳಗೆ ಕೊಡಲ್ಪಟ್ಟಿದೆ.




ಇವರಲ್ಲಿ ೨ನೆಯ ವಿಕ್ರಮಾದಿತ್ಯನಿಂದ ಅಂದರೆ ೧೨ನೆಯ ಶತಮಾನದ ಮಧ್ಯದಿಂದ ಮೂರು ತಲಾಂತರದ ವರೆಗೆ ಈ ರಾಜರು ವೀರಶೈವ ಧರ್ಮಾನುಯಾಯಿಗಳಾಗಿದ್ದರು.

ಈ ೨ನೆಯ ವೀರ ವಿಕ್ರಮಾದಿತ್ಯನ ಕಾಲದಲ್ಲಿ ಮತ್ತು ಅವನ ಕಿಂತಲೂ ಕೆಲವು ಕಾಲ ಹಿಂದೆ ಈ ಭಾಗದಲ್ಲಿ ವೀರಶೈವ ಧರ್ಮದ ಚಳವಳಿಯು ಪ್ರಾರಂಭವಾಗಿತ್ತು. ಹೇಗೆ ಬಳ್ಳಿಗಾವಿ ಪಟ್ಟಣದ ದಕ್ಷಿಣ ಭಾಗದಲ್ಲಿ ಅಲ್ಲಮಪ್ರಭು, ಮಹಾದೇವಿಯಕ್ಕ, ಅನುಮಿಷ, ಸತ್ಯಕ್ಕ ಮೊದಲಾದ ಶಿವಶರಣ ಶರಣಿಯರು ಉದ್ಭವಿಸಿದರೋ, ಹಾಗೆಯೇ ಈ ಭಾಗದ ಉತ್ತರ ಮತ್ತು ಈಶಾನ್ಯಕ್ಕಿರುವ ಭಾಗಗಳಲ್ಲಿ ಅಂದರೆ ಗುತ್ತರಸರ ರಾಜ್ಯದಲ್ಲಿ ವೀರಶೈವಧರ್ಮದ ಚಳವಳಿಯು ಉಂಟಾಗಿತ್ತು. ರೇವಣಸಿದ್ಧೇಶ್ವರನು ವೀರಶೈವ ಸಮಾಜದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ ಬೋಧಕನು ಮತ್ತು ಧರ್ಮೋದ್ಧಾರಕನು. ಈತನು ಮಂಗಳವಾಡದಲ್ಲಿದ್ದು

ಬಿಜ್ಜಳನ ಆಸ್ಥಾನದಲ್ಲಿ ತನ್ನ ಮಹತ್ವವನ್ನು ಮೊದಲು ತೋರಿಸಿ ಆಮೇಲೆ ಅವನು 'ವೈಜಯಂತಿ' ಅಂದರೆ ಈಗಿನ ಬನವಾಸಿಗೆ ಬಂದು ಈ ಭಾಗದಲ್ಲಿ ರಾಜ್ಯವಾಳುತ್ತಿದ್ದ ಕದಂಬ ರಾಜನಲ್ಲಿಗೆ ಬಂದು ಅಲ್ಲಿ ಅನೇಕ ಮಹತ್ವಗಳನ್ನು ಮಾಡಿದನು. (ಹರಿಹರನ ರೇವಣಸಿದ್ಧನ ರಗಳೆ) ಅವನು ಇಲ್ಲಿಯೇ ಕೆಲವು ಕಾಲ ವಾಸಿಸಿದನು. ಹಾವೇರಿಗೆ ಸಮೀಪವಾಗಿರುವ ಕಬ್ಬೂರು ಗ್ರಾಮದ ನೆರೆಯಲ್ಲಿರುವ ರೇವಣಸಿದ್ಧೇಶ್ವರ ಕ್ಷೇತ್ರವೇ ಇದಕ್ಕೆ ಗುರುತಾಗಿದೆ. ಅವನ ಕಾಲದಲ್ಲಿ ಧರ್ಮಜಾಗ್ರತಿಯ ಪ್ರಯತ್ನಗಳು ಇಲ್ಲಿ ಜರಿಗಿದವು. ಮುಂದೆ ಬಸವೇಶ್ವರನು ಕೂಡಲ ಸಂಗಮ ಕ್ಷೇತ್ರದಲ್ಲಿ ಐಕ್ಯವಾದ ಬಳಿಕ ಅವನ ಮಗನಾದ ಬಾಲ ಸಂಗಮನು ಕಾಗಿನೆಲ್ಲಿ ಗ್ರಾಮದಲ್ಲಿ ಬಂದು ವಾಸಮಾಡಿದನೆಂದು ಇಲ್ಲಿ ಐತಿಹ್ಯಗಳಿವೆ. ಆ ಗ್ರಾಮದಲ್ಲಿ ಈ ಸಂಗಮನ ದೇವಾಲಯವಿದ್ದು ಇದು ಈ ಬಾಲಸಂಗಯ್ಯನದೆಂದು ಹೇಳಲ್ಪಡುತ್ತಿದೆ. ಆದರೆ ಪ್ರಸಿದ್ಧನಾದ ಏಕಾಂತದ ರಾಮಯ್ಯನು ಇದೇ ಭಾಗದಲ್ಲಿ ವಾಸಮಾಡಿ ಧರ್ಮಜಾಗ್ರತಿಯನ್ನು ಮಾಡಿದ್ದಾನೆ. ಅವನಿದ್ದ ಅಬ್ಬಲೂರು ಗ್ರಾಮವು ಗುತ್ತಲದಿಂದ ೨೫ ಮೈಲು ದೂರವಿದೆ. ವೀರಶೈವ ಶಿವಶರಣರ ಈ ಚಳವಳಿಗಳ ಪರಿಣಾಮವಾಗಿ ಮೊದಲು ಜೈನರಾಗಿದ್ದ ಗುತ್ತರಸರು ವೀರಶೈವಧರ್ಮವನ್ನು ಸ್ವೀಕರಿಸಿದರು. ೨ನೆಯ ವಿಕ್ರಮಾದಿತ್ಯನು 'ಪರಶುಲಿಂಗ ಗಳಗನಾಥಪಾದ ಪದ್ಮಾರಾಧಕ' ಎಂದು ಹೇಳಲ್ಪಟ್ಟಿದ್ದಾನೆ. ಮುಂದೆ ಅವನ ಮಗನಾದ ೩ನೆಯ ವಿಕ್ರಮಾದಿತ್ಯನು ಅತ್ಯಂತ ಪ್ರಸಿದ್ಧನಾದ ಶಿವದೇವನಿಂದ ವೀರಶೈವ ಧರ್ಮದೀಕ್ಷೆಯನ್ನು ಹೊಂದಿ ಅವನೂ ಅವನ ತರುವಾಯ ಬಂದ ರಾಜರೂ ಈ ಧರ್ಮವನ್ನು ವಿಶೇಷವಾಗಿ ಪೋಷಿಸುತ್ತ ಬಂದರು.

ಶಿವದೇವನು ವೀರಶೈವ ಶಿವಶರಣರಲ್ಲಿ ಬಹು ಮಹತ್ವಿಕನಾಗಿದ್ದಾನೆ. ಅವನು ಗುತ್ತರಸರಿಂದ ಮನ್ನಣೆಯನ್ನು ಹೊಂದಿ ೧೨೬ರಿಂದ ಮುಂದೆ ಅನೇಕ ವರ್ಷಗಳ ವರೆಗೆ ಚೌಡದಾನಪುರದಲ್ಲಿ ವಾಸವಾಗಿದ್ದನು. ಈ ಗ್ರಾಮವು ತುಂಗಭದ್ರೆಯು ಪಶ್ಚಿಮವಾಹಿನಿಯಾಗಿ ಹರಿಯುತ್ತಿರುವ ಸ್ಥಳದಲ್ಲಿದ್ದು ಪುಣ್ಯ ಕ್ಷೇತ್ರವೆಂದು ಭಾವಿಸಲ್ಪಟ್ಟಿರುತ್ತದೆ. ಈ ಗ್ರಾಮದಲ್ಲಿ ಗುತ್ತರಸರ ಅನೇಕ ಶಿಲಾಶಾಸನಗಳಿವೆ. ಶಿವದೇವನು ಮೂರನೆಯ ವಿಕ್ರಮಾದಿತ್ಯನಿಗೆ[೧] ಲಿಂಗಧಾರಣೆ ಮಾಡಿದ್ದು ಇಲ್ಲಿಯ ಶಿಲಾಶಾಸನದಲ್ಲಿ ಹೇಳ

(೧) ಶಿವಾನುಭವ ೪-೬-೧೬೫

ಲ್ಪಟ್ಟಿವೆ. ವಿಕ್ರಮಾದಿತ್ಯನಿಗೆ ವೈಳಲದೇವಿ ಎಂಬ ಹೆಂಡತಿಯು ಇದ್ದು ಅವ -ರಿಗೆ ಒನೆಯ ಗುತ್ತರಸನೆಂಬ ಮಗನಿದ್ದನು. ಅವನು ಸಹ ಶಿವದೇವನಿಗೆ ಶಿಷ್ಯನಾಗಿ ವೀರಶೈವ ಧರ್ಮವನ್ನು ಪೋಷಿಸುವವನಾಗಿದ್ದನು. ಶಿವ ದೇವನು ಬಸವೇಶ್ವರನ ಅವತಾರವೆಂತಲೂ 'ಘನತರಶಿವಲಿಂಗ ತತ್ವ' ವನ್ನು ಅರುಹುವವನೆಂತಲೂ 'ಪರದೈವ ಮಾನಮರ್ದನ'ನೆಂತಲೂ ಈ ಶಾಸನಗಳಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಈ ಕಾಲದಲ್ಲಿ ಇವನು ಈ ಭಾಗದಲ್ಲೆಲ್ಲ ವೀರಶೈವ ಧರ್ಮವನ್ನು ಪ್ರಸಾರಮಾಡಿದನೆಂದು ತಿಳಿದು ಬರುತ್ತದೆ. ಶಿವದೇವನು ವಚನಶಾಸ್ತ್ರವನ್ನು ಚನ್ನಾಗಿ ಬಲ್ಲವನಾಗಿ ರಾಜ ನಿಗೆ ಅದನ್ನು ಬೋಧಿಸಿದ್ದರಿಂದಲೇ ರಾಜನು ಇಲ್ಲಿಯ ಒಂದು ಶಿಲಾ ಶಾಸನದಲ್ಲಿ ವಚನಗಳಲ್ಲಿಯ ಬೋಧೆಯನ್ನು ಕಟಿಸಿದ್ದಾನೆ. ಅದರಲ್ಲಿ ವೀರ ಶೈವಮತತತ್ವಗಳು ವಿಸ್ತಾರವಾಗಿ ನಿರೂಪಿಸಲ್ಪಟ್ಟಿರುತ್ತವೆ. ಇಲ್ಲಿ ನಿರೂಪಿ ಸಿದ ವಿಷಯಗಳಲ್ಲಿ ನೈತಿಕ ಬೋಧೆಗಳು, ದಾಸೋಹಭಾವ, ವಿಭೂ ತಿಯ ಮಹತ್ವ, ಶಿವತತ್ವಾನುಭಾವ ಇವೇ ಮೊದಲಾದ ವಿಷಯಗಳು ಹೇಳ ಲ್ಪಟ್ಟಿವೆ. ಒಂದು ಕಡೆಗೆ ಹೇಳಿರುವದೇನಂದರೆ:-"ಶಿವನಂ ತೋರುವ ಮಾರ್ಗ ಶಿವಸದಾಚಾರಂಗಳಾಚಾರವೀ। ಶಿವಸಂಯೋಗವೇ ಯೋಗ ನಿತ್ಯ ಶಿವ ಪೂಜಾಕರ್ಮವೇ ಕರ್ಮವೀ। ಶಿವನೇ ದೇವನನ್ಯ ವಿಷಯಂ ಬೇರಿಲ್ಲ ಹೊಲ್ಲೆಂದು ಶ್ರೀ ಶಿವದೇವಪ್ರ। ಭುವೆತ್ತಿದಂ ಧ್ವಜಪತಾಕೋದ್ದಂಡಮಾ ವಂಡಮುಂ" ಎಂದು ಹೇಳಲ್ಪಟ್ಟಿದೆ." ಇನ್ನೊಂದು ಕಡೆಗೆ "ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದಂ ಬೆಸಸಿದನಾ ಸಂಗನಬಸವಂ ಬೆಸಸೆ ಮನಂಗೊಂಡರ್ಚಿಸುವನುಭಯ ಲಿಂಗವ ಮುದದಿಂ" ಎಂದು ಬರಿ ಯಲ್ಪಟ್ಟಿದೆ. ಈ ರೀತಿ ಶಿಲಾಶಾಸನಗಳಲ್ಲಿ ಬೋಧಮಾಡುವ ಕ್ರಮವನ್ನು ಕೈಕೊಂಡವನು ಮೊದಲು ಅಶೋಕ ರಾಜನು. ಅದೇ ಪದ್ಧತಿಯನ್ನು ಈ ಗುತ್ತರಸರೂ ಇಲ್ಲಿ ಸ್ವೀಕರಿಸಿದ್ದಾರೆ. ವೀರಶೈವವು ಎಲ್ಲರ ಧರ್ಮ ವಾಗಿದೆ. ಜನಸಮುದಾಯದಲ್ಲಿ ಯಾವ ಭೇದವನ್ನಿಡದೆ ಪ್ರಸಾರಮಾ ಡುವದೇ ಅದರ ವೈಶಿಷ್ಟ್ಯವು. ಗುತ್ತರಸರು ಶಿವಶರಣರ ಈ ರೀತಿ ಯನ್ನನುಸರಿಸಿ ತಮ್ಮ ರಾಜ್ಯದಲ್ಲಿ ಆಚರಿಸಿದ್ದು ಕಂಡುಬರುತ್ತದೆ.

**ಕನ್ನಾದೇವಿ:**— ವೀರಶೈವ ಸಮಾಜದಲ್ಲಿ ಸ್ತ್ರೀಯರು ಪುರುಷ ರಷ್ಟೇ ಅಧಿಕಾರವುಳ್ಳವರಿದ್ದಾರೆ. ಆದ್ದರಿಂದ ಅವರಲ್ಲಿ ಮಹಾದೇವಿಯಕ್ಕ, ಲಿಂಗಮ್ಮ, ರೆಮ್ಮವ್ವೆ ಮೊದಲಾದ ಅನೇಕ ಸ್ತ್ರೀವಚನಕಾರರೂ ಶರಣಿ

ರಗಳು ಆಗಿನ ರಾಜರಲ್ಲಿಯೂ ಸೇನಾಪತಿಗಳಲ್ಲಿಯೂ ಸಾಮಾನ್ಯ ಜನರಲ್ಲಿಯೂ ನಿಬಿಡವಾಗಿ ಪ್ರಸಾರ ಹೊಂದಿದ್ದವೆಂಬುದನ್ನು ತೋರಿಸುತ್ತವೆ. ಇದು ಬಸವೇಶ್ವರನಿಗೆ ಸಮೀಪವಾಗಿದ್ದ ಕಾಲವು. ಆಗ ವಚನ ಶಾಸ್ತ್ರದ ಉಚ್ಚ ವಿಚಾರಗಳು ಜನರಲ್ಲೆಲ್ಲ ಪೂರ್ಣವಾಗಿ ನೆಲೆಗೊಂಡಿದ್ದವು. ಆದ್ದರಿಂದ ಅವು ಇಡೀ ನಾಡಿನಲ್ಲಿ ಪಸರಿಸಿ, ಸ್ತ್ರೀಯರನ್ನೂ ಪುರುಷರನ್ನೂ ರಾಜರನ್ನೂ ಮಾಂಡಲಿಕರನ್ನೂ ಎಲ್ಲ ಜಾತಿಯವರನ್ನೂ ವೀರಶೈವತ್ವಕ್ಕೆ ಎಳೆದವೆಂಬುದು ಸ್ಪಷ್ಟವಾಗುತ್ತಿದೆ. ಹಿಂದುಸ್ಥಾನದಲ್ಲಿ ಇಂಥ ಕಾರ್ಯವನ್ನು ಮಾಡಿದ ಧರ್ಮಗಳಲ್ಲಿ ವೀರಶೈವ ಧರ್ಮವು ಬಹಳ ಮಹತ್ವದ್ದದೆ.

---

## ೨ನೇ ಪ್ರಕರಣ.

### ಗುತ್ತರಸರು.

ಈಗಿನ ಹಾವೇರಿ ತಾಲೂಕಿನಲ್ಲಿ ಗುತ್ತಲ ಎಂಬ ಹೆಸರಿನ ಗ್ರಾಮವಿದೆ. ಅದರ ಪುರಾತನ ಹೆಸರು 'ಗುತ್ತವೊಳಲ್' ಎಂದಿತ್ತು. ಗುತ್ತ ವಂಶದ ರಾಜರು ಆಳಿದ ಪಟ್ಟಣವೆಂದು ಇದಕ್ಕೆ ಈ ಹೆಸರು ಬಂದಿದೆ. ಗುತ್ತರಸರ ಬಿರುದುಗಳಲ್ಲಿ 'ಚಂದ್ರಗುಪ್ತಾನ್ವಯ' 'ಉಜ್ಜಯಿನಿ ಪುರವರಾಧೀಶ್ವರ' 'ಪನ್ನಿರ್ಬರ ಗಂಡ' ಎಂಬವುಗಳಿವೆ. ಚಂದ್ರಗುಪ್ತಾನ್ವಯ ಇದರಿಂದ ಇವರು ಪಾಟಲೀಪುತ್ರವನ್ನು ಬಿಟ್ಟು ಮೈಸೂರುಸೀಮೆಗೆ ಬಂದು ಶ್ರವಣಬೆಳ್ಗೊಳದಲ್ಲಿ ವಾಸಮಾಡಿದ ಚಂದ್ರಗುಪ್ತನ ವಂಶದವರಿರಬಹುದೆಂದು ಊಹಿಸಲ್ಪಟ್ಟಿದೆ. ಇವರು ಕಲಚೂರ್ಯ ರಾಜವಂಶದವರ ಸಮಕಾಲೀನರಿದ್ದು ಮುಂದೆ ದೇವಗಿರಿ ಯಾದವ ರಾಜರಿಗೆ ಮಾಂಡಲಿಕರಾಗಿ ಕಡೆಗೆ ಹೊಯಿಸಳರಿಂದ ಗೆಲ್ಲಲ್ಪಟ್ಟರು. ಆವರು ಧಾರವಾಡ ಜಿಲ್ಲೆಯ ದಕ್ಷಿಣ ಭಾಗ ಅಂದರೆ ಹಾವೇರಿ, ರಾಣೇಬಿನ್ನೂರು, ಹಾನಗಲ್ಲ ಈ ತಾಲೂಕುಗಳಿದ್ದ ಭಾಗಗಳನ್ನು ಆಳಿದ್ದಾರೆ. ಇವರ ವಂಶವೃಕ್ಷವು ಕೆಳಗೆ ಕೊಡಲ್ಪಟ್ಟಿದೆ.




ಇವರಲ್ಲಿ ೨ನೆಯ ವಿಕ್ರಮಾದಿತ್ಯನಿಂದ ಅಂದರೆ ೧೨ನೆಯ ಶತಮಾನದ ಮಧ್ಯದಿಂದ ಮೂರು ತಲಾಂತರದ ವರೆಗೆ ಈ ರಾಜರು ವೀರಶೈವ ಧರ್ಮಾನುಯಾಯಿಗಳಾಗಿದ್ದರು.

ಈ ೨ನೆಯ ವೀರ ವಿಕ್ರಮಾದಿತ್ಯನ ಕಾಲದಲ್ಲಿ ಮತ್ತು ಅವನ ಕಿಂತಲೂ ಕೆಲವು ಕಾಲ ಹಿಂದೆ ಈ ಭಾಗದಲ್ಲಿ ವೀರಶೈವ ಧರ್ಮದ ಚಳವಳಿಯು ಪ್ರಾರಂಭವಾಗಿತ್ತು. ಹೇಗೆ ಬಳ್ಳಿಗಾವಿ ಪಟ್ಟಣದ ದಕ್ಷಿಣ ಭಾಗದಲ್ಲಿ ಅಲ್ಲಮಪ್ರಭು, ಮಹಾದೇವಿಯಕ್ಕ, ಅನುಮಿಷ, ಸತ್ಯಕ್ಕ ಮೊದಲಾದ ಶಿವಶರಣ ಶರಣಿಯರು ಉದ್ಭವಿಸಿದರೋ, ಹಾಗೆಯೇ ಈ ಭಾಗದ ಉತ್ತರ ಮತ್ತು ಈಶಾನ್ಯಕ್ಕಿರುವ ಭಾಗಗಳಲ್ಲಿ ಅಂದರೆ ಗುತ್ತರಸರ ರಾಜ್ಯದಲ್ಲಿ ವೀರಶೈವಧರ್ಮದ ಚಳವಳಿಯು ಉಂಟಾಗಿತ್ತು. ರೇವಣಸಿದ್ಧೇಶ್ವರನು ವೀರಶೈವ ಸಮಾಜದಲ್ಲಿ ಬಹು ಪ್ರಖ್ಯಾತಿಯನ್ನು ಹೊಂದಿದ ಬೋಧಕನು ಮತ್ತು ಧರ್ಮೋದ್ಧಾರಕನು. ಈತನು ಮಂಗಳವಾಡದಲ್ಲಿದ್ದು

ಬಿಜ್ಜಳನ ಆಸ್ಥಾನದಲ್ಲಿ ತನ್ನ ಮಹತ್ವವನ್ನು ಮೊದಲು ತೋರಿಸ್ಥಿ ಆಮೇಲೆ ಅವನು 'ವೈಜಯಂತಿ' ಅಂದರೆ ಈಗಿನ ಬನವಾಸಿಗೆ ಬಂದು ಈ ಭಾಗದಲ್ಲಿ ರಾಜ್ಯವಾಳುತ್ತಿದ್ದ ಕದಂಬ ರಾಜನಲ್ಲಿಗೆ ಬಂದು ಅಲ್ಲಿ ಅನೇಕ ಮಹತ್ವಗಳನ್ನು ಮಾಡಿದನು. (ಹರಿಹರನ ರೇವಣಸಿದ್ಧನ ರಗಳೆ) ಅವನು ಇಲ್ಲಿಯೇ ಕೆಲವು ಕಾಲ ವಾಸಿಸಿದನು. ಹಾವೇರಿಗೆ ಸಮೀಪವಾಗಿರುವ ಕಬ್ಬೂರು ಗ್ರಾಮದ ನೆರೆಯಲ್ಲಿರುವ ರೇವಣಸಿದ್ಧೇಶ್ವರ ಕ್ಷೇತ್ರವೇ ಇದಕ್ಕೆ ಗುರುತಾಗಿದೆ. ಅವನ ಕಾಲದಲ್ಲಿ ಧರ್ಮಜಾಗ್ರತಿಯ ಪ್ರಯತ್ನಗಳು ಇಲ್ಲಿ ಜರಿಗಿದವು. ಮುಂದೆ ಬಸವೇಶ್ವರನು ಕೂಡಲ ಸಂಗಮ ಕ್ಷೇತ್ರದಲ್ಲಿ ಐಕ್ಯವಾದ ಬಳಿಕ ಅವನ ಮಗನಾದ ಬಾಲ ಸಂಗಮನು ಕಾಗಿನೆಲ್ಲಿ ಗ್ರಾಮದಲ್ಲಿ ಬಂದು ವಾಸಮಾಡಿದನೆಂದು ಇಲ್ಲಿ ಐತಿಹ್ಯಗಳಿವೆ. ಆ ಗ್ರಾಮದಲ್ಲಿ ಈ ಸಂಗಮನ ದೇವಾಲಯವಿದ್ದು ಇದು ಈ ಬಾಲಸಂಗಯ್ಯನದೆಂದು ಹೇಳಲ್ಪಡುತ್ತಿದೆ. ಆದರೆ ಪ್ರಸಿದ್ಧನಾದ ಏಕಾಂತದ ರಾಮಯ್ಯನು ಇದೇ ಭಾಗದಲ್ಲಿ ವಾಸಮಾಡಿ ಧರ್ಮಜಾಗ್ರತಿಯನ್ನು ಮಾಡಿದ್ದಾನೆ. ಅವನಿದ್ದ ಅಬ್ಬಲೂರು ಗ್ರಾಮವು ಗುತ್ತಲದಿಂದ ೨೫ ಮೈಲು ದೂರವಿದೆ. ವೀರಶೈವ ಶಿವಶರಣರ ಈ ಚಳವಳಿಗಳ ಪರಿಣಾಮವಾಗಿ ಮೊದಲು ಜೈನರಾಗಿದ್ದ ಗುತ್ತರಸರು ವೀರಶೈವಧರ್ಮವನ್ನು ಸ್ವೀಕರಿಸಿದರು. ೨ನೆಯ ವಿಕ್ರಮಾದಿತ್ಯನು 'ಪರಶುಲಿಂಗ ಗಳಗನಾಥಪಾದ ಪದ್ಮಾರಾಧಕ' ಎಂದು ಹೇಳಲ್ಪಟ್ಟಿದ್ದಾನೆ. ಮುಂದೆ ಅವನ ಮಗನಾದ ೩ನೆಯ ವಿಕ್ರಮಾದಿತ್ಯನು ಅತ್ಯಂತ ಪ್ರಸಿದ್ಧನಾದ ಶಿವದೇವನಿಂದ ವೀರಶೈವ ಧರ್ಮದೀಕ್ಷೆಯನ್ನು ಹೊಂದಿ ಅವನೂ ಅವನ ತರುವಾಯ ಬಂದ ರಾಜರೂ ಈ ಧರ್ಮವನ್ನು ವಿಶೇಷವಾಗಿ ಪೋಷಿಸುತ್ತ ಬಂದರು.

ಶಿವದೇವನು ವೀರಶೈವ ಶಿವಶರಣರಲ್ಲಿ ಬಹು ಮಹತ್ವಿಕನಾಗಿದ್ದಾನೆ. ಅವನು ಗುತ್ತರಸರಿಂದ ಮನ್ನಣೆಯನ್ನು ಹೊಂದಿ ೧೨೬೬ರಿಂದ ಮುಂದೆ ಅನೇಕ ವರ್ಷಗಳ ವರೆಗೆ ಚೌಡದಾನಪುರದಲ್ಲಿ ವಾಸವಾಗಿದ್ದನು. ಈ ಗ್ರಾಮವು ತುಂಗಭದ್ರೆಯು ಪಶ್ಚಿಮವಾಹಿನಿಯಾಗಿ ಹರಿಯುತ್ತಿರುವ ಸ್ಥಳದಲ್ಲಿದ್ದು ಪುಣ್ಯ ಕ್ಷೇತ್ರವೆಂದು ಭಾವಿಸಲ್ಪಟ್ಟಿರುತ್ತದೆ. ಈ ಗ್ರಾಮದಲ್ಲಿ ಗುತ್ತರಸರ ಅನೇಕ ಶಿಲಾಶಾಸನಗಳಿವೆ. ಶಿವದೇವನು ಮೂರನೆಯ ವಿಕ್ರಮಾದಿತ್ಯನಿಗೆ[೧] ಲಿಂಗಧಾರಣೆ ಮಾಡಿದ್ದು ಇಲ್ಲಿಯ ಶಿಲಾಶಾಸನದಲ್ಲಿ ಹೇಳ

(೧) ಶಿವಾನುಭವ ೪–೬–೧೬೫

ಲ್ಪಟ್ಟಿವೆ. ವಿಕ್ರಮಾದಿತ್ಯನಿಗೆ ಮೈಳಲದೇವಿ ಎಂಬ ಹೆಂಡತಿಯು ಇದ್ದು ಅವರಿಗೆ ಇನೆಯ ಗುತ್ತರಸನೆಂಬ ಮಗನಿದ್ದನು. ಅವನು ಸಹ ಶಿವದೇವನಿಗೆ ಶಿಷ್ಯನಾಗಿ ವೀರಶೈವ ಧರ್ಮವನ್ನು ಪೋಷಿಸುವವನಾಗಿದ್ದನು. ಶಿವದೇವನು ಬಸವೇಶ್ವರನ ಅವತಾರವೆಂತಲೂ 'ಘನತರಶಿವಲಿಂಗ ತತ್ವ'ವನ್ನು ಅರುಹುವವನೆಂತಲೂ 'ಪರದೈವ ಮಾನಮರ್ದನ'ನೆಂತಲೂ ಈ ಶಾಸನಗಳಲ್ಲಿ ಹೇಳಲ್ಪಟ್ಟಿರುತ್ತದೆ. ಇದರಿಂದ ಈ ಕಾಲದಲ್ಲಿ ಇವನು ಈ ಭಾಗದಲ್ಲೆಲ್ಲ ವೀರಶೈವ ಧರ್ಮವನ್ನು ಪ್ರಸಾರಮಾಡಿದನೆಂದು ತಿಳಿದು ಬರುತ್ತದೆ. ಶಿವದೇವನು ವಚನಶಾಸ್ತ್ರವನ್ನು ಚನ್ನಾಗಿ ಬಲ್ಲವನಾಗಿ ರಾಜನಿಗೆ ಅದನ್ನು ಬೋಧಿಸಿದ್ದರಿಂದಲೇ ರಾಜನು ಇಲ್ಲಿಯ ಒಂದು ಶಿಲಾಶಾಸನದಲ್ಲಿ ವಚನಗಳಲ್ಲಿಯ ಬೋಧೆಯನ್ನು ಕಟಿಸಿದ್ದಾನೆ. ಅದರಲ್ಲಿ ವೀರಶೈವಮತತತ್ವಗಳು ವಿಸ್ತಾರನಾಗಿ ನಿರೂಪಿಸಲ್ಪಟ್ಟಿರುತ್ತವೆ. ಇಲ್ಲಿ ನಿರೂಪಿಸಿದ ವಿಷಯಗಳಲ್ಲಿ ನೈತಿಕ ಬೋಧೆಗಳು, ದಾಸೋಹಭಾವ, ವಿಭೂತಿಯ ಮಹತ್ವ, ಶಿವತತ್ವಾನುಭಾವ ಇವೇ ಮೊದಲಾದ ವಿಷಯಗಳು ಹೇಳಲ್ಪಟ್ಟಿವೆ. ಒಂದು ಕಡೆಗೆ ಹೇಳಿರುವದೇನಂದರೆ:-"ಶಿವನಂ ತೋರುವ ಮಾರ್ಗ ಶಿವಸದಾಚಾರಂಗಳಾಚಾರವೀ। ಶಿವಸಂಯೋಗವೇ ಯೋಗ ನಿತ್ಯ ಶಿವಪೂಜಾಕರ್ಮವೇ ಕರ್ಮವೀ। ಶಿವನೇ ದೇವನನ್ಯ ವಿಷಯಂ ಬೇರಿಲ್ಲ ಹೊಲ್ಲೆಂದು ಶ್ರೀ ಶಿವದೇವಪ್ರ। ಭುವೆತ್ತಿದಂ ಧ್ವಜಪತಾಕೋದ್ದಂಡಮಾದಂಡಮುಂ" ಎಂದು ಹೇಳಲ್ಪಟ್ಟಿದೆ." ಇನ್ನೊಂದು ಕಡೆಗೆ "ಲಿಂಗಕ್ಕೆ ಜಂಗಮಕ್ಕೆ। ಪಿಂಗದೆ ದಾಸತ್ವ ಮಾಳ್ಪುದಂ ಬೆಸಸಿದನಾ ಸಂಗನಬಸವಂ ಬೆಸಸೆ ಮನಂಗೊಂಡರ್ಚಿಸುವನುಭಯ ಲಿಂಗವ ಮುದದಿಂ" ಎಂದು ಬರೆಯಲ್ಪಟ್ಟಿದೆ. ಈ ರೀತಿ ಶಿಲಾಶಾಸನಗಳಲ್ಲಿ ಬೋಧಮಾಡುವ ಕ್ರಮವನ್ನು ಕೈಕೊಂಡವನು ಮೊದಲು ಅಶೋಕ ರಾಜನು. ಅದೇ ಪದ್ಧತಿಯನ್ನು ಈ ಗುತ್ತರಸರೂ ಇಲ್ಲಿ ಸ್ವೀಕರಿಸಿದ್ದಾರೆ. ವೀರಶೈವವು ಎಲ್ಲರ ಧರ್ಮವಾಗಿದೆ. ಜನಸಮುದಾಯದಲ್ಲಿ ಯಾವ ಭೇದವನ್ನಿಡದೆ ಪ್ರಸಾರಮಾಡುವದೇ ಅದರ ವೈಶಿಷ್ಟ್ಯವು. ಗುತ್ತರಸರು ಶಿವಶರಣರ ಈ ರೀತಿಯನ್ನನುಸರಿಸಿ ತಮ್ಮ ರಾಜ್ಯದಲ್ಲಿ ಆಚರಿಸಿದ್ದು ಕಂಡುಬರುತ್ತದೆ.

**ಕನ್ನಾದೇವಿ:**— ವೀರಶೈವ ಸಮಾಜದಲ್ಲಿ ಸ್ತ್ರೀಯರು ಪುರುಷರಷ್ಟೇ ಅಧಿಕಾರವುಳ್ಳವರಿದ್ದಾರೆ. ಆದ್ದರಿಂದ ಅವರಲ್ಲಿ ಮಹಾದೇವಿಯಕ್ಕ, ಲಿಂಗಮ್ಮ, ರೆಮ್ಮವ್ವೆ ಮೊದಲಾದ ಅನೇಕ ಸ್ತ್ರೀವಚನಕಾರರೂ ಶರಣಿ

# ಶಿವಾನುಭವ.

ವರ್ಷ ೧೬ | ಅಗಸ್ಟ ೧೯೪೨ | ಸಂಚಿಕೆ ೧೧

## ವಿರಕ್ತರು.

ಲೇಖಕರು:— ವೇ. ಮೂ. ಪುರಾಣಿಕ ಬುದ್ಧಯ್ಯ ಸ್ವಾಮಿಗಳು ಧಾರವಾಡ

ವಿರಕ್ತರ ವಿಷಯವಾಗಿ ಅಥರ್ವಣಶಿಖಾ, ಬ್ರಹ್ಮಬಿಂದೂಪನಿಷತ್ತು, ಪರಮರಹಸ್ಯ, ಗೋರಕ್ಷ ಸಂಹಿತೆ, ಶಂಕರ ಸಂಹಿತೆ, ಉತ್ತರ ವಾತುಲತಂತ್ರ, ಅಚಿಂತ್ಯಾಗಮ, ವೀರಾಗಮ, ಸೂಕ್ಷ್ಮಾಗಮ, ಪಾರಮೇಶ್ವರಾಗಮ, ಸುಪ್ರಭೇದಾಗಮ, ಸಿದ್ಧಾಂತ ಶಿಖಾಮಣಿ, ಪ್ರಭುಲಿಂಗಲೀಲೆ, ಅನಾದಿ ವೀರಶೈವಸಾರಸಂಗ್ರಹ, ವೀರಶೈವಾಚಾರಪ್ರದೀಪಿಕೆ ಮುಂತಾದ ಪ್ರಮಾಣಭೂತ ಗ್ರಂಥಗಳಲ್ಲಿ ಪ್ರಬಲವಾದ ಪ್ರಮಾಣಗಳು ಹೇರಳವಾಗಿ ದೊರೆಯುವವಲ್ಲದೆ ಅವುಗಳೊಳಗಿನ ಹಲವು ಎಡೆಯಲ್ಲಿ ವಿರಕ್ತರ ಆಧಿಕ್ಯವೇ ಸೂಚಿತವಾಗಿರುವದು. ಇದರ ಸತ್ಯತೆಗಾಗಿ ಓದುಗರ ಸಲುವಾಗಿ ಒಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇವೆ. ಸೂಕ್ಷ್ಮಾಗಮದ ಹನ್ನೆರಡನೆಯ ಪಟಲದಲ್ಲಿ—

ಕ್ರಿಮಿಕೀಟ ಪತಂಗೇಭ್ಯಃ । ಪಶವಃ ಪ್ರಜ್ಞಯಾಧಿಕಾಃ ॥
ಪಶುಭ್ಯೋಽಪಿ ನರಾಶ್ರೇಷ್ಠಾ । ಸ್ತೇಷು ಶ್ರೇಷ್ಠಾ ದ್ವಿಜಾದಯಃ ॥
ದ್ವಿಜಾತಿಷ್ವಧಿಕಾ ವಿಪ್ರಾ । ವಿಪ್ರೇಷು ಕ್ರತುಬುದ್ಧಯಃ ॥
ಕ್ರತುಬುದ್ಧಿಷು ಕರ್ತಾರ । ಸ್ತೇಭ್ಯಃ ಸನ್ಯಾಸಿನೋಽಧಿಕಾಃ ॥
ತೇಭ್ಯೋ ವಿಜ್ಞಾನಿನಃ ಶ್ರೇಷ್ಠಾ । ಸ್ತೇಷು ಶಂಕರ ಪೂಜಕಾಃ ॥
ತೇಷು ಶ್ರೇಷ್ಠಾ ಮಹಾಭಾಗ । ಮಮ ಲಿಂಗಾಂಗ ಸಂಗಿನಃ ॥
ಲಿಂಗಾಂಗ ಸಂಗಿಷ್ವಧಿಕಃ । ಷಟ್‌ಸ್ಥಲ ಜ್ಞಾನವಾನ್ ಪುಮಾನ್ ॥
ತಸ್ಸಪಾಧಿಷ್ವಧಿಕೋಽನಾಸ್ತಿ । ತ್ರಿಷು ಲೋಕೇಷು ಸರ್ವದಾ ॥

ಎಂದರೆ "ಕ್ರಿಮಿಕೀಟಗಳಗಿಂತಲೂ ಪಶು ಶ್ರೇಷ್ಠ, ಪಶುಗಳಗಿಂತಲು ಮನುಷ್ಯ ಶ್ರೇಷ್ಠ, ಮನುಷ್ಯರಲ್ಲಿ ದ್ವಿಜ (ಬ್ರಾಹ್ಮಣ, ಕ್ಷತ್ರಿಯ, ವೈಶ) ಶ್ರೇಷ್ಠ ದ್ವಿಜರಲ್ಲಿ ಬ್ರಾಹ್ಮಣ ಶ್ರೇಷ್ಠ, ಬ್ರಾಹ್ಮಣರಲ್ಲಿ ಯಜ್ಞ ಮಾಡುವ ಇಚ್ಛೆಯುಳ್ಳ ಬ್ರಾಹ್ಮಣ ಶ್ರೇಷ್ಠ, ಅವರಲ್ಲಿ ನಿಜವಾಗಿ ಯಜ್ಞ ಮಾಡುವ ಬ್ರಾಹ್ಮಣ ಶ್ರೇಷ್ಠ, ಇವರಗಿಂತಲೂ ಸನ್ಯಾಸಿಗಳು ಶ್ರೇಷ್ಠ, ಸನ್ಯಾಸಿಗಳಗಿಂತಲೂ ಜ್ಞಾನಿ ಶ್ರೇಷ್ಠ, ಜ್ಞಾನಿಗಳಲ್ಲಿ ಶಿವಪೂಜಕರು ಶ್ರೇಷ್ಠ, ಶಂಕರನನ್ನು ಪೂಜಿಸುವವರಲ್ಲಿ ಲಿಂಗಧಾರಿಗಳು ಶ್ರೇಷ್ಠ, ಆ ಲಿಂಗಧಾರಿಗಳಲ್ಲಿ ಷಟ್‌ಸ್ಥಲಬ್ರಹ್ಮಿಗಳು ಶ್ರೇಷ್ಠ, ಇವರಗಿಂತಲೂ ಶ್ರೇಷ್ಠರು ತ್ರೈಲೋಕ್ಯದಲ್ಲಿಲ್ಲ" ಎಂದು ಹೇಳಿದರು. ಇದನ್ನು ಬೇರೆ ರೀತಿಯಲ್ಲಿ ಹೇಳಬೇಕಾದರೆ ಉದ್ಭಿಜ, ಸ್ವೇದಜ, ಅಂಡಜ, ಪಿಂಡಜ, ಹೀಗೆ ೮೪ ಲಕ್ಷ ಜೀವರಾಶಿಗಳೆಂದು ಮಹರ್ಷಿಗಳು ಭಾವಿಸುವರು. ಇವೆಲ್ಲ ಪರಮಾತ್ಮನಿಂದ ಉತ್ಪನ್ನವಾದವುಗಳಿದ್ದು ಅವುಗಳಲ್ಲಿ ಆದಿತತ್ವವಾದ ಜೀವ ಇರುವದು. ಆದಾಗ್ಯೂ ಅದರಲ್ಲಿ ತಾರತಮ್ಯವದೆ. ಉದ್ಭಿಜಗಳಲ್ಲಿ ಬೆಳವಣಿಗೆಯಷ್ಟೇ ಇದ್ದರೆ ಸ್ವೇದಜಗಳಲ್ಲಿ ಬೆಳವಣಿಗೆ ಮತ್ತು ಹರಿದಾಡುವ ಶಕ್ತಿ ಅದೆ. ಅಂಡಜಗಳಲ್ಲಿ ಇವೆರಡಕ್ಕೂ ಹೆಚ್ಚಿನದಾದ ಹಾರಾಡುವ ಶಕ್ತಿ ಅಲ್ಲದೆ ಕಣ್ಣು, ಕಿವಿ, ಮೂಗು ಮೊದಲಾದ ಇಂದ್ರಿಯಗಳಲ್ಲಿ ಹೆಚ್ಚು ಕಡಿಮೆ ಶಕ್ತಿ ಅದೆ. ಪಿಂಡಜಗಳಲ್ಲಿ ಇವೆಲ್ಲವು ಇದ್ದು ಹೆಚ್ಚಿನ ಜ್ಞಾನವದೆ. ಈ ವ್ಯವಹಾರಿಕ ಜ್ಞಾನದಕಿಂತಲೂ ಬ್ರಹ್ಮಜ್ಞಾನವು ಎಲ್ಲಕ್ಕೂ ಹೆಚ್ಚಿನದು. ಇದರಂತೆ ಮುಂದಿನವುಗಳದ್ದಿರುವದು. ಇದರ ನಿಜಾಂಶವನ್ನು ಕಂಡು ಹಿಡಿಯುವದೇ ಈ ಚಿಕ್ಕ ಲೇಖನದ ಮುಖ್ಯೋದ್ದೇಶವಾಗಿರುವದು.

ವಿರಕ್ತ ಶಬ್ದದ ಉತ್ಪತ್ತಿಯನ್ನು ಹೀಗೆ ಮಾಡಬಹುದು. ವಿಗತಃ ರಾಗಃ ಯಸ್ಯ ಸಃ — ವಿರಕ್ತಃ ಎಂದರೆ ವ್ಯಾಮೋಹಬಿಟ್ಟಂಥವನು ಎಂದು ಆಗುವದು. ವಿರಕ್ತರಿಗೆ ಜಂಗಮ ಲಿಂಗಿಗಳೂ, ಚರಲಿಂಗಿಗಳೂ, ಷಟ್‌ಸ್ಥಲಬ್ರಹ್ಮಿಗಳೂ, ಚರಮೂರ್ತಿಗಳೂ, ನಿರಂಜನಮೂರ್ತಿಗಳೂ, ನಿರಾಭಾರಿಗಳೂ, ಪ್ರಣವಸ್ವರೂಪಿಗಳೂ ಎಂದು ಹಲವು ಪ್ರಕಾರವಾಗಿ ವೀರಶೈವ ಶಾಸ್ತ್ರಕಾರರು ಸಂಬೋಧಿಸಿರುವರು. ಇವುಗಳಲ್ಲಿಯ ಪ್ರಣವಸ್ವರೂಪಿ ಈ ಶಬ್ದವು ಬಹು ವ್ಯಾಪಕಾರ್ಥವನ್ನು ಕೊಡುವದು. ಅದು ಹೇಗಂದರೆ— ಪ್ರಣವಾಕ್ಷರವು ಸಪ್ತಕೋಟಿ ಮಹಾಮಂತ್ರಗಳಿಗೆ ಬೀಜವಾಗಿರುವದು. ಓಂಕಾರ ಪ್ರಣವವು ಅಕಾರ, ಉಕಾರ, ಮಕಾರದಿಂದ

ಕೂಡಿರುವದು. ಅಕಾರವೇ ಬ್ರಹ್ಮ, ಉಕಾರವೇ ವಿಷ್ಣು ಮತ್ತು ಮಕಾರವೇ ರುದ್ರನೆಂದು ಶಾಸ್ತ್ರಕಾರರು ಹೇಳುವರು. ಈ ತ್ರಿಮೂರ್ತಿಗಳ ಕಾರ್ಯಗಳು ಸೃಷ್ಟಿ-ಸ್ಥಿತಿ-ಲಯವೆಂದು ಬಲ್ಲವರು ಹೇಳುವರು. ಬ್ರಹ್ಮಸ್ವರೂಪಿಯಾದ ಅಕಾರವು ಮಾನವನ ನಾಭಿಕಮಲದಿಂದ ಹುಟ್ಟುವದು. ಅದಕ್ಕೆ ವಿಷ್ಣುಸ್ವರೂಪಿಯಾದ ಉಕಾರವು ಬಂದು ಕೂಡಲಾಗಿ ಅದು ಓಂಕಾರವಾಗಿ ನಾಭಿಯಿಂದ ಮೇಲಕ್ಕೆ ಸಾಗಿ, ಕಂಠವನ್ನು- ಕಂಠೋಷ್ಠದ ವರೆಗೆ ಬರುವದು. ಇದಕ್ಕೆ ರುದ್ರಸ್ವರೂಪಿಯಾದ ಮಕಾರವು ಕೂಡಲಾಗಿ ಓಂಕಾರವಾಗಿ, ಅದರಿಂದ ತುಟಿಗಳೆರಡೂ ಮುಚ್ಚಲಾಗಿ ಅದು ಪಿಂಡಾಂಡದಲ್ಲಿಯೇ ಲಯ ಹೊಂದುವದು. ಪಿಂಡಾಂಡವು ಬ್ರಹ್ಮಾಂಡದ ವ್ಯಷ್ಟಿ ರೂಪವು. ವ್ಯಷ್ಟಿಯೇ ಸಮಷ್ಟಿಯಾಗಿರುವದರಿಂದ ಓಂಕಾರವು ಬ್ರಹ್ಮಾಂಡಮಯವಾಗಿರುವದು ಸಹಜ.

ಎಲ್ಲ ವಿಷಯಗಳ ಸಾರವಾದ ಕನಕಕಾಂತಾ ಇವೆರಡನ್ನು ವಮನ ಎಂದರೆ ಕಾರಿಕೆಸಮಾನವೆಂದು ಭಾವಿಸಿ ಬಿಟ್ಟವರು ವಿರಕ್ತರೆಂದು ಎಲ್ಲ ಶಾಸ್ತ್ರಕಾರರು ಹೇಳುವರು. ಕನಕಾಂಗಿಯ ನಿಜಸ್ವರೂಪವನ್ನು ಒಂದು ವಚನದಲ್ಲಿ "ಅರ್ಥವೆಂಬುದು ಶಿವಸ್ತೋತ್ರಗಳಿಗೆ ಸಂಗವಿಲ್ಲ, ಅರಿಗಾರೂ ಇಲ್ಲ. ಶಿವನಲ್ಲದೆ ಹಿತವರಿಲ್ಲವೆಂದರಿದು ಶಿವನೊಡವೆಯ ಶಿವನವರಿಗೆ ಕೊಡು ಮರುಳೇ. ಅರ್ಥದಲ್ಲೇನೂ ಸುಖವಿಲ್ಲ. ಅರ್ಥವನಾರ್ಜಿಸುವಲ್ಲಿ ದುಃಖ, ಆರ್ಜಿಸಿದ ಧನವ ರಕ್ಷಿಸುವಲ್ಲಿ ದುಃಖ, ನಾಶವಾದೊಡೆ ದುಃಖ, ವೆಚ್ಚವಾದೊಡೆ ದುಃಖ ಈ ಪರಿಯಲ್ಲಿ ಅರ್ಥದಿಂದ ಸದಾ ದುಃಖಪಡೆದವರಿಗೆ ಸುಖವಿಲ್ಲೆಂದರಿಯದೆ ಧನದರ್ಥದ ಮರವೆಯಲ್ಲಿ ಬಳಲುತ್ತಿಹ ಮನುಜರಿಗೆ ನಿನ್ನಾವ ಗತಿಯೂ ಇಲ್ಲವಯ್ಯಾ ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರಾ" ಎಂದು ಹಾಡಿರುವನು. ಈ ಕನಕ ಶಬ್ದದಲ್ಲಿ ಹೊನ್ನು ಮಣ್ಣು ಬಂದು ಇಬ್ಭಾಗ ಮಾಡಿ ಅವುಗಳ ನಡುವೆ ಹೆಣ್ಣನ್ನು ಇಟ್ಟು ಹೊನ್ನು ಹೆಣ್ಣು ಮಣ್ಣು ಎಂದು ವೀರಶೈವ ಶಾಸ್ತ್ರಕಾರರು ಈ ಮಾತತ್ರಯಗಳನ್ನು ಹೇಳಿ, ಇವುಗಳನ್ನು ಬಿಟ್ಟವರು ಮಾತ್ರ ವೈರಾಗ್ಯಭಾಗ್ಯಾನ್ವಿತರಾದ ವಿರಕ್ತರೆಂದು ಹೇಳುವರು. ಆದರೆ ಹೊನ್ನು ಮತ್ತು ಮಣ್ಣುಗಳನ್ನು ಬಿಟ್ಟವರು ಅನೇಕ ಜನರಿದ್ದರೂ ಅವರಿಗೆ ವಿರಕ್ತರೆನ್ನದೆ ಹೆಣ್ಣನ್ನು ಬಿಟ್ಟವರಿಗೇನೇ ಮಾತ್ರ ವಿರಕ್ತರೆಂದು ವೀರಶೈವರು ಹೇಳುವರು.

"ಸೋಲದಾತನೆ ವಿರತನು ।
ಮನದೊಳಗೆ । ಬಾಲೆಯರ ಸಿಂಗರವ ಕಂಡು ॥

ಎಂದು ನಿಜಗುಣಶಿವಯೋಗಿಗಳ ಉಕ್ತಿಯೂ ಇದೇ ಮಾತನ್ನು ಬಲಪಡಿಸುತ್ತದೆ. ಇವರಲ್ಲಿ ಒಂದು ಹೆಚ್ಚಿನ ವೈಶಿಷ್ಟ್ಯವಿದೆ. ಅದೇನೆಂದರೆ — ಹೊನ್ನು, ಹೆಣ್ಣು, ಮಣ್ಣು ಎಂಬುವದೊಂದು ಪ್ರವಾಹದ ಎರಡು ದಂಡೆಗಳಂತೆ ಹೊನ್ನು ಮತ್ತು ಮಣ್ಣುಗಳಿರುವವು. ಹೆಣ್ಣು ಆ ಪ್ರವಾಹದ ನಡುವಿನ ಸೆಳವುಳ್ಳ ಪ್ರವಾಹವಾಗಿರುವದು. ಹೊನ್ನು ಮಣ್ಣೆಂಬ ಎರಡು ದಂಡೆಗಳಲ್ಲಿ ಸಿಕ್ಕವರು ಸುಲಭವಾಗಿ ಪಾರಾಗಬಹುದು. ಆದರೆ ನಡುವಿನ ಸೆಳವುಳ್ಳ ಪ್ರವಾಹರೂಪೀ ಹೆಣ್ಣಿನಲ್ಲಿ ಸಿಕ್ಕವರು ಪಾರಾಗುವದು ಬಹಳೇ ಕಷ್ಟಕರವಲ್ಲದೆ ಅಸಾಧ್ಯವು. ಏಕೆಂದರೆ ಹೊನ್ನು ಮಣ್ಣುಗಳೆರಡೂ ಅಚೇತನಾತ್ಮಕ ವಸ್ತುಗಳು. ಇವುಗಳನ್ನು ಬಿಡುವದು ಅಷ್ಟು ದುಸ್ತರವಲ್ಲ. ಆದರೆ ಚೇತನಾತ್ಮಕವಾದ ಸ್ತ್ರೀ ವಸ್ತುವನ್ನು ಬಿಡುವದು ಮಾತ್ರ ಬಲು ಅಸಾಧ್ಯವು. ಆದುದರಿಂದ ಹೆಣ್ಣನ್ನು ಬಿಟ್ಟವರಿಗೇನೆ ವಿರಕ್ತರೆನ್ನುವದು ಸಹಜ. ಇದೇ ಮಾತನ್ನೇ ಶ್ರೀ ಶಿವನು ಶ್ರೀ ಪಾರ್ವತಿದೇವಿಗೆ ಹೇಳಿದಂತೆ ಅಚಿಂತ್ಯಾಗಮದ ದಶಮ ಪಟಲದಲ್ಲಿ,

ಮತ್ತಶ್ಚರಲಿಂಗಶ್ಚ । ಮತ್ತ ಶತ ಗುಣಾಧಿಕಃ ॥
ಯುಕ್ತೋಹಂ ಪರಯಾ ಶಕ್ತ್ಯಾ । ನಿರ್ಮುಕ್ತ ಏವ ಮಚ್ಛಕ್ತಿಃ ।
ಇದಂ ತು ನಿಷ್ಕಲಂ ಜ್ಞೇಯಂ । ಸಕಲೋಹಂ ಗಣೇಶ್ವರಾಃ ॥
ಪ್ರಪಂಚ ವಿಮುಖಂ ಚೈತತ್ । ಪ್ರಪಂಚ ನಿಯುತೋಸ್ಮ್ಯಹಂ ॥

ಎಂದರೆ ಈ ಚರಲಿಂಗವು ನನಗಿಂತಲೂ ನೂರ್ಮಡಿ ಶ್ರೇಷ್ಠವಿದೆ. ನಾನು ಶಕ್ತಿಯುತನಾದರೆ ಈ ಚರಲಿಂಗವು ಶಕ್ತಿರಹಿತ ಇರುವದು. ನಾನು ಕಲಾಯುಕ್ತನಾಗಿದ್ದರೆ ಇದು ನಿಷ್ಕಲವಿರುವದು. ಪ್ರಪಂಚಯುಕ್ತ ನಾನಿದ್ದರೆ ಇದು ನಿಷ್ಪ್ರಪಂಚಕವಿರುವದು" ಎಂದು ಹೇಳಿರುವದು. ಇದರ ಅನುವಾದವು ಉತ್ತರವಾತುಲ ತಂತ್ರದಲ್ಲಿ ಮಾಡಲ್ಪಟ್ಟಿದೆ. ಅಂತೆಯೇ "ಕೌಪೀನವಂತಃ ಖಲು ಭಾಗ್ಯವಂತಃ" ಎಂದು ಆರ್ಯೋಕ್ತಿಯುಂಟಾಗಿರುವದು.

"ಸ್ತ್ರೀಯಸ್ಯ ಚರಿತ್ರಂ ಪುರುಷಸ್ಯ ಭಾಗ್ಯಂ ದೇವೋ ನ ಜಾನಾತಿ ಕುತೋ ಮನುಷ್ಯಃ" ಎಂಬ ಗಾದೆಯ ಮಾತು ಉಂಟಾಗಬೇಕಾದರೆ ಈ ಸ್ತ್ರೀ ಚರಿತ್ರವು ಪುರುಷರಿಗೆ ಒಂದು ಗಹನವಾದ ಪ್ರಶ್ನೆವೆಂದು ಕಂಡು ಬಂದಂತೆ ತೋರುತ್ತದೆ. ಆದುದರಿಂದ ಈ ಗೂಢವಾದ ವಿಷಯದ

ಮೇಲೆ ಪುರುಷರು ಅನಾದಿ ಕಾಲದಿಂದ ಹಲವು ತೆರನಾಗಿ ಬರೆಯುತ್ತ ಬಂದಿರುವರು. ಆದರೆ ಹಲವು ಸ್ತ್ರೀಯರೂ ಕೂಡ ಈ ಕಗ್ಗಂಟನ್ನು ಬಿಡಿಸುವ ಯತ್ನವನ್ನು ಇಲ್ಲಿಯವರೆಗೆ ಮಾಡಿಕೊಳ್ಳುತ್ತ ಬಂದಂತೆ ಕಾಣುತ್ತದೆ. ಆದಾಗ್ಯೂ ಪುರುಷರಲ್ಲಿ ಕಂಡುಕಂಡವರು ಈ ವಿಷಯವಾಗಿ ಮನಬಲ್ಲಂತೆ ತರ್ಕವಿತರ್ಕಗಳನ್ನು ಮಾಡುತ್ತ ಹೋಗಿರುವದರಿಂದ ತರ್ಕಗಳಂತೆ ಕುತರ್ಕಗಳಿಗಾದರೂ ಆಸ್ಪದ ದೊರೆತಿದೆ. ಈ ತರ್ಕವಿತರ್ಕಗಳು ಬೇರೆ ಬೇರೆ ದೇಶಗಳಲ್ಲಿ ಗಾದೆಯ ಮಾತುಗಳಾಗಿ ಪ್ರಚಲಿತ ನಾಣ್ಯಗಳಂತೆ ನಡೆಯುತ್ತಿರುವವು. ನಾಣ್ಯಗಳಲ್ಲಿ ಕೆಲವು ಸತ್ಯವು ಕೆಲವು ಅಸತ್ಯವು ಕೆಲವು ಇವೆರಡನ್ನು ಹೇಳಲಿಕ್ಕೆ ಬಾರದಂಥವುಗಳಿದ್ದಾಗ್ಯೂ ಅವೆಲ್ಲವು ಸತ್ಯಗಳೆಂದು ನಡೆಯುವಂತೆ ಈ ಗಾದೆಯ ಮಾತುಗಳ ಸ್ಥಿತಿಯೂ ಆಗಿದೆ. ಓದುಗರ ಮನವರಿಕೆಗಾಗಿ ಕೆಲವನ್ನು ಇದರಡಿಯಲ್ಲಿ ಕೊಡುತ್ತೇವೆ.

(೧) ಪ್ರೇಮಕ್ಕಾದರೂ ಮಿತಿಯಿರಬೇಕು. ಅತಿರೇಕವಾದರೆ ಅದರ ಪತನಕ್ಕೆ ಪ್ರಾರಂಭವಾಗುವದು.

(೨) ಪ್ರೇಮವು ಚಂದ್ರನಂತಿರುವದು. ಅದರ ಬೆಳವಣಿಗೆ ನಿಂತ ಕೂಡಲೆ ಸಾವಕಾಶವಾಗಿ ಅದು ಕಡಿಮೆಯಾಗುತ್ತ ಹೋಗುವದು.

(೩) ಸ್ತ್ರೀಯರಿಗೆ ಸ್ತ್ರೀಯರು ಪಾರದರ್ಶಕವಾಗಿ ಕಾಣುವರು. ಆದರೆ ಸ್ತ್ರೀಯರ ಅಂತರಂಗವು ಪುರುಷರಿಗೆ ಗೊತ್ತಾಗುವದು ಅಶಕ್ಯ.

(೪) ಸ್ತ್ರೀಯರ ನಾಲಿಗೆ ಹದನಾದ ಅಲಗಿನಂತಿರುವದು. ಅದಕ್ಕೆ ಜಂಗುಹತ್ತದಂತೆ ಅದನ್ನು ಅವರು ಸದಾ ಬಾಯಲ್ಲಿ ಮಸೆಯುತ್ತಿರುವರು.

(೫) ಸ್ತ್ರೀಯರ ಸಾಮರ್ಥ್ಯವು ಕಣ್ಣೀರಲ್ಲಿದ್ದರೆ, ಪುರುಷರ ಸಾಮರ್ಥ್ಯವು ದೌರ್ಬಲ್ಯದಲ್ಲಿರುವದು.

(೬) ಸೌಂದರ್ಯವಿರಹಿತ ಯೌವನ, ಯೌವನವಿರಹಿತ ಸೌಂದರ್ಯ ಇವೆರಡೂ ಸ್ತ್ರೀಯರಿಗೆ ತ್ಯಾಜ್ಯವೇ.

(೭) ಪುರುಷರಿಗೆ ಗಾಂಭೀರ್ಯವು ಶೋಭಿಸುವಂತೆ, ಸ್ತ್ರೀಯರಿಗೆ ಚಾಂಚಲ್ಯವು ಶೋಭಿಸುತ್ತದೆ.

(೮) ಪುರುಷರು ದೂರದರ್ಶಿಗಳಿದ್ದರೆ ಸ್ತ್ರೀಯರು ದೃಶ್ಯದರ್ಶಿಗಳಿರುವರು.

(೯) ಸ್ತ್ರೀಯರು ಸೌಂದರ್ಯದಿಂದ ಪುರುಷರ ದೃಷ್ಟಿಯನ್ನೂ ಸುಸ್ವಭಾವದಿಂದ ಹೃದಯವನ್ನೂ ಗೆಲ್ಲುವರು.

(೧೦) ಸ್ತ್ರೀ ಪುರುಷರ ನಿರ್ಲಜ್ಜ ಚಟಗಳು ಸೆರೆಗಿಂತಲೂ ಭಯಂಕರ. ಸೆರೆಯ ನಿಶೆಯು ಕುಡುಕರಿಗೆ ಅಷ್ಟೇ ಏರಿದರೆ ಇದರ ನಿಶೆಯು ನೋಟಕರಿಗೂ ತಗಲುವದು.

(೧೧) ಪ್ರೇಮದಲ್ಲಿ ಒಂದು ತೂಕ ಸತ್ಯವಿದ್ದರೆ ಲಕ್ಷ ತೂಕದಷ್ಟು ಕಲ್ಪನೆ ಇರುತ್ತದೆ.

(೧೨) ಜಗತ್ತಿನೊಳಗಿನ ಅತ್ಯಂತ ಮಧುರವಾದ ಕಥೆಗಳು ಸ್ತ್ರೀಯರ ಹುಬ್ಬುಗಳಲ್ಲಿ ಬರೆದಿವೆ. ಮತ್ತೂ ಅತ್ಯಂತ ಸುಂದರವಾದ ಚಿತ್ರಗಳು ಅವರ ಗಲ್ಲಗಳ ಮೇಲೆ ಬರೆದಿವೆ.

(೧೩) ಲಗ್ನದ ಮೊದಲು ಸ್ತ್ರೀಯು ಪುರುಷನ ಹೃದಯ ಪೀಠದ ಮೇಲಿನ ರಾಣಿಯಂತೆ ಇರುವಳು. ಆದರೆ ಲಗ್ನವಾದ ಬಳಿಕ ಅವಳು ಅವನ ಪ್ರಜೆಯಂತೆ ಆಗುವಳು.

(೧೪) ಸ್ತ್ರೀಯರ ಲಜ್ಜೆಯನ್ನು ವಸ್ತ್ರಗಳಿಗಿಂತಲೂ ಅವರ ವಿನಯವೇ ಹೆಚ್ಚಾಗಿ ಕಾಪಾಡುತ್ತದೆ.

(೧೫) ಸ್ತ್ರೀಯರ ಸ್ಥಾನಮಾನಗಳಿಂದ ಸಮಾಜದ ಸಂಸ್ಕೃತಿಯು ಗೊತ್ತಾಗುತ್ತದೆ.

(೧೬) ಸ್ತ್ರೀಯರು ತಮ್ಮ ವಿಚಾರಗಳನ್ನು ಉಚ್ಚಾರಕ್ಕಿಂತಲೂ ಮುಗ್ಧಾಚಾರದಿಂದಲೇ ವ್ಯಕ್ತಗೊಳಿಸುವರು.

(೧೭) ಪ್ರೇಮದ ಪ್ರಾರಂಭವು ಭಾಷೆಯ ಸ್ವಾತಂತ್ರ್ಯದಲ್ಲಿ ಆರಂಭವಾಗಿ ಅದರ ಸಮಾಧಾನವು ಮಾತ್ರ ಸ್ವಾಮಿತ್ವದಲ್ಲಿ ಪರಿಣಮಿಸುತ್ತದೆ.

(೧೮) ತರುಣ ಪುರುಷರು ಸ್ತ್ರೀ ಜಾತಿಯನ್ನೇ ಪ್ರೀತಿಸುವರು ಆದರೆ ಪ್ರೌಢಾವಸ್ಥೆಯಲ್ಲಿ ಅವರು ವಿಶಿಷ್ಟ ಸ್ತ್ರೀಯರನ್ನು ಪ್ರೀತಿಸುವರು.

(೧೯) ಪುರುಷನಿಗೆ ಸ್ತ್ರೀಯು ಸಾರಂಗಿಯಂತಿರುವಳು. ಪ್ರೇಮಗಜದಿಂದ ಅವನು ಅವಳಿಂದ ಮಧುರಾಲಾಪಗಳನ್ನು ತೆಗೆಯುವನು.

(೨೦) ಪುರುಷರ ಮೇಲೆ ನಿಯಂತ್ರಣ ಇಡುವದರ ಸಲುವಾಗಿಯೇ ಸ್ತ್ರೀಯರ ಜನ್ಮ ಇರುವದು.

(೨೧) ವಾಚಾಳರೂ ಕೂಡ ಪ್ರೇಮದಿಂದ ಮುಗ್ಧರಾಗಿ ಮೂಕರಾಗುವರು.

(೨೨) ಅಹಂಕಾರದ ಜನ್ಮ ಹಾಗೂ ಪ್ರೇಮದ ಮೃತ್ಯು ಇವೆರಡೂ ಒಂದೇ ಕಾಲಕ್ಕೆ ಆಗುತ್ತವೆ.

(೨೩) ಸ್ತ್ರೀಯರಿಗೆ ಸೇಡು ತೀರಿಸಿಕೊಳ್ಳಲಿಕ್ಕೆ ಬಾರದಿದ್ದರೆ ಆಗ್ಗೆ ಅವರು ಅಳತೊಡಗುವರು.

(೨೪) ಸ್ತ್ರೀಯರ ನಕಾರದಿಂದ ಪುರುಷರು ನಿರಾಶರಾಗುವ ಕಾರಣವಿಲ್ಲ. ದಿವಸದಲ್ಲಿ ೨೪ ತಾಸುಗಳಿರುವವು. ಆ ಅವಧಿಯಲ್ಲಿ ಸ್ತ್ರೀಯರ ಚಂಚಲ ಮನಸ್ಸು ಪಲ್ಲಟವಾಗದೆ ಒಂದು ಅರಘಳಿಗೆ ಇರದು.

(೨೫) ಸ್ತ್ರೀಯರಿಗೆ ಎರಡು ಮೃತ್ಯುಗಳಿರುವವು. ಅವರು ಇಹಲೋಕ ಬಿಟ್ಟಾಗ್ಗೆ ಹಾಗೂ ಅವರ ಅನುರಂಜಕತ್ವವು ಲೋಪವಾದಾಗ್ಗೆ.

(೨೬) ಸ್ವೈರವೃತ್ತಿಯ ಸ್ತ್ರೀಯರ ಸೌಂದರ್ಯವು ಗುಲಾಬಿ ಕಂಟಿಯಂತೆ ಇರುವದು. ಪ್ರಿಯಕರರಿಗೆ ಅದರ ಹೂವುಗಳು ಕಂಡರೆ ಪತಿಗಳಿಗೆ ಅದರ ಮುಳ್ಳುಗಳು ತೋರುವವು.

(೨೭) ಸ್ತ್ರೀಯರಿಗೆ ಅಜ್ಜೀ ಎಂದು ಕರೆದರೆ ಅವರಿಗೆ ಚೇಳು ಕಡಿದಂತಾಗುವದು.

(೨೮) ಹೃದಯದಲ್ಲಿ ಸದ್ಗುಣ, ಭಾಳ ಪ್ರದೇಶದಲ್ಲಿ ವಿನಯ, ಮುಖದಲ್ಲಿ ಮಾಧುರ್ಯ ಹಾಗು ಕೈಯಲ್ಲಿ ಕಾರ್ಯತತ್ಪರತೆ, ಹೀಗೆ ನಾಲ್ಕು ಗುಣಗಳನ್ನು ಸ್ತ್ರೀಯರಲ್ಲಿ ಪುರುಷರು ಅಪೇಕ್ಷಿಸುವರು.

(೨೯) ಸ್ತ್ರೀಯರು ಸತ್ಯ ಹೇಳುವರು. ಆದರೆ ಅದನ್ನು ಅವರು ಸಂಪೂರ್ಣ ಹೇಳುವದಿಲ್ಲ.

(೩೦) ನಾಯಿಗೆ ನಾಯಿ ಎಂದರೆ ಸಲ್ಲುವದು. ಆದರೆ ಮುದುಕಿಗೆ ಮುದುಕಿ ಎಂದರೆ ಸಲದು.

(೩೧) ಪುರುಷರ ಆಜ್ಞಾಪಾಲನದಿಂದ ಸ್ತ್ರೀಯರಿಗೆ ಆನಂದವುಂಟಾಗುತ್ತದೆ. ಸ್ತ್ರೀಯರ ಪೂರ್ಣ ಅಂಕಿತರಾದಂಥ ಪುರುಷರಿಂದ ಈ ಆನಂದವು ಅವರಿಗೆ ಸಿಗಲಾರದು.

(೩೨) ಪುರುಷರಿಗೆ ಪ್ರೀತಿಯ ಸ್ತ್ರೀಯರ ವಾಣಿಯು ಗಂಧರ್ವರ ಗಾಯನಕ್ಕಿಂತಲೂ ಮಧುರವೆನಿಸುವದು.

(೩೩) ಸ್ತ್ರೀಯರು ಪುರುಷರ ನೆರಳಿನಂತಿರುವರು. ಹಿಡಿಯಹೋದರೆ ಓಡುವರು, ಬಿಟ್ಟರೆ ಬೆನ್ನಟ್ಟುವರು.

(೩೪) ಬಸವನ ಹುಳದಂತೆ ಸ್ತ್ರೀಯರು ಎಲ್ಲಿ ಹೋದರು ತಮ್ಮ ಸಂಸಾರದ ಭಾರವನ್ನು ಹೊತ್ತುಕೊಂಡೇ ಹೋಗುವರು.

(೩೫) ಪಾರಲೌಕಿಕ ಸುಖದ ಕಡೆಗೆ ಎಳಸಿದ ದೃಷ್ಟಿಯು ಸ್ತ್ರೀಯರ ಆಕರ್ಷಣದಿಂದ ಇಹದಲ್ಲಿ ಬರುತ್ತದೆ.

(೩೬) ಎರಡು ಎರಡು ನಾಲ್ಕು ಎಂಬುದು ಸಿದ್ಧಾಂತವು. ಇದನ್ನು ಪುರುಷರು ಒಪ್ಪುವರು. ಆದರೆ ಸ್ತ್ರೀಯರು ಆಕ್ರೋಶ, ಚೀರಾಟ, ಕಣ್ಣೀರುಗಳಿಂದ ಅದನ್ನು ಐದು ಮಾಡಬಲ್ಲರು. ಈ ವಾದದಲ್ಲಿ ಪುರುಷರು ಸೋಲುವರು.

(೩೭) ಪುರುಷರ ಅನುಕರಣದಿಂದ ಸ್ತ್ರೀಯರು ತಾವು ಪುರುಷರ ಸಮಾನರೆಂದು ಭಾವಿಸುವರು. ಆದರೆ ಅದು ತಪ್ಪು. ಇದರಿಂದ ಅವರು ಪುರುಷರಾಗುವದಿಲ್ಲ. ಅಲ್ಲದೆ ಸ್ತ್ರೀಯರಾಗಿಯೂ ಉಳಿಯುವದಿಲ್ಲ.

(೩೮) ಅಲ್ಪ ವಿರಹವು ಪ್ರೇಮ ವೃದ್ಧಿಂಗತ ಮಾಡುವದು. ಆದರೆ ದೀರ್ಘವಿರಹವು ಪ್ರೇಮದ ನಾಶ ಮಾಡುವದು.

(೩೯) ಗಂಡನನ್ನು ಪ್ರೀತಿಸುವ ಸ್ತ್ರೀಯು ಸ್ತ್ರೀಯಾಗಿಯೇ ಉಳಿವಳು. ಆದರೆ ಗಂಡಸರು ಪ್ರೀತಿಸುವ ಸ್ತ್ರೀಯರು ಮಾತ್ರ ದೇವಿ ಹಾಗೂ ಅಪ್ಸರೆಯಂತೆ ತೋರುವರು.

(೪೦) ನರಿಯು ಜಾಣನೆನ್ನುವರು ಆದರೆ ಸ್ತ್ರೀಯರಷ್ಟಲ್ಲ.

(೪೧) ಪ್ರೇಮಬದ್ಧವಾದ ಸ್ತ್ರೀಯರಲ್ಲಿ ತಾರತಮ್ಯ ಉಳಿಯುವದಿಲ್ಲ

(೪೨) ಆದರದಕ್ಕಿಂತಲು ಪ್ರಶಂಸೆಯೇ ಸ್ತ್ರೀಯರಿಗೆ ಪ್ರಿಯವೆನಿಸುವದು.

(೪೩) ಸ್ತ್ರೀಯರು ತಮ್ಮ ಸದ್ಗುಣಗಳ ನಿಂದೆಯನ್ನು ಒಂದು ವೇಳೆ ಸಹಿಸಬಹುದು. ಆದರೆ ಅವರು ತಮ್ಮ ಸ್ವರೂಪದ ನಿಂದೆಯನ್ನು ಎಂದೂ ಸಹಿಸಲಾರರು.

(೪೪) ಲಗ್ನವು ಜಿದ್ದಿನಂತಿರುವದು. ಅದರಲ್ಲಿ ಗಂಡಸರು ತಮ್ಮ ಸ್ವಾತಂತ್ರ್ಯವನ್ನೂ ಸ್ತ್ರೀಯರು ತಮ್ಮ ಸೌಖ್ಯವನ್ನೂ ಜಿದ್ದಿಗೆ ಹಚ್ಚುವರು.

(೪೫) ಗಂಡುಳ್ಳ ಅಮ್ಮನನ್ನು ಗೌರಿ ಎಂದು ಕರೆಯಬೇಕು.

(೪೬) ಅಂಗನೆಯರು ಒಲಿಯುವದಕ್ಕೆ ಸಂಗಯ್ಯನ ಒಲುಮೆಯೇ ಬೇಕು.

(೪೭) ನಾರಿಯು ಮುನಿದರೆ ಮಹಾಮಾರಿಯಾಗುವಳು.

(೪೮) ಇಚ್ಚುಳ್ಳ ಸತಿ ಇದ್ದರೆ ಕೈಲಾಸಕ್ಕೆ ಕಿಚ್ಚು ಹಚ್ಚಬೇಕು.

(೪೯) ನಾರಿಯರು ಸಂತುಷ್ಟರಿದ್ದ ಎಡೆಯಲ್ಲಿ ದೇವತೆಗಳು ರಮಿಸುತ್ತಿರುವರು.

(೫೦) ಸ್ತ್ರೀಯರ ಬುದ್ಧಿಯು ಮೊಳಕಾಲ ಕೆಳಗಂತೆ.

(೫೧) ಆದಿಮಾಯೆ ಬಲು ಭಾಗ್ಯವಾನಳು. ಏಕಂದರೆ ಆಕೆಗೆ ಅತ್ತೆ ಇದ್ದಿಲ್ಲ.

(೫೨) ಸ್ತ್ರೀಯರಲ್ಲಿ ಪ್ರೇಮಗಿಂತಲು ದ್ವೇಷವೇ ಹೆಚ್ಚಾಗಿರುವದು.

(೫೩) ಗಂಡನಿಗೆ ಹೆಂಡತಿಯು ಚಂದ್ರಮುಖಿ, ಬಿಂಬಾಧರೆಯು ಎಂದು ಕಾಣುವದರಿಂದ ಪ್ರಪಂಚ ನಡೆದಿದೆ.

(೫೪) ಸ್ತ್ರೀಲಂಪಟರು ಪಾರಲೌಕಿಕ ಸೌಖ್ಯವು ಸ್ತ್ರೀಯರ ಆಲಿಂಗನದಲ್ಲಿ ಇದೆ ಎಂದು ಭಾವಿಸುವರು.

(೫೫) ಗಂಡನನ್ನು ಕೈಗೊಂಬೆ ಮಾಡಿ ಆಡಿಸುವ ಸ್ತ್ರೀಯು ಸೈತಾನನ ಕೈಗೊಂಬೆಯಂತಿರುವಳು.

ಇನ್ನು ಕೊನೆಯ ಮಾತು. ಹೊನ್ನು ಹೆಣ್ಣು ಮಣ್ಣುಗಳನ್ನು ಬಿಟ್ಟವರಿಗೇನೆ ವಿರಕ್ತರೆನ್ನುವ ರೂಢಿ ಇದ್ದರೂ ಶ್ರೀಮುದನಾದಿ ಅಲ್ಲಮ

ಪ್ರಭುದೇವರು "ಹೊನ್ನು ಮಾಯೆ ಅಲ್ಲ, ಹೆಣ್ಣು ಮಾಯೆ ಅಲ್ಲ, ಮಣ್ಣು ಮಾಯೆ ಅಲ್ಲ, ಮನದ ಮುಂದಣಾಶೆಯೇ ಮಾಯೆ ಕಾಣಾ ಗುಹೇಶ್ವರ" ಎಂದು ಘಂಟಾಘೋಷವಾಗಿ ಹೇಳಿದಂತೆ, ಎಲ್ಲ ಪ್ರಮಥರು ನುಡಿದು ನಡೆದು ಜಗತ್ತಿನಲ್ಲಿ ಆದರ್ಶಭೂತ ದಿವ್ಯವಿಭೂತಿಗಳೆಂದು ಖ್ಯಾತಿಹೊಂದಿದರು. ಹೊನ್ನು ಹೆಣ್ಣು ಮಣ್ಣು ಇವುಗಳನ್ನು ಬಿಡುವದಷ್ಟೇ ಅಲ್ಲ, ಆದರೆ ಅವುಗಳ ಬಗ್ಗೆ ಇರುವ ಆಶೆಯು ಲವಲೇಶವಾದರೂ ಇಲ್ಲದವರೇ ನಿಜವಾದ ವಿರಕ್ತರೆಂದು ಹೇಳಬಹುದು. ಇದರ ಸತ್ಯತೆಗಾಗಿ ಕೆಲವರ ವಚನಗಳನ್ನೇ ಇಲ್ಲಿ ಉದಾಹರಿಸುತ್ತೇವೆ.

ಅಕ್ಕಮಹಾದೇವಿ.

ಊರಸೀರೆಗೆ ಅಗಸ ತಡಬಡಗೊಂಬಂತೆ ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆನ್ನದು, ಎಂದು ನೆನೆನೆನೆದು ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯಾ ಚನ್ನಮಲ್ಲಿಕಾರ್ಜುನಾ.

ಅರ್ಥ ಸನ್ಯಾಸಿಯಾದಡೆನಯ್ಯ? ಆವಂಗದಿಂ ಬಂದಡೆಯೂ ಕೊಳ್ಳದಿರಬೇಕು. ರುಚಿ ಸನ್ಯಾಸಿಯಾದಡೆನಯ್ಯ? ಜಿಹ್ವೆಯ ಕೊನೆಯಲ್ಲಿ ಮಧುರವನು ಅರಿಯದಂತಿರಬೇಕು. ಸ್ತ್ರೀ ಸನ್ಯಾಸಿಯಾದಡೇನಯ್ಯ? ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟೆಲ್ಲಗಿರಬೇಕು. ದಿಗಂಬರಿಯಾದಡೇನಯ್ಯ? ಮನ ಬತ್ತಲೆ ಇರಬೇಕು. ಇಂತೀ ಚತುರ್ವಿಧದ ಹೊಲಬನರಿಯದೆ ವೃಥಾ ಕೆಟ್ಟರು ಕಾಣಾ ಚನ್ನಮಲ್ಲಿಕಾರ್ಜುನಾ.

ಗುಪ್ತಮಂಚಣ್ಣ.

ಮರ್ತ್ಯದಲ್ಲಿ ಪಾವನ ಮಾಡಬೇಕೆಂದು ಸುಳಿವ ವಿರಕ್ತಜಂಗಮದಿರವು ಹೇಗಿರಬೇಕೆಂದಡೆ, ಕಲ್ಲಿನ ಮೇಲೆ ಹೊಯ್ದರೆ, ನಿಲ್ಲದ ನೀರಿನಂತೆ ಇರಬೇಕು. ಪಥವಿಲ್ಲದ ದಾರಿಯಲ್ಲಿ ಹೋಗಿ, ಗತಿಗೆಟ್ಟವನಂತಿರಬೇಕು. ಶ್ರುತಿಯುಲಡಗಿದ ನಾದದಂತಿರಬೇಕು. ಹುರಿದ ಬೀಜದೊಳಗಣ ತಿರುಳಿನಂತಿರಬೇಕು. ಇದಾರಿಗೂ ಅಸಾಧ್ಯ ನಾರಾಯಣ ಪ್ರಿಯ ರಾಮನಾಥಾ.

ಮಡಿವಾಳಮಾಚಯ್ಯ.

ಹೊನ್ನು ಹೆಣ್ಣು ಮಣ್ಣು ಅವರಿಸಿಕೊಂಡು, ವಸ್ತ್ರ ಒಡವೆ ಆಭರಣಂಗಳ ಹಲ್ಲಣಿಸಿಕೊಂಡು ಬಂದು ಸರ್ವರಿಗೆ ಶಾಸ್ತ್ರೋಪದೇಶವ ಹೇಳು

ವರು. ವೇಷಧಾರಿಗಳು ಸೂಳೆಯರಂತೆ ಒಡಲಾಸೆಗೆ ಹಿತವಚನವ ನುಡಿವರು. ಇಂತಪ್ಪ ಪ್ರಪಂಚಿನ ವೇಷಡಂಭಕ ಧೂರ್ತಲಾಂಛನಧಾರಿಗಳಿಗೆ ಮಹಂತಿನ ದೇವರೆನ್ನಬಹುದೇ? ಎನಲಾಗದು. ಅದೇನು ಕಾರಣವೆಂದಡೆ ತಮ್ಮ ಆದಿಯ ನಿಲವ ತಾವರಿಯರು. ಷಟ್‌ಸ್ಥಲದ ನಿರ್ಣಯವ ಏನೆಂದರಿಯರು. ಆಚಾರದನುಭಾವದ ಅಂತರಂಗದ ಮೂಲವ ಮುನ್ನವೇ ಅರಿಯರು. ಇಂತಿದನರಿಯದ ಪಶುಪ್ರಾಣಿಗಳಿಗೆ ಜಂಗಮವೆನ್ನಬಹುದೇ? ಎನಲಾಗದಯ್ಯ ಕಲಿದೇವರದೇವ.

## ಚನ್ನಬಸವ.

ಹೊನ್ನು ಹೆಣ್ಣು ಮಣ್ಣು ಬಿಟ್ಟು ಮುಂಡೆಯ ಬೋಳಿಸಿಕೊಂಡು ಬೋಳಾದ ಬಳಿಕ, ನಿರಾಸಕ್ತನಾಗಿ ಶಿವಧ್ಯಾನಪರಾಯಣನಾಗಿಪ್ಪುದೀಗ ಪ್ರಥಮಬೋಳು. ಲಿಂಗಾಣತಿಯಿಂದ ಬಂದುದ ಕೈಕೊಂಡು ಲಿಂಗಸಾವಧಾನವಾಗಿಪ್ಪುದೀಗ ದ್ವಿತೀಯ ಬೋಳು. ಶರಣ ಸತಿ ಲಿಂಗ ಪತಿ ಎಂಬುಭಯವಳಿದು ಪರಮಾನಂದದಲ್ಲಿಪ್ಪುದೀಗ ತೃತೀಯಬೋಳು. ಬೋಳಿನ ಅನುವನು ಕೂಡಲ ಚನ್ನಸಂಗಯ್ಯನಲ್ಲಿ ಅಲ್ಲಯ್ಯ ಬಲ್ಲ.

ತನು ವಿರಕ್ತಿ ಅಲ್ಲದೆ ಹೀಗೆ ಮನ ವಿರಕ್ತಿ ಉಳ್ಳವರೇ ನಿಜವಾದ ವಿರಕ್ತರು. ಇವರು ಕೇವಲ ಆತ್ಮೋದ್ಧಾರಕರಲ್ಲದೆ ಜಗದೋದ್ಧಾರಕರೂ ಹೌದು. ಇವರೇ ಮಹಿಮರು. ಇವರಿಗೆ ಜಗತ್ತು ಚಿರಋಣಿ. ಇಂಥವರ ಮಹಿಮೆಯನ್ನು ಹಾಡಿಪರಸುವದು ಮಾನವನ ಆದ್ಯಕರ್ತವ್ಯವಲ್ಲದೆ ಅವರ ಜೀವನದ ರಹಸ್ಯವನ್ನರಿಯದೇ ಅವರನ್ನು ತೆಗಳುವದು ಹುಚ್ಚತನದ ಪರಮಾವಧಿ. ಇದನ್ನೇ ಘನಮಠದಾರ್ಯರು "ಪರಮವಿರತರ ಜರಿಯಲುಂಟೇನೋ। ನೀ ಮರುಳುಮಾನವ॥ ಪರಮವಿರತರ ಜರಿಯಲುಂಟೆ। ನಿರುತಸಚಿತ್ ಸುಖಸ್ವರೂಪದಿ। ಧರಣಿಯೊಳು ಸದ್ಭಕ್ತರೆಸುವಾ। ಗಿರುತೆ ಸ್ವಾತಂತ್ರ್ಯದಿಚರಿಸುವ ॥ಪಲ್ಲ॥ ಇಂತಹ ವಿರಕ್ತರು ವೀರಶೈವರ ವೈಭವವನ್ನು ಜಗತ್ತಿಗೂ ಇಂದೂ ಬರುತ್ತಿದ್ದಾರೆ.

---

# ಲಿಂಗವಿಚಾರವು.

(ಶ್ರೀ. ಎಮ್. ಸಿ. ಪಟ್ಟೇದ-ವಟಿಂಡರ ಪರ್ವತ ಬಿಜಾಪುರ.)

---

## ಉತ್ಸಾಹ ರಗಳೆ.

ಲಿಂಗ ಲಿಂಗವೆಂದೆನ್ನುವಿ ಲಿಂಗಪರಿಯನೊಮ್ಮೆಯರಿಯೊ ।
ಲಿಂಗವಿಂಗಡಿಸಿದ ಸಂಗ ಸುಖವ ನೀನು ತಿಳಿದು ನೋಡೊ ॥೧॥

ಲಿಂಗ ಭಸ್ಮ ರುದ್ರಾಕ್ಷಿಯು ಲಿಂಗ ಮಂತ್ರ ಮತ್ತದರ ಸು ।
ಸಂಗ ಗುರುವು ಲಿಂಗ ಜಂಗಮಚರ ಶೇಷ ಸ್ವಪ್ರಸಾದ ॥೨॥

ಆದಿ ಮೂರು ಲಿಂಗ ನಿಜವು ಮಧ್ಯ ಮೂರು ಚಿಲ್ಲಿಂಗವು ।
ತುದಿಯು ಮೂರು ಸಕಲರೂಪ ಶಿವನು ಬೆರೆದ ಮಹಾಲಿಂಗ ॥೩॥

ಒಂದರೊಳ್ ತಾನೊಂದಾಗಿಹುದೊಂದರೊಳ್ ತನ್ನಂಥ ।
ದೆಂದು ಬೆರೆದು ಕಡೆಗೆ ತನ್ನ ಕುಳದ ಕಳೆಯು ಕೂಡಿರುವದು ॥೪॥

ಪರವ ಪಿಡಿದು ನೀನು ಲಿಂಗರಸವ ಸವಿದು ತಣಿಪುಗೊಳ್ಳು ।
ಮೂರ ಮೂರರೊಳ್ ಮಿಕ್ಕವಾರುವಡಗಿ ನಿಲಲು ತಾನೆ ॥೫॥

ಪರಮ (ನಿಷ್ಕಳ) ಲಿಂಗ ಸರಸದ ಶಿವಲಿಂಗ ಭರಿತ ಮಹಾಲಿಂಗ ।
ವಿರುತ್ತಿರಲು ತತ್ಕ್ರಮವು ಶಕ್ತಿವಿಶಿಷ್ಟಾದ್ವೈತವು ॥೬॥

ಸೃಷ್ಟಿಲಯವು ನಿಷ್ಕಳದಲಿ ಕಡೆಗೆ ಮೂಡಿ ತೋರುತಿರುವ ।
ಸೃಷ್ಟಿಮೂಲಿಗ ಶಿವಲಿಂಗ ಬೀಜ ಮರಕೆ ತಾಣದಂತೆ ॥೭॥

ಮಹಾಲಿಂಗದಲ್ಲಿ ಶಿವನ ರೂಪ ವಿಧದಿ ತೋರೆ ಸೃಷ್ಟಿ ।
ಮಹಾಚೋದ್ಯವರಿತು ಮರೆಯದಂತಿಹುದಾ ಲಿಂಗ ನಿಜವು ॥೮॥

ಅರಿಯಲಿಷ್ಟ ಬೆರೆಯಲುಮೆಯು ಜಗಜ್ಜನನಿ ಕಳೆಯು ತಾನು ।
ಶರಣ ಸದ್ಭಾವವಾ ಕಳೆಗಂಗವಾಗೆ ಶಿವ ಲಿಂಗವು ॥೯॥

ಅದರ ಜಂಗಮ ಚರದಲ್ಲಿ ಸಕಲದೊಡೆಯ ಶಿವನ ರೂಪ ।
ಮದಕೆ ಶೇಷ ರೂಪ ಶಕ್ತಿ ಬೆರೆದು ಸಕಲ ಜಗವು ನೋಡು ॥೧೦॥

ಹಿಂದೆ ಹರಿದ ಹರಿದ ಹಿಂದನದೇ ಕ್ರಮದಿಯೊಂದು ಮಾಡಿ।
ಹೊಂದಿನಿಂದನಾದಿ ಭಕ್ತ ಸುಪ್ರಸಾದ ವೀರಶೈವ ॥೧೧॥

ತನ್ನ ತಾನೆ ತಿಳಿದು ನೋಡಿ ತನ್ನ ನಿಜವನರಿದು ಬೆರೆದು।
ಮುನ್ನಿನಂತೆ ಲಿಂಗ ರೂಪಿಯಾಗಿ ಜಗವ ಬೆಳಗಿ ಜನರ ॥೧೨॥

ಕೊಳಚಿ ಕಳೆವ ಲಿಂಗ ಮುಖದ ಸಾಲಿನಷ್ಟಾವರಣದೊಳಗೆ।
ಕಳೆಯು ಪಂಚ ಚರವು ತೋರಿ ಸಹಜ ನಿಲಲು ಷಡುಸ್ಥಲವು ॥೧೩॥

ಷಷ್ಟಸ್ಥಲವು ಸಪ್ತವಡಗಿ ನಿಂದ ನೈಜಲಿಂಗವಯ್ಯ।
ಇಷ್ಟ ಕಳೆಯು ವಿಕಾಸದಲಿಯಷ್ಟಾವರಣರೂಪ ದೋರಿ ॥೧೪॥

ದೃಷ್ಟರೂಪದಲ್ಲಿ ಪಂಚಚರರ ಶಕ್ತಿ ಶೇಷೋದಕ।
ತುಷ್ಟವಾದ ಸೃಷ್ಟಿಯಾಗೆ ಶಕ್ತಿವಿಶಿಷ್ಟಾದ್ವೈತವು ॥೧೫॥

ಜೀವ ದೇಹಿಯೆನಿಸಿದೆಮಗೆ ಮೂರು ಹಸಿವೆ ಕಾಡುತಿಹವು।
ಅವಕೆ ನೆಲೆ ಸ್ಥೂಲ ಸೂಕ್ಷ್ಮ ಕಾರಣೆನಿಪ ದೇಹಗಳಿವೆ ॥೧೬॥

ಜಡಶರೀರಕಾಧಾರದ ಪ್ರಸಾದವಂ ಪಡೆವ ಬಗೆಯು।
ಓಡುತಿರುವ ಸೂಕ್ಷ್ಮ ಮನದ ಕರಣ ತೃಪ್ತಿಗೊಳಿಪ ಬಗೆಯು ॥೧೭॥

ಕಾರಣೆನಿಪ ತಿರುಪ ಕುಣಿಯ ನರುಹಿ ಕೊಟ್ಟ ವೀರ ಬಗೆಯು।
ಧೀರರನ್ನು ಮಾಡಿ ಮೆರೆವ ಲಿಂಗ ಮಾರ್ಗ ನೋಡುವಿದನು ॥೧೮॥

ಪ್ರಗತಿಪರ ಅಷ್ಟಾವರಣ.

ನೀತಿ ಕಾಯಕಕ್ಕೆ ಹೊಂದಿ ಲಿಂಗಭೋಗಿಯಾಗೆ ಭಸ್ಮ।
ಕಾತರಿಸುವ ಹೊನ್ನು ಹೆಣ್ಣು ಮಣ್ಣುಗಳಿಗೆ ಸೋಲದಿಹುದೆ ॥೧೯॥

ಮೇಲೆ ರುದ್ರಾಕ್ಷಿಯು ಪುಣ್ಯಕಾರ್ಯ ಘಟಿಸುತಿಹುದೆ ಮಂತ್ರ।
ಜಾಲರೂಪ ಕರ್ಮವಡಗಿ ಧರ್ಮವರಿದ ಮನುಜ ಗುರುವು ॥೨೦॥

ಮನವು ಪರಮಾರ್ಥಗ್ರಹಿಸಿ ಹೊಳೆಯಲದುವೆ ಲಿಂಗ ರೂಪ।
ಜನಿತ ಜೀವ ಶಿವನ ತೇಜದಲ್ಲಿ ಚಲಿಸೆ ಜಂಗಮಚರ ॥೨೧॥

ಚಲಿಪ ತೇಜ ಶಿವನ ಶಕ್ತಿಯಲ್ಲಿಯಡಗೆ-ಪಾದೋದಕ ।
ಬಲಿತ ಶಕ್ತಿ ಭಕ್ತಿ ಮಾಟ ಲಿಂಗ ನಿಧಿಗೆ ಸುಪ್ರಸಾದ ॥೨೨॥

### ಲಿಂಗಮಾರ್ಗ-

ನೀತಿಕಾಯಕಕ್ಕೆ ದೂರ ಭೀತಿಯಿಲ್ಲವೆಂದುಸುರುವ ।
ಮಾತು ಮಿಗಲು ತಂದು ಲಿಂಗದೊಡವೆಯದಕೆ ಕೊಟ್ಟು
ಕೊಂಬೊ ॥೨೩॥

ಮನದ ಕರಣ ಶುದ್ಧಗೊಳಿಪ ಯುಕ್ತಿಗೂಡಿ ಶಕ್ತಮೂಡಿ ।
ಜನನ ಮರಣ ವಿಹೀನನಿಂದ ವೀರಪಥದ ಶರಣನಾಗಿ ॥೨೪॥

ಶಕ್ತಿಯುಳಿದು ಭಕ್ತಿಯುಳಿದು ಸಹಜ ಮಾಟವಾಗಲದುವೆ ।
ಮುಕ್ತಲಿಂಗದಂಗ ಪ್ರಾಣವೆಂದು ಪೇಳ್ವ ಮಾರ್ಗವಿದುವೆ ॥೨೫॥

# ಉಪನಿಷತ್.

(ಲೇ—ಶ್ರೀ. ಹಣಮಂತರಾಯ ಸಾಸನೂರ ಎಮ್. ಏ. (ಬಿ. ಟಿ.) ವಿಜಾಪುರ)

‘ಉಪನಿಷತ್’ ಶಬ್ದದ ಉಚ್ಚರಣೆಯು ನನಗೊಂದು ಕಿನ್ನರೀ ಗಾನದಂತಾಗಿದೆ. ಪ್ರಾಚೀನ ವೈಭವಶಾಲಿಯಾದ ಭರತಖಂಡವು ಕಣ್ಣ ಮುಂದೆ ಕಟ್ಟಿದಂತಾಗುತ್ತದೆ. ಹಸುರು ಮುರಿಯುವ ಬನ. ಅಲ್ಲಿ ಮಂದವಾಗಿ ಹರಿಯುತ್ತ ಮಂಜುಲ ನಾದವನ್ನೀವ ನೀರಿನ ಪ್ರವಾಹ. ಅದರ ಸಮೀಪದಲ್ಲಿಯೇ ವಿಶಾಲವಾದ ಗಿಡದಡಿಯಲ್ಲಿ ಪಾಠ ಹೇಳುತ್ತಿರುವ ಋಷಿ ಶ್ರೇಷ್ಠರು. ಅವರ ಪಾದದಡಿಯಲ್ಲಿ ಎವೆಯಿಕ್ಕದೆ ಏಕಾಗ್ರಚಿತ್ತರಾಗಿ ಅವರ ಪಾಠಗಳನ್ನು ಶ್ರದ್ಧೆಯಿಂದ ಕೇಳುವ ಶಿಷ್ಯರು. ನಿಸರ್ಗದ ಮಧ್ಯದಲ್ಲಿ ಅದರ ರಹಸ್ಯವನ್ನರಿಯಲು ಗುರುಸಾಮೀಪ್ಯದಲ್ಲಿದ್ದ ಆ ಶಿಷ್ಯರು ಧನ್ಯರು! ಈ ರಹಸ್ಯಜ್ಞಾನಜ್ಯೋತಿಯನ್ನೇ ನಾವು ಕಾಣುವದು ಉಪನಿಷತ್ತಿನಲ್ಲಿ.

‘ಉಪನಿಷತ್’ ಶಬ್ದದ ಅರ್ಥಸಂಬಂಧವಾಗಿ ಪಂಡಿತರಲ್ಲಿ ಮತಭೇದವಿದೆ. ಉಪ-ನಿ-ಷದ್ ಧಾತುವಿನಿಂದ ಉಪನಿಷತ್ ಶಬ್ದವು ಹುಟ್ಟಿದೆ. ಉಪ-ಸಮೀಪ, ನಿಷದ್-ಕೂಡ್ರುವದು ‘ಉಪನಿಷತ್’ ಎಂದರೆ ವಿನಯಪೂರಿತನಾಗಿ ಶಿಷ್ಯನು ಗುರುವಿನ ಸಮೀಪದಲ್ಲಿ ಕೂಡ್ರುವದು.

ಕ್ರಮದಿಂದ, ಆಚಾರ್ಯರ ಸಮೀಪದಲ್ಲಿದ್ದುಕೊಂಡು ಶಿಷ್ಯರು ಪಡೆಯಲಿಚ್ಛಿಸುವ ವಿದ್ಯೆಗೆ ‘ಉಪನಿಷತ್’ ಎಂಬ ಹೆಸರು ಬಂತು. ಪಂಡಿತ ಮೋಕ್ಷ ಮುಲ್ಲರರು (*Max Muller*) ಇದೇ ಅರ್ಥದಲ್ಲಿ ಉಪನಿಷತ್ತನ್ನು ತಿಳಿದುಕೊಂಡಿದ್ದಾರೆ. ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಒಂದೊಂದು ಮುಖ್ಯ ರಹಸ್ಯವಡಗಿದೆ. ಆ ರಹಸ್ಯವನ್ನು ಸಾರುವ ವಾಕ್ಯವೂ ಸಹ ಚಿಕ್ಕದಾಗಿ, ಪುಷ್ಟವಾಗಿ ರಚಿತವಾಗಿದೆ. ಮುಖ್ಯಾರ್ಥದಲ್ಲಿ ಉಪನಿಷತ್ತು ಗೂಢವೂ, ಅನರ್ಘವೂ ಆದ ರಹಸ್ಯಬೋಧಕ ವಾಕ್ಯವೆಂದಾಗುತ್ತದೆ. ರಹಸ್ಯದ ಗಭೀರತೆಗನುಗುಣವಾಗಿ ಅದನ್ನು ಪ್ರತಿಪಾದಿಸುವ ವಾಕ್ಯಗಳನ್ನು ಏಕಾಂತದಲ್ಲಿ, ವಿನಮ್ರತೆಯಿಂದ ಕಲಿಯಬೇಕೆಂದು ಉಪ-ನಿ-ಷದ್ ಎಂಬ ಪದದಿಂದ ಗೊತ್ತಾಗುತ್ತದೆ.

ಆಚಾರ್ಯ ಶಂಕರರು 'ಸದ್' ಧಾತುವಿಗೆ ವಿನಾಶ, ಗತಿ ಮತ್ತು ಅವಸಾದನ ಎಂಬರ್ಥಗಳನ್ನು ಕೊಟ್ಟು ಉಪನಿಷದ್ ಶಬ್ದದ ಅರ್ಥವನ್ನು ಬೇರೆ ರೀತಿಯಾಗಿ ಮಾಡಿದ್ದಾನೆ. ಅವನ ಪ್ರಕಾರ, ತನ್ನ ಉಪಾಸಕರ ಜನ್ಮ ಮರಣಾದಿಗಳನ್ನು ನಾಶಗೊಳಿಸುವ, ಸಂಸಾರ ಮೂಲವಾದ ಅವಿದ್ಯೆಯನ್ನು ಬಡಿದೋಡಿಸುವ, ಬ್ರಹ್ಮಜ್ಞಾನವನ್ನೀವ ವಿದ್ಯೆಯೇ.

ಉಪನಿಷತ್ತಿನ ಎರಡನೆಯ ಹೆಸರು 'ಬ್ರಹ್ಮವಿದ್ಯಾ'. ಬ್ರಹ್ಮ ಅಥವಾ ಪರಮಾತ್ಮ ವಿಷಯಕ ಈ ವಿದ್ಯೆಯು ಇದಕ್ಕೋಸುಗ ಇದಕ್ಕೆ ಹೆಸರು ಬ್ರಹ್ಮವಿದ್ಯಾ ಅಥವಾ ಮುಂಡಕ ಭಾಷ್ಯದಂತೆ ಬ್ರಹ್ಮನಿಂದ ಮೊದಲು ಈ ವಿದ್ಯೆಯು ಉಕ್ತವಾಗಿರುವದೆಂದು, ಇದಕ್ಕೆ ಹೆಸರು 'ಬ್ರಹ್ಮವಿದ್ಯಾ'. ವೇದದ ನಾಲ್ಕು ಭಾಗಗಳು-ಸಂಹಿತೆ, ಬ್ರಾಹ್ಮಣ, ಆರಣ್ಯಕ, ಮತ್ತು ಉಪನಿಷತ್. ಉಪನಿಷತ್ತು ವೇದದ ಕೊನೆಯ ಭಾಗವಾದುದರಿಂದ ಇದಕ್ಕೆ ವೇದಾಂತವೆಂಬ ಹೆಸರು. ಉಪನಿಷತ್ತು ವೇದದ ಸಾರವು.

೩

ಮುಕ್ತಿಕೋಪನಿಷತ್ತಿನಲ್ಲಿ '೧೦೮' ಉಪನಿಷತ್ತುಗಳ ಹೆಸರು ದೊರೆಯುತ್ತವೆ. ಇವುಗಳಲ್ಲಿ ಕೆಳಗೆ ಕಾಣಿಸಿದ ೧೨ ಉಪನಿಷತ್ತುಗಳ ಪ್ರಾಚೀನತೆ ಮತ್ತು ಪ್ರಾಮಾಣಿಕತೆಯ ವಿಷಯದಲ್ಲಿ ಎಲ್ಲರೂ ಏಕಮತ-ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕಿ. ಮೊದಲಿನ ಹತ್ತು ಉಪನಿಷತ್ತುಗಳ ಮೇಲೆ ಶಂಕರಾಚಾರ್ಯರ ಭಾಷ್ಯವಿರುತ್ತದೆ.

ಕುರುಕ್ಷೇತ್ರದಿಂದ ವಾರಣಾಸಿವರೆಗಿದ್ದ ವಿಶಾಲವಾದ ಪ್ರದೇಶದಲ್ಲಿ ಉಪನಿಷತ್ತಿನ ರಹಸ್ಯಗಳು ಆಲೋಚಿತವಾಗಿತ್ತು. ಅತ್ಯಂತ ಪ್ರಾಚೀನ ಉಪನಿಷತ್ತುಗಳು ಕ್ರಿ. ಪೂ. ೧೦೦೦—೩೦೦ ವರ್ಷದಲ್ಲಿ ರಚಿತವಾಗಿರಬಹುದು. ಬುದ್ಧದೇವನು ಉಪನಿಷತ್ತಿನ ತತ್ವ ರಹಸ್ಯವನ್ನರಿತಿದ್ದನು. ಪ್ರಾಚೀನ ಉಪನಿಷತ್ತುಗಳಲ್ಲಿ ಕೆಲವು ಬೌದ್ಧ ಧರ್ಮದ ಅಭ್ಯುದಯದ ತರುವಾಯದಲ್ಲಿ ೪೦೦—೩೦೦ ಕ್ರಿ. ಪೂ. ದಲ್ಲಿ ರಚಿತವಾಗಿದ್ದವು. ಎಲ್ಲಕ್ಕೂ ಹೆಚ್ಚು ಪ್ರಾಚೀನ ಉಪನಿಷತ್ತುಗಳು ಗದ್ಯದಲ್ಲಿ ರಚಿತವಾಗಿದ್ದವು. ಮೇಲೆ ಹೇಳಿದ ೧೨ ಉಪನಿಷತ್ತುಗಳಲ್ಲಿಯ ಐತರೇಯ, ಕೌಷೀತಕೀ, ತೈತ್ತ

ರೀಯ, ಛಾಂದೋಗ್ಯ, ಬೃಹದಾರಣ್ಯಕ, ಮತ್ತು ಕೇನೋಪನಿಷತ್ತುಗಳ ಗದ್ಯಾಂಶ ಪ್ರಾಚೀನತಮವಾದದ್ದು.

ಉಪನಿಷತ್ ಸಾಹಿತ್ಯ ರಚನೆ ೧೪–೧೫ ಶತಮಾನಗಳ ವರೆಗೆ ನಡೆದಿತ್ತು. ಉಪನಿಷಿತ್ ಸಮ್ಮತವಲ್ಲದ್ದು ಪ್ರಾಮಾಣಿಕವಲ್ಲ. ಕಾರಣ ಸಾಂಪ್ರದಾಯಿಕ ಮತವಾದದ ಪ್ರವರ್ತಕರು ತಮ್ಮ ಮತದ ಪ್ರಾಮಾಣಿಕತೆ ಪ್ರತಿಷ್ಠೆಗಳಿಗಾಗಿ ತಾವೇ ಗ್ರಂಥರಚನೆ ಮಾಡಿ ಅವುಗಳಿಗೆ ಉಪನಿಷತ್ತೆಂದು ಕರೆದರು. ಇವೆಲ್ಲವುಗಳಿಗೆ ಸಾಂಪ್ರದಾಯಿಕ ಉಪನಿಷತ್ತೆಂದು ಹೆಸರು ಕೊಡುವದು ಯೋಗ್ಯ. ಇವುಗಳ ಪ್ರಾಮಾಣಿಕತೆಯನ್ನು ಯಾರೂ ಸ್ವೀಕಾರ ಮಾಡಿಲ್ಲ.

ಎರಡನೆಯ ಯುಗದಲ್ಲಿ ಕಠ, ಈಶಾ, ಶ್ವೇತಾಶ್ವತರ, ಮುಂಡಕ, ಹಾಗೂ ಮಹಾನಾರಾಯಣ.

ಮೂರನೆಯ ಯುಗದಲ್ಲಿ, ಪ್ರಶ್ನ, ಮೈತ್ರಾಯಣೀ, ಮಾಂಡೂಕ್ಯ, ನಾಲ್ಕನೆಯ ಯುಗದಲ್ಲಿ ಉಳಿದ ಉಪನಿಷಿತ್ತುಗಳು ರಚಿತವಾಗಿವೆ.

ಹೆಚ್ಚು ರೂಢಿಯಲ್ಲಿದ್ದ ಉಪನಿಷತ್ತುಗಳಲ್ಲಿ ಕೆಳಗಿನಂತೆ ವೇದಗಳಿಗೆ ಸಂಬಂಧವಾಗಿವೆ.

೧. ಋಗ್ವೇದ— (೧) ಐತರೇಯ, (೨) ಕೌಷೀತಕಿ.

೨. ಸಾಮವೇದ— (೧) ಛಾಂದೋಗ್ಯ, (೨) ಕೇನ.

೩. ಕೃಷ್ಣಯಜುರ್ವೇದ— (೧) ತೈತ್ತಿರೀಯ, (೨) ಕಠ, (೩) ಶ್ವೇತಾಶ್ವತರ.

೪. ಶುಕ್ಲಯಜುರ್ವೇದ— (೧) ಈಶಾ, (೨) ಬೃಹದಾರಣ್ಯಕ.

೫. ಅಥರ್ವವೇದ— (೧) ಮುಂಡಕ, (೨) ಪ್ರಶ್ನ, (೩) ಮಾಂಡೂಕ್ಯ.

೩

ಉಪನಿಷತ್ತಿನಲ್ಲಿ ನಾವು ಕಾಣುವದು ಆರ್ಯಜಾತಿಯ ಪ್ರಾಚೀನತಮ ಪೂಜ್ಯ ವಿಚಾರಲಹರಿ. ಉಪನಿಷತ್ತುಗಳು ಶುದ್ಧ ದರ್ಶನಗಳಲ್ಲ.

ಯಾಕೆಂದರೆ ದರ್ಶನದ ಪ್ರಧಾನ ಲಕ್ಷಣವಾದ ಶೃಂಖಲಾ ಪ್ರಣಾಲೀ ಬದ್ಧತಾವದಿಂದಾದ ವಸ್ತುವಿನ್ಯಾಸವು ಯಾವ ಉಪನಿಷತ್ತಿನಲ್ಲಿಯೂ ದೊರೆಯುವದಿಲ್ಲ. ಉಪನಿಷತ್ತುಗಳನ್ನೋದಿದರೆ ತಿಳಿಯುವದೇನಂದರೆ ದರ್ಶನದ ವಿಚಾರಶೃಂಖಲೆಯನ್ನವಲಂಬಿಸಿ ತತ್ತ್ವನಿರ್ಣಯದ ಅಪೇಕ್ಷೆಯಿಂದಲ್ಲ; ಏಕಾಂತದ ವಿಚಾರದ ಫಲವಾಗಿ ಹಣ್ಣಾಗಿಸಿದ್ದು ಉಪನಿಷತ್ತು. ಉಪನಿಷತ್ತಿಗೆ ಶುದ್ಧ ದರ್ಶನವೆನ್ನದೆ ಅರ್ಧಕಾವ್ಯ ಅರ್ಧದರ್ಶನ, ಅಥವಾ ದರ್ಶನಾತ್ಮಕ ಕಾವ್ಯ. ಇಲ್ಲವೆ ಕಾವ್ಯಾತ್ಮಕ ದರ್ಶನವೆನ್ನಲು ಅಡ್ಡಿಯಿಲ್ಲ.

ಭಾರತೀಯ ಎಲ್ಲ ದರ್ಶನ ಮತ್ತು ಧರ್ಮದ ಮೂಲ ಬೀಜ ಉಪನಿಷತ್ತುಗಳಲ್ಲಿ. ಪರಸ್ಪರ ವಿರುದ್ಧಮತವಾದಿ ಧರ್ಮಾಚಾರ್ಯರೂ, ದಾರ್ಶನಿಕರೂ ಏಕ ವಾಕ್ಯದಿಂದ ಉಪನಿಷತ್ತಿನ ಪ್ರಾಮಾಣಿಕತೆಯನ್ನು ಒಪ್ಪಿದ್ದಾರೆ. ಆದರೆ ಪ್ರತಿಯೊಬ್ಬರೂ ತಮ್ಮ ತಮ್ಮ ಮತಗಳಿಗೆ ಉಪನಿಷತ್ತಿನ ಆಧಾರವನ್ನು ಕೊಡುತ್ತಾರೆ. ಪಂಡಿತ ಮೋಕ್ಷ್ ಮುಲ್ಲರರು (Max Muller) ಇದನ್ನೇ ಒಂದು ಸುಂದರ ಉಪಮೆಯಿಂದ ತಿಳಿಸಿದ್ದಾರೆ— "ಗಂಗಾ, ಸಿಂಧು, ಬ್ರಹ್ಮಪುತ್ರ ಮೊದಲಾದ ಹೊಳೆಗಳು ಬೇರೆ ಬೇರೆ ದಿಕ್ಕಿನಲ್ಲಿ ಹರಿಯುತ್ತಿದ್ದರೂ, ಅವೆಲ್ಲವುಗಳ ಉಗಮ ನಗಾಧಿರಾಜನಾದ ಹಿಮಾಲಯವು. ಅದರಂತೆ ಭರತಖಂಡದ ದಾರ್ಶನಿಕ ಚಿಂತಾಧಾರೆಯು ಭಿನ್ನ ಭಿನ್ನ ಮಾರ್ಗಗಳಲ್ಲಿ ಹರಿಯುತ್ತಿದ್ದರೂ ಅವೆಲ್ಲವುಗಳ ಮೂಲ ಉಪನಿಷತ್ತು." ಬೌದ್ಧಧರ್ಮದ ಮೇಲೆಯಾದರೂ ಉಪನಿಷತ್ತಿನ ಪ್ರಭಾವವಿದೆ. ಗೂಢವಾದ ರಹಸ್ಯವನ್ನು ಜನಸಾಮಾನ್ಯರಿಗೆ ಬುದ್ಧದೇವನು ತಿಳಿಸಿಕೊಟ್ಟನು. [Historical Buddhism means the spread of the upanishad doctrines among the people— E. Holmes] ನಾವು ಪ್ರಾಚೀನ ಭಾಷ್ಯಕಾರರ ವ್ಯಾಖ್ಯೆಯ ಸಹಾಯದಿಂದ ಉಪನಿಷತ್ತಿನ ರಹಸ್ಯವನ್ನು ತಿಳಿಯುತ್ತೇವೆ. ಆದರೆ ಭಾಷ್ಯಕಾರರು ಭಾಷ್ಯಕಾರರೇ. ಆದುದರಿಂದ ಈ ಭಾಷ್ಯಕಾರರ ಸಂಬಂಧವಾಗಿ ನಾವು ಜಾಗರೂಕವಾಗಿರಬೇಕಾಗುವದು. ಈ ಭಾಷ್ಯಕಾರರು ಒಂದೊಂದು ದಾರ್ಶನಿಕ ಮತವಾದದ ಪೋಷಕತಾ ಕಲ್ಪದಿಂದ ಉಪನಿಷತ್ತಿನ ವ್ಯಾಖ್ಯೆಯನ್ನು ಮಾಡಿದ್ದಾರೆ. ಅದ್ವೈತಾಚಾರ್ಯ ಶಂಕರನು ಉಪನಿಷತ್ತಿನೊಳಗಿಂದ ಅದ್ವೈತವಾದದ ತಥ್ಯವನ್ನು ಹೊರಗೆಡವಿದ್ದಾನೆ; ಅದ್ವೈತವಾದಾತ್ಮಕ ವ್ಯಾಖ್ಯೆಯನ್ನೇ ಮಾಡಿದ್ದಾನೆ. ದ್ವೈತವಾದೀ ಮಧ್ವಾ

ಚಾರ್ಯರು ದ್ವೈತವಾದಾತ್ಮಕ ವ್ಯಾಖ್ಯೆಯನ್ನು ಮಾಡಿದ್ದಾರೆ. ವಿಶಿಷ್ಟಾದ್ವೈತಾಚಾರ್ಯರು ವಿಶಿಷ್ಟಾದ್ವೈತಕ್ಕೆ ಪೋಷಕವಾಗುವ ಹಾಗೆ ವ್ಯಾಖ್ಯೆಯನ್ನು ಮಾಡಿದ್ದಾರೆ. ವಿಶಿಷ್ಟಾದ್ವೈತ ಸಂಪ್ರದಾಯದ ಪ್ರಧಾನ ಆಚಾರ್ಯ ಶ್ರೀರಾಮಾನುಜನು ಉಪನಿಷತ್ತಿನ ಯಾವ ಭಾಷ್ಯವನ್ನು ರಚನೆ ಮಾಡಿಲ್ಲ. ಆದರೆ ಅವರ ಶಿಷ್ಯಪ್ರಶಿಷ್ಯರು ಕೆಲವು ಉಪನಿಷತ್ತುಗಳ ಭಾಷ್ಯ ಅಥವಾ ಟೀಕಾ ರಚನೆಯನ್ನು ಮಾಡಿದ್ದಾರೆ. ಈ ಎಲ್ಲ ಟೀಕಾಕಾರರಲ್ಲಿ ಕೂರನಾರಾಯಣ ಮತ್ತು ರಂಗರಾಮಾನುಜರ ಹೆಸರು ಬರೆಯಲರ್ಹವು. ಅದೇನೆ ಇರಲಿ. ಇದರಿಂದ ನಮಗೆ ಕಂಡುಬರುವದು ಉಪನಿಷತ್ತಿನಲ್ಲಿರುವ ಎಲ್ಲ ಆಚಾರ್ಯರ ಶ್ರದ್ಧೆ. ಉಪನಿಷತ್ತಿನಲ್ಲಡಕವಾದ ಸತ್ಯವು ಎಲ್ಲ ಸಂಪ್ರದಾಯಕ್ಕೆ ಮೀರಿದ್ದು, ಆದರೂ ಎಲ್ಲ ಸಂಪ್ರದಾಯಗಳು ಇದರೊಳಗಿಂದಲೇ ತಮ್ಮ ಮತಗಳಿಗೆ ಸಮರ್ಥನೆಯನ್ನು ಪಡೆಯುತ್ತವೆ. They are not associated with any particular religion but they have the breadth of universal soil that can supply with living sap all religions which have any spiritual ideal hidden at their core, or apparent in their fruit and foliage"—Rabindranath)

ಋಷಿಗಳ ಮತದಲ್ಲಿ ಭಗವಂತನೇ ಎಲ್ಲ ವಿದ್ಯೆಯ ಪ್ರವರ್ತಕನು.
(೧) ಪ್ರಜ್ಞಾ ಚ ತಸ್ಮಾತ್ ಪ್ರಸೂತಾ ಪುರಾಣೀ—ಶ್ವೇತಾಶ್ವತರ ೪।೧೮
(೨) ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ—ಶ್ವೇತಾಶ್ವತರ ೬।೧೮.

ಭಗವಂತನು ಮೊದಲು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಕೊಟ್ಟನು. ಬ್ರಹ್ಮನು ಸರ್ವವಿದ್ಯೆಯ ಆಶ್ರಯವಾದ ಈ ಬ್ರಹ್ಮವಿದ್ಯೆಯನ್ನು ತನ್ನ ಹಿರಿಯ ಮಗನಾದ ಅಥರ್ವನಿಗೆ ದಯಪಾಲಿಸಿದನು. ಅಥರ್ವನು ಇದನ್ನು ಅಂಗಿರನಿಗೆ ಕೊಟ್ಟನು. ಅಂಗಿರನು ಭರದ್ವಾಜಪುತ್ರ ಸತ್ಯಬಾಹುವಿಗೆ ಹಾಗು ಸತ್ಯಬಾಹು ಅಂಗಿರಗೆ ಕೊಟ್ಟನು. (ಮುಂಡಕ ೧।೧।೧—೨) ಈ ರೀತಿಯಿಂದ ಶಿಷ್ಯಪ್ರಶಿಷ್ಯ ಕ್ರಮದಿಂದ ಬ್ರಹ್ಮವಿದ್ಯೆಯು ಜಗತ್ತಿನಲ್ಲಿ ಪ್ರಸಾರವಾಯಿತು.

ಬ್ರಹ್ಮವಿದ್ಯಾ ವಿಷಯ ಚರ್ಚೆಯು ಕೇವಲ ಬ್ರಾಹ್ಮಣರ ಸೊತ್ತು ಅಲ್ಲ ಎಂಬುದು ಉಪನಿಷತ್ತುಗಳಿಂದ ತಿಳಿದುಬರುತ್ತದೆ. ಬ್ರಾಹ್ಮಣರಿ

ಗಿಂತ ಕ್ಷತ್ರಿಯ ರಾಜರ್ಷಿಗಳಲ್ಲಿಯೇ ಬ್ರಹ್ಮವಿದ್ಯೆಯ ವ್ಯಾಖ್ಯಾತೃಗಳು ಹೆಚ್ಚು. ಗಾರ್ವೆ, ವಿಂಟರ್ನಿಜ ಮುಂತಾದ ಪಂಡಿತರ ಅಭಿಪ್ರಾಯ ದಂತೆ ಉಪನಿಷತ್ಸಂಬಂಧವಾದ ಜ್ಞಾನವು ಪ್ರಕಾಶಕ್ಕೆ ಬಂದದ್ದು ಕ್ಷತ್ರಿ ಯರಿಂದ, ಬ್ರಾಹ್ಮಣರಿಂದಲ್ಲ. ಗಾರ್ವೆ ಅವರು ಇದರ ಪ್ರಮಾಣವಾಗಿ, ಗಾರ್ಗ್ಯ, ಬಾಲಾಕಿ, ಅಜಾತ ಶತ್ರು (ಬೃಹದಾರಣ್ಯಕ—೨।೧) ಶ್ವೇತ ಕೇತು ಮತ್ತು ಪ್ರವಾಹಣ ಜೈವಲಿಯ (ಛಾಂದೋಗ್ಯ ೫।೩) ಉಪಾ ಖ್ಯಾನದ ಉಲ್ಲೇಖವನ್ನು ಮಾಡಿರುತ್ತಾರೆ. ಬ್ರಾಹ್ಮಣ, ಕ್ಷತ್ರಿಯ, ನರ ನಾರೀ ಎಲ್ಲರೂ ಉಪನಿಷದಭ್ಯಾಸಕ್ಕೆ ಅರ್ಹರು. ಒಂದಾನೊಂದು ಸಂದ ರ್ಭದಲ್ಲಿ ಗಾರ್ಗಿಯು ಯಾಜ್ಞವಲ್ಕ್ಯರನ್ನು ಕುರಿತು ಸೃಷ್ಟಿಯ ಮೂಲದ ವಿಚಾ ರವಾಗಿ ಕೇಳಿದಳು. ಇನ್ನೊಂದು ಸಂದರ್ಭದಲ್ಲಿ ಆಕೆ ಋಷಿಗಳನೇಕರು ಸೇರಿರುವ ಸಭೆಯಲ್ಲಿ ಯಾಜ್ಞವಲ್ಕ್ಯರನ್ನು ಚರ್ಚೆಗೆ ಕರೆದಳು. ಇನ್ನೊಂದು ಸಂದರ್ಭದಲ್ಲಿ ಆತ್ಮದ ವಿಚಾರವಾಗಿ ತಮ್ಮ ಹೆಂಡತಿಯಾದ ಮೈತ್ರೇ ಯಿಗೆ ಯಾಜ್ಞವಲ್ಕ್ಯರು ಬೋಧಿಸಿದರು.

ಶತಪಥ ಬ್ರಾಹ್ಮಣದಲ್ಲಿ ಜನಕ ಮಹಾರಾಜನು ತನ್ನ ಜ್ಞಾನ ಸಂಪತ್ತಿಯಿಂದ ಬ್ರಾಹ್ಮಣರನ್ನು ಸೋಲಿಸಿದ್ದರ ವರ್ಣನೆಯಿದೆ. ಈ ಜನ ಕರಾಜನಿಂದ ಯಾಜ್ಞವಲ್ಕ್ಯನು ಆಮೇಲೆ ಉಪದೇಶಹೊಂದಿದನು. ಶ್ವೇತಕೇತುವಿನ ತಂದೆಯಾದ ಉದ್ದಾಲಕನು ಪ್ರವಾಹಣ ಜಾಬಾಲ ನೆಂಬ ದೊರೆಯ ಬಳಿಗೆ ಹೋಗಿ 'ಸತ್ತಮೇಲೆ ಏನಾಗುವದು ? ಇದನ್ನು ತಿಳಿಸಬೇಕು' ಎಂದು ಕೇಳಿದನು. ಆಗ ಆ ಕ್ಷತ್ರಿಯನು "ಈ ಜ್ಞಾನ ಇದುವರೆಗೂ ಬ್ರಾಹ್ಮಣರಿಗೆ ತಿಳಿದಿದ್ದಿಲ್ಲ. ಕ್ಷತ್ರಿಯರಿಗೆ ಮಾತ್ರ ತಿಳಿದಿ ರುವದು" ಎಂದು ಹೇಳಿ ಆತ್ಮತತ್ವವನ್ನು ತಿಳಿಸಿದನು. ಹೀಗೆಯೇ ರಾಜ ನಾದ ಅಶ್ವಪತಿ ಕೈಕೇಯನಿಂದ ಬ್ರಾಹ್ಮಣರು ಆತ್ಮದ ವಿಚಾರವನ್ನು ತಿಳಿದುಕೊಂಡರು.

ಇದರಿಂದ ವೇದಾಂತ ವಿಚಾರಕ್ಕೆ ಬ್ರಾಹ್ಮಣರಿಗೂ ಕ್ಷತ್ರಿಯಾದಿ ಗಳಿಗೂ ಸಮಾನವಾದ ಹಕ್ಕುಗಳಿದ್ದವೆಂಬುದು ತಿಳಿಯುತ್ತದೆ.

೫

ಉಪನಿಷತ್ತಿನ ಮತ್ತೊಂದು ಹೆಸರು 'ರಹಸ್ಯವಿದ್ಯಾ'. ಇದನ್ನು ವಿಶಿಷ್ಟ ಅಧಿಕಾರಿಗೇ ದಾನ ಮಾಡಬೇಕು. ಬ್ರಹ್ಮವಾದೀ ಋಷಿಗಳು

ಶಿಷ್ಯರ ಬ್ರಹ್ಮವಿದ್ಯಾ ಲಾಭದ ಉಪಯೋಗಿ ಯಾರ ವಿವೇಕ, ವೈರಾಗ್ಯ ಷಟ್ ಸಂಪತ್ತಿ (ಶಮ, ಧಮ, ತಿತಿಕ್ಷಾ ಉಪರತಿ, ಶ್ರದ್ಧಾ, ಸಮಾಧಾನ) ಮತ್ತು ಮುಮುಕ್ಷುತ್ವ ಪರೀಕ್ಷಿಸಿ ಅವನಿಗೆ ಬ್ರಹ್ಮವಿದ್ಯೆಯನ್ನು ಕೊಡುತ್ತಿದ್ದರು.

ಭರದ್ವಾಜ ಪುತ್ರ ಸುಕೇಶಾ, ಶಿಬಿಯ ಪುತ್ರ ಸತ್ಯಕಾಮ, ಸೌರ್ಯಾಯಣಿ, ಗಾರ್ಗ್ಯ, ಅಶ್ವಲನ ಪುತ್ರ ಕೌಶಲ್ಯ, ವಿದರ್ಭನ ಪುತ್ರ ಭಾರ್ಗವ, ಕರ್ತನ ಪುತ್ರ ಕಬಂಧ— ಇವರು ಪರಬ್ರಹ್ಮ ಸಂಬಂಧದಿಂದ ಉಪದೇಶಪಡೆಯುವದಕ್ಕೋಸುಗ ಭಗವಾನ್ ಪಿಪ್ಪಲಾದನ ಹತ್ತಿರ ಹೋದರು. ಋಷಿ ಅವರಿಗೆ ಹೇಳುತ್ತಾನೆ.— ನೀವು ಪೂರ್ಣ ಒಂದು ವರ್ಷ, ತಪಸ್ಸು, ಬ್ರಹ್ಮಚರ್ಯ ಮತ್ತು ಶ್ರದ್ಧೆಯಿಂದ ಇರತಕ್ಕದ್ದು.

ಛಾಂದೋಗ್ಯ ಉಪನಿಷತ್ತಿನಲ್ಲಿ ಹೀಗೆ ಹೇಳಿದೆ. ದೇವತೆಗಳಲ್ಲಿ ಇಂದ್ರ ಮತ್ತು ಅಸುರರಲ್ಲಿ ವಿರೋಚನ, ಬ್ರಹ್ಮತತ್ವ ತಿಳಿಯುವದಕ್ಕೋಸುವ ಸಮಿತ್ ಹಸ್ತರಾಗಿ ಪ್ರಜಾಪತಿಯ ಸಮೀಪಕ್ಕೆ ಹೋದರು. ೩೨ ವರ್ಷ ಬ್ರಹ್ಮಚರ್ಯ ಮಾಡಿದ ತರುವಾಯ ಪ್ರಜಾಪತಿ ಅವರಿಗೆ ದೇಹಾತ್ಮವಾದದ ಉಪದೇಶ ಮಾಡಿದನು. ವಿರೋಚನನು ಅದರಲ್ಲಿಯೇ ಸಂತುಷ್ಟನಾಗಿ ತಿರುಗಿದನು. ಇಂದ್ರನು ಇದರಲ್ಲಿ ಸಂತುಷ್ಟನಾಗದೆ ಪುನಃ ಉಚ್ಚತರ ಉಪದೇಶ ಪ್ರಾರ್ಥನಾ ಮಾಡಿದನು. ಪ್ರಜಾಪತಿ ಅವನಿಗೆ ಪುನಃ ೩೨ ವರ್ಷ ಬ್ರಹ್ಮಚರ್ಯವ್ರತ ಪಾಲಿಸಲಿಕ್ಕೆ ಹೇಳಿದನು. ಇದೇ ರೀತಿ ಹೆಚ್ಚಿನ ಜ್ಞಾನಕ್ಕಾಗಿ ೧೦೧ ವರ್ಷ ಬ್ರಹ್ಮಚರ್ಯ ವ್ರತ ಪಾಲಿಸಿದನು. ಆ ಮೇಲೆ ಪ್ರಜಾಪತಿಯು ಇಂದ್ರನಿಗೆ ಬ್ರಹ್ಮವಿದ್ಯೆಯನ್ನು ದಯಪಾಲಿಸಿದನು.

೬

ವೈದಿಕ ಸಾಹಿತ್ಯದೊಡನೆ ಪಾಶ್ಚಾತ್ಯ ಜಾತಿಯ ಪ್ರಥಮ ಪರಿಚಯವಾದುದು ಉಪನಿಷತ್ತಿನಿಂದ ಸಮ್ರಾಟ ಶಹಾಜಹಾನನ ಹಿರಿಯ ಮಗನಾದ ದಾರಾಶುಕನು ತನ್ನ ಧರ್ಮ ಮತದ ಉದಾರತೆಗೋಸುಗ ಭಾರತ ಇತಿಹಾಸದಲ್ಲಿ ಪ್ರಸಿದ್ಧನು. ಅವನು ಹಿಂದೂ ಮುಸಲ್ಮಾನ ಐಕ್ಯತೆಗೆ ಬಹಳ ಸಾಹಸಪಟ್ಟಿದ್ದಾನೆ. ಆ ಉದ್ದೇಶದಿಂದ ಒಂದು ಗ್ರಂಥವನ್ನೂ ರಚನೆ ಮಾಡಿದ್ದಾನೆ. ೧೬೪೦ ಕ್ರಿಸ್ತಾಬ್ದದಲ್ಲಿ ಕಾಶ್ಮೀರದಲ್ಲಿ

ರುವಾಗ ದಾರಾನು ಮೊದಲು ಉಪನಿಷತ್ತಿನ ಮಹಿಮೆಯನ್ನು ತಿಳಿದನು. ಅವನು ವಾರಣಾಸಿಯಿಂದ ಕೆಲವು ಜನ ಪಂಡಿತರನ್ನು ಆಮಂತ್ರಿಸಿ ಅವರ ಸಹಾಯದಿಂದ "೫೦" ಉಪನಿಷತ್ತುಗಳನ್ನು ಪಾರಸ್ಯ ಭಾಷೆಯಲ್ಲಿ ಅನುವಾದ ಮಾಡಿದನು. ೧೬೫೭ ನೇ ಇಸ್ವಿಯಲ್ಲಿ ಈ ಅನುವಾದವು ಸಮಾಪ್ತವಾಯಿತು. ಅಕಬರನ ಕಾಲದಲ್ಲಿಯೂ ಉಪನಿಷತ್ತಿನ ಅನುವಾದವು ಕೆಲಮಟ್ಟಿಗೆ ಆಗಿತ್ತು.

ಉಪನಿಷತ್ತುಗಳು ಫ್ರೆಂಚ ಮತ್ತು ಲ್ಯಾಟಿನ್ ಭಾಷೆಗಳಲ್ಲಿ ಅನುವಾದಿತವಾಗಿವೆ. ಅನೇಕಾನೇಕ ಪಾಶ್ಚಾತ್ಯ ವಿದ್ವಾಂಸರು ಉಪನಿಷತ್ತಿನ ಹಿರಿಮೆಯನ್ನು ಮುಕ್ತ ಕಂಠದಿಂದ ಹಾಡಿದ್ದಾರೆ.

೭

ಒಟ್ಟಾರೆ ಹೇಳುವದೇಂದರೆ, ಉಪನಿಷತ್ತುಗಳಿಗೆ ಸಮಾನ ಗ್ರಂಥಗಳು ಪ್ರಪಂಚದ ಸಾಹಿತ್ಯದಲ್ಲಿ ಅತಿ ವಿರಳ. ಅದರ ಅಭ್ಯಾಸವನ್ನು ಪ್ರತಿಯೊಬ್ಬ ಭಾರತೀಯನು ಮಾಡಲೇಬೇಕು. ತೈತ್ತಿರಿಯೋಪನಿಷತ್ತಿನಲ್ಲಿ ಗುರು ಶಿಷ್ಯನಿಗೆ ಬೋಧೆ ಮಾಡುತ್ತಾನೆ.— "ಸತ್ಯವನ್ನೇ ನುಡಿ, ಧರ್ಮಮಾರ್ಗದಲ್ಲಿಯೇ ನಡೆ. ವೇದಶಾಸ್ತ್ರಗಳ ಅಭ್ಯಾಸ ಮಾಡಿರುವೆನೆಂದು ಹೆಮ್ಮೆಪಡಬೇಡ. ನಿನ್ನ ಗುರುವಿಗೆ ತಕ್ಕ ರೀತಿಯಲ್ಲಿ ದಕ್ಷಿಣೆಯನ್ನು ಸಲ್ಲಿಸು. ಅವರ ಅಪ್ಪಣೆಯನ್ನು ಪಡೆದು ವಿವಾಹವಾಗು. ಐಶ್ವರ್ಯ-ಶ್ರೇಯಸ್ಕರ ಸತ್ಯವನ್ನೂ ಧರ್ಮವನ್ನೂ ಬಿಡಬೇಡ. ವೇದಾದಿ ಶಾಸ್ತ್ರಗಳನ್ನು ಮರೆಯಬೇಡ. ತಾಯಿಯನ್ನು ದೇವರೆಂದು ತಿಳಿಯುವವನಾಗು: ತಂದೆಯನ್ನು ದೇವರೆಂದು ತಿಳಿಯುವವನಾಗು. ಅತಿಥಿಯನ್ನು ದೇವರೆಂದು ತಿಳಿಯುವವನಾಗು. ಅನಿಂದಿತ ಕರ್ಮಗಳನ್ನು ಮಾಡು; ನಿಂದಿತವಾದವುಗಳನ್ನು ಬಿಡು; ಸದಾಚಾರಗಳನ್ನು ನಡೆಸು; ಉಳಿದವುಗಳನ್ನು ಬಿಡು. ನಿನಗಿಂತ ಉತ್ತಮರಾದವರಿಗೆ ಸತ್ಕಾರಾದಿಗಳನ್ನು ಮಾಡು; ಪಾತ್ರಾಪಾತ್ರ ವಿಚಾರ ಮಾಡಿ ದಾನ ಮಾಡು. ಯಜ್ಞಾದಿ ಕರ್ಮಗಳಲ್ಲಿ ನಿನಗೆ ಸಂಶಯವುಂಟಾದರೆ ಜ್ಞಾನಿಗಳೂ ದಯಾಶಾಲಿಗಳೂ ಆದ ಹಿರಿಯರಿಂದ ಅವುಗಳನ್ನು ಪರಿಹಾರ ಮಾಡಿಕೋ; ಬ್ರಹ್ಮಜ್ಞಾನಿಗಳು ಹೇಗೆ ನಡೆದುಕೊಳ್ಳುತ್ತಾರೋ ಅದನ್ನು ನೋಡಿ ತಿಳಿದುಕೋ. ಭಗವದಾಜ್ಞೆ ಈ ರೀತಿಯಾಗಿ ಇದೆ. ವೇದೋಪನಿಷತ್ತುಗಳೆಲ್ಲ ಇವನ್ನೇ ಬೋಧಿಸುತ್ತವೆ."

ಈ ಸುಂದರವಾದ ತತ್ವಗಳನ್ನು ಅನುಸರಿಸಿದಲ್ಲಿ ಭರತಖಂಡವು ಬೇಗನೆ ಮಂಗಲ ಪ್ರಭಾತವನ್ನು ಕಾಣುವದಲ್ಲವೇ ?

"ಯೋ ವೈಭೂಮಾ ತತ್ಸುಖಂ ನಾಲ್ಪೆ ಸುಖಮಸ್ತಿ"

---

## ಗುರು ಲಿಂಗ ಜಂಗಮ.

(ಲೇ— ಬಸಪ್ಪ ಚನ್ನಪ್ಪ ಹಟ್ಟೀದ, ಮಂಟೂರು)

---

ಈ ವಿಷಯವನ್ನು ಕುರಿತು, ನಾನು ಈ ಮೊದಲು ಬರೆದ ಲೇಖವು ಶಿವಾನುಭವದ ಮೇ (೧೯೪೩) ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿರುವದಷ್ಟೇ. ಆದರೆ ಅದು ಬರೀ ಗುರು ಲಿಂಗ ಜಂಗಮದ ನಿಜ ಕಲ್ಪನೆಯ ದಿಗ್ದರ್ಶನ ಮಾತ್ರವಿರುತ್ತದೆ. ಅದನ್ನು ಇನ್ನೂ ವಿಸ್ತರಿಸುವದು ಅವಶ್ಯವಿರುವದರಿಂದ, ಪುನಃ ಆ ವಿಷಯವನ್ನು ಈಗ ಎತ್ತಲಾಗಿದೆ. ಇದರಲ್ಲಿ ಅವುಗಳ ಪರಸ್ಪರ ಸಂಬಂಧವನ್ನು ಕುರಿತು ಆಲೋಚಿಸುವದದೆ.

### ಲಿಂಗ ಭಕ್ತರ ಸಂಬಂಧ.

"ತನುವಿನೊಳಗೆ ಲಿಂಗ, ಲಿಂಗದೊಳಗೆ ಪ್ರಾಣವಿದ್ದರೆ ಬೇರಿಟ್ಟು ನುಡಿವ ಭಿನ್ನ ಜ್ಞಾನಿಗಳಿಗೆ, ಲಿಂಗವೆಲ್ಲಿಯದೋ ? ಲಿಂಗವಿಲ್ಲವಾಗಿ ಪ್ರಸಾದವಿಲ್ಲ, ಪ್ರಸಾದವಿಲ್ಲವಾಗಿ ಮುಕ್ತಿಯಿಲ್ಲ ನೋಡಾ. ಇದು ಕಾರಣ ಭಿನ್ನ ಭಾವವಳಿದು ನಿನ್ನೊಳಡಗಿದೆನು ಕಾಣಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ."

ಈ ವಚನದಲ್ಲಿ ಶ್ರೀ ತೋಂಟದ ಸಿದ್ಧಲಿಂಗ ಯತಿಗಳು, ತನುವಿನೊಳಗೆ ಪ್ರಾಣ ರೂಪಿಯಾದ ಲಿಂಗವಿರುವದರಿಂದ, ತನುವಿಗೂ ಲಿಂಗಕ್ಕೂ ಭೇದ ಕಲ್ಪಿಸಿ, ತನುವಿನಿಂದ ಲಿಂಗವನ್ನು ಬೇರ್ಪಡಿಸಿ ನುಡಿಯುವವರು, ಲಿಂಗಕ್ಕೂ ಪ್ರಸಾದಕ್ಕೂ ಮುಕ್ತಿಗೂ ದೂರವಾಗುವರೆಂದು ಸ್ಪಷ್ಟವಾಗಿ ಹೇಳುತ್ತಾರೆ. ಆದ ಕಾರಣ ದೇಹ, ಪ್ರಾಣ, ಲಿಂಗ, ಈ ಹೆಸರುಗಳು ಸ್ಥೂಲ ಸೂಕ್ಷ್ಮ ಮಾನದಿಂದ ಇಲ್ಲಿಗೆ ಹೊರ ಒಳಗುಗಳಿಂದ ಪ್ರಚಲಿತವಾಗಿರುವವೇ ಹೊರತು, ನಿಜವಾಗಿ ಇರುವ ವಸ್ತುವು ಒಂದೇ

ಒಂದಾಗಿರುವದು. ಆದುದರಿಂದ ತನುವೇ ಭಕ್ತ, ಪ್ರಾಣವೇ ಲಿಂಗವೆಂದು ಹೇಳಿದರೂ ಅವೆರಡೂ ಒಂದೇ ವಸ್ತುವು. ಅವುಗಳಲ್ಲಿ ಎಂದೆಂದೂ ಭಿನ್ನ ಭಾವವನ್ನು ಹೊಂದ ಕೂಡದೆಂದು ಒತ್ತಿಯೇ ಹೇಳಿರುವರು. ಹಾಗೆ ತಿಳಿದದ್ದಾದರೆ, ಅವರು ಭೂಭಾರಕರಾದ ಶುದ್ಧ ಭವಿಗಳೇ ಎಂದು ನಿಸ್ಪೃಹತೆಯಿಂದ ಅಪ್ಪಣೆ ಕೊಡಿಸಿದ್ದಾರೆ. ಇದೇ ಮೇರೆಗೆ ಶ್ರೀ ಚನ್ನಬಸವಣ್ಣನವರಾದರೂ—

"ದೇವಭಕ್ತರ ಬಗೆಯು ಬೇರೆಂದರೆ, ಭಕ್ತಿಯು ಬೀಜದಂಕುರವೇ ?
ಸತಿ ಪತಿಯು ಬೇರಾದರೆ, ಪಿಂಡದಂಕುರವೇ ? ಭೂಮಿ ಬೀಜ
ಬೇರಾದರೆ, ವೃಕ್ಷದಂಕುರವೇ? ಇದು ಕಾರಣ ದೇವ (ಲಿಂಗ) ಭಕ್ತರಲ್ಲಿ
ಬೇರೆಂಬ ಬಗೆಯದೆಂತು ಹೇಳಾ ಕೂಡಲಚನ್ನಸಂಗಮದೇವಾ ?"

ಎಂದು ಹೇಳಿ ಲಿಂಗ ಹಾಗು ಭಕ್ತ ಇವರಲ್ಲಿ ಐಕ್ಯವನ್ನೇ ಬೋಧಿಸಿದ್ದಾರೆ.

ಈ ವಚನಗಳಲ್ಲಿ ವರ್ಣಿತವಾದಂತೆ ಲಿಂಗ ರೂಪಿಯಾದ ಭಕ್ತನೆಂದು ಅದಾರಿಗೆ ಕರೆಯಬೇಕು ? ಎಂಬ ಆಕಾಂಕ್ಷೆಯು ಹಲವರಲ್ಲಿ ಉದ್ಭವಿಸಬಹುದು. ಇದಕ್ಕೆ ಉತ್ತರವಿಷ್ಟೇ. ಲಿಂಗವನ್ನು ಧರಿಸಿ ಲಿಂಗ ಸ್ವರೂಪವನರಿದು, ಅದನ್ನು ಎಡಬಿಡದೆ ಪೂಜಿಸಿ, ಧ್ಯಾನಿಸಿ, ತಾನು ಆ ಲಿಂಗದಲ್ಲಿ ಸಮರಸವಡೆಯಬೇಕೆಂದು ಹವಣಿಸುವವರೆಲ್ಲರು ಅರ್ಥಾತ್ ವೀರಶೈವರೆಲ್ಲರು ಭಕ್ತರೇ ಸರಿ! ಯಾಕಂದರೆ ಅವರೆಲ್ಲರ ಉದ್ದೇಶವೂ ಧ್ಯೇಯವೂ (ಇಷ್ಟವೂ) ಒಂದೇ ಆಗಿರುವದು. ಇನ್ನು ಲಿಂಗವನ್ನು ಧರಿಸಿದೊಡನೆ ಈ ಸಮರಸತೆಯ ಸ್ಥಿತಿಯು ಒಮ್ಮೆಲೇ ಯಾರಿಗೂ ಸಂಭವಿಸಲಾರದು. ಒಂದು ಊರಿಗೆ ಹೊರಟವರು ಹೊರಟ ಕೂಡಲೆ ಆ ಊರಲ್ಲಿರಲಾರರು. ಕ್ರಮದಿಂದ ನಡೆದೇ ಅಲ್ಲಿಗೆ ಮುಟ್ಟಬೇಕಾಗುವದೆಂಬದು ಸ್ಪಷ್ಟವೇ ಅದೆ. ಅದರಂತೆಯೇ ವೀರಶೈವರ ಸಮರಸತೆಯ ಸ್ಥಿತಿಯೂ ಉಂಟು. ಅಂತೇ ಅದನ್ನು ಈಶ್ವರ, ಮಹೇಶ್ವರ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಮೆಟ್ಟಲುಗಳಲ್ಲಿ ಸಮಾವೇಶಗೊಳಿಸಿದ್ದಾರೆ. ಈ ಆರು ಮೆಟ್ಟಲುಗಳನ್ನು ಏರಿದಾಗಲೇ ಶಿವಭಕ್ತನ (ಲಿಂಗಧಾರಿಯ) ಉದ್ಧಾರವಾಗುವದು. ಯಾವ ಮೆಟ್ಟಲನ್ನೂ ಏರದೆ ಬರೇ ಡಂಭಾಚಾರದಿಂದ ಹೆಸರಿಗೆ ಮಾತ್ರ ಲಿಂಗವನ್ನು ಧರಿಸಿ, ಅದರ ವಾಸ್ತವ ಸ್ವರೂಪದ ಅರುಹಿಲ್ಲದೆ ಬರೇ ಬಹಿರಂಗ ಪೂಜೆಯನ್ನೂ ಮಾಡಿ

ದೈವಿಕರ ಸ್ತೋತ್ರವನ್ನು ಹಬ್ಬಿಸಿದರೆ ಏನೊಂದೂ ಪ್ರಯೋಜನವಿಲ್ಲ. ಅವರೆಲ್ಲರು ಶುದ್ಧ ವೇಷಧಾರಿಗಳು, ಉದರಪೋಷಕರು. ಇವರ ಜನ್ಮವು ವ್ಯರ್ಥ! ಅವರು ನಿಜವಾಗಿ ಭವಭಾರಿಗಳೇ! ಸದ್ಯಕ್ಕೆ ಸಮಾಜವೇ ಇಂತಹ ಭವಭಾರಿಗಳಿಂದ ತುಂಬಿ ಹೋಗಿದೆ ಎಂದು ಹೇಳಬಹುದು. ಈ ಸ್ಥಿತಿಯು ಅನಿಷ್ಟವು. ಅದು ಬದಲಾಗಲೇಬೇಕು.

## ಭಕ್ತ ಜಂಗಮ ಸಂಬಂಧ.

"ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯಾ ಆಚಾರವೇ ಜಂಗಮ, ವಿಚಾರವೇ ಭಕ್ತನಯ್ಯಾ. ಆಚಾರವಿಚಾರವೆಂಬುದು ಸ್ವಾನುಭವ ನೋಡಾ ಕೂಡಲಸಂಗಮದೇವಾ. ಈ ವಚನದಲ್ಲಿ ಶ್ರೀಬಸವೇಶ್ವರದೇವರು, ಒಡಲಿಲ್ಲದವನು ಜಂಗಮನೆಂದೂ ಪ್ರಾಣವಿಲ್ಲದವನು ಭಕ್ತನೆಂದೂ ಹೇಳಿದ್ದಾರೆ. ಆದರೆ ಒಡಲು ಪ್ರಾಣಗಳಿಲ್ಲದೆ ಇರುವದು ಎಂದಾದರೂ ಶಕ್ಯವೇ? ಹಾಗಾದರೆ ಇದರ ಅರ್ಥವೇನೆಂದು ಯೋಚಿಸುವದು ಅವಶ್ಯವಾಗಿದೆ.

ಒಡಲಿಲ್ಲದವನೆಂದರೆ:—ದೇಹಮೂಲಕವಾಗಿ ಅದಾವ ಅಕೃತ್ಯವನ್ನೂ ಮಾಡದವನೆಂದು ತಿಳಿಯತಕ್ಕದ್ದು. ಶರೀರವು ತನ್ನ ಕರ್ಮೇಂದ್ರಿಯಗಳ ದ್ವಾರವಾಗಿ ಸರ್ವಕಾಲದಲ್ಲಿಯೂ ಒಂದಿಲ್ಲೊಂದು ಕ್ರಿಯೆಯನ್ನು ಮಾಡುವದರಲ್ಲಿಯೇ ನಿಮಗ್ನವಾಗಿರುತ್ತದೆ. ಸತ್— ಕ್ರಿಯೆಗಳನ್ನೂ ಕಾಯಕಗಳನ್ನೂ ಮಾಡಲಿಕ್ಕೆ ಯಾರೂ ಅಲ್ಲಗಳೆಯರು. ಅಷ್ಟೇ ಅಲ್ಲ, ವೀರಶೈವನು ಯಾವಾಗಲೂ ಅಂತಹ ಕಾಯಕ ಕ್ರಿಯೆಗಳಲ್ಲಿಯೇ ಕಾಲಹರಣ ಮಾಡಬೇಕೆಂದು ಧರ್ಮಾಜ್ಞೆಯಿದೆ. ಇನ್ನು ಉಳಿಯಿತು ದುಷ್ಕ್ರಿಯೆ ಮಾತ್ರ. ಅವನ್ನು ಸಂಪೂರ್ಣ ವರ್ಜ್ಯಪಡಿಸುವದು ಭಕ್ತನ ಅವಶ್ಯಕರ್ತವ್ಯ. ಕೈಗಳಿಂದ ಪರದ್ರವ್ಯ, ಪರಸ್ತ್ರೀ, ಪರದೈವತ, ಪರಹಿಂಸೆಗಳ ಸಂಬಂಧವು ಘಟಿಸದಂತೆಯೂ, ಕಾಲುಗಳಿಂದ ಅಂತಹ ಸಂಗತಿಗಳಲ್ಲಿ ಸಂಚಾರವು ಆಗದಂತೆಯೂ, ಬಾಯಿಂದ ಅಸತ್ಯವಾಕ್ಯ, ಅಪಶಬ್ದಗಳು, ಪರನಿಂದೆ, ಪರದೈವಸ್ತೋತ್ರ ಇವೇ ಮುಂತಾದವು ಒದಗದಂತೆಯೂ, ಗುಹ್ಯೇಂದ್ರಿಯದಿಂದ ಪರರ ಸಂಭೋಗವು ಸಂಭವಿಸದಂತೆಯೂ, ನಾವು ಯಾವಾಗಲೂ ಎಚ್ಚರದಿಂದ ವರ್ತಿಸುವದು ಅತ್ಯಂತ ಅಗತ್ಯವಾದುದಾಗಿದೆ. ಇದರಂತೆ ಶರೀರದಲ್ಲಿಯ ಮಮಕಾ

ರವು ಅಳಿಯಬೇಕು. ಅಧರ ಸೊಕ್ಕುವಿಕೆ, ಸೊರಗುವಿಕೆಗಳ ಬಗ್ಗೆಯೂ ಯೋಚನೆ ಪಡಕೂಡದು. ಇತ್ಯಾದಿ ಸಂಗತಿಗಳನ್ನೆಲ್ಲ ನೆನೆದು ಒಳ್ಳೆ ಸಾವಧನಾಗಿ ವರ್ತಿಸಿದರೆ, ದೇಹವು ಇದ್ದೂ ಇಲ್ಲದಂತೆಯೇ ಆಗುವದು. ಇದರ ಮುಂದಿನ ವಾಕ್ಯದಲ್ಲಿಯೇ ಆಚಾರವೇ ಜಂಗಮವೆಂದು ಹೇಳಿದುದರ ಮರ್ಮವಾದರೂ ಇದೇ.

ಪ್ರಾಣವಿಲ್ಲದಾತ ಭಕ್ತನಯ್ಯ, ಎಂಬದರ ರಹಸ್ಯವೇನಂದರೆ— ಪ್ರಾಣವನ್ನು ತನ್ನಲ್ಲಿರುವ ಶಿವಲಿಂಗವನ್ನಾಗಿಯೂ ದೇಹವನ್ನು ಶಿವಾಲಯವನ್ನಾಗಿಯೂ ಮಾರ್ಪಡಿಸಿಕೊಂಡು, ತನ್ನನ್ನು ಸಂಪೂರ್ಣವಾಗಿ ಶಿವನೊಳಡಗಿಸಿಕೊಂಡು ಯಾವಾಗಲೂ ನಿರಹಂಕಾರದಿಂದ ವರ್ತಿಸುತ್ತ ಇದ್ದರೆ, ಆ ಭಕ್ತನು ಪ್ರಾಣರಹಿತನಾದಂತಾಯಿತು. ಅವನು ತನಗೋಸುಗ—ಏನನ್ನೂ ಸೇವಿಸದೆ, ಎಲ್ಲ ಪದಾರ್ಥಗಳನ್ನು ತನ್ನಲ್ಲಿರುವ ಶಿವನಿಗೋಸ್ಕರ ಅರ್ಪಿಸಿ ಅದರಲ್ಲೇ ತಾನು ತೃಪ್ತನಾಗುವನು. ಶಿವನ ಭೋಗವೇ ಆ ಭಕ್ತನ ಭೋಗವು. ಅವನು ಸರ್ವದಾ ಶಿವಪ್ರಸಾದ ಭೋಗಿಯಾಗಿರುವನು. ಇದೇ ಪ್ರಾಣವಿಲ್ಲದಿರುವಿಕೆ. ಹೀಗೆ ಭಕ್ತನು ನಿರಹಂಕಾರಿಯಾಗಿ ಲಿಂಗರೂಪಾದ ಮೇಲೆ ಸ್ವಾರ್ಥಕ್ಕೆ ಎಷ್ಟೂ ಅವಸರವಿಲ್ಲದಂತಾಗ, ಅವನು ಸುವಿಚಾರಗಳ ತವರಮನೆಯಾಗುವನು.

ಸುವಿಚಾರಗಳಿಲ್ಲದಲ್ಲಿ ಸದಾಚಾರಗಳೂ, ಸದಾಚಾರಗಳಿಲ್ಲದಲ್ಲಿ ಸುವಿಚಾರಗಳೂ ಇರುವದು, ಅಶಕ್ಯವೆಂದು ಯಾರಿಗೂ ಹೇಳಬೇಕಾಗಿಲ್ಲ. ಅಂತೆಯೇ ಸದಾಚಾರರೂಪಿ ಜಂಗಮಕ್ಕೂ, ಸುವಿಚಾರರೂಪಿ ಭಕ್ತನಿಗೂ, ಅತಿ ನಿಕಟಸಾಧ್ಯವಿರುವದರಿಂದ, ಆವೆರಡೂ ಅವಿನಾಭಾವವೆಂದೇ ಹೇಳಿದ್ದಾರೆ.

ಇದರಂತೆಯೇ ಶ್ರೀಸಿದ್ಧರಾಮ ಶಿವಯೋಗಿಯು ನುಡಿದಿರುವದೇನಂದರೆ—

"ಭಕ್ತನು ಭಕ್ತನ ಕಂಡಲ್ಲಿ ಕೈಮುಗಿವುದೇ ಭಕ್ತಿಸ್ಥಲ. ಜಂಗಮನು ಜಂಗಮನ ಕಂಡಲ್ಲಿ ಶರಣೆಂಬುದೇ, ಜಂಗಮಸ್ಥಲ. ಭಕ್ತ ಜಂಗಮ ಎಂದು ಬೇರುಂಟೆ? ರಸದಂತೆ ಭಕ್ತ, ರುಚಿಯಂತೆ ಜಂಗಮ ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನ."

ಇದರಲ್ಲಿ ಕೊಟ್ಟಿರುವ ರಸರುಚಿಗಳ ದೃಷ್ಟಾಂತವನ್ನು ನೋಡಿದರೆ, ಭಕ್ತಜಂಗಮ ಒಂದೇ ಎಂಬುದು ಒಡೆದುಕಾಣುತ್ತದೆ. ಮತ್ತೂ ಈ ಬಗ್ಗೆ ಶ್ರೀಬಸವಣ್ಣನವರು ಹೇಳುವದೇನೆಂದರೆ—

"ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ ಮಾಡುವದು ಲೇಸಯ್ಯ ಭಕ್ತಂಗೆ, ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆ ಮಾಡುವದು ಲೇಸಯ್ಯ ಜಂಗಮಕ್ಕೆ, ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ, ಆ ಭಕ್ತನ ಕಿಂಕರತ್ವವೇ ಜಂಗಮಕ್ಕೆ ದಾಸೋಹ, ಆ ಭಕ್ತನೊಳಗೆ ಜಂಗಮವಡಗಿ, ಆ ಜಂಗಮದೊಳಗೆ ಭಕ್ತನಡಗಿ, ಇದ ನೇನೆಂದು ಹವಣಿಸುವೆನಯ್ಯ? ಎರಡೊಂದಾದ ಘನವ ಇದನೆಂತು ಸಮಿಸುವೆನಯ್ಯ? ತೆರಹಿಲ್ಲದ ಘನವ! ಈ ಎರಡಕ್ಕೆ ಭವವಿಲ್ಲೆಂದು, ಕೂಡಲಸಂಗಯ್ಯ ನಿಮ್ಮ ಶ್ರುತಿಗಳು ಹೇಳಿದವಾಗಿ, ನಿಮ್ಮ ಕರುಣ ವೆನಗಾಯಿತ್ತು."

ಈ ವಚನದಲ್ಲಂತೂ ಭಕ್ತಜಂಗಮ ಸಂಬಂಧವು ಬಹು ಸರಸಾಗಿ ವರ್ಣಿಸಲ್ಪಟ್ಟಿದೆ.

## ಲಿಂಗಜಂಗಮ ಸಂಬಂಧ.

"ಕಾಯವು ಜೀವವು, ಜೀವವು ಕಾಯವು. ಇವು ಎಂತು ಬೆರಸಿಪ್ಪವಂತೆ; ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪದು, ಭಿನ್ನಭಾವವಿಲ್ಲದೆ. 'ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತೋ ಶಿವಃ। ಪುಷ್ಪಗಂಧವಿನಾನ್ಯೈವ ಮರುತಾಂಬರಯೋರಿವ' ಎಂದುದಾಗಿ ಭಾವಭೇದವಿಲ್ಲದ ಜಂಗಮವೇ ಲಿಂಗವು. ಕೂಡಲಚೆನ್ನಸಂಗಮದೇವಾ"

ಈ ವಚನದಲ್ಲಿ ಶ್ರೀಚೆನ್ನಬಸವಣ್ಣನವರು, ಶಿವಶಕ್ತಿಯರಂತೆಯೂ ಪುಷ್ಪಗಂಧಗಳಂತೆಯೂ ವಾಯುಆಕಾಶಗಳಂತೆಯೂ ಲಿಂಗಜಂಗಮಗಳು ಅವಿನಾಭಾವದಿಂದಿರುವವೆಂದು ನುಡಿದಿದ್ದಾರೆ. ಇದೇ ಮೇರೆಗೆ ಶ್ರೀಶಿವಯೋಗಿ ಸಿದ್ಧರಾಮೇಶ್ವರರು—

"ಸಕ್ಕರೆಯ ಬಿಟ್ಟು ರುಚಿಯ ತೆಗೆಯಬಹುದೇ? ಬೆಣ್ಣೆಯ ಬಿಟ್ಟು ಘೃತವ ತೆಗೆಯಬಹುದೇ? ಭೂಮಿಯ ಬಿಟ್ಟು ಜಗವ ಮಾಡಬಹುದೇ? ಜಂಗಮವಿರಹಿತ ಲಿಂಗವಿಲ್ಲ, ಲಿಂಗವಿರಹಿತ ಜಂಗಮವಿಲ್ಲ ಕಲಿದೇವ ಕಪಿಲಸಿದ್ಧಮಲ್ಲಿಕಾರ್ಜುನ."

ಎಂದು ಹಾಡಿಕೊಂಡಿರುವರು. ಲಿಂಗ ಜಂಗಮಗಳ ಸಂಬಂಧ ವನ್ನು ಅರಿತುಕೊಳ್ಳಲಿಕ್ಕೆ ಇವೆರಡೇ ವಚನಗಳು ಸಾಕಾಗಿವೆ.

ಮೇಲಿನ ಈ ಎಲ್ಲ ವಿವೇಚನೆಯಿಂದ ಭಕ್ತ ಲಿಂಗ ಜಂಗಮ ಈ ಮೂರು ವಸ್ತುಗಳು ನಾಮಮಾತ್ರದಿಂದ ಬೇರೆಯಾಗಿದ್ದರೂ, ಒಂದ ರಿಂದೊಂದನ್ನು ಪ್ರತ್ಯೇಕಿಸಲಿಕ್ಕೆ ಬಾರದ ಒಂದೇಒಂದಾದ ವಸ್ತುವೆಂ ಬುದು ತಾನೇ ಸಿದ್ಧವಾಗುತ್ತದೆ. ಹೂವು ಬಣ್ಣ ಸುಗಂಧಗಳೆಲ್ಲ ಏಕತ್ರ ವಾದ ಒಂದೇ ಒಂದಾದ ಪದಾರ್ಥವಿರುವಂತೆ, ಇವುಗಳನ್ನೂ ಅರಿಯ ಬೇಕು.

ಮೊದಲಿನ ಲೇಖದಲ್ಲಿ "ಕಾಯಗುರು, ಪ್ರಾಣಲಿಂಗ, ಜ್ಞಾನ ಜಂಗಮ" ಎಂದು ಹೇಳಿದ ವಚನದಂತೆ, ಈ (ಗುರುಲಿಂಗಜಂಗಮ) ಮೂರರಿಂದ ಕೂಡಿದವನೇ ಭಕ್ತನೆಂಬುದು ಸ್ಪಷ್ಟವು. ಭಕ್ತನೇ ತನ್ನ ಶಿವಗುಣದ (ಜ್ಞಾನದ) ಬೆಳವಣಿಗೆಯಿಂದ ಗುರುವೂ ಆಗುವನು, ಜಂಗಮವೂ ಆಗುವನು, ಕೊನೆಯಲ್ಲಿ ಲಿಂಗವೂ ಆಗುವನು. ಅಂತೆಯೇ ಈ ನಾಲ್ಕು ವಸ್ತುಗಳಲ್ಲಿಯೂ ಅಭೇದವು. ಈ ರೀತಿಯಾಗಿ ಏಕತ್ವವಿದ್ದು ದರಿಂದಲೇ ಸಿದ್ಧಾಂತಶಿಖಾಮಣಿಯು:—

"ಏಕ ಏವ ಶಿವಃ ಸಾಕ್ಷಾತ್ ಸರ್ವಾನುಗ್ರಾಹಕಃ ಪ್ರಭುಃ ।
ಗುರುಜಂಗಮ ಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ ॥"

ಎಂದು ಸಿದ್ಧಾಂತಗೊಳಿಸಿರುತ್ತದೆ. ಆದುದರಿಂದ ಬಲ್ಲ ಶಿವಾನುಭಾವಿ ಗಳು "ನಾನು ಗುರು, ನಾನು ಜಂಗಮ" ಎಂದು ಅಹಂಕರಿಸಿ, ಇತರ ಲಿಂಗಾಂಗಿಗಳನ್ನು ತಿರಸ್ಕರಿಸಿ, ಎಂದೂ ನಡೆಯಲಾರರು, ನುಡಿಯ ಲಾರರು. ಹಾಗೆ ಭಾವಿಸಿದ ಮಾತ್ರಕ್ಕೆ ಅವರು ಅಜ್ಞಾನಿಗಳೂ ಪತಿ ತರೂ ಆಗಿ, ಕೂಡಲೆ ಭವಿವರ್ಗದಲ್ಲಿ ಗಣ್ಯರಾಗುವರು.

ಈ ಮೇರೆಗೆ ತಾತ್ವಿಕ ದೃಷ್ಟಿಯಿಂದ ಈ ನಾಲ್ಕು—ಭಕ್ತ, ಗುರು, ಲಿಂಗ, ಜಂಗಮ ಒಂದೇ ಎಂದು ಒಳಗೆ ದೃಢವಾಗಿ ನಂಬಿ, ಹೊರಗೆ ಲೌಕಿಕ್ಯಾನುಸಾರವಾಗಿ ತಾರತಮ್ಯವನ್ನು ಹೆಸರಿಗೆ ಮಾತ್ರ ಅವಲಂಬಿಸಿ ಅನಿವಾರ್ಯವೆಂದು ನಡೆಯಬೇಕಾಗುವದು. ಹಾಗೆ ಮಾಡದಿದ್ದರೆ ಜೀವ ನವೇ ಸಾಗಲಾರದು. ಅಂತೇ ಶ್ರೀನಿಜಗುಣಶಿವಯೋಗಿಗಳು ತಮ್ಮ ಕೈವಲ್ಯ ಪದ್ಧತಿಯಲ್ಲಿ "ಒಳಸದಿತದ್ವೈತವನು ಬಾಹ್ಯದಲಿ ನಿನ್ನೊಳಗೇಕೋ

ಗೇಕೋ ಭಾವನೆಯೊಡಗೂಡು.” ಎಂದು ದೂರ ದೃಷ್ಟಿಯಿಂದ ಉಪದೇಶಿಸಿದ್ದರೆ, ಈಗ ಲಿಂಗಾಂಗಿಗಳು ಈ ಚತುಷ್ಕದ ಮರ್ಮವನರಿಯದೆ ಹೋದುದರಿಂದ, ಅದೆಷ್ಟು ಅಡವಿಬಿದ್ದು ಹೊರಟಿರುವರೆಂಬದನ್ನು ಮುಂದಿನ ಲೇಖದಲ್ಲಿ ಯಥಾಮತಿ ವಿವರಿಸುವೆನು.

---

## ಶಿವಶರಣರ ಶಿವದೀಕ್ಷಾ ಕಾಲ.

( ಲೇಖಕರು- ಶ್ರೀಗುರುಮಹಾಂತದೇವರು ಜಗದ್ಗುರು ಶ್ರೀಮನ್ನಿರುಪಾಧಿ
ಶ್ರೀಶೈಲ ಸಂಸ್ಥಾನ.)

[ಲೇಖಾಂಕ ೨.]

ಹಿಂದಿನ ಲೇಖನದಲ್ಲಿ ಶಿವಶರಣರು ಶಿವದೀಕ್ಷೆಗೆ ಯಾವ ವಯಸ್ಸು ಯಾವ ಅವಸ್ಥೆ ದೀಕ್ಷಾಧಿಕಾರಿಗೆ ಬೇಕೆಂಬುದನ್ನು ಪ್ರತಿಪಾದಿಸಿದ ಅವರ ಕೆಲವು ವಚನಗಳನ್ನು ಎತ್ತಿ ತೋರಿದ್ದಾಯಿತು. ಇನ್ನು ಅವರ ವಚನಗಳ ಅಭಿಪ್ರಾಯದಲ್ಲಿ “ದೀಕ್ಷೆ” ಯ ಹೃದಯವೇನು ಎಂಬದನ್ನು ಇಲ್ಲಿ ಕೊಂಚ ಮಟ್ಟಿಗೆ ವಿವರಿಸೋಣವಾಗುತ್ತದೆ.

### ದೀಕ್ಷೆಯೆಂದರೇನು?

ಯಾವುದರ ಪ್ರಭಾವದಿಂದ ಶಿಷ್ಯನಲ್ಲಿ ಶಿವಶಕ್ತಿ ಅಥವಾ ಅಧ್ಯಾತ್ಮದೃಷ್ಟಿ ಹುಟ್ಟಿ ಅದರಲ್ಲಿ ಅವನು ಲೀನವಾಗುತ್ತಾನೆಯೋ, ಅಥವಾ ಆಸಕ್ತನಾಗುತ್ತಾನೆಯೊ ಆ ಪ್ರಭಾವಕ್ಕೆ “ದೀಕ್ಷೆ” ಎಂದರೆ ಹೆಸರು.

ಹೀಗೆಂದು ಹೇಳುವ ಈ ಮಾತಿನ ಭಾವ ಬಲು ಆಳ. ಅತಿ ಗಹನ. ಏಕೆಂದರೆ ಅದರಲ್ಲಿ ಜ್ಞಾನ ಅಡಗಿದೆ. ಕ್ರಿಯೆಯ ಏಳೆಯನ್ನು ಜೋಡಿಸಿದೆ. ಈ ಕ್ರಿಯಾ ಶಕ್ತಿಯಿಲ್ಲದ ವ್ಯಕ್ತಿಗೆ ಅದು (ದೀಕ್ಷೆಯು) ಹೊಲ್ಲದು, ನಿಲ್ಲದು. ಈ ಮಾತುಗಳ ತತ್ವವನ್ನು ಹಲವರು ಒಪ್ಪುವದಿಲ್ಲ. ಆದರೂ ಅವರು ಒರೆಯಿಟ್ಟು—ಒಳನಟ್ಟು ಓದಿದರೆ—ಉಜ್ಜಿದರೆ ಇದರ ಒಳತಿರುಳು-ತಿಳಿಬೆಳಗು ಹೊರಹೊಮ್ಮುತ್ತದೆ; ಹೊಳವೇರುತ್ತದೆ.

'ದೀಕ್ಷೆ' ಪ್ರತಿಪಾದಿಸುವದು ತಾತ್ವಿಕ ಜ್ಞಾನದೊಡನೆ ನೈತಿಕಾಚರಣೆಗಳನ್ನು. ನೈತಿಕಾಚರಣೆಯಿಲ್ಲದೆ ತತ್ವಜ್ಞಾನ ಹುಟ್ಟುತ್ತದೆಂಬುದು ಬೀಜವಿಲ್ಲದೆ ಮೊಳಕೆ ವೈದೋರುತ್ತದೆಂಬಂತೆ; ಆದ್ದರಿಂದ ಜ್ಞಾನದ 'ಕಿರಣಗಳಂತೆ' ಕ್ರಿಯೆಯ ಎಲೆಗಳನ್ನೂ ಹುರಿಗೂಡಿಸಿಕೊಳ್ಳುವ ಶಕ್ತಿ ಜೀವನಲ್ಲಿ ಮೈಗೂಡಿರಬೇಕು. ಇದುಳ್ಳವನೆ ದೀಕ್ಷೆಯ ಪ್ರತಿಪಾದನೆಯ ಸಾಧಕ ಅಥವಾ ದೀಕ್ಷೆಗೆ ಸನ್ನದ್ಧ. ಹೀಗೆ ಸನ್ನದ್ಧನಾದ ಶಿಷ್ಯನಲ್ಲಿ ಮಾತ್ರ ಆ ದೀಕ್ಷೆಯು ಹೊಸ ಭಾವನೆಗಳನ್ನು ಬಿತ್ತರಿಸಿ ಬುದ್ಧಿಯನ್ನು ಪ್ರಚೋದಿಸಿ ನವಸ್ಫೂರ್ತಿಯ ಕ್ರಿಯಾಗಂಧವನ್ನು ಇರಿಸಬಲ್ಲುದು. ಸಂಸಾರ ಹೇಯದಿಂದ ಮುದ್ದೆಯಾದ ಜೀವನನ್ನು ಸಾರತರವಾದ ಆ ದೀಕ್ಷೆಯು ತನ್ನ ಜಾಜ್ವಲ್ಯ ಪ್ರಭಾವದಿಂದ ಚೇತರಿಸಿ, ವಿಕಸಿಸಿ, ಸುಂದರವಾಗಿ ಮಾಡಬಲ್ಲುದು, ಮಾಡುವದು. ಆ ಶಕ್ತಿಪಾತವಿಲ್ಲದ ಶಿಷ್ಯನಲ್ಲಿ ಮಾತ್ರ ದೀಕ್ಷೆಯ ಈ ಪ್ರಯೋಗವು ಎಷ್ಟು ಮಾತ್ರಕ್ಕೂ ಸಾಗದು; ಸಾರ್ಥಕವಾಗದು. ಮೊಳಕೆಯಲ್ಲಿಯೇ ಮೊಗ್ಗಾಗುವದೆ?

'ದೀಕ್ಷೆ' ಯು ಜ್ಞಾನ, ಕ್ರಿಯೆ, ಆತ್ಮಸಾಕ್ಷಾತ್ಕಾರಗಳೆಂಬ ಹನಿಗಳಿಂದ ತುಂಬಿ ತುಳುಕುವ ಅಮೃತದ ಕೊಡ. ಆದರೆ ಅದನ್ನು (ಅಮೃತವನ್ನು ಕುಡಿಯುವದರಿಂದ) ಶಿಷ್ಯರು ಅಮರರಾಗದಿದ್ದರೆ ಅಂತಹ ಅಮೃತಕೊಡದಿಂದ ಯಾವ ಪ್ರಯೋಜನ? ಆ ಅಮೃತತ್ವಕ್ಕೆ ಏನು ಸಾರ್ಥಕ್ಯ? ಆ ಆತ್ಮಸಾಕ್ಷಾತ್ಕಾರಶಕ್ತಿ, ಆ ಜ್ಞಾನಕ್ರಿಯೆಗಳ ಆಚರಣೆಯ ಪಟುತ್ವವುಳ್ಳ ವ್ಯಕ್ತಿಗೆ ಮಾತ್ರ ಸಾಧ್ಯ. ಆ ಅಮೃತಪಾನ ಆ ಅಮರತ್ವ. ಅಂಥವನ ಜೀವನಕ್ಕೂ ಆ ಅಮೃತ ಕೊಡಕ್ಕೂ ಒಂದು ಸಾರ್ಥಕ್ಯ. ಆಗ ಆತನ ಮುಂಬಾಳಿನಲ್ಲಿ ಹೊಂಬೆಳಗನಿತ್ತು, ಸಂಸಾರ ತಿಮಿರವ ಕಳೆದು ಕ್ರಿಯೆಯ ಹೆದ್ದಾರಿಯ ತೋರಿ ಸಮರಸವನ್ನು ನವರುಚಿ ನವೋತ್ಸಾಹಗಳನ್ನು ಹುಟ್ಟಿಸಬಲ್ಲುದು. ಆ ದೀಕ್ಷೆ ಆಗ "ಶಿಷ್ಯ ಪತ್ರೆಕ್ಷೈವ ಬೋಧಸ್ಯ ಕಾರಣಂ" "...ಗುರುವು ಅಯಿದಾನೆ. ಲಿಂಗವು ಅಯಿದಾನೆ. ಶಿಷ್ಯಂಗೆ ಜ್ಞಾನೋದಯವಾಗದನ್ನಕ್ಕ ಭಕ್ತಿಎಂತಳವಡವುದಯ್ಯ!..." ಎಂಬ ಅನುಭವಜನ್ಯ ಅಮೃತೋಕ್ತಿಗಳು ಅಮರವಾಗಬಲ್ಲವು.

'ದೀಕ್ಷೆ' ಯು ಗುರು ಲಿಂಗಾಂಗ ಸಾಮರಸ್ಯ. ಜೀವನು ಶುದ್ಧಾಂತಃಕರಣಿಯಾಗದವಿನಹಃ ಅಂಗನಾಗನು. ಅಂಗನಾಗದ ಹೊರತು

ಸಾಮರಸ್ಯಕ್ಕೆ ಒಗ್ಗನು. ಸಾಮರಸ್ಯಕ್ಕೆ ಒಗ್ಗದವನಿಗೆ ಶಿವದೀಕ್ಷೆಯು ಸಲ್ಲದು. ಜೀವನು ಪಾಪದ ಪರೆಯನ್ನು ಹರಿದು ಶುದ್ಧಾಂತಃಕರಣಿಯಾಗಬೇಕಾದರೆ ಸತ್ಕ್ರಿಯಾಚರಣೆ ಅತ್ಯಾವಶ್ಯಕವಾದುದು. ಹೀಗೆ ಸತ್ಕ್ರಿಯೆಯಿಂದ ಶುದ್ಧನಾದ ಅಂಗನೆಂಬ ಬತ್ತಿಯನ್ನು ಲಿಂಗವೆಂಬ ಜ್ಯೋತಿಯು ಅಂಟಬಲ್ಲುದು; ನುಂಗಬಲ್ಲದು. ಇಲ್ಲವಾದರೆ ದೀಕ್ಷೆಯ ಗುರಿ ಕೈಗೂಡದೆ ಕಮರಿಹೋಗುವದು. ಬತ್ತಿಯಿಲ್ಲದೆ ಜ್ಯೋತಿ ಅಂಟಿಸಲು ಯತ್ನಿಸಿದಂತಾಗುವದು.

ಗರ್ಭದ ಶಿಶುವಿಗೆ ವಾದಿಗಳು ಹೇಳುವ ಸಂಪೂರ್ಣ ಜ್ಞಾನವನ್ನು ಒಂದು ವೇಳೆ ಒಪ್ಪಿಕೊಳ್ಳೋಣ! ಆದರೆ ಕ್ರಿಯೆಯನ್ನು ಒಪ್ಪಲಾಗುತ್ತದೆಯೆ ? ಕ್ರಿಯೆಯಿಲ್ಲದ ಜ್ಞಾನ ಅದೇತರ ಜ್ಞಾನ ? ಅದೇತರ ಬಾತೆ ? ಅಲ್ಲದೆ ಕ್ರಿಯಾಜ್ಞಾನ ಸಮುಚ್ಚಯಕ್ಕೆ ಇದೊಂದು ದೊಡ್ಡ ಕೊರತೆಯಲ್ಲವೆ ? ಕ್ರಿಯಾ ಜ್ಞಾನಗಳೆರಡನ್ನೂ ಹುಟ್ಟಿಸದ ಗರ್ಭ ದೀಕ್ಷೆಯು ದೀಕ್ಷೆಯಾಗುತ್ತದೆಯೆ ? "ಯಾವುದು ಜ್ಞಾನ ಕ್ರಿಯಾತ್ಮಕವಾದ ಸುಪ್ತ ಚೈತನ್ಯವನ್ನು ಉದ್ದೀಪನಗೊಳಿಸುತ್ತದೆಯೊ ಅದು ದೀಕ್ಷೆ" ಎಂದು ಮೇಲೆಯೆ ಹೇಳಲಾಗಿದೆ. ಈ ಕಾರಣಗಳಿಂದ ದೀಕ್ಷಾಧಿಕಾರಿಯು, ಕ್ರಿಯಾಚರಣೆಗೆ ಯೋಗ್ಯನಾಗಿರಬೇಕು, ಜ್ಞಾನಾನುಭವಕ್ಕೆ ಸಮರ್ಥನಾಗಿರಬೇಕು.

"ಶಿವದೀಕ್ಷೆ" ಗೆ ಶಿವಾನುಭವವೇ ನಿಜವಾದ ತಿರುಳು. ಶಿವಾನುಭವ ಸಂಸ್ಕಾರವುಂಟಾಗದ ಗರ್ಭ ಶಿವದೀಕ್ಷಾಸಂಸ್ಕಾರವು ಬೋರ್ಗಲ್ಲ ಮೇಲೆ ನೀರೆರೆದಂತೆ ವ್ಯರ್ಥ. ಕಾನನ ಬೆಳದಿಂಗಳಂತೆ ನಿಷ್ಫಲ. ಅನುಭವಕ್ಕೆ ಬಾರದ ಆ ಸಂಸ್ಕಾರವನ್ನು ಆಗ ಮಾಡಿದರೇನು ? ಬಿಟ್ಟರೇನು ? ಅನುಭವಕ್ಕೆ ಬಾರದ್ದನ್ನು ಬಳಸಬಾರದೆಂಬ ವಿಚಾರವಾಗಿ ಶ್ರೀ ಮ. ನಿ. ಪ್ರ. ಮಹಾದೇವಸ್ವಾಮಿಗಳವರು ಮೊನ್ನೆ ಧಾರವಾಡ (ತಾ॥ ೨೯—೨—೪೨) ದಲ್ಲಿ ನಡೆದ ಅ. ವೀ. ಶಿವಾನುಭವ ಸಮ್ಮೇಲನ ದ್ವಿತೀಯ ಅಧಿವೇಶನದ ಅಧ್ಯಕ್ಷತೆಯ ಸ್ಥಾನದಿಂದಃ— "ಶಿವಾನುಭವವು ಅನುಭವ ಪ್ರಧಾನವಾದ ಶಾಸ್ತ್ರವು. ಅನುಭವಕ್ಕೆ ಬಾರದ್ದನ್ನು ಬಳಸಬಾರದೆಂಬುದು ಅದರ ಕಟ್ಟು. ಪರಶಿವನು ಸಮಸ್ತ ಪದಾರ್ಥಗಳಲ್ಲಿ, ನಿಖಿಲ ಪ್ರಾಣಿಗಳಲ್ಲಿ ವ್ಯಾಪಿಸಿರುವನೆಂದು ತಿಳಿಯುವದಲ್ಲದೆ

ತನ್ನ ಸರ್ವ ವ್ಯವಹಾರದಲ್ಲಿ ಭಿನ್ನವಿಲ್ಲದಂತೆ ಸಕಲ ನಿಷ್ಕಲ ರೂಪದಿಂದಿರುವನೆಂದು ಅನುಭವಿಸುವುದೇ ಶಿವಾನುಭವವೆನಿಸುತ್ತದೆ." "ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೆ। ಪ್ರತಿ ಬಿಂಬಿತ ಶಾಖಾಗ್ರ ಫಲಾಸ್ವಾದನ ಮೋದವತ್" ಎಂಬ ವಾಕ್ಯಾನುಸಾರವಾಗಿ ಅನುಭವವಿಲ್ಲದ ಬ್ರಹ್ಮದ ವಿಚಾರವು ಸವಿಯುದ ಹಣ್ಣಿನ ರಸಸ್ವಾದದ ಕಥೆಯಂತೆ ವ್ಯರ್ಥ." ಎಂದು ಅಪ್ಪಣೆಕೊಡಿಸಿದ್ದಾರೆ. ಇದರಿಂದಲಾದರೂ ಅನುಭವವಿಲ್ಲದ ಮಗುವಿಗೆ ಶಿವಾನುಭವದ ರಸಗಟ್ಟಿಯಂತಿರುವ ಶಿವದೀಕ್ಷೆಯನ್ನು ಮಾಡುವುದು ಅಥವಾ ಮಾಡಬೇಕೆಂದು ಸಾಧಿಸುವುದು ವ್ಯರ್ಥವೆಂದು ವ್ಯಕ್ತವಾಗುವದಿಲ್ಲವೆ ?

ರಸವತ್ತವಾದ ಫಲವನ್ನು ಕೊಡುವ ಬೀಜವನ್ನು ಬಿತ್ತಬೇಕಾದರೆ ನೆಲವನ್ನು ಹೇಗೆ ಶುದ್ಧಿಗೊಳಿಸಬೇಕೊ ಹಾಗೆ ಸಮರಸವನ್ನುಂಟುಮಾಡುವ ಲಿಂಗ ಬೀಜವನ್ನು ಬಿತ್ತಬೇಕಾದರೂ ಕಾಯಶುದ್ಧಿ ಜೀವಶುದ್ಧಿಗಳು ಅತ್ಯಾವಶ್ಯಕವಾದವುಗಳು. ಈ ಕಾಯ ಮತ್ತು ಜೀವ ಶುದ್ಧಿಗಳನ್ನು ಪ್ರತಿಪಾದಿಸುವ ಶಿವಶರಣರ ವಚನ ಪ್ರಮಾಣಗಳನ್ನು ಪರಕಿಸಿದರೂ "ಶಿವಶರಣರ ಶಿವದೀಕ್ಷಾ ಕಾಲ" ವು ಯಾವುದೆಂಬುದು ವಿಶದವಾಗುತ್ತದೆ.

### — ಕಾಯಶುದ್ಧಿ —

"ಪಂಚಗವ್ಯಮಂ ಕೊಟ್ಟು ಏಕ ಭುಕ್ತೋಪವಾಸಮಂ ಮಾಡಿಸಿ, ಕಾಯಶುದ್ಧಿಯಂ ಮಾಡುವುದು"

### — ಜೀವಶುದ್ಧಿ —

"ಮುತ್ತಿರ್ದ ಮಾಯಾ ಪ್ರಪಂಚಮಂ ಬಿಡಿಸಿ, ಜೀವನೆ ಶಿವನೆಂದು ಪರಿಯಾಯಮಂ ಕೆಡಿಸಿ, ಆ ಪರ ಶಿವನೇ ಇಷ್ಟ ಬ್ರಹ್ಮ; ಆ ಇಷ್ಟವೇ ನಿನ್ನ ಪ್ರಾಣ; ಆ ಪ್ರಾಣವೇ ಇಷ್ಟವೆಂದರುಹಿ, ಜೀವ ಶಿವನಲ್ಲ, ಆ ಶಿವನೇ ನಿನ್ನ ಜೀವವೆಂಬ ಪರಿಯಾಯಮಂ ತೋರಿಸಿ, ಆತ್ಮನ ಜೀವಭಾವಮಂ ಕಳೆದು ಶಿವಭಾವವೆಂದೆನಿಸಿ

ಜೀವಶುದ್ಧಿಯ ಮಾಡುವುದು. ಆ ಮೇಲೆ ಆತನ ಶರೀರಾರ್ಥ ಪ್ರಾಣಂ
ಗಳಂ ಅರ್ಪಿಸಿ,
ಕೊಂಡು ಭವದ ಬೇರ ಕೊಯ್ದು; ಶಿವಗಣ ತಿಂಥಿಣಿಯ ಮುಂದೆ
ಆ ಶಿಷ್ಯನ
ಕೈವಿಡಿದು ತಂದು ಚೌಕಮಧ್ಯದಲಿ ಕುಳ್ಳಿರಿಸಿ, ಆತನ ಮೇಲಣ
ದೋಷಹೋದ
ಹಾಗೆ 'ಕಾಮ್ಯೇನಕಾಮ' ಎಂಬ ಮಂತ್ರದಿಂದ ಅರ್ಘ್ಯೋದಕಮಂ
ತಳಿದು,
ವಿಭೂತಿಯ ಪಟ್ಟಮಂ ಕಟ್ಟಿ ಮಸ್ತಕ ಕಳಶದ ಮೇಲೆ ಹಸ್ತಮಂ
ಇಳುಹಿ..."

ಇತ್ಯಾದಿ ಈ ಕ್ರಿಯೆಗಳನ್ನು ಜರಗಿಸಬೇಕಾದರೆ ಶಿವಶರಣರು ಶಿವ ದೀಕ್ಷೆಯನ್ನು ಯಾವ ವಯಸ್ಸಿನಲ್ಲಿ ಮಾಡುತ್ತಿದ್ದರೆಂಬುದು ಸೂರ್ಯ ಪ್ರಕಾಶದಷ್ಟು ಎಗ್ಗಳವಾಗುತ್ತದೆ. ಅಲ್ಲದೆ ೨೧ ದೀಕ್ಷೆಗಳನ್ನೊಳಗೊಂಡ ತ್ರಿವಿಧ ದೀಕ್ಷೆಯನ್ನು ಹೇಳುವ ಚನ್ನಬಸವಣ್ಣನ ಈ ವಚನವನ್ನು ವಿಚಾರಿಸಿದರೂ ಇದೇ ಅಭಿಪ್ರಾಯವು ದೃಗ್ಗೋಚರವಾಗುತ್ತದೆ.

"ಆಣವಮಲ, ಮಾಯಾಮಲ, ಕಾರ್ಮಿಕ ಮಲವೆಂಬ
ಮಲತ್ರಯಂಗಳ ಕಳೆದು; ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿ
ಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ,
ಲಿಂಗಸ್ವಾಯತ ಈ ಏಳನು ಕಾಯಕ್ಕುಪದೇಶವ ಮಾಡುವುದು..."

ಇದನ್ನು ಗರ್ಭದ ಶಿಶುವಿಗೆ ಮಾಡಲು ಸಾಧ್ಯವೆ? ಎಂಬುದನ್ನು ವಾದಿಗಳು ವಿಚಾರಿಸಬೇಕು. ಮತ್ತು

"ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಆಧ್ಯಾತ್ಮ,
ಅನುಗ್ರಹ, ಸತ್ಯಶುದ್ಧ ಈ ಏಳನು ಪ್ರಾಣಕ್ಕುಪದೇಶವ ಮಾಡುವುದು..."

ಅದೇ ಪ್ರಾಣಧಾರಣ ಮಾಡುತ್ತಿರುವ ಆ ಗರ್ಭದ ಮಗುವು ಇವನ್ನು ನಿರ್ವಹಿಸಬಲ್ಲುದೆ? ಎಂಬುದನ್ನು ವಾದಿಗಳು ದಿಟ್ಟಿಸಬೇಕು. ಇದಲ್ಲದೆ—

"ಏಕಾಗ್ರಚಿತ್ತ, ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ,
ಲಿಂಗನಿಜ, ಮನೋಲಯ, ಸದ್ಯೋನ್ಮುಕ್ತಿ ಈ ಏಳನು

ಮನಕ್ಕುಪದೇಶವ ಮಾಡುವುದು. ಈ ಕ್ರಮವನರಿದು ಮಾಡುವುದು ಕೂಡಲಚನ್ನಸಂಗಯ್ಯನಲ್ಲಿ ಸಹಜ ದೀಕ್ಷೆಯಯ್ಯಾ.

ಗರ್ಭದ ಶಿಶುವೊಂದೆಡೆಗಿರಲಿ ಮನದ ಯಾವ ವಿಚಾರವೂ ಮುಟ್ಟದ ಜನನದ ಎಳೆ ಮಗುವಿಗಾದರೂ ಈ ಉಪದೇಶವು ಅಂಟುವುದೆ? ಪ್ರವೃತ್ತಿ ನಿವೃತ್ತಿಗಳನರಿಯದ ಮಗುವಿಗೆ 'ಏಕಾಗ್ರಚಿತ್ತ'ದುಪದೇಶವೆಂದರೇನು? ಕರ್ತವ್ಯಾಕರ್ತವ್ಯಗಳ ತಿಳಿಯದ ಶಿಶುವಿಗೆ ದೃಢವ್ರತ' ದೀಕ್ಷೆಯು ನೇಮ ವಿಧಿಸುವದೆಂದರೇನು? ಇನ್ನೂ ವಿಷಯಗಳನ್ನೆ ಗ್ರಹಿಸದ ಇಂದ್ರಿಯಗಳುಳ್ಳ ಆ ಮಗುವಿಗೆ ವಿಷಧರನಲ್ಲಿ "ಪಂಚೇಂದ್ರಿಯಾರ್ಪಿತ" ಮಾಡಹೇಳುವದು ಹೇಗೆ? ಹಿಂಸೆಯೆಂದರೇನೆಂಬುದನ್ನರಿಯದ ಮಗು "ಅಹಿಂಸೆ"ಯನ್ನೆಂತಾಚರಿಸುವುದು? ಹೀಗೆ ಉಳಿದವುಗಳಲ್ಲಿಯೂ ಶಕ್ತಿ ಸಾಲದ ಆ ಶಿಶುವಿಗೆ ಶಿವದೀಕ್ಷೆಯು ಮಾಡಿದರೆ ಅದು ಸಹಜ ದೀಕ್ಷೆಯಾಗಬಲ್ಲುದೆ? ಎಂಬುದನ್ನು ವಾದಿಗಳು ವಿಚಾರ ದೃಷ್ಟಿಯಿಂದ ವಿಮರ್ಶಿಸಬೇಕು.

ಶಿವದೀಕ್ಷೆಗೆ ಶಿವಾಚಾರವೆ ತಳಹದಿ. ಆಚಾರವಿಲ್ಲದ ಶಿವದೀಕ್ಷೆ ರಸವಿಲ್ಲದ ಫಲದಂತೆ. ಇದುಕಾರಣ ಆಚಾರಗಳನ್ನು ಆಚರಿಸುವ ಶಕ್ತಿಯುಳ್ಳ ವಟುವಿಗೇನೆ ಶಿವದೀಕ್ಷೆಯನ್ನು ಮಾಡಬೇಕು. ಆಚಾರವನ್ನು ಅಳವಡಿಸುವದೆ ಶಿವದೀಕ್ಷೆಯ ಪ್ರಥಮಗುರಿ. ಆದುದರಿಂದಲೆ "ಯಾವುದು ಕ್ರಿಯಾಜ್ಞಾನಾತ್ಮಕವಾದ ಸುಪ್ತ ಚೈತನ್ಯವನ್ನು ಉದ್ದೀಪನಗೊಳಿಸುತ್ತದೆಯೊ ಅದು ದೀಕ್ಷೆ"ಯೆಂದು ಹಿಂದೆ ಹೇಳಿದುದು. ಈ ಮಾತನ್ನು ಶಿವಶರಣರ ಸವಿನುಡಿಗಳೊಡನೆ ಸರಿ ತೂಗಿ ನೋಡೋಣ!

"ಅಂಗದಲ್ಲಿ ಆಚಾರವ ತೋರಿದ. ಆಚಾರವೆ ಲಿಂಗವೆಂದರುಹಿದ.
ಪ್ರಾಣದಲ್ಲಿ ಅರಿವ ನೆಲೆಗೊಳಿಸಿದ. ಅರಿವೇ ಜಂಗಮವೆಂದು ತೋರಿದ.
ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನ್ನನೀ
ಕ್ರಮವನರುಹಿದನಯ್ಯಾ."

ಶಿವದೀಕ್ಷೆಯಲ್ಲಿ ಸದ್ಗುರು ಮಾಡುವ ಕ್ರಮವಿದು. ಗುರುದೀಕ್ಷೆಯಲ್ಲಿ ಶಿಷ್ಯನಿಗೆ ಮೊದಲು ತೋರಿದ್ದು ಆಚಾರ. ಆಚಾರದ ಘನತೆಯಷ್ಟಕ್ಕೆ ನಿಲ್ಲಲಿಲ್ಲ. ಅದೇ ಲಿಂಗವೆಂದು ತಿಳಿಹೇಳಿದ. ಅಂದಮೇಲೆ

ದೀಕ್ಷೆಯಾದವನು ದೀಕ್ಷೆಯಾದಂದಿನಿಂದಲೆ ಆಚಾರನಿರತನಾಗಲು ಸಮರ್ಥನಾಗಿರಬೇಕು. ಇಲ್ಲದಿದ್ದರೆ ಆ ದೀಕ್ಷೆಯಿಂದ ಯಾವ ಮೋಕ್ಷವೂ ಇಲ್ಲ.

## ದೀಕ್ಷಾ ಗುರು ಯಾರು?

ದೀಕ್ಷೆಯನ್ನು ಪಡೆಯತಕ್ಕ ಶಿಷ್ಯನಿಗೆ ಕ್ರಿಯಾಚರಣೆಯ ಸಂಬಂಧವನ್ನು ಸಂಬಂಧಿಸಿ ಬೋಧಿಸತಕ್ಕವನೆ ದೀಕ್ಷಾಗುರುವು. ಬೋಧಿಸಿದ ಆ ಸತ್ಕ್ರಿಯೆಗಳನ್ನು ಅಂದಿನಿಂದ ಆಚರಿಸುವವನೆ ದೀಕ್ಷಾಧಿಕಾರಿಯು. ಕ್ರಿಯಾಶಕ್ತಿಯಿಲ್ಲದ ಮಗುವಿಗೆ ಅಥವಾ ಗರ್ಭಕ್ಕೆ ಸಂಪೂರ್ಣ ದೀಕ್ಷೆ ಮಾಡುವವನು ದೀಕ್ಷಾಗುರುವೇ ಅಲ್ಲ. ಮಾಡಿಸಿಕೊಳ್ಳುವವನಿಗೆ ಫಲವಿಲ್ಲ.

"ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರು. ತ್ರಿವಿಧಾಕಾರಂಗಳ
ನರಿದು ಕರ್ಮಕ್ರಿ ಆಚಾರಸಂಬಂಧವ ಸಂಬಂಧಿಸಿ ಮಾಡುವಲ್ಲಿ
ದೀಕ್ಷಾಗುರು..."

ಎಂಬೀ ವಚನದಲ್ಲಿ ದೀಕ್ಷಾಗುರುವಿನ ಲಕ್ಷಣವನ್ನು ನಾವು ಹೇಳುವದಕ್ಕೆ ಎಷ್ಟೂ ವ್ಯತ್ಯಾಸವಿಲ್ಲದಂತೆಯೆ ಲಕ್ಷಿಸುತ್ತದೆ. ಅಂದಮೇಲೆ ಕರ್ಮಕ್ರಿ ಆಚಾರಸಂಬಂಧವನ್ನು ದೀಕ್ಷೆಯಲ್ಲಿಯೆ ಸಂಬಂಧಿಸಬೇಕಾದರೆ ಶಿವಶರಣರು ಶಿವದೀಕ್ಷೆಯನ್ನು ಯಾವಕಾಲಕ್ಕೆ ಮಾಡುತ್ತಿದ್ದರೆಂಬುದು ಇದರಿಂದ ಸುವ್ಯಕ್ತವಾಗುತ್ತದೆ.

ಈ ಕ್ರಿಯೆಯ ಜೊತೆಗೆ ಜ್ಞಾನವನ್ನು ಹುಟ್ಟಿಸುವುದೂ ದೀಕ್ಷಾಗುರುವಿನ ಆದ್ಯ ಕರ್ತವ್ಯವಾಗಿದೆ. ದೀಕ್ಷೆಯ ಅರ್ಥವೂ ಅಲ್ಲಿಗೆ ಪೂರ್ತಿಯಾಗುತ್ತದೆ. ಆವೆರಡರಿಂದಲೆ ಶಿಷ್ಯನು ಸಂಸ್ಕಾರಿಯಾಗಿ ಸಂಸಾರಸಮರದಲ್ಲಿ ಸಂಪೂರ್ಣ ಜಯಪಡೆಯುತ್ತಾನೆ. ಕ್ರಿಯಾಜ್ಞಾನಗಳೆರಡನ್ನು ಬೋಧಿಸಿ ಅಳವಡಿಸುವುದೆ ಶಿವದೀಕ್ಷೆಯೆಂಬುದಕ್ಕೆ ಶಿವಶರಣರ ಹಲಕೆಲವು ವಚನಗಳನ್ನು ಇಲ್ಲಿ ನಿರ್ದೇಶಿಸಲಾಗುತ್ತದೆ.

"ಗುರು ಹಿಡಿದು ಕುರುಹ ಕಾಣಬೇಕು. ಗುರುವಿಡಿದು
ಅರುಹ ಕಾಣಬೇಕು. ಗುರುವಿಡಿದು ಆಚಾರವ ಕಾಣಬೇಕು.
ನಡೆವಿಡಿದು ನಿಮ್ಮ ಅಖಂಡೇಶ್ವರನ ಕೂಡಬೇಕು."
ಎನ್ನ ಕರಸ್ಥಳದ ಮಧ್ಯದಲ್ಲಿ ಪರಮ ನಿರಂಜನ ಕುರುಹುದೋರಿದ.
ಆ ಕುರುಹಿನ ಮಧ್ಯದಲ್ಲಿ ಅರುಹಿನ ಕಳೆ ತೋರಿದ.

ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗು ತೋರಿದ.
ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ.
ಎನ್ನೊಳಗೆ ತನ್ನ ತೋರಿದ.
ತನ್ನೊಳಗೆನ್ನನಿಂಬಿಟ್ಟುಕೊಂಡ ಮಹಾಗುರುವಿಗೆ
ನಮೋ ನಮೋ ಎನುತಿರ್ಪೆನಯ್ಯ ಅಖಂಡೇಶ್ವರ.

"ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮಾಯೆ.
ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ.
ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಎನ್ನ ಸುತ್ತಿದ್ದ ಮಾಯಾಪಾಶವು.
ಕಣ್ಣಿಂಗೆ ಸತ್ವರಜತಮವೆಂಬ ತಿಮಿರು ಕವಿದು ಅಜ್ಞಾನವಶದಲ್ಲಿ
ಸದ್ಗುರುವಿನುಪಧಾವಿಸಿ, ಔಷಧ ಬೇಡಲೊಡನೆ,
ಶಿವಜ್ಞಾನವೆಂಬ ಅಂಜನವನಚ್ಚಿ, ಎನ್ನ ಕಣ್ಣಮುಸುಕಿದ
ಅಜ್ಞಾನವೆಂಬ ಕಾಳಿಕೆಯ ಬೇರ್ಪಡಿಸಿ ತನ್ನ ಶ್ರೀಗುರುಪಾದವ
ನರುಹಿಸಿಕೊಟ್ಟನಯ್ಯ ನಮ್ಮ ಕಪಿಲಸಿದ್ಧಮಲ್ಲಿನಾಥಯ್ಯ."

ದೀಕ್ಷೆಯಾದೊಡನೆ ಜ್ಞಾನಕ್ರಿಯೆಗಳೆರಡು ಉದಯವಾಗಿ ಬಳಿಕೆ ಯಲ್ಲಿಳಿಯಬೇಕು. 'ಶ್ರೀಗುರು ಕರುಣಿಸಲೊಡನೆ ಬಿಟ್ಟಿತ್ತು ಮರವೆ' ಎಂಬ ವಾಕ್ಯಾಭಿಪ್ರಾಯವು ಗರ್ಭದ ಶಿಶುವಿಗೆ ಸಾರ್ಥಕವಾಗುವದಿಲ್ಲ. ಆದರಲ್ಲಿಯೂ ವಾದಿಗಳ ಅಭಿಪ್ರಾಯದಲ್ಲಿ ಇನ್ನೂ ಆಗುವದಿಲ್ಲ. ಏಕೆಂದರೆ ಗರ್ಭದ ಎಂಟನೆಯ ತಿಂಗಳಲ್ಲಿಯೆ ಸಂಪೂರ್ಣ ಜ್ಞಾನವನ್ನು ಒಪ್ಪು ವದರಿಂದ ಅವರ ಅಭಿಪ್ರಾಯದಲ್ಲಿ ಆ ಮಗುವಿಗೆ ಮರವೆ ಇಲ್ಲ. ಮರ ವೆಯಿಲ್ಲದ ಮೇಲೆ ಗುರುಕರುಣವೇತಕ್ಕೆ? ಇನ್ನು 'ಒಡನೆ' ಪದ ಇರು ವದರಿಂದ ಜನನದ ಶಿಶುವಿಗೂ ಸಮನ್ವಯವಾಗುವದಿಲ್ಲ. ಕಾರಣವೇ ನೆಂದರೆ ಬುದ್ಧಿಪ್ರೌಢಿಮತೆಯಿಲ್ಲದ ಮಕ್ಕಳಿಗೆ ತಕ್ಷಣ ಮರವೆ (ಅಜ್ಞಾನ) ಹರಿಯದು. ಅರಿವು (ಜ್ಞಾನ) ಮೈಗೂಡದು. ಆದ ಪ್ರಯುಕ್ತ ಪ್ರಾಪ್ತ ವಯಸ್ಕರೆ ಶಿವದೀಕ್ಷೆಗೆ ತಕ್ಕವರು ಎಂಬುದ ಶಿವಶರಣರ ನುಡಿಗಳಿಂದ ನಿರ್ಧರವಾಗುತ್ತದೆ.

ಜನನದ ಮಕ್ಕಳಿಗೆ ಶಿವದೀಕ್ಷೆಯನ್ನು (ಅವು ಅರಿಯದಿದ್ದರೂ ಸರಿಯೆ ಆಚರಿಸದಿದ್ದರೂ ಸರಿಯೆ) ಬೋರ್ಗಲ್ಲ ಮೇಲೆ ನೀರೆರೆದಂತೆ ಮಾಡಿಬಿಟ್ಟು, ಮುಂದೆ ಬರಬರುತ್ತ ತಾಯಿತಂದೆಗಳು—ಗುರುಹಿರಿ

ಯರು ಅಭ್ಯಾಸ ಮಾಡಿಸುತ್ತ ಹೋಗಬೇಕೆಂದು ವಿತ್ತ್ರೊಂದು ವಾದ ಇಂದಿನ ವಾದಿಗಳದು. ಆದರೆ ಶಿವಶರಣರ ವಿಚಾರವು ಇದಕ್ಕೆ ವಿರುದ್ಧವಾಗಿದೆ. ಶಿವಶರಣರು ಶಿವದೀಕ್ಷೆಯಾದೊಡನೆ ಶಿವಾಚಾರ ಶಿವಜ್ಞಾನಗಳೆರಡೂ ಸ್ವಿಚ್ ಹಾಕಿದ ಲೈಟಿನಂತೆ ಆವರಿಸಬೇಕು, ಅಳವಡಬೇಕು ಎಂದು ಪ್ರತಿಪಾದಿಸುತ್ತಾರೆ. ಈ ಅಭಿಪ್ರಾಯವನ್ನು ಎತ್ತಿಹಿಡಿಯುವ ಈ ವಚನವನ್ನು ನೋಡಿ!

"ಕಂಗಳ ಕತ್ತಲೆಯ ಕೆಡಿಸಿದ ರವಿಯ ಚಂದದಂತಾಯಿತ್ತು
ಎನ್ನ ಗುರುವಿನುಪದೇಶ.

ಕನ್ನಡಿಯುರವಿಯ ತನ್ನೊಳಗೆ ಇರಿಸಿಕೊಂಡಂತಾಯಿತ್ತೆನ್ನ ಗುರು
ವಿನುಪದೇಶ.

ಜಲದ ನಿರ್ಮಳ ಗಗನವನೊಳಕೊಂಡ ಪರಿಯಂತಾಯಿತ್ತೆನ್ನ ಗುರು
ವಿನುಪದೇಶ.

ಚಂದ್ರಕಾಂತದ ಶಿಲೆಯು ಚಂದ್ರಮನ ಸೋಂಕಿದಂತಾಯಿತ್ತೆನ್ನ ಗುರು
ವಿನುಪದೇಶ.

ಕೊಡನೊಳಗಣ ಬಯಲ ಹಂಚಿಕೊಂಡ ಪರಿಯಂತಾಯಿತ್ತೆನ್ನ ಗುರು
ವಿನುಪದೇಶ.

ಇದುಕಾರಣ ಮಹಾಘನ ಸದ್ಗುರು ಸಿದ್ಧ ಸೋಮನಾಥನೆಂಬ ಲಿಂಗ
ದಂತಾಯಿತ್ತೆನ್ನ ಗುರುವಿನುಪದೇಶ."

ಈ ವಚನದಲ್ಲಿ ತೋರಿದ ಉಪಮಾನಗಳಂತೆ ಗುರುವಿನುಪದೇಶವು ಶಿಷ್ಯನಲ್ಲಿ ಒಡನೆಯೆ ಉಂಟಾಗಿ ವ್ಯಾಪಿಸಿ ಅಜ್ಞಾನವ ಕೆಡಿಸಿ ಅನಾಚಾರವ ಅಳಿಸಿ, ಸದಾಚಾರ ಸದ್ಯಜ್ಞಾನಗಳ ಮೂರ್ತಿಮತ್ತಾಗಿ ನಿಂತು, ತನ್ಮಯತ್ವವು ಉಂಟಾಗಬೇಕಾದರೆ ಶಿವದೀಕ್ಷೆಯ ಕಾಲವು ಶಿವಶರಣರ ದೃಷ್ಟಿಯಲ್ಲಿ ನುಡಿಯಲ್ಲಿ ಯಾವುದಿದೆಯೆಂಬುದನ್ನು ವಿಚಾರಪರರಾದ ವಾಚಕರೆ ಯೋಚಿಸಬೇಕು.

# ದೀಕ್ಷಾವಾದ.

(ಲೇಖಕರು:— ಶ್ರೀ. ವೀ- ಸಂ. ಸಂಜಪ್ಪನವರು, ಬೆಂಗಳೂರು—ನಗರ)

---

## ಅಕುಲಯ್ಯಗಳ ಅನುಚಿತ ವಿಚಾರಗಳ ಖಂಡನೆ.

ಈ ವರ್ಷದ "ಶಿವಾನುಭವ" ಪತ್ರಿಕೆಯ ೪—೫ನೇ ತಿಂಗಳು ಗಳ ಸಂಚಿಕೆಗಳಲ್ಲಿ ಪ್ರಕಟವಾದ ಅಕುಲಯ್ಯಗಳ ಮಾರುತ್ತರದ ಖಂಡನೆಯನ್ನೊಳಗೊಂಡ "ದೀಕ್ಷಾವಾದ" ಎಂಬ ಲೇಖವನ್ನು ಟೀಕಿಸಲು ಹೊರಟ ಅಕುಲಯ್ಯಗಳು ೬ನೇ ತಿಂಗಳ "ಶಿವಾನುಭವ" ದಲ್ಲಿ ಮತ್ತೆ ಕಾಣಿಸಿಕೊಂಡಿದ್ದಾರೆ!

ಈ ಅಕುಲಯ್ಯಗಳು ನಾವು ಕೇಳಿದ ಪ್ರಶ್ನೆಗಳಿಗೊಂದಕ್ಕೂ ಉತ್ತರವನ್ನೇ ಕೊಡದೆ "ಹಾಡಿದ್ದನ್ನೇ ಹಾಡುವ ಕಿಸಬಾಯಿ ದಾಸ" ರಂತೆ ಒಮ್ಮೆ ಬರೆದ ವಿಚಾರಗಳನ್ನೇ ಪುನಃ ಪುನಃ ಬೇರೆ ಬೇರೆ ಶಬ್ದಗಳಿಂದ ತಿರುವಿಕೊಂಡು ಮಗುಚಿಕೊಂಡು ಬರೆಯುತ್ತಿದ್ದು "ಕೊಂಕಣವ ಸುತ್ತಿ ಮೈಲಾರಕ್ಕೆ ಬಂದ ಮಂಕನ" ನಡೆವಳಿಕೆಯನ್ನು ಅನುಕರಣ ಮಾಡುತ್ತಿದ್ದಾರೆ!

ಅಕುಲಯ್ಯಗಳ ಈ ಬಗೆಯ ಹುರುಳಿಲ್ಲದ ವಿಚಾರಗಳಿಗೆ ಉತ್ತರಗಳನ್ನು ಕೊಡುತ್ತಾ ಹೋದರೆ ಬಂಡವಾಳವಿಲ್ಲದ ಬಡಾಯಿಯನ್ನು ಗೌರವಿಸಿದಂತಾಗುತ್ತದೆಯಾದರೂ ಉತ್ತರವೀಯದೆ ಹೋದರೆ ಆ ಹುರುಳಿಲ್ಲದ ಬಡಾಯಿಯನ್ನೇ ತಿರುಳಾದ ಬಂಡವಾಳವೆಂದು ವಾಚಕರನ್ನು ಮೋಸಗೊಳಿಸಬಹುದಾದ್ದರಿಂದ ಕಾರಣ ಅಕುಲಯ್ಯಗಳ ಅವಿಚಾರಗಳನ್ನಿಲ್ಲಿ ಖಂಡಿಸಬೇಕಾಗಿದೆ.

ಈ ಅಕುಲಯ್ಯಗಳು— "ಸತ್ಯವಂತರಂತೆಯೇ ಆರಂಭಿಸಿ..." ಎಂಬುದಕ್ಕೆ ಪ್ರಾರಂಭ ಮಾಡಿ ತಾವೇನೋ ಮಹಾ ಸತ್ಯದೇವತೆಯ ಅವತಾರವೋ ಎಂಬಂತೆ ಪೈಯ್ಯಾರದಿಂದ ನಟಿಸಿ ದಿಗ್ದರ್ಶನವಾಗಿ ತಾಳ್ಮೆಯಿಂದ ತೋರಿಸಿ ಮುಂದೆ ಕೆಲವು ಮುಖ್ಯ ಪ್ರಶ್ನೆಗಳನ್ನು ಮಾಡುತ್ತೇನೆ..." ಮುಂತಾಗಿ ಬರೆದು ಅಲ್ಲಿಂದ ಮುಂದೆ

ನಾಲ್ಕು ಪುಟಗಳಷ್ಟು ತಮ್ಮ ಹಿಂದಿನ ಲೇಖಗಳಲ್ಲಿ ಬರೆದ ಮಾತು ಗಳನ್ನೇ ಹಿಂದು ಮುಂದು ಮಾಡಿ ಎತ್ತಿ ತುಂಬಿ ಕೊನೆಯಲ್ಲಿ ಬೃಹಸ್ಪತಿ ಗಳನ್ನೆನಿಸಿಕೊಳ್ಳಲು ಆಶೆಪಟ್ಟು ತಮ್ಮ ತಲೆಯಲ್ಲಿ ಹುದುಗಿದ್ದ ಅತಿ ಪಾಂಡಿತ್ಯದ ಅವ್ಯವಹಾರ್ಯದ ಐದು ಪ್ರಶ್ನೆ ?! ಗಳನ್ನು ಪ್ರಕಟಿಸಿ 'ಬೊಟಾಟಕೆ ದಾಸಯ್ಯನಿಗೆ ಬೆನ್ನೆಲ್ಲಾ ನಾಮಗಳು' ಎಂಬ ಗಾದೆ ಯಂತೆ ಕೊನೆಯಲ್ಲಿ 'ಸತ್ಯಾರ್ಥೋ ವಿಜಯತೇ' ಎಂಬ ವಾಕ್ಯವನ್ನು ಬೇರೆ ಬರೆದಿದ್ದಾರೆ.

ಈ ಅಕುಲಯ್ಯಗಳ ಒಂದೊಂದೇ ಅವಿಚಾರಗಳನ್ನು ಕೊಂಚ ಕೊಂಚವಾಗಿ ವಿಚಾರಿಸೋಣ. ಈ ಅಕುಲಯ್ಯಗಳು, ಕೇಳಿದ ಪ್ರಶ್ನೆ ಗಳೊಂದಕ್ಕೂ ಉತ್ತರವನ್ನಾಗಲೀ ಸಮಾಧಾನವನ್ನಾಗಲೀ ಈ ವರೆಗೂ ಕೊಟ್ಟಿಲ್ಲ. ಆದಕ್ಕೆ ಬದಲಾಗಿ ಮಾರ್ಮಿಕ ವಾಕ್ಯಗಳಿಂದಲೂ ಅಲ್ಪೋ ಕ್ತಿಗಳಿಂದಲೂ ತಮ್ಮಲ್ಲಿರುವ ಕೋಪತಾಪಗಳನ್ನೆಲ್ಲಾ ಪ್ರದರ್ಶಿಸುವದ ರಲ್ಲಿಯೇ ತಮ್ಮ ಬುದ್ಧಿಶಕ್ತಿಯನ್ನೆಲ್ಲಾ ವ್ಯಯ ಮಾಡುತ್ತಿದ್ದಾರೆ.

ಎಂಟನೆಯ ತಿಂಗಳುಃ—

ಈ ಅಕುಲಯ್ಯಗಳು 'ನಾವು ಲಿಂಗಧಾರಣೆಯ ಕಾಲದಲ್ಲಿ ಶಿಶು ವಿಗೆ 'ಜ್ಞಾನೋದಯವಾಗುವುದಿಲ್ಲ ಎಂದು ನಿರಾಧಾರವಾಗಿ ಬರೆ ಯಲಿಲ್ಲ! . . . ಕಾರಾಗೃಹದ ಕಳ್ಳನಂತೆ ಆಗ ಒಂದು ವಿಧವಾಗಿ ಜ್ಞಾನ ಬಂದಂತಾದರೂ ಅದು ನಾಯಿಯ ಕನಸು! ಆ ಮಗು ಈಚೆಗೆ ಬಂದರೆ ಮರಳಿ ಮಾಯಾ ಪಾಶದಿಂದ ಮುತ್ತಿ ಅಜ್ಞಾನಾಂಧಕಾರಾ ವೃತವಾಗಿ ಭವದ ಹಾಳು ಭಾವಿಯಲ್ಲಿ ಬೀಳುತ್ತಾನೆಂದು ಆದೇ ಗರ್ಭೋ ಪನಿಷತ್ತಿನ ಮುಂದಿನ ಪಂಗ್ತಿಗಳಲ್ಲಿ ಸುಸ್ಪಷ್ಟವಾಗಿ ಹೇಳಿದೆ. ಮುಖ ಮಾತ್ರ ಮಲ್ಲಯ್ಯ ಕಾಲ ಅಲ್ಲಯ್ಯ ಅಂದರಾಗುವದೇ ?..." ಎಂಬು ದಾಗಿ ಬರೆದು ತಮ್ಮ ಪುಸ್ತಕದ ಬದನೆಕಾಯಿ ಗಂಟನ್ನು ಪುನಃ ಬಿಚ್ಚಿದ್ದಾರೆ.

ಹಾಹಾ! ಈ ಅಕುಲಯ್ಯಗಳಿಗೆ, ಶಿಶುವು ಭವದ ಹಾಳು ಭಾವಿಗೆ ಬಿದ್ದರೂ ಆ ಹಾಳು ಭಾವಿಯ ತಳದಲ್ಲಿಯ ಬಂಡೆಗಲ್ಲಿಗೆ ಬಡಿದು ಅಪಾಯವನ್ನು ಹೊಂದುವ ಮೊದಲೇ ಅದನ್ನು ಕೈಯಲ್ಲಿ ಹಿಡಿದು ಕಾಪಾಡಿ, ಅದು ಭಾವಿಗೆ ಬೀಳುವದಕ್ಕಿಂತ ಮೊದಲೇ ಕಂಡುಕೊಂಡಿದ್ದ

ನವ ಮಾಸದೊಳ್ ಶಿವಧ್ಯಾನ ಪರನಾಗಿ ಸಂ।
ಭವಿಸಿದೆಂ ಭವಭವದೊಳಿಂತು ಗುರುಕರುಣದಿಂ।
ಶಿವಪರಾಯಣನಾಗಿ ಮುಕ್ತನಹೆ.........।

(ಶ್ರೀಚನ್ನಬಸವ ಪುರಾಣ)

ಎಂಬ ದಿವ್ಯ ಮಾರ್ಗವನ್ನು ಆ ಶಿಶುವಿಗೆ ತೋರಿ ಆ ಮಾರ್ಗದಲ್ಲಿ ದೊರೆಯುವ ನಿತ್ಯ ಮುಕ್ತಿಯ ದಿವ್ಯಭವನವನ್ನು ತೋರಿಸಿಕೊಡುವುದಕ್ಕಾಗಿಯೇ ಪ್ರಮಥಾಚಾರ್ಯರಾದ ಶ್ರೀ ಮದ್ಬಸವಾದಿ ಪುರಾತನರಿಂದ ವಿಶೇಷ ವೈಶಿಷ್ಟ್ಯಂಗಳಿಂದೊಡಗೂಡಿದ ಈ ನಮ್ಮ ವೀರಶೈವ ಧರ್ಮಾಚಾರಗಳು ಈ ಧರಾತಲದಲ್ಲಿ ನೆಲೆಗೊಳಿಸಲ್ಪಟ್ಟಿರುವವೆಂಬುದೀ ಆಕುಲಯ್ಯಗಳಿಗರಿವಾಗಲಿಲ್ಲವೇಕೆ? ಬಹುಶಃ ಇದು ಅಕುಲಯ್ಯಗಳ ಅಂಧಾನುಕರಣ ಬುದ್ಧಿಯ ದೋಷವಿರಬಹುದಲ್ಲವೆ?

ಶಿಶುವು ಗರ್ಭದಲ್ಲಿದ್ದಾಗಿನಿಂದಲೇ ಅದಕ್ಕೆ ಸಂಸ್ಕಾರಗಳನ್ನೆಸಗುವ ಆಚಾರಣೆಯನ್ನಳವಡಿಸಿರುವ ನಮ್ಮ ಪುರಾತನರ ಉದ್ದೇಶವೇನಿದ್ದೀತು? ಧರೆಯ ಮೇಲಣ ಯಾವ ಧರ್ಮದಲ್ಲಿಯೂ ಇಲ್ಲದ ಈ ಶ್ರೇಷ್ಠಾಚರಣೆಯನ್ನೇಕೆ ರೂಢಿಯಲ್ಲಿ ತಂದಿರಬಹುದು? ಇದನಷ್ಟು ದುರುದ್ದೇಶವೆನ್ನಲಾದೀತೆ? ಪಿಂಡಕ್ಕೆ ಸಂಸ್ಕಾರವನ್ನಾರಂಭಿಸಿ ಅದು ಬಲಿತು ಬೆಳೆದು ರವಿಯ ಕಾಣುವ ವರೆಗೂ ಸಂಸ್ಕಾರವನ್ನು ನಡೆಸಿ ಮುಂದೆ ಬೆಳೆದು ಪ್ರಬುದ್ಧಾವಸ್ಥೆಗೇರುವ, ವರೆಗೂ ಸಂಸ್ಕೃತಿಯನ್ನಳವಡಿಸಿ ಮುಂದೆ ಜಗತ್ತಿನಲ್ಲಿ ತನ್ನ ಪಾರಂಪರ್ಯವಾದ ಸ್ವತಂತ್ರ ಸಂಸ್ಕೃತಿಯ ಹೆಚ್ಚಳವನ್ನು ಮೆರೆಯಿಸುವಂತಾಗಬೇಕೆಂಬ ಮಹೋದ್ದೇಶವೇ ಆ ಪುರಾತನರದಾಗಿದ್ದಿತಲ್ಲವೆ?

ಗರ್ಭದಲ್ಲಿದ್ದಾಗ ಸುಜ್ಞಾನೋದಯವಾಗಿದ್ದು ಗರ್ಭದಿಂದ ಹೊರಬಿದ್ದೊಡನೆಯೇ ಮರೆವಿನಿಂದಾವೃತವಾಗುವುದರಿಂದಲೇ ಗರ್ಭದಿಂದ ಹೊರಬಿದ್ದ ಶಿಶುವಿಗೆ ಇನ್ನೂ ಹಸಿವೆಯಿರುವಾಗಲೇ ಪುನಃ ಮೊದಲು ಮಾಡಿದ್ದ ಲಿಂಗದ ಧಾರಣೋಪದೇಶವನ್ನನುಗ್ರಹಿಸಿ ಆ ಎಳೆತನದಿಂದಲೇ ಗುರುಹಿರಿಯರ ತಂದೆ ತಾಯಿಗಳ ಸಂಪರ್ಕ, ಸಹವಾಸ ಒಡನಾಟಗಳ ಮೂಲಕ "ಲಿಂಗವಂತ ಸಂಸ್ಕೃತಿ" ಯು ಶಿಶುವಿಗೆ ಮೈಗೂಡುವಂತೆಯೇ ಆದ್ಯರಾಚರಣೆಯಿದೆಯಲ್ಲವೆ? ಹೀಗಿದ್ದರೂ ಸಹ ಶಿಶು

ವಗೆ ಜ್ಞಾನವಿಲ್ಲದಿರುವುದರಿಂದ ಪುನಃ ವೀರಶೈವ ದೀಕ್ಷೆಯನ್ನು ಮಾಡಬೇಕೆಂಬ ಒಂದೇ ರಾಗವನ್ನು ಆತ್ಮವಂಚನೆಯಿಂದ ಪದೇ ಪದೇ ಹಾಡತೊಡಗುವುದು ಭಂಡವಾದವೆನ್ನಿಸಿಕೊಳ್ಳುವುದಿಲ್ಲವೆ? ಆದ್ಯರಾಚರಣೆಯ ಆಧಾರಗಳನ್ನು ತೋರಿಸಿದರೆ ಮಾತ್ರ ಈ ವಾದವನ್ನು ಸರಿಯೆಂದು ಒಪ್ಪಬಹುದಲ್ಲವೆ ?

ತಲೆ ಮಲ್ಲಯ್ಯ ಕಾಲು ಅಲ್ಲಯ್ಯ. ಅಂದರಾಗುವದೇ ? ಎಂಬ ಆಕುಲಯ್ಯಗಳ ಪ್ರಶ್ನೆಯು ಅವರ ವ್ಯವಹಾರ ಜ್ಞಾನವಿಹೀನತೆಯನ್ನು ತೋರಿಸುತ್ತದೆ ! ಹೇಗೆಂದರೆ:— ವಿಚಿತ್ರವೂ ಅದ್ಭುತವೂ ಆದ ಕೆಲವು ಪ್ರಾಣಿಗಳನ್ನೂ ವಸ್ತು ವಿಶೇಷಗಳನ್ನೂ ಜನತೆಗೆ ಪ್ರದರ್ಶಿಸಿ ತನ್ಮೂಲಕ ಬಂದ ಸಂಪಾದನೆಯಿಂದ ಹೊಟ್ಟೆ ಹೊರೆಯುವ ಕೆಲವರು ಕಲಾ ಕುಶಲರು ಜಾತ್ರೆ, ಪ್ರದರ್ಶನ ಮುಂತಾದ ಹಲವು ಕಡೆಗಳಲ್ಲಿ ಒಂದೊಂದು ಬಗೆಯ ವಿಚಿತ್ರ ಪ್ರಾಣಿಗಳನ್ನು ಪ್ರದರ್ಶನಕ್ಕಿಟ್ಟಿರುತ್ತಾರೆ. ಅವು ಹೇಗಿರುತ್ತವೆಂದರೆ— ಮುಖ ಮಾತ್ರ ಮನುಷ್ಯರದಾಗಿರುತ್ತದೆ ! ಚನ್ನಾಗಿ ಶೃಂಗರಿಸಿರುತ್ತದೆ. ಸುತ್ತಲೂ ನೋಡುತ್ತದೆ. ಕಣ್ಣು ಮಿಳುಕಿಸುತ್ತದೆ. ಮಾತನಾಡಿಸಿದರೆ ಮಾತನಾಡುತ್ತದೆ. ಆದರೆ ಶರೀರ ಮತ್ತು ಕಾಲುಗಳು ಮಾತ್ರ ಬಲೆಯಿಂದ ಸೃತವಾದ ಜೇಡರ ಹುಳುವಿನದೋ. ಅಥವ ಮತ್ತಾವುದಾದರೂ ಮೃಗಗಳದೋ ಆಗಿರುತ್ತದೆ. ಈ ವಿಚಿತ್ರ ಪ್ರಾಣಿಯನ್ನು ದೂರದಿಂದ ನೋಡುವ ಹಸ್ತಕೌಶಲ್ಯವನ್ನರಿಯದ ಜನಸಮೂಹವೆಲ್ಲವೂ ಇದೊಂದು ಪರಮಾದ್ಭುತ ಪ್ರಾಣಿ ! ಎಂದೂ ಈ ಯುಗದಲ್ಲಿಯೇ ಇದೊಂದು ವಿಶೇಷ ದರ್ಶನವೆಂದೂ ಪರಮಾಶ್ಚರ್ಯಭರಿತರಾಗಿ ಆ ವಿಚಿತ್ರ ಪ್ರಾಣಿಯನ್ನು ಸಂಗ್ರಹಿಸಿ ತಮಗೆಲ್ಲರಿಗೂ ತೋರಿಸಿದ್ದಕ್ಕಾಗಿ ಆ ಪ್ರದರ್ಶಕನನ್ನು ಮನಸಾರೆ ಹೊಗಳಿ ಹೋಗುತ್ತಾರೆ. ಆದ ಮಾತ್ರಕ್ಕೆ ಆ ಪ್ರದರ್ಶಿತ ಪ್ರಾಣಿಯು ನಿಜವಾದ ಮನುಷ್ಯ ಮುಖ ಮೃಗ ಶರೀರ ಕಾಲುಗಳಿಂದ ಕೂಡಿದ್ದಾಗಿರುತ್ತದೆಯೆ ? ಲೌಕಿಕ ತಿಳುವಳಿಕೆಯುಳ್ಳವರಾರೂ ಆ ಅಲೌಕಿಕ ಪ್ರಾಣಿಯನ್ನು ಕಲಾಕೌಶಲ್ಯವೆನ್ನುವರೇ ಹೊರತು ನಿಜವೆಂದು ನಂಬುವುದಿಲ್ಲ. ಆದರೆ ದೂರದಿಂದ ನೋಡುವ ಪ್ರೇಕ್ಷಕರೆಲ್ಲರೂ ಆ ಪ್ರಾಣಿಯನ್ನು ತಲೆ ಮಾತ್ರ ಮನುಷ್ಯ ಕಾಲು ಮಾತ್ರ ಅಲ್ಲವೆಂದು ಅನ್ನುವರಲ್ಲವೆ ?

ಸಮಾಜದಲ್ಲಿಯೂ ಹೀಗೆಯೇ ಕುಶಲರೂ ಸ್ವಾರ್ಥಿಗಳೂ ಆದ ಕೆಲ ಧರ್ಮಾಧಿಕಾರಿಗಳು ತಮ್ಮ ಬುದ್ಧಿ ಚಾತುರ್ಯವನ್ನುಪಯೋಗಿಸಿ ಜನತೆಯ ಭಕ್ತಿ ಭಾವನೆಯನ್ನು ದುರುಪಯೋಗಪಡಿಸಿಕೊಂಡು ಈ ಲಿಂಗಧಾರಣೆಯೇ ಬೇರೆ, ವೀರಶೈವ ದೀಕ್ಷೆಯೇ ಬೇರೆ, ಎಂಬ ಕೃತಕವೂ ಅಸ್ವಾಭಾವಿಕವೂ ಆದ ಸಲ್ಲದ ತಿಳುವಳಿಕೆಯನ್ನೂ ಅಲ್ಲದ ಆಚರಣೆಯನ್ನೂ ಬಿತ್ತುತ್ತಿದ್ದಾರೆ. ಆದರೆ ನಿಜಸ್ಥಿತಿಯನ್ನು ಬಲ್ಲವರು ತಲೆಕಾಲುಗಳೆಲ್ಲವೂ ಏಕ ಜಾತೀಯವಾಗಿ ಸೃಷ್ಟಿ ಸಹಜವಾಗಿ ಹುಟ್ಟುತ್ತವೆಂತಲೂ ಅದೇ ಬೇರೆ ಇದೇ ಬೇರೆಯಾಗಿ ಕಾಣುವಂತೆ ಮಾಡುವುದು ಹೊಟ್ಟೆಯ ಪಾಡಿನ ಚಾತುರ್ಯವೆಂತಲೂ ಹಾಗೆಯೇ ಈ ಲಿಂಗಧಾರಣ ದೀಕ್ಷೆಯೂ ಒಮ್ಮೆಯೇ ನಡೆಯುವ ಸಹಜಧರ್ಮವೆಂತಲೂ ಧಾರಣಕ್ಕೇ ಬೇರೆ ಕಾಲ, ದೀಕ್ಷೆಗೇ ಬೇರೆ ಕಾಲವೆಂಬ ತಿಳವಳಿಕೆಯು ಸ್ವಾರ್ಥಪೂರಿತರಾದ ಧರ್ಮಾಧಿಕಾರಿಗಳ ಹುಸಿ ತಿಳವಳಿಕೆಯ ಫಲವೆಂದೂ ದೀಕ್ಷೆ ಮಾಡದೆ ಧಾರಣೆಯಾಗುವುದಿಲ್ಲ, ಧಾರಣೆ ಮಾಡದೆ ದೀಕ್ಷೆಯಾಗುವುದಿಲ್ಲವೆಂಬ ನಿಜಾಂಶವನ್ನೂ ತೋರಿಸಿಕೊಟ್ಟು ಶರೀರವನ್ನು ಮರೆಮಾಡಿ ತಲೆ ಮಾತ್ರ ಕಾಣುವಂತೆ ಇರಿಸಿ ಬೇರೆ ಕಾಲುಗಳನ್ನು ಜೋಡಿಸಿರುವ ಈ ನೋಟದ ತಲೆ ಮಾತ್ರ ಮಲ್ಲಯ್ಯ ಕಾಲು ಅಲ್ಲವಯ್ಯ ವೆಂದು ನಿಜಾಂಶವನ್ನು ತೋರಿಸಿಕೊಡುವುದು ನಿಜವನ್ನಪೇಕ್ಷಿಸುವವರೆಲ್ಲರ ಕರ್ತವ್ಯವೇ ಅಲ್ಲವೆ ?

ಮತ್ತೊಂದು ಉದಾಹರಣೆ:—

ಈಗ ಅಲ್ಲಲ್ಲಿ ನೆರವೇರುತ್ತಿರುವ ಎಂಟನೆಯ ಅಥವಾ ಇನ್ನೂ ಹೆಚ್ಚಿನ ವರ್ಷಗಳ ದೀಕ್ಷಾ ಸಮಾರಂಭಗಳೆಲ್ಲವೂ ಮೊದಲು ಭವಿಗಳಾಗಿದ್ದವರನ್ನು ಭಕ್ತರನ್ನಾಗಿಸುವ ರೀತಿಯ ದೀಕ್ಷಾಮಹೋತ್ಸವಗಳೇ ಹೊರ್ತು ವೀರಶೈವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗೆ ಮಾಡಬೇಕಾದುದಲ್ಲವೆಂದೂ ಈ ಪದ್ಧತಿಯು ಇತ್ತೀಚೆಗೆ ಅನಿರೀಕ್ಷಿತವಾಗಿ ಬಂದ ಅನುಕರಣ ಪದ್ಧತಿಯೆಂದೂ ಈ ಹಿಂದಿನ ಲೇಖನಗಳಲ್ಲಿಯೇ ನಿರೂಪಿಸಲಾಗಿದೆ. ಈಗಲೂ ಅದಕ್ಕೆ ಮತ್ತೊಂದು ಆದ್ಯರಾಚರಣೆಯ ಉದಾಹರಣೆಯನ್ನು ನಿರೂಪಿಸಲಾಗುವುದು.

ದನುಗೂರು ಬೃಹನ್ಮಠಾಧೀಶ್ವರರೂ ಕರ್ಣಾಟಕ ಸಂಸ್ಕೃತ ಉಭಯ ಭಾಷಾವಿಶಾರದರೂ ಉದ್ದಾಮ ಗ್ರಂಥಕರ್ತರೂ ಆದ ಶ್ರೀ ಷಡಕ್ಷರಿ

ಶಿವಯೋಗಿಗಳವರು ತಮ್ಮ "ವೃಷಭೇಂದ್ರ ವಿಜಯ" ನಾಮಕ ಗ್ರಂಥರತ್ನದ ಮೂರನೆಯ ಆಶ್ವಾಸದ ಬಸವೇಶ್ವರ ಜನನದ ವರ್ಣನಾ ಸಂದರ್ಭದಲ್ಲಿ ದೀಕ್ಷಾ ವಿಚಾರವನ್ನು ಕುರಿತು ಹೀಗೆ ನಿರೂಪಿಸಿದ್ದಾರೆ.

ಚ॥ ವೃ। ಪರಮ ಕೃಪಾರಸಾರ್ದ್ರ ನಯನಾಂಚಲದಿಂ ನಡೆನೋಡಿ ಪಾಣಿ ಪಂ।
ಕರುಹಮನಿಟ್ಟು ಮಸ್ತಕದೊಳುದ್ಧ ವಿಭೂತಿಯನೊಲ್ದು ಫಾಲದೋ।
ಳ್ಧರಿಯಿಸಿ "ಲಿಂಗಸಂಗತ ನಿಜಾಂಗನನಾಗಿಸಿ ಮೂಲಮಂತ್ರಮಂ।
ತರುಣನ ಕರ್ಣದೋಳ್ ತಿಳುಪಿ ದೀಕ್ಷೆಯನಿತ್ತನವಂ ಸದಾಶಿವಂ" ॥

ಬೃಹನ್ಮಠಾಧೀಶರೂ ರಾಜಾಧಿರಾಜ ಸನ್ಮಾನಿತರೂ ಆಗಿದ್ದ ಆ ಷಡಕ್ಷರ ಗುರುವರೇಣ್ಯರು ಮೇಲೆ ಕಂಡಂತೆ ಶಿಶುವಿಗೇ ಲಿಂಗಧಾರಣ ದೀಕ್ಷೆಯಾದಂತೆ ನಿರೂಪಿಸಿದ್ದಾರೆ. ಮತ್ತು ಮುಂದೆ ಎಲ್ಲಿಯೂ ಆ ಶಿಶುವಿನ ಎಂಟನೆಯ ವರುಷದ ದೀಕ್ಷೆಯಾದಂತೆ ನಿರೂಪಿಸಲಿಲ್ಲ! ಕಾರಣವೇನಿರಬಹುದು? ನಿಜವಾದ ವೀರಶೈವಾಚರಣೆಯನ್ನು ಈ ಕಥೆಯ ಮೂಲಕವಾದರೂ ಶಾಶ್ವತವಾಗಿರಿಸಿ ಜನತೆಗೆ ತಿಳಿಸಬೇಕೆಂಬ ಅವರ ಸದಿಚ್ಛೆಯೇ ಆ ಕಾರಣವೆಂಬುದು ನಿರ್ವಿವಾದವಲ್ಲವೆ? ಇತ್ತೀಚಿನ ಎಂಟನೆಯ ವರ್ಷದ ಅನುಕರಣ ದೀಕ್ಷೆಯು ಭವಿಗಳನ್ನು ಭಕ್ತರನ್ನಾಗಿಸುವುದಕ್ಕಾಗಿ ನಿಯಮಿತವಾಗಿದ್ದ ಪದ್ಧತಿಯು ಕೆಲ ಸ್ವಾರ್ಥಿಗಳಿಂದ ರೂಪಾಂತರ ಹೊಂದಿ ಈಗಿನ ಸ್ಥಿತಿಯಲ್ಲಿದೆಯೆಂಬುದು ಸ್ಪಷ್ಟವಾಗಿ ತಿಳಿಯುತ್ತದೆಯಲ್ಲವೆ?

ಸಿದ್ಧಾಂತ ಶಿಖಾಮಣಿ ಮತ್ತು ಜ್ಞಾನಕ್ರಿಯೆ:—

ಈ ಹಿಂದಿನ ಲೇಖನಗಳಲ್ಲಿ ಸಿದ್ಧಾಂತಶಿಖಾಮಣಿಯೊಳಗಿಣ ದೀಕ್ಷೆಯು ಭವಿಗಳನ್ನು ಭಕ್ತರನ್ನಾಗಿಸುವಾಗಿನ ದೀಕ್ಷಾವಿಧಾನವೇ ಹೊರತು, ವೀರಶೈವರು ತಮ್ಮ ಮಕ್ಕಳಿಗೆ ಮಾಡಬೇಕಾದುದಲ್ಲವೆಂಬುದಾಗಿ ವಿವರವಾಗಿ ಉದಾಹರಣೆಗಳ ಸಮೇತ ವಿವೇಚಿಸಿದ್ದುದನ್ನು ಈ ಅಕುಲಯ್ಯಗಳು ತಮ್ಮ ಲೇಖದಲ್ಲಿ "ಇದು ನ್ಯಾಯಬದ್ಧವಾದ ವಿಮರ್ಶೆ ಇದನ್ನು ಒಪ್ಪಲೇ ಬೇಕು" ಎಂದು ಸ್ವತಃ ಬರೆದು ಮೂಲ ತತ್ವವನ್ನು ಸ್ಪಷ್ಟವಾಗಿ ಒಪ್ಪಿಕೊಂಡಿದ್ದವರು ಈಗ ಪುನಃ ಒಣ ಬಿಂಕವನ್ನವಲಂಬಿಸಿ "ವೀರಶೈವ ಧರ್ಮವು ಇರುವುದೇ ಭವಿಗಳ ಉದ್ಧಾರಕ್ಕಾಗಿ" ಎಂದು ಹೇಳಿದವರಿಂದ 'ವಿಧದತುಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ" ಎಂಬ

ಕ್ರಿಯಾಗತಿಯೇನು ? ಎಂದು ಕೇಳಿದ್ದಕ್ಕೆ ಉತ್ತರವೇ ಇಲ್ಲ ಎಂದು ಬಡಾಯಿಕೊಟ್ಟಿ ಬೋರಲು ಬಿದ್ದಿದ್ದಾರೆ?

ಈ ಅಕುಲಯ್ಯಗಳು ಕೇಳಿರುವ 'ವಿಧದತುವುತಿ ವುಸ್ಮಿನ್' ಶ್ಲೋಕದ ಅರ್ಥವು ಹೀಗಿದೆ:—

"ಸಮಸ್ತ ಶಿವಾಗಮಗಳನ್ನನುಸರಿಸುತ್ತಿರುವ ರಹಸ್ಯಾರ್ಥವನ್ನು ಪ್ರತಿಪಾದಿಸತಕ್ಕುದೂ, ಶಿವಜ್ಞಾನದಿಂದುಂಟಾಗುವ ಶಿವಾದ್ವೈತಭಾವರೂಪ ಪ್ರಸಾದವನ್ನು ಪ್ರಕಟಿಸತಕ್ಕುದೂ, ಶಿವಮತದ ಸಾರ ಉಳ್ಳುದೂ, ಪಂಡಿತರಿಂದ ಶ್ಲಾಘನೀಯವಾದುದೂ, ಆಗಿರುವ ಈ ಶಿದ್ಧಾಂತಶಿಖಾಮಣಿಯಲ್ಲಿ ವೀರಶೈವರೆಲ್ಲರೂ ಪೂಜ್ಯಬುದ್ಧಿಯನ್ನಿಡುವವರಾಗಲಿ."

ಬೇಡವೆಂದವರಾರು ? ಶಿದ್ಧಾಂತಶಿಖಾಮಣಿಯಲ್ಲಿ ಪೂಜ್ಯಬುದ್ಧಿಯನ್ನಿಡಬಾರದೆಂದು ಹೇಳಿದರಾರು? 'ವೀರಶೈವ ಧರ್ಮವು ಇರುವುದೇ ಭವಿಗಳ ಉದ್ಧಾರಕ್ಕಾಗಿ' ಎಂಬ ವಾಕ್ಯಕ್ಕೆ ಮೇಲಣ ಅರ್ಥವು ವಿರೋಧವಾದೀತೇನು? ಇದು ಸಂಸ್ಕೃತ ಶ್ಲೋಕಗಳನ್ನು ತೋರಿಸಿ ಕನ್ನಡ ವಾಚಕರನ್ನು ಮೋಸಗೊಳಿಸಲೆಣಿಸಿರುವ ಅಕ್ಕುಲಯ್ಯಗಳ ನೆಕ್ಕಲು ಬುದ್ಧಿಯ ನಿದರ್ಶನವಲ್ಲವೆ?

'ಮನುಷ್ಯನ ಕಾಲುಗಳೆರಡನ್ನೂ ಏಕಕಾಲಕ್ಕೆ ಎತ್ತಿಡಲು ಸಾಧ್ಯವೆ?' ಎಂದು ಕೇಳುವ ನಮ್ಮೀ ಅಕುಲಯ್ಯಗಳಿಗೆ ಒಂದು ಕಾಲು ನಾವು ಹೋಗಿ ಸೇರಬೇಕಾದ ಸ್ಥಳವನ್ನು ತಲುಪಿದ ಬಳಿಕ ಮತ್ತೊಂದು ಕಾಲು ಪ್ರಯಾಣವನ್ನು ಪ್ರಾರಂಭಿಸುವುದಿಲ್ಲವೆಂಬುದೂ ಒಂದು ಕಾಲನ್ನು ನೆಲಕ್ಕಿಡುವುದರೊಳಗಾಗಿ ಮತ್ತೊಂದು ಕಾಲು ಪ್ರಯಾಣಕ್ಕೆ ಸಿದ್ಧವಾಗಿ ಮೇಲಕ್ಕೆದ್ದಿರುತ್ತದೆಯೆಂಬುದೂ ಹಾಗೆಯೇ ಜ್ಞಾನವು ಸ್ಫುರಿಸಿದಂತೆಲ್ಲ ಒಡನೊಡನೆಯೇ ಕ್ರಿಯೆಯಲ್ಲಿ ತೊಡಗುತ್ತಿರುವ 'ಕ್ರಿಯಾಜ್ಞಾನ ಸಮಾಯುಕ್ತ'ವಾದುದೇ ವೀರಶೈವಾಚರಣೆಯೆಂಬುದೂ ಏಕೆ ತಿಳಿಯಲಿಲ್ಲವೊ? ಅವರು ವಾದದಲ್ಲಿ ಮೊಂಡತನವನ್ನು ಬಳಸಿಕೊಳ್ಳುತ್ತಿರುವುದರಿಂದ ಸತ್ಯಾಂಶಗಳು ಅವರ ಗಮನಕ್ಕೆ ಬಾರದಂತಾಗಿರಬಹುದಲ್ಲವೆ?

ಕಳ್ಳತನ-ಸುಳ್ಳುತನ:—

ಈ ಅಕುಲಯ್ಯಗಳು ಹಿಂದಿನ 'ದೀಕ್ಷಾವಾದ' ಲೇಖನದಲ್ಲಿಯ "ಬಸವಪ್ರಭು ರೇವಣಸಿದ್ಧಾದಿಗಳ ಶರಣಯುಗದಿಂದ ನೋಡಿದರೂ

ೂಡ ಬಿಟ್ಟು....." ಎಂಬ ಬರೆಹದಲ್ಲಿಯು "ಬಸವಪ್ರಭು" ಎಂಬ ವಾಕ್ಯ
ವನ್ನು ಮಾತ್ರ ಉಳಿಸಿ ಮುಂದಿನ ವಾಕ್ಯಗಳನ್ನು ಕಳ್ಳತನ ಮಾಡಿ
ಬರೆಹಕ್ಕೆ ಅಪಾರ್ಥವನ್ನು ಕಲ್ಪಿಸುವ ಸುಳ್ಳನ್ನು ಬರೆಯುವ ಸಾಹ
ಸಕ್ಕೆ ತೊಡಗಿದ್ದುದು ವಾಚಕರೆಲ್ಲರಿಗೂ ಸ್ಪಷ್ಟವಾಗಿ ಗೊತ್ತಿದೆ. ಗೊತ್ತಿ
ಲ್ಲದವರು ಹಿಂದಿನ ಲೇಖನಗಳನ್ನು ಪರಿಶೀಲಿಸಿದರೆ ತಾನಾಗಿಯೇ
ಯೋಗ್ಯತೆಯು ಬಯಲಿಗೆ ಬರುತ್ತದೆಯಾದುದರಿಂದ ಅಕುಲಯ್ಯಗಳು
ವಾಕ್ಯಗಳನ್ನು ಕಳ್ಳತನ ಮಾಡಿ ಅರ್ಥವಿಪರ್ಯಾಸಂಗೈದ ಸುಳ್ಳನ್ನು
ಬರೆದಿದ್ದರೆ? ಇಲ್ಲವೆ? ಎಂಬುದರ ನಿರ್ಣಯಾಧಿಕಾರವನ್ನು ಪ್ರಾಜ್ಞ
ರಾದ ವಾಚಕರ ಪಾಲಿಗೇ ಒಪ್ಪಿಸಲಾಗಿದೆ.

ರೇವಣಸಿದ್ಧರು-ಶೈವೋಪದೇಶ!:—

"ಈಗಲೂ ಯಾವ ಪುರಾತನ ಶರಣಚರಿತ್ರೆಯಲ್ಲಿಯಾದರೂ ಶರ
ಣರು ತಮ್ಮ ಮಕ್ಕಳಿಗೆ ಎಂಟನೆಯ ವರ್ಷದಲ್ಲಿ ಅಥವ ಅದಕ್ಕೂ
ಹಿಚ್ಚಿನ ವಯಸ್ಸಿನಲ್ಲಿ ಎರಡನೆಯಸಾರಿ "ವೀರಶೈವ ದೀಕ್ಷೆ"ಯನ್ನು ಕೊಡಿ
ಸಿದುದನ್ನು ಯಾರಾದರೂ ಪರಿಶೋಧಿಸಿ ಪ್ರಕಟಿಸುವವರಾಗಬೇಕು.
ಈ ಕಾರ್ಯವನ್ನು ಅಕುಲಯ್ಯಗಳಾದರೂ ಮಾಡಬಹುದು." ಎಂಬ
ಕೋರಿಕೆಗೆ ಉತ್ತರವನ್ನು ಕೊಡಲು ಹೊರಟ ಈ ಅಕುಲಯ್ಯಗಳು
ಮನಸಿನ ಮಂಡಿಗೆಯನ್ನು ತಿಂದು ಭುಜವನ್ನು ಚಪ್ಪರಿಸಿಕೊಂಡು
ಹೂಂಕರಿಸಿ ಬಿಟ್ಟಿದ್ದಾರೆ!

ಏನೋ ಬಹುದೊಡ್ಡ ಆಧಾರವನ್ನು ಹುಡುಕಿದವರಂತೆ "ಇದ
ಕ್ಕೊಂದು ನಿದರ್ಶನ" ಎಂಬ ತಲೆ ಬರೆಹವನ್ನು ಹಾಕಿ ರೇವಣಸಿದ್ಧರು
ತನ್ನ ಪುತ್ರ ರುದ್ರಮುನಿದೇವರಿಗೆ ಮಾಡಿದ "ಶೈವೋಪದೇಶ"ವನ್ನು
ಉದಾಹರಿಸಿದ್ದಾರೆ!

"ಎಂಟನೆಯ ವರುಷದೊಳ್ ಮಗನಂ ನೋಡಿ ವಿಗ ಸಂತಸರ
ಬಟ್ಟು "ಶೈವೋಪದೇಶ"ಮಂ ತಾವೆ ಕರುಣಿಸಿ............"

ಎಂಬುದಾಗಿ, ಅಕುಲಯ್ಯಗಳೇ, ಹರಿಹರ ಮಹಾಕವಿಯ ರೇವಣ
ಸಿದ್ಧರಗಳೆಯಿಂದ ಉದ್ಧರಿಸಿದ್ದಾರೆ. ಈ ಅಕುಲಯ್ಯಗಳು ಅದೇ ರಗ
ಳೆಯ ಅವೇ ಉದ್ಧರಿತ ವಾಕ್ಯಗಳ ಹಿಂದುಮುಂದಿನ ವಾಕ್ಯಗಳನ್ನೂ

ಕಣ್ತೆರೆದು ನೋಡಿದ್ದರೆ ಅಲ್ಲಿಯೇ ಅವರ ಬುದ್ಧಿಯು ತಿಳಿಯಾಗಿ ಸಂಶಯವು ಪರಿಹಾರವಾಗಿ ಸತ್ಯವು ತಿಳಿಯುತ್ತಿದ್ದಿತು.

ಹೇಗೆಂದರೆ:— ರೇವಣಸಿದ್ಧರು ಸುಪ್ರಸಿದ್ಧ ಲಕುಲೀಶ ಶೈವಪಂಥದ ಗುರುವರ್ಗದವರೆಂಬುದೂ ಶಿವಸಿದ್ಧಕುಲಚಕ್ರವರ್ತಿಗಳೆಂದು ಹೊಗಳಿಸಿಕೊಂಡವರೆಂಬುದೂ ಅವರು ಆಗಿನ ಅವರ ಪಂಥದ ಪದ್ಧತಿಯಂತೆ ಅನೇಕ ರಾಜಕುಮಾರಿಯರನ್ನು ವಿವಾಹವಾಗಿದ್ದರೆಂಬುದೂ ಈ ರಾಜಕುಮಾರಿಯರಾರೂ ವೀರಶೈವರಲ್ಲವೆಂಬುದೂ ರೇವಣಸಿದ್ಧರು ಹೀಗೆ ವಿವಾಹವಾಗಿದ್ದ ಒಬ್ಬ ರಾಜಪುತ್ರಿಯ ಗರ್ಭಸಂಜಾತರೇ ರುದ್ರಮುನಿಗಳೆಂಬುದೂ ಶ್ರೀರುದ್ರಮುನಿಗಳು ಎಂಟನೆಯ ವರ್ಷದ ಶೈವೋಪದೇಶವಂ ಪಡೆಯುವಾಗ ಇನ್ನೂ ರಾಜಪುತ್ರಿಯರ ಲಾಲನೆ ಪಾಲನೆಯಲ್ಲಿಯೇ ಇದ್ದರೆಂಬುದೂ ಅವರು ಸಕಲವಿದ್ಯಾಪಾರಂಗತರಾಗಿ ಪ್ರಬುದ್ಧವಯಸ್ಕರಾದ ಬಳಿಕವೇ ಬಸವಾದಿ ಶಿವಶರಣರ ಪರಿಶುದ್ಧ ವೀರಶೈವ ಮಾರ್ಗಾನುವರ್ತಿಗಳಾಗಿ ಪೂಜ್ಯಸ್ಥಾನವನ್ನಡರಿದರೆಂಬುದೂ ಶ್ರೀರುದ್ರಮುನಿಗಳಿಗೆ ಶೈವೋಪದೇಶವನ್ನು ಕರುಣಿಸುವಾಗ ರೇವಣಸಿದ್ಧರು ಇನ್ನೂ ರಾಜಪುತ್ರಿಯರ ಸಂಸಾರ ಸಂಸರ್ಗದಲ್ಲಿಯೇ ಇದ್ದುಕೊಂಡು ಪೂರ್ವದ ಶೈವಪಂಥದ ಗುರುಗಳಾಗಿಯೇ ಇದ್ದರೆಂಬುದೂ ಈಗ ಚಾರಿತ್ರ್ಯ ನಿರೀಕ್ಷಕರಾದ ಪ್ರಾಜ್ಞರೆಲ್ಲರೂ ಒಪ್ಪಿದ ನಿರ್ವಿವಾದಾಂಶವೇ ಆಗಿದೆ.

ಇನ್ನೂ ಯಾರಿಗಾದರೂ ಸಂಶಯವಿದ್ದರೆ ಅಂಥವರ ಸಂಶಯ ಪರಿಹಾರಾರ್ಥವಾಗಿ ಹರಿಹರ ಮಹಾಕವಿಯ ರೇವಣಸಿದ್ಧರಗಳೆಯಲ್ಲಿಯ ಅಕುಲಯ್ಯಗಳೇ ಉದ್ಧರಿಸಿರುವ ಭಾಗವನ್ನು ಅದರ ಹಿಂದಿನ ವಾಕ್ಯಗಳ ಸಮೇತ ಈ ಕೆಳಗೆ ಉದಾಹರಿಸಲಾಗಿದೆ. ಪರಿಶೀಲಿಸಬಹುದು.

"ರುದ್ರಮುನಿದೇವನೆಂಬ ನಾಮಕರಣಮಂ ಮಾಡಿ ಪುರಕೈತಂದು ತಮ್ಮರಸಿಯೋರ್ವಳ್ಪುಣ್ಯವನಿತೆಯ ಕೆಯ್ಯೊಳ್ಕುಡೆ ಬಾಲಚಂದ್ರನಂ ಗಗನಾಂಗನೆ ಸಲಹುವಂತೆ ತರುಣ ತರಣಿಯಂ ಪೂರ್ವದಿಶಾಂಗನೆ ಬೆಳೆಯಿಸುವಂತೆ ಸಾಗಿಸುತ್ತಿರಲೆಂಟನೆಯ ವರುಷದೋಳ್ ಮಗನಂ ನೋಡಿ ಮಿಗೆ ಸಂತಸಂಬಟ್ಟು "ಶೈವೋಪದೇಶವಂ" ತಾನೆ ಕರುಣಿಸಿ ಕೃಪೆಯಿಂ ನಿರೀಕ್ಷಿಸಿ..............."

ಈ ಮೇಲಣ ಉದ್ಧರಿತ ವಾಕ್ಯಗಳಲ್ಲಿ ವೀರಶೈವ-ಲಿಂಗಧಾರಣ-ವೀರಶೈವ ದೀಕ್ಷೆ ಮುಂತಾದ ಯಾವ ವಾಕ್ಯವೂ ಇಲ್ಲದೆ ಕೇವಲ

"ಶೈವೋಪದೇಶ" ಎಂದಿಷ್ಟು ಮಾತ್ರ ಇರುವಾಗ ಅದನ್ನು "ವೀರಶೈವದೀಕ್ಷೆ" ಎಂದು ಕರೆಯಲು ಹೇಗೆ ಸಾಧ್ಯ? ರುದ್ರಮುನಿಗಳ ಲಾಲನೆ ಪಾಲನೆಯನ್ನು ಮಾಡುತ್ತಿದ್ದ ರೇವಣಸಿದ್ಧರ ಪತ್ನಿಯರೇ ಆದ ರಾಜಪುತ್ರಿಯರಿಗಾರಿಗೂ ಇಲ್ಲದ ಲಿಂಗಧಾರಣ ಅಥವ ವೀರಶೈವ ದೀಕ್ಷೆಯನ್ನು ರುದ್ರಮುನಿಗಳಿಗೆ ಮಾತ್ರ ಮಾಡಿದರೆಂಬುದನ್ನೂ ಆ ರಾಜಪುತ್ರಿಯರು ಮಾತ್ರ ಶೈವರಾಗಿಯೇ ಇದ್ದರೆಂಬುದನ್ನೂ ನಂಬಲು ಸಾಧ್ಯವೆ? ಎಂಟನೆಯ ವರ್ಷದ ಶೈವೋಪದೇಶವೂ ಈಗಲೂ ಶೈವರಲ್ಲಿ ರೂಢಿಯಲ್ಲಿಲ್ಲವೆ? ಶೈವೋಪದೇಶವೆಂಬ ವಾಕ್ಯವನ್ನು "ವೀರಶೈವ ದೀಕ್ಷೆ" ಎಂಬರ್ಥದಲ್ಲಿ ಅಂಗೀಕರಿಸಲು ಶೈವ-ವೀರಶೈವಗಳಿಗಿರುವ ಅಂತರವನ್ನರಿತವರಾರಿಂದಲಾದರೂ ಸಾಧ್ಯವೆ? ಅಥವ ಹರಿಹರ ಮಹಾಕವಿಗೆ ಶೈವೋಪದೇಶ-ವೀರಶೈವ ದೀಕ್ಷೆಗಳಿಗಿರುವ ವ್ಯತ್ಯಾಸವಾಗಲಿ ಲಿಂಗಧಾರಣ ಎಂಬ ವಾಕ್ಯವಾಗಲಿ ತಿಳಿದಿರಲಾರದೆಂಬ ಶಂಕೆಯನ್ನಾದರೂ ಯಾರಾದರೂ ಊಹಿಸಲು ಸಾಧ್ಯವೆ?

ಹೀಗೆ ರೇವಣಸಿದ್ಧರು ತಮ್ಮ ಪುತ್ರನಿಗೆ ಸ್ವತಃ ಮಾಡಿದ ಶೈವೋಪದೇಶವನ್ನು ಎರಡನೆಯ ಬಾರಿ ಮಾಡಿದ 'ವೀರಶೈವದೀಕ್ಷೆ' ಎಂದು ವಾದಿಸಲಾರಂಭಿಸಿರುವ ಅಕುಲಯ್ಯಗಳನ್ನುः- ಪೂರ್ವ ಪಶ್ಚಿಮಗಳಿಗೆ ವ್ಯತ್ಯಾಸವೇನು? ಎರಡು ದಿಕ್ಕುಗಳಿಗೂ "ಪ" ಅಕ್ಷರವೇ ಮೂಲ. ಆದುದರಿಂದ ಸೂರ್ಯನು ಯಾವ ದಿಕ್ಕಿನಲ್ಲಿ ಹುಟ್ಟುತ್ತಾನೆಂದರೇನು? ಪಶ್ಚಿಮದಲ್ಲೇ ಸೂರ್ಯೋದಯವಾಗುವುದೆಂದು ಯಾಕೆ ಹೇಳಬಾರದು? ಎಂದು ಕೇಳುವ 'ಬುದ್ಧಿವಂತ'ರಿಗೆ ಹೋಲಿಸಬಹುದಲ್ಲವೆ?

ಅಕುಲಯ್ಯಗಳ ಐದು ಪ್ರಶ್ನೆಗಳುः—

ಇವರ ೧ನೆಯ ಪ್ರಶ್ನೆ ಇದುः— ವೀರಶೈವ ದೀಕ್ಷೆಯು ವೀರಶೈವವಟುಗಳಿಗೆ ಗರ್ಭದಲ್ಲಿರುವಾಗಲೊ? ಜನನವಾದಾಗಲೊ? ಗರ್ಭದಲ್ಲಿರುವಾಗ ಎಂದು ಹೇಳಿದರೆ ಪುನಃ ಜನನಕಾಲಕ್ಕೆ ಲಿಂಗಧಾರಣವನ್ನು ಕೆಲವು ವಚನಗಳು ಪ್ರತಿಪಾದಿಸುತ್ತವೆ. ಇದರಿಂದ ಲಿಂಗಧಾರಣ ವಿಚಾರದಲ್ಲಿಯೆ ವಚನಗಳಲ್ಲಿ ಐಕ್ಯ ಕಂಠವಿಲ್ಲೆಂದು ವ್ಯಕ್ತವಾಗುವುದಿಲ್ಲವೆ?

ಉತ್ತರಃ— ವೀರಶೈವ ದೀಕ್ಷೆಯು ವೀರಶೈವ ವಟುಗಳಿಗೆ ಗರ್ಭದಲ್ಲಿರುವಾಗಲೇ ಪ್ರಾರಂಭವಾಗಿ ನಡೆಯುತ್ತದೆ. ಜನನಾನಂತರ ಸ್ವತಃ ಶಿಶುವಿಗೇ ಮಾಡುವ ಲಿಂಗಧಾರಣವನ್ನು ಕೆಲವು ವಚನಗಳು ಪ್ರತಿಪಾದಿಸುತ್ತವೆ. ಕೆಲವು ಅದನ್ನೇ ಪ್ರತ್ಯೇಕವಾಗಿ ಪ್ರತಿಪಾದಿಸದಿದ್ದರೂ ಖಂಡನೆಯನ್ನಂತೂ ಎಲ್ಲಿಯೂ ಮಾಡಿಲ್ಲ! ಈ ಸಂಬಂಧವಾಗಿ ವಚನಗಳಲ್ಲಿಯ ಐಕ್ಯಕಂಠ ಅನೈಕ್ಯಕಂಠದ ಪ್ರಶ್ನೆಯೇ ಬರುವುದಿಲ್ಲ!

೭ನೇ ಪ್ರಶ್ನೆ— ಶಿವದೀಕ್ಷಾಸ್ಥಲ-ಲಿಂಗಧಾರಣಸ್ಥಲ ಇವು ಬೇರೆ ಬೇರೆಯೆ? ಒಂದೆ? ಒಂದೇ ಎಂದು ಹೇಳಿದರೆ ಈ ಹೇಳಿಕೆಗೆ ಸಬಲವಾದ ಪ್ರಮಾಣವಾವುದು?

ಉತ್ತರಃ— ಶಿವದೀಕ್ಷಾಸ್ಥಳ ಎಂಬುದೊಂದು ಹೊಸ ಸ್ಥಳವನ್ನೇ ಆಕುಲಯ್ಯಗಳು ಎಲ್ಲಿ ಕಂಡು ಹಿಡಿದರೆಂಬುದೇ ನಮಗೊಂದು ಕೌತುಕವಾಗಿದೆ! ಶಿವದೀಕ್ಷಾಸ್ಥಲ-ಲಿಂಗಧಾರಣಸ್ಥಲ ಇವು ಬೇರೆ ಬೇರೆಯಲ್ಲ. ಈ ಎರಡು ಶಬ್ದಗಳೂ "ಲಿಂಗಧಾರಣ" ಎಂಬ ಒಂದೇ ಅರ್ಥದಲ್ಲಿ ಪ್ರಯೋಗವಾಗುತ್ತಿವೆ. ನೂರೊಂದು ಸ್ಥಲಗಳಲ್ಲಿ "ಲಿಂಗಧಾರಣಸ್ಥಲ"ವೆಂಬುದೊಂದೇ ಇದ್ದು ಶಿವದೀಕ್ಷಾಸ್ಥಲ ಎಂಬ ವಾಕ್ಯವೇ ಇಲ್ಲದಿರುವ ಒಂದೇ ಒಂದು ಪ್ರಬಲ ಪ್ರಮಾಣವಿದಕ್ಕೆ ಸಾಕು.

೮ನೇ ಪ್ರಶ್ನೆ— ಗರ್ಭಾಷ್ಟಮೇ ಕೃತಾದೀಕ್ಷಾ.......... ಎಂಬೀ ಶ್ಲೋಕಕ್ಕೆ ದಯವಿಟ್ಟು ಬಿಡಿಬಿಡಿಯಾಗಿ ಅಂದರೆ ಒಂದೊಂದು ಶಬ್ದಕ್ಕೆ ಟೀಕೆಯನ್ನು ಸಂಪೂರ್ತಿ ಬರೆದು ಪ್ರಕಟಿಸುವಿರಾ?

ಉತ್ತರಃ— 'ಗರ್ಭಾಷ್ಟಮೇ' ಎಂದರೆ ಗರ್ಭದ ಎಂಟನೆಯ ತಿಂಗಳು ಎಂದೇ ಎಲ್ಲರಿಗೂ ಅರ್ಥವು ಹೊಳೆಯುತ್ತದೆಯೆಂತಲೂ ಅದರಂತೆಯೇ ಗರ್ಭಾಷ್ಟಮದೀಕ್ಷೆಯೂ ಈಗ ರೂಢಿಯಲ್ಲಿರುವುದೆಂತಲೂ, ಪಿಂಡವು ಬಸುರಿನಲ್ಲಿದ್ದಾಗ ನಡೆಯಬೇಕಾದ ಸಂಸ್ಕಾರವಾಗಿರುವುದರಿಂದಲೇ ಅಲ್ಲಿ 'ಗರ್ಭ'ವೆಂಬ ವಾಕ್ಯವು ಪ್ರಯೋಗವಾಗಿರುವುದೆಂದೂ, ಅದು ಎಂಟನೆಯ ವರ್ಷದ ಸಂಸ್ಕಾರವಾಗಿದ್ದರೆ ಅಲ್ಲಿ 'ಗರ್ಭ' ವೆಂಬ ವಾಕ್ಯವಿರದೆ ಅದಕ್ಕೆ ಬದಲಾಗಿ ಎಂಟು ವರ್ಷ ಎಂಬರ್ಥದ ಸಂಸ್ಕೃತ ವಾಕ್ಯವು ಸ್ಪಷ್ಟವಾಗಿರುತ್ತಿದ್ದಿತೆಂತಲೂ ಈ ಹಿಂದಿನ ಲೇಖನಗಳಲ್ಲಿ ವಿಶದವಾಗಿ-ಸ್ಪಷ್ಟವಾಗಿ-ನಿರೂಪಿಸಲಾಗಿದೆ. ಇದಕ್ಕೆ ವಿರುದ್ಧವಾಗಿ, 'ಗರ್ಭಾಷ್ಟಮೇ

ಎಂದರೆ ಎಂಟನೆಯ ವರ್ಷವೇ ಆಗುತ್ತದೆ ಎಂಬ ವೀರಶೈವಾಚಾರಕ್ಕೆ ಸಲ್ಲದ ಅಪಾರ್ಥವನ್ನು ಹೊಸದಾಗಿ ಮಾಡಿ ಪ್ರಕಟಿಸುವದಿದೆ ಇದ್ದರೆ ಅಕುಲಯ್ಯಗಳು ಹಾಗೆ ಮಾಡಲಿ. ಆಗ ಮೂಲ ಶ್ಲೋಕದೊಡನೆ ಇವರ ಅನರ್ಥದ ಅಪಾರ್ಥವನ್ನು ವಾಚಕರು ಪರಿಶೀಲಿಸಿದರೆ ಅಕುಲಯ್ಯಗಳ ಹುರುಳು ಬಯಲಿಗೆ ಬಿದ್ದೇಬೀಳುತ್ತದೆ. ತಮಗೆ ನಿಜಾರ್ಥವು ತಿಳಿಯದಿದ್ದರೂ ತಿಳಿದವರಂತೆ ನಟಿಸುತ್ತಾ ಒಂದೊಂದು ಶಬ್ದಕ್ಕೆ ಟೀಕೆಯನ್ನು ಬರೆಯಿರಿ, ಒಂದೊಂದು ಶಬ್ದಕ್ಕೆ ಟೀಕೆಯನ್ನು ಬರೆಯಿರಿ ಎಂದು ಕೇಳುತ್ತಿರುವುದರಲ್ಲಿಯೇ ಈ ಅಕುಲಯ್ಯಗಳ ಅರ್ಥಜ್ಞಾನವಿಹೀನತೆಯು ಸ್ಪಷ್ಟವಾಗಿ ಕಾಣುತ್ತದೆ.

೪ನೇ ಪ್ರಶ್ನೆ:—...ಇದಕ್ಕೊಂದು ಪ್ರಾಚೀನ ದೀಕ್ಷಾವಿಧಾನವನ್ನು ತೋರುವಿರಾ? ಇಲ್ಲವೆಂದರೆ ನೀವಾದರೂ ಒಂದು ಗರ್ಭದೀಕ್ಷಾವಿಧಾನವನ್ನು ಸವಿಸ್ತಾರವಾಗಿ ಸಾಕಲ್ಯವಾಗಿ ಸಮಂಜಸವಾಗಿ ಬರೆದು ಬೇಗ ಪ್ರಕಟಿಸುವ ಉಪಕಾರ ಮಾಡುವಿರಾ?

ಉತ್ತರ:— ಯಾವುದಾದರೊಂದು ಪ್ರಾಚೀನ ದೀಕ್ಷಾವಿಧಾನವನ್ನು ಎತ್ತಿ ತೋರಿಸುವ ಅವಶ್ಯಕತೆಯೇ ಇಲ್ಲ. ಇಂದು ಸಮಸ್ತ ವೀರಶೈವರ ಮನೆಗಳಲ್ಲಿಯೂ ಶಿಶುಗಳಿಗೆ ನೆರವೇರುತ್ತಿರುವ ಪುರಾತನ "ಲಿಂಗಧಾರಣ" ವಿಧಾನವೇ ಇದಕ್ಕೊಂದು ಪ್ರತ್ಯಕ್ಷ ಪ್ರಮಾಣ. ಹೀಗೆ ಪುರಾತನರ ಸಾಂಪ್ರದಾಯಿಕವಾದ ಪ್ರತ್ಯಕ್ಷ ಪ್ರಮಾಣವೇ ಕಣ್ಣಮುಂದೆ ಆಚರಣೆಯಲ್ಲಿರುವಾಗ ನಾವೊಂದು ಗರ್ಭದೀಕ್ಷಾವಿಧಾನವನ್ನು ಹೊಸದಾಗಿ ಬರೆದು ಬೇಗ ಪ್ರಕಟಿಸುವ ಅವಶ್ಯಕತೆಯೇ ಇಲ್ಲ. ಅಂಧಾನುಕರಣದ ಅನಾಚಾರಿಗಳ ಉಪಟಳವು ಇನ್ನೂ ಹೆಚ್ಚಿ ಪುರಾತನರ ಸತ್ಸಂಪ್ರದಾಯಗಳನ್ನು ವಿರೂಪಗೊಳಿಸುವವರ ಪ್ರಯತ್ನವು ಹೀಗೆಯೇ ಸಾಗುತ್ತಿದ್ದು ನಾವು ಬರೆಯಲೇಬೇಕಾದ ಸಂದರ್ಭವೊದಗಿದರೆ ಆಗ ಅವಶ್ಯಕವಾಗಿ ಬರೆದು ಪ್ರಕಟಿಸಲಾಗುವುದು.

೫ನೇ ಪ್ರಶ್ನೆ:— ಶಿವದೀಕ್ಷೆಯು ಅಂಗಕೊ? ಲಿಂಗಕ್ಕೊ? ಶಿವದೀಕ್ಷೆಯ ಮುನ್ನಿನ ಅಂಗ ಲಿಂಗಗಳೆರಡು ದ್ವೈತವೋ? ಅದ್ವೈತವೋ? ಅದ್ವೈತವೆಂದರೆ ಶಿವದೀಕ್ಷೆಯಾತಕ್ಕೆ?

ಉತ್ತರ:— ಈ ಪ್ರಶ್ನೆಯು ವೀರಶೈವಾಚರಣೆಯ ಪರಿಚಯವಿರುವ ಮನುಷ್ಯನು ಹಾಕುವ ಪ್ರಶ್ನೆಯೇ ಅಲ್ಲ! ಧಾರಣ ದೀಕ್ಷೆಗಳು ಭಿನ್ನ ಸಂಸ್ಕಾರ ಎಂಬ ವಾದಕ್ಕೂ ಈ ಪ್ರಶ್ನೆಗೂ ಸಂಬಂಧವೇ ಇಲ್ಲ. ಈ ಪ್ರಶ್ನೆಯು ವ್ಯವಹಾರ ವಿಹೀನ ಬುದ್ಧಿಯ ಪ್ರದರ್ಶನಕ್ಕೊಂದು ನಿದರ್ಶನವಾಗಿದೆ. ಈ ಪ್ರಶ್ನೆಯು:— ಮದುವೆಯು ಹೆಣ್ಣಿಗೋ ಗಂಡಿಗೋ ಮದುವೆಯ ಮುಂಚಿನ ಹೆಣ್ಣು ಗಂಡುಗಳೆರಡೂ ಪರಸ್ಪರರನ್ನು ಒಪ್ಪಿವೆಯೊ? ಇಲ್ಲವೊ? ಒಪ್ಪಿದ್ದರೆ ಮದುವೆಯಾತಕ್ಕೆ? ಮುಂತಾದ ಮಕ್ಕಳಾಟಿಕೆಯ ಪ್ರಶ್ನೆಗಳನ್ನು ಹೋಲುತ್ತದೆಯಾದುದರಿಂದ ಇದಕ್ಕೆ ಪುನಃ ಉತ್ತರವನ್ನು ಬರೆಯುವ ಅವಶ್ಯಕತೆಯೇ ಇಲ್ಲ.

ಕೊನೆಯದಾಗಿ:—

ವಾದಕ್ಕೆ ಮೂಲವಾದ ವಿಷಯವನ್ನೇ ಮರೆ ಮಾಜಿಸಲು ಪ್ರಯತ್ನಿಸಿ ಇಂತಹ ಅಸಂಬದ್ಧವಾದ ಪ್ರಶ್ನೆಗಳನ್ನು ಬೆಳೆಯಿಸಿಕೊಳ್ಳುವದಕ್ಕಿಂತಲೂ ಆದ್ಯರಾಚರಣೆಯೆಂದು ಸ್ಥಿರಪಟ್ಟಿರುವ, ಹೃದಯವು ಒಪ್ಪಿದ್ದರೂ ಅದೊಂದು ಬಗೆಯ ಹಠಪೂರಿತ ಸ್ವಾಭಿಮಾನದಿಂದ ಅಡ್ಡಗಟ್ಟಲ್ಪಟ್ಟಿರುವ "ಲಿಂಗಧಾರಣ ವೀರಶೈವದೀಕ್ಷೆ" ಎಂಬಿವು ಅಭಿನ್ನವಾದ ಏಕೈಕ ಸಂಸ್ಕಾರವೆಂಬುದನ್ನೂ ವೀರಶೈವರ ಶಿಶುಗಳಿಗೆ ಒಮ್ಮೆ ನೆರವೇರುವ ಲಿಂಗಧಾರಣ ಸಂಸ್ಕಾರವೇ ಸಾಕೆಂಬುದನ್ನೂ ನಮ್ಮ ಪುರಾತನರೆಲ್ಲರ ಆಚರಣೆಯು ಹೀಗೆಯೇ ಇದ್ದಿತೆಂಬುದನ್ನೂ ಇತ್ತೀಚೆಗೆ ಮಠಗಳಲ್ಲಿ ಪ್ರಾಪ್ತವಯಸ್ಕರಾದ ವೀರಶೈವರಿಗೆ ನೆರವೇರುತ್ತಿರುವ ವೀರಶೈವ ದೀಕ್ಷಾ ಸಮಾರಂಭಗಳೆಲ್ಲವೂ ಹಿಂದೆ ಭವಿಗಳನ್ನು ಭಕ್ತರನ್ನಾಗಿಸಲು ನೆರವೇರುತ್ತಿದ್ದ ವೀರಶೈವ ದೀಕ್ಷಾ ಕಾರ್ಯದ ಕುರುಹೆಂಬುದನ್ನೂ, ಇತ್ತೀಚಿನ ಮಠಾಧಿಕಾರಿಗಳಲ್ಲಿ ಬಹು ಜನರು ಭವಿಗಳನ್ನು ಭಕ್ತರನ್ನಾಗಿಸಿ ಮತ ಪ್ರಸಾರ ಮಾಡುವ ಶಕ್ತಿಯನ್ನೂ ಯೋಗ್ಯತೆಯನ್ನೂ ಕಳೆದುಕೊಂಡು ಸ್ವಕರ್ತವ್ಯ ವಿಮುಖರಾಗಿ ತಮ್ಮ ಪುರಾತನರು ನೆರವೇರಿಸುತ್ತಿದ್ದ ಆ ಮಹತ್ಕಾರ್ಯದ ಕುರುಹಾಗಿಯಾದರೂ ಆಗಾಗ್ಗೆ ನೆರವೇರುತ್ತಿರಲೆಂದು ಈ ವೀರಶೈವರಿಗೇ ಪುನಃ ವೀರಶೈವ ದೀಕ್ಷೆಯನ್ನು ಮಾಡುವ! ಕೆರೆಯ ಮುಂದೆ ಅರವಂಟಿಗೆಯನ್ನಿಡುವ ಡಂಭಾಚಾರಕ್ಕೆ ಬಿದ್ದುದರಿಂದ ಈ ಪದ್ಧತಿಯು ಆಚರಣೆಗೆ ಬರುತ್ತಿದೆಯೆಂಬುದನ್ನೂ ಈ ನಿಜಸ್ಥಿತಿಯನ್ನೆಷ್ಟು ಶೀಘ್ರವಾಗಿ ತಿಳಿದುಕೊಂಡರೆ ಅಷ್ಟು ಬೇಗ ಸಮಾಜದಲ್ಲಿ ಸಮ

ತೆಯು ನೆಲೆಗೊಳ್ಳುವುದೆಂಬುದನ್ನೂ ಒಪ್ಪಿಕೊಂಡು ದುರಭಿಮಾನವಲ್ಲದ ಸ್ವಾಭಿಮಾನವನ್ನುಳಿಸಿಕೊಳ್ಳುವುದು ವಿಚಾರಶೀಲರ ಲಕ್ಷಣ.

ಶ್ರೀ ಅಕುಲಯ್ಯಗಳು ಇನ್ನಾದರೂ ತಮ್ಮ ಹೃದಯಕ್ಕೆ ಒಪ್ಪಿಗೆಯಾಗಿದ್ದರೂ ಹೊರಕ್ಕೆ ಒಪ್ಪಿಗೆ ಇಲ್ಲವೆಂದು ತೋರ್ಪಡಿಸಿಕೊಳ್ಳುವ ನಡೆವಳಿಕೆಯನ್ನು ಪರಿತ್ಯಜಿಸುವರೆಂದು ನಂಬೋಣವೆ?

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ, ಬಿ. ಎ. ಎಲ್‌ಎಲ್. ಬಿ. ವಿಜಾಪುರ.)

[ಲೇಖಾಂಕಃ ೧೨.]

## ಬಸವೇಶ್ವರನಿಗೆ ಪದ್ಮಾವತಿ ಎಂಬ ಸಹೋದರಿಯು ಇದ್ದಳೇ ಹೇಗೆ?

ನಾವು ಬಸವೇಶ್ವರನ ಚರಿತ್ರೆಯನ್ನು ಮುಂದುವರಿಸುವ ಪೂರ್ವದಲ್ಲಿ ಅವನ ಕುಟುಂಬದಲ್ಲಿ ಯಾರು ಯಾರು ಇದ್ದರೆಂಬುದನ್ನು ನಿರ್ಧರಿಸುವದು ಅವಶ್ಯವಿದೆ. ಅರ್ಜುನವಾಡ ಶಿಲಾಶಾಸನದಲ್ಲಿ ಬಸವೇಶ್ವರನಿಗೆ ದೇವರಾಜ ಎಂಬ ಹೆಸರಿನ ಅಣ್ಣನಿದ್ದದ್ದು ಉಲ್ಲೇಖವಾಗಿದೆ. ಈ ಶಾಸನವು ಅತ್ಯಂತ ಮಹತ್ವನ್ನಿದ್ದು ಅದರಲ್ಲಿಯ ವಿಷಯಗಳ ಸತ್ಯತೆಯ ಬಗ್ಗೆ ಈಗ ಯಾವ ಸಂದೇಹವೂ ಉಳಿದಿರುವದಿಲ್ಲ. ಆದ್ದರಿಂದ ಬಸವೇಶ್ವರನಿಗೆ ದೇವರಾಜನೆಂಬ ಹೆಸರಿನ ಅಣ್ಣನಿದ್ದದ್ದನ್ನು ನಾವು ಒಪ್ಪಬೇಕಾಗಿದೆ. ಬಸವೇಶ್ವರನ ಅಕ್ಕನು ನಾಗಲಾಂಬಿಕೆಯು ಮತ್ತು ಆಕೆಯ ಮಗನು ಅತಿ ಪ್ರಸಿದ್ಧನಾದ ಚನ್ನಬಸವೇಶ್ವರನು, ಇವರ ಅಸ್ತಿತ್ವದ ವಿಷಯವಾಗಿಯೂ ಯಾರೂ ಸಂದೇಹಪಡಲಾರರು. ಆದರೆ ...ನರು ಬಸವೇಶ್ವರನಿಗೆ ಪದ್ಮಾವತಿ ಎಂಬ ತಂಗಿಯು ಇದ್ದಳೆಂದು ...ಳಿ, ಬಿಜ್ಜಳನು ಆಕೆಯ ಸೌಂದರ್ಯಕ್ಕೆ ಮೋಹಿತನಾದ್ದರಿಂದ ಬಸವೇಶ್ವರನು ಆಕೆಯನ್ನು ಬಿಜ್ಜಳನ ವಶಕ್ಕೆ ಕೊಟ್ಟನೆಂತಲೂ ಬಿಜ್ಜಳನು ಆಕೆಯೊಂದಿಗೆ ಇದ್ದು ರಾಜ್ಯಕಾರಭಾರವನ್ನು ದುರ್ಲಕ್ಷಿಸಿದನೆಂತಲೂ ಬಸವೇಶ್ವರನು ಈ ಸಂಧಿಯನ್ನು ಸಾಧಿಸಿ, ಬಿಜ್ಜಳನ ಬೊಕ್ಕಸವನ್ನೆಲ್ಲ ತನ್ನ ಕೈವಶಮಾಡಿಕೊಂಡು ದುರ್ನಡತೆಯಿಂದ ನಡೆಯುತ್ತಿದ್ದ ಜಂಗಮರಲ್ಲಿ ಬೊಕ್ಕಸದ ಹಣವನ್ನು ಸೂರೆಮಾಡಹತ್ತಿದನೆಂತಲೂ ತಮ್ಮ ಗ್ರಂಥಗಳಲ್ಲಿ ಕಾಣಿಸಿದ್ದಾರೆ. ಈ ವಿವರಣೆಗಳನ್ನು ಕೆಲವು ಇಂಗ್ಲಿಷ

ಇತಿಹಾಸಕಾರರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಹೀಗೆ ಉಲ್ಲೇಖಿಸಿದ್ದನ್ನೇ ಧಾರವಾಡ, ಬೆಳಗಾವ, ವಿಜಾಪುರ ಜಿಲ್ಲೆಗಳ ಸರಕಾರೀ ಗ್ಯಾಜಿಟಿಯರುಗಳ ಸಂಗ್ರಾಹಕರು ತಮ್ಮ ಈ ಗ್ರಂಥಗಳಲ್ಲಿ ಎತ್ತಿಕೊಂಡಿದ್ದಾರೆ. ಅಂದಿನಿಂದ ಹಿಂದುಸ್ತಾನದಲ್ಲಿ ಆಗಿಹೋದ ಧರ್ಮಸಂಸ್ಥಾಪಕರ ಯಾವ ಚರಿತ್ರ ಗ್ರಂಥವನ್ನು ತೆಗೆದುಕೊಂಡರೂ ಅದರಲ್ಲಿ ಬಸವೇಶ್ವರನ ಬಗ್ಗೆ ಮೇಲಿನ ವರ್ಣನೆಗಳಿಲ್ಲದೆ ಇದ್ದದ್ದು ಯಾವುದೂ ದೊರೆಯುವದಿಲ್ಲ. ಮುಂದೆ ಈ ವರ್ಣನೆಗಳು ಬಾಲಕರು ಓದುವ ಪಠ್ಯಪುಸ್ತಕಗಳಲ್ಲಿ ಸಹ ಸೇರ್ಪಡೆಯಾದವು. ಈಗಲೂ ಕೂಡ ಇಂಥ ಉಲ್ಲೇಖಗಳನ್ನು ಅವುಗಳಲ್ಲಿ ಕಾಣಬಹುದು. ಇದರಿಂದ ದೇಶದಲ್ಲೆಲ್ಲ ಕಲುಷಿತ ಅಭಿಪ್ರಾಯಗಳು ಬಸವೇಶ್ವರನ ವಿಷಯವಾಗಿ ಉಂಟಾಗಿರುತ್ತವೆ. ಅವನು ಜಾರಚೋರರನ್ನು ಪೋಷಿಸುತ್ತ, ಹೊಲೆಯ, ನಾಪಿತ, ಢೋರ, ಮಡಿವಳ,ಇಂಥ ಕೀಳು ಜನರ ಸಮುದಾಯವನ್ನು ನೆರಿಸಿಕೊಂಡು ಬೊಕ್ಕಸದ ಹಣವನ್ನು ಅವರಲ್ಲಿ ಸೂರೆ ಮಾಡಿ, ಕಡೆಗೆ ಬಿಜ್ಜಳನ ವಧೆಯನ್ನು ಮಾಡಿದ ಸ್ವಾಮಿದ್ರೋಹಿ ಎಂತಲೂ ಅವನ ಮೇಲೆ ಆರೋಪವನ್ನು ಹೊರಿಸಿದ್ದುಂಟು. ಇದರಿಂದ ವೀರಶೈವ ಧರ್ಮಕ್ಕೂ ಕಲಂಕ ಉಂಟಾಗಲು ಕಾರಣವಾಯಿತು. ಮಧ್ಯದಲ್ಲಿ ಕೆಲವು ವೀರಶೈವ ಪುರಾಣಗಳು ಪ್ರಸಿದ್ಧವಾದವು. ಅವು ವಾಙ್ಮಯ ಸೃಷ್ಟಿಯಿಂದ ಮಹತ್ವದವೆಂದೆನಿಸಿಕೊಂಡರೂ ಜನರಲ್ಲಿ ಉಂಟಾದ ಮೇಲೆ ಕಾಣಿಸಿದ ತಿಳುವಳಿಕೆಗಳನ್ನು ದೂರ ಮಾಡಲು ಶಕ್ಯವಾಗಲಿಲ್ಲ. ಅವುಗಳಲ್ಲಿ ಇತಿಹಾಸದ ಅಂಶಗಳು ಅತ್ಯಲ್ಪವಾಗಿರುವದರಿಂದಲೂ ಅದ್ಭುತ ಕೃತ್ಯಗಳಿಗೆ ಅವು ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದರಿಂದಲೂ ಅವುಗಳಿಂದ ಉಪಯೋಗವಾಗದೆ ಇದ್ದದು ಅರಿದಾದುದಲ್ಲ. ಆದರೆ ಈ ಸ್ಥಿತಿಯು ಈಚೆಗೆ ದೂರಾಗಹತ್ತಿರುವದು ಸಮಾಧಾನಕರವಾಗಿರುತ್ತದೆ.

ವಚನಶಾಸ್ತ್ರವು ಬೆಳಕಿಗೆ ಬಂದಂದಿನಿಂದ ವೀರಶೈವ ಮತದಲ್ಲಿ ದುರ್ನಡತೆ ದುರಾಚಾರಗಳಿಗೆ ಸ್ಥಾನವಿಲ್ಲೆಂಬುದು ಎಲ್ಲರ ಲಕ್ಷ್ಯಕ್ಕೆ ಬರಹತ್ತಿದೆ. ಶಿವಾನುಭವ ಗ್ರಂಥಮಾಲೆಯಲ್ಲಿ ಜೇಡ, ಮಡಿವಳ, ಅಂಬಿಗ, ಮಾದರ, ನಾಪಿತ, ಒಡ್ಡ ಈ ಸಮಾಜಗಳಿಗೆ ಹೊಂದಿದ ಶಿವಶರಣರ ವಚನಗಳು ಪ್ರಕಟವಾಗಿವೆ. ಅವುಗಳಿಂದ ಈ ಶಿವಶರಣರು ದುರಾಚಾರಿಗಳಿರದೆ, ಎಂಥ ಉದಾತ್ತ ವಿಚಾರವುಳ್ಳವರಿದ್ದರೆಂ

ದು ಸ್ಪಷ್ಟವಾಗುತ್ತದೆ. ಬಸವೇಶ್ವರನ ವಿಚಾರಗಳು ಅತ್ಯಂತ ಕೆಳ ನವರಲ್ಲಿ ಸಹ ಸೇರ್ಪಡೆಯಾಗಿ ಅವರನ್ನು ಹೇಗೆ ಉಚ್ಚ ಸ್ಥಾನಕ್ಕೆ ಯ್ದಿರುತ್ತವೆಂಬುದು ಅವನ ಮತ್ತು ಇತರರ ವಚನಗಳೇ ಸಾಕ್ಷಿ ಾಗಿವೆ. ಆದರೆ ಬಸವೇಶ್ವರನ ಚರಿತ್ರೆಯು ಇನ್ನೂ ಪೂರ್ಣ ಸಂಶೋಧಿತ ಗಿರುವದಿಲ್ಲ. ಅದ್ದರಿಂದ ಅವನು ಯಾವ ರೀತಿಯಿಂದ ಸಮಾಜ ಜಾಗ್ರತೆ ನ್ನು ಮಾಡಿದನು, ಅವನು ಉಚ್ಚ ಸ್ಥಾನವನ್ನು ಹೊಂದಲು ಯಾವ ಾಯಗಳನ್ನು ಕೈಕೊಳ್ಳಬೇಕಾಯಿತು; ಇವೇ ಮೊದಲಾದ ವಿಷ ಗಳ ಪರಿಚಯವು ಇನ್ನೂ ಜನರಲ್ಲಿರುವದಿಲ್ಲ. ಇದರಿಂದ ಅವನು ಸುಸ್ವರೂಪಿಯಾದ ಸಹೋದರಿಯನ್ನು ಬಿಜ್ಜಳನಿಗೆ ಕೊಟ್ಟು ಅವ ತನ್ನ ಅಂಕಿತದಲ್ಲಿ ತಂದುಕೊಂಡು ರಾಜ್ಯದಲ್ಲಿ ಸ್ವೇಚ್ಛೆಯಿಂದ ಸಿದನೆಂಬ ವೃತ್ತಾಂತಗಳು ಇನ್ನೂ ಪ್ರಚಲಿತವಿರುತ್ತವೆ. ಆದರೆ ಲ್ಲವುಗಳು ತೀರ ಸುಳ್ಳು. ಬಸವೇಶ್ವರನ ವಿರೋಧಿಗಳಿಂದ ಬುದ್ಧಿ ಪುರ ಾಗಿ ಇವುಗಳು ಹುಟ್ಟಿಸಲ್ಪಟ್ಟವಿರುತ್ತವೆ. ಅವನಿಗೆ ಪದ್ಮಾವತಿ ಹೆಸರಿನ ತಂಗಿಯೇ ಇರಲಿಲ್ಲ. **ಈ ಸಂಗತಿಗಳನ್ನು ವಾಚಕರ ಳಿಕೆಗೆ ತರಲು ನಾವು ಇಲ್ಲಿ ಪ್ರಯತ್ನಿಸುತ್ತೇವೆ.**

ಹರಿಹರನು ***ತನ್ನ ಬಸವರಾಜದೇವ ರಗಳೆಯಲ್ಲಿ ಬಸವನು ಇನ್ನೂ ಯಕೂಸು ಇದ್ದಾಗಲೇ ಅವನ ತಾಯಿ ತಂದೆಗಳು ತೀರಿದರೆಂ*** ಆ ಮೇಲೆ ಅವನನ್ನು ಅವನ ಮುತ್ತಜ್ಜಿ ಜೋಕೆ ಮಾಡಿದಳೆಂ ಹೇಳಿದಿದ್ದಾನೆ. ಈ ಸಂಗತಿಯು ನಿಜವಿರಬಹುದೆಂದು ನಾವು ಹಿಂದಿನ ಒಂದು ಲೇಖದಲ್ಲಿ ಕಾಣಿಸಿದ್ದೇವೆ. (ಶಿವಾನುಭವ ೧೬ ಸಂಚಿಕೆ ೭ ಪುಟ ೩೨೨) ಈ ಮುತ್ತಜ್ಜಿಯ ಗ್ರಾಮವು ಗ್ರಾಮವಿರಬಹುದೆಂತಲೂ, ಅಲ್ಲಿಯೇ ಬಸವನು ತನ್ನ ಬಾಲ್ಯ ಕಳೆದಿರಬೇಕೆಂತಲೂ ಅದ್ದರಿಂದ ಸಂಗಮನಾಥನ ಮೇಲೆ ಅವನ ದೃಢವಾಗಿರಬೇಕೆಂತಲೂ ಅದರಲ್ಲಿ ವಿವರಿಸಿದ್ದೇವೆ. ಹೀಗೆ ಬಸ ರ ಮೊಲೆ ಕೂಸು ಇದ್ದಾಗಲೇ ಅವನ ತಂದೆ ತಾಯಿಗಳು ಗತಿಸಿ ಅವನಿಗೆ ಇನ್ನೊಬ್ಬ ತಂಗಿ ಹುಟ್ಟುವ ಸಂಭವವೇ ಇರುವದಿಲ್ಲ. ದ ಪದ್ಮಾವತಿಯು ಒಬ್ಬ ಕಾಲ್ಪನಿಕ ಸ್ತ್ರೀಯಳಾಗಿರಬೇಕು. ಸವನಕಿಂತಲೂ ೧೦-೧೨ ತಿಂಗಳು ಮೊದಲು ಅವಳು ಜನಿ ದು ಭಾವಿಸಿದರೂ ಭಾವಿಸಬಹುದಾಗಿದೆ. ಅವಳು ಅಸ್ತಿತ್ವದಲ್ಲಿದ್ದರೆ ವ ಗ್ರಂಥಕಾರರು ಅವಳ ಹೆಸರನ್ನು ಮುಚ್ಚಿಡುವ ಕಾರಣವಿಲ್ಲ.

ಅವರು, ನಾಗಲಾಂಬಿಕೆಯು ಹೆಸರನ್ನು ಗುಪ್ತವಿಟ್ಟಿಲ್ಲೆಂದ ಬಳಿಕ ಅವರು ಆಕೆಯು ತಂಗಿಯು ಹೆಸರನ್ನೇಕೆ ಗುಪ್ತವಿಡಬೇಕು ? ಬಸವೇಶ್ವರನಿಗೆ ಹೀಗೊಬ್ಬ ತಂಗಿ ಇದ್ದಳೆಂದು ಯಾವ ವೀರಶೈವ ಗ್ರಂಥದಲ್ಲಿಯೂ ಹೇಳಲ್ಪಟ್ಟಿಲ್ಲ. ಆದ್ದರಿಂದ ಈ ಸಂಗತಿಯುಸುಳ್ಳೆಂದು ನಮಗೆ ತೋರುತ್ತದೆ.

ಒಂದು ವೇಳೆ ಆಕೆಯು ಅಸ್ತಿತ್ವದಲ್ಲಿದ್ದಳೆಂದು ನಾವು ಗ್ರಹಿಸಿದಲ್ಲಿ ಈ ವಿಧಾನಕ್ಕೆ ಅನೇಕ ಸಂಗತಿಗಳು ಮೇಳಗೂಡುವದಿಲ್ಲ. ಬಸವೇಶ್ವರನು ಯಜ್ಞೋಪವೀತವನ್ನು ತ್ಯಜಿಸಿದಾಗ ಅವನಿಗೆ ೮ ವರ್ಷಗಳಾಗಿದ್ದವೆಂದು ಭಾವಿಸಿದಲ್ಲಿ ಈ ಪದ್ಮಾವತಿಗೆ ಆಗ ೭ ವರ್ಷ ವಯಸ್ಸಾಗಿರಬೇಕು. ಇಂಥ ಅಪ್ರಬುದ್ಧ ಚಿಕ್ಕ ಹುಡಿಗೆಯು ಗ್ರಾಮದಲ್ಲಿಯ ಬ್ರಾಹ್ಮಣರು ಜಾತಿಬಾಹಿರಳಾದಳೆಂದು ಭಾವಿಸಿ ಆಕೆಯನ್ನು ಬಸವನೊಡನೆ ಹೊರಗೆ ಅಟ್ಟುವ ಸಂಭವವಿಲ್ಲ. ಒಂದು ವೇಳೆ ಬಸವನಿಗೆ ೧೬ ವರ್ಷಗಳಾದ ಮೇಲೆ ಅವನು ಗ್ರಾಮವನ್ನು ಬಿಟ್ಟು ಹೋದನೆಂದು ಭಾವಿಸಿದರೆ ಆಗ ಈ ಪದ್ಮಾವತಿಗೆ ೧೫ ವರ್ಷಗಳಾಗಿರಬೇಕು. ಇಷ್ಟು ವಯಸ್ಸಳಾಗುವಷ್ಟರಲ್ಲಿ ಬ್ರಾಹ್ಮಣ ಧರ್ಮದ ಪ್ರಕಾರ ಆಕೆಗೆ ಲಗ್ನವಾಗದೆ ಉಳಿಯುತ್ತಿದ್ದಿಲ್ಲ. ಅಲ್ಲದೆ ಈ ತಂಗಿಯನ್ನು ಒಂದು ವೇಳೆ ಬಸವೇಶ್ವರನು ತನ್ನೊಂದಿಗೆ ಸಂಗಮಕ್ಕೆ ಕರಕೊಂಡು ಹೋಗಿದ್ದರೆ ಹೇಗೆ ನಾಗಲಂಬಿಕೆಯು ಹೆಸರು ವೀರಶೈವ ಗ್ರಂಥಗಳಲ್ಲಿ ಉಪಲಬ್ಧವಾಗುತ್ತಿದೆಯೋ ಹಾಗೆಯೋ ಈ ಪದ್ಮಾವತಿಯ ಹೆಸರೂ ಅವಳೊಡನೆ ಉಪಲಬ್ಧವಾಗುತ್ತಿತ್ತು. ಆದರೆ ಅವಳ ಉಲ್ಲೇಖವು ಎಲ್ಲಿಯೂ ಬರುವದಿಲ್ಲ.

ಬಸವನು ತನ್ನ ಆರಂಭದ ವಯಸ್ಸಿನಲ್ಲಿ ಮಂಗಳವಾಡದಲ್ಲಿಯಾಗಲಿ ಕಲ್ಯಾಣದಲ್ಲಿಯಾಗಲಿ ಬಹಳ ಕಾಲಕಳೆಯದೆ, ಅವನು ಮುಖ್ಯವಾಗಿ ಸಂಗಮದಲ್ಲಿ ಅಥವಾ ಬಾಗೇವಾಡಿಯಲ್ಲಿ ಕಳೆದನೆಂಬುದು ವೀರಶೈವ ಮತ್ತು ಜೈನಗ್ರಂಥಕಾರರಿಗೆ ಗೊತ್ತಿರುವದಿಲ್ಲ. ಆದ್ದರಿಂದ ಚನ್ನಬಸವನು ಕಕ್ಕಯ್ಯನ ಪ್ರಸಾದದಿಂದ ಹುಟ್ಟಿದನು ಮತ್ತು ಬಸವನು ಮೊದಲು ಕಲ್ಯಾಣಕ್ಕೆ ಹೋದಕಾಲದಲ್ಲಿಯೇ ಬಿಜ್ಜಳನು ಪದ್ಮಾವತಿಯಲ್ಲಿ ಮೋಹಿತನಾದನು ಎಂಬ ವಿಧಾನಗಳು ಮಾಡಲ್ಪಟ್ಟಿರುತ್ತವೆ. ಆದರೆ ಬಸವನು ಬಿಜ್ಜಳನಲ್ಲಿಗೆ ಬಂದದ್ದು ತನ್ನ ೨೪ನೇ ವರ್ಷದ ವಯಸ್ಸಿನಲ್ಲಿ. ಮುಂದೆ ೧೨ ವರ್ಷ ಅವನು ಮಂಗಳವಾಡ ಅಥವ ಕಲ್ಯಾಣದಲ್ಲಿ ಕಾಲಕಳೆದನು. ಆದ್ದರಿಂದ ಅವನು ಬಿಜ್ಜಳನನ್ನು ಕಾಣುವ ಪೂರ್ವದಲ್ಲಿಯೇ ಅವನ ಅಕ್ಕ ಮತ್ತು ಅವನಿಗೆ ತಂಗಿ ಇದ್ದರೆ,

ಅವಳು ಈ ಅವಧಿಯಲ್ಲಿ ವಿವಾಹಿತರಾಗದೆ ಉಳಿಯುತ್ತಿದ್ದಿಲ್ಲ. ಹೀಗೆ ವಿವಾಹಿತಳಾದ ಪದ್ಮಾವತಿಯನ್ನು ಜೈನರು ಹೇಳುವಂತೆ ಬಿಜ್ಜಳನಂಥ ಸಾರ್ವಭೌಮನು ಲಗ್ನವಾಗುವದು ಅಸಂಭವವೇ ಸರಿ.

ಬಿಜ್ಜಳನಿಗೆ ಏಚಲದೇವಿ ಎಂಬೊಬ್ಬ ಹೆಂಡತಿ ಇದ್ದದ್ದು ಶಿಲಾಶಾಸನಗಳಿಂದ ತಿಳಿಯುತ್ತದೆ. ಆದರೆ ಪದ್ಮಾವತಿ ಎಂಬವಳಿದ್ದದ್ದು ಎಲ್ಲಿಯೂ ದೊರೆಯುವದಿಲ್ಲ.

ಬಿಜ್ಜಳಾಂಕ ಚರಿತೆಯಲ್ಲಿ ಪದ್ಮಾವತಿಯನ್ನು ಬಿಜ್ಜಳನು ಲಗ್ನವಾಗಿದ್ದನೆಂದು ಹೇಳಲ್ಪಟ್ಟಿದೆ. ಚಂದ್ರಸಾಗರ ವರ್ಣಿ ಎಂಬ ಹೆಸರಿನ ಬೇರೊಬ್ಬ ಜೈನಗ್ರಂಥಕಾರನು ತನ್ನ ಗ್ರಂಥದಲ್ಲಿ ಹಾಗೆಯೇ ಹೇಳಿದ್ದಾನೆ. ಬಸವೇಶ್ವರನ ಕಾಲದಲ್ಲಿ ಈ ಪ್ರಕಾರ ಜೈನ, ಲಿಂಗಾಯತ, ಬ್ರಾಹ್ಮಣ ಸಮಾಜಗಳಲ್ಲಿ ಪರಸ್ಪರ ಲಗ್ನ ವ್ಯವಹಾರಗಳು ನಡೆಯುತ್ತಿದ್ದವೆಂಬದು ಕಂಡುಬರುತ್ತದೆ. ಇಂಥ ಉಲ್ಲೇಖಗಳು ವೀರಶೈವ ಪುರಾಣಗಳಲ್ಲಿಯೂ ಕೂಡ ಇರುತ್ತವೆ. ಆದಯ್ಯನು ಪ್ರಸಿದ್ಧ ವೀರಶೈವ ವಚನಕಾರನು. ಅವನು ಪುಲಿಗೆರೆಯಲ್ಲಿ ಒಬ್ಬ ಜೈನಳನ್ನು ಮದುವೆಯಾದದ್ದನ್ನು ರಾಘವಾಂಕ ಕವಿಯು ತನ್ನ ಸೋಮನಾಥ ಪುರಾಣದಲ್ಲಿ ವರ್ಣಿಸಿದ್ದಾನೆ. ಹರಿಹರ ಕವಿಯು ತನ್ನ ರೇವಣಸಿದ್ಧೇಶ್ವರನ ರಗಳೆಯಲ್ಲಿ ರೇವಣಸಿದ್ಧೇಶ್ವರನು ಬಿಜ್ಜಳನ ಮಗಳನ್ನು ಲಗ್ನವಾದನೆಂದು ಉಲ್ಲೇಖಿಸಿದ್ದಾನೆ. ಅಂದ ಬಳಿಕ ಬಸವೇಶ್ವರ ಮತ್ತು ಬಿಜ್ಜಳ ಇವರ ಮಧ್ಯದಲ್ಲಿ ಆಪ್ತ ಸಂಬಂಧವು ಉಂಟಾಗಿದ್ದರೆ ಅದನ್ನು ವೀರಶೈವರು ಒಪ್ಪಿಕೊಳ್ಳಲಿಕ್ಕೆ ಯಾವ ಪ್ರತ್ಯವಾಯವಿರುವದಿಲ್ಲ. ಆದರೆ ಈ ತರದ ಆಪ್ತಸಂಬಂಧವು ಅವರ ನಡುವೆ ಇದ್ದದ್ದನ್ನು ಹರಿಹರನು ಮಾತ್ರವಲ್ಲ, ಇತರ ಯಾವ ವೀರಶೈವ ಗ್ರಂಥಕಾರನೂ ಹೇಳಿರುವದಿಲ್ಲ. ಆದ್ದರಿಂದ ಇದು ಜೈನ ಗ್ರಂಥಕಾರರು ಹುಟ್ಟಿಸಿದ ಕಟ್ಟುಕಥೆಯೆಂದು ನಮಗೆ ತೋರುತ್ತದೆ.

## ನಾಗಲಾಂಬಿಕೆಯ ಬಗ್ಗೆ ಕಟ್ಟು ಕಥೆಗಳು.

ಈ ಪ್ರಕಾರ ಪದ್ಮಾವತಿ ಎಂಬ ಕಾಲ್ಪನಿಕ ಸ್ತ್ರೀಯನ್ನು ಜೈನರು ಮುಂದು ಮಾಡಿ ಬಸವೇಶ್ವರನ ಹೆಸರಿಗೆ ಕಲಂಕವನ್ನು ತರಲು ಹೇಗೆ ಯತ್ನ ಮಾಡಿರುವರೋ ಅದೇ ಮೇರೆಗೆ ಅವನ ಅಕ್ಕನಾದ ನಾಗಲಾಂಬಿಕೆಗೂ ಕೂಡ ಕಲಂಕ ಹಚ್ಚಲು ಅವರಿಂದ ಪ್ರಯತ್ನಗಳಾಗಿವೆ. ನಾಗಲಾಂಬಿಕೆಯ ಅಸ್ತಿತ್ವವನ್ನು ಚಂದ್ರಸಾಗರ ವರ್ಣಿಯು ತನ್ನ ಗ್ರಂಥದಲ್ಲಿ

ಹೇಳಿರುವದಿಲ್ಲ. ಆದ್ದರಿಂದ ಅವನು ವರ್ಣಿಸುವ ಪದ್ಮಾವತಿಯು, ಈ ನಾಗಲಾಂಬಿಕೆಯೇ ಎಂದು ಕೆಲವರ ತಿಳುವಳಿಕೆಯಾಗಿದೆ. ಆದರೆ ಚಂದ್ರ ಸಾಗರ ವರ್ಣಿಯು ಈ ಪದ್ಮಾವತಿಯು ಬಿಜ್ಜಳನನ್ನು ಲಗ್ನವಾದ ಬಳಿಕ ಅವಳು ಜೈನ ಧರ್ಮವನ್ನು ಪಾಲಿಸುತ್ತ ಬಂದಳೆಂದೂ ಅವಳಿಗೆ ಶಿವಬಿಜ್ಜಣ ನೆಂಬ ಮಗನು ಹುಟ್ಟಿದನೆಂದೂ ಹೇಳಿದ್ದಾನೆ. ಆದ್ದರಿಂದ ಅವನು ಹೇಳುವ ಪದ್ಮಾವತಿಯು ನಾಗಲಾಂಬಿಕೆಗೆ ಎಷ್ಟು ಮಾತ್ರವೂ ಅನ್ವಯಿಸುವದಿಲ್ಲ. ಆದರೆ ಬಿಜ್ಜಳಾಂಕ ಚರಿತೆಯಲ್ಲಿ ನಾಗಲಾಂಬಿಕೆಗೆ ಲಗ್ನವಾಗದೆ ಇದ್ದು ಢೋರರ ಕಕ್ಕಯ್ಯನೊಡನೆ ಅವಳು ಜಾರತನ ಮಾಡಿ ಚನ್ನಬಸವನನ್ನು ಹಡೆದಳೆಂದು ಹೇಳಲ್ಪಟ್ಟಿದೆ. ಆದರೆ ಇದು ನಿಜಸ್ಥಿತಿಯಲ್ಲ. ನಾಗಲಾಂಬಿ ಕೆಯು ಬಸವನೊಡನೆ ಸಂಗಮಕ್ಕೆ ಹೋಗುವ ಪೂರ್ವದಲ್ಲಿಯೇ ಆಕೆಗೆ ಲಗ್ನವಾಗಿತ್ತೆಂದೂ ಆಗ ಚನ್ನಬಸವನು ಅವಳಿಗೆ ಜನಿಸಿ ನಾಲ್ಕು ವರ್ಷ ಗಳಾಗಿದ್ದವೆಂದೂ ನಾವು ನಮ್ಮ ಹಿಂದಿನ ಲೇಖದಲ್ಲಿ ಸವಿಸ್ತಾರವಾಗಿ ಚರ್ಚಿ ಸಿದ್ದೇವೆ. (ಶಿವಾನುಭವ ಸಂಪುಟ ೧೬ ಸಂಚಿಕೆ ೩ ಪುಟ ೧೩೫ ನೋಡಿರಿ.)

ಬಸವೇಶ್ವರನ ವಚನಗಳಿಂದ ಅವನು ಎಂಥ ಶುದ್ಧ ವರ್ತನೆಯುಳ್ಳ ವನಾಗಿದ್ದನೆಂಬುದು ಯಾರಿಗಾದರೂ ತಿಳಿಯುವಂತೆ ಇದೆ. ಆದರೆ ಅವನ ವಿಷಯವಾಗಿ ವಿಪರೀತ ವಿಚಾರಗಳು ತಲೆದೋರಿವೆ! ಅವನು ಸ್ತ್ರೀ ಯರಲ್ಲಿ ಜಾರತನವನ್ನು ಯಾವಾಗಲೂ ನಿಷೇಧಿಸಿದ್ದಾನೆ. ಅವನ ಇಂಥ ವಚನಗಳು ಅನೇಕವಿರುತ್ತವೆ. ಮನುಷ್ಯನು ಪರಮಾತ್ಮನೊಡನೆ ವ್ಯವಹರಿ ಸುವಲ್ಲಿ ಹೇಗೆ ಸತಿಪತಿಗಳಾಗಿ ಜನರು ವ್ಯವಹರಿಸುತ್ತಾರೋ ಹಾಗೆ ವ್ಯವ ಹರಿಸಬೇಕೆಂದು ಬೋಧಿಸಿದ್ದಾನೆ. ವೀರಶೈವನು ತನ್ನ ಇಷ್ಟ ಲಿಂಗವನ್ನು ಬಿಟ್ಟು ಅನ್ಯ ದೈವವನ್ನು ಎಂದೂ ಭಜಿಸಬಾರದು, ಭಜಿಸಿದರೆ ಅದು ಜಾರತನವೆಂದು ಅವನು ಪದೇ ಪದೇ ಹೇಳುತ್ತಾನೆ. ಇಂಥವನು ತನ್ನ ಸಹೋದರಿಯರು ಜಾರತನದಿಂದಿರಲು ಒಪ್ಪಿಗೆ ಕೊಟ್ಟಿದ್ದು ಹ್ಯಾಗೆ ಸಂಭ ವನೀಯವೆಂಬುದನ್ನು ವಾಚಕರು ವಿಚಾರ ಮಾಡತಕ್ಕದ್ದು. ಇಂಥ ಸುಳ್ಳುಕಥೆಗಳನ್ನು ಬಸವನ ವಿರೋಧಿಗಳು ಬುದ್ಧಿ ಪುರಸ್ಸರವಾಗಿ ಹುಟ್ಟಿಸಿದ್ದಾರೆಂದು ನಮಗೆ ತೋರುತ್ತದೆ.

ಬಸವನು ಹುಟ್ಟಿದ್ದು ಒಂದು ಸಾಮಾನ್ಯ ಮನೆತನದಲ್ಲಿ. ಇಂಥವನು ಒಬ್ಬ ಮಹತ್ವದ ರಾಜನ ಆಸ್ಥಾನದಲ್ಲಿ ಮಂತ್ರಿಪದಾರೂಢನಾದದ್ದೂ, ಮುಂದೆ ಅವನಿಗೆ ಜನತೆಯ ಬೆಂಬಲ ದೊರೆತದ್ದೂ, ಅವನು ಧರ್ಮಪ್ರಸಾರ

ಕಾರ್ಯ ಮಾಡಿದ್ದೂ ಅವನ ಧರ್ಮವು ಇಷ್ಟು ವಿಸ್ತಾರವಾದ ಪ್ರದೇಶದಲ್ಲಿ ಪ್ರಸಾರವಾದದ್ದೂ ಇವುಗಳ ನಿಜವಾದಕಾರಣಗಳೇನೂ ಗೊತ್ತಾಗದ್ದರಿಂದ ಅವನಿಂದ ಈಚೆಗೆ ಹುಟ್ಟಿದ ವೀರಶೈವ ವಿರೋಧಿಗಳಾದ ಗ್ರಂಥಕಾರರು ಬಸವೇಶ್ವರನು ಬಿಜ್ಜಳನಲ್ಲಿ ಸ್ತ್ರೀ ವ್ಯಾಮೋಹ ಹುಟ್ಟಿಸಿ ಅವನನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡನೆಂತಲೂ ಚಾರಚೋರರಲ್ಲಿ ಅವನು ಬೊಕ್ಕಸದ ಹಣವನ್ನೆಲ್ಲ ಸೂರೆ ಮಾಡಿ ಲಕ್ಷಾವಧಿ ದುಷ್ಟ ಜನರನ್ನು ಕಲ್ಯಾಣದಲ್ಲಿ ಸಂಗ್ರಹಿಸಿದನೆಂತಲೂ ಏನೂ ಕಟ್ಟುಗಳಿಲ್ಲದ ಒಂದು ಧರ್ಮವನ್ನು ರಚಿಸಿ ಅದನ್ನು ದೇಶದಲ್ಲಿ ಹರಿವಿದನೆಂತಲೂ ಅನೇಕ ಬಗೆಯ ಸುಳ್ಳು ಕಥೆಗಳನ್ನು ಕಾಲಕಾಲಕ್ಕೆ ಹುಟ್ಟಿಸಿದ್ದಾರೆ. ಆದರೆ ವೀರಶೈವ ಧರ್ಮ ತತ್ವಗಳು ಎಷ್ಟು ಉದಾತ್ತವಾಗಿರುತ್ತವೆಂಬುದು ವಚನ ಶಾಸ್ತ್ರದಿಂದ ಎಲ್ಲರ ತಿಳುವಳಿಕೆಗೆ ಈಗ ಬಂದಿರುತ್ತದೆ. ಅದರಲ್ಲಿಯು ನೈತಿಕ ತತ್ವಗಳು ಮತ್ತು ಅದು ಅವಲಂಬಿಸಿರುವ ಷಟ್‌ಸ್ಥಲ ಮಾರ್ಗವು ಅತ್ಯಂತ ಶುದ್ಧವಾದವುಗಳೆಂಬುದು ಸ್ಪಷ್ಟವಿರುತ್ತದೆ. ಆದ್ದರಿಂದ ಬಸವೇಶ್ವರನ ನೈತಿಕ ವೃತ್ತಿಗೆ ಕುಂದು ತರುವಂಥ ಇಂಥ ಯಾವ ಸಂಗತಿಗಳನ್ನೂ ನಾವು ನಂಬ ಕೂಡದು.

ಬಸವೇಶ್ವರನ ಕಾಲದಲ್ಲಿ ಉಡುತಡಿಯ ಮಹಾದೇವಿಯಕ್ಕ, ಬಸವೇಶ್ವರನ ಅಕ್ಕನಾದ ನಾಗಲಾಂಬಿಕೆ, ಅವನ ಹೆಂಡತಿಯಾದ ನೀಲಾಂಬಿಕೆ, ಹಡಪದಪ್ಪಣ್ಣನ ಹೆಂಡತಿಯಾದ ಲಿಂಗಮ್ಮ, ಮೋಳಿಗೆಮಾರಯ್ಯನ ಹೆಂಡತಿಯಾದ ಮಹಾದೇವಿ ಇವರೆಲ್ಲರೂ ಉಚ್ಚತರ ಸ್ಥಾನವನ್ನು ಹೊಂದಿದವರಾಗಿದ್ದರೆ. ಇವರು ರಚಿಸಿದ ವಚನಗಳು ಉಪಲಬ್ಧವಿವೆ. ಅವರ ಸುಂದರ ಪದ್ಯಗಳಿವೆ. ಅವರೆಲ್ಲರೂ ಉದಾತ್ತ ಚರಿತೆಯುಳ್ಳವರು. ಅವರು ಆದರ್ಶ ಮಹಿಳೆಯರು. ಇಂಥವರ ವಿಷಯವಾಗಿ ಅತ್ಯಂತ ಬೀಭತ್ಸ ಕಥೆಗಳು ಹುಟ್ಟುವದು ವೀರಶೈವ ಸಮಾಜದ ದುರ್ಭಾಗ್ಯವಾಗಿದೆ.

## ಸಂಗಮ ಕ್ಷೇತ್ರದಲ್ಲಿ ವೀರಶೈವರ ಪ್ರಾಬಲ್ಯ.

ಇನ್ನು ಮುಂದೆ ಬಸವೇಶ್ವರನು ವಾಸಿಸಿದ್ದ ಸಂಗಮ ಸ್ಥಾನದ ವಿಷಯವಾಗಿ ವಿಚಾರಿಸುವೆವು.

ಬಸವೇಶ್ವರನು ಬಾಗೇವಾಡಿಯಿಂದ ಹೊರಗೆ ಹಾಕಲ್ಪಟ್ಟ ಬಳಿಕ ಅವನು ಕೃಷ್ಣಾ ಮಲಾಪಹಾರೀ ನದಿಗಳು ಕೂಡಿದ ಸಂಗಮಕ್ಷೇತ್ರಕ್ಕೆ ತೆರಳಿದನೆಂದು ಸಾಮಾನ್ಯವಾಗಿ ತಿಳಿಯಲ್ಪಟ್ಟಿರುತ್ತದೆ. ಈ ಸಂಗತಿಯು ನಿಜವಿ

ರುತ್ತದೆಂದು ತೋರುತ್ತದೆ. ಈ ಕ್ಷೇತ್ರವು ಅವನು ಬಾಲ್ಯದಲ್ಲಿ ಇದ್ದ ಸ್ಥಾನವು. ಬಸವೇಶ್ವರನು ಇನ್ನೂ ಮೊಲೆಯ ಕೂಸು ಇದ್ದಾಗಲೇ ಅವನ ತಾಯಿ ತಂದೆಗಳು ತೀರಿಕೊಂಡು ಹೋದರೆಂದು ಹರಿಹರ ಕವಿಯು ತನ್ನ ಬಸವರಾಜ ರಗಳೆಯಲ್ಲಿ ಹೇಳಿದ್ದಾನೆ. ಇದು ಸಂಭವನೀಯವಿದೆ. ಈ ವಿಷಯವಾಗಿ ನಾವು ಶಿವಾನುಭವ ಸಂಪುಟ ೧೬, ಪುಟ ೩೨೨ ಇದರಲ್ಲಿ ನಾವು ವಿಸ್ತೃತವಾಗಿ ಬರೆದ ಲೇಖವನ್ನು ವಾಚಕರು ಅವಲೋಕಿಸಬೇಕು. ಅವನ ತಾಯಿಯಾದ ಮಾದಲಾಂಬಿಕೆಯು ತೀರಿದ ಬಳಿಕ ಆಕೆಯ ತಾಯಿಯು ಅವನನ್ನು ತನ್ನ ಗ್ರಾಮಕ್ಕೆ ತೆಗೆದುಹೋಗಿ ನಾಲ್ಕೈದು ವರ್ಷ ಜೋಕೆಮಾಡಿದ್ದಾಳೆ. ಹೀಗೆ ಬಸವೇಶ್ವರನು ಚಿಕ್ಕಂದಿನಲ್ಲಿ ಸಂಗಮಗ್ರಾಮದಲ್ಲಿ ಇದ್ದದರಿಂದ, ಅಲ್ಲಿಯ ಪ್ರಸಿದ್ಧ ದೇವಾಲಯವಾದ ಸಂಗಮನಾಥನಲ್ಲಿ ಅವನ ಭಕ್ತಿಯು ಸ್ವಾಭಾವಿಕವಾಗಿ ದೃಢಪಟ್ಟಿರಬೇಕು. ಆದ್ದರಿಂದ ಅವನ ಅಜ್ಜಿಯ ಗ್ರಾಮವು ಸಂಗಮವಿರಬೇಕೆಂದು ಅದರಲ್ಲಿ ನಾವು ಊಹಿಸಿದ್ದೇವೆ. ಸಂಗಮದಲ್ಲಿ ಬಸವೇಶ್ವರನು ೩—೪ ವರ್ಷ ಕಳೆದು ಮುಂದೆ ಬಾಗೇವಾಡಿಗೆ ಹೋಗಿದ್ದಾನೆ. ಅದು ಬ್ರಾಹ್ಮಣರ ಒಂದು ಅಗ್ರಹಾರ ಸ್ಥಾನವು. ಅಲ್ಲಿ ಬಸವೇಶ್ವರನು ೧೬ ವರ್ಷ ವಯಸ್ಸಿನವನಾಗುವ ವರೆಗೆ ಕಾಲಕಳೆದನು. ಆಗ ಅವನ ಧಾರ್ಮಿಕ ವಿಚಾರಗಳು ಬದಲಾವಣೆ ಹೊಂದಿದವು. ಅವು ಅವನನ್ನು ಬ್ರಾಹ್ಮಣ ಧರ್ಮದಿಂದ ವೀರಶೈವ ಧರ್ಮಕ್ಕೆ ಎಳೆದವು. ಆದ್ದರಿಂದ ಅವನು ತನ್ನ ೧೬ನೇ ವರ್ಷದ ವಯಸ್ಸಿನಲ್ಲಿ ಬ್ರಾಹ್ಮಣ ಚಿನ್ಹವಾದ ಯಜ್ಞೋಪವೀತವನ್ನು ತ್ಯಜಿಸಿ ತನ್ನ ಗ್ರಾಮವನ್ನು ಬಿಟ್ಟುಕೊಟ್ಟು ಸಂಗಮ ಕ್ಷೇತ್ರಕ್ಕೆ ಹೋದನು. ಅವನು ಅಲ್ಲಿಗೆ ಹೋದಬಳಿಕ ಬಾಗೇವಾಡಿಯಲ್ಲಿ ಹೇಗೆ ಬ್ರಾಹ್ಮಣರಿಂದ ಅವನಿಗೆ ಉಪಟಳಗಳು ಸಂಭವಿಸಿದವೋ ಹಾಗೆ ಅಲ್ಲಿ ಅವನಿಗೆ ಸಂಭವಿಸಿದಂತೆ ಕಂಡುಬರುವದಿಲ್ಲ. ಆದ್ದರಿಂದ ಅವನ ಅಜ್ಜಿ ಅಂದರೆ ಮಾದಲಾಂಬಿಕೆಯ ತವರ್ಮನೆಯವರು ಮತ್ತು ಆ ಗ್ರಾಮದ ಮುಖ್ಯರು ವೀರಶೈವ ಧರ್ಮಕ್ಕೆ ಹೆಚ್ಚಾಗಿ ಒಲವುಳ್ಳವರಾಗಲಿ ಇಲ್ಲವೆ ವೀರಶೈವರಾಗಲಿ ಇರಬೇಕೆಂದು ನಮಗೆ ತೋರುತ್ತದೆ. ಇದು ಕೆಳಗಿನ ಸಂಗತಿಯಿಂದಲೂ ಬಲಪಡುತ್ತದೆ. ಮಾದಲಾಂಬಿಕೆಗೆ ಸಿದ್ಧಣ್ಣಮಂತ್ರಿ ಮತ್ತು ಬಲದೇವ ಮಂತ್ರಿ ಎಂಬ ಇಬ್ಬರು ಸಹೋದರರಿದ್ದರೆಂದು ಎಲ್ಲ ವೀರಶೈವ ಪುರಾಣಗಳಲ್ಲಿ ಉಲ್ಲೇಖಗಳಿವೆ. ಇವರು ಬಿಜ್ಜಳನ ಆಡಳಿತೆಯಲ್ಲಿ ಮಂತ್ರಿಗಳಾಗಲಿ ಇಲ್ಲವೆ ಸೇನಾಪತಿಗಳಾಗಲಿ ಇದ್ದರು. ಇವರ ಉಲ್ಲೇ

ಖಗಳು ಶಿಲಾಶಾಸನಗಳಲ್ಲಿ ಸಹ ಬಂದಿದ್ದು ಅವುಗಳನ್ನು ನಾವು ಮುಂದೆ ವಿವರಿಸುವೆವು. ಈ ಉಭಯತರು ವೀರಶೈವ ಧರ್ಮಕ್ಕೆ ಒಲಿದವರಾದ್ದರಿಂದಲೇ ಬಸವೇಶ್ವರನು ಮೊದಲು ಬಿಜ್ಜಳನಲ್ಲಿಗೆ ಹೋದಾಗ್ಗೆ, ಇವರು ಅವನನ್ನು ಆದರಿಸಿ ಅವನಿಗೆ ಸಹಾಯಮಾಡಿದ್ದಾರೆ. ಸಿದ್ಧಣ್ಣ ಮಂತ್ರಿಯು ತನ್ನ ಮಗಳಾದ ನೀಲಾಂಬಿಕೆಯನ್ನೂ ಬಲದೇವ ಮಂತ್ರಿಯು ತನ್ನ ಮಗಳಾದ ಗಂಗಾಂಬಿಕೆಯನ್ನೂ ಬಸವೇಶ್ವರನಿಗೆ ಕೊಟ್ಟು ಮದುವೆ ಮಾಡಿದ್ದಾರೆ. ಈ ಉಭಯತರು ಬಹು ಪ್ರಬಲರು. ಇವರ ಮೂಲ ಗ್ರಾಮವು ಸಂಗಮವು. ಇವರ ಪ್ರಾಬಲ್ಯದ ಮೂಲಕ ಸಂಗಮದಲ್ಲಿ ಬಸವೇಶ್ವರನಿಗೆ ಬ್ರಾಹ್ಮಣರಿಂದ ತೊಂದರೆಗಳು ಸಂಭವಿಸಿರಲಿಕ್ಕಿಲ್ಲ. ಇಷ್ಟೇ ಅಲ್ಲ, ಈ ಸ್ಥಾನವು ಈ ಕಾಲಕ್ಕೆ ವೀರಶೈವರ ಮುಖ್ಯ ಕೇಂದ್ರವಾಗಿ ಪರಿಣಮಿಸಿತ್ತೆಂದು ನಮಗೆ ತೋರುತ್ತದೆ. ಆಗ ಈ ಮಹತ್ವದ ಕ್ಷೇತ್ರದಲ್ಲಿ ಬಹುಜನ ವೀರಶೈವರು ವಾಸಿಸುತ್ತಿರಬಹುದು. ಆದ್ದರಿಂದಲೇ ಬಸವೇಶ್ವರನು ಬ್ರಾಹ್ಮಣ ಸಮಾಜದಿಂದ ಬಹಿಷ್ಕೃತನಾದ ಬಳಿಕ ಇಲ್ಲಿಗೆ ತೆರಳಿದ್ದಾನೆ.

ಬಸವೇಶ್ವರನಕಿಂತಲೂ ಮೊದಲು ಈ ಭಾಗದಲ್ಲಿ ವೀರಶೈವ ಧರ್ಮದ ಚಳವಳಿಯು ನಡೆದಿತ್ತು. ಆಗ ಇದನ್ನು ನಡಿಸಿದವರು ಮುದನೂರಿನ ದೇವರದಾಸಿಮಯ್ಯ, ನವಿಲೆಯ ಶಂಕರದಾಸಿಮಯ್ಯ, ಬಾಹೂರಿನ ಬೊಮ್ಮಯ್ಯ, ಇಳಿಹಾಳದ ಬೊಮ್ಮಯ್ಯ, ಕೆಂಭಾವಿಯ ಭೋಗಣ್ಣ ಇವರು ಇದ್ದರು. ಇವರೆಲ್ಲರೂ ಬಸವೇಶ್ವರನಕಿಂತಲೂ ಮೊದಲಿನವರು. ಅವರಿದ್ದ ಊರು ಯಾವತ್ತು ಗ್ರಾಮಗಳು ಸಂಗಮ ಗ್ರಾಮದಿಂದ ೩೦—೪೦ ಮೈಲು ಅಂತರದ ಮೇಲೆ ಇರುತ್ತವೆ. ರೇವಣಸಿದ್ಧನು ಬಾಗೇವಾಡಿಗೆ ಸಮೀಪವಾಗಿರುವ ಇಂಗಳೇಶ್ವರದಲ್ಲಿದ್ದನು. ಈ ಬಗ್ಗೆ ಶಿವಾನುಭವದ ಹೊಸ ಜುಲೈ ತಿಂಗಳಿನ ಸಂಚಿಕೆಯಲ್ಲಿಯ ಲೇಖವನ್ನು ವಾಚಕರು ನೋಡಬೇಕೆಂದು ನಮ್ಮ ಸೂಚನೆ ಇದೆ. ಈ ಗ್ರಾಮಗಳಿಗೆಲ್ಲ ಸಂಗಮ ಕ್ಷೇತ್ರವು ಮಧ್ಯಸ್ಥಾನವಾಗಿದೆ. ಅಲ್ಲದೆ ಅದು ಮಹತ್ವಿಕರಿದ್ದ ಪುರಾತನ ಸ್ಥಳವಾದ್ದರಿಂದ ಅದು ಸುತ್ತಲಿನ ವೀರಶೈವರು ಒಂದೆಡೆಗೆ ಕೂಡಲು ಅನುಕೂಲವಾಗಿರುತ್ತದೆ. ಆದ್ದರಿಂದ ಬಸವೇಶ್ವರನು ಬಾಗೇವಾಡಿಯಿಂದ ಹೊರಗೆ ಹಾಕಲ್ಪಟ್ಟ ಬಳಿಕ ಅವನು ಈ ಕ್ಷೇತ್ರದಲ್ಲಿದ್ದುಕೊಂಡು ತನ್ನ ಮುಂದಿನ ಪ್ರಚಾರಕಾರ್ಯವನು ನಡಿಸಿದಂತೆ ತೋರುತ್ತದೆ.

ಪಟ್ಟಿ ನ, ಮ, ಶಿ, ವಾ, ಯ ಈ ಪ್ರಣವುಗಳಿಗೆ ಅನುಕ್ರಮವಾಗಿ ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಯಾಕೆಂದರೆ ಮಂತ್ರದಲ್ಲಿಯೇ ಲಿಂಗವಿದೆ. ಅದ್ದರಿಂದ ಭಕ್ತನ ಚಿತ್ತ, ಬುದ್ಧಿ, ಹಮ್ಮು, ಮನ, ಅರಿವು ಇವುಗಳಲ್ಲಿ ಅನುಕ್ರಮವಾಗಿ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಹಾಗೆಯೇ ಪ್ರಾಣ, ಅಪಾನ, ವ್ಯಾನ ಉದಾನ, ಸಮಾನ ವಾಯುಗಳಲ್ಲಿ, ಘ್ರಾಣ, ಜಿಹ್ವೆ ನೇತ್ರ, ಚರ್ಮ, ಶ್ರೋತ್ರ ಈ ಜ್ಞಾನೇಂದ್ರಿಯಗಳಲ್ಲಿ, ಗಂಧ, ರಸ, ರೂಪ, ಸ್ಪರ್ಶ, ಶಬ್ದಗಳೆಂಬ ವಿಷಯಗಳಲ್ಲಿ, ಪಾಯು, ಗುಹ್ಯ, ಪಾದ, ಪಾಣಿ, ವಾಕ್ಕು ಎಂಬ ಕರ್ಮೇಂದ್ರಿಯಗಳಲ್ಲಿ ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳು ಸಂಬಂಧಿಸುತ್ತವೆ. ಹೀಗೆ ಸಂಬಂಧಿಸುವದರಿಂದ ಭಕ್ತನ ಅಂಗವು ಲಿಂಗಮಯವಾಗುತ್ತದೆ. ಇದು ಭಕ್ತನಲ್ಲಿ ಮಂತ್ರ ಸಂಬಂಧವಾದ ಪರಿಣಾಮವು.

(೨೩೮) ಮಿಶ್ರ ಅಂಗಲಿಂಗ ಸಂಗ:— ಹಿಂದೆ ನಂ॥ ೨೩೩ ರಲ್ಲಿ ನಿರ್ದೇಶಿಸಿದ ಪ್ರಕಾರ ಕರ್ಮೇಂದ್ರಿಯಗಳು ಪಂಚವಿಷಯಗಳು ಜ್ಞಾನೇಂದ್ರಿಯಗಳು, ವಾಯುಗಳು, ಕರಣೇಂದ್ರಿಯಗಳು ಇವುಗಳಿಗೆ ಸಾಮೂಹಿಕ ರೀತಿಯಿಂದ ಅನುಕ್ರಮವಾಗಿ ನ, ಮ, ಶಿ, ವಾ, ಯ ಈ ಪಂಚ ಪ್ರಣವುಗಳು ಸಂಬಂಧಿಸುವವಷ್ಟೇ. ಹಾಗೆಯೇ ಅವು ಸಾಮೂಹಿಕ ರೀತಿಯಿಂದ ಅನುಕ್ರಮವಾಗಿ ಲಿಂಗಕ್ಕೆ ಸಂಬಂಧಿಸುತ್ತವೆ. ಆಗ ಆ ಲಿಂಗವು ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗಗಳೆಂದು ಹೇಳಲ್ಪಡುತ್ತವೆ. ಹೀಗೆ ಅವು ಮಿಶ್ರಲಿಂಗಕ್ಕೆ ಸಂಬಂಧಿಸಿದಲ್ಲಿ ಮಿಶ್ರ ಅಂಗಲಿಂಗ ಸಂಗವೆಂದು ಹೇಳಲ್ಪಡುತ್ತದೆ.

(೨೩೯) ಭಕ್ತನಲ್ಲಿ ಗುರುಲಿಂಗ ಜಂಗಮಗಳು:— ಭಕ್ತನ ತನುವೇ ಗುರು, ಅವನ ಮನವೇ ಲಿಂಗ, ಅವನ ಭಾವವೇ ಜಂಗಮವು. ಭಕ್ತನ ಕರವು ಇಷ್ಟಲಿಂಗವು, ಮನವು ಪ್ರಾಣಲಿಂಗವು, ಭಾವವು ಭಾವಲಿಂಗವು.

(೨೪೦) ಭಕ್ತನಿಗೆ ತತ್ವಮಸಿ ಪದದ ಸಂಬಂಧ:— ಭಕ್ತನ ಕಾಯವು ತತ್ ಪದವು. ಅವನ ಕರ ಪೀಠದ ಇಷ್ಟವು ತ್ವಂ ಪದವು ಈ ಎರಡರ ಸಂಗವು ಅಸಿ ಪದವು.

ಭಕ್ತನ ಕ್ರಿಯೆಯು ತತ್ ಪದವು, ಅವನ ಅಂತರಂಗದ ಜ್ಞಾನವು ತ್ವಂ ಪದವು. ಈ ಎರಡರ ಸಂಗವು ಅಸಿ ಪದವು.

ಭಕ್ತನ ಲಿಂಗವು ತತ್ ಪದವು. ಅವನ ಪ್ರಾಣವು ತ್ವಂ ಪದವು. ಈ ಎರಡರ ಸಂಗವು ಅಸಿ ಪದವು.

ಭಕ್ತನ ಕುರುಹು ತತ್ ಪದವು. ಅವನ ಅರುಹು ತ್ವಂ ಪದವು. ಎರಡರ ಸಂಗವು ಅಸಿ ಪದವು.

(೨೪೧) ಶಬ್ದ ಚತುಷ್ಟಯ ಸಂಬಂಧ:— ಪರೆ, ಪಶ್ಯತಿ, ಮಧ್ಯಮೆ, ವೈಖರಿ ಇವು ಶಬ್ದ ಚತುಷ್ಟಯಗಳು. ಚಿತ್ತಕ್ಕೆ ನಿಲುಕಲು ಅದು ಪರೆ. ಅದು ನೆನಹಿಗೆ ಬರಲು ಪಶ್ಯತಿ, ಜಿಹ್ವೆಗೆ ಬರಲು ಅದು ಮಧ್ಯಮೆ, ವಚನಕ್ಕೆ ಬರಲು ಅದು ವೈಖರಿಯು. ನೆನಹಿಗೆ ಬರಲು ಅದು ಪರೆ, ಮನಸಿನ ನೆನಹಿಗೆ ಬರಲು ಅದು ಪಶ್ಯತಿ, ಕಣ್ಣಿನ ಕೊನೆಗೆ ಬರಲು ಅದು ಮಧ್ಯಮೆ, ತನುವಿಗೆ ಸೋಂಕಲು ಅದು ವೈಖರೀ.

ಲಿಂಗವ ನೆನೆಯಲು ಅದು ಪರೆ. ಲಿಂಗವನ್ನು ಕಣ್ಣಾರೆ ನೋಡಲು ಅದು ಪಶ್ಯತಿ. ಲಿಂಗವನ್ನು ನುತಿಸಲು ಅದು ಮಧ್ಯಮೆ. ಲಿಂಗವನ್ನು ಪೂಜಿಸಲು ಅದು ವೈಖರಿಯು.

(೨೪೨) ಲಿಂಗಾಂಗ ಕೂಟ:— ವಾಮ ಕರಪೀಠದಲ್ಲಿಯ ಲಿಂಗವು ಮತ್ತು ನೇತ್ರದ ನೋಟ ಇವೆರಡು ಕೂಡಿದಲ್ಲಿ ಅದು ಲಿಂಗಾಂಗ ಕೂಟ.

ಹೃದಯ ಪೀಠದ ಚಿಲ್ಲಿಂಗವು ಮತ್ತು ಮನಸ್ಸಿನ ನೆನಹು ಇವೆರಡು ಕೂಡಿದಲ್ಲಿ ಅದು ಲಿಂಗಾಂಗ ಕೂಟ.

ಕರಪೀಠದ ಇಷ್ಟಲಿಂಗ ಮತ್ತು ಸಿರದಲ್ಲಿರುವ ಪರತತ್ವ ಮೂರ್ತಿ ಎನಿಸಿಕೊಳ್ಳುವ ಜಂಗಮ ಇವೆರಡು ಕೂಡಿದಲ್ಲಿ ಅದು ಲಿಂಗಾಂಗ ಕೂಟ.

(೨೪೩) ಮಂತ್ರ ಶಕ್ತಿಯನ್ನು ಬಲಪಡಿಸುವ ಅಕ್ಷರಗಳು:— ಮಂತ್ರವನ್ನು ಬಲಪಡಿಸುವದಕ್ಕೋಸ್ಕರ ಅದರೊಡನೆ ಕೆಲವು ಅಕ್ಷರಗಳನ್ನು ಉಚ್ಚರಿಸುವದುಂಟು. ಅವುಗಳ ಉಚ್ಚರಣೆಯಿಂದ ಆ ಮಂತ್ರ ಜಪಿಸುವವನ ಲಕ್ಷವು ಮಂತ್ರಕ್ಕೆ ಹೆಚ್ಚು ವೇಧಿಸುತ್ತದೆ. ಇದರಿಂದ ಮಂತ್ರದ ಬಲವು ಹೆಚ್ಚುತ್ತದೆಂದು ತಿಳಿಯಲ್ಪಟ್ಟಿದೆ. ಇಂಥ ಅಕ್ಷರಗಳು

ಮಂತ್ರದ ಆರಂಭಕ್ಕಾಗಲಿ ಇಲ್ಲವೆ ಅಂತ್ಯಕ್ಕಾಗಲಿ ಜೋಡಿಸುವದುಂಟು. ವೀರಶೈವ ಧರ್ಮದಲ್ಲಿ ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇವು ಸಾಮಾನ್ಯವಾಗಿ ಮಂತ್ರಗಳೊಡನೆ ಜೋಡಿಸಲ್ಪಡುತ್ತವೆ. ಇವಲ್ಲದೆ ಬೇರೆ ಕೆಲವು ಅಕ್ಷರಗಳಿವೆ. ಅವು ಕ್ಷ, ಕ್ಷಿ, ಕ್ಷುಂ, ಈ, ಊಂ, ಶೀಂ, ಹುಂ, ಭಂ, ಫಟ್, ಹುಂ ಫಟ್, ವೌಷಟ್, ಸ್ವಾಹಾ, ಧಾಮ್ನೆ ನಮಃ, ಚಟ, ಚಟ ಚಟ, ಪ್ರಚಟ, ಚಾಸ್ಫುಖ, ಸ್ಫುರ, ಸ್ಫುರಸ್ಫುರ, ಪ್ರಸ್ಫುರ, ಕ್ಲಂ, ಕ್ಲೀಂ ಈ ಬಗೆಯ ಅಕ್ಷರಗಳಿರುತ್ತವೆ. ಇವು ಸಿದ್ಧಿಗಳನ್ನು ಸಾಧಿಸುವ ಸಿದ್ಧರು, ಶಾಕ್ತರು ಇಂಥ ಪಂಗಡದವರು ಉಪಯೋಗಿಸುತ್ತಿದ್ದಂತೆ ತೋರುತ್ತದೆ. ಇವುಗಳಲ್ಲಿ ಕೆಲವು ಮಾತ್ರ ವೀರಶೈವರ ಬಳಕೆಯಲ್ಲಿ ಬಂದಿರುವವು. ಆದರೆ ಇವುಗಳಲ್ಲಿ ಹ್ರಾಂ ಕಾರಾದಿ ಅಕ್ಷರಗಳು ಮಾತ್ರ ಅವರಲ್ಲಿ ಹೆಚ್ಚು ಬಳಕೆಯಲ್ಲಿವೆ.

(೩೪೪) ಶಿವಾಂಗ ಮಂತ್ರ:— ಓಂ, ಹ್ರಾಂ, ಹ್ರೀಂ ಹ್ರೂಂ ಹ್ರೈಂ ಹ್ರೌಂ ಹ್ರಃ ಇದು ಶಿವಾಂಗ ಮಂತ್ರವೆಂದು ಹೇಳಲ್ಪಡುತ್ತದೆ. ಮಂತ್ರಾಕ್ಷರಗಳೆಂತಲೂ ಇವು ಹೇಳಲ್ಪಡುತ್ತವೆ. ಇವು ಶಿವಾದಿ ಷಟ್ ತತ್ವಗಳೆಂದು ಭಾವಿಸಲ್ಪಟ್ಟಿವೆ. ಈ ತತ್ವಗಳು ಯಾವವೆಂದರೆ— ಶಿವ, ಸದಾಶಿವ, ಅನಾದಿ, ಮಹೇಶ, ಈಶ್ವರ, ಈಶಾನ್ಯ ಇವುಗಳೇ ಇರುತ್ತವೆ. ಇವು ಷಟ್ ಸಾದಾಖ್ಯ ಲಿಂಗಗಳು ಎಂದು ಕರೆಯಲ್ಪಡುತ್ತವೆ. ಅಂದರೆ ಇವು ಪರ ಶಿವನಲ್ಲಿ ಉದ್ಭವಿಸುವ ಸಾದಾಖ್ಯಗಳ ದ್ಯೋತಕವಾಗಿವೆ. ಈ ಸಾದಾಖ್ಯಗಳಿಗೂ ಪಂಚಾಕ್ಷರೀ ಮಂತ್ರಕ್ಕೂ ನಿಕಟಸಂಬಂಧವಿದೆ. ಈ ಸಂಬಂಧದ ಮೂಲಕ ಈ ಅಕ್ಷರಗಳನ್ನು ಪಂಚಾಕ್ಷರೀ ಮಂತ್ರಕ್ಕೆ ಜೋಡಿಸಿ ಅನ್ನುವದರಿಂದ ಪಂಚಾಕ್ಷರೀ ಮಂತ್ರದ ಬಲವು ಹೆಚ್ಚುತ್ತದೆಂದು ಭಾವಿಸಲ್ಪಡುತ್ತದೆ.

(೩೪೫) ಷಟ್ ಪ್ರಸಾದಮಂತ್ರ:— ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇದು ಷಟ್ ಪ್ರಸಾದ ಮಂತ್ರವು. ಇದಕ್ಕೆ ಓಂಕಾರವು ಕೂಡಿದಲ್ಲಿ ಶಿವಾಂಗ ಮಂತ್ರವಾಗುತ್ತದೆ. ಇದರ ಅಕ್ಷರಗಳು ಷಟ್ ಸಾದಾಖ್ಯ, ಷಟ್ ಕರಣ ಇವುಗಳನ್ನು ತೋರಿಸುತ್ತವೆ.

(೩೪೬) ಪಂಚ ಪ್ರಸಾದ ಮಂತ್ರ:— ಓಂ ಹಂ ಹ್ರಾಂ ಹಂ, ಹ್ರೌಂ ಹಂಸ ಇದು ಪಂಚ ಪ್ರಸಾದ ಮಂತ್ರವೆಂದು ಹೇಳಲ್ಪಡುತ್ತದೆ. ಹಂಸ ಈ ಶಬ್ದವು ಇದರಲ್ಲಿ ಮಹತ್ವವಾದದ್ದು.

(೩೪೭) ಪಂಚಾಕ್ಷರೀ ಮಂತ್ರದ ವಿಧಗಳು:— ಇವು ನಂ॥ ೩೩೧ ರಲ್ಲಿ ಹೇಳಿದ ಮೇರೆಗೆ ಮೂಲ ಪಂಚಾಕ್ಷರ, ಸ್ಥೂಲ ಪಂಚಾಕ್ಷರ, ಸೂಕ್ಷ್ಮ ಪಂಚಾಕ್ಷರ, ಮಾಯಾಖ್ಯ ಪಂಚಾಕ್ಷರ, ಪ್ರಸಾದ ಪಂಚಾಕ್ಷರ ಎಂದು ಇರುತ್ತವೆ. ಇವುಗಳನ್ನು ಲಿಂಗ ಮಧ್ಯದಲ್ಲಿ ಅನುಸಂಧಾನಿಸಿ ಸ್ಮರಿಸುವುದೇ ಧ್ಯಾನವೆಂದು ಹೇಳಲ್ಪಡುತ್ತಿದೆ.

(೩೪೮) ಮೂಲ ಪಂಚಾಕ್ಷರ:— ಓಂ ನಮಃ ಶಿವಾಯ. ಇದು ಮೂಲ ಪಂಚಾಕ್ಷರವು. ಇದು ಅನೇಕ ವಿಧ ಪಂಚಾಕ್ಷರಗಳಲ್ಲಿ ಮುಖ್ಯವಾದುದು.

ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವನಿಯಂತೃತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮಕತ್ವ, ಸರ್ವಶಕ್ತಿತ್ವ ಈ ಗುಣಗಳು ಪರಮಾತ್ಮನಲ್ಲಿರುವುದನ್ನು ಈ ಮಂತ್ರವು ಸೂಚಿಸುತ್ತದೆ.

(೩೪೯) ಸ್ಥೂಲ ಪಂಚಾಕ್ಷರ:— ಓಂ, ಹ್ರಾಂ, ಹ್ರೀಂ, ಹ್ರೂಂ, ನಮಃ ಶಿವಾಯ. ಇದು ಸ್ಥೂಲ ಪಂಚಾಕ್ಷರವು. ಒಂಬತ್ತು ಅಕ್ಷರಗಳುಳ್ಳದ್ದು. ಇದು ಉದಾರತ್ವ, ಅನುಪ್ರವೇಶತ್ವ, ನೇಮಕತ್ವ, ರುದ್ರತ್ವ, ಶ್ರುತ್ಯಾಧಾರತ್ವ ಈ ಗುಣಗಳು ಪರಮಾತ್ಮನಲ್ಲಿರುವುದನ್ನು ಈ ಮಂತ್ರವು ಸೂಚಿಸುತ್ತದೆಂದು ತಿಳಿಯಲ್ಪಟ್ಟಿದೆ.

(೩೫೦) ಸೂಕ್ಷ್ಮ ಪಂಚಾಕ್ಷರ:— ಓಂ, ಹ್ರೀಂ, ಶಿವಾಯ. ಇದು ಸೂಕ್ಷ್ಮ ಪಂಚಾಕ್ಷರ ಮಂತ್ರವು. ಇದು ವಟಬೀಜದಂತೆ ಬಹು ಸೂಕ್ಷ್ಮವಾದದ್ದು.

(೩೫೧) ಮಾಯಾಖ್ಯ ಪಂಚಾಕ್ಷರ:— ಓಂ, ಹ್ರೀಂ, ಹ್ರೂಂ ನಮಃ ಶಿವಾಯ. ಇದು ಮಾಯಾಖ್ಯ ಪಂಚಾಕ್ಷರವು. ಇದರಲ್ಲಿ ೮ ಅಕ್ಷರಗಳಿವೆ.

(೩೫೨) ಪ್ರಸಾದ ಪಂಚಾಕ್ಷರ:— ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ನಮಃ ಶಿವಾಯ. ಇದು ಪ್ರಸಾದ ಪಂಚಾಕ್ಷರಿಯು. ಈ ಮಂತ್ರವು ಬ್ರಹ್ಮಸ್ಥಾನದ ಮಧ್ಯವಳಿಯದ ಸಹಸ್ರದಳ ಕಮಲ ಕರ್ಣಿಕೆಯಲ್ಲಿರುವ ಪಂಚಪೀಠದಲ್ಲಿ ವಾಸಿಸುತ್ತದೆಂದು ತಿಳಿಯಲ್ಪಟ್ಟಿರುತ್ತದೆ. ಇದರಲ್ಲಿ ೧೦ ಅಕ್ಷ

ಬಸವೇಶ್ವರನು ಇಲ್ಲಿಗೆ ಬಂದ ಬಳಿಕ ಅಲ್ಲಿಯೇ ಅವನು ವೀರಶೈವ ದೀಕ್ಷೆಯನ್ನು ಹೊಂದಿದ್ದಾನೆ. ಹರಿಹರಕವಿಯು ನಂದಿಮುಖದಿಂದ ಬಸವೇಶ್ವರನಿಗೆ ಇಲ್ಲಿ ಲಿಂಗದೀಕ್ಷೆಯಾಯಿತೆಂದು ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಇಲ್ಲಿ ದೀಕ್ಷೆಯಾದದ್ದು ನಿಜವಿರಬಹುದು. ಆದರೆ ಯಾರು ಅವನಿಗೆ ದೀಕ್ಷೆಮಾಡಿದರೆಂಬುದು ಮಾತ್ರ ನಮಗೆ ನಿಶ್ಚಯಪೂರ್ವಕವಾಗಿ ತಿಳಿಯದು. ಬಸವನು ತನ್ನ ಯಾವ ವಚನದಲ್ಲಿಯೂ ತನ್ನ ಗುರುವಿನ ಹೆಸರನ್ನು ಹೇಳಿಲ್ಲ. ಆದರೆ ಸಂಗಮನಾಥನೇ ತನ್ನ ಗುರುವೆಂದು ಅವನು ಕೆಲವು ವಚನಗಳಲ್ಲಿ ಹೇಳಿದ್ದುಂಟು. ಆದರೆ ಹೀಗೆ ಹೇಳಿದ್ದು ಸಂಗಮನಾಥನಲ್ಲಿ ಅವನಿಗಿದ್ದ ಭಕ್ತಿಯ ದ್ಯೋತಕವೇ ಹೊರ್ತು ಮತ್ತೇನೂ ಆದರಲ್ಲಿ ವಿಶೇಷ ಅರ್ಥವಿಲ್ಲೆಂದು ನಮಗೆ ತೋರುತ್ತದೆ.

ಈ ಪ್ರಕಾರ ಬಸವೇಶ್ವರನು ಸಂಗಮಕ್ಷೇತ್ರದಲ್ಲಿ ನಿಂತುಕೊಂಡು ವೀರಶೈವ ಧರ್ಮಪ್ರಸಾರಕಾರ್ಯವನ್ನು ಮಾಡಿದ್ದಾನೆ. ಆದರ ವಿವರಗಳನ್ನು ನಾವು ಮುಂದೆ ಪ್ರಸ್ತಾಪಿಸುವೆವು.

[ಮುಂದೆ ಸಾಗುವದು.]

ಬಂಧವು ಇರುತ್ತವೆ. (ನಂ॥ ೨೦೯ ರಿಂದ ೨೧೨ ರ ವರೆಗೆ ನೋಡಿರಿ.) ಮೂಲಭಾಗಗಳಿಗೆ ಬ, ಸ, ವ ಪ್ರಣವುಗಳನ್ನು ಮತ್ತು ಉಪಭಾಗಗಳಿಗೆ ಅ, ಉ, ಮ ಪ್ರಣವುಗಳನ್ನು ಅವರು ಸಂಬಂಧಿಸುತ್ತಾರೆ.

ಹಾಗೆಯೇ ಮನುಷ್ಯನ ಸುತ್ತಲೂ ಅವನ ಗುಣಗಳಿಗೆ ಅನುಸಾರವಾಗಿ ಶಕ್ತಿಗಳು ಸಂಚರಿಸುತ್ತಿರುತ್ತವೆ. ಅದ್ದರಿಂದ ಅಲ್ಲಿಯೂ ಅವರು ಪ್ರಣವುಗಳನ್ನು ಇಟ್ಟಿದ್ದಾರೆ. (ನಂ॥ ೨೩೫ ನೋಡಿರಿ)

ಆದರೆ ಈ ಎಲ್ಲ ವಿಷಯಗಳಲ್ಲಿ ನಡೆಯುವವನ ಉಚ್ಚವರ್ತನೆ, ಉಜ್ವಲಭಾವ, ಮನಸ್ಸಿನ ಏಕಾಗ್ರತೆ ಇವು ಅವಶ್ಯವಿರುವದರಿಂದ ಅವುಗಳ ಪ್ರಭಾವದಿಂದ ಮನುಷ್ಯನು ಹೀಗೆ ಮಂತ್ರಮಯನಾಗಿ ಆಚರಿಸುತ್ತಾನೆ. ಹೀಗೆ ಆಚರಿಸುತ್ತ ಅವನು ಆತ್ಮೋದ್ಧಾರವನ್ನು ಮಾಡಿಕೊಳ್ಳುತ್ತಾನೆ. ಹೀಗೆ ಮಂತ್ರದ ಬಗ್ಗೆ ಶಿವಶರಣರ ವಿಚಾರಗಳಿವೆ.

(೨೩೧) ಪಂಚ ಪಂಚಾಕ್ಷರಗಳು:— ಇವು ಮೂಲ ಪಂಚಾಕ್ಷರ, ಸ್ಥೂಲ ಪಂಚಾಕ್ಷರ, ಸೂಕ್ಷ್ಮ ಪಂಚಾಕ್ಷರ, ಮಾಯಾಖ್ಯ ಪಂಚಾಕ್ಷರ, ನಾದ ಪಂಚಾಕ್ಷರ ಎಂದು ಐದು ಇರುತ್ತವೆ. ಇವುಗಳಲ್ಲಿ ಒಟ್ಟು ೩೦ ಪ್ರಣವಗಳಿರುತ್ತವೆ. ಪಂಚಾಕ್ಷರಿಯ ಉಪಯೋಗವು ಧ್ಯಾನದಲ್ಲಿ, ಪೂಜೆಯಲ್ಲಿ, ನ್ಯಾಸದಲ್ಲಿ, ಆಚರಣೆಯಲ್ಲಿ, ನೃತ್ಯದ ನಡೆಯಲ್ಲಿ, ನಿಂತಲ್ಲಿ ಕುಳಿತಲ್ಲಿ ನೋಡಿದಲ್ಲಿ ಎಲ್ಲೆಲ್ಲಿಯೂ ಇರುತ್ತದೆ. ಅದರ ಮೂಲಕ ಮನುಷ್ಯನು ತನ್ನಲ್ಲಿ ಲಿಂಗವೃತ್ತಿಯನ್ನು ನೆಲೆಗೊಳಿಸುತ್ತಾನೆ. ನಿಷ್ಠಾವಂತರು ಪರಮಾತ್ಮನ ನಾಮಸಂಕೀರ್ತನವನ್ನು ಮಾಡುವದುಂಟು. ಆದರೆ ವೀರಶೈವನು ಲಿಂಗಿಯಾದ್ದರಿಂದ ಅವನು ಪಂಚಾಕ್ಷರಗಳ ಉಪಯೋಗವನ್ನು ಮಾಡಿಕೊಳ್ಳುತ್ತಾನೆ. ಅದ್ದರಿಂದ ಅವುಗಳ ಸಂಬಂಧವನ್ನು ಅವನು ಅರಿತುಕೊಳ್ಳಬೇಕು. ಹೀಗೆ ಅರಿತು ಆಚರಿಸಿದಲ್ಲಿ ಅವನಲ್ಲಿ ದುಷ್ಟವಾಸನೆಗಳು ಉಂಟಾಗಲಾರವು. ಅವನಲ್ಲಿ ದುಷ್ಟ ಪ್ರವೃತ್ತಿಗಳು ಅಡಗುವವು. ಭೂತಪಿಶಾಚಿಗಳು ಅವನನ್ನು ಸಮೀಪಿಸಲು ಹಿಂಜರಿಯುತ್ತವೆ. ಪಂಚಾಕ್ಷರಿಯು ಕೇವಲ ಆರಕ್ಷರದ ಮಂತ್ರವು. ಆದರೆ ಆದರ ಉಪಯೋಗವು ಸಕಲವನ್ನರಿತವನಿಗೆ ತಿಳಿಯುವದು. ಅವನು ಹೀಗೆ ಅರಿತು ಆಚರಿಸಿದಲ್ಲಿ ಮಂತ್ರಾಕ್ಷರಗಳು ಅವನ ಆಯಾ ಸ್ಥಾನಗಳಲ್ಲಿ ದೃಢಪಡುವವು. ಆಗ ಅವುಗಳಿಂದ ಆಯಾ ಶಕ್ತಿಗಳು ಹೊರಹೊರಡುವವು. ಈ ಶಕ್ತಿಗಳ

ಮೂಲಕ ಕರ್ಮಗಳು ಅವನನ್ನು ಮುಟ್ಟಲಾರವು. ಈ ಪ್ರಕಾರ ವೀರಶೈವನು ಪಂಚಾಕ್ಷರ ಮಂತ್ರ ಮೂಲಕ ಶಿವಸಾಮರಸ್ಯವನ್ನು ಹೊಂದುತ್ತಾನೆ.

(೨೩೨) ನವಪ್ರಣಮಗಳು:— ಅ, ಉ, ಮ, ಓಂ, ನ, ಮ, ಶಿ, ವಾ, ಯ, ಇವುಗಳು ನವಪ್ರಣಮಗಳು. ಇವುಗಳ ಭಾವವು ಹಿಂದೆ ವಿವರಿಸಲ್ಪಟ್ಟಿರುತ್ತದೆ.

(೨೩೩) ಷಟ್‌ಸ್ಥಲದಲ್ಲಿ ಅ ಉ ಮಾಕ್ಷರಗಳ ಸಂಬಂಧ:— ಷಟ್‌ಸ್ಥಲದಲ್ಲಿ ಏಕವಿಧ, ದ್ವಿವಿಧ, ತ್ರಿವಿಧ ಮತ್ತು ಷಡ್ವಿಧ ಹೀಗೆ ವಿಧಗಳಿವೆ. ಏಕವಿಧವು ಪರಬ್ರಹ್ಮವನ್ನು ಸೂಚಿಸುತ್ತದೆ. ದ್ವಿವಿಧವು ಶಿವ ಶಕ್ತಿ, ಅಂಗ ಲಿಂಗ, ಇವುಗಳನ್ನು ಸೂಚಿಸುತ್ತದೆ. ತ್ರಿವಿಧವು ಅನೇಕವಿದ್ದು ಅವು ಬಹು ಸೂಕ್ಷ್ಮವಾದವು. ಅಲ್ಲಿ ಅ, ಉ, ಮ ಸಂಬಂಧಪಡುತ್ತವೆ. ಷಡ್ವಿಧಕ್ಕೆ ಪ್ರಣಮ ಸಹಿತ ಪಂಚಾಕ್ಷರಗಳು ಸಂಬಂಧಪಡುತ್ತವೆ.

ಈ ತ್ರಿವಿಧಗಳು ಅವವೆಂದರೆ:— ತತ್ ತ್ವಂ ಅಸಿ; ಈಡಾ ಪಿಂಗಳ ಸುಷಮ್ನ; ಸತ್ಕ್ರಿಯೆ ಸಮ್ಯಜ್ಞಾನ ತ್ರಿಕೂಟ; ಚಿದಂಗ ಚಿದ್ಘನಲಿಂಗ ತ್ರಿಕೂಟ; ಚಿನ್ನಾದ ಚಿದ್ಬಿಂದು ಚಿತ್‌ಕಳೆ; ನಾದ ಬಿಂದು ಕಳೆ; ಕಾಯಾರ್ಪಿತ ಕರಣಾರ್ಪಿತ ಭಾವಾರ್ಪಿತ; ಕರುಣಜಲ ವಿನಯಜಲ ಸಮತಾಜಲ; ಲಿಂಗದರೂಪ ಪ್ರಣವಲಿಂಗದ ರುಚಿ ಉಭಯದ ತೃಪ್ತಿ; ತನುವಿನ ಕುರುಹು ಉನ್ಮನಿಕುರುಹು ನಿಜದಿರವು; ಗುರು ಲಿಂಗ ಜಂಗಮವು; ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರು; ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗ; ಸ್ವಯಜಂಗಮ ಚರಜಂಗಮ ಪರಜಂಗಮ; ಗುರುಪಾದೋದಕ ಲಿಂಗಪಾದೋದಕ ಜಂಗಮಪಾದೋದಕ; ಶುದ್ಧಪ್ರಸಾದ ಸಿದ್ಧಪ್ರಸಾದ ಪ್ರಸಿದ್ಧ ಪ್ರಸಾದ; ಕ್ರಿಯಾಭಸಿತಜ್ಞಾನಭಸಿತ ಚಿದ್ಘನಭಸಿತ; ನ ಮ ಶಿ ವ ಯಓಂ; ಅಷ್ಟಾವರಣ ಪಂಚಾಚಾರ ಉಭಯದ ಕೂಟ; ಲಿಂಗದ ಪೀಠ ಊರ್ಧ್ವ ಪೀಠ ಗೋಮುಖ; ಲಿಂಗದ ವೃತ್ತ ಕಟಿ ವರ್ತುಳ; ಶಕ್ತಿಪೀಠ ಶಿವಪೀಠ ಉಭಯದಕೂಟ ಈ ಪ್ರಕಾರ ಗುಂಪುಗಳಿದ್ದು ಈ ಗುಂಪುಗಳಲ್ಲಿ ಷಟ್‌ಸ್ಥಲ ಶಾಸ್ತ್ರಕ್ಕೆ ಸಂಬಂಧಿಸಿದ ವಿಶಿಷ್ಟಾರ್ಥವುಳ್ಳ ಮೂರು ಮೂರು ಶಬ್ದಗಳಿವೆಯಷ್ಟೇ. ಈ ಮೂರು ಅನುಕ್ರಮವಾಗಿ ಅ, ಉ, ಮ ಈ ಬೀಜಾಕ್ಷರಗಳಿಗೆ ಸಂಬಂಧ ಪಡುತ್ತವೆ.

(೨೩೪) ಇಷ್ಟಲಿಂಗಕ್ಕೆ ತ್ರಿವಿಧಗಳ ಸಂಬಂಧ:— ಗುರು, ಲಿಂಗ ಜಂಗಮಗಳು; ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗಗಳು; ಸ್ವಯ ಚರ ಪರಗಳು; ಈ ಗುಂಪುಗಳು ಇದ್ದು ಇವುಗಳಲ್ಲಿ ಮೂರು ಮೂರು ಭಾಗಗಳಿವೆಯಷ್ಟೇ. ಈ ಭಾಗಗಳು ಅನುಕ್ರಮವಾಗಿ ಲಿಂಗದ ಪೀಠ, ಲಿಂಗದ ಮೇಲೂರ್ಧ್ವ, ಮತ್ತು ಲಿಂಗದ ಗೋಮುಖ ಇವುಗಳಿಗೆ ಸಂಬಂಧಿಸುತ್ತವೆ.

(೨೩೫) ಇಷ್ಟಲಿಂಗಕ್ಕೆ ಪಂಚಾಕ್ಷರ ಸಂಬಂಧ:—ಗೋಳಕ, ಪೀಠ, ಕಂಠ, ಗೋಮುಖ, ವೃತ್ತ ಎಂದು ಇಷ್ಟಲಿಂಗದಲ್ಲಿ ಭಾಗಗಳಿವೆ. ಇವು ಅನುಕ್ರಮವಾಗಿ ನ, ಮ, ಶಿ, ವಾ, ಯ ಈ ಪ್ರಣಮಗಳಿಗೆ ಸಂಬಂಧ ಪಡುತ್ತವೆ.

(೨೩೬) ಪಂಚಾಕ್ಷರಿಯ ಮಿಶ್ರ ಪಂಚೀಕರಣ:— ಕರ್ಮೇಂದ್ರಿಯಗಳು, ಪಂಚವಿಷಯಗಳು, ಜ್ಞಾನೇಂದ್ರಿಯಗಳು, ವಾಯುಗಳು, ಕರಣೇಂದ್ರಿಯಗಳು ಇವು ಮನುಷ್ಯನ ಕ್ರಿಯೆಗಳಿಗೆ ಅವಶ್ಯವಾಗಿ ಬೇಕಾಗುವ ಸಾಧನಗಳಾಗಿವೆ. ಕರ್ಮೇಂದ್ರಿಯಗಳು ಹೆಚ್ಚಿಗೆ ಸ್ಥೂಲವಾಗಿದ್ದು ಮುಂದಿನವುಗಳು ಹೆಚ್ಚು ಹೆಚ್ಚಿಗೆ ಸೂಕ್ಷ್ಮವಾಗುತ್ತ ಹೋಗುತ್ತವೆ. ಈ ಐದು ಗುಂಪುಗಳು ನ, ಮ, ಶಿ, ವಾ, ಯ ಈ ಪಂಚಾಕ್ಷರಗಳಿಗೆ ಅನುಕ್ರಮವಾಗಿ ಸಂಬಂಧಪಡುತ್ತವೆ. ಇದು ಹೇಗೆಂದರೆ, ವಾಕ್ಕು, ಪಾಣಿ, ಪಾದ, ಗುಹ್ಯ, ವಾಯು ಇವು ಕರ್ಮೇಂದ್ರಿಯಗಳು, ಶಬ್ದ ಸ್ಪರ್ಶ ರೂಪ, ರಸ, ಗಂಧಗಳು ಇವು ಪಂಚ ವಿಷಯಗಳು, ಶ್ರೋತ್ರ, ಚರ್ಮ, ನೇತ್ರ, ಜಿಹ್ವೆ, ಘ್ರಾಣ ಇವು ಜ್ಞಾನೇಂದ್ರಿಯಗಳು, ಸಮಾನ, ಉದಾನ, ವ್ಯಾನ, ಅಪಾನ, ಪ್ರಾಣ ಇವುಗಳು ವಾಯುಗಳು, ಅರಿವು, ಮನ, ಹಮ್ಮು, ಬುದ್ಧಿ, ಚಿತ್ತ, ಇವು ಕರಣೇಂದ್ರಿಯಗಳು. ಇವು ಅನುಕ್ರಮವಾಗಿ ನ, ಮ, ಶಿ, ವಾ, ಯ ಈ ಬೇರೆಬೇರೆ ಪ್ರಣಮಗಳಿಗೆ ಸಾಮೂಹಿಕವಾಗಿ ಸಂಬಂಧಪಡುತ್ತವೆ. ಇದರಲ್ಲಿ ಒಂದೊಂದೇ ಗುಂಪು ತೆಗೆದುಕೊಂಡು ವಿಚಾರಿಸಿದಲ್ಲಿ ಅವುಗಳ ಸಂಬಂಧವು ಹಿಂದೆ ೨೧೪, ೨೧೫, ೨೧೬, ೨೨೭, ೨೨೮ ಈ ಗುಂಪುಗಳಲ್ಲಿ ಹೇಳಿದ ಮೇರೆಗೆ ಆಗುತ್ತದೆ. ಈ ಎರಡನೇ ವಿಧ ಸಂಬಂಧಕ್ಕೆ ಪಂಚೀಕರಣ ಸಂಬಂಧವೆಂಬ ಹೆಸರು. ಈಗಿನದಕ್ಕೆ ಮಿಶ್ರ ಪಂಚೀಕರಣ ಸಂಬಂಧವೆಂದು ಹೇಳುವದುಂಟು.

(೨೩೭) ಭಕ್ತನ ಅಂಗವು ಲಿಂಗ ಮಯವು:— ಮೇಲೆ ನಂ ೨೨೪, ೨೨೫, ೨೨೬, ೨೨೭, ೨೧೮ ಇವುಗಳಲ್ಲಿ ನಿರ್ದೇಶವಾದ ಪ್ರಕಾರ ಸಂಬಂಧ

(೩೫೩) ಷಟ್ತ್ರಿಂಶನ್ಮಂತ್ರಗಳು:— ಇವು ಬೀಜಾಕ್ಷರ ಮಂತ್ರ, ಕೀಲಕ ಮಂತ್ರ, ನ್ಯಾಸಾಕ್ಷರಮಂತ್ರ, ವದನಾಕ್ಷರ ಮಂತ್ರ, ಶಕ್ತಿಷಡಂಗ ಮಂತ್ರ, ಲಿಂಗ ಷಡಕ್ಷರಮಂತ್ರ ಎಂದು ಆರು ವಿಧಗಳಾಗಿವೆ. ಇವೆಲ್ಲವೂ ಕೂಡಿ ೩೬ ಮಂತ್ರಗಳಾಗುತ್ತವೆ. ಇವುಗಳನ್ನು ವೀರಶೈವರು ತಮ್ಮಲ್ಲಿ ತೆಗೆದುಕೊಂಡಿರುತ್ತಾರೆ. ಪಂಚ ಪಂಚಾಕ್ಷರ ಮಂತ್ರಗಳು ಪರಮಾತ್ಮನ ಧ್ಯಾನದಲ್ಲಿ ಉಪಯುಕ್ತವಾದವುಗಳು; ಆದರೆ ಈ ಷಟ್ ತ್ರಿಂಶನ್ಮಂತ್ರಗಳು ಅವರ ಆಚರಣೆಯಲ್ಲಿ ಬೇಕಾದವುಗಳಿರುತ್ತವೆ. ಅವುಗಳ ಉಪಯೋಗವು ಅವರ ಅನೇಕ ಕ್ರಿಯೆಗಳಲ್ಲಿರುತ್ತದೆ.

(೩೫೪) ಬೀಜಾಕ್ಷರ ಮಂತ್ರ:— ಬ ಸ ವ ಅ ಉ ಮ ಇವುಗಳು ಬೀಜಾಕ್ಷರಗಳು. ಇವು ಹಿಂದೆ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಅವು ಮೂಲ ಶಕ್ತಿಗಳು. ಇವು ಆರು ಅಕ್ಷರಗಳಿವೆ.

(೩೫೫) ಕೀಲಕಮಂತ್ರ— ಹ್ರಾಂ, ಹ್ರೀಂ, ಹ್ರೂಂ, ಹ್ರೈಂ, ಹ್ರೌಂ, ಹ್ರಃ ಇವು ಆರು ಅಕ್ಷರಗಳು. ಕೀಲಕ ಮಂತ್ರ ಇದಕ್ಕೆ ಷಟ್‌ಪ್ರಸಾದ ಮಂತ್ರವೆಂತಲೂ ಇನ್ನೊಂದು ಹೆಸರಿದೆ. (ಹಿಂದೆ ನಂ॥ ೩೪೫ ನೋಡಿರಿ.) ಕೀಲಕ ಮಂತ್ರ ಈ ಶಬ್ದದಲ್ಲಿ 'ದೃಢ ಪಡಿಸುವದು' ಎಂಬರ್ಥವಿದೆ. ಆದ್ದರಿಂದ ಈ ಅಕ್ಷರಗಳ ಕಾರ್ಯವು ಆಯಾ ಮಂತ್ರಗಳನ್ನು ತನ್ನಲ್ಲಿ ದೃಢ ಪಡಿಸುವದಿರುತ್ತದೆಂದು ತಿಳಿದುಬರುತ್ತದೆ.

(೩೫೬) ನ್ಯಾಸಾಕ್ಷರ ಮಂತ್ರ:— ಇದರಲ್ಲಿ ಆರು ಮಂತ್ರಗಳಿರುತ್ತವೆ. ಇದಕ್ಕೆ ಷಡಂಗ ಮಂತ್ರವೆಂದು ಬೇರೊಂದು ಹೆಸರಿದೆ. ಶರೀರದ ಭಾಗಗಳಲ್ಲಿ ಮಂತ್ರ ನ್ಯಾಸ ಮಾಡುವದೇ ಈ ಮಂತ್ರದ ಕಾರ್ಯವಾಗಿರುತ್ತದೆ.

ಓಂ ಹ್ರಾಂ ಹೃದಯಾಯನಮಃ. ಇದು ಹೃದಯಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರೀಂ ಶಿರಸೆ ಸ್ವಾಹಾ. ಇದು ಶಿರೋಮಂತ್ರವೆಂದು ಹೇಳಲ್ಪಡುತ್ತಿದೆ.

ಓಂ ಹ್ರೂಂ ಶಿಖಾಯೈ ವೌಷಟ್. ಇದು ಶಿಖಾಮಂತ್ರವೆಂದು ಹೇಳಲ್ಪಡುತ್ತಿದೆ.

# ಶಿವಾನುಭವ.

| ವರ್ಷ ೧೬ | ಏಪ್ರಿಲ್ = ೧೯೪೨. | ಸಂಚಿಕೆ ೬ |
| --- | --- | --- |


## ಪೂರ್ವಾಶ್ರಯ ನಿರಸನ.


(ಲೇ— ಶ್ರೀ. ಬಸವಪ್ಪ ಚನ್ನಪ್ಪ ಪಟ್ಟೇದ, ವಂಟಮುರಿ.)


ಪೂರ್ವಾಶ್ರಯ ನಿರಸನವೆಂದರೆ, ತಮ್ಮಲ್ಲಿ ಮೊದಲು ಆಶ್ರಯಗೊಂಡ ತಪ್ಪು ಭಾವನೆಗಳನ್ನು ಬಿಟ್ಟುಬಿಡೋಣ. ಈ ಬಗ್ಗೆ ಶ್ರೀ ಚೆನ್ನಬಸವೇಶ್ವರರು ಹೇಳುವದೇನಂದರೆ "ಪೂರ್ವಾಶ್ರಯ ಕಳೆವೆವೆಂಬಿರಿ. ಪೂರ್ವವಾವುದು, ಆಶ್ರಯವಾವುದು; ನೀವು ಬಲ್ಲರೆ ಹೇಳಿರೇ. ಪೂರ್ವವೆಂಬುದೇ ಬಂದಬಟ್ಟೆ, ಆಶ್ರಯವೆಂಬುದೆ ಕರಣಾದಿಗುಣಗಳು. ಈ ಉಭಯವ ಕಳೆದು ಕೂಡಲ ಚೆನ್ನಸಂಗಯ್ಯನಲ್ಲಿಪ್ಪ ಶರಣಂಗೆ ನಾನು ಶರಣೆಪ್ಪೆನು" ಹಿಂದಿನ ಬಟ್ಟೆಯೆಂಬುದು, ಭಕ್ತತನವನ್ನು ಅನುಸರಿಸುವ ಪೂರ್ವದಲ್ಲಿ ತಾನು ಭವಿಯಾಗಿ ಭವಿಗಳಂತೆ ವರ್ತಿಸುತ್ತ ಬಂದ ಮಾರ್ಗ. ಅದು ಅನೇಕ ಕಾಲ ಪೈಯುಂಡು, ಮನಬುದ್ಧಿ ಮುಂತಾದ ಕರಣಗಳಲ್ಲಿ ಗಟ್ಟಿಯಾಗಿ ತಳವೂರಿ, ಅವುಗಳ ಸ್ವಭಾವ ಗುಣವಾಗಿ ಬಿಟ್ಟಿರುವದು, ಅದೇ ಆಶ್ರಯವು — ಎಂಬದನ್ನೇ ಈ ವಚನದಲ್ಲಿ ಬೋಧಿಸಿದ್ದಾರೆ. ಓದುಗರಿಗೆ ಮನದಟ್ಟಾಗುವಂತೆ ಅದನ್ನು ಮತ್ತಿಷ್ಟು ತಿಳಿದು ಬರೆಯುವದು ಯುಕ್ತವು. ನಾವು ಹುಟ್ಟಿದಾಗಿನಿಂದ ಅಜ್ಞಾನ ಮೂಲಕವಾಗಿ ಅನೇಕ ಸುಳ್ಳುಸಂಗತಿಗಳನ್ನು ನಿಜವೆಂದು ನಂಬಿ ಆ ಪ್ರಕಾರ ನಡೆಯುತ್ತ ಬಂದಿರುವೆವು. ಮೊದಲೇ ಲೋಕವು ಮಾಯೆಯಿಂದ ಕೂಡಿದುದು. ಆ ಮಾಯೆಗೆ ಒಳಗಾಗಿ ಬಹುಜನ ಸಮಾಜವು ಸ್ವಾರ್ಥವಿ

ಡಿದು ಭವಿತನದಲ್ಲಿ ಮುಳುಗಿದುದು. ಇಂತಹರ ಗುಂಪಿನಲ್ಲಿ ಶಿವಭಕ್ತರು ಹುಟ್ಟಿ ಬಾಳುವದಿದೆ. ಆ ಕಾರಣ ಅವರು ಸ್ವಾಭಾವಿಕವಾಗಿಯೆ ಭವಿಗಳ ಆಚರಣೆ ರೀತಿನೀತಿಗಳನ್ನು ಅನುಸರಿಸುವರು. ಹಾಗು ಅವನ್ನೇ ನಿಜವೆಂದು ನಂಬುವರು. ತಮ್ಮ ಆಯುಃಕ್ರಮವನ್ನಾದರೂ ಹಾಗೆಯೇ ಇಡುವರು. ಆದರೆ ಇದು ಅನಿಷ್ಟವಾದುದರಿಂದ, ಭಕ್ತರಾಗತಕ್ಕವರು ಇದನ್ನು ಬಿಟ್ಟು, ಆತ್ಮೋದ್ಧಾರಕ ಯೋಗ್ಯ ಮಾರ್ಗವನ್ನು ಅವಲಂಬಿಸುವದು ಅವಶ್ಯ. ನಮ್ಮ ಪುರಾತನರೂ ಪ್ರಮಥರೂ ಸಂಶೋಧಿಸಿ ಆಚರಿಸಿ ಬೋಧಿಸಿದ ಶಿವಮಾರ್ಗವೇ, ನಿಷ್ಕಲಂಕವಾದುದೂ ನಿಜವಾದ ಉದ್ಧಾರಕ ಗುಣವುಳ್ಳದೂ ಇರುವದೆಂಬುದು ಎಲ್ಲರೂ ಮನಗಂಡ ವಿಷಯು. ಅಂತೇ ಆಗಮಗಳಲ್ಲಿ ಅದು "ನ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ" ಎಂದು ಕೊಂಡಾಡಲ್ಪಟ್ಟಿದೆ. ಈ ಲೋಕದಲ್ಲಿ ನ್ಯಾಯವಾದ ಮಾರ್ಗದಿಂದ ಜೀವನ ಸಾಗಿಸಿ, ಕೊನೆಗೆ ಲಿಂಗಾಂಗ ಸಾಮರಸ್ಯವೆಂಬ ಸಾಯುಜ್ಯ ಪದವನ್ನು ತಪ್ಪದೆ ಹೊಂದಲಿಕ್ಕೆ ಇಂತಹ ಲೋಕೋತ್ತರ ಮತವನ್ನೇ ಹಿಂಬಾಲಿಸಬೇಕು. ಆದರೆ ಬಾಲ್ಯದಿಂದ ಕೆಲಕಾಲದ ವರೆಗೆ, ವೀರಶೈವರ ಹುಡುಗನು ಸುತ್ತಮುತ್ತಲಿನ ಭವಿಜನರ ಅನುಕರಣದಿಂದ, ಅಂತಃಕರಣದಲ್ಲಿ ನೆಲೆಗೊಳಿಸಿಕೊಂಡ ದುರ್ಭಾವನೆಗಳನ್ನು ಬಿಡುವುದು ಪರಮ ದುಸ್ತರವು. ಆದಾಗ್ಯೂ ಅವನ್ನು ಬಿಡದಿದ್ದರೆ ಗತಿಯೇ ಇಲ್ಲ. ಅಂತೇ ನಮ್ಮ ನೂರೊಂದು ಸ್ಥಲಗಳಲ್ಲಿ "ಪೂರ್ವಾಶ್ರಯ ನಿರಸನ" ವೆಂಬದೊಂದು ಸ್ವತಂತ್ರ ಸ್ಥಳವನ್ನಿಟ್ಟು, ಹಾಗೆ ಆಚರಿಸಲಿಕ್ಕೆ ಅಗ್ರಹಪೂರ್ವಕ ಅಪ್ಪಣೆಕೊಡಿಸಿದ್ದಾರೆ. ಮುಂದಿನ ಶ್ರೀಪ್ರಭುದೇವರ ವಚನದಲ್ಲಿ ಪೂರ್ವಾಶ್ರಯ ನಿರಸನದ ನಿಜಸ್ವರೂಪವನ್ನು ಸ್ಥೂಲಮಾನದಿಂದ ಕಂಡುಕೊಳ್ಳಬಹುದು.

"ಶ್ರೀಗುರುವು ಪೂರ್ವಾಶ್ರಯುವ ಕಳೆದು ಪುನರ್ಜಾತನ ಮಾಡಿದ ಒಳಿಕ, ಪಂಚಭೂತಕಾಯುವಳಿದು ಪ್ರಸಾದಕಾಯುವ ಮಾಡಿದ ಬಳಿಕ, ವಾಯು ಪ್ರಾಣಿಯು ಕಳೆದು ಲಿಂಗಪ್ರಾಣಿಯು ಮಾಡಿದ, ಬಳಿಕ, ಎಲ್ಲಿಯು ಕುಲಸೂತಕ? ಎಲ್ಲಿಯು ಛಲಸೂತಕ? ಎಲ್ಲಿಯು ಭಾವಸೂತಕ? ಇವನೆಂದೂ ಹಿಡಿಯಬಾರದು. ಕುಲಸೂತಕವುಳ್ಳನ್ನಕ್ಕ ಭಕ್ತನಲ್ಲ. ಛಲಸೂತಕವುಳ್ಳನ್ನಕ್ಕ ಮಹೇಶ್ವರನಲ್ಲ. ತನುಸೂತಕವುಳ್ಳನ್ನಕ್ಕ ಪ್ರಸಾದಿಯಲ್ಲ. ಮನಸೂತಕವುಳ್ಳನ್ನಕ್ಕ ಪ್ರಾಣ

ಲಿಂಗಿಯಲ್ಲ. ನೆನಹು ಸೂತಕವುಳ್ಳನ್ನಕ್ಕ ಶರಣನಲ್ಲ. ಭಾವಸೂತಕವುಳ್ಳನ್ನಕ್ಕ ಐಕ್ಯನಲ್ಲ. ಇಂತೀ ಸೂತಕವ ಮುಂದೆಗೊಂಡಿಪ್ಪವರ ಮುಖವ ನೋಡಲಾಗದು ಗುಹೇಶ್ವರ."

(ಸೂತಕವೆಂದರೆ ದೋಷ, ಮೈಲಿಗೆ)

ಈ ವಿಧವಾಗಿ ಸೂತಕತ್ರಯ ನಿರಸನವು ಬಹು ಮಹತ್ವದ ಸ್ಥಲವಾಗಿದೆ. ನಿಜವಾದ ಭಕ್ತರು (ಲಿಂಗಾಯತರು) ಆಗಬೇಕಾದರೆ, ಇದನ್ನು ಅಕ್ಷರಶಃ ಪಾಲಿಸಲೇಬೇಕು. ಆದರೂ ಇದರ ಕಡೆಗೆ ನಮ್ಮ ಲಕ್ಷ್ಯವು ಸಾಕಷ್ಟು ಹೋಗಿರುವದಿಲ್ಲ. (ಒಂದು ವೇಳೆ ತಿಲಮಾತ್ರವೂ ಹೋಗಿಲ್ಲೆಂದರೂ ಸಲ್ಲಬಹುದು) ಈ ದುರ್ಲಕ್ಷದಿಂದ ನಾವು ಅಪಾರ ದುರವಸ್ಥೆಗೆ ಈಡಾಗಿರುವೆವು. ಇದನ್ನು ಸಮಾಜದ ಮುಂದಿಡುವದೇ ಇಂದಿನ ಬರಹದ ಉದ್ದೇಶ.

ಉಳಿದ ಲೌಕಿಕರಂತೆ (ಭವಿಗಳಂತೆ) ಸರ್ವಸಾಧಾರಣವಾಗಿ ನಾವಾದರೂ, ದೇಹವೇ ನಾನೆಂದು ತಿಳಿಯುತ್ತೇವೆ. ಜೀವವನ್ನು ಅತ್ಯಂತ ಪ್ರೀತಿಸುತ್ತೇವೆ. ಜೀವವು ದೇಹದಿಂದ ಬಿಡುಗಡೆ ಹೊಂದಿದರೆ "ನಾವು ಸತ್ತೆವು" ಎಂದು ನಂಬುತ್ತೇವೆ. ಪ್ರಪಂಚದೊಳಗಿನ ನಾನಾ ವಿಷಯ ರೂಪ ಪದಾರ್ಥಗಳನ್ನು ಸಂಗ್ರಹಿಸಿ ಅವುಗಳಿಂದಲೇ ಸುಖಪಡಬೇಕೆಂದು ಬಯಸುತ್ತೇವೆ. ಹೊನ್ನು-ಹೆಣ್ಣು-ಮಣ್ಣೆಂದು ಅವುಗಳಲ್ಲಿ ಲಂಪಟರಾಗುತ್ತೇವೆ. ಸತಿ ಸುತಾದಿಗಳು ವಿಯೋಗವಾದರೆ ಶೋಕಿಸುತ್ತೇವೆ. ಪರಹಿಂಸೆ ಅನ್ಯಾಯದ ಗಳಿಕೆಗೆ ಮನಸು ಹಾಕುತ್ತೇವೆ. ಜಾತಿಯೇ ಮೊದಲಾದ ಸೂತಕಗಳಿಗೆ ಒಳಗಾಗುತ್ತೇವೆ. ಸತ್ಯಶುದ್ಧ ಕಾಯಕವನ್ನು ಪ್ರಾಮಾಣಿಕತನದಿಂದ ನಡಿಸಿ ಅದರೊಳಗೆ ಶಿವಕೃಪೆಯಿಂದ ಸಿಕ್ಕಷ್ಟರಲ್ಲಿಯೇ, ಕುಟುಂಬ ಪೋಷಣವನ್ನೂ ಗುರು ಲಿಂಗ ಜಂಗಮದ ಸೇವೆಯನ್ನೂ ಜ್ಞಾನಸಾಧನೆ ಪರಹಿತ ಪರೋಪಕಾರಗಳನ್ನೂ ನಿರ್ವಹಿಸುತ್ತ, ಆನಂದದಿಂದ ಕಾಲಕಳೆಯಬೇಕೆಂಬದನ್ನು ಯಾರೂ ನೆನಿಸುವದಿಲ್ಲ. ನಮ್ಮ ದುರಾಶೆ ಅಹಂಕಾರಗಳಿಗೆ ಮಿತಿ ಉಳಿದಿರುವದಿಲ್ಲ. ಇದೆಲ್ಲ ಭವಿಗಳ ರೀತಿ! ಇದನ್ನೇ ನಾವು ಈಗ ಆಜನ್ಮವಾಗಿ ತಪ್ಪದೇ ಪಾಲಿಸುತ್ತಿರುವದಿಲ್ಲವೇ? ಅದಕಾರಣ ಭಕ್ತರ ಮಗುವು ತಕ್ಕಷ್ಟು ದೊಡ್ಡದಾಗಿ, ಬುದ್ಧಿ ವಿಚಾರಗಳು ಸಾಕಷ್ಟು ಬಲಿತ ಮೇಲೆ, ಶಿವದೀಕ್ಷ

ಸಂಸ್ಕಾರವನ್ನು ನೆರವೇರಿಸಿ, ಅವನ ಪೂರ್ವಾಶ್ರಯವು ತೊಲಗುವಂತೆ ಅದರ ನಿರಸನದ ಉದ್ಯೋಗವನ್ನು ನಡಿಸುವದು ಬಹು ಅವಶ್ಯವಾಗಿರುವದಲ್ಲದೆ ಜಾಣ್ಮೆಯದೂ ಇರುತ್ತದೆ. ಭಕ್ತದೀಕ್ಷೆಗೊಂಡವನು ಪೂರ್ವಾಶ್ರಯವನ್ನು ಕ್ರಮವಾಗಿ ಕಳೆದುಕೊಂಡು, ತನ್ನ ನಿಜಸ್ವರೂಪವನ್ನೂ ಜಗತ್ತಿನ ಸತ್ಯಸ್ವರೂಪವನ್ನೂ ಅರಿತು, "ಲಿಂಗರೂಪಂ ಜಗತ್ಸರ್ವಂ" ಎಂಬದನ್ನು ಅಳವಡಿಸಿಕೊಂಡು, ತಲ್ಲೀನವಾಗಿ ಹೋಗದಿದ್ದರೆ, ಅದೆಂತಹ ಲಿಂಗಾಂಗಿಗಳು ನಾವು? ಎಲ್ಲವೂ ಭ್ರಮೆ!. ನಾವು ಲಿಂಗಾಯತರು ಲಿಂಗವನ್ನು ಧರಿಸುತ್ತೇವಷ್ಟೆ! ಆದರೆ ನಮಗೆ ಲಿಂಗವೆಂದರೇನು? ಅದನ್ನು ಧರಿಸುವದೆಂದರೇನು? ಅದನ್ನು ಪೂಜಿಸುವದೆಂದರೆ ಏನು ಮಾಡಬೇಕು? ಆ ಪೂಜೆಯಿಂದ ಕೃತಾರ್ಥರಾಗಿ, ತಾವು ಲಿಂಗರೂಪವಾಗಿ, ಆ ಲಿಂಗದಲ್ಲಿ ಬೆರೆದು ಲಿಂಗೈಕ್ಯವಾಗುವದು ಹೇಗೆ? ಇವೆಲ್ಲ ಸಂಗತಿಗಳು ಸಕಲರಿಗೆ ಸ್ಪಷ್ಟವಾಗಿ ತಿಳಿದು, ಆ ರೀತಿ ತಪ್ಪದೆ ಆಚರಣವಾಗುವದು ಅತ್ಯಂತ ಇಷ್ಟವಾಗಿರುವದಲ್ಲವೇ? ಅದರ ಸೌಕರ್ಯಕ್ಕಾಗಿಯೇ ಈ ಪೂರ್ವಾಶ್ರಯ ನಿರಸನವು ಹೇಳಲ್ಪಟ್ಟದೆ.

ಗುರುವು ದೀಕ್ಷೆಯನ್ನು ಮಾಡುವಾಗ, ನಮಗೆ ಹಿಡಿದುಕೊಂಡಿದ್ದ ಭವಿತನವೆಂಬ ಹಿರಿಯಭೂತವನ್ನು ಬಿಡಿಸುವ ಪ್ರಯತ್ನಕ್ಕೆ, ಮೊದಲು ಉದ್ಯುಕ್ತನಾಗುತ್ತಾನೆ ಶಿವದೀಕ್ಷೆ ಕೊಂಡತಕ್ಕ ವಟುವಿನ ದೇಹವನ್ನು ಲಿಂಗಮಯವಾಗಿ ಮಾಡಲಿಕ್ಕೆ ಹೆಣಗುತ್ತಾನೆ. ಹೊರಗೆ ತೋರುವ ಕಾಯವೇ ದೃಶ್ಯಲಿಂಗ, ಅದರಲ್ಲಿ ವಾಸಿಸುವ ಜೀವಾತ್ಮ ಇಲ್ಲವೆ ಮನವೇ ಪ್ರಾಣಲಿಂಗ, ಅಂತರಾತ್ಮ ಇಲ್ಲವೆ ಕೂಟಸ್ಥನೇ ಭಾವಲಿಂಗವೆಂಬ ಬುದ್ಧಿಯನ್ನು ಅವನಲ್ಲಿ ಉಂಟುಮಾಡುವನು. ಅದರ ಸಲುವಾಗಿಯೇ ಪಂಚಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಪಂಚಪ್ರಾಣಗಳು, ಪಂಚಕರಣಂಗಳು, ಸ್ಥೂಲದೇಹದಲ್ಲಿ ಕಂಡುಬರುವ ಪಂಚಧಾತುಗಳು (ರುಧಿರ, ಮಾಂಸ, ಅಸ್ಥಿ, ಮಜ್ಜಾ, ಮೇಧಸ್ಸು) ಇವುಗಳಲ್ಲಿ ಲಿಂಗಸ್ಥಾಪನೆ ಮಾಡುವನು. ಕಿವಿಯಲ್ಲಿ ಮಂತ್ರವನ್ನುಸುರಿ, ಅವನ ನಿಜತ್ವವನ್ನು ಜಾಗ್ರತಪಡಿಸುವನು. ಹೀಗೆ ಬಹು ಯುಕ್ತಿಪ್ರಯುಕ್ತಿಗಳಿಂದ ಪೂರ್ವಜನ್ಮವನ್ನು (ಬ್ರಹ್ಮಸೃಷ್ಟಿಯನ್ನು) ಮರೆತು, ಪುನರ್ಜಾತ (ಶಿವಸೃಷ್ಟಿಯುವ)ನೆಂಬ ಭಾವ ನೆಲೆಗೊಳ್ಳುವಂತೆ ಸಂಸ್ಕರಿಸುವನು. ಮತ್ತು ಮಸ್ತಕವಾಸಿನಿ ಚಿತ್‌ಶಕ್ತಿಯನ್ನೂ ಪ್ರಾಣವನ್ನೂ

ಆಪ್ತಾನಿಸಿ ದೃಶ್ಯಲಿಂಗದಲ್ಲಿ, ಪ್ರತಿಷ್ಠಾಪಿಸಿ, ಅದನ್ನು ಇಷ್ಟಲಿಂಗವಾಗ ಏಕೀಕೃತ ತ್ರಿಲಿಂಗವಾಗಿ ಮಾಡಿ ಪೂಜಿಸಲಿಕ್ಕೆ ಕರದಲ್ಲಿ ಕೊಡುವನು. ಅದರಿಂದ ವಟುವು ಇನ್ನು "ತಾನು ನರನಲ್ಲಿ ಹರನೆಂದು ಭಾವಿಸಲಿಕ್ಕೆ ಆಸ್ಪದವಾಗುವದು. ಹೀಗಾದರೆ ಮಾತ್ರ ಅವನು ಲಿಂಗಧಾರಿಯಾದಂತಾಯಿತಲ್ಲದೆ, ಏನೇನು ಭಾವದಲ್ಲಿ ಬದಲಾವಣೆಯಾಗದೆ ಮೊದಲಿನಂತೆಯೇ ಉಳಿದುಬಿಟ್ಟರೆ, ಇಲ್ಲವೆ ದೇಹದ ಮೇಲೆ ಧರಿಸಿದ ಲಿಂಗದ ಸ್ವರೂಪವು ಭಾವಭರಿತವಾಗದೆ, ಅದನ್ನು ಭಿನ್ನಭಾವದಿಂದ ಕಾಣುತ್ತ ಇಟ್ಟುಕೊಂಡರೆ ಅದೇನು ಲಿಂಗಧಾರಣವಲ್ಲ. ಶ್ರೀ ಪ್ರಭುದೇವರು—"ಅರುಹ ಪೂಜಿಸಲೆಂದು, ಗುರುವು ಕರದಲ್ಲಿ (ಅದರ) ಕುರುಹ ಕೊಟ್ಟಡೆ, ಅದ ಮರೆದು, ಬರಿಯ ಕುರುಹ ಪೂಜಿಸುವ ಮರುಳರನು ಕಾಣಾ ಗುಹೇಶ್ವರ" ಎಂದು ನುಡಿದ ವಚನವನ್ನು ನಾವು ಸರ್ವದಾ ಲಕ್ಷ್ಯದಲ್ಲಿಡಬೇಕು. ಆತ್ಮನೆಂದರೆ ಅರುಹು. ("ಪ್ರಜ್ಞಾನಂ ಬ್ರಹ್ಮ" ಎಂದು ಶ್ರುತಿ ಇರುವದು) ಅದೇ ಭಾವಲಿಂಗ. ಈ ಭಾವಲಿಂಗವೇ, ಒಳಗೆ ಪ್ರಾಣಲಿಂಗವೂ ಹೊರಗೆ ದೃಶ್ಯಲಿಂಗವೂ (ದೇಹವೂ) ಆಗಿರುತ್ತದೆ. ೧ ಆ ಏಕಮೇವಾದ್ವಿತೀಯವಾದ ಪರವಸ್ತುವೇ ಇಷ್ಟಲಿಂಗ (ಲಿಂಗತ್ರಯ ಸ್ವರೂಪ). ಅದು ಪ್ರಭುದೇವರು ನಿರೂಪಿಸಿದಂತೆ ಅರುಹಲ್ಲದೆ ಬೇರೊಂದಲ್ಲ. ಅರುಹಿನ ಪೂಜೆಯನ್ನು ನಿರಂತರವಾಗಿ ಮಾಡತಕ್ಕದ್ದು. ಇಲ್ಲವಿದ್ದರೆ ನಾವು ಮರುಳರೆನಿಸುವೆವು. ನರಗುರಿಗಳಾಗುವೆವು. ಯಾವಜ್ಜೀವವೂ ಪ್ರತಿಯೊಂದು ಕಾರ್ಯವನ್ನು ಅದು ವ್ಯವಹಾರಿಕವೇ ಇರಲಿ, ಪಾರಮಾರ್ಥಿಕವೇ ಇರಲಿ, ಸುವಿವೇಕದಿಂದ ಜ್ಞಾನಯುಕ್ತರಾಗಿ, ತನ್ನ ಸಾಮರಸ್ಯ ಧ್ಯೇಯಕ್ಕೆ ಪರಿಪೋಷಕವಾಗುವಂತೆಯೇ, ಪ್ರಾಮಾಣಿಕತನದಿಂದ ಸಾಗಿಸತಕ್ಕದ್ದು. ಇಂತು ನಮ್ಮ ವರ್ತನೆಯಾಗಹತ್ತಿದರೆ ಮಾತ್ರ ನಾವು ಲಿಂಗಪೂಜೆಯನ್ನು (ಸುಜ್ಞಾನಾರಾಧನೆಯನ್ನು) ಮಾಡಿ

---

೧. 'ಒಂದು ವಸ್ತುವೇ ಮೂರಾಗಿರುವದು. ಇದು ಮನುಷ್ಯ ಪ್ರಾಣಿಗಷ್ಟೇ ಸಂಬಂಧಿಸಿದ ಮಾತಲ್ಲ. ಇಡೀ ಜಗತ್ತಿಗೂ ಅದರಲ್ಲಿರುವ ಪ್ರತಿಯೊಂದು ವಸ್ತುವಿಗೂ ಸಂಬಂಧಿಸಿದ ವ್ಯಾಪಕ ಸಂಗತಿ. "ಲಿಂಗರೂಪಂ ಜಗತ್ ಸರ್ವಂ" ಹಾಗು "ಅಣೋರಣೀಯಾನ್ ಮಹತೋಮಹೀಯಾನ್" ಎಂಬವೇ ಪ್ರಮಾಣ.

ದಂತಾಗುವದೇ ಹೊರತು, ಬರೀ ಕರಗತ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಗಳನ್ನೆಷ್ಟು ಸಲ್ಲಿಸಿದರೂ ಆಗಲಾರದು.

ಈ ಮೇರೆಗೆ ಸರ್ವಕಾಲವೂ ಇಷ್ಟಲಿಂಗವನ್ನು ಆರಾಧಿಸಿ ಧ್ಯಾನಿಸಿ ತಾನು ಲಿಂಗವಾಗಿ, ಜಗತ್ತೆಲ್ಲವೂ ತನ್ನ ರೂಪವೇ ಎಂಬ ಭಾವನೆ ದೃಢಪಟ್ಟು, ತನ್ಮಯವಾಗಿ ಕರ್ಪುರವು ಉರಿಯುಂಡಂತಾಗಿ ಬಿಟ್ಟರೆ, ಅದೇ ಲಿಂಗೈಕ್ಯಸ್ಥಿತಿಯು.

ಭಕ್ತಸಾಂಪ್ರದಾಯವಿಡಿದ ಲಿಂಗಾಂಗಿಗಳೆಲ್ಲರು ಅವರು ವೀರಶೈವರ ಹೊಟ್ಟೆಯಲ್ಲಿ ಹುಟ್ಟಿದವರಿರಲಿ, ಹೊರಗಿನಿಂದ ಹೊಸದಾಗಿ ಬಂದು ಸೇರಿದವರಿರಲಿ, ಲಿಂಗಭಕ್ತರೇ! ಅವರಲ್ಲಿ ದೃಶ್ಯ ಇಷ್ಟಲಿಂಗವನ್ನರ್ಚಿಸುವವರೊಳಗೆ ಭಕ್ತ (ಈಶ್ವರ[೧]) ಮಹೇಶ್ವರರೆಂತಲೂ, ಪ್ರಾಣಲಿಂಗಧಾರಕರೊಳಗೆ ಪ್ರಸಾದಿ ಪ್ರಾಣಲಿಂಗಿಗಳೆಂತಲೂ, ತೃಪ್ತಿಲಿಂಗ ಪೂಜಕರಲ್ಲಿ ಶರಣ-ಐಕ್ಯರೆಂತಲೂ ಅವರವರ ಲಿಂಗ ಪ್ರಗತಿಗನುಸರಿಸಿ ಒಟ್ಟು ಆರು ತರಗತಿಗಳಿರುವವು. ಅವರು ಕ್ರಮವಾಗಿ ಆಚಾರಲಿಂಗ, ಗುರುಲಿಂಗ,

---

(೧) ಷಟ್‌ಸ್ಥಲಗಳಲ್ಲಿ ಯಾವತರಗತಿಯವರಿದ್ದರೂ ಆ ಎಲ್ಲ ಲಿಂಗಧಾರಿಗಳು ಭಕ್ತರೇ. ಹೀಗೆ ಅದು ಸಕಲರಿಗೂ ಸಾಮಾನ್ಯವಾದ ಹೆಸರಿದ್ದು, ಅದನ್ನು ಷಟ್‌ಸ್ಥಲದ ಮೊದಲಿನ ತರಗತಿಯವರಿಗೆ ಮಾತ್ರ ಉಪಯೋಗಿಸುವದು ಉಚಿತವಲ್ಲೆಂದು ನನ್ನ ಅಲ್ಪ ತಿಳುವಳಿಕೆ. ಹೀಗೆ ಕರೆಯುವ ರೂಢಿ ಬಿದ್ದಿರುವದರಿಂದ ಉಳಿದವರು "ತಾವು ಭಕ್ತರಲ್ಲ" ಎಂಬ ಭ್ರಮೆಗೆ ಒಳಗಾಗಲಿಕ್ಕೆ ಅಸ್ಪದವಾಗುವದು. ಈಗ ಭಕ್ತ-ಗುರು-ಜಂಗಮರು ಭಿನ್ನ ಭಿನ್ನ ಜಾತಿಯವರಂತೆ "ನಾವು ಹೆಚ್ಚು ನೀವು ಕಡಿಮೆ" ಎಂದು ಬಡಿದಾಡಲಿಕ್ಕೆ ಇದು ಬಹುಮಟ್ಟಿಗೆ ಕಾರಣವಾಗಿದೆ. ಈಶ್ವರ (ಭಕ್ತ)—ಮಹೇಶ್ವರ (ಅಯ್ಯ) ಎಂಬವನಕ ಎಂದಿನಿಂದಲೋ ಒಡೆದು ನಿಂತವೆ. ಈ ಅಯ್ಯಗಳ ಅನುಕರಣವನ್ನು ಮಾಡಿ ಮಿಕ್ಕ ಶಿವಭಕ್ತರಾದರೂ ತಮ್ಮ ತಮ್ಮೊಳಗೆ ಸಹ ಭೇದವೆಣಿಸಹತ್ತಿದರು. ಇದರಿಂದ ಲಿಂಗಾಯತರಲ್ಲಿ ಅನೇಕ ಭೇದ—ಪ್ರಭೇದಗಳಾಗಿ ಕಾಲ (ಜಾತಿ) ಸೂತಕವು ಕಳವೂರಿ ನಿಂತದೆ. ಹೀಗೆ ತಪ್ಪು ತಿಳುವಳಿಕೆಗೆ ಕಾರಣವಾಗಬಾರದೆಂದು, ಈಗ ಆರಂಭದವರಿಗೆ ಭಕ್ತರೆಂಬುವದರ ಬದಲು "ಈಶ್ವರ" ಎಂಬುದುಚಿತವೆಂದು ನನ್ನ ಮತ. ಈ ಬಗ್ಗೆ ಬೇರೆ ಬೇರೆ ಗೃಹಸ್ಥರು ತಮ್ಮ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವರೆಂದು ನಂಬಿರುವೆನು. ನನ್ನ ಅಂಬೋಣಕ್ಕೆ ಪುಷ್ಟೀಕರಣಾರ್ಥ ಉದಾ:— ದೇವ–ಮಹಾದೇವ, ಲಿಂಗ–ಮಹಾಲಿಂಗ, ರಾಜ–ಮಹಾರಾಜ, ರಾಷ್ಟ್ರ–ಮಹಾರಾಷ್ಟ್ರ, ವಾಕ್ಯ–ಮಹಾವಾಕ್ಯ ಇತ್ಯಾದಿ.

ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗಗಳ ಭಕ್ತರು. ಇದಕ್ಕೆ ಪ್ರಮಾಣ ವಚನಃ—

"ಆಧಾರದಲ್ಲಿ ಆಚಾರಲಿಂಗವ ಧರಿಸಿ ಆಚಾರಲಿಂಗಭಕ್ತನಾದನಯ್ಯಾ ನಿಮ್ಮ ಶರಣ. ಸ್ವಾಧಿಷ್ಠಾನದಲ್ಲಿ ಗುರುಲಿಂಗವ ಧರಿಸಿ ಗುರುಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಮಣಿಪೂರದಲ್ಲಿ ಶಿವಲಿಂಗವ ಧರಿಸಿ ಶಿವಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಅನಾಹತದಲ್ಲಿ ಚರಲಿಂಗವ ಧರಿಸಿ ಚರಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ವಿಶುದ್ಧಿಯಲ್ಲಿ ಪ್ರಸಾದಲಿಂಗವ ಧರಿಸಿ ಪ್ರಸಾದಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಆಜ್ಞಾಚಕ್ರದಲ್ಲಿ ಮಹಾಲಿಂಗವ ಧರಿಸಿ ಮಹಾಲಿಂಗ ಭಕ್ತನಾದನಯ್ಯಾ ನಿಮ್ಮ ಶರಣ. ಇಂತು ಷಡಾಧಾರದಲ್ಲಿ ಷಡ್ಲಿಂಗವ ಧರಿಸಿ ಷಟ್‌ಸ್ಥಲ ಭಕ್ತನಾದನಯ್ಯಾ ನಿಮ್ಮ ಶರಣ ನಿಜಗುರುಸ್ವತಂತ್ರ ಸಿದ್ಧಲಿಂಗೇಶ್ವರ."

ಭಕ್ತವೆಂಬ ಹೆಸರು ಇಷ್ಟು ವ್ಯಾಪಕವಾದುದು. ಇವರೆಲ್ಲರೂ ಪೂರ್ವಾಶ್ರಯ ನಿರಸನ ಮಾಡಲೇಬೇಕೆಂದು ಶ್ರೀ ಪ್ರಭುದೇವರು ಹೇಳಿದ ವಚನವನ್ನು ಈ ಮೊದಲೇ ಮೇಲೆ ಉದಹರಿಸಿದೆಯಷ್ಟೆ. ಅದನ್ನೇ ಈಗ ತುಸು ವಿಶದೀಕರಿಸುವದು ಅವಶ್ಯವೆನಿಸಿದ್ದರಿಂದ ಕೆಳಗೆ ವಿವರಿಸಿರುವೆನು.

(ಅ) ಈಶ್ವರ (ಭಕ್ತ)— "ಕುಲಸೂತಕವುಳ್ಳನ್ನಕ್ಕ ಭಕ್ತನಲ್ಲ" ಎಂದಿರುವದರಿಂದ, ಭಕ್ತನು ಕುಲಸೂತಕ ಬಿಡತಕ್ಕದ್ದು. ಗುರುವಿನಿಂದ ದೀಕ್ಷೆ ಹೊಂದಿದವರೆಲ್ಲರೂ ಸಮಾನರು. ಶಿವರೂಪವೆಂದೇ ಭಾವಿಸತಕ್ಕವರು. ಅವರು ಬೇರೆ ಬೇರೆ ಕಾಯಕಗಳನ್ನು ಮಾಡುತ್ತಿದ್ದರೂ ಅವೇನೂ ಜಾತಿಯಾಗಲಾರವು. ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳೆಲ್ಲ ಎಲ್ಲರಿಗೂ ಸಮಾನವಾಗಿರುವವು. ಆದಕಾರಣ ಎಲ್ಲ ವೀರಶೈವರಲ್ಲಿಯೂ ಅನ್ನ-ಕನ್ಯಾ ವ್ಯವಹಾರವನ್ನು ನಿಃಶಂಕೆಯಿಂದ ನಡೆಯಿಸಬೇಕು. ಬಹು ಆದರದಿಂದ ಒಬ್ಬರು ಇನ್ನೊಬ್ಬರನ್ನು ಕಾಣಬೇಕು. ಹೀಗಾದರೆ ಮಾತ್ರ ಈಶ್ವರನು ಕುಲ ಸೂತಕನಿರಸನಗೊಳಿಸಿದ ಆಚಾರಲಿಂಗ ಭಕ್ತನಾಗುವನು.

(೮), ಮಹೇಶ್ವರ— "ಛಲ ಸೂತಕವುಳ್ಳನ್ನಕ್ಕ ಮಹೇಶ್ವರನಲ್ಲ" ಎಂದು ನುಡಿದಿರುವದರಿಂದ, ಮಹೇಶ್ವರನು ಛಲಸೂತಕವನ್ನು ವರ್ಜಿಸತಕ್ಕದ್ದು. ಛಲವೆಂದರೆ ಹಠ. "ಏನೇ ಆಗಲಿ, ಮಹೇಶ್ವರರೆಂದೆನ್ನಿಸುವ ನಾವು ಹೆಚ್ಚಿನ ಕುಲದವರೇ," ಎಂದು ಆಗ್ರಹದಿಂದ ಹೇಳಿಕೊಳ್ಳುತ್ತ ಅದನ್ನೇ ಹಠಾತ್ತಾಗಿ ಸಾಗಿಸಿದರೆ, ಅದು ಛಲಸೂತಕವೆನಿಸುವದು. (೧) ಜನ್ಮದಿಂದೆಲ್ಲರೂ ಸಮಾನರು. ಗುಣಗಳೇ ಪೂಜೆಗೆ (ಶ್ರೇಷ್ಠತೆಗೆ) ಕಾರಣವು. ಅಂತಹ ವಿಶೇಷಗುಣಯುಕ್ತರಾಗದಿದ್ದರೆ, ತೋರಿಕೆಯ ಸಂಸ್ಕಾರ-ವೇಷ ಮುಂತಾದವುಗಳೆಲ್ಲ ವ್ಯರ್ಥ! "ಕುಲಜನೆಂಬುದಕ್ಕೆ ಆವುದು ದೃಷ್ಟ?" ಎಂದು ಬಸವಣ್ಣನವರು ಕೇಳಿ ಕೊನೆಗೆ "ಲಿಂಗಸ್ಥಲವನರಿತವನೇ ಕುಲಜನು" ಎಂದು ಹೇಳಿದ್ದಾರೆ. ಆದುದರಿಂದ ಮಹೇಶ್ವರನು ಹಟವನ್ನು ಬಿಟ್ಟು "ಲಿಂಗಭಕ್ತರೆಲ್ಲರೂ ಸರಿಸಮಾನರೆ"ಂದು ವಿವೇಕದಿಂದ ಅರಿತು, ಯಾವ ಭೇದಭಾವವೂ ಇಲ್ಲದೆ ವರ್ತಿಸಿದರೆ, ಅವನು ನಿಜವಾದ ಗುರುಲಿಂಗಭಕ್ತನಾಗುವನು.

---

(೧) ವೀರಶೈವರು ಪಂಚಸೂತಕ ವರ್ಜಿತರು. ಅವುಗಳಲ್ಲಿಯೇ ಈ ಕುಲ (ಜಾತಿ) ಬರುವದು. ಭವಿಗಳಲ್ಲಿ ಉದ್ಯೋಗ (ಕಾಯಕ) ಪರತ್ವದಿಂದ ವರ್ಣಗಳೂ ಜಾತಿಗಳೂ ಕಲ್ಪಿಸಲ್ಪಟ್ಟವೆ. ಆದರೆ ಕಾಯಕವು ಉಪಜೀವನದ ಸಾಧನವಾದ ಕಾರಣ, ಅದಕ್ಕೂ ಧರ್ಮಕ್ಕೂ ಏನೇನು ಸಂಬಂಧವಿಲ್ಲ. "ಅಷ್ಟಾವರಣಾದಿಗಳು ಸಕಲ ಲಿಂಗಧಾರಿಗಳಿಗೆ ಸಮಾನವಾಗಿರುವದರಿಂದ ಅವರೆಲ್ಲರು ಒಂದೇ ಮತದವರು. ಒಂದೇ ವಿಧವಾದ ಆಚಾರವಿಚಾರಗಳುಳ್ಳವರು. ಆಕಾರಣ ಅವರೆಲ್ಲರೂ ಸಮಾನಸ್ಕಂಧರು." ಎಂದು ನಮ್ಮ ಶಾಸ್ತ್ರಗಳು ಘಂಟಾಘೋಷವಾಗಿ ಸಾರುತ್ತಿರುವವು. ವಸ್ತುಸ್ಥಿತಿ ಹೀಗಿದ್ದು, ಮಾತ್ರ "ನಾವು ಹೆಚ್ಚಿನ ಕುಲದವರು" ಎಂದು ವೀರಶೈವರಲ್ಲಿ ಯಾರಾದರೂ ಅಂದರೆ ಅದು ಕೇವಲ ಅವರ ಭ್ರಾಂತಿ ಮೂಲಕವಾದ ಆಗ್ರಹವೇ ಹೊರತು, ಒಪ್ಪಿಕೊಳ್ಳುವಂತಹ ವಿಷಯವಲ್ಲ. ಆಕಾಶದಲ್ಲಿ ಕುಸುಮವಿರುವದು ಹೇಗೆ ತಾನೇ ಅಶಕ್ಯವೋ ಹಾಗೆ, ವೀರಶೈವರಲ್ಲಿ ಮಹೇಶ್ವರರದೊಂದು ಬೇರೆ ಜಾತಿ ಇರುವದು ತೀರ ಅಸಂಬದ್ಧವು, ಅಸಂಭವವು. ಅದುದರಿಂದ ಅವರು ಈ ಮೊದಲೇ ಎಲ್ಲರಲ್ಲಿಯೂ ಅನ್ನೋದಕ ವ್ಯವಹಾರವನ್ನು ನಡಿಸಿರುವಂತೆ ಇನ್ನುಮೇಲೆ ಕನ್ಯಾವ್ಯವಹಾರವನ್ನೂ ಸಹ ಬಳಕೆಗೆ ತಂದು ಕುಲಸೂತಕದಿಂದ ಸಂಪೂರ್ಣ ಮುಕ್ತರಾಗಿ ಅನ್ಯರಿಗೆ ಮಾರ್ಗದರ್ಶಿಗಳಾಗುವರೆಂದು ಆಶಿಸುವೆನು. ಇದು ಯಾರ ಅನುಕರಣವೋ ಆ ಬ್ರಾಹ್ಮಣರಲ್ಲಿಯೂ ಕೂಡ ಈ ಪದ್ಧತಿಯಿಲ್ಲವೆಂಬುದನ್ನು ನೆನೆಸಬೇಕು.

(ಇ) ಪ್ರಸಾದಿ — "ತನು ಸೂತಕವುಳ್ಳನ್ನಕ್ಕ ಪ್ರಸಾದಿಯಲ್ಲ" ಎಂದಿರುವದರಿಂದ, ಪ್ರಸಾದಿಯು ತನುವಿನ ಸೂತಕ ಕಳಕೊಳ್ಳುವದು ಅವಶ್ಯವಿದೆ. ತನುವು ತಾನಲ್ಲ. ತಾನು ತನುವಲ್ಲ. ತನುವಿಗೂ ತನಗೂ ಏನೇನು ಸಂಬಂಧವಿಲ್ಲ ಎಂದು ದೃಢವಾಗಿ ನಂಬಿ, ಅದರ ಬೇನೆ ಬೇಸರಿಕೆಗಳನ್ನೂ ಸೊಕ್ಕುವಿಕೆ ಸೊರಗುವಿಕೆಗಳನ್ನೂ ಲೆಕ್ಕಿಸಬಾರದು. (ಹೀಗೆ ಹೇಳುವದರಿಂದ ಶರೀರವನ್ನು ದುರ್ಲಕ್ಷಿಸಬೇಕೆಂದು ಅರ್ಥವಲ್ಲ. ಆದರೆ ಅದೇ ತಾನು ಎಂದು ಅಂತಃಕರಣಪೂರ್ವಕ ನಂಬಕೂಡದೆಂಬುದೇ ಭಾವ!) ಶರೀರವು ಬಿದ್ದು ಹೋಗುವದೇ ತನ್ನ ಮರಣವೆಂಬ ಅಂಜಿಕೆಯನ್ನು ಸಹಸಾ ಧರಿಸಕೂಡದು. ತಾನೆಂದರೆ ದೇಹದಲ್ಲಿ ವಾಸಿಸುವ ಶಿವಲಿಂಗವು, ಎಂದು ಗಟ್ಟಿಯಾಗಿ ತಿಳಿದು, ಆ ಶಿವಲಿಂಗದ ಭಕ್ತನಾಗುವದೇ ಪ್ರಸಾದಿಯ ಸಹಜ ಧರ್ಮವು.

(ಈ) ಪ್ರಾಣಲಿಂಗಿ — "ಮನ ಸೂತಕವುಳ್ಳನ್ನಕ್ಕ ಪ್ರಾಣಲಿಂಗಿಯಲ್ಲ" ಎಂದು ಅಪ್ಪಣೆ ಕೊಡಿಸಿದುದರಿಂದ, ಪ್ರಾಣಲಿಂಗಿಯು ಮನ ಸೂತಕವನ್ನು ನಿರಸನಗೊಳಿಸಬೇಕು. ಸಂಕಲ್ಪವಿಕಲ್ಪಗಳನ್ನು ಮಾಡುವದೂ, ವಿಷಯಾಗಳಾಶೆಯಿಂದ ಕಾಮಕ್ರೋಧಾದಿಗಳಿಗೊಳಗಾಗುವದೂ, ಮನಸ್ಸಿನ ಸ್ವಭಾವ. ಈ ಚಂಚಲತನವನ್ನೆಲ್ಲ ಬಿಡಿಸಿ, ಅದನ್ನು ಜಂಗಮ ಲಿಂಗದಲ್ಲಿ ಸ್ಥಿರಪಡಿಸಿ ಐಕ್ಯಗೊಳಿಸಬೇಕು. ಅಂದರೆ ಪ್ರಾಣಲಿಂಗಿಯು ಸಂಕಲ್ಪವಿಕಲ್ಪಗಳನ್ನೂ ಆಶೆ ಆಮಿಷಗಳನ್ನೂ ತೊರೆದು ತನ್ನಲ್ಲಿ ತಾನು ಸ್ವಸ್ಥನಾಗಬೇಕೆಂಬುದೇ ಇದರ ತಾತ್ಪರ್ಯ.

[ಪ್ರಾಣಲಿಂಗ ಪೂಜಕರಾದ ಪ್ರಸಾದಿ-ಪ್ರಾಣಲಿಂಗಿಗಳಲ್ಲಿ ಕೆಲವರು, ಹಿಂದುಳಿದವರನ್ನು (ಇಷ್ಟಲಿಂಗಾರಾಧಕರನ್ನು) ಉದ್ಧರಿಸುವ ಪವಿತ್ರವಾದ ಲೋಕಸೇವಾ ಕಾರ್ಯದಲ್ಲಿ ನಿರತರಾದರೆ ಅವರೇ ಗುರುಗಳೆನಿಸುವರು. ಇವರು ಸಮಾಜದ ಅನುಮತಿಯಿಂದ ಆ ಸ್ಥಾನಕ್ಕೆ ಬಾಧ್ಯರಾಗಿ, ಪಟ್ಟಾಧಿಕಾರಿಗಳು ಚರಮೂರ್ತಿಗಳು ಎಂದೆನಿಸಿಕೊಳ್ಳುವರು. ಇವರ ಮೇಲ್ವಿಚಾರಕರಾದ ಪಂಚಸಿಂಹಾಸನ ಪತಿಗಳೂ ಇರುವರು. ಇವರೆಲ್ಲರೂ ತಮ್ಮ ಕರ್ತವ್ಯಕ್ಕೆ ಆತಂಕಬರಬಾರದೆಂದು ಆಜನ್ಮ ಬ್ರಹ್ಮಚಾರಿಗಳಾಗಿರುವರು.]

(ಉ) ಶರಣ — "ನೆನಹು ಸೂತಕವುಳ್ಳನ್ನಕ್ಕ ಶರಣನಲ್ಲ" ಎಂದು ನಿರೂಪಿಸಿರುವದರಿಂದ, ಶರಣನು ನೆನಹು ಸೂತಕವನ್ನು ನಷ್ಟಗೊಳಿಸ

ಬೇಕು, ಅಂದರೆ ಈತನ ನೆನೆಸುವಿಕೆಯೇ ಅಡಗಬೇಕು. ತಾನು ಇತರ ವೆಂಬುದೇನೂ ಇವನ ದೃಷ್ಟಿಯಲ್ಲಿ ಉಳಿಯದೆ, ಎಲ್ಲವೂ ಲಿಂಗರೂಪ ವಾಗಿ ತೋರಬೇಕು. ಇಂತಹನಿಗೆ ನೆನಹು ಉಳಿಯುವದು ಶಕ್ಯವೇ ಇಲ್ಲ. ಎಲ್ಲವನ್ನು ಸ್ವಸ್ವರೂಪದಲ್ಲೇ ಭಾವಿಸುವನು. ಹೀಗೆ ಒಂದೇ ಒಂದು ಅಖಂಡ ರೂಪವನ್ನು ಕಾಣುವವನ ನೆನಹು, ಅಳಿಯದೇನು ಮಾಡೀತು? ನೆನೆಸಲಿಕ್ಕೆ ಬೇರೆ ವಸ್ತುವಿದ್ದರೆ, ಅದು ಉಳಿಯಬೇಕಲ್ಲವೇ! ಉಳಿದ ದ್ದಾದರೆ ಅವನು ಶರಣನಲ್ಲ. ಹೀಗೆ ನೆನಹು ಅಡಗಿದ ಶರಣನೇ ನಿಜ ವಾದ ವಿರಕ್ತನು (ಸಂಪೂರ್ಣ ವಿಷಯ ತ್ಯಾಗಗೆಯ್ದವನು). ಪ್ರಸಾದ ಲಿಂಗದ ಕೃಪಾಪಾತ್ರನು.

(ಊ) ಐಕ್ಯ— "ಭಾವವುಳ್ಳನ್ನಕ್ಕ ಐಕ್ಯನಲ್ಲ" ಇವನ ಭಾವವೆ ಲ್ಲವೂ ಅಳಿಯತಕ್ಕದ್ದೆಂದು ಹೇಳಲಾಗಿದೆ. ಈತನು ಮಹಾಲಿಂಗಸ್ವ ರೂಪವಾದ-ವಿರಾಟ್-ಸ್ವರೂಪವಾದ ಈ ವಿಶ್ವದಲ್ಲಿ, ಉರಿಯುಂಡ ಕರ್ಪೂರ ದಂತೆ ಬೆರೆದು ತದಾಕಾರನಾಗುವನು. ಲಿಂಗಾಂಗ ಸಾಮರಸ್ಯವು ಇಲ್ಲಿ ಪರಿಪೂರ್ಣವಾಗುವದು. ಸದ್ಭಾವ - ಕುಭಾವ - ಭೇದಭಾವ ಮೊದ ಲಾದ ಯಾವತರದ ಭಾವನೆಗೂ ಇವನಲ್ಲಿ ಆಸ್ಪದವಿಲ್ಲ. ಭಾವವೆಲ್ಲ ನಿರ್ಭಾವವಾಗಿ, ಬಯಲಲ್ಲಿ ಬಯಲು ಬೆರೆದು ನಿರ್ವಯಲಾಗುವದು.

[ಈ ಭಾವಲಿಂಗ ಪೂಜಕರಾದ ಶರಣ-ಐಕ್ಯರಲ್ಲಿ ಕೆಲವರು ಅರಿವು ಮುಂತಾಗಿ ಸ್ವಸಂತೋಷದಿಂದ, ಶಿವಭಕ್ತರಲ್ಲಿ ಷಟ್‌ಸ್ಥಲಜ್ಞಾನ ಪ್ರಸಾರ ಮಾಡಿ ಅವರನ್ನು ಉದ್ಧರಿಸುವ ದೆಶೆಯಿಂದ, ಲಾಂಛನಧಾರಿಗಳಾಗಿ ಸಂಚರಿಸಿದರೆ ಅವರೇ ಜಂಗಮರೆನಿಸುವರು. ಇವರು ನಿರಂಜನ ಮೂರ್ತಿ ಗಳು. ಅಲ್ಲಲ್ಲಿ ಕಾಣುವ ವಿರಕ್ತಮಠಗಳು ಇವರ ಸಾಂಪ್ರದಾಯದ ಕುರುಹುಗಳು. ಸಾಮಾಜಿಕರು ಅನುಮತಿಸಿ ಇವರನ್ನಾದರೂ ಶೂನ್ಯ ಸಿಂಹಾಸನ - ಉಪಸಿಂಹಾಸನಗಳಲ್ಲಿ ಸ್ಥಾಪಿಸುವದು ವಾಡಿಕೆಯಾಗಿದೆ ]

ಈ ಮೇರೆಗೆ ಭಕ್ತರು ಆರಂಭದಿಂದ ಕೊನೆಯವರೆಗೆ ಪೂರ್ವ ಗ್ರಹಿಕೆಗಳನ್ನೆಲ್ಲ ತೊಡೆದುಹಾಕಿ, ತಾವು ಅತ್ಯಂತ ನಿರ್ಮಲರಾಗಿ ನಿರಂ ಜನ ಲಿಂಗದಲ್ಲಿ ಸಮರಸವಡೆಯತಕ್ಕದ್ದಿರುತ್ತದೆ. ಇದೇನು ಸಾಮಾನ್ಯ ವಾದುದಲ್ಲ. ಅಂತೇ "ಉಂಡುಂಡು ಸ್ವರ್ಗಕ್ಕೈದಲಿಕ್ಕೆ (ಲಿಂಗೈಕ್ಯರಾಗ ಲಿಕ್ಕೆ) ಅದನೇನು ರಂಡೆಯಾಳುವಳೆ?" ಎಂದು ಸರ್ವಜ್ಞಮೂರ್ತಿಯು

ಉದ್ಘೋಷಿಸಿದ್ದಾನೆ. ಇದನ್ನು ವೀರಶೈವರಾದ ನಾವೆಲ್ಲರು ಒಳಿತಾಗಿ ಗಮನಿಸಬೇಕು.

ಇನ್ನು ಸಾಂಪ್ರತದ ಸ್ಥಿತಿಯನ್ನು ತುಸು ಅವಲೋಕಿಸುವಾ— ಪ್ರಾಣಲಿಂಗ - ಭಾವಲಿಂಗ ಪೂಜಕರಾದ ಗುರು-ವಿರಕ್ತರು ಇಡೀ ಸಮಾಜದ ಉದ್ಧಾರಕರು. ಆದರೆ ಅವರಲ್ಲಿ ಪ್ರತಿಯೊಂದು ವರ್ಗದವರು "ನಾವೇ ಶ್ರೇಷ್ಠರು, ಮಿಕ್ಕವರು ಕನಿಷ್ಠರು" ಎಂಬ ಗಾಢತರ ಅಜ್ಞಾನದಲ್ಲಿ ಮುಳುಗಿ, ಕಡುತರವಾಗಿ ಹೋರಾಡುತ್ತ ಅಧೋಗತಿ ಹಿಡಿದಿರುವಾಗ, ಸಮಾಜೋದ್ಧಾರದ ನೆನಪು ಉಂಟಾಗಲಿಕ್ಕೆ ಅವಸರವೆಲ್ಲಿಯದೆ? ಇದೂ ಅಲ್ಲದೆ ಇವರು 'ತಾವೂ ಭಕ್ತರೆಂಬವನ್ನೂ, ಅನ್ಯರಂತೆ ತಾವೂ ಉದ್ಧಾರಹೊಂದತಕ್ಕದ್ದಿರುವದೆಂಬದನ್ನೂ" ಸಂಪೂರ್ಣವಾಗಿ ಮರೆತುಬಿಟ್ಟಿರುವರು. ತಾವು ಜನ್ಮತಃ ಸಾಕ್ಷಾತ್ ಪರಶಿವಮೂರ್ತಿಗಳೆಂದೂ, ಉಳಿದವರನ್ನು ಉದ್ಧರಿಸುವಗೋಸುಗ, ನಿಮಿತ್ತಮಾತ್ರವೇ ತಮ್ಮ ಅವತಾರವಿರುವದೆಂದೂ, ಈ ಬಹು ಜನರು ತಿಳಿದುಕೊಂಡಂತೆ, ಅವರ ವರ್ತನದಿಂದಲೇ ತೋರುತ್ತದೆ. ಇದು ತೀರ ತಪ್ಪು! ಕೇವಲ ಮೂಢತನ! ಬೇರೆ ಶಿವಭಕ್ತರಂತೆ, ಅವರೂ ಶಿವಮಾರ್ಗ ಹಿಡಿದು ನಡೆದೇ ತಮ್ಮ ಉದ್ಧಾರವನ್ನು ಮಾಡಿಕೊಳ್ಳುವದಿರುತ್ತದೆ. ಷಟ್‌ಸ್ಥಲ ಜ್ಞಾನಮಾರ್ಗದಲ್ಲಿ ತಾವೂ ಹೆಚ್ಚೆಚ್ಚು ಪ್ರಗತಿಹೊಂದುತ್ತಾ, ಉಳಿದವರನ್ನು ಎಚ್ಚರಿಸಿ ಮುಂದಕ್ಕೆ ಸಾಗಿಸುತ್ತ, ಹೋಗುವದೇ ಇವರ ಧರ್ಮವು! ಇತರ ಭಕ್ತರಿಗೆಲ್ಲ ಸಂಬಂಧಿಸುವ ಎಲ್ಲ ವಿಷಯಗಳು, ಗುರು-ವಿರಕ್ತರಿಗಾದರೂ ಅಕ್ಷರಶಃ ಅನ್ವಯಿಸುವವು. ಅವನ್ನು ಮೀರಿ ನಡೆದವರು, ಯಾರೇ ಇರಲಿ, ಭವಿಗಳಾಗಿ ಪತಿತರಾಗುವರೆಂಬದು ಸಿದ್ಧಾಂತದ ಮಾತು. ಭಿಕ್ಷೆಯಿಂದ ಕುಟುಂಬ ಪೋಷಣೆ ಮಾಡುವದೂ, ಪರದೈವ ಪರಹಿಂಸೆ ಪರನಿಂದೆಗಳಿಗೆ ಹೇಸದಿರುವದೂ ಸ್ವಾರ್ಥಲೋಲುಪರಾಗಿ ಸಮಾಜವನ್ನು ತಿರಸ್ಕರಿಸಿ, ಕರ್ತವ್ಯವಿಮುಖರಾಗುವದೂ ಸಾರ್ವತ್ರಿಕವಾಗಿ ದೃಷ್ಟಿಗೆ ಬೀಳುತ್ತದೆ. ಹೀಗೆ ಅವರು ತಾವೇ ಸ್ವತಃ ಪತಿತರಾಗುತ್ತಿರಲು, ಅನ್ಯರ ಉದ್ಧಾರವದೆಂತು ಶಕ್ಯ? ಇದನ್ನು ಗುರು-ವಿರಕ್ತರು ಚೆನ್ನಾಗಿ ಗಮನಿಸಬೇಕು.

ಇಂತು ಪೂರ್ವಾಶ್ರಯ ನಿರಸನದ ಸಂಕ್ಷಿಪ್ತ ಸ್ವರೂಪವದೆ. ಆದರೆ ಅದನ್ನು ಈಗ ಗುರು ಜಂಗಮಾದಿ ಸಕಲ ಶಿವಭಕ್ತರು ಸಹಸಾ ನೆನೆಯುವದಿಲ್ಲ. ಬಹುಶಃ ಎಲ್ಲರೂ ಭವಿಮಾರ್ಗದಲ್ಲೇ ನಿಮಗ್ನರಾಗಿರು

ವರು. ಲಿಂಗಾಂಗಿಗಳೆಲ್ಲರು ಶಿವಸಮಾನರು, ಅತಏವ ಸಮಾನಸ್ಕಂದರು ಎಂಬ ಅರಿವು ಸಹ ಇಲ್ಲದವರಾಗಿದ್ದಾರೆ. ಸಮಾನತೆಯು ತತ್ವವೇ ನಮ್ಮ ಮತದ ತಳಹದಿಯು. ಅದೇ ಈಗ ಕುಸಿಯಹತ್ತಿ ಪಾತಾಳ ಕಾಣಹತ್ತಿರುವದು. ಆದರೂ ನಾವು ವೀರಶೈವರೆಂದೂ ಒಂದೇ ಒಂದು ಜನ್ಮದಲ್ಲಿ ಮುಕ್ತಿ ಪಡೆಯುವೆವೆಂದೂ ಒಣ ಜಂಭವನ್ನು ಮಾತ್ರ ಕೊಚ್ಚುತ್ತ, ಕೇವಲ ವೇಷಧಾರಿಗಳಾಗಿ ತಿರುಗಾಡುತ್ತಿರುವೆವು. ಇದು ನಿರರ್ಥಕವು! ಆದುದರಿಂದ ಸಕಲರು-- ಮುಖ್ಯವಾಗಿ ಗುರು ಜಂಗಮರು ಸಾವಧಾನರಾಗಿ, ಕರ್ತವ್ಯೋನ್ಮುಖರಾಗಿ ವೀರಶೈವವನ್ನುದ್ಧರಿಸುವದು ಅವಶ್ಯವಾಗಿದೆ. ಇಂತಹ ಬುದ್ಧಿಯನ್ನು ದೇವರು ಬೇಗನೇ ಅವರಿಗೆ ದಯಪಾಲಿಸಲೆಂದು ಬೇಡಿಕೊಳ್ಳುವೆನು.

---

# ಬಸವೇಶ್ವರನ ಚರಿತ್ರೆ.

( ರಾ. ಬ. ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ. )

[ ಲೇಖಾಂಕ ೮. ]

ಹಿಂದಿನ ಲೇಖಾಂಕಗಳಲ್ಲಿ ನಾವು ಬಸವೇಶ್ವರನ ವಿಷಯವಾಗಿ ನಮಗೆ ಕಂಡುಬಂದ ಅನೇಕ ಮಹತ್ವದ ವಿಷಯಗಳನ್ನು ಕುರಿತು ಸವಿಸ್ತಾರವಾಗಿ ವಿವೇಚಿಸುತ್ತಾ ಬಂದಿರುತ್ತೇವೆ. ಅವುಗಳಲ್ಲಿ ನಾವು ಬಸವೇಶ್ವರನ ಜನನ, ಅವನಿಗೆ ಯಜ್ಞೋಪವೀತ ಧಾರಣವಾಗಿತ್ತೋ ಹೇಗೆ, ಅವನು ಸ್ವಗ್ರಾಮವನ್ನು ಬಿಟ್ಟುದು ಎಂದು, ಅವನ ಸಹೋದರನಾದ ದೇವರಾಜ ಮತ್ತು ಸಹೋದರಿಯಾದ ನಾಗಲಾಂಬೆ ಇವರ ಸಂಬಂಧದ ಕೆಲವು ವಿವರಣೆಗಳು, ನಾಗಲಾಂಬಿಕೆಗೆ ಲಗ್ನವಾಗಿತ್ತೋ ಹೇಗೆ, ಚೆನ್ನಬಸವನು ಹುಟ್ಟಿದುದು ಎಲ್ಲಿ, ಬಸವೇಶ್ವರನ ವಿದ್ಯಾಭ್ಯಾಸ ಎಷ್ಟರಮಟ್ಟಿಗೆ, ಅವನು ಉದ್ಭವಿಸಿದ ಕಾಲದಲ್ಲಿ ಸಮಾಜದ ಪರಿಸ್ಥಿತಿ ಹೇಗಿತ್ತು, ಇವೇ ಮೊದಲಾದ ವಿಷಯಗಳನ್ನು ನಾವು ವಿವೇಚಿಸುತ್ತ ಬಂದಿದ್ದೇವೆ. ಬಹು ಜನರು ಬಸವೇಶ್ವರನು ಕಲ್ಯಾಣಕ್ಕೆ ಹೋಗಿ ಮಂತ್ರಿಪದಾರೂ

ಘನಾದ ಬಳಿಕ ಅವನು ಮಹತ್ವದ ಕಾರ್ಯಗಳನ್ನು ಮಾಡಿದನೆಂದು ಭಾವಿಸಿ, ಈ ಕಾಲದ ಬಗ್ಗೆ ಅವರು ತಮ್ಮ ಪೂರ್ಣ ಲಕ್ಷವನ್ನು ಈ ವರೆಗೆ ಪೂರೈಸುತ್ತ ಬಂದಿದ್ದಾರೆ. ಈ ಕಾಲವು ಮಹತ್ವದ್ದೆಂಬುದರಲ್ಲಿ ಅವ ಸಂದೇಹವೂ ಇರಲಾರದು. ಆದರೆ ಅವನು ಮಂತ್ರಿಪದವನ್ನು ಸ್ವೀಕರಿಸಿದಕ್ಕಿಂತಲೂ ಮೊದಲಿನ ಕಾಲವು, ಅಷ್ಟೇ ಅಥವಾ ಅದಕ್ಕೂ ಹೆಚ್ಚಿಗೆ ಮಹತ್ವದ್ದಿರುತ್ತದೆಂಬದನ್ನು ನಾವು ಲಕ್ಷಿಸುವದು ಅವಶ್ಯವಿದೆ. ಯಾಕಂದರೆ ಇದು ಬಸವೇಶ್ವರನು ಉಂಟುಮಾಡಿದ ಕ್ರಾಂತಿಯ ಸಿದ್ಧತೆಯ ಕಾಲವಿರುತ್ತದೆ. ಮಹತ್ವದ ಕಾರ್ಯಗಳನ್ನು ಮಾಡುವಲ್ಲಿ ಅವುಗಳಿಗೋಸ್ಕರ ಯೋಗ್ಯ ಪೂರ್ವಸಿದ್ಧತೆಯನ್ನು ಮಾಡದ ಹೊರತು ಅವು ನೆರವೇರಲಾರವು. ಜಗತ್ತಿನಲ್ಲಿ ಆಗಿಹೋದ ಯಾವ ಧಾರ್ಮಿಕ ಮಹಾಪುರುಷನ ಚರಿತ್ರೆಯನ್ನು ತೆಗೆದುಕೊಂಡರೂ, ಈ ಸಂಗತಿಯು ಕಂಡುಬರುತ್ತದೆ. ಬುದ್ಧ, ಮಹಮ್ಮದ, ಕ್ರೈಸ್ತ ಮೊದಲಾದವರ ಚರಿತ್ರೆಗಳಲ್ಲಿ ಇದೇ ರೀತಿಯಾಗಿ ಜರಗಿರುತ್ತದೆ. ಅವರ ಪ್ರಯತ್ನಗಳು ಫಲಿಸುವ ಪೂರ್ವದಲ್ಲಿ ಅವರು ಬಹಳ ಕಷ್ಟಪಟ್ಟಿರುತ್ತಾರೆ ಅವರು ಪಟ್ಟ ಕಷ್ಟಗಳನ್ನು ತಿಳಿಯುವದು ಬಹಳ ಬೋಧಪ್ರದವು. ಬಸವೇಶ್ವರನ ವಿಷಯವಾಗಿಯೂ ಇದೇ ಸಂಗತಿಯು ಕಂಡುಬರುತ್ತದೆ. ಅವನು ಆರು ವರ್ಷ ಒಪ್ಪ ಚಕ್ರವರ್ತಿಗೆ ಮಂತ್ರಿಯಾಗಿರಬಹುದು. ಆದರೆ ಇಷ್ಟು ಸ್ವಲ್ಪ ಕಾಲದಲ್ಲಿ ಮಹತ್ವದ ಧಾರ್ಮಿಕ ಚಳುವಳಿಗಳು ತಲೆದೋರುವದು ಕಠಿಣವು. ಕೇವಲ ಅಧಿಕಾರದ ಬಲದಿಂದ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಗಳು ಯಾವಾಗಲೂ ಉಂಟಾಗಿರುವದಿಲ್ಲ. ಬಿಜ್ಜಳನ ಕಾಲದಲ್ಲಿ ಕಾಳಾಮುಖನಾದ ಬರ್ಮದೇವನು ಬಹು ಪ್ರಬಲನಾದ ಮಂಡಲಾಧೀಶ್ವರನು. ಅವನಂತೆಯೇ ಈ ಕಾಲದಲ್ಲಿ ರಟ್ಟರು ಮೊದಲಾದ ಅನೇಕ ಮಂಡಲಾಧೀಶ್ವರರು ಜೈನ ಧರ್ಮದವರು. ಅವರಿಗೆ ರಾಜಕೀಯ ಅಧಿಕಾರವು ಇದ್ದರೂ ಕೂಡ ಅವರಿಂದ ತಮ್ಮ ತಮ್ಮ ಧರ್ಮಗಳಲ್ಲಿ ಜಾಗ್ರತಿಯನ್ನು ಉಂಟುಮಾಡುವ ಕಾರ್ಯಗಳು ಆಗಿರುವದಿಲ್ಲ. ಆದ್ದರಿಂದ ಬಸವನು ಮಂತ್ರಿಯಾದ ಕಾರಣದಿಂದಲೇ ಅವನಿಂದ ವೀರಶೈವ ಧರ್ಮವು ಪ್ರಬಲ ಹೊಂದಿತೆಂದು ತಿಳಿಯುವದು ದೊಡ್ಡ ತಪ್ಪು. ಬಸವೇಶ್ವರನು ಅಧಿಕಾರವನ್ನು ಹೊಂದುವ ಪೂರ್ವದಲ್ಲಿಯೇ ಅವನು ಧರ್ಮೋದ್ಧಾರ ಕಾರ್ಯಗಳನ್ನು ಪ್ರಾರಂಭಿಸಿದ್ದಾನೆಂದು ತಿಳಿಯಲಿಕ್ಕೆ ಪ್ರಬಲ ಕಾರಣಗಳಿರುತ್ತವೆ. ಇವುಗಳನ್ನು ನಾವು

ನಮ್ಮ ವಾಚಕರೆದುರಿಗೆ ಇಡಲು ನಮ್ಮ ಮುಂದಿನ ಲೇಖಗಳಲ್ಲಿ ಪ್ರಯತ್ನಿಸುತ್ತೇವೆ.

ಬಸವೇಶ್ವರನ ಜೀವಿತದ ಕಾಲದಲ್ಲಿ ನಾವು ನಾಲ್ಕು ವಿಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ — (೧) ಬಸವೇಶ್ವರನು ಜನಿಸಿದಂದಿನಿಂದ ಅವನು ಯಜ್ಞೋಪವೀತವನ್ನು ತ್ಯಜಿಸುವ ವರೆಗಿನ ಕಾಲ. ಇದು ಮೊದಲನೆಯದು. ಈ ಅವಧಿಯು ಹರಿಹರನ ಪ್ರಕಾರ ೧೬ ವರ್ಷವಿರುತ್ತದೆ. ಇದು ೧೧೩೨ರಿಂದ ೧೧೪೮ ವರೆಗೆ ಇರುತ್ತದೆ. (೨) ಇದರ ತರುವಾಯ ಬಸವೇಶ್ವರನು ಸಂಗಮೇಶ್ವರನಲ್ಲಿ ಕಳೆದ ಕಾಲವು ಬರುತ್ತದೆ. ಇದು ಸುಮಾರು ೭ ೮ ವರ್ಷಗಳಾಗಬಹುದು. ೧೧೪೮ರಿಂದ ೧೧೫೫ರ ವರೆಗೆ ಈ ಕಾಲವು ಹೋಗುತ್ತದೆ. ಈ ಅವಧಿಯು ಅಂತ್ಯದಲ್ಲಿ ಬಸವನು ಸುಮಾರು ೨೩—೨೪ ವರ್ಷದ ವಯಸ್ಸಿನವನಾಗುತ್ತಾನೆ. (೩) ಈ ಕಾಲದ ತರುವಾಯ ೩ನೆಯ ಕಾಲವು ಬರುತ್ತದೆ. ಆಗ ಬಸವೇಶ್ವರನು ತರ್ದವಾಡಿ ನಾಡಿನಲ್ಲಿ ಮಹಾಮಂಡಳೇಶ್ವರನಾಗಿ ರಾಜ್ಯಭಾರ ಮಾಡುತ್ತಿದ್ದ ಬಿಜ್ಜಳನಲ್ಲಿಗೆ ಹೋಗಿ ಒಂದು ನೌಕರಿಯನ್ನು ಸಂಪಾದಿಸುತ್ತಾನೆ. ಇಲ್ಲಿ ಅವನು ೭-೮ ವರ್ಷ ಕೆಲಸ ಮಾಡುತ್ತಾನೆ. ಮಂಗಳವಾಡದಲ್ಲಿದ್ದ ಕಾಲವು ಇದು. ಇದು ೧೧೫೫ರಿಂದ ಆರಂಭವಾಗಿ ೧೧೬೨ರ ವರೆಗೆ ಹೋಗುತ್ತದೆ. ಈ ಅವಧಿಯಲ್ಲಿ ಚಾಲುಕ್ಯ ರಾಜನಾದ ನೂರ್ಮಡಿ ತೈಲಪನು ಕಲ್ಯಾಣ ಪಟ್ಟಣದಲ್ಲಿ ಆಳುತ್ತಿದ್ದರೂ ಬಿಜ್ಜಳನು ಸರ್ವಾಧಿಕಾರಿಯಾಗಿ ಮಂಗಳವಾಡದಲ್ಲಿ ರಾಜ್ಯವಾಳುತ್ತ ಬಂದನು. (೪) ಇದರ ತರುವಾಯ ೪ನೆಯ ಕಾಲವು ಬರುತ್ತದೆ. ಆಗ ಅಂದರೆ ೧೧೬೨ರಲ್ಲಿ ಬಿಜ್ಜಳನು ಚಾಲುಕ್ಯ ರಾಜನನ್ನು ಪಟ್ಟದಿಂದ ತಳ್ಳಿ ತಾನೇ ಚಕ್ರವರ್ತಿಯಾಗಿ ಕಲ್ಯಾಣ ಪಟ್ಟಣದಲ್ಲಿ ರಾಜ್ಯವಾಳಹತ್ತಿದನು. ಈ ಕಾಲದಲ್ಲಿ ಬಸವೇಶ್ವರನು ಕಲ್ಯಾಣದಲ್ಲಿದ್ದುಕೊಂಡು ಅನೇಕ ಮಹತ್ವದ ಧಾರ್ಮಿಕ ಕಾರ್ಯಗಳನ್ನು ಮಾಡಿದನು. ಈ ಪ್ರಕಾರ ನಾವು ಬಸವೇಶ್ವರನ ಜೀವಿತದ ಕಾಲದಲ್ಲಿ ನಾಲ್ಕು ವಿಭಾಗಗಳನ್ನು ಮಾಡಬಹುದಾಗಿದೆ. ಪ್ರಸ್ತುತ ಲೇಖದಲ್ಲಿ ನಾವು ಮೊದಲನೆಯ ಭಾಗವನ್ನು ತೆಗೆದುಕೊಂಡು ನಮಗೆ ಕಂಡುಬಂದ ಕೆಲವು ಸಂಗತಿಗಳನ್ನು ವಾಚಕರೆದುರಿಗೆ ಇಡುತ್ತೇವೆ. ಆದರೆ ಇದರಲ್ಲಿ ನಾವು ಬಸವೇಶ್ವರನ ಸಂಬಂಧವಾಗಿ ಪ್ರತಿವರ್ಷ ಯಾವ ಯಾವ ಸಂಗತಿಗಳು ಘಟಿಸಿದವೆಂಬುದನ್ನು

ಹೇಳಲು ಶಕ್ಯವಿಲ್ಲ. ಆ ತರದ ವಿವೇಚನೆಯನ್ನು ವಾಚಕರು ನಮ್ಮಿಂದ ಅಪೇಕ್ಷಿಸಲೂಬಾರದು. ಆದರೆ ನಮಗೆ ಕಂಡುಬಂದ ಕೆಲವು ಸಂಗತಿಗಳನ್ನು ಮಾತ್ರ ವಾಚಕರ ಅವಗಾಹನೆಗೋಸ್ಕರ ಇಲ್ಲಿ ಇಡುತ್ತೇವೆ.

ಹರಿಹರ ಕವಿಯು ತನ್ನ ಬಸವೇಶ್ವರ ರಗಳೆಯಲ್ಲಿ ಬಸವೇಶ್ವರನು ತೀರ ಸಣ್ಣವನಿರುವಾಗಲೇ ಅವನ ತಾಯಿ ತಂದೆಗಳು ತೀರಿಕೊಂಡರೆಂದು ಹೇಳುತ್ತಾನೆ. ಇದು ನಿಜವಿರಬಹುದೋ ಹೇಗೆ, ಎಂಬುದನ್ನು ಮಾತ್ರ ನಾನು ಇಲ್ಲಿ ವಿವೇಚಿಸಲು ಎಣಿಸಿದ್ದೇವೆ. ಹರಿಹರನ ಈ ಹೇಳಿಕೆಯಲ್ಲಿ ಸತ್ಯತೆಯು ಇರುತ್ತದೆಂದು ನಮ್ಮ ಅಭಿಪ್ರಾಯವಾಗಿರುತ್ತದೆ. ಇದರ ಕಾರಣಗಳನ್ನು ನಾವು ವಾಚಕರೆದುರಿಗೆ ಇಡಲು ಇಲ್ಲಿ ಪ್ರಯತ್ನಿಸುತ್ತೇವೆ.

ಬಸವೇಶ್ವರನ ತಂದೆ ತಾಯಿಗಳು ಅವನು ತೀರ ಚಿಕ್ಕವನಿರುವಾಗ್ಗೆ ತೀರಿದರೆಂಬುದನ್ನು ಊಹಿಸಲಿಕ್ಕೆ ಬಾಗೇವಾಡಿಯಲ್ಲಿಯ ಸಂಗಮೇಶ್ವರ ದೇವಸ್ಥಾನದ ಪೂರ್ವಕಾಲದ ಪರಿಸ್ಥಿತಿ ಮತ್ತು ಬಸವೇಶ್ವರನು ತನ್ನ ವಚನಗಳಿಗೋಸ್ಕರ 'ಕೂಡಲಸಂಗಮದೇವ' ಎಂಬ ಮುದ್ರಿಕೆಯನ್ನು ಸ್ವೀಕರಿಸಿದ್ದು ಈ ಸಂಗತಿಗಳನ್ನು ನಾವು ವಿವೇಚಿಸಬೇಕಾಗುತ್ತದೆ. ನಾವು ಕೈಕೊಂಡ ವಿಷಯಕ್ಕೆ ಈ ವಿವೇಚನೆಗಳ ಸಂಬಂಧವೇನೆಂಬುದನ್ನು ವಾಚಕರು ಪ್ರಶ್ನೆ ಮಾಡಬಹುದು. ಆದರೆ ಅವರು ಈ ಲೇಖವನ್ನು ಕಡೆತನಕ ತಾಳ್ಮೆಯಿಂದ ಓದಿ ಆ ಮೇಲೆ ಈ ಪ್ರಶ್ನೆಯನ್ನು ಮಾಡಬೇಕೆಂದು ನಮ್ಮ ಸವಿನಯ ವಿಜ್ಞಾಪನೆ ಇದೆ. ನಾವು ಮೊದಲು ಬಾಗೇವಾಡಿಯಲ್ಲಿಯ ಸಂಗಮೇಶ್ವರ ದೇವಸ್ಥಾನದ ವಿಷಯವಾಗಿ ಕೆಲವು ಸಂಗತಿಗಳನ್ನು ವಿವರಿಸುತ್ತೇವೆ.

## ಬಾಗೇವಾಡಿಯ ಸಂಗಮೇಶ್ವರನ ದೇವಸ್ಥಾನದ ಪೂರ್ವ ಕಾಲದ ಸ್ಥಿತಿ.

ಬಾಗೇವಾಡಿಯಲ್ಲಿಯ ಈಗಿನ ಈ ದೇವಸ್ಥಾನದ ಅಚ್ಚಿನ ಚಿತ್ರವನ್ನು ನಮ್ಮ ವಾಚಕರಲ್ಲನೇಕರು ನೋಡಿರಬಹುದು. ಅದು "ಬಸವೇಶ್ವರನ ವಚನಗಳು" ಎಂಬ ನಮ್ಮ ಪುಸ್ತಕದ ೩ನೇ ಆವೃತ್ತಿಯಲ್ಲಿ

ಅಚ್ಚಾಗಿದೆ. ಅದು ಈಗ ಸೌಂದರ್ಯವಿಹೀನವಾಗಿ ಒಂದು ಗುಡಿಸ ಲಿನಂತೆ ತೋರುತ್ತದೆ. ಅದರ ಮಧ್ಯ ಭಾಗದಲ್ಲಿ ಅಸ್ತವ್ಯಸ್ತವಾದ ಒಂದು ಕಟ್ಟಡವಿರುತ್ತದೆ. ದೇವಸ್ಥಾನದ ಒಳಗೂ ಹೊರಗೂ ಬಸವೇ ಶ್ವರನ ಹೆಸರಿಗೆ ಶೋಭಿಸುವಂಥ ಯಾವ ರಚನೆಯೂ ಇರುವದಿಲ್ಲ. ಆದರೆ ಈ ಸ್ಥಿತಿಯು ಮೊದಲಿನ ಕಾಲದಲ್ಲಿದ್ದಂತೆ ನಮಗೆ ಕಂಡು ಬರುವದಿಲ್ಲ. ಆಗ ಅದು ವಿಶಾಲವಾದ ಸುಂದರ ದೇವಾಲಯುವಾಗಿ ತ್ತೆಂದು ತೋರುತ್ತವೆ. ಆದರ ಈಗಿನ ಕಟ್ಟಡದ ಗೋಡೆಗಳಲ್ಲಿ ಪುರಾ ತನ ಕಾಲದ ಸುಂದರವಾದ ಅವಶೇಷಗಳು ಇನ್ನೂ ನಮ್ಮ ಕಣ್ಣಿಗೆ ಬೀಳುತ್ತಿವೆ. ನಾವು ಊಹಿಸಲಿಕ್ಕೆ ಈಗ ಉಳಿದ ಹಲ ಕೆಲವು ಈ ಅವ ಶೇಷಗಳೇ ಆಧಾರಗಳು. ಕಟ್ಟಡದ ತೀರ ಪಶ್ಚಿಮ ಕೊನೆಯ ಭಾಗವು ಪುರಾತನ ಕಾಲದ್ದಿರುತ್ತದೆ. ಇದು ಅದರ ಗೋಡೆಗಳ ಹೊಂದಿಕೆಗ ಳಿಂದ ತಿಳಿದು ಬರುತ್ತದೆ. ಈ ಭಾಗವು ಗರ್ಭಗುಡಿಯು. ಈ ಗುಡಿಯ ಮೇಲ್ಭಾಗವು ಎಂದೋ ಬಿದ್ದು ಹೋಗಿದೆ. ಹೀಗೆ ಬಿದ್ದು ಹೋದ ಭಾಗವನ್ನು ಯಾರೋ ಶಿಲ್ಪ ಕಲೆಯ ಜ್ಞಾನವಿಲ್ಲದವರು ಸಿಕ್ಕ ಹಾಗೆ ಮುಚ್ಚಿ ಬಿಟ್ಟಿದ್ದಾರೆ. ಆದರೆ ಅದರ ಕೆಳಗಿನ ಗೋಡೆಗಳು ಮಾತ್ರ ಮೊದ ಲಿನ ಶಿಲ್ಪಿಗರ ಚಾತುರ್ಯವನ್ನು ತೋರಿಸುತ್ತವೆ. ಗುಡಿಯ ಈಗಿನ ಮುಖ್ಯ ಬಾಗಿಲವು ದಕ್ಷಿಣಾಭಿಮುಖವಾಗಿದೆ. ಅದನ್ನು ಪ್ರವೇಶಿಸಿದಲ್ಲಿ ಎಡ ಕ್ಕಿರುವ ಕೋಣೆಯೇ ಮೇಲೆ ಹೇಳಿದ ಗರ್ಭಗುಡಿಯು. ಅಲ್ಲಿಯೇ ಸಂಗಮೇ ಶ್ವರನ ಸ್ಥಾನವಿದೆ. ಕೋಣೆಯುಲ್ಲೆಲ್ಲ ಕಗ್ಗತ್ತಲೆಯು ಕವಿದಿರುತ್ತದೆ. ಆದರೆ ಅದರ ಹೆಬ್ಬಾಗಿಲಿನ ಮೇಲ್ಭಾಗವನ್ನು ನೋಡಿದರೆ ಅದರ ಮೇಲೆ ಸುಂದರವಾದ ಕೊರೆದ ಚಿತ್ರಗಳಿವೆ. ದೇವಸ್ಥಾನದ ಇತರ ಭಾಗಗಳು ಸೌಂದರ್ಯವಿಹೀನವಾಗಿದ್ದರೂ ಈ ಚಿತ್ರಗಳನ್ನು ನೋಡಿದಲ್ಲಿ ಅವುಗಳು ಈ ದೇವಸ್ಥಾನದ ಪುರಾತನ ಇತಿಹಾಸವನ್ನು ತಿಳಿಯಪಡಿಸುತ್ತವೆ. ಅವು ಗಳ ಸೌಂದರ್ಯವು ಶಿಲ್ಪಿಗರ ಚಾತುರ್ಯವನ್ನು ಚನ್ನಾಗಿ ಪ್ರದರ್ಶಿ ಸುತ್ತವೆ. ಅದೇ ಬಗೆಯ ಚಿತ್ರಗಳು ದೇವಾಲಯದ ಉತ್ತರ ದಿಕ್ಕಿನ ಗೋಡೆಗಳಲ್ಲಿ ಅಲ್ಲಲ್ಲಿ ಕಾಣಬರುತ್ತವೆ. ಅಲ್ಲದೆ ಇಲ್ಲಿ ಪುರಾತನ ಕಾಲದ ಅಸ್ತಿವಾರದ ಅವಶೇಷಗಳೂ ಕಣ್ಣಿಗೆ ಬೀಳುತ್ತಿವೆ. ಅವುಗಳ ವಿಸ್ತಾರ ವನ್ನು ನಾವು ನಿರೀಕ್ಷಿಸಿದಲ್ಲಿ ಈ ದೇವಾಲಯುವು ಹಿಂದಿನ ಕಾಲದಲ್ಲಿ ಬಹು ದೊಡ್ಡದಿತ್ತೆಂದು ಸ್ಪಷ್ಟವಾಗಿ ತೋರುತ್ತದೆ. ಮುಂದೆ ಈ ದೇವಾ

ಲಯವು ಹೇಗೋ ಯಾವ ಕಾಲಕ್ಕೋ ನಾಶವಾಯಿತು. ನಾಶವಾದ ಭಾಗವನ್ನು ಪುನಃ ಕಟ್ಟಿದ್ದಾರೆ. ಕಟ್ಟಿದ್ದರಲ್ಲಿ ತಳಹದಿಯ ಕಲ್ಲುಗಳೂ ಈ ಕಲ್ಲುಗಳ ಮೇಲೆ ಮೊದಲಿನ ಕಾಲದ ಗೋಡೆಗಳೂ ಇರುತ್ತವೆ. ಈ ಗೋಡೆಗಳಲ್ಲಿ ಚಿತ್ರಗಳುಳ್ಳ ಹಳೇ ಕೆಲವು ಕಲ್ಲುಗಳು ಸಿಕ್ಕಿಬಿದ್ದಿವೆ. ಈ ಚಿತ್ರಗಳೆಲ್ಲವು ಸುಂದರವಾದವುಗಳು. ಈ ಎಲ್ಲ ಅವಶೇಷಗಳು ಪೂರ್ವಕಾಲದಲ್ಲಿ ಇದು ಒಂದು ದೊಡ್ಡ ದೇವಾಲಯವಾಗಿತ್ತೆಂಬುದನ್ನು ತೋರಿಸುತ್ತವೆ. ಗರ್ಭ ಗುಡಿಯ ಹೊರಗೋಡೆಗಳ ಮೇಲೆ ಜನರು ಸುಣ್ಣವನ್ನು ಬಳಿಯುತ್ತ ಬಂದಿದ್ದಾರೆ ಅದರಿಂದ ಅಲ್ಲಿ ಒಂದು ಬಹು ದಪ್ಪವಾದ ಲೇಪವಾಗಿರುತ್ತಿದೆ. ಈ ಲೇಪವನ್ನು ಕೆತ್ತಿಹಾಕಿ ಬಿಡಲಿಕ್ಕೆ ನಾವು ಇಲ್ಲಿಯ ಪ್ರಮುಖರಿಗೆ ಅನೇಕ ಸಾರಿ ಸೂಚಿಸಿದೆವು. ಆದರೆ ಇದರಿಂದ ಏನೂ ಪ್ರಯೋಜನವಾಗಿರುವದಿಲ್ಲ. ಒಂದು ವೇಳೆ ಅವರು ಅದನ್ನು ತೆಗೆದುಹಾಕಿದಲ್ಲಿ ಅದರ ಒಳಗಿನ ಕೆಲಸಗಳನ್ನು ಪರೀಕ್ಷಿಸಲಿಕ್ಕೆ ಬಹಳ ಅನುಕೂಲವಾಗುತ್ತದೆ. ಈ ದೇವಾಲಯಕ್ಕೆ ಹೊಂದಿ ಪೂರ್ವ ದಿಕ್ಕಿಗೆ ಒಂದು ದೊಡ್ಡ ಬಾವಿಯಿದೆ. ಅದರ ಸುತ್ತಲೂ ಪಾವಟಿಗೆಗಳಿದ್ದು ಅದು ಬಹು ವಿಶಾಲವಾದ ಜಲಾಶಯವು. ಇದು ದೇವಾಲಯದ ಪಾವಿತ್ರ್ಯತೆಯನ್ನು ಸೂಚಿಸುತ್ತವೆ. ದೇವಾಲಯವು ಪುರಾತನವೆಂಬುದಕ್ಕೆ ಇನ್ನೊಂದು ಕಾರಣವಿದೆ. ಬಾಗೇವಾಡಿಯಲ್ಲಿ ಒಂದು ಶಿಲಾಶಾಸನವಿದೆ. ಅದು ದೇವಗಿರಿಯ ಪ್ರಸಿದ್ಧ ಅರಸನಾದ ಕನ್ನರನ ಸೇನಾಪತಿಯೂ ಅವನ ಮಾಂಡಲಿಕನೂ ಆದ ಮಲ್ಲ ಅಥವಾ ಮಲ್ಲಶೆಟ್ಟಿ ಈತನದು ಇದೆ. (ಅರ್ಜುನವಾಡ ಶಿಲಾಶಾಸನವ ನಮ್ಮ ವಿವರಣೆ ನೋಡಿರಿ.) ಈ ಮಲ್ಲನು ಮುದಗಲ್ಲದಲ್ಲಿದ್ದು ಕರ್ನಾಟಕದ ಪೂರ್ವ ಭಾಗವನ್ನೆಲ್ಲ ಆಳುತ್ತಿದ್ದನು. ಈತನು ಆಳುತ್ತಿದ್ದುದು ೧೩ನೇ ಶತಮಾನದ ಆದಿಭಾಗದಲ್ಲಿ. ಈ ಶಿಲಾಶಾಸನದಲ್ಲಿ ಈ ದೇವಾಲಯದ ಉಲ್ಲೇಖವಿದೆ. ಅದು ಈಗ ಮಾಮಲೇದಾರ ಕಚೇರಿಯ ಸಮೀಪದಲ್ಲಿ ಬಿದ್ದುಬಿಟ್ಟಿರುತ್ತದೆ. ಇದರ ಮೇಲಿಂದಲೂ ಈ ದೇವಾಲಯವು ಪುರಾತನದ್ದೆಂದು ಕಂಡುಬರುತ್ತದೆ. ಈ ಮಲ್ಲ ಸೇನಾಪತಿಯ ಮಗನ ಹೆಸರು ಚಾವುಂಡನು. ಈ ಚಾವುಂಡನು ಅರ್ಜುನವಾಡ ಶಿಲಾಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿದ್ದಾನೆ. ಈ ಮಲ್ಲನೂ ಅವನ ಈ ಮಗನೂ ಬಾಗೇವಾಡಿ ಮತ್ತು ಅರ್ಜುನವಾಡ ಇಲ್ಲಿ ಇದ್ದ ಬಸವನ ವಂಶಜರ

ಮೇಲೆ ಭಕ್ತಿಯನ್ನು ತಾಳಿ ಈ ದೇಣಿಗೆಗಳನ್ನು ಕೊಟ್ಟಂತೆ ನಮಗೆ ತೋರುತ್ತದೆ.

ಈ ಎಲ್ಲ ಸಂಗತಿಗಳಿಂದ ಬಾಗೇವಾಡಿಯಲ್ಲಿಯ ಈ ಶಿವಾಲಯವು ಬಸವೇಶ್ವರನ ಕಾಲದಲ್ಲಿ ಬಹು-ಮಹತ್ವದ ಮತ್ತು ಪ್ರಸಿದ್ಧವಾದ ದೇವಾಲಯವಾಗಿತ್ತೆಂಬುದನ್ನೂ ಅದು ಪವಿತ್ರವಾದುದೆಂಬುದನ್ನೂ ತಿಳಿಸುವದೇ ನಮ್ಮ ಮುಖ್ಯ ಉದ್ದೇಶವಾಗಿದೆ. ಪವಿತ್ರವಾದುದರಿಂದಲೇ ಬಸವನ ತಾಯಿಯಾದ ಮಾದಲಾಂಬಿಕೆಯು ನಂದೀ ವ್ರತವನ್ನು ಇಲ್ಲಿ ಆಚರಿಸಿದಳು. ಮತ್ತು ಒಬ್ಬ ಮಗನನ್ನೂ ಪಡೆದಳು. ಹೀಗೆ ಅವಳ ಇಚ್ಛೆಯು ಪೂರ್ಣವಾದ್ದರಿಂದ ಈ ದೇವಾಲಯಕ್ಕೋಸ್ಕರ ಅವಳು ವಿಶೇಷ ಭಕ್ತಿಭಾವವನ್ನು ತಾಳಿರಲಿಕ್ಕೆ ಬೇಕು. ಮತ್ತು ಆಕೆಯೂ ಆಕೆಯ ಗಂಡನಾದ ಮಾದರಸನೂ ಈ ದೇವಸ್ಥಾನದ ವಿಷಯವಾಗಿ ಮುಂದೆ ಹಾಗೆಯೇ ಆಚರಿಸಿರಲಿಕ್ಕೆ ಬೇಕು. ಬಸವನು ದೇವಸ್ಥಾನದ ಪಾವಿತ್ರ್ಯವನ್ನೂ ಅರಿತಿರಬಹುದು. ಹೀಗಿದ್ದರೂ ಕೂಡ ಬಸವನು ತಾನು ರಚಿಸಿದ ವಚನಗಳನ್ನು ಈ ಬಾಗೇವಾಡಿ ಸಂಗಮದೇವನ ಹೆಸರಿನಿಂದ ರಚಿಸದೆ ದೂರವಿರುವ ಬೇರೊಂದು ದೇವಾಲಯ ಅಂದರೆ ಸಂಗಮಗ್ರಾಮದಲ್ಲಿಯ ಕೂಡಲಸಂಗಮನ ಮುದ್ರಿಕೆಯನ್ನು ತೆಗೆದುಕೊಂಡಿದ್ದಾನೆ. ಈ ಸ್ಥಿತಿಯು ಉಂಟಾಗಲಿಕ್ಕೆ ಅವನಿಗೆ ಏನು ಕಾರಣವೆಂಬುದನ್ನು ನಾವು ಶೋಧಿಸತಕ್ಕದ್ದು. ಯಾಕಂದರೆ ಇದರ ಮೇಲೆಯೇ ನಾವು ಮುಂದೆ ಹೇಳುವ ಅನೇಕ ವಿಷಯಗಳು ಅವಲಂಬಿಸಿರುತ್ತವೆ.

ಮುಡಿವಾಳ ಮಾಚಿದೇವನು ಬಾಗೇವಾಡಿಗೆ ಸಮೀಪವಿರುವ ಹಿಪ್ಪರಗಿಯವನು. ಈ ಗ್ರಾಮದಲ್ಲಿ ಕಲ್ಲಿನಾಥನ ದೇವಾಲಯವಿದೆ. ಈ ಶರಣನು ತನ್ನ ವಚನಗಳನ್ನು ಈ ಕಲ್ಲಿನಾಥನ ಹೆಸರಿನಿಂದಲೇ ರಚಿಸಿದ್ದಾನೆ. ಹಾಗೆಯೇ ಡೋಹರ ಕಕ್ಕಯ್ಯ, ಸಿದ್ಧರಾಮ, ಅಮುಗಿದೇವ ಇವರೆಲ್ಲರೂ ತಮ್ಮ ತಮ್ಮ ಗ್ರಾಮಗಳಲ್ಲಿರುವ ಶಿವಲಿಂಗಗಳ ಮೇಲೆ ಭಕ್ತಿಯನ್ನು ತಾಳಿದವರಾಗಿ ಅವುಗಳ ಹೆಸರುಗಳನ್ನೇ ತಮ್ಮ ಮುದ್ರಿಕೆಗಳಾಗಿ ಇಟ್ಟುಕೊಂಡು ತಮ್ಮ ವಚನಗಳನ್ನು ರಚಿಸಿದ್ದಾರೆ. ಬಸವೇಶ್ವರನು ಅವರಂತೆಯೇ ಯಾಕೆ ವರ್ತಿಸಿಲ್ಲ? ಅವನು ತನ್ನ ಗ್ರಾಮದಲ್ಲಿರುವ ಪ್ರಸಿದ್ಧ ದೇವಾಲಯವನ್ನು ಬಿಟ್ಟು ಕೊಟ್ಟು ತನಗೆ ದೂರದಲ್ಲಿರುವ ಕೂಡಲ ಸಂಗಮೇಶ್ವರನ ಮುದ್ರಿಕೆಯನ್ನು ಏಕೆ ತೆಗೆದುಕೊಂಡನು? ಈ ವಿಷ

...ವನ್ನು ನಾವು ಚನ್ನಾಗಿ ವಿಚಾರ ಮಾಡತಕ್ಕದ್ದು. ಹೀಗೆ ಮಾಡ...ಗಿ ನಮಗೆ ತೋರುವದೇನಂದರೆ, ಬಸವೇಶ್ವರನು ತೀರ ಚಿಕ್ಕವನಿ...ರುವಾಗಲೇ ಅವನ ತಾಯಿ ತಂದೆಗಳು ಹರಿಹರ ಕವಿಯು ಹೇಳುವಂತೆ ತೀರಿಕೊಂಡಿರಬೇಕು, ಆದ್ದರಿಂದ ಅವನ ಮುತ್ತಜ್ಜಿಯು ಅವನನ್ನು ಬಾಗೇವಾಡಿಯಿಂದ ತೆಗೆದುಕೊಂಡು ಹೋಗಿ ಸ್ವಗ್ರಾಮವಾದ ಸಂಗಮದಲ್ಲಿ ಪೋಷಿಸಿರಬೇಕು, ಬಸವೇಶ್ವರನು ಅಲ್ಲಿಯೇ ಚಿಕ್ಕಂದಿನಿಂದ ಬೆಳೆದದ್ದರಿಂದ ಬಾಗೇವಾಡಿ ಸಂಗಮನಾಥನ ಬದಲು ಅವನು ಕಪ್ಪಡಿಯ ಸಂಗಮನಾಥನ ವಿಷಯವಾಗಿ ಭಕ್ತಿಯನ್ನು ತಾಳಿದವನಾದನು. ಆದ್ದರಿಂದ ಅವನು ಬಾಗೇವಾಡಿಯ ಸಂಗಮೇಶ್ವರನ ಹೆಸರನ್ನು ಬಿಟ್ಟುಕೊಟ್ಟು ಈ ಕಪ್ಪಡಿ ಸಂಗಮನ ಹೆಸರಿನ ಮುದ್ರಿಕೆಯನ್ನೇ ತೆಗೆದುಕೊಂಡಿರಬೇಕೆಂದು ನಮ್ಮ ಊಹೆ ಇರುತ್ತದೆ.

ಒಂದು ವೇಳೆ ಬಸವನ ತಂದೆ ತಾಯಿಗಳು ಜೀವಂತವಿದ್ದಿದ್ದರೆ ಬಸವನು ಅವರೊಡನೆ ಚಿಕ್ಕಂದಿನಿಂದ ಬಾಗೇವಾಡಿಯಲ್ಲಿಯೇ ಕಾಲ ಕಳೆಯುತ್ತಿದ್ದನು. ಮತ್ತು ಅಲ್ಲಿಯ ದೇವಾಲಯಕ್ಕೆ ಆಗಿಂದಾಗ್ಗೆ ದರ್ಶನ ಕೊಡುತ್ತ ಅದರ ವಿಷಯವಾಗಿ ಭಕ್ತಿಭಾವವನ್ನು ತಾಳುತ್ತಿದ್ದನು. ಆದರೆ ಅವನ ತಾಯಿತಂದೆಗಳು ತೀವ್ರವಾಗಿ ತೀರಿದ್ದರಿಂದ ಈ ಸ್ಥಿತಿಯು ಅವನಿಗೆ ಉಂಟಾಗಲಿಲ್ಲ. ಅವನು ತನ್ನ ಮುತ್ತಜ್ಜಿಯೊಡನೆ ಬೇರೆ ಗ್ರಾಮಕ್ಕೆ ಹೋಗಿಬಿಟ್ಟನು. ಆದ್ದರಿಂದ ಬಸವನು ತನ್ನ ವಚನಗಳ ಸಲುವಾಗಿ ಬಾಗೇವಾಡಿಯ ಸಂಗಮೇಶನ ಹೆಸರನ್ನು ಬಿಟ್ಟುಕೊಟ್ಟಿರಬೇಕೆಂದು ನಮಗೆ ತೋರುತ್ತದೆ. ಈ ಸಂಗತಿಯು ಬಸವನ ತಂದೆ ತಾಯಿಗಳು ತೀವ್ರ ತೀರಿರಬೇಕೆಂಬುದನ್ನು ಸೂಚಿಸುತ್ತದೆ.

ಆದರೆ ಅನೇಕರು ಬಸವನು ಯಜ್ಞೋಪವೀತವನ್ನು ತ್ಯಜಿಸಿದ ಬಳಿಕ ಸಂಗಮನಲ್ಲಿಗೆ ಹೋಗಿ ವಾಸಮಾಡಿ ಅಲ್ಲಿಯ ದೇವಾಲಯಕ್ಕೋಸ್ಕರ ಭಕ್ತಿಭಾವವನ್ನು ವಹಿಸಿದವನಾದ್ದರಿಂದ ಕೂಡಲಸಂಗಮನ ಮುದ್ರಿಕೆಯನ್ನು ಹಿಂದಿನಿಂದ ಸಹ ಏಕೆ ಸ್ವೀಕರಿಸಬಾರದೆಂದು ಪ್ರಶ್ನೆಮಾಡಬಹುದು. ಆದರೆ ಈ ಸಂಗತಿಯು ಘಟಿಸಿದ ಪೂರ್ವದಲ್ಲಿಯೇ ಅಂದರೆ ಅತಿ ಚಿಕ್ಕವಯಸ್ಸಿನಲ್ಲಿಯೇ ಅವನು ಕಪ್ಪಡಿ ಸಂಗಮನ ಬಗ್ಗೆ ಭಕ್ತಿ

ಯನ್ನು ತಾಳಿದವನಾಗಿದ್ದನೆಂದು ಅವನ ಕೆಲವು ಆಖ್ಯಾಯಿಕೆಗಳಿಂದ ತಿಳಿದುಬರುತ್ತದೆ. ಆದ್ದರಿಂದ ಇಂಥ ವಯಸ್ಸಿನಲ್ಲಿಯೇ ಅಂದರೆ ಬಾಲಕನಿರುವಾಗ್ಗೆಯೇ ಅವನು ಸಂಗಮ ಗ್ರಾಮದಲ್ಲಿರಬೇಕೆಂದು ನಮಗೆ ತೋರುತ್ತದೆ. ಬಾಲಕನಿರುವಾಗ್ಗೆ ಕೂಡಲಸಂಗಮನ ವಿಷಯವಾಗಿ ಭಕ್ತಿಯನ್ನು ತಾಳಿದ್ದರಿಂದ ಅವನು ತನ್ನ ತಂದೆ ತಾಯಿಗಳು ತೀವ್ರವೇ ಸತ್ತು ಹೋಗಿರಬೇಕು, ಆಗ ಅವನು ಸ್ವಗ್ರಾಮವನ್ನು ಬಿಟ್ಟು ಕೊಟ್ಟು ಕೂಡಲ ಸಂಗಮನಾಥನಲ್ಲಿ ಬಂದಿರಬೇಕು ಎಂದು ತೋರುತ್ತದೆ. ಈ ಆಖ್ಯಾಯಿಕೆಯು ಯಾವದೆಂದರೆ –

ಒಂದು ದಿನ ಬಸವನು ಇತರ ಬ್ರಾಹ್ಮಣ ಬಾಲಕರೊಂದಿಗೆ ಬಾಗೇವಾಡಿ ದೇವಸ್ಥಾನದ ಮುಂದಿರುವ ಬಾವಿಯಲ್ಲಿ ಜಲಕ್ರೀಡೆಯನ್ನು ಮಾಡುತ್ತಿರುವಾಗ ಒಬ್ಬ ಬಾಲಕನು ಮುಳುಗಿ ಸತ್ತುಹೋದನು. ಅವನು ಸಾಯುವದಕ್ಕೆ ಕಾರಣನಾದವನು ಬಸವನೆಂಬ ಆರೋಪವು ಅವನ ಮೇಲೆ ಹೊರಿಸಲ್ಪಟ್ಟಿತು. ಆಗ ಅದನ್ನು ದೂರಮಾಡುವದಕ್ಕೋಸ್ಕರ ಅವನು ಆದೇ ದೇವಾಲಯದಲ್ಲಿರುವ ಶಿವಲಿಂಗಕ್ಕೆ ಮೊರೆ ಹೊಗದೆ ಇತರ ಬ್ರಾಹ್ಮಣರೊಡನೆ ಕಪ್ಪಡಿ ಸಂಗಮಕ್ಕೆ ನಡೆದು ಬಂದನು. ಆಗ ದಾರಿಯಲ್ಲಿನ್ನ ಕೃಷ್ಣೆಯು ಅವನಿಗೆ ತಾನಾಗಿಯೇ ದಾರಿಕೊಟ್ಟಿತು. ನದಿಯನ್ನು ದಾಟಿ ಬಸವನು ಸಂಗಮನ ಮೂರ್ತಿಯ ಇದಿರಿಗೆ ಬಂದು ನಿಲ್ಲಲು ಆ ಮೂರ್ತಿಯಿಂದ "ಬಸವನು ಬ್ರಾಹ್ಮಣ ಬಾಲಕನನ್ನು ಮುಳುಗಿಸಲಿಲ್ಲ." ಎಂಬ ಶಬ್ದವು ಹೊರಟಿತು. ಈ ವಿಷಯದ ಬಗ್ಗೆ ಇಲ್ಲಿ ನಾವು ಹೇಳತಕ್ಕ ಸಂಗತಿಯೇನಂದರೆ, ಬಸವನು ಬಾಗೇವಾಡಿಯಿಂದ ಹೊರಗೆ ಹಾಕಲ್ಪಟ್ಟ ಬಳಿಕ ಮಾತ್ರವಲ್ಲ, ಅದಕ್ಕೂ ಪೂರ್ವದಲ್ಲಿಯೇ ಈ ಕಪ್ಪಡಿ ಸಂಗಮೇಶನಲ್ಲಿ ಭಕ್ತಿಭಾವವು ಅವನಲ್ಲಿ ಉತ್ಪನ್ನವಾಗಿತ್ತು. ಆದರೆ ಅವನು ಬಾಗೇವಾಡಿಯಲ್ಲಿರದ್ದರಿಂದ ಅಲ್ಲಿಯ ಶಿವಲಿಂಗದ ವಿಷಯವಾಗಿ ಅವನಲ್ಲಿ ಅಷ್ಟು ಭಕ್ತಿಯು ಉತ್ಪನ್ನವಾಗಿರಲಿಲ್ಲ. ಅವನ ತಂದೆ ತಾಯಿಗಳು ಅವನ ಬಾಲ್ಯದಲ್ಲಿ ತೀರಿ ಹೋದ್ದರಿಂದ ಅವನ ಮುತ್ತಜ್ಜಿಯು ಅವನನ್ನು ಬಾಗೇವಾಡಿಯಲ್ಲಿರಿಸದೆ ಸಂಗಮಕ್ಕೆ ಕರೆದುಕೊಂಡು ಹೋಗಿ ಪೋಷಿಸಿದಳು. ಆದ್ದರಿಂದ ಬಸವನು ಕಪ್ಪಡಿ ಸಂಗಮನ ಕೇವಲ ಭಕ್ತನಾಗಿ ಅವನ ಹೆಸರಿನಿಂದ ತನ್ನ ವಚನಗಳನ್ನು ರಚಿಸಿದನು. ಒಂದು ವೇಳೆ ಅವನ ತಾಯಿ

ತಂದೆಗಳು ಜೀವಂತ ಇದ್ದರೆ ಅವನು ಬಾಗೇವಾಡಿಯಲ್ಲಿಯೇ ಇರುತ್ತಿದ್ದನು. ಆದ್ದರಿಂದ ನಾವು ಮೇಲೆ ಹೇಳಿದ ಪರಿಸ್ಥಿತಿಯು ಉಂಟಾಗುತ್ತಿರಲಿಲ್ಲ.

ಈ ಸಂಗತಿಯು ಸಿದ್ಧವಾದ ಬಳಿಕ ಬಸವನನ್ನು ಪೋಷಿಸಿದ ಈ ಮುತ್ತಜ್ಜಿಯು ಯಾರು ಎಂಬ ಪ್ರಶ್ನೆಯು ಬರುವದು. ಈಕೆಯು ಅವನ ತಂದೆಯ ತಾಯಿಯಾಗಿರದೆ ತಾಯಿಯ ತಾಯಿಯಾಗಿರಬೇಕೆಂದು ನಮಗೆ ತೋರುತ್ತದೆ. ತಂದೆಯ ತಾಯಿಯಾಗಿದ್ದರೆ ಬಸವನು ಬಾಗೇವಾಡಿಯಲ್ಲಿಯೇ ಅವಳೊಡನೆ ಇರುತ್ತಿದ್ದನು. ಅವಳು ತಾಯಿಯ ತಾಯಿ ಅಂದರೆ ಮಾದಲಾಂಬಿಕೆಯ ತಾಯಿಯಾಗಿದ್ದರಿಂದ ಬಸವನು ಬಾಗೇವಾಡಿಯನ್ನು ಬಿಡಬೇಕಾಯಿತು. ಮತ್ತು ಸಂಗಮಕ್ಕೆ ಹೋದ್ದರಿಂದ ಮಾದಲಾಂಬಿಕೆಯ ತವರೂರು ಸಂಗಮವಾಗಿರಬೇಕು. ಮಾದಲಾಂಬಿಕೆಯು ತೀವ್ರ ತೀರಿಕೊಂಡದ್ದರಿಂದ ಅವಳ ತಾಯಿಯು ಈ ಬಾಲಕನನ್ನು ಬಾಗೇವಾಡಿಯಿಂದ ತನ್ನಲ್ಲಿಗೆ ಕರೆದುಕೊಂಡುಹೋಗಿ ಜೋಕೆ ಮಾಡಿಬೇಕು. ಈ ಸಂಗಮ ಗ್ರಾಮಕ್ಕೆ ನೆರೆಯಾಗಿ ೨ ಮೈಲುಗಳ ಮೇಲೆ ಕಪ್ಪಡಿ ಸಂಗಮನ ಪ್ರಸಿದ್ಧ ದೇವಸ್ಥಾನವಿದೆ. ಅದರ ಸಾನ್ನಿಧ್ಯವು ಬಸವನಿಗೆ ಚಿಕ್ಕಂದಿನಲ್ಲಿ ಒದಗಲು ಅವನಲ್ಲಿ ಅದರ ಬಗ್ಗೆ ಬಹಳ ಭಕ್ತಿಯು ಉಂಟಾಗಿರಬೇಕು. ಆದ್ದರಿಂದ ಬಸವನು ತನ್ನ ವಚನಗಳಿಗೆ ಮುದ್ರಿಕೆಯಾಗಿ ಆ ದೇವರ ಹೆಸರನ್ನೇ ತೆಗೆದುಕೊಂಡಿದ್ದಾನೆ ಈ ಎಲ್ಲ ಸಂಗತಿಗಳನ್ನು ವಾಚಕರು ಚನ್ನಾಗಿ ವಿಚಾರ ಮಾಡಿನೋಡಿದಲ್ಲಿ ಹರಿಹರ ಕವಿಯು ಹೇಳಿದ್ದರಲ್ಲಿ ತಥ್ಯಾಂಶವಿರಬೇಕೆಂದು ಅವರಿಗೆ ತೋರದೆ ಇರಲಾರದು.

## ಬಸವನ ಶೈಶವಾವಸ್ಥೆ.

ಸಂಗಮ ಗ್ರಾಮದಲ್ಲಿ ಬಸವೇಶ್ವರನು ತನ್ನ ಮುತ್ತಜ್ಜಿಯ ಪೋಷಣೆಯಲ್ಲಿದ್ದುಕೊಂಡು ತನ್ನ ಬಾಲ್ಯವನ್ನು ಕಳೆದಿರಬೇಕೆಂಬುದರಲ್ಲಿ ಹೆಚ್ಚಿಗೆ ತಥ್ಯಾಂಶವಿರಬೇಕೆಂದು ನಾವು ನಂಬಿದ್ದಾದರೆ, ಅವನಿಗೆ ಎಷ್ಟು ವಯಸ್ಸು ಆದಾಗ್ಗೆ ಅವನ ಮುತ್ತಜ್ಜಿಯು ಅವನನ್ನು ಕರೆತಂದಳು ಮತ್ತು ಅವನನ್ನು ತನ್ನಲ್ಲಿಟ್ಟುಕೊಂಡು ಎಷ್ಟು ವರ್ಷ ಜೋಕೆ ಮಾಡಿದಳು ಎಂಬ ಪ್ರಶ್ನೆಗಳು ಹೊರಡುತ್ತವೆ. ಬಸವನು ಇನ್ನೂ ಮೊಲೆಯ ಕೂಸು

ಇರುವಾಗಲೇ ಅವನ ತಂದೆತಾಯಿಗಳು ತೀರಿರಬೇಕು ಮತ್ತು ಅಗ್ಗಲೇ ಅವನನ್ನು ಈ ಅವನ ಅಜ್ಜಿಯು ತೆಗೆದುಕೊಂಡು ಬಂದಿರಬೇಕು ಎಂದು ನಮಗೆ ತೋರುತ್ತದೆ. ಯಾಕಂದರೆ ಬಸವೇಶ್ವರನು ಅನ್ನಗ್ರಹಣ ಮಾಡುವಷ್ಟು ದೊಡ್ಡವನಾಗಿದ್ದರೆ ಅವನ ಅಕ್ಕನಾದ ನಾಗಲಾಂಬೆ ಮತ್ತು ಅಣ್ಣನಾದ ದೇವರಾಜ ಇವರು ಅವನನ್ನು ಬಾಗೇವಾಡಿಯಲ್ಲಿ ತಮ್ಮಲ್ಲಿಯೇ ಇಟ್ಟುಕೊಂಡು ಪೋಷಿಸುತ್ತಿದ್ದರೇ ಹೊರ್ತು ಬೇರೆ ಕಡೆಗೆ ಅವನನ್ನು ಕಳಿಸಿಕೊಡುವ ಕಾರಣವಿದ್ದಿಲ್ಲ. ಹರಿಹರನ ರಗಳೆಯಾದರೂ ಈ ವಿಧಾನವನ್ನು ಸಮರ್ಥಿಸುತ್ತದೆ. ಅದರಲ್ಲಿ "ಶಿವಭಕ್ತಿ ಮುತ್ತಂತಿರ್ದ ಮುತ್ತಜ್ಜಿಯ ಪಕ್ಕದೊಳು ಶಿವಪ್ರಸಾದ ಸಂತುಷ್ಟ ಹೃದಯನಾಗಿ ನಾಲ್ಕೆರಡು ವರ್ಷಂ ಸುಖದೊಳಿರೆ" ಎಂದು ಹೇಳಲ್ಪಟ್ಟದೆ. ಇಲ್ಲಿ "ಪಕ್ಕದೊಳು" ಈ ಶಬ್ದದಿಂದ ಬಸವನು ಇನ್ನೂ ಮೊಲೆಗೂಸು ಇರುವಾಗಲೇ ತರಲ್ಪಟ್ಟಿರಬೇಕೆಂದು ತೋರುತ್ತದೆ.

## ಸಂಗಮದಲ್ಲಿ ಬಸವನ ನಾಲ್ಕೈದು ವರ್ಷಗಳ ವಾಸ

ಈ ಪ್ರಕಾರ ಬಸವನು ಕೂಸು ಇದ್ದಾಗಲೇ ಅಜ್ಜಿಯಿಂದ ಅವನು ಪೋಷಿಸಲ್ಪಟ್ಟ ಬಳಿಕ ಅವನು ಅಲ್ಲಿ ಎಷ್ಟು ದಿವಸ ಆಕೆಯ ಬದಿಯಲ್ಲಿ ಇದ್ದನೆಂಬುದು ಮುಂದಿನ ಪ್ರಶ್ನೆಯಾಗಿರುತ್ತದೆ. ಅವನು ಅಲ್ಲಿ ಕನಿಷ್ಠ ನಾಲ್ಕೈದು ವರ್ಷಗಳ ವರೆಗೆ ಅವಳೊಡನೆ ಸಂಗಮಗ್ರಾಮದಲ್ಲಿ ಇರಬೇಕೆಂದು ತೋರುತ್ತದೆ. ಅವನು ಆಗ ಆಗಿಂದಾಗ್ಗೆ ಸಂಗಮೇಶ್ವರ ದೇವಸ್ಥಾನಕ್ಕೆ ಹೋಗುತ್ತಿರಬೇಕು. ಇದರಿಂದ ಆ ದೇವಸ್ಥಾನದ ಪರಿಸ್ಥಿತಿಯ ಪರಿಣಾಮವು ಅವನ ಮನಸ್ಸಿನ ಮೇಲೆ ಆಗುವಷ್ಟು ದಿವಸ ಅಂದರೆ ಕನಿಷ್ಠ ನಾಲ್ಕೈದು ವರ್ಷಗಳ ವರೆಗಾದರೂ ಅವನು ಅಲ್ಲಿ ಉಳಿದಿರಲಿಕ್ಕೆ ಬೇಕು. ಹರಿಹರ ಕವಿಯು ತನ್ನ ರಗಳೆಯಲ್ಲಿ "ನಾಲ್ಕೆರಡು ವರ್ಷ" ಎಂದು ಹೇಳುತ್ತಾನೆ. ಅವನ ಈ ಹೇಳಿಕೆಯಲ್ಲಿ ಸತ್ಯತೆಯು ಇರಬೇಕು.

## ಅಕ್ಕನಾಗಲಾಂಬಿಕೆಯ ಪೋಷಣೆ.

ಈ ಪ್ರಕಾರ ಬಸವನು ತನ್ನ ಶೈಶವಾವಸ್ಥೆಯನ್ನು ಸಂಗಮದಲ್ಲಿ ಕಳೆದು ಮುಂದೆ ಬಾಗೇವಾಡಿಗೆ ಬಂದು ತನ್ನ ಅಣ್ಣ ಮತ್ತು ಅಕ್ಕ ಇವರೊಡನೆ ಮುಂದೆ ಕಾಲಕಳೆಯುತ್ತ ಬಂದಿದ್ದಾನೆ. ಆಗ ಅಕ್ಕ ನಾಗಲಾಂಬಿ

ಕಿಯು ಅವನ ಮೇಲೆ ಅತ್ಯಂತ ಪ್ರೀತಿಯನ್ನು ವಹಿಸಿ ಪಾಲಿಸಿದಳೆಂದು ತೋರುತ್ತದೆ. ನಾಗಲಾಂಬಿಕೆಯು ಬಸವನ ಮೇಲೆ ಅತ್ಯಂತ ಪ್ರೇಮವನ್ನು ವಹಿಸಿ ಅವನನ್ನು ಸಲಹಿದಳೆಂದು ಅನೇಕ ಗ್ರಂಥಗಳಲ್ಲಿ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ನಿಜವಾಗಿ ಅವಳ ಪ್ರೇಮವು ಅವನ ಮೇಲೆ ಅತ್ಯುಚ್ಚತರದ್ದಿತ್ತೆಂದು ಆಕೆಯ ಚರಿತ್ರೆಯಿಂದ ತಿಳಿದುಬರುತ್ತದೆ. ಬಸವನಿಗೆ ಅನೇಕ ಕಷ್ಟಪರಂಪರೆಗಳು ಬಂದಿವೆ. ಇಂಥ ಕಾಲದಲ್ಲಿ ನಾಗಲಾಂಬೆಯು ಬಸವನನ್ನು ಎಂದೂ ಬಿಟ್ಟಿರುವದಿಲ್ಲ. ಅವಳು ಅವನೊಡನೆ ಇದ್ದು ಯಾವಾಗಲೂ ದುಃಖವನ್ನು ಅನುಭವಿಸಿದ್ದಾಳೆ. ಬಸವನು ಚಿಕ್ಕವನಿರುವಾಗ ಅವನ ಲಾಲನೆ ಪೋಷಣೆಯನ್ನು ಅವಳು ಮಾಡಿದ್ದರ ಪರಿಣಾಮವೇ ಇದಾಗಿರುತ್ತದೆ.

ಈ ಪ್ರಕಾರ ಬಸವನು ತನ್ನ ಅಜ್ಜಿ ಅಂದರೆ ಮಾದಲಾಂಬಿಕೆಯ ತಾಯಿಯ ಕೂಡ ೪-೫ ವರ್ಷ; ಆಮೇಲೆ ಅವನಿಗೆ ೧೬ ವರ್ಷಗಳಾಗುವ ವರೆಗೆ ತನ್ನ ಅಣ್ಣ ಮತ್ತು ಅಕ್ಕ ಇವರೊಡನೆ ಕಾಲಕಳೆದಿದ್ದಾನೆ. ಆ ಕಾಲದಲ್ಲಿ ಈ ಮೂವರೂ ಬಾಗೆವಾಡಿಯಲ್ಲಿ ಇದ್ದು ವಿದ್ಯಾಬುದ್ಧಿಯನ್ನು ಹೊಂದಿದರು. ಮುಂದೆ ಅವರೆಲ್ಲರೂ ವೀರಶೈವ ಮತಾವಲಂಬಿಗಳಾಗಿ ಬ್ರಾಹ್ಮಣ ಧರ್ಮವನ್ನು ಬಿಟ್ಟುಕೊಟ್ಟರು. ಆಗ ಊರಜನರು ಈ ಮೂವರನ್ನು ಊರಿಂದ ಹೊರಗೆ ಹಾಕಿದರು. ಈ ಪ್ರಕಾರ ಸಂಗತಿಗಳು ಉಂಟಾಗಿರಬೇಕೆಂದು ನಮಗೆ ತೋರುತ್ತದೆ.

### ಬಸವೇಶ್ವರನಿಗೆ ಪದ್ಮಾವತಿ ಎಂಬ ತಂಗಿ ಇದ್ದಳೋ ಹೇಗೆ?

ಜೈನ ಗ್ರಂಥಕಾರರು ಬಸವೇಶ್ವರನಿಗೆ ಇನ್ನೊಬ್ಬ ಪದ್ಮಾವತಿ ಎಂಬ ತಂಗಿ ಇದ್ದಳೆಂದು ಹೇಳಿದ್ದಾರೆ. ಅವರು ಬಸವನು ಈ ಪದ್ಮಾವತಿಯನ್ನು ಕಾಮಾಂಧನಾದ ಬಿಜ್ಜಳನಿಗೆ ಕೊಟ್ಟು ಅವನ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಂಡು ತನಗೆ ಸಿಕ್ಕ ಹಾಗೆ ರಾಜ್ಯಭಾರ ನಡಿಸಿದನೆಂದು ತಮ್ಮ ಗ್ರಂಥಗಳಲ್ಲಿ ಬರೆದಿರುತ್ತಾರೆ. ಬಸವನ ವಿಷಯವಾಗಿ ಜನರ ಮನಸ್ಸನ್ನು ಕಲುಷಿತ ಮಾಡುವದಕ್ಕೋಸ್ಕರ ಅವರು ಬುದ್ಧಿಪುರಸ್ಸರವಾಗಿ ಹುಟ್ಟಿಸಿದ ಸುಳ್ಳು ಕಥೆಯು ಇದಾಗಿರುತ್ತದೆಂದು ನಮ್ಮ ಅಭಿಪ್ರಾಯವಿದೆ. ಬಸವನು ಸಣ್ಣ ಕೂಸು ಇದ್ದಾಗಲೇ ಅವನ ತಂದೆ ತಾಯಿಗಳು ತೀರಿ ಹೋದ್ದರಿಂದ ಅವ

ನಿಗೆ ಇನ್ನೊಬ್ಬ ತಂಗಿಯು ಹುಟ್ಟುವದು ಹೇಗೆ ಸಂಭವವು? ಅಲ್ಲದೆ ಅವನಿಗೆ ತಂಗಿ ಇದ್ದ ವಿಷಯವು ವೀರಶೈವರ ಯಾವ ಗ್ರಂಥದಲ್ಲಿಯೂ ಬಂದಿರುವದಿಲ್ಲ. ಅಕ್ಕನಾದ ನಾಗಲಾಂಬಿಕೆಯ ಅಸ್ತಿತ್ವವನ್ನು ವೀರಶೈವ ಗ್ರಂಥಕಾರರು ಒಪ್ಪಿಕೊಳ್ಳುತ್ತಾರೆ. ಒಂದು ವೇಳೆ ಅವನಿಗೆ ತಂಗಿಯೂ ಇದ್ದರೆ ಈ ಸಂಗತಿಯನ್ನು ಅವರು ಮುಚ್ಚಿಡಲಿಕ್ಕೆ ಕಾರಣವಿರುವದಿಲ್ಲ. ಒಂದು ವೇಳೆ ಬಸವನ ಈ ತಂಗಿಯನ್ನು ವರಿಸಬೇಕೆಂದು ಬಿಜ್ಜಳನಿಗೆ ಇಚ್ಛೆಯುಂಟಾಗಿದ್ದರೆ ಅವಳನ್ನು ಅವನಿಗೆ ಕೊಟ್ಟು ಲಗ್ನಮಾಡಲಿಕ್ಕೆ ಬಸವನಿಗೆ ಯಾವ ಪ್ರತ್ಯವಾಯವು ಇರುವದಿಲ್ಲ. ಯಾಕೆಂದರೆ ಆ ಕಾಲದಲ್ಲಿ ಇಂಥ ವಿವಾಹಗಳು ನಿಃಶಂಕವಾಗಿ ನಡೆಯುತ್ತಿದ್ದವು. ಬಿಜ್ಜಳನು ತನ್ನ ಮಗಳನ್ನು ರೇವಣಸಿದ್ಧೇಶ್ವರನಿಗೆ ಕೊಟ್ಟು ಲಗ್ನ ಮಾಡಿದನೆಂಬ ಸಂಗತಿಯನ್ನು ಹರಿಹರನು ತನ್ನ ರೇವಣಸಿದ್ಧೇಶ್ವರ ರಗಳೆಯಲ್ಲಿ ವರ್ಣಿಸಿದ್ದಾನೆ. ಹಾಗೆಯೇ ಬಸವನು ತನ್ನ ತಂಗಿಯನ್ನು ಬಿಜ್ಜಳನಿಗೆ ಕೊಟ್ಟಿದ್ದರೆ, ಹೀಗೆಯೇ ವರ್ಣಿಸಲಿಕ್ಕೆ ಹರಿಹರ ಕವಿಗೆ ಆತಂಕವಿರಲಿಲ್ಲ. ಆದ್ದರಿಂದ ಜೈನರ ಈ ಕಥೆಯು ತೀರ ಸುಳ್ಳೆಂದು ನಮಗೆ ತೋರುತ್ತದೆ.

## ಬಲದೇವ ಮಂತ್ರಿ ಮತ್ತು ಸಿದ್ದಣ್ಣ ಮಂತ್ರಿ ಇವರ ಮೂಲ ಗ್ರಾಮಗಳು ಯಾವವು?

ಬಸವೇಶ್ವರನ ಅಭಿವೃದ್ಧಿಗೆ ಕಾರಣರಾದ ಬಲದೇವ ಮಂತ್ರಿ ಮತ್ತು ಸಿದ್ದಣ್ಣ ಮಂತ್ರಿ ಇವರ ಮೂಲ ಗ್ರಾಮವಾವುದು ಎಂಬ ಪ್ರಶ್ನೆಯು ಇಲ್ಲಿ ಉದ್ಭವಿಸುತ್ತದೆ. ಬಲದೇವನು ಬಸವೇಶ್ವರನ ಸೋದರಮಾವನು ಅಂದರೆ ಅವನ ತಾಯಿಯಾದ ಮಾದಲಾಂಬಿಕೆಯ ಸಹೋದರನೆಂದು ವೀರಶೈವ ಪುರಾಣಗಳು ಹೇಳುತ್ತವೆ. ಆದ್ದರಿಂದ ಅವನ ಗ್ರಾಮವಾದರೂ ಸಂಗಮವೇ ಇರಬೇಕೆಂದು ಹೇಳಬೇಕಾಗುತ್ತದೆ. ಹಾಗೆಯೇ ಬಲದೇವ ಮತ್ತು ಸಿದ್ದಣ್ಣ ಈ ಮಂತ್ರಿಗಳು ಸಹೋದರರೆಂತಲೂ ಹೇಳಲ್ಪಡುತ್ತದೆ. ಆದ್ದರಿಂದ ಈ ಉಭಯತರ ಗ್ರಾಮವು ಸಂಗಮವೆಂತಲೇ ನಾವು ತಿಳಿಯಬೇಕು.

ಆದರೆ ಹರಿಹರ ಕವಿಯು ತನ್ನ ಗ್ರಂಥದಲ್ಲಿ ಸಿದ್ದಣ್ಣ ಮಂತ್ರಿಯು ಬಸವನು ಮಂಗಳವಾಡಕ್ಕೆ ಬಂದಬಳಿಕ ಅವನಿಗೆ ಒಂದು ವೇತನವನ್ನು ಗೊತ್ತುಪಡಿಸಿ ಗುಮಾಸ್ತನನ್ನಾಗಿ ನೇಮಿಸಿದನು, ಆಮೇಲೆ ಅವನನ್ನು

ತನ್ನ ರಮನೆಗೆ ಕರೆಸಿಕೊಂಡು ಬಂದನು ಎಂಬ ಸಂದರ್ಭವನ್ನು ವಿವರಿಸುತ್ತಾನೆ. ಅದು ಹೇಗೆಂದರೆ:—

ಕೊಡಿಸಿ ಭಂಡಾರಿ ತನ್ನರಮನೆಗೆ ಕೊಂಡೊಯ್ದು
ಕಡುಮೋಹದಿಂದ ಹೊಗಳುತ್ತಿ ಮನ್ನಣೆಗೆಯ್ದು
ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ
ನೆಲೆ ವಿಚಾರಿಸೆ ತನ್ನ ಸಂಬಂಧವೊಂದಾಗೆ
ಸಿದ್ಧ ದಂಡಾಧಿಪಂ ಹೆಚ್ಚುತಂ ಹಿಗ್ಗುತಂ

ಇಲ್ಲಿ ಬಸವನ ಮತ್ತು ತನ್ನ ಕುಲ ಮತ್ತು ಗೋತ್ರ ಇವುಗಳು ಒಂದಾಗಿವೆಂದು ಸಿದ್ದಣ್ಣ ಮಂತ್ರಿಗೆ ತಿಳಿದು ಬಂದದ್ದಲ್ಲದೆ, "ನೆಲೆ ವಿಚಾರಿಸೆ ತನ್ನ ಸಂಬಂಧ ಒಂದಾಗೆ" ಅಂದರೆ ಬೇರೆ ಆಪ್ತತ್ವವೂ ಇದೆ ಎಂದು ಅವನಿಗೆ ಗೊತ್ತಾಯಿತೆಂದು ಹರಿಹರನು ಇಲ್ಲಿ ಹೇಳುತ್ತಾನೆ. ಹೀಗಿದ್ದರೆ ಸಿದ್ದಣ್ಣನ ಸಹೋದರಿಯಾದ ಮಾದಲಾಂಬಿಕೆಯನ್ನು ಸಗೋತ್ರನಾದ ಮಧುವರಸನಿಗೆ ಕೊಟ್ಟು ಲಗ್ನವಾದಂತಾಗುತ್ತದೆ. ಆದರೆ ಇದು ಬ್ರಾಹ್ಮಣರಲ್ಲಿ ಸಶಾಸ್ತ್ರವಾದುದಲ್ಲ. ಆದ್ದರಿಂದ ಮಾದಲಾಂಬಿಕೆಯು ಅಣ್ಣನಾಗಲಿ ತಮ್ಮನಾಗಲಿ ಸಿದ್ದಣ್ಣ ಮಂತ್ರಿಯು ಇರಲಿಕ್ಕಿಲ್ಲೆಂಬ ಅನುಮಾನವು ಉಂಟಾಗುತ್ತದೆ. ಆದರೆ ಮುಂದೆ ಸಿದ್ದಣ್ಣ ಮಂತ್ರಿಯು ತನ್ನ ಕುವರಿಯನ್ನು ಬಸವನಿಗೆ ಕೊಟ್ಟಂತೆ ಹರಿಹರನು ಹೇಳುತ್ತಾನೆ. ಹೀಗಾದಲ್ಲಿ ಅದೂ ಸಗೋತ್ರ ವಿವಾಹವಾಗುವದು. ಆದ್ದರಿಂದ ಹರಿಹರನು ಉಭಯತರು ಒಂದೇ ಗೋತ್ರದವರೆಂದು ಹೇಳುವ ವಿಧಾನದಲ್ಲಿ ತಪ್ಪಿರಬಹುದೆಂದು ನಮಗೆ ತೋರುತ್ತದೆ. ವೀರಶೈವರ ಪುರಾಣಗಳು ಬಲದೇವ ಮತ್ತು ಸಿದ್ದಣ್ಣ ಮಂತ್ರಿಗಳು ಮಾದಲಾಂಬಿಕೆಯು ಸಹೋದರರೆಂದು ಯಾವಾಗಲೂ ಹೇಳುತ್ತವೆ. ಆದ್ದರಿಂದ ಅವರು ಬಸವನ ಕುಲದವರಿದ್ದರೂ ಅವರು ಬೇರೆ ಬೇರೆ ಗೋತ್ರದವರಿರಬೇಕೆಂದು ನಮಗೆ ತೋರುತ್ತದೆ.

ನಾವು ಈ ಲೇಖದಲ್ಲಿ ಸವಿಸ್ತಾರವಾಗಿ ವಿವರಿಸಿದ ಸಂಗತಿಗಳ ಮೇಲಿಂದ ಮಾದಲಾಂಬಿಕೆಯು ಸಂಗಮ ಗ್ರಾಮದವಳೆಂದು ಹೇಳಬಹುದಾಗಿದೆ. ಆದ್ದರಿಂದ ಹೆಚ್ಚಿಗೆ ಆಧಾರಗಳು ದೊರೆಯುವ ವರೆಗೆ

ಆಕೆಯು ಸಹೋದರರಾದ ಸಿದ್ದಣ್ಣ ಮತ್ತು ಬಲದೇವ ಮಂತ್ರಿಗಳೂ ಕೂಡ ಸಂಗಮ ಗ್ರಾಮದವರಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ಪ್ರಸ್ತುತ ಲೇಖದಲ್ಲಿ ನಾವು ಇಷ್ಟು ಮಾತ್ರ ಸಂಗತಿಗಳನ್ನು ವಿವರಿಸಿ ಮುಂದಿನ ಲೇಖದಲ್ಲಿ ಬಸವೇಶ್ವರನ ಮನಸ್ಸಿನ ಮೇಲೆ ಆರು ಆರು ಯಾವ ಯಾವ ಪರಿಣಾಮಗಳನ್ನು ಮಾಡಿದರು, ಅವನ ಗುರುವಾರು, ಅವನಿಗೂ ರೇವಣಸಿದ್ಧೇಶ್ವರನಿಗೂ ಸಂಬಂಧವೇನು ಈ ವಿಷಯಗಳನ್ನು ಕುರಿತು ಪ್ರಸ್ತಾಪಿಸುವೆವು. ಪ್ರಸ್ತುತ ಲೇಖವು ಅನಿರೀಕ್ಷಿತವಾಗಿ ವಿಸ್ತಾರ ಹೊಂದಿದ್ದರಿಂದ ಮೇಲ್ಕಂಡ ವಿಷಯಗಳನ್ನು ವಿವೇಚಿಸಲು ಈ ಸಂಚಿಕೆಯಲ್ಲಿ ಶಕ್ಯವಾಗಲಿಲ್ಲ.

(ಮುಂದುವರಿಯುವದು.)

---

# * ವಜ್ರಸೂಚ್ಯುಪನಿಷತ್ತು.

[ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು]

(ಲೇ:- ಶ್ರೀ ಜ ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು ಜಗದ್ಗುರು
(ಶ್ರೀ ನಿರಾವರಾವಿ ಮಠ ಶ್ರೀಶೈಲ ಸಂಸ್ಥಾನ ಗೋಳೂರ)

---

ಶಿವಮಯಂ

ವಜ್ರಸೂಚಿಂ[೧] ಪ್ರವಕ್ಷ್ಯಾಮಿ ಶಾಸ್ತ್ರ[೨]ಮಾದರ್ಶ ಭೇದನಂ ।
ದೂಷಣಂ ಜ್ಞಾನ ಹೀನಾನಾಂ ಭೂಷಣಂ ಜ್ಞಾನಚಕ್ಷುಷಾಂ ॥

(ತದ್ಯಥಾ) ಬ್ರಾಹ್ಮಣಃ[೩] ಕ್ಷತ್ರಿಯೋ ವೈಶ್ಯಃ ಶೂದ್ರಶ್ಚೇತಿ ಚತ್ವಾರೋ ವರ್ಣಾಃ, ಏತೇಷಾಂ[೪] ವರ್ಣಾನಾಂ ಮಧ್ಯೇ ಬ್ರಾಹ್ಮಣಃ ಪ್ರಧಾನ ಇತಿ ವೇದವಚನಾತ್[೫] ನಿರೂಪಸ್ಮೃತಿಭಿರುಕ್ತಂ[೬]. ತತ್ರಚೋದ್ಯಮಸ್ತಿ. ಕೋವಾ ಬ್ರಾಹ್ಮಣೋನಾಮ?, ಕಿಂಜೀವಃ? ಕಿಂದೇಹಃ? (ಕಿಂ ವರ್ಣಃ?) ಕಿಂ ಜ್ಞಾನಂ? (ಕಿಂ ಧರ್ಮಃ?) ಕಿಂ ಕರ್ಮ? ಕಿಂ ಜಾತಿಃ? (ಕಿಂ ಪಾಂಡಿತ್ಯ ಮಿತ್ಯಷ್ಟ್ವಾ ಕಿಂ ವಿಕಲ್ಪಃ?)

ತತ್ರ ಜೀವೋ ಬ್ರಾಹ್ಮಣ ಇತಿ ಚೇನ್ನ[೭]; ಅತೀತಾನಾಗತ (ವರ್ತಮಾನೈಕ) ದೇಹಾನಾಂ ಜೀವಸ್ಯೈಕರೂಪತ್ವಾತ್. ಏಕಸ್ಯಾಪಿ (ಪ್ರಾಚೀನ)

---

* ವಜ್ರಸೂಚಿಕೋಪನಿಷತ್ (ಸಂ, ತೆ)
೧ ವಜ್ರಸೂಚೀಂ ( ,, ,, )
೨ ಶಾಸ್ತ್ರಮಜ್ಞಾನ (ಸಂಸ್ಕೃತ)
,, ಜ್ಞಾನಮಜ್ಞಾನ (ತೆಲುಗು)
೩ ಬ್ರಾಹ್ಮಣಕ್ಷತ್ರಿಯ ವೈಶ್ಯಶೂದ್ರಾ (ಸಂ, ತೆ)
೪ ತೇಷಾಂ ( ,, ,, )
೫ ವೇದವಚನಾನುರೂಪಂ ( ,, ,, )
೬ ಸ್ಮೃತಿಭಿರಪ್ಯುಕ್ತಂ ( ,, ,, )
೭ ಚೇತ್ತನ್ನ (ಸಂ) ಚೇನ್ನ (ತೆ)

ಕರ್ಮವಶಾದನೇಕ ದೇಹಸಂಭವಾತ್, ಸರ್ವಶರೀರಾಣಾಂ ಜೀವಸ್ಯೈಕ ರೂಪತ್ವಾತ್, ( ಸರ್ವಸ್ಯಾಪಿ ಜೀವಸ್ಯ ಬ್ರಾಹ್ಮಣತ್ವ ಪ್ರಸಂಗಾಚ್ಚ, ) ತಸ್ಮಾನ್ನ ಜೀವೋ ಬ್ರಾಹ್ಮಣ ಇತಿ.

ತರ್ಹಿ ದೇಹೋ ಬ್ರಾಹ್ಮಣ ಇತಿ ಚೇನ್ನ; ಆಚಾಂಡಾ[೮]ಲ ಪರ್ಯಂತ ಮನುಷ್ಯಾಣಾಂ (ಪಶುಪಕ್ಷಿ ಕೀಟಕಾದೀನಾಂ) ದೇ[೯]ಹಸ್ಯ ಪಾಂಚಭೌತಿಕತ್ವಾತ್, ಜ[೧೦]ರಾಮರಣಾದಿ ಧರ್ಮಸಾಮ್ಯತ್ವಾಚ್ಚ(ನೃಶರೀರಾದನ್ಯತ್ರಾಪಿ ಬ್ರಾಹ್ಮಣತ್ವ ಪ್ರಸಂಗಾತ್,) [೧೧]ಪಿತೃಶರೀರದಾಹೀಕೃತೇ ಪುತ್ರಾದೀನಾಂ ಬ್ರಹ್ಮಹತ್ಯಾದಿ ದೋಷಸಂಭವಸ್ಸ್ಯಾತ್ ತಸ್ಮಾನ್ನ ದೇಹೋ ಬ್ರಾಹ್ಮಣ ಇತಿ.

(ತರ್ಹಿ ವರ್ಣೋ ಬ್ರಾಹ್ಮಣ ಇತಿ ಚೇನ್ನ; ಬ್ರಾಹ್ಮಣಃ ಕಿಂ ಶ್ವೇತವರ್ಣಃ? ಕ್ಷತ್ರಿಯಃ ಕಿಂ ರಕ್ತವರ್ಣಃ? ವೈಶ್ಯಃ ಕಿಂ ಪೀತವರ್ಣಃ? ಶೂದ್ರಃ ಕಿಂ ಕೃಷ್ಣ ವರ್ಣಃ? ಇತಿ ನಿಯಮಾಭಾವಾತ್. ತೇಷು ಸರ್ವವರ್ಣ ಸದ್ಭಾವಾತ್, ಜರಾಮರಣಾದಿ ಧರ್ಮಸಾಮ್ಯತ್ವಾಚ್ಚ ತಸ್ಮಾನ್ನ ವರ್ಣೋ ಬ್ರಾಹ್ಮಣ ಇತಿ.)

ತರ್ಹಿ ಜ್ಞಾನಂ ಬ್ರಾಹ್ಮಣ ಇತಿ ಚೇನ್ನ; ಕ್ಷತ್ರಿಯಾದಯೋಽಪಿ ಪರಮಾರ್ಥದರ್ಶನಾಭಿಜ್ಞಾ ಬಹವಸ್ಸಂತಿ ತಸ್ಮಾನ್ನ ಜ್ಞಾನಂ ಬ್ರಾಹ್ಮಣ ಇತಿ.

(ತರ್ಹಿ ಧರ್ಮೋ ಬ್ರಾಹ್ಮಣ ಇತಿ ಚೇನ್ನ; ಬ್ರಾಹ್ಮಣಃ ಕಿಂ ಶತ ವರ್ಷಂ ಜೀವತಿ? ಕ್ಷತ್ರಿಯಸ್ತದರ್ಧಂ? ವೈಶ್ಯಸ್ತದರ್ಧಂ, ಶೂದ್ರಸ್ತದರ್ಧಂ ಜೀವತೀತಿ ನಿಯಮಾಭಾವಾತ್; ತಸ್ಮಾನ್ನ ಧರ್ಮೋ ಬ್ರಾಹ್ಮಣ ಇತಿ.)

ತರ್ಹಿ ಕರ್ಮಬ್ರಾಹ್ಮಣ ಇತಿ ಚೇನ್ನ; ಸರ್ವೇಷಾಂ ಪ್ರಾಣಿನಾಂ ಪ್ರಾರಬ್ಧಸಂಚಿತಾಗಾಮಿ ಕರ್ಮಸಾ[೧೨]ಮ್ಯದರ್ಶನಾತ್. ಕರ್ಮ ಪ್ರೇ[೧೩]ರಿತಾಸ್ಸಂತೋ ಜನಾಃ ಕ್ರಿಯಾಃ ಕುರ್ವಂತಿ. ತಸ್ಮಾನ್ನ ಕರ್ಮ ಬ್ರಾಹ್ಮಣ ಇತಿ.

---

೮ ಆಚಾಂಡಾಲಾದಿ (ಸಂ. ೩)
೯ ದೇಹಸ್ಯೈಕ ರೂಪತ್ವಾತ್ ( ,, ,, )
೧೦ ಜರಾಮರಣಧರ್ಮಾಧರ್ಮಾದಿಸಾಮ್ಯ ( ,, ,, )
೧೧ ಪಿತ್ರಾದಿದಹನೇ ( ,, ,, )
೧೨ ಸಾಧರ್ಮ್ಯ ( ,, ,, )
೧೩ ಕರ್ಮಾಭಿಪ್ರೇರಿತಾ ( ,, ,, )

ತರ್ಹಿ ಜಾತಿ ಬ್ರಾಹ್ಮಣ ಇತಿ ಚೇನ್ನ; ಜಾತ್ಯಂತರ[೧೪] ಜಾತೀಷು ಅಂತ್ಯ ಜಾತಿ ಸಂಭೂತಾ ಮಹರ್ಷಯೋ ಬಹವಸ್ಸಂತಿ. ಋಷ್ಯಶೃಂಗೋ [೧೫]ಮೃಗಾಂ, ಕೌಶಿಕಃ [೧೬]ಕುಶಾಸ್ತೀರ್ಣಃ, [೧೭]ಗೌತಮಃ ಶಶಿಪೃಷ್ಠೇ, [೧೮]ಜಂಬುಕೋ ಜಾಂಬುಕ್ಯಾಂ, ವಶಿಷ್ಠ ಉರ್ವಸ್ಯಾಂ, ವಾಲ್ಮೀಕೋ [೧೯]ವಲ್ಮೀಕ್ಯಾಂ, ವ್ಯಾಸಃ ಕೈವರ್ತಕ ಕನ್ಯಾಯಾಂ, ಅಗಸ್ತ್ಯಃ [೨೦]ಕಲಶೋದ್ಭವಃ, (ವಿಶ್ವಾಮಿತ್ರಃ ಕ್ಷತ್ರಿಯಃ, ನಾರದೋ ದಾಸೀಪುತ್ರಃ, ಅನ್ಯೇಚ ಬಹವಸ್ಸಂ ತೀತಿಶ್ರುತಿಃ) ಏತೇಷಾಂ [೨೧]ಜಾತ್ಯಾದೀನಾಮಪಿ ಸಮ್ಯಜ್ಞಾನ ವಿಶೇಷೋ ಭೂಷಯಾಖ್ಯ ಬ್ರಾಹ್ಮಣ ಇತ್ಯುಕ್ತಂ. ಶ್ರುತೇಃ (?) (ಪುರುಷ ಸೂಕ್ತ–ಬ್ರಾಹ್ಮಣೋऽಸ್ಯ ಮುಖಮಾಸೀತ್, ಬಾಹು ರಾಜನ್ಯಃ ಕೃತಃ, ಊರ್ವೋಸ್ತದಸ್ಯಯದ್ವೈಶ್ಯಃ, ಪದ್ಭ್ಯಾಂ ಶೂದ್ರೋऽಜಾಯತ ಇತಿ ಏಕಯೋನಿ ಪ್ರಸೂತಾನಾಮಪಿ ಪುಂಸಾಂ ಏಕಸ್ಸ್ಯೈವ ಸಾಕ್ಷಿಫಲಮಿವ ಜಾತಿ ಬಹುತ್ವಂ ಭವತ ಇತಿಹಾಸ ಪುರಾಣಾನಿ ಭವಂತಿ) ತಸ್ಮಾನ್ನ ಜಾತಿ ಬ್ರಾಹ್ಮಣ ಇತಿ.

(ತರ್ಹಿ ಪಾಂಡಿತ್ಯಂ ಬ್ರಾಹ್ಮಣ ಇತಿ ಚೇನ್ನ; ಕ್ಷತ್ರಿಯಾದಯೋऽಪಿ ಪರದರ್ಶನ ಪಧವಾಕ್ಯ ಪ್ರಮಾಣ ವಿಜ್ಞಾನಿನೋ ಬಹವಸ್ಸಂತಿಃ ತಸ್ಮಾನ್ನ ಪಾಂಡಿತ್ಯಂ ಬ್ರಾಹ್ಮಣ ಇತಿ.)

ತರ್ಹಿ ಧಾರ್ಮಿಕೋ ಬ್ರಾಹ್ಮಣ ಇತಿ ಚೇನ್ನ; ಕ್ಷತ್ರಿಯಾದಯೋऽಪಿ[೨೨] (ಕನ್ಯಾದಾನ, ಗೋದಾನ, ಗಜದಾನ, ಪೃಥ್ವಿದಾನ, ಹಿರಣ್ಯದಾನ,

---

೧೪ ಜಾತ್ಯಂತರ ಜಂತುಷ್ವನೇಕ (ಸಂಸ್ಕೃತ)
,, ಜಾತ್ಯಂತರೇಷ್ವನೇಕ (ತೆಲಗು)
೧೫ ಮೃಗ್ಯಾಃ (ಸಂ, ತೆ)
೧೬ ಕುಶಾತ್ ( ,, ,, )
೧೭ ಶಶಿಪೃಷ್ಠಾದ್ಗೌತಮಃ (ಸಂ., ತೆ)
೧೮ ಜಾಂಬೂಕೋ ಜಂಬುಕಾತ್ ( ,, ,, )
೧೯ ವಲ್ಮೀಕಾತ್ ( ,, ,, )
೨೦ ಕಲಶೇಜಾತಃ ( ,, ,, )
೨೧ ಜಾತ್ಯಾದಿನಾಪ್ಯಗ್ರೇಜ್ಞಾನಪ್ರತಿಪಾ
,, ದಿತಾಋಷಯೋ ( ,, ,, )
೨೨ ಹಿರಣ್ಯದಾತಾರೋ ... ( ,, ,, )

ಅಶ್ವದಾನ, ಮಹಿಷದಾನ ಇತ್ಯಾದಿ) ದಾತಾರೋ ಬಹವಸ್ಸಂತಿ. ತಸ್ಮಾನ್ನ ಧಾರ್ಮಿಕೋ ಬ್ರಾಹ್ಮಣ ಇತಿ.

(ತರ್ಹಿ ಕಾರ್ಮಿಕೋ ಬ್ರಾಹ್ಮಣ ಇತಿ ಚೇನ್ನ; ಕ್ಷತ್ರಿಯಾದಯೋಽಪಿ ಪ್ರಾರಬ್ಧವಸ್ಯಾಧೀಷ್ಟಪೂರ್ತಕರ್ಮಕರ್ತಾರೋ ಬಹವಸ್ಸಂತಿ. ತಸ್ಮಾತ್ ಕಾರ್ಮಿಕೋ ಬ್ರಾಹ್ಮಣೋ ನ ಭವತ್ಯೇವ.

ತರ್ಹಿ ಕೋ ವಾ ಬ್ರಾಹ್ಮಣ[೨೩] ಇತಿ ಚೇದುಚ್ಯತೇ. ಏಕಮೇವಾತ್ಮಾನಂ ದ್ವಿತೀಯಂ ಗುಣಕ್ರಿಯಾಷಡೂರ್ಮಿ ಷಡ್ಭಾವೇತ್ಯಾದಿ ಸರ್ವದೋಷಾತ್ಸಂಗ ರಹಿತಂ ಸತ್ಯಜ್ಞಾನಮಾನಂದ ಶಿವರೂಪಂ ಸ್ವಯಂ ನಿರ್ವಿಕಲ್ಪಂ ಧರ್ಮಶೇಷಂ ಸರ್ವಭೂತಾಂತರ್ಯಾಮಿತ್ವೇನ ವರ್ತಮಾನಂ ಅಂತರ್ಬಹಿಸ್ಸಂತಾ ತದ್ವದನಸ್ಫೂರ್ತಿಃ ಅಖಂಡಸ್ವಭಾವ ಮಪ್ರಮೇಯಮನುಭವವೇದ್ಯ ಪರೋಕ್ಷತಯಾ ಭಾಸಮಾನಂ ಕರತಲಾಮಲಕವತ್ಸಾ ಕ್ಷಾದಪರೋಕ್ಷೀಕೃತಕೃತ್ಯಾದಿ ಕಾಮರಾಗಾದಿ ದೋಷರಹಿತಂ ಶಮದಮಾದಿ ಸಾಧನ ಸಂಪನ್ನಂ ತಾತ್ಪರ್ಯಂ ತೃಷ್ಣಾಮೋಹಾದಿ ರಹಿತಂ ದಂಭಾಹಂಕಾರಾದಿ ವಿರಸಂ ಸ್ಪಷ್ಟಂ ಚೇತಸಿ ವರ್ತತೇ. ಉಕ್ತಲಕ್ಷಣೋ ಯಃ ಸ ಏವ ಬ್ರಾಹ್ಮಣ ಇತಿ ಶ್ರುತಿ - ಸ್ಮೃತಿ - ಪುರಾಣೇತಿಹಾಸನಾಮಭಿಪ್ರಾಯೋ ನಾನ್ಯಃ

(ಶರೀರಂ ಬ್ರಾಹ್ಮಣ ಇತ್ಯಾದಿ ಸಮಾಧಾನಂ ಶರೀರಸ್ಯ ಸತ್ವಾತ್ ಆಕಾಶವದ್ ಬ್ರಹ್ಮವಿದೇವ ಬ್ರಾಹ್ಮಣ ಇತಿ ಸೋಽಹಂ ನಾನ್ಯದೇಶೇ.)(?)

("ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರಾ ದ್ವಿಜ ಉಚ್ಯತೇ । ವೇದಾಭ್ಯಾಸೇ ಭವೇದ್ವಿಪ್ರೋ ಬ್ರಹ್ಮಜಾನಾತಿ ಬ್ರಾಹ್ಮಣಃ॥" ಅತ ಏವ ಬ್ರಹ್ಮವಿದೇವ ಬ್ರಾಹ್ಮಣೋತ್ತಮ ಇತಿ ನಿಶ್ಚಯಃ।

ಅಷ್ಟದಿಗ್ಬಂಧನ ಮಂತ್ರ

(ಓಂ ನಮಃ ಶಿವಾಯ, ಓಂ ನಮೋ ಭವತೇ, ಮೆರಂದಿ ಕಣ್ಣಂ, ಶಿವಂದಿ ಮೀನುಂ, ಏಟ್ಟತ್ತಿರುಣೂರು, ಕಟ್ಟವೆಟ್ಟಯಾನಂ, ತಿರಿಪಾವನಂ, ತಿಣೂರುತ್ತಿಕ್ಕಳವಿಯ್ಯೆರದಗ್ರಾಃ. ಮೊಟುಟ್ಟು, ಮೊಸನಗನೆ, ಹರಿಹರಿಚಕ್ರಂ ಅನ್ನೊಡಿಚಕ್ರಂ, ತಿರಿಹರಿಚಕ್ರಂ, ಶಿವನೊಡೆಯನ್, ಶಂಖಚಕ್ರಂ, ನಾರಾಯಣನ್ ನನ್ನೊಗಾನ್, ಅಷ್ಟದಿಕ್ಕುಲ್‌ಗಕೂಡಿ ಸ್ವಾಹಾ

ಇತ್ಯುಪನಿಷತ್

---

೨೩ ಸೂಚನೆ—ಇಲ್ಲಿಂದ ಕೊನೆಯವರೆಗೂ ತುಂಬಾ ಹೆಚ್ಚು ಪಾಠಾಂತರಗಳಿರುವದರಿಂದ ಸಂಸ್ಕೃತ ಲಿಪಿಯ ಉಪನಿಷತ್ತನ್ನೇ ವಾಚಕರು ಸ್ವತಃ ಓದಿ, ನೋಡಿ ತಿಳಿದುಕೊಳ್ಳಬೇಕು.

# ದೀಕ್ಷಾವಾದ.

( ಜಿ. ಟಿ. ಅಕುಲಯ್ಯನವರ ಮಾರುತ್ತರದ ಖಂಡನೆ )

(ಲೇಖಕರು:— ಶ್ರೀ ಮಾ. ನಂ. ನಂಜಪ್ಪನವರು, ಬೆಂಗಳೂರನಗರ)

ನವಂಬರ್ ತಿಂಗಳ " ಶಿವಾನುಭವ " ಸಂಚಿಕೆಯಲ್ಲಿ ನಾನು ಬರೆದ ದೀಕ್ಷಾವಾದ ಎಂಬ ಲೇಖನಕ್ಕೆ ಶ್ರೀಮಾನ್ ಅಕುಲಯ್ಯನವರು ಜನವರಿ ಶಿವಾನುಭವದಲ್ಲಿ ಧಾರಣದೀಕ್ಷೆ ಎಂಬ ಲೇಖನವನ್ನು ಪ್ರಕಟಿಸಿ ಉತ್ತರ ಕೊಡಲು ಶ್ರಮಿಸಿದ್ದಾರೆ. ನಾನು ಬರೆದ ಲೇಖನವನ್ನು ಜೊಳ್ಳೆಂದು ಜರೆದು ಹಲವು ಪೊಳ್ಳು ವಿಚಾರಗಳನ್ನು ಪೋಣಿಸಿದ್ದಾರೆ. ಅವರ ಪೊಳ್ಳು ವಿಚಾರಗಳಿಗೆ ಉತ್ತರವೀಯುವುದು ಎಳ್ಳಷ್ಟೂ ಅವಶ್ಯಕತೆಯಿಲ್ಲವೆಂದು ಕಂಡುಬಂದಾಗ್ಯೂ ಕೂಡ ಪ್ರತ್ಯುತ್ತರವನ್ನು ಕೊಡಲಿಲ್ಲವೆಂಬ ನೆವದಿಂದ ತಮ್ಮ ತಪ್ಪುದಾರಿಯನ್ನೇ ರಾಜಮಾರ್ಗವೆಂದು ನಂಬಿ ಮುಗ್ಗರಿಸಿಯಾರೆಂಬ ಭಯದಿಂದಲೂ ಮತ್ತು ನಿಜಾಂಶವನ್ನು ಹೊರಗೆಡವಬೇಕೆಂಬ ಲವಲವಿಕೆಯಿಂದಲೂ ನಾನು ಪ್ರತ್ಯುತ್ತರವನ್ನು ಪ್ರಕಟಿಸಿರುತ್ತೇನೆ.

ವೀರಶೈವರು ವಾಗಾಡಂಬರಕ್ಕೆ ಬೆರಗಾಗದೆ ಕೇವಲ ಸತ್ಯಾನ್ವೇಷಣ ಬುದ್ಧಿಯಿಂದ ಯಾವುದು ಶಾಸ್ತ್ರೀಯ, ಯಾವುದು ಅಶಾಸ್ತ್ರೀಯ, ಯಾವುದು ಪುರಾತನ, ಯಾವುದು ನೂತನ, ಯಾವುದು ಸತ್ಯ, ಯಾವುದು ಅಸತ್ಯ, ಯಾವುದು ನಿತ್ಯ, ಯಾವುದು ಅನಿತ್ಯ, ಯಾವುದು ಘಟ್ಟಿ ಯಾವುದು ಪೊಳ್ಳು, ಎಂಬ ವಿಚಾರಗಳನ್ನು ನಿರ್ದಾಕ್ಷಿಣ್ಯ ಬುದ್ಧಿಯಿಂದಲೂ ನ್ಯಾಯದೃಷ್ಟಿಯಿಂದಲೂ ಅರಿತು ವೀರಶೈವ ಸಮಾಜದ ಧಾರ್ಮಿಕ ಅಂತಸ್ತನ್ನು ಉತ್ತಮಗೊಳಿಸಲು ಸರ್ವಪ್ರಯತ್ನವನ್ನೂ ಮಾಡಬೇಕೆಂದು ಬಿನ್ನೈಸಿಕೊಂಡು ಈ ಲೇಖನವನ್ನು ಪ್ರಾರಂಭಿಸುತ್ತೇನೆ.

ನನ್ನ ಲೇಖನದಲ್ಲಿ "ಶ್ರೀ ಜ. ನಿ. ಮೂರ್ತಿಗಳು ವೀರಶೈವರಿಗೆ ಮೊದಲನೆಯ ದೀಕ್ಷಾಪೂರ್ವಕ ಲಿಂಗಧಾರಣೆಯೊಂದೇ ಸಾಲದೆಂತಲೂ ಎರಡನೆಯ ಬಾರಿ ದೀಕ್ಷೆಯನ್ನು ಹೊಂದಲೇಬೇಕೆಂತಲೂ ಅಭಿಪ್ರಾಯ

ಪಡುತ್ತಾರೆಂ"ದು ಬರೆದುದಕ್ಕೆ ಅಕುಲಯ್ಯನವರು ಅದೊಂದು ದೊಡ್ಡ ಸುಳ್ಳೆಂದು ಉದ್ಗಾರ ತೆಗೆದಿದ್ದಾರೆ!

ನಾನು ಶ್ರೀ ಗುರುಮೂರ್ತಿಗಳ ಸಮಗ್ರ ಲೇಖನವನ್ನು ಓದಿ, ಅವರ ಅಭಿಪ್ರಾಯವು ಹೀಗಿರುವುದೆಂದು ಲಿಖಿಸಿದ್ದೆನು. ಹೀಗಲ್ಲವೆಂದು ಆ ಗುರುಮೂರ್ತಿಗಳೇ ಮೂರ್ತಿವತ್ತಾಗಿ ಉತ್ತರಕೊಟ್ಟಿದ್ದರೆ ಅದನ್ನು ಅಹುದೆನ್ನಬಹುದಾಗಿದ್ದಿತು. ಆದರೆ ಅವರು ಒಂದು ಮಾತನ್ನೂ ಆಡು ರುವದಿಲ್ಲ! ಈ ರೀತಿ ಉತ್ತರ ಕೊಡದೆ ಮೌನದಲ್ಲಿಯೇ ಉಳಿದಿರುವ ಶ್ರೀ ಮೂರ್ತಿಗಳ ಅಂತರಂಗವನ್ನು ಅಕುಲಯ್ಯನವರು ಅರಿತ ಬಗೆ ಹೇಗೆ? ಒಂದು ವೇಳೆ ಹೇಗೋ ಮಾಡಿ ಅರಿತರೆಂದು ಇಟ್ಟುಕೊಳ್ಳು ವುದಾದರೆ ಶಿಶುವಿನ ಲಿಂಗಧಾರಣೆಯು ದೀಕ್ಷಾಪೂರ್ವಕವಾದ ಲಿಂಗಧಾ ರಣೆಯಲ್ಲವೆಂದು ಶ್ರೀ ಗುರುಮೂರ್ತಿಗಳು ಘಂಟಾಘೋಷವಾಗಿ ಹೇಳಿ ದಂತಾಯಿತು! ಎಂದರೆ ಕೊಂಕಣವನ್ನು ಸುತ್ತಿ ಮೈಲಾರಕ್ಕೆ ಬಂದಂ ತೆಯೂ ರಾತ್ರಿಯೆಲ್ಲಾ ರಾಮಾಯಣವನ್ನು ಕೇಳಿ ಬೆಳಗೆದ್ದು, ರಾಮ ನಿಗೂ ಸೀತೆಗೂ ಏನು ಸಂಬಂಧ? ಎಂದು ಕೇಳಿದಂತೆಯೂ ಇಷ್ಟು ದಿವಸಗಳಿಂದಲೂ ಅನೇಕ ವಿದ್ವಾಂಸರುಗಳು ಚರ್ಚೆಯನ್ನು ನಡೆಯಿಸಿ ಶಿಶುವಿನ ಲಿಂಗಧಾರಣಕ್ರಿಯೆಯು ತಾತ್ವಿಕವಾಗಿಯೂ ಶಿವದೀಕ್ಷೆಯೇ ಎಂಬ ನಿರ್ಧಾರಕ್ಕೆ ಬಂದಿರುವ ಈ ಸಮಯದಲ್ಲಿ ಲಿಂಗಧಾರಣೆಯು ತಾತ್ವಿಕವಾಗಿಯೂ ಸಹ ಶಿವದೀಕ್ಷೆಯಲ್ಲವೆಂದು ಶ್ರೀ ಜ. ನಿ. ಮೂರ್ತಿ ಗಳ ಪರವಾಗಿ ಅಕುಲಯ್ಯನವರು ಹೇಳಿರುವುದನ್ನು ನೋಡಿದರೆ ಪರ ಮಾಶ್ಚರ್ಯವಾಗುತ್ತದೆ. ಈ ವಿಚಾರವಂತಿರಲಿ, ಅಕುಲಯ್ಯನವರ ಮುಂದಿನ ವಿವೇಚನೆಗಳನ್ನು ಪರಿಶೀಲಿಸೋಣ.

ಅಕುಲಯ್ಯನವರು ಗುರುಮೂರ್ತಿಗಳ ಪರವಾಗಿ ಲಿಂಗಧಾರಣೆಯ ಕಾಲದಲ್ಲಿ ಶಿಶುವಿಗೆ ಜ್ಞಾನೋದಯವಾಗಿರುವುದಿಲ್ಲನೆಂದೂ ಆದಕಾರಣ ಮಗುವಿಗೆ ಮಂತ್ರದೀಕ್ಷೆಯನ್ನು ಮಾಡುವುದು ಸಾಧ್ಯವೇ ಇಲ್ಲವೆಂದೂ ಸಿದ್ಧಾಂತ ಮಾಡುವುದಕ್ಕೆ ಹೊರಟಿದ್ದಾರೆ. ಮಗುವಿಗೆ ಜ್ಞಾನವಿರುವು ದಿಲ್ಲವೆಂಬ ಅಂಶವನ್ನು ಸಿದ್ಧಾಂತ ಮಾಡುವುದಕ್ಕೆ ಬಸವಣ್ಣನವರ ಸಹಾ ಯವನ್ನು ಪಡೆಯಬೇಕೆಂದು ಸಂಕಲ್ಪಿಸಿ 'ಉದಕದೊಳಗೆ ಬೈಚಿಟ್ಟ...... ಸ್ನೇಹದಂತಿದ್ದಿತ್ತು" ಎಂಬ ವಚನವನ್ನು ಉದಾಹರಿಸಿ ತಮ್ಮ ಮಾತ

ಗ್ರಿತ್ತೆಂದು ದಿಗ್ಭ್ರಮೆಗೊಂಡಿದ್ದಾರೆ. ಬಸವಣ್ಣನವರು ಹಾಡಿರುವ ಈ ವಚನವು ಯಾವಸ್ಥಲಕ್ಕೆ ಸೇರಿದುದೆಂಬುದನ್ನು ಅರ್ಥಮಾಡಿಕೊಳ್ಳಲಾರದೆ ಮನಸ್ಸಿನಲ್ಲಿ ಮಂಡಿಗೆಯನ್ನು ತಿನ್ನತೊಡಗಿದ್ದಾರೆ. ಬಸವಣ್ಣನವರು ಮೇಲೆ ಕಂಡ ವಚನದಲ್ಲಿ ಪಿಂಡಸ್ಥಲದ ಲಕ್ಷಣವನ್ನು ವರ್ಣಿಸಿದ್ದಾರೆಯೇ ಹೊರತು ಪಿಂಡಜ್ಞಾನಸ್ಥಲದ ಲಕ್ಷಣವನ್ನು ಅವರು ಆ ವಚನದಲ್ಲಿ ಹೇಳಿಲ್ಲ. ಪಿಂಡಜ್ಞಾನಸ್ಥಲದ ವಚನಗಳನ್ನು ಬಸವಣ್ಣನವರು ಬೇರೆ ವಚನಗಳಲ್ಲಿ ವಿಶದವಾಗಿ ನಿರೂಪಿಸಿದ್ದಾರೆ. ಅಕುಲಯ್ಯನವರು ಆ ವಚನಗಳನ್ನು ನೋಡದೆ ಪಿಂಡಸ್ಥಲದ ವಚನವನ್ನೇ ಹಿಡಿದು ಮಾತನಾಡಲು ಹೊರಟರೆ ಅದು ಕೇವಲ ಭ್ರಾಂತಿಯೇ ಸರಿ.

ಹಿಂದೆ ನಾನು ಏನಾಗಿದ್ದೆ, ಎಲ್ಲಿಂದ ಬಂದೆ, ಈಗೆಲ್ಲಿ ಇರುವೆ, ನನಗೂ ಪರಮಾತ್ಮನಿಗೂ ಇರುವ ಸಂಬಂಧವೇನು? ಎಂಬ ಪೂರ್ವಾಪರ ಜ್ಞಾನವೇ ಪಿಂಡಜ್ಞಾನ ಸ್ಥಲದ ಲಕ್ಷಣ. ಪಿಂಡಜ್ಞಾನ ಸ್ಥಲದ ಲಕ್ಷಣವನ್ನು ಬಸವಣ್ಣನವರು ಈ ರೀತಿ ನಿರೂಪಿಸಿದ್ದಾರೆ.

ಕಾಳಿಯ ಕಂಕಾಳದಿಂದ ಮುನ್ನ, ತ್ರಿಪುರಸಂಹಾರದಿಂದ ಮುನ್ನ,
ಹರಿವಿರಿಂಚಿಗಳಿಂದ ಮುನ್ನ, ಉಮೆಯ ಕಲ್ಯಾಣದಿಂದ ಮುನ್ನ,
ಮುನ್ನ ಮುನ್ನ ಮುನ್ನ ಅಂದಿಂಗಳಿಯ ನೀನು ಹಳೆಯ ನಾನು
ಮಹಾದಾನಿ ಕೂಡಲಸಂಗಮದೇವಾ.

ಇದೀಗ ಪಿಂಡಜ್ಞಾನ ಸ್ಥಲದ ಲಕ್ಷಣ— ಆತ್ಮವು ಪರಮಾತ್ಮನಷ್ಟೇ ಪುರಾತನವಾದುದು ಅಷ್ಟೇ ಏಕೆ ಪರಮಾತ್ಮನಿಗಿಂತಲೂ ಮುಂಚಿನದು. ಎಂದರೆ ಅದು ಪರಮಾತ್ಮನೇ ಎಂಬ ಉಚ್ಚತಮವಾದ ತತ್ವಜ್ಞಾನವನ್ನು (*Immortality of the soul* ಎಂಬ) ಆತ್ಮನ ಅಮರತ್ವದ ಜ್ಞಾನದ ಲಕ್ಷಣವನ್ನು ಈ ವಚನದಲ್ಲಿ ಬಸವಣ್ಣನವರು ಹೃದಯಂಗಮವಾಗಿ ಚಿತ್ರಿಸಿ ಪಿಂಡಜ್ಞಾನ ಸ್ಥಲವನ್ನು ನಿರೂಪಿಸಿದ್ದಾರೆ. ಈ ರೀತಿ ಪಿಂಡಕ್ಕೆ ಎಂದರೆ ಶಿಶುವಿಗೆ ಪೂರ್ವಾಪರ ಜ್ಞಾನವು ಲಭಿಸಿದ ಮೇಲೆ ಅದಕ್ಕೆ ಸಂಸಾರದಲ್ಲಿ ಹೇಯ ಹುಟ್ಟುತ್ತದೆ. ಇದೇ ಸಂಸಾರ ಹೇಯಸ್ಥಲ. ಈ ಸ್ಥಲದ ವರ್ಣನೆಯನ್ನು ಬಸವಣ್ಣನವರು ಹೀಗೆ ನಿರೂಪಿಸಿದ್ದಾರೆ.

ಭವಬಂಧನ ಭವಪಾಶವಾದ ಕಾರಣವೇನಯ್ಯಾ?
ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ

ಹಿಂದಣ ಸಿರಿಯಲ್ಲಿ ಜಂಗಮವ ಜರಿದೆನಾಗಿ
ಅರಿದಡೋ ಸಂಸಾರವ ಹೊದ್ದಲೀವೆನೆ - ಕೂಡಲಸಂಗಮದೇವಾ?

ಮತ್ತು

ಅರಿಯದೆ ಜನನಿಯ ಜಠರದಲ್ಲಿ
ಬಾರದ ಭವಂಗಳಲ್ಲಿ ಬರಿಸಿದೆ ತಂದೆ
ಹುಟ್ಟುತ್ತ ತಪ್ಪಿಯುತ್ತ ಎಲೆ ಲಿಂಗವೇ
ಮುನ್ನ ಹುಟ್ಟಿದುದಕ್ಕೆ ಕೃಪೆಯ ಮಾಡು ಎಲೆ ಲಿಂಗವೇ
ಇನ್ನು ಹುಟ್ಟಿದರೆ ಕೂಡಲಸಂಗಮದೇವಾ ನಿಮ್ಮಾಣೆ!

ಎಂದು ಪಿಂಡವು ಪರಿತಪಿಸಿ ಸಂಸಾರದಲ್ಲಿ ಹೇಯವನ್ನು ತಾಳಿ ಕೊಂಡು ಇನ್ನು ನನ್ನನ್ನು ಉದ್ಧರಿಸುವವರಾರು? ಎಂದು ಮೊರೆಯಿಟ್ಟು "ಆರಿಗಾರೂ ಇಲ್ಲ ಕೆಟ್ಟವಂಗೆ ಕೆಳೆಯಿಲ್ಲ ಜಗದನಂಟ ನೀನೆ ಅಯ್ಯಾ" ಎಂದು ಅಂಗಲಾಚಿ ಗುರುಕರುಣೆಗೆ ಹಾತೊರೆಯುವುದು ಇದೇ ಮುಂದೆ ಗುರುಕರುಣಸ್ಥಲವಾಗಿ ಗುರುವು ಕೃಪೆಮಾಡಿ ಕರುಣಿಸಲು ಲಿಂಗಧಾರಣ ಸ್ಥಲವು ಅಳವಡುವುದೆಂದೂ ಗುರುವು ಆ ಸ್ಥಲದಲ್ಲಿ ಶಿಶುವಿಗೆ ಹಸ್ತಮಸ್ತಕ ಸಂಯೋಗ ಮಾಡಿ ಶಿಶುವಿನ ಕಾರಣ ತನುವಿನ ಪೂರ್ವಾಶ್ರಯವಂ ಕಳೆದು ಭಾವಲಿಂಗ ಸಂಬಂಧವಂ ಮಾಡಿ ಶಿಶುವಿನ ಕಿವಿಯಲ್ಲಿ ಮಂತ್ರವನ್ನು ಉಪದೇಶಮಾಡಿ ಶಿಶುವಿನ ಸೂಕ್ಷ್ಮತನುವಿನ ಪೂರ್ವಾಶ್ರಯವಂ ಕಳೆದು ಪ್ರಾಣಲಿಂಗ ಸಂಬಂಧವಂ ಮಾಡಿ ಶಿಶುವಿಗೆ ಲಿಂಗಧಾರಣವಂ ಮಾಡಿ ಶಿಶುವಿನ ಸ್ಥೂಲತನುವಿನ ಪೂರ್ವಾಶ್ರಯವಂ ಕಳೆದು ಇಷ್ಟಲಿಂಗ ಸಂಬಂಧವಂ ಮಾಡುವರು. ಇದೇ ಸಿದ್ಧಾಂತ ಶಿಖಾಮಣಿಯೇ ಮೊದಲಾದ ಶಾಸ್ತ್ರಗ್ರಂಥಗಳಲ್ಲಿಯೂ ಶಿವಶರಣರ ಅನಂತ ಅನುಭವದ ವಚನಗಳಲ್ಲಿಯೂ ಪ್ರತಿಪಾದಿತವಾಗಿರುವ ಸುಪ್ರಸಿದ್ಧ ಲಿಂಗಧಾರಣಸ್ಥಲವು.

ಶಿಶುವಿಗೆ ಹೇಗೆ ಪಿಂಡಸ್ಥಲ ಪಿಂಡಜ್ಞಾನಸ್ಥಲ ಸಂಸಾರ ಹೇಯಸ್ಥಲ ಗುರುಕರಣಸ್ಥಲ ಲಿಂಗಧಾರಣಸ್ಥಲಗಳು ಪ್ರಾಪ್ತವಾಗುತ್ತವೆಯೋ ವಯಸ್ಕರಾದ ಭವಿಗಳಿಗೂ ಸಹ ಅದೇ ರೀತಿ ಪ್ರಾಪ್ತವಾಗಿ ಕೊನೆಯಲ್ಲಿ ಲಿಂಗಧಾರಣವು ಅಳವಡುವುದು. ಕೆಲವರು ಭ್ರಮಿಸುವಂತೆ ಶಿಶುವಿಗೇ ಬೇರೆ ವಿಧವಾದ ದೀಕ್ಷೆಯಾಗಲೀ ವಯಸ್ಕನಾದ ಭವಿಗೇ ಬೇರೆ ರೀತಿ

ಯಾದ ದೀಕ್ಷೆಯಾಗಲಿ ಇರುವುದಿಲ್ಲ. ಶಿಶುವಾಗಲಿ ವಯಸ್ಕನಾಗಲಿ ಅವರಿಬ್ಬರಿಗೂ ಮೇಲೆ ಹೇಳಿದ ಐದು ಸ್ಥಲಗಳೂ ಒಂದೇ ಆಗಿರುತ್ತವೆ. ಈ ಐದು ಸ್ಥಲಗಳಲ್ಲಿ ಮೊದಲಿನ ಮೂರು ಸ್ಥಲಗಳನ್ನು ಶಿಶುವು ತಾಯಿಯ ಗರ್ಭದಲ್ಲಿ ಆಚರಿಸಿದರೆ ವಯಸ್ಕನಾದ ಭವಿಯು ತನ್ನ ವಯೋಗುಣಕ್ಕನುಸಾರವಾಗಿ ಹೊರಗಡೆಯ ಪ್ರಪಂಚದಲ್ಲಿ ಅನುಭವಿಸುತ್ತಾನೆ. ಈ ರೀತಿ ಶಿಶುವಿನ ಶಿವದೀಕ್ಷೆಗೂ ವಯಸ್ಕನ ಶಿವದೀಕ್ಷೆಗೂ ಇರುವ ಸಾಮ್ಯ ತಾರತಮ್ಯಗಳನ್ನರಿಯದೆ ಶಿಶುವಿನ ಲಿಂಗಧಾರಣ ದೀಕ್ಷೆಯೇ ಬೇರೆ ಭವಿಗೆ ಮಾಡುವ ಶಿವದೀಕ್ಷೆಯೇ ಬೇರೆ ಎಂದು ಹೇಳುವ ಮಾತು ಅನುಚಿತವೂ ಶಾಸ್ತ್ರವಿರುದ್ಧವೂ ಅನುಭವಕ್ಕೆ ವ್ಯತಿರಿಕ್ತವೂ ಆದುದಾಗಿದೆ.

ಇನ್ನು ಶಿಶುವು ತಾಯಿಯ ಗರ್ಭದಲ್ಲಿ ಪಿಂಡಸ್ಥಲಾನಂತರ ಮತ್ತು ಲಿಂಗಧಾರಣ ಸ್ಥಲಕ್ಕೆ ಪೂರ್ವ ಪಿಂಡಜ್ಞಾನಸ್ಥಲ ಮತ್ತು ಸಂಸಾರ ಹೇಯಸ್ಥಲಗಳನ್ನು ಅದು ಹೇಗೆ ಆಚರಿಸೀತು? ಅದಕ್ಕೆ ಹೇಗೆ ಜ್ಞಾನ ಎದ್ದೀತು? ಅದಕ್ಕೆ ಸಂಸಾರ ಹೇಯ ಹೇಗೆ ಹುಟ್ಟೀತು? ಎಂಬೀ ಸಂದೇಹಗಳನ್ನು ಪರಿಶೀಲಿಸೋಣ.

ತಾಯಿಯ ಗರ್ಭದಲ್ಲಿರುವ ಶಿಶುವಿಗೆ ಎಂಟನೆಯ ತಿಂಗಳಲ್ಲಿ ಪರಿಪೂರ್ಣವಾದ ಜ್ಞಾನವು ಲಭಿಸುವುದೆಂಬುದಕ್ಕೆ ವೀರಅಭಿಮನ್ಯುವಿನ ಉದಾಹರಣೆಯೊಂದೇ ಸಾಕಾಗಿದೆ. ತಾಯಿಯ ಗರ್ಭದಲ್ಲಿ ಅಡಗಿದ್ದ ವೀರ ಅಭಿಮನ್ಯು (ಪಿಂಡ)ವು ಶ್ರೀಕೃಷ್ಣನು ಹೇಳಿದ ಚಕ್ರವ್ಯೂಹದ ರಚನೆಯ ಕಥನವನ್ನು ಹೇಗೆ ಕೇಳಿ ಆ ಕಥನವು ಅಭಿಮನ್ಯುವಿನ ಚಿತ್ತಕ್ಕೆ ಹೇಗೆ ಅಂಟಿಕೊಂಡು ಮುಂದೆ ಅದು ಹೇಗೆ ಪರಿಣಾಮಗೊಂಡಿತು ಎಂಬ ಅಂಶವು ಚರಿತ್ರ ಪ್ರಸಿದ್ಧವಾದುದು. ಇದೇ ರೀತಿಯ ಪ್ರಸಂಗಗಳು ಶ್ರೀ ಚನ್ನಬಸವೇಶ್ವರ, ಛತ್ರಪತಿ ಶಿವಾಜಿ, ನೇಪೋಲಿಯನ್ ಬೋನಾಪಾರ್ಟ ಮುಂತಾದ ಅನೇಕ ಮಹನೀಯರ ಜೀವಿತದಲ್ಲೂ ಸಹ ನಡೆದವೆಂಬ ಅಂಶವನ್ನು ಈಗಾಗಲೇ ಶ್ರೀಮಾನ್ ಜೀರಗೆ ಕ. ಬಸವಪ್ಪ ಬಿ. ಎ. ಅವರು "ಶಿವಾನುಭವ"ದಲ್ಲಿ ಬರೆದು ವ್ಯಕ್ತಗೊಳಿಸಿದ್ದಾರೆ.

ಈ ವಿಚಾರದಲ್ಲಿ ಶಾಸ್ತ್ರಗಳೂ ಸಹ ಏನು ಹೇಳುತ್ತವೆ ಎಂಬುದನ್ನು ಕೊಂಚ ಚರ್ಚೆಮಾಡಿ ನೋಡೋಣ:- ಈ ವಿಚಾರದಲ್ಲಿ "ಗರ್ಭೋಪನಿಷತ್" ಎಂಬ ಒಂದು ಉಪನಿಷತ್ಪ್ರಮಾಣವೇ ಇದ್ದು ಅದರ ಮೇಲೆ

ಅನಂತಾನಂತಜ್ಞಾನಿಗಳೂ ಅನೇಕವಾಗಿ ಟೀಕೆ ಟಿಪ್ಪಣಿಗಳನ್ನು ಬರೆದಿಟ್ಟಿದ್ದಾರೆ. ಅವರಲ್ಲಿ ಶ್ರೀಮನ್ನಿಜಗುಣ ಶಿವಯೋಗಿಗಳೂ ಒಬ್ಬರು. ಅವರು ತಮ್ಮ ವಿವೇಕಚಿಂತಾಮಣಿ ನಾಮಕ ಗ್ರಂಥದಲ್ಲಿ ಪಿಂಡೋತ್ಪತ್ತಿಯ ವರ್ಣನೆಯನ್ನು ನಿರ್ದಿಷ್ಟವಾಗಿಯೂ ವಿವರವಾಗಿಯೂ ಶಾಸ್ತ್ರೀಯವಾಗಿಯೂ ನಿರೂಪಿಸಿ ಪಿಂಡದ ಬೆಳವಣಿಗೆಯನ್ನು ವರ್ಣಿಸುತ್ತಾ ಹೀಗೆ ಹೇಳಿದ್ದಾರೆ:—

"ತಿಂಗಳು ಒಂದಕ್ಕೆ ಶಿರಸ್ಸು ಹುಟ್ಟುವುದು ತಿಂಗಳೆರಡಕ್ಕೆ ಭುಜಂಗಳುದಿಸುತ್ತಿಹವು। ಮೂರು ತಿಂಗಳಿಗೆ ಪಾದಾಂಕುರ ಕೇಶಗುಹ್ಯಾದಿಗಳಹುವು। ನಾಲ್ಕು ತಿಂಗಳಿಗೆ ನಾಸಾಕ್ಷಿಶ್ರೋತ್ರಾದಿರಂಧ್ರಂಗಳಹುವು। ತಿಂಗಳೈದಕ್ಕೆ ಸ್ಕಂದ ಜಠರಾದಿಗಳಹುವು। ತಿಂಗಳಾರಕ್ಕೆ ಗುಪ್ತಪಾದಾಂಗುಳಿಗಳಹುವು। ಏಳು ತಿಂಗಳಿಗೆ ಸರ್ವಾಂಗಸಂಧಿ ಸಂಪೂರ್ಣವಾಗಿ ಚೇತನಂ ಪುಟ್ಟಿ ಮಾತೆಯುಂಡನ್ನರಸವಂ ನಾಭಿಸೂತ್ರದಿಂದುಣುತ್ತಿಹುದು। ಎಂಟು ತಿಂಗಳಿಗಾಗರ್ಭಾಶ್ರಯವೆಂಬ ರೌರವ ನರಕದ ಮಲಮೂತ್ರಾದಿಗಳ ಹೇಸಿಕೆಯಿಂ ಬಚ್ಚಲಪುಳುವಿನಂತೆ ಮಹಾ ದುಃಖವನನುಭವಿಸುತ್ತ ವಿಚಾರಿಸಿ ನೋಡಿ ಮುನ್ನ ನಾ ನಜ್ಞಾನಬಲದಿಂ ಶಿವಜ್ಞಾನ ಹೀನನಾಗಿಂತು ನಾನಾ ಜನ್ಮಂಗಳಲ್ಲಿ ತೊಳಲಿದೆ ನಿನ್ನು ಗರ್ಭಾಶ್ರಯದಿಂ ಪ್ರಪಂಚಕ್ಕೆ ಪೊರಮಟ್ಟು। ಶ್ರೀಗುರುವನೈದಿ ಶಿವಭಕ್ತಿ ಶಿವಜ್ಞಾನ ಶಿವಧ್ಯಾನ ಶಿವಾರ್ಚನೆ ಶಿವವ್ರತ ಶಿವಶಿವಮಾಹೇಶ್ವರರ ಸಂಸರ್ಗಾದಿ ಸದ್ಗುಣಸಂಪನ್ನನಾಗಿ ಜನ್ಮಜರಾಮರಣರೂಪದಿಂ ಸಂಸಾರ ಸಾಗರವಂ ದಾಂಟುವೆನೆಂದು ತನ್ನ ಪೂರ್ವಾಪರ ಸ್ಥಿತಿಗಳಂ ಗರ್ಭೋಪನಿಷತ್ಸ್ಮೃತದಿಂ ನೆನೆವುತ್ತಿಹುದು."

ಇಂತಿದು ಶ್ರೀಮನ್ನಿಜಗುಣಶಿವಯೋಗಿಗಳ ಮಹಾವಾಕ್ಯ — ಈ ವಾಕ್ಯದಲ್ಲಿ ನಿಜಗುಣ ಶಿವಯೋಗಿಗಳು ಶಿಶುವಿನ ಪಿಂಡಸ್ಥಲ ಪಿಂಡಜ್ಞಾನಸ್ಥಲ ಸಂಸಾರ ಹೇಯಸ್ಥಲ ಈ ಮೂರು ಸ್ಥಲಗಳೂ ಹೇಗೆ ಪ್ರಾಪ್ತವಾಗುತ್ತವೆ ಎಂಬುದನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ "ಅಂದುದೆ ಜನನಿಯ ಜಠರದಲ್ಲಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ" "ಎನ್ನ ಹುಟ್ಟಿದುದಕ್ಕೆ ಕೃಪೆ ಮಾಡು ಎಲೆ ಲಿಂಗವೇ" "ಭವಬಂಧನ ಪ್ರವಾಶವಾದ ಕಾರಣವೇನಯ್ಯಾ? ಹಿಂದಣ ಜನ್ಮಗಳಲ್ಲಿ ಲಿಂಗವ ಮರೆದೆನಾಗಿ ಹಿಂದಣ ಸಿರಿಯಲ್ಲಿ ಜಂಗಮವ ಜರೆದೆನಾಗಿ" ಎಂಬ

ವಾಕ್ಯಗಳೂ ಮೇಲೆ ನಿಜಗುಣ ಶಿವಯೋಗಿಗಳು ನಿರೂಪಿಸಿದ "ಮುನ್ನ ನಾ ನಜ್ಞಾನ ಬಲದಿಂ ಶಿವಜ್ಞಾನ ಹೀನನಾಗಿಂತು ನಾನಾ ಜನ್ಮಂಗಳಲ್ಲಿ ತೊಳಲಿದೆ ಇನ್ನು ಗರ್ಭಾಶ್ರಯದಿಂ ಪ್ರಪಂಚಕ್ಕೆ ಪೊರಮಟ್ಟು ಶ್ರೀಗುರುವ ನೈದಿ... ...ಸದ್ಗುಣಸಂಪನ್ನನಾಗಿ......ಸಂಸಾರಸಾಗರವಂ ದಾಂಟ ವೆ ನೆಂದು" ಎಂಬ ವಾಕ್ಯಗಳೂ ಶಿಶುವಿನ ಪಿಂಡಜ್ಞಾನ ಸ್ಥಲ ಮತ್ತು ಸಂಸಾರ ಹೇಯಸ್ಥಲಗಳ ಆಚರಣೆಯನ್ನು ಸಂಪೂರ್ಣವಾಗಿ ವರ್ಣಿಸುತ್ತವೆ. ಈ ವಾಕ್ಯಗಳನ್ನು ಆಕುಲಯ್ಯನವರೂ ನಿಡುಮಾಮಿಡಿಯ ಮಾರ್ತಿ ಗಳೂ ಅವಲೋಕಿಸಬೇಕೆಂದು ನನ್ನ ಬಿನ್ನಹ.

ಈ ರೀತಿಯಲ್ಲಿ ಶಿಶುವಿಗೆ ತಾಯಿಯ ಗರ್ಭದಲ್ಲಿ ಎಂಟನೆಯ ತಿಂಗಳಲ್ಲಿ ಪ್ರಾಪ್ತವಾಗತಕ್ಕ ಮೆದುಳಿನ ಶಕ್ತಿಯು ಬಹು ಚುರುಕಾದು ದಾಗಿರುತ್ತದೆ. ತಾಯಿಯು ನೋಡುವುದು ಕೇಳುವುದು ಓದುವುದು ಧ್ಯಾನಿಸುವುದು ಪೂಜಿಸುವುದು ದುಃಖಿಸುವುದು ಸುಖಿಸುವುದು ಇವೆ ಲ್ಲವೂ ಗರ್ಭಸ್ಥ ಶಿಶುವಿನ ಮೆದುಳಿನ ಮೇಲೆ ಶಾಶ್ವತವಾದ ಮುದ್ರಿಕೆ ಯನ್ನು ಒತ್ತುತ್ತವೆ. ಈ ಕಾರಣದಿಂದಲೇ ಗರ್ಭಿಣಿಯರಾದ ಸ್ತ್ರೀಯರು ಸುವಾರ್ತೆಗಳನ್ನು ಕೇಳಬೇಕೆಂದೂ ಸತ್ಕಥೆಗಳನ್ನು ಲಾಲಿಸಬೇಕೆಂದೂ ಸುಖಸಂತೋಷಗಳಲ್ಲಿ ಇರಬೇಕೆಂದೂ ಅನುಭವಿಗಳು ಒಂದು ಕಟ್ಟನ್ನು ಮಾಡಿದ್ದಾರೆ. ಇದರಿಂದಲೇ ಗರ್ಭಿಣಿಯರು ದುಃಖವಾರ್ತೆಗಳನ್ನು ಕೇಳ ದಂತೆ ಗ್ರಹಣವೇ ಮುಂತಾದ ನಿಷಿದ್ಧ ನೋಟಗಳನ್ನು ನೋಡದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳಲಾಗುವುದು. ಇದಕ್ಕೆಲ್ಲ ಗರ್ಭಸ್ಥ ಶಿಶು ವಿನ ಮೆದುಳಿನ ಆಕರ್ಷಣ ಶಕ್ತಿಯೇ ಕಾರಣವಾಗಿದೆ. ಎಂದ ಮೇಲೆ ಶ್ರೀಗುರುವು ಶಿಶುವಿಗೆ ಶಿವದೀಕ್ಷೆಯನ್ನು ಕೊಟ್ಟಾಗ್ಗೆ ಉಪದೇಶ ಮಾಡ ತಕ್ಕ ದೀಕ್ಷಾಬೋಧೆಯು ಮಗುವಿನ ಮೆದುಳಿನ ಮೇಲೆ ಪರಿಪೂರ್ಣ ವಾದ ಮುದ್ರಿಕೆಯನ್ನುಂಟು ಮಾಡುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ನಾವು ಒಂದು ಎಚ್ಚರಿಕೆಯನ್ನು ಮಾತ್ರ ತೆಗೆದುಕೊಳ್ಳ ಬೇಕಾಗಿದೆ. ಮಾಡತಕ್ಕ ಬೋಧೆಯು ಮಗುವಿನ ಮೆದುಳಿನ ಮೇಲೆ ಸಂಪೂರ್ಣವಾಗಿ ಮುದ್ರಿಕೆಯಾಗುವುದರಿಂದ ಮಾಡತಕ್ಕ ಬೋಧೆಯು ಮೊದಲು ಪರಿಪೂರ್ಣವಾದುದಾಗಿರಬೇಕು. ಎಂದರೆ ಬೋಧೆ ಮಾಡ ತಕ್ಕ ಗುರುವು ಪರಿಪೂರ್ಣನಾಗಿ ಜ್ಞಾನಿಯಾಗಿರಬೇಕು. ಅರ್ಧಂಬರ್ಧ ತಿಳಿದ ಅಥವ ಏನೂ ತಿಳಿಯದ ಗುರುಗಳ ಕೈಯಲ್ಲಿ ದೀಕ್ಷೆಯನ್ನು

ಮಾಡಿಸಿದ್ದಾದರೆ ಮಗುವಿನ ಮೆದುಳಿನ ಮೇಲೆ ಬೋಧೆಯು ಮುದ್ರಿಕೆಯು ಅರ್ಧಂಬರ್ಧವಾಗಿ ಬೀಳುತ್ತದೆ ಅಥವ ಸಂಪೂರ್ಣವಾಗಿ ಬೀಳುವುದೇ ಇಲ್ಲ. ಈ ವಿಚಾರವು ಕಟ್ಟು ಕಥೆಯಲ್ಲ. ಇವು ಶಾಸ್ತ್ರ. ಇದಕ್ಕೆ ಮನಶ್ಶಾಸ್ತ್ರ (*Psychalogy*) ಎಂದು ಪಾಶ್ಚಾತ್ಯರಲ್ಲಿ ಹೆಸರಿದೆ.

ಇನ್ನು ಈ ಆಕುಲಯ್ಯನವರು ಶಿದ್ಧಾಂತ ಶಿಖಾಮಣಿಯ ವಿಚಾರವನ್ನೆತ್ತಿಕೊಂಡು, ಶಿದ್ಧಾಂತಶಿಖಾಮಣಿಯು ಭವಿಗಳಿಗಾಗಿಯೋ? ಭಕ್ತರಿಗಾಗಿಯೋ? ಎಂದು ಕೇಳಿದ್ದಾರೆ. ಈ ಪ್ರಶ್ನೆಗೆ ಒಬ್ಬ ಸಣ್ಣ ಹುಡುಗನೂ ಉತ್ತರವನ್ನು ಹೇಳಬಲ್ಲವನಾಗಿದ್ದಾನೆ. ಎಂದ ಮೇಲೆ ಈ ಪ್ರಶ್ನೆಗೆ ಉತ್ತರವೇನೆಂಬುದು ಆಕುಲಯ್ಯನವರಿಗೆ ಅರ್ಥವಾಗದೇ ಇದ್ದುದಕ್ಕಾಗಿ ವ್ಯಾಕುಲಪಡಬೇಕಾಗಿದೆ. ಅನ್ನಸತ್ರಗಳನ್ನು ಕಟ್ಟಿಸಿರುವುದು ಹಸಿದವರಿಗೋ? ಹೊಟ್ಟೆ ತುಂಬಿದವರಿಗೋ? ಅರವಟ್ಟಿಗೆಗಳನ್ನು ಕಟ್ಟಿಸಿರುವುದು ಬಾಯಾರಿದವರಿಗೋ? ಬಾಯಲ್ಲಿ ನೀರೂರಿದವರಿಗೋ? ವೈದ್ಯಶಾಲೆಗಳನ್ನು ಕಟ್ಟಿಸಿರುವುದು ರೋಗಿಗಳಿಗೋ? ನಿರೋಗಿಗಳಿಗೋ? ಈ ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲವರು ನಮ್ಮ ಆಕುಲಯ್ಯನವರ ಪ್ರಶ್ನೆಗಳಿಗೆ ಸುಲಭವಾಗಿ ಉತ್ತರ ಕೊಡಬಹುದಾಗಿದೆ. ಹೃದಯಮುಟ್ಟಿ ಹೇಳುವುದಾದರೆ ಶಿದ್ಧಾಂತಶಿಖಾಮಣಿಯೇ ಏಕೆ? ವೀರಶೈವ ಧರ್ಮವೇ ಇರುವುದು ಭವಿಗಳ ಉದ್ಧಾರಕ್ಕೆ.

ನಿಡುಮಾಮಿಡಿಮಠದ ಶ್ರೀಗುರುಮೂರ್ತಿಗಳವರು ತಮ್ಮ ವಾದದ ಸಮರ್ಥನೆಗಾಗಿ ಶಿದ್ಧಾಂತಶಿಖಾಮಣಿಯನ್ನು ಉಪಯೋಗಿಸಿಕೊಂಡಿದ್ದ ರೀತಿಯನ್ನು ಖಂಡಿಸಿ ನಾನು ಬರೆದಿದ್ದ "ಶಿದ್ಧಾಂತಶಿಖಾಮಣಿಯೊಳಗಣ ಅದೆಲ್ಲವೂ ಭವಿಗಳನ್ನು ಭಕ್ತರನ್ನಾಗಿಸುವಾಗ ಮಾಡುವ ದೀಕ್ಷಾಕ್ರಮವೆಂತಲೂ ಆ ಗ್ರಂಥದ ದೃಷ್ಟಿಯಿಂದಲೂ ಧಾರಣ – ದೀಕ್ಷೆಗಳೆರಡೂ ಒಂದೇ—ಅಭಿನ್ನವಾದ – ಸಂಸ್ಕಾರ" ವೆಂಬ ಅಭಿಪ್ರಾಯವನ್ನು ಈ ಆಕುಲಯ್ಯಗಳು ಒಪ್ಪಿಕೊಂಡು "ಇದು ನ್ಯಾಯ ಬದ್ಧವಾದ ವಿಮರ್ಶೆ ಇದನ್ನು ಒಪ್ಪಲೇಬೇಕು" ಎಂದು ಬರೆದು ಮೂಲ ತತ್ವವನ್ನು ಒಪ್ಪಿಕೊಂಡಿದ್ದಾರೆ. ಇದಕ್ಕಾಗಿ ಸಂತೋಷ! ಆದರೆ ಆ ವಾಕ್ಯದ ಮುಂದೆಯೇ "ಗುರುಕಾರುಣ್ಯಸ್ಥಲದಲ್ಲಿ ಶಿಷ್ಯನಿಗೆ ಹೇಳಿದ ಪ್ರಾರ್ಥನೆಗಳು ಜನ್ಮಶಿಶುವಿಗೆ ಸಾಧ್ಯವೆ? ಎಂಬ ಸಂದೇಹವನ್ನೂ ಇದಕ್ಕೆ ಸಮಂಜಸವಾದ

ಉತ್ತರವನ್ನು ಹೇಳಿದರೆ, ಒಪ್ಪಬಹುದು ಎಂಬ ಅಪೇಕ್ಷೆಯನ್ನೂ ಪ್ರಕಟಿಸಿದ್ದಾರೆ!

ಇವರ ಈ ಸಂದೇಹಕ್ಕೆ ಶ್ರೀಮನ್ನಿಜಗುಣ ಶಿವಯೋಗಿಗಳು ತಮ್ಮ ವಿವೇಕ ಚಿಂತಾಮಣಿಯ ಮೂಲಕ ಕೊಟ್ಟಿರುವ ಸಮಂಜಸವಾದ ಉತ್ತರವನ್ನು ಈ ಲೇಖನದಲ್ಲಿಯೇ ಎತ್ತಿಕೊಟ್ಟಿದೆ. ಅದನ್ನು ಚನ್ನಾಗಿ ಓದಿ ತಮ್ಮ ಸಂದೇಹವನ್ನು ನಿವಾರಿಸಿಕೊಳ್ಳಲಿ. ಮತ್ತು ಇವರು ಗಾರುಡ ಪುರಾಣದ ಶ್ಲೋಕವೆಂದು ಉದಹರಿಸಿರುವ "ವಂಶಾವಳಿ ಪ್ರಯಾತಾನಾಂ ಲಿಂಗಧಾರಣಶಾಲಿನಾಂ........." ಎಂಬ ಶ್ಲೋಕಕ್ಕೆ ಲಿಂಗಧಾರಿಗಳು ಪುನಃ ಶಿವದೀಕ್ಷೆಯನ್ನು ಹೊಂದಬೇಕೆಂಬ ಅರ್ಥವು ತಪ್ಪು. ಮತ್ತು ಅದರ ಸರಿಯಾದ ಅರ್ಥವು "ವಂಶಾನುಕ್ರಮವಾಗಿ ಲಿಂಗಧಾರಣವುಳ್ಳ ಜ್ಞಾನಿಗಳಾದ ಶಿವಭಕ್ತರಿಗೆ ಶೂದ್ರತ್ವವಿಲ್ಲವು ಇವರು ಪಡೆದಿರುವ ಶಿವ ದೀಕ್ಷಾ ಸಂಸ್ಕಾರ ಪ್ರಭಾವದಿಂದ ನಮಕ ಚಮಕ ಪಂಚಬ್ರಹ್ಮ ಮಂತ್ರಾದಿ ವೈದಿಕಾಧಿಕಾರ ಉಂಟಾಗಿರುತ್ತದೆ." ಎಂದಾಗುತ್ತದೆ ಎಂಬುದನ್ನು ಬಲ್ಲವರಿಂದಲಾದರೂ ತಿಳಿದುಕೊಂಡು ಧಾರಣದೀಕ್ಷೆಯ ಅಭಿನ್ನ ಸಂಸ್ಕಾರದಿಂದ ಎಲ್ಲ ವಿಧವಾದ ಧರ್ಮಾಚರಣೆಗಳಿಗೂ ಅಧಿಕಾರ ಉಂಟಾಗುತ್ತದೆಯೆಂಬುದನ್ನು ಅರಿತು ಸ್ವಸ್ಥಚಿತ್ತರಾಗಿರಬೇಕು.

ಇನ್ನು ಅಕುಲಯ್ಯನವರ 'ಗರ್ಭಾಷ್ಟಮೇ' ವಿಚಾರ:— ಒಂದನ್ನು ಕೇಳಿದರೆ ಮತ್ತೊಂದನ್ನು ಹೇಳಿ ತಲೆತಪ್ಪಿಸಿಕೊಳ್ಳುವ ಜಾಣತನವನ್ನು ಇವರು ಚನ್ನಾಗಿ ಕಲಿತಿದ್ದಾರೆ. ಇವರ ಈ ವರ್ತನೆಯು ಯಾವೂರು ಗೌಡ? ಎಂದರೆ ಕಂಬಳಿ ಮೂರು ಹಣ! ಎಂದಂತಾಗಿದೆ. ಗರ್ಭಾಷ್ಟಮೇ ಎಂಬ ಪದದಲ್ಲಿ ಹುಟ್ಟಿದ ಎಂಟು ವರ್ಷಕ್ಕೆ ಎಂಬ ಅರ್ಥ ಹೇಗೆ ಉಂಟಾಗುತ್ತದೆ? ಎಂದು ನೀವು ಕೇಳಿದರೆ ಈ ಅಕುಲಯ್ಯನವರು ವರ್ಷಾ ಎಂದರೆ ಮಳೆ ಎಂದು ಅರ್ಥವಾಗುತ್ತದೆ ಎಂದು ಹೇಳಿ ಕಂಬಳಿಗೌಡನ ಗೌಡಿಕೆಯನ್ನು ಹೊತ್ತುಕೊಂಡಿದ್ದಾರೆ. ವರ್ಷಾ- ವರ್ಷ ಎಂಬ ಪದಗಳ ಹ್ರಸ್ವ-ದೀರ್ಘಗಳ ಪಾಂಡಿತ್ಯವನ್ನು ಪ್ರದರ್ಶಿಸಿ ಸಂಸ್ಕೃತದ ಘನಪಾಂಡಿತ್ಯಕ್ಕೆ ಅರ್ಹತೆಯನ್ನು ಸಂಪಾದಿಸಿಕೊಳ್ಳಲು ಹೋಗಿ ವಿಷಯವನ್ನೇ ಮರೆತು ಪೆಚ್ಚಾಗಿದ್ದಾರೆ!

ನಾನು ಕೇಳುವುದು ಗರ್ಭಾಷ್ಟಮೇ ಶಬ್ದದಲ್ಲಿ "ಹುಟ್ಟಿದ ಎಂಟು ವರ್ಷಕ್ಕೆ" ಎಂಬುದಾಗಿ ಅರ್ಥವಾಗುತ್ತದೆಯೆ? ಎಂದು. ನನ್ನ ಹಿಂದಿನ

ಲೇಖನದಲ್ಲಿ ಕಂಡುಬಂದ 'ವರ್ಷ' ಎಂಬ ದೀರ್ಘಶಬ್ದ ಅಭಾವ ದಿಂದ ಅಕುಲಯ್ಯನವರಿಗೆ ದಿಕ್ಕುತಪ್ಪಿದಂತೆ ಕಾಣದಂತಾಯಿತೆಂದು ಹೇಳುವುದಾದರೆ ಈಗಲಾದರೂ ಅವರು ದಿಕ್ಕನ್ನು ಹಿಡಿದು ಈಗ ಬಂದ ವಿಷಯವನ್ನು ಸಮರ್ಥಿಸಲಿ. ಗರ್ಭಾಷ್ಟಮೇ ಎಂಬ ಶಬ್ದದಿಂದ ಯಾರಿಗಾದರೂ ತಿಳಿಯತಕ್ಕ ಅರ್ಥವೆಂದರೆ "ಗರ್ಭದಲ್ಲಿ ಎಂಟನೆಯ ತಿಂಗಳಲ್ಲಿ" ಎಂದು ಮಾತ್ರವೇ. ಶಿಶುವಿನ ಬೆಳವಣಿಗೆಯು ಗರ್ಭದಲ್ಲಿ ನಡೆಯತಕ್ಕದು ಒಂಭತ್ತು ತಿಂಗಳ ಅವಧಿಯಲ್ಲಿ ಒಂಭತ್ತು ತಿಂಗಳು ಕಳೆದ ಮೇಲೆ ಗರ್ಭದ ಬೆಳವಣಿಗೆಯು ಪೂರ್ಣಹೊಂದಿ ಶಿಶುವು ಹೊರಪ್ರಪಂಚಕ್ಕೆ ಬರುತ್ತದೆ. ಶಿಶುವು ಹೊರಪ್ರಪಂಚಕ್ಕೆ ಬಂದ ಮೇಲಿನ ಕಾಲಾವಧಿಯನ್ನು ಈ "ಗರ್ಭಾಷ್ಟಮೇ" ಪದವು ಸೂಚಿಸುವುದಿಲ್ಲ. ಗರ್ಭ ಮತ್ತು ಅಷ್ಟಮೇ ಈ ಪದಗಳು ಗರ್ಭದ ಎಂಟು ತಿಂಗಳ ಬೆಳವಣಿಗೆಯನ್ನು ಸೂಚಿಸತಕ್ಕವುಗಳಾಗಿವೆಯೇ ಹೊರತು ಜನನವಾದ ಮೇಲಣ ಎಂಟು ವರ್ಷಗಳ ಬೆಳವಣಿಗೆಯನ್ನು ಸೂಚಿಸುವುದಿಲ್ಲ. ಈ ವಿಚಾರದಲ್ಲಿ ಅಕುಲಯ್ಯನವರಾಗಲಿ ನಿಡುಮಾಮಿಡಿಯ ಮೂರ್ತಿಗಳಾಗಲಿ ಚೆನ್ನಾಗಿ ಅಭ್ಯಾಸವನ್ನು ಮಾಡಿ ಹೆಚ್ಚಾದ ಜ್ಞಾನವನ್ನು ಸಂಪಾದಿಸ ಬೇಕಾಗಿ ಕೋರುತ್ತೇನೆ. _

ಇದಾದ ಮೇಲೆ ಅಕುಲಯ್ಯನವರು ದ್ವೈತಾದ್ವೈತದ ವಾದವನ್ನು ಅದ್ಭುತವಾಗಿ ಮಾಡಿಕೊಂಡು ಜ್ಞಾನ ಕ್ರಿಯೆಗಳ ವಿಚಾರವನ್ನೆತ್ತಿ ಬರೆಯುತೊಡಗಿ ವಾದಕ್ಕೆ ಮೂಲವಾದ "ಲಿಂಗಧಾರಣ ದೀಕ್ಷೆ"ಯ ವಿಷಯವನ್ನೇ ಮರೆತಂತೆ ನಟಿಸಿ ಶಿವಪೂಜೆಯಲ್ಲಿ ಕಂಡೀಮಾಯನ್ನು ಬಿಟ್ಟಂತೆ ಈ ದ್ವೈತಾದ್ವೈತದ ವಾದವನ್ನೇ ಸುಮಾರು ಮೂರು ಪುಟಗಳಷ್ಟು ಎಳೆದಾಡಿ ಅಲ್ಪೋಕ್ತಿಗಳಿಂದ ಕೂಡಿದ ತಮ್ಮ ಅಜ್ಞಾನಕೋಶವನ್ನು ತೆರೆದಿಟ್ಟು ಅಪಹಾಸ್ಯಕ್ಕೀಡಾಗಿದ್ದಾರೆ. ಆದುದರಿಂದ ಜ್ಞಾನ-ಕ್ರಿಯೆಗಳ ನಿಜಾಚರಣೆಯು ಹೇಗೆ ಎಂಬುದನ್ನು ಆದ್ಯರ ವಚನಗಳಿಂದಲೇ ಉದಹರಿಸಿ ಈ ಅಕುಲಯ್ಯಗಳ ದುರ್ವಾದವನ್ನು ದೂರೀಕರಿಸೋಣ.

ವೀರಶೈವ ಧರ್ಮಕ್ಕೆ ಜ್ಞಾನ-ಕ್ರಿಯೆಗಳೆರಡೂ ಒಂದು ಬಂಡಿಗೆ ಎರಡು ಚಕ್ರಗಳಿದ್ದ ಹಾಗೆ. ಒಂದು ಪಕ್ಷಿಗೆ ಎರಡು ರೆಕ್ಕೆಗಳಿದ್ದ ಹಾಗೆ. ಬಂಡಿಯು ಚಲಿಸುವಾಗ ಅದರ ಚಕ್ರಗಳು ಒಂದಾದಮೇಲೊಂದರಂತೆ ತಿರುಗುವುದಿಲ್ಲ. ಎರಡೂ ಏಕಕಾಲದಲ್ಲಿ ತಿರುಗುತ್ತವೆ.

ಹಾಗೆ ತಿರುಗಿದರೇನೇ ಬಂಡಿಯು ಚಲಿಸಿ ಗಮ್ಯಸ್ಥಾನವನ್ನು ಸೇರಲು ಸಾಧ್ಯ. ಹಾಗೆಯೇ ಪಕ್ಷಿಯೂ ಹಾರುವಾಗ ಒಂದಾದಮೇಲೊಂದ ರಂತೆ ರೆಕ್ಕೆಗಳನ್ನು ಬಡಿಯುವುದಿಲ್ಲ. ಹಾಗೆ ಬಡೆಯಲೆತ್ನಿಸಿದರೆ ಪಕ್ಷಿಯು ಪಾತಾಳಕ್ಕೆ ಬೀಳುವುದು ಖಂಡಿತವೆಂಬುದು ಸಣ್ಣ ಹುಡುಗನಿಗೂ ಸಹ ತಿಳಿದ ಮಾತು. ಅದಕ್ಕೆ ಬದಲಾಗಿ ಪಕ್ಷಿಯು ಹಾರುವಾಗ ಎರಡು ರೆಕ್ಕೆಗಳನ್ನೂ ಏಕಕಾಲದಲ್ಲಿ ಆಡಿಸಿ ತನ್ಮೂಲಕ ಗಗನಮಂಡಲದಲ್ಲಿ ವಿಹರಿಸುತ್ತದೆ ಎಂಬುದು ಎಲ್ಲರೂ ಪ್ರತ್ಯಕ್ಷ ಕಂಡ ಮತ್ತು ಕಾಣುತ್ತಿರುವ ವಿಚಾರವೇ ಆಗಿದೆ ಹಾಗೆಯೇ ಜ್ಞಾನ ಮತ್ತು ಕ್ರಿಯೆ ಎಂಬ ಎರಡು ಚಕ್ರಗಳೂ ಸಹ ಒಂದು ಸಂಪೂರ್ಣವಾಗಿ ತಿರುಗಿದನಂತರ ಮತ್ತೊಂದು ತಿರುಗತೊಡಗುವುದಾದರೆ ಅದು ವೀರಶೈವಾಚರಣೆ ಎನಿಸುವುದಿಲ್ಲ. ಯಾಕೆಂದರೆ ಒಬ್ಬ ಮನುಷ್ಯನು ಸಂಪೂರ್ಣವಾದ ಜ್ಞಾನವನ್ನು ಅಳವಡಿಸಿಕೊಳ್ಳಬೇಕಾದರೆ ಅವನ ಆಯುಷ್ಯದ ಬಹು ಭಾಗವನ್ನೆಲ್ಲಾ ಸವೆಯಿಸಬೇಕಾಗುತ್ತದೆ. ಹೀಗೆ ಸವೆಸಿದ ಬಳಿಕ ಉಳಿಯುವ ಅಲ್ಪ ಆಯುಷ್ಯದಲ್ಲಿ ಬಹುಕಾಲದಿಂದ ಗಳಿಸಿದ ಜ್ಞಾನವನ್ನು ಕ್ರಿಯಾರೂಪಕ್ಕಿಳಿಸುವುದು ಅಂದರೆ ಕಾರ್ಯತಃ ಆಚರಿಸುವುದು ಸಾಧ್ಯವಾಗುವುದಿಲ್ಲ. ಆದುದರಿಂದಲೇ ನಮ್ಮ ಆದ್ಯರು ಜ್ಞಾನಸಂಗ್ರಹಕ್ಕೂ ಕ್ರಿಯಾಚರಣೆಗೂ ಸ್ವಲ್ಪವೂ ಅಂತರವನ್ನಿಡದೆ ಆಗ ಸಂಗ್ರಹಿಸಿದ ಜ್ಞಾನವನ್ನು ಆಗಿಂದಾಗಲೇ ಕ್ರಿಯಾರೂಪಕ್ಕೆ ತರುವ—ಜ್ಞಾನ ಕ್ರಿಯೆ ಎಂಬೀ ಎರಡು ಚಕ್ರಗಳೂ ನಿರಂತರವಾಗಿ ಚಲಿಸುವ ಸುವ್ಯವಸ್ಥೆಯನ್ನು ನೆಲೆಗೊಳಿಸಿ.

> ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾ ಕ್ರಿಯಾ ।
> ಕ್ರಿಯಾಜ್ಞಾನ ಸಮಾಯುಕ್ತಂ ವೀರಶೈವಸ್ಯ ಲಕ್ಷಣಂ ॥

ಎಂಬುದಾಗಿ ಸಾರಿದ್ದಾರೆ. ಪರಮಾಚಾರ್ಯರಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರೂ ಸಹ ಈ ಜ್ಞಾನ ಕ್ರಿಯೆಗಳು ಅಂತರವಿಲ್ಲದವುಗಳೆಂದು ನಿರೂಪಿಸುವಾಗ ಹಾಡಿದ ವಚನವು ಹೀಗಿದೆ.

> ಅಂತರಂಗದಲ್ಲಿ ಜ್ಞಾನ, ಬಹಿರಂಗದಲ್ಲಿ ಕ್ರಿಯೋಪಚಾರ, ಇರುತಿರಲಿಕ್ಕಾಗಿ ಏಕಭಾವವೆನಿಸಿಕೊಂಬುದಯ್ಯ. ಅದು ಹೇಗೆಂದರೆ ಹೊರಗೆ ಅಗ್ನಿ ಉರಿವುತ್ತಿಪ್ಪುದಯ್ಯ. ಕುಂಭದಲ್ಲಿ ಉದಕವಿಪ್ಪ

ದಯ್ಯ. ಅಗ್ನಿಜ್ವಾಲೆಯಸಾಮರ್ಥ್ಯದಿಂದ ಕುಂಭದೊಳಗಿದ್ದ ಉದಕ ಹೇಗೆ ಉಷ್ಣವಪ್ಪುದೋ ಹಾಗೆ ಜ್ಞಾನಸತ್ಕ್ರಿಯೋಪಚಾರದಲ್ಲಿ ಲಿಂಗೋಪಚಾರವ ಮಾಡಲಾಗಿ ಪ್ರಾಣವೇ ಲಿಂಗಸ್ವರೂಪವಪ್ಪುದು ತಪ್ಪದಯ್ಯ ಮಹಾಲಿಂಗಗುರುಶಿವಸಿದ್ಧೇಶ್ವರಪ್ರಭುವೇ.

ಮೇಲಣ ವಚನದಂತೆ ಉರಿವ ಅಗ್ನಿಯೆಲ್ಲವೂ ಪೂರ್ತಿಯಾಗಿ ಉರಿದು ನಂದಿಹೋದ ಬಳಿಕ ಕುಂಭದೊಳಗಣ ಉದಕವು ಕಾಯುಲಾರಂಭವಾಗದೆ (ಸಾಧ್ಯವಿಲ್ಲದೆ) ಉರಿಯುವಿಕೆ ಕಾಯುವಿಕೆಗಳೆರಡೂ ಏಕ ಕಾಲದಲ್ಲಿ ನಿರಂತರವಾಗಿ ಹೇಗೆ ನಡೆಯುತ್ತವೆಯೋ ಹಾಗೆಯೇ ಜ್ಞಾನ ಕ್ರಿಯೆಗಳೆರಡೂ ನಿರಂತರವಾಗಿ ಆಚರಿಸಲ್ಪಡುವುದೇ ವೀರಶೈವಾಚರಣೆಯ ವೈಶಿಷ್ಟ್ಯ! ಹಾಗಲ್ಲದೆ ಕ್ರಿಯಾತ್ಮಕವಲ್ಲದ ಜ್ಞಾನಾರ್ಜನೆಯು ಕೇವಲ ಪುಸ್ತಕದೊಳಗಣ ಬದನೇಕಾಯಿಯಾಗಿರುತ್ತದೆಯೇ ಹೊರ್ತು ಉಪಯೋಗಕಾರಿಯಾಗಿರುವುದಿಲ್ಲ. ಆದುದರಿಂದ ಜ್ಞಾನಕ್ರಿಯೆಗಳೆರಡೂ ವೀರಶೈವಾಚಾರಣೆಯ ಪ್ರಕಾರ ಅಂತರವಿಲ್ಲದ ನಿರಂತರವಾದುವುಗಳೇ ಹೊರ್ತು ಒಂದಕ್ಕೊಂದಕ್ಕೆ ಕಾಲದ ಅಂತರವಿಲ್ಲವೆಂಬುದು ಪುರಾತನರ ನಿರ್ಣಯದಂತೆಯೂ ಸ್ವತಃ ಆಚರಣೆಯಿಂದಲೂ ಸ್ಪಷ್ಟವಾಗಿ ಎಲ್ಲರಿಗೂ ಗೊತ್ತಿದ್ದರೂ ಸಹ ಕಾಲದ ಅಂತರ ಉಂಟೆಂಬ ಈ ಅಕುಲಯ್ಯನವರ ವಿಕಲ್ಪಬುದ್ಧಿಯು ದುರ್ವಾದದ ದುರವಸ್ಥೆಗೆ ಕಾರಣವೆನಿಸಬಹುದೆಂಬುದನ್ನು ವಾಚಕರೇ ನಿರ್ಣಯಿಸಬೇಕಾಗಿದೆ.

(ಮುಂದೆ ಸಾಗುವದು.)

---

# ವೀರಶೈವವು ಎತ್ತ ಸಾಗಿದೆ?

(ಸಂಗ್ರಾಹಕರು—ಶ್ರೀ ವೀ. ರು. ಕೊಪ್ಪಳ ಎಂ. ಎ; ಬಿ. ಟಿ.
ಮುಖ್ಯ ಅಧ್ಯಾಪಕರು ಆರ್. ಎಲ್. ಎಸ್. ಹಾಯಸ್ಕೂಲ ಧಾರವಾಡ.)

(ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳು ಹೋದ ಡಿಸೆಂಬರ ತಿಂಗಳಲ್ಲಿ ಅಲಿಗಡದಲ್ಲಿ ನೆರೆದಿದ್ದ ೧೭ನೆಯ ಅಖಿಲಭಾರತ ತತ್ವಜ್ಞಾನ ಸಮ್ಮೇಳನದಲ್ಲಿ "*Veerashaivrism QuoVadis*" ಎಂಬ ವಿಷಯದ ಮೇಲೆ ಮಾಡಿದ ವಿಚಾರ ಪರಿಪ್ಲುತವಾದ ಭಾಷಣದ ಸಾರಾಂಶವಿದು.)

ಐತಿಹಾಸಿಕ ದೃಷ್ಟಿಯ ವಿವೇಚನೆಯಲ್ಲಿ ವೀರಶೈವ ಧರ್ಮವು ಶೈವ ಧರ್ಮದ ಒಂದಂಗವಾಗಿ ತುಂಬಾ ಅರಳಿ ಸದ್ವಾಸನೆ ಬೀರುವ ಸುಮನೋಹರವಾದ ಒಂದು ಹೂವಾಗಿ ಪರಿಣಮಿಸುತ್ತಿದೆ. ಕ್ರಿಸ್ತಶಕಪೂರ್ವದಲ್ಲಿ ೩೦೦೦ ವರುಷಗಳಿಗಿಂತ ಮೊದಲಿನಿಂದಲೇ ಈ ನಮ್ಮ ಭಾರತ ಭೂಮಿಯಲ್ಲಿ ಶೈವಧರ್ಮವು ರೂಢವಾಗಿತ್ತೆಂಬ ಆಚ್ಚರಿಗೊಳಿಸುವ ಮಾತು ಈಚೆಗೆ ದೊರೆತ ಮೊಹೆಂಜೊದಾರೊ ಮತ್ತು ಹರಪ್ಪಗಳ ಅವಶೇಷಗಳಿಂದ ತಿಳಿದುಬರುತ್ತಿದೆ. ಇವುಗಳನ್ನು ಕುರಿತು ಸ್ವತಂತ್ರವಾಗಿ ಆಳವಾದ ಸಂಶೋಧನ ಮತ್ತು ಅಭ್ಯಾಸ ಮಾಡಿ ಸರ್ ಜಾನ್ ಮಾರ್ಶಲ್ ಅವರು 'ಕಂಚಿನ ಯುಗಕ್ಕಿಂತ (*Chaclolithic Age*) ಮೊದಲೇ ಶೈವಧರ್ಮವು ಈ ದೇಶದಲ್ಲಿ ಬಳಕೆಯಲ್ಲಿತ್ತು' ಎಂದು ತಿಳಿಸುವ ಸಂಗತಿಯೂ ಡಾಕ್ಟರ ಪ್ರಾಣನಾಥ ಅವರು 'ಶಿವ—ಶಕ್ತಿಗಳ ಉಪಾಸನೆಯು ಅತಿ ಪ್ರಾಚೀನವಾದುದು' ಎಂದು ತಿಳಿಸುವ ಸಂಗತಿಯೂ ತುಂಬಾ ಗಮನಾರ್ಹವಾಗಿವೆ. ಫಾದರ ಹೆರಾಸ ಮೊದಲಾದ ವಿದ್ವನ್ಮಣಿಗಳ ಅಭಿಪ್ರಾಯದ ಮೇರೆಗೆ ಆರ್ಯರು ಬರುವ ಪೂರ್ವದಲ್ಲಿಯೇ ಈ ದೇಶದ ಮೂಲನಿವಾಸಿಗಳಾಗಿದ್ದ ದ್ರವಿಡರಿಗೆ (*Proto Indians*) ಶಿವನೇ ಉಪಾಸನಾ ದೇವತೆಯಾಗಿದ್ದನು. ಈ ಶಿವನಿಗೆ ಅವರು ಲಿಂಗೋದ್ಭವ ಮೂರ್ತಿ ಎಂದು ಕರೆಯುತ್ತಿದ್ದರು. ಭಾರತ ಭೂಮಿಯಲ್ಲೆಲ್ಲ ಕಾಣಬಹುದಾದ ಶೈವರ ಗುಡಿಗಳಲ್ಲಿ ನಮ್ಮ ದೃಷ್ಟಿಗೋಚರವಾಗುವ ಶಿವಲಿಂಗವು ನಿರಾಕಾರ ಶಿವನ ಸಾಕಾರತೆಯನ್ನೂ ಅವನು ಸ್ವಯಂಭೂ

ಎಂಬುದನ್ನೂ ಸೂಚಿಸುತ್ತಿದೆ. ಈ ಶಿವಲಿಂಗ ಇಲ್ಲವೆ ಸ್ಥಾವರ ಲಿಂಗವನ್ನು ಗುಡಿಗುಂಡಾರಗಳಲ್ಲಿರಿಸಿ ಪೂಜಿಸುವುದು ಶೈವಧರ್ಮದ ಹೆಗ್ಗುರುತು. ಆದರೆ ವೀರಶೈವ ಧರ್ಮದ ವಿಶಿಷ್ಟವಾದ ಗುರುತು ಇಷ್ಟಲಿಂಗ ಪೂಜೆಯಲ್ಲಿ ವ್ಯಕ್ತವಾಗುತ್ತಿದೆ. ದೇಹವನ್ನು ದೇವಾಲಯಗೊಳಿಸಿ ಅದರಲ್ಲಿ ದೇವನು ವಾಸಿಸಲು ಅದು ತಕ್ಕುದಾಗಬೇಕೆಂದು ಅನಾದ್ಯನಂತ ಪರಶಿವನ ಪ್ರತೀಕವಾದ ಆ ಇಷ್ಟಲಿಂಗವನ್ನು ವೀರಶೈವನು ಎಂದೆಂದೂ ಅಗಲದಂತೆ ತನ್ನ ಅಂಗದ ಮೇಲಿರಿಸಿಕೊಳ್ಳುವನು. ಹೀಗೆ ಧರಿಸಿದ ಆ ಇಷ್ಟಲಿಂಗವು ಕಾಣದ ಪರಶಿವನು ಕೈಲಾಸದಲ್ಲಿಲ್ಲ, ಅವನು ಈ ಪ್ರತ್ಯಕ್ಷ ಕಾಯದಲ್ಲಿಹನು ಎಂಬುದನ್ನು ಕುರುಹಿಟ್ಟು ಹೇಳುವುದಲ್ಲದೆ ಮಾನವ ದೇಹದ ಘನತೆಯನ್ನೂ ಸಾರುವದು. ದೇಹವು ದೇವಾಲಯವಾಗಬೇಕು; ಅದು ಮಹಾಕಾಯವೆನಿಸಬೇಕು; ಅಲ್ಲ, ವಿಶ್ವಕಾಯನಿರ್ಮಾಣದ ಸಿದ್ಧತೆಗೆ ಅದು ಎಡೆಗುಡಬೇಕು; ಅದರಲ್ಲಿ ಇಡಿ ಆಧ್ಯಾತ್ಮಜೀವನದ ತಿರುಳು ಮೈದೋರಬೇಕು; ಪರಶಿವನಲ್ಲಿ ಬೆರೆಯಲು ಅಂತರಂಗದ ಅನುಭವವು ಅಂಗಕ್ಕೆ ಅಳವಡಬೇಕು; ಪ್ರಭುವಿನ ದಿವ್ಯ ದೃಷ್ಟಿಯಲ್ಲಿ ಗಮನಗೊಳ್ಳುವ ವಿಶ್ವಗತಿಗೆ ಅದು ನಾಟ್ಯರಂಗವಾಗಿ ಲೀಲಾಭೂಮಿ ಎನಿಸಬೇಕು ಎಂಬುದೇ ವೀರಶೈವನು ಅಂಗದ ಮೇಲಿರಿಸಿಕೊಂಡ ಆ ಇಷ್ಟಲಿಂಗದ ರಹಸ್ಯವು.

ಸಿಂಧೂನದಿಯ ಕೊಳ್ಳದಲ್ಲಿ ದೊರೆತ ಚಿತ್ರರೂಪದಲ್ಲಿಯ ಬರೆಹವನ್ನು ಸುಗಮ ಅರ್ಥವಾಗುವ ತೆರದಲ್ಲಿ ನಮ್ಮ ಭಾಷೆಗಿಳಿಸಿದರೆ ದ್ರಾವಿಡರ ಸಂಸ್ಕೃತಿ ಮತ್ತು ನಾಗರಿಕತೆಗಳ ಬಗೆಗೆ ಬೆರಗನ್ನುಂಟು ಮಾಡುವ ಐತಿಹಾಸಿಕ ಪ್ರಕಾಶವು ಪಸರಿಸುತ್ತಿದೆ. ಯಾಕೆಂದರೆ ಶಿವಶರಣ ಶಕ್ತಿ ಮತ್ತು ಸೃಷ್ಟಿ ಇವುಗಳಿಗೆ ಸಮಾನಾರ್ಥವನ್ನು ಕೊಡುವ ಅನ್ ಅನಿಲ್ ಅಮ್ಮಾ ಮತ್ತು ಅತಮ್ ಎಂಬ ಶಬ್ದಗಳು ಆ ಸಂಸ್ಕೃತಿಯಲ್ಲಿ ದೊರೆಯುತ್ತಿವೆ. ಮತ್ತು ಈ ಶಬ್ದಗಳಲ್ಲಿರುವ ಅಪಾರವಾದ ಅರ್ಥಗಾಂಭೀರ್ಯವು ವೀರಶೈವರ ಇಷ್ಟಲಿಂಗದ ಆಳವಾದ ಅನುಭವದ ಘನತೆಗೆ ಕಲಶಪ್ರಾಯವಾಗಿರುತ್ತದೆ. ಲಿಂಗದ ಸ್ವರೂಪ ಮತ್ತು ಕಲ್ಪನೆಗಳ ಬಗೆಗೆ ಪಂಡಿತರು ಅನೇಕ ತರ್ಕಗಳನ್ನು ತಂದೊಡ್ಡಿದ್ದಾರೆ. ಅನೇಕ ಮತಗಳನ್ನು ಮಂಡಿಸಿದ್ದಾರೆ. ಅನೇಕ ಸಿದ್ಧಾಂತಗಳನ್ನು ಮುಂದಿರಿಸಿದ್ದಾರೆ. ಫ್ರೆಂಚ್ ವಿದ್ವನ್ಮಣಿಯಾದ ಜೀನ ಪ್ರಿಲಸ್ಕಿ (*Jean Przyluski*) ಅವರು

ಲಿಂಗವು ಲಾಂಗಲ (ನೇಗಿಲ) ಎಂಬ ಶಬ್ದದಿಂದ ಬಂದಿರಬೇಕೆಂದು ಊಹಿಸಿ ಅದರ ಉಗಮವನ್ನು ಆಸ್ಟ್ರೋ–ಏಶಿಯಾದ (ಕೋಲ ಮುಂಡರ) ಸಂಸ್ಕೃತಿಯಲ್ಲಿ ಕಾಣುತ್ತಾರೆ. ಆರ್ಯ ಸಂಸ್ಕೃತಿಗೆ ಮಾರುಹೋದ ಇನ್ನು ಕೆಲವು ಪಂಡಿತರು ಲಿಂಗವು ಯಜ್ಞದ ಅಗ್ನಿಯನ್ನೂ ಗುಡಿಗಳು ಯಜ್ಞ ಮಂಟಪವನ್ನೂ ಸೂಚಿಸುತ್ತವೆಂದು ಹೇಳುತ್ತಾರೆ. ಮತ್ತು ನಮ್ಮ ಹೃದಯಗಳೇ ಈ ಗುಡಿಗಳೆಂದೂ ಅವುಗಳಲ್ಲಿ ದೇವನು ಲಿಂಗರೂಪ ದಿಂದ ಮನೆಮಾಡಿಕೊಂಡಿರುವನೆಂದೂ ಮತ್ತು ಆ ದೇವನ ದಿವ್ಯ ಪ್ರಭೆಯು ನಮ್ಮ ಆತ್ಮಗಳ ಸೂತ್ರವಾಗಿದೆಯೆಂದೂ ಭಾವಿಸಲಾಗಿದೆ. ಬೇರೆ ಕೆಲವರು ಲಿಂಗ ಶಬ್ದವು 'ಲಿಖ್' (ಎಂದರೆ ರೂಪಿಸು, ಬಣ್ಣ ಕೊಡು) ಎಂಬ ಶಬ್ದದಿಂದ ಬಂದಿತೆಂದು ತಿಳಿಸಿ, ಲಿಂಗವೆಂದರೆ ರೂಪಿ ಸುವವ, ಬಣ್ಣಕೊಡುವವ ಎಂದೂ ದೇವನು ವಿಶ್ವವನ್ನು ರೂಪಿಸುವವ ನಾದುದರಿಂದ ಅವನೇ ಲಿಂಗ ಎಂದೂ ಊಹಿಸಿರುವರು. ಆಗಮಕಾರ ರಿಗೆ ಮಾತ್ರ ಲಿಂಗವು ಅರಳಿಸುವ ಮತ್ತು ಅಡಗಿಸುವ ದ್ವಿವಿಧ ಸಾಮ ರ್ಥ್ಯವುಳ್ಳ ಮಾಯಾಶಕ್ತಿಗೆ ಆಧಾರಭೂತವಾದ ತತ್ವವು. ಆದರೆ ವೀರ ಶೈವರ ಪರಿಭಾಷೆಯಲ್ಲಿ ಲಿಂಗವು ಕೇವಲ ಒಂದು ಗುರುತು. ಅದು ಶುದ್ಧ ವಾದ ಮತ್ತು ಸಂಪೂರ್ಣವಾದ ಅರುಹಿನ ಕುರುಹು. ಅರುಹಿನ ಆಳದಲ್ಲಿ ಅಡಕವಾದ ಕಾಣದ ಮತ್ತು ಕಾಣುವ ಸಂಗತಿಗಳನ್ನು ಕುರಿತು ತತ್ವಜ್ಞಾ ನವು (*Philosophy*) ಚೆನ್ನಾಗಿ ವಿವೇಚಿಸುತ್ತದೆ. ಮತ್ತು ದೇವಜ್ಞಾನವು (*Theosophy*) ಪ್ರತಿಯೊಂದು ಸ್ಪಷ್ಟವಾದ ವಿಚಾರವು ತನಗೆ ತಕ್ಕು ದಾದ ಒಂದು ಸ್ವರೂಪದಿಂದ ಕೂಡಿಕೊಂಡಿರುವುದೆಂಬುದನ್ನು ನಿಶ್ಚಿತ ವಾಗಿ ಸಿದ್ಧಿಸುತ್ತದೆ. ಅದುದರಿಂದ ಲಿಂಗವು ದೇವನ ವಿಷಯವಾಗಿ ಸಂಮಿಶ್ರಿತವಾದ ಮತ್ತು ಸುಸಂಬದ್ಧವಾದ ವಿಚಾರಕ್ಕೆ ತಕ್ಕುದಾದ ಒಂದು ಸ್ವರೂಪದ ಪ್ರತೀಕವು ಎಂದು ವೀರಶೈವರ ತಿಳವಳಿಕೆ.

ಅನ್ ಅಥವಾ ಶಿವನು ಪರಾಸಂವಿತ್–ಶುದ್ಧವೂ ಸಂಪೂರ್ಣವೂ ಆದ ಅರುಹು ಎಂದು ಹೇಳುತ್ತಾರೆ. ಪಾಶ್ಚಿಮಾತ್ಯ ತತ್ವಜ್ಞಾನದಲ್ಲಿ ಅರುಹು ಮತ್ತು ಮನ ಇವುಗಳಲ್ಲಿ ಪರಸ್ಪರ ಭಿನ್ನತೆಯು ಕಂಡುಬರು ವುದಿಲ್ಲ. ಎಷ್ಟೋ ಸಲ ಇವೆರಡೂ ಸಮಾನಾರ್ಥದಲ್ಲಿ ಸೇರುವೆಯಾಗು ತ್ತವೆ. ಬರ್ಗಸನ್ (೧೮೫೯–೧೯೪೧) ತತ್ವಜ್ಞಾನಿಯು ಮಾತ್ರ ಇವೆರ ಡರಲ್ಲಿ ಬಿಂಗಡಿಕೆಯನ್ನು ತೋರಿಸಿ ಪ್ರಕೃತಿ-ಮನಗಳಲ್ಲಿ ಪರಸ್ಪರ ಸಂಬಂಧ

ವನ್ನು ಸೂಚಿಸಿದವರಲ್ಲಿ ಮೊದಲಿಗನು. ಹಿಂದು ತತ್ವಜ್ಞಾನಿಗಳ ಕಲ್ಪನೆಯಲ್ಲಿ ಅರುಹು ಮತ್ತು ಮನ ಇವುಗಳಲ್ಲಿ ಪೂರ್ವ ಪಶ್ಚಿಮಗಳಷ್ಟು ಅಭ್ಯಂತರವಿದೆ. ಮನವು ಜಡ, ಮರವೆಗೊಳಗಾದುದು ಅರುಹು ಸೂಕ್ಷ್ಮವೂ ಚೈತನ್ಯಮಯವೂ ಆದುದು. ಸಂವಿತ್‌ರೂಪವಾದ ಅರುಹು ಮನ ಮತ್ತು ಇಂದ್ರಿಯಗಳಿಗೂ ಹಾಗು ಅವುಗಳ ವ್ಯಾಪಾರಗಳಿಗೂ ಚೈತನ್ಯವನ್ನಿತ್ತು ಬೆಳಕನ್ನು ಬೀರುವ ಶಕ್ತಿಯುಳ್ಳದು. ಅಂದರೆ ಮನವು ಪ್ರಕೃತಿಯಲ್ಲಿಯೂ, ಅರುಹು ಪುರುಷನಲ್ಲಿಯೂ ಸೇರುವೆಯಾಗುವವು. ಕಣ್ದೆರೆದು ಒಡವೆಗಳನ್ನು ನೋಡಿದಾಗ ಕಣ್ಣುಗಳು ಅವನ್ನು ಕಾಣುತ್ತವೆ. ಅದರಂತೆ ಅರುಹು ಮನದ ವ್ಯವಹಾರಗಳತ್ತ ಹೊರಳಿದಾಗ ಪುರುಷನು ಅವುಗಳನ್ನು ಕಾಣುತ್ತಾನೆ; ಕಲ್ಪಿಸುವದಿಲ್ಲ. ಪ್ರಾಣಿಗಳು ನೋಡಲಿ ನೋಡದಿರಲಿ ಸೃಷ್ಟಿಯು ಇದ್ದೇ ಇರುವಂತೆ ಅರಿವಿನ ಕಣ್ಣಿಗೆ ಬೀಳಲಿ ಬೀಳದಿರಲಿ ಮನದ ವ್ಯವಹಾರಗಳು ನಡೆದೇ ಇರುವವು. ಕಣ್ಣಿನಿಂದ ಸೃಷ್ಟಿಯ ವ್ಯಾಪಾರಗಳ ತಿಳಿಯುಂಟಾಗುವಂತೆ ಅರಿವಿನ ಬೆಳಕಿನಿಂದ ಮನದ ವ್ಯವಹಾರಗಳ ಸ್ವರೂಪವು ತಿಳಿದು ಬರುವದು. ನೈಜವಾದ ಈ ಪ್ರಕಾಶಶಕ್ತಿಯಿಂದಲೇ ಪುರುಷನಿಗೆ (ಆತ್ಮನಿಗೆ) ಸ್ವಯಂಪ್ರಕಾಶನೆಂದು ಹೆಸರು. ಅನುಭವಿಗಳೆಲ್ಲರೂ ಅನೇಕ ಸಾರೆ ಅರಿವನ್ನು ಸಾಮಾನ್ಯವಾಗಿ ಬೆಳಕಿಗೆ ಹೋಲಿಸಿರುವರು. ನಮಗೆ ಸೂರ್ಯನ ಬೆಳಕು ತನ್ನ ತಾನೇ ತೋರ್ಪಡುವದು. ಮತ್ತು ಆ ಬೆಳಕು ಒಡವೆಗಳ ಮೇಲೆ ಬಿದ್ದಾಗ ಅವುಗಳ ಇರುವಿಕೆಯನ್ನೂ ಅದು ನಮಗೆ ತಿಳಿಸಿಕೊಡುವದು. ಅದರಂತೆ ಆತ್ಮನಿಗೆ ತನ್ನ ಇರುವಿನ ಅರಿವು ಇರುವುದಲ್ಲದೆ ಆ ಅರಿವಿನಿಂದ ತನ್ನ ಒಡನಾಟದಲ್ಲಿದ್ದ ದೇಹ ಮನಗಳನ್ನೂ ಅವನು ಬೆಳಗುವನು. ಈ ಅರಿವಿಲ್ಲದಿದ್ದರೆ ದೇಹ ಮನಗಳ ಇರುವಿಕೆಯೂ, ಎಚ್ಚರವೂ, ತಿಳಿಯೂ, ತೋರಿಕೆಯೂ ನಮಗಿರುತ್ತಿರಲಿಲ್ಲ. ಮನವಿಲ್ಲದಿರೆ ಪದಾರ್ಥಗಳ ಅಸ್ತಿತ್ವ ಮತ್ತು ಅವುಗಳ ಜ್ಞಾನ ಇವು ಸಮ ಗುಂಟಾಗುತ್ತಿರಲಿಲ್ಲವೆಂದು ಯುರೋಪದ ಧ್ಯೇಯವಾದ (*Idea-lism*)ದ ಅಭಿಪ್ರಾಯು. ನಾವು ಗುರುತಿಸುವ ವಸ್ತುಗಳ ಮರೆಯಲ್ಲಿ ವಸ್ತುಜ್ಞಾನ ವಿರಲಿ ಇಲ್ಲದಿರಲಿ ಇಂದ್ರಿಯಜನ್ಯಜ್ಞಾನವು ಇದ್ದೇ ಇರುವದು. ಮತ್ತು ಈ ಇಂದ್ರಿಯಜನ್ಯಜ್ಞಾನವು ಮಾನಸಿಕ ರೂಪಾಂತರವಾಗಿರುವದರಿಂದ ಮನವಿಲ್ಲದಿದ್ದರೆ ವಸ್ತುವಿನ ಅಸ್ತಿತ್ವ ಮತ್ತು ಜ್ಞಾನ ಇವುಗಳಿಗೆ

ಅವಕಾಶವೇ ಇಲ್ಲವೆಂದು ಯುರೋಪಿನ ಧ್ಯೇಯವಾದಿಗಳ ಮತ. ಜಾನ್ ಸ್ಟುಅರ್ಟ ಮಿಲ್ (೧೮೦೬—೧೮೭೩) ಮೊದಲಾದ ಇನ್ನು ಕೆಲವು ವಿಧಾಯಕ ಧ್ಯೇಯವಾದಿಗಳು (*Constructive Idealists*) ವಸ್ತು ಪ್ರಕಾಶದಿಂದ ಬೇರೆ ಈ ಜಗತ್ತಿನ ಮರೆಯಲ್ಲಿ ಇಂದ್ರಿಯಜನ್ಯಜ್ಞಾನಕ್ಕೆ ಇಂಬು ಇದ್ದೇ ಇರುವದೆಂದು ಒಪ್ಪುತ್ತಾರೆ. ಆದರೆ ಬರ್ಕ್ಲೆನ (೧೬೮೫—೧೭೫೩) ಸಂಪೂರ್ಣ ಧ್ಯೇಯವಾದದಲ್ಲಿ (*Thorough-going Idealism*) ಈ ತರಹದ ಅಭಿಪ್ರಾಯಕ್ಕೆ ಇಂಬಿಲ್ಲ. ಹಿಂದುಗಳ ವಿಚಾರಸರಣಿಯು ಇವುಗಳಿಗಿಂತ ಮೀರಿದುದು, ಗಹನವಾದುದು. ಅಲ್ಲಿ ಪ್ರಕೃತಿ ಮತ್ತು ಮನ ಇವೆರಡು ಆತ್ಮನಿಗೆ ಅನುಭವಗಮ್ಯ ವಿಷಯಗಳಾಗಿರುತ್ತವೆ. ಇವು ಆತ್ಮನಿಂದ ಆವಿಷ್ಕಾರಗೊಳ್ಳುತ್ತವೆ. ಅವನ ಪ್ರಕಾಶವಿಲ್ಲದಿರೆ ಇವೆಲ್ಲ 'ಅಸತ್' ಎನಿಸಿಬಿಡುವವು. ಆದುದರಿಂದ ಮಾನವನ ಅನುಭವದಲ್ಲಿ ಅರುಹು ಬಹು ಪ್ರಾಮುಖ್ಯವಾದುದು. ಅದು ಇನ್ನಾವುದರಿಂದಲೂ ಮಿಡುಗಬೇಕಾಗಿಲ್ಲ, ಮೆರೆಯಬೇಕಾಗಿಲ್ಲ. ಡೆಕಾರ್ಟನ (೧೫೯೬—೧೬೫೦) 'ನಾನು ವಿಚಾರಿಸುತ್ತೇನೆ. ಆದುದರಿಂದ ನಾನು ಇದ್ದೇನೆ' ಎಂಬ ಮಾತಿನ ಬಾಡದಲ್ಲಿ ಅನುಭವ ಸಂಪತ್ತಿಯಿಲ್ಲ; ಅರಿವಿನ ಬಗೆಯಿಲ್ಲ. ಆದರೆ 'ನಾನು ಇದ್ದೇನೆ, ಆದುದರಿಂದ ನಾನು ಇದ್ದೇನೆ' ಎಂಬ ಹಿಂದುಗಳ ನುಡಿಯ ಒಡಲಲ್ಲಿ ಅದು ಅಡಗಿದೆ.

ಮಾನವನ ಅನುಭವದ ಅಂತಿಮ ಗುರಿಯಾದ ಈ ಆಳವಾದ ಅರಿವಿನ ಬಗೆಯು ಮೂಲತಃ ಏಕಮೇವ ಅಖಂಡವಾದುದು. ಆದರೆ ಸ್ವಾನುಭವಗೊಳ್ಳುವಾಗ ಇದು ಅನಂತವಾದ ನಾನಾತ್ವವನ್ನು ತಾಳುವ ಸಾಮರ್ಥ್ಯವುಳ್ಳದು ಎಂಬುದನ್ನೂ ಮರೆಯಕೂಡದು. ಒಂದರಲ್ಲಿ ಹುದುಗಿಕೊಂಡು ಹಲವಾಗುವ ಈ ಕಾರ್ಯಕ್ಕೆ ಸೃಷ್ಟಿ, ಜಗತ್ತು, ಆಗುಹೋಗು ಇಲ್ಲವೆ ದ್ರವಿಡರ ಪರಿಭಾಷೆಯಲ್ಲಿ ಅತವ್ ಎಂದು ಹೆಸರು. ಈ ಆಗುಹೋಗುಗಳ ಸಂಚಾಲಕ ವಸ್ತುವಿಗೆ ತನ್ನ ಅರಿವು ತನಗೆ ಯಾವಾಗಲೂ ಇದ್ದೇ ಇರುತ್ತದೆ. ತನ್ನಲ್ಲಿ ಹುದುಗಿದ ಹಲವನ್ನು ತನ್ನಿಂದ ಹೊರಹೊಮ್ಮಿಸುವ ಅರುವಿಗೆ ಯಾವ ಸಾಮರ್ಥ್ಯವಿದೆಯೋ ಅದಕ್ಕೆ ಅಮ್ಮಾ ಇಲ್ಲವೆ ಚಿತ್‌ಶಕ್ತಿ ಎಂದು ಹೆಸರು. ಮತ್ತು ತನ್ನರಿವು ತನಗೆ ಇರುವುದರಿಂದಲೇ ಇದು ನೆನಹುಗೊಳ್ಳುವದರೊಳಗಾಗಿಯೋ ಅಘಟಿತ ಘಟನೆಯನ್ನು ಮಾಡುವ ಸಾಮರ್ಥ್ಯವುಳ್ಳದಾಗಿರು

ವದು. ಆದರೆ ನಮ್ಮೆಲ್ಲರ ತಿಳಿವಳಿಕೆಯಲ್ಲಿರುವ ನೆನಹಿಗೆ ಆ ಸಾಮರ್ಥ್ಯವಿರುವದಿಲ್ಲ. ಯಾಕಂದರೆ ಇಂಥ ನೆನಹಿಗೂ ಇದರ ಅರಿವಿಗೆ ನಿಲುಕುವ ಒಡವೆ ಮತ್ತು ತನ್ನಿಂದ ಭಿನ್ನವಾದ ಭೌತಿಕವಸ್ತುಜಾತ ಇವುಗಳ ಮುಖಾಂತರವಾಗಿ ಎಸಗುವ ಕಾರ್ಯಕ್ಕೂ ಯಾವ ಹೊಂದಿಕೆ ಪದ ಮೇಳವಿಲ್ಲ. 'ತಾನೊಂದೆಣಿಸಿದರೆ ದೈವವೊಂದೆಣಿಸಿತು' ಎಂದು ಹೇಳುವ ಮಾತಿನ ರಹಸ್ಯವಾದರೂ ಇದೇ! ನೆನಹು ಚಿತ್ ಶಕ್ತಿಯ ಇಚ್ಛಾಪ್ರವೃತ್ತಿಯು, ಇದು ವಸ್ತುವಿನಲ್ಲಿ ಮತ್ತು ಅದರಿಂದೊಗೆದು ತೋರಿಕೆಯಲ್ಲಿ ರೂಪಗೊಳ್ಳುವ ಆಗುಹೋಗುಗಳಲ್ಲಿ ಸಹಜವಾಗಿ ಸೇರುವ ಯಾಗಿಹುದು; ಇರುವಿಕೆಯ ಸಾಗುವಳಿಯಲ್ಲಿ ಬೆರೆತು ಹೊಂದಿಕೆಯಾಗಿಹುದು. ಈ ಇಚ್ಛಾಶಕ್ತಿಯು ತನ್ನನ್ನು ತಾನು ತಿಳಿಯುವುದಲ್ಲದೆ ತನ್ನಿಂದ ಇತರ ವಾದ ಎಲ್ಲವನ್ನೂ ತಿಳಿಯುವುದು. ಆನ್ ಅಥವಾ ಶಿವನಲ್ಲಿ ಸಹಜವಾಗಿರುವ ಪ್ರಕಾಶಶಕ್ತಿಯಾದ ಈ ಅವಸ್ತಾ ಅಥವಾ ಚಿತ್ ಶಕ್ತಿಯಿಂದ ಲೋಕಾಲೋಕಗಳು, ಸಚರಾಚರಗಳು ರಚನೆಗೊಳ್ಳುವವು. ಅಗ್ನಿ ಅಗ್ನಿಯಲ್ಲಿಯ ದಾಹಕಶಕ್ತಿ, ಸೂರ್ಯ ಸೂರ್ಯನಲ್ಲಿಯ ಪ್ರಕಾಶಶಕ್ತಿ, ಚಂದ್ರ ಚಂದ್ರನಲ್ಲಿಯ ಶೈತ್ಯಶಕ್ತಿ ಇವುಗಳಲ್ಲಿ ಅವಿನಾಭಾವ ಸಂಬಂಧವಿರುವಂತೆ ಆನ್ ಅಥವಾ ಶಿವನಲ್ಲಿ ಅವಸ್ತಾ ಅಥವಾ ಚಿತ್ ಶಕ್ತಿಯು ಬಿಚ್ಚಿ ಬೇರಾಗದ ಬೆರಸಿ ಒಂದಾಗದ ರೀತಿಯಲ್ಲಿರುವದು. ಶಿವನ ಆತ್ಮವೆಂದರೆ ಈ ಶಕ್ತಿಯಲ್ಲದೆ ಬೇರಿಲ್ಲ. ಈ ಶಕ್ತಿಗೆ 'ಜಾತವೇದಸ್' ಎಂತಲೂ ಹೆಸರು. ಆದುದರಿಂದಲೇ ಇದಕ್ಕೆ ಹುಟ್ಟು-ಹೊಂದುವಿಕೆಗಳ ಸಮ್ಯಕ್ ಜ್ಞಾನವಿರುತ್ತದೆ; ಬೇರೆ ಬೇರೆ ಜನ್ಮಗಳಿಗಿರುವ ಸಂಬಂಧದ ತಿಳಿವಳಿಕೆಯೂ ಇದಕ್ಕಿರುತ್ತದೆ. ಇಂಥ ಜನ್ಮಗಳ ಗೊತ್ತುಗುರಿ, ರೀತಿ, ನೀತಿ, ಭಿನ್ನತೆ ಏಕರೂಪತೆಗಳ ಜ್ಞಾನವೂ ಇದಕ್ಕಿರುತ್ತದೆ. ವಿಶ್ವದ ಗತಿಯು ಗಮನಗೊಳ್ಳುವುದಾದರೂ ಈ ದಿವ್ಯ ಶಕ್ತಿಯಿಂದಲೇ. ವಿಶ್ವಪ್ರೇರಕವಾದುದೂ ಈ ಶಕ್ತಿಯೇ! ಆದುದರಿಂದ ಈ ಶಕ್ತಿಯನ್ನು "ಸರ್ವಕರ್ತೃ ಸರ್ವಭೋಕ್ತೃ ಸರ್ವನಿಯಾಮಳು" ಎಂದು ವರ್ಣಿಸಿದುದರಲ್ಲಿ ಆಶ್ಚರ್ಯವಿಲ್ಲ.

ಅವಸ್ತಾ ಅಥವಾ ಚಿತ್ ಶಕ್ತಿಯು ಇಲ್ಲವೆ ಪರಾಪ್ರಕೃತಿಯು ಆನ್ ಅಥವಾ ಶಿವನ ಅನಂತವಾದ ತ್ರಿಕಾಲಾಬಾಧಿತವಾದ ಅರುಹು ಅಲ್ಲದೆ ಬೇರಿಲ್ಲ. ವಿಶ್ವದ ಪ್ರಪಂಚಗಳೆಲ್ಲ ರೂಪಕೆ ಬರುವುದಾಗಲಿ, ಇಲ್ಲವೆ

...ಲೋಕಿತವಾದವುಗಳು ಕಾಲಗತಿಯಲ್ಲಿ ಬರುವುದಾಗಲಿ ಇದರಿಂದಲೇ ...ಂದು ಹೇಳಿದುದೂ ಆಯಿತು. ಆದರೆ ಅನೇಕ ಮುಖವಾದ ಈ ...ಪಂಚಕ್ಕೆ— ಈ ಆಗುಹೋಗುಗಳಿಗೆ ಆಧ್ಯಾತ್ಮಿಕ ತಳಹದಿಯು ಬೇಕು. ...ದನ್ನು ಒದಗಿಸಲೋಸುಗ ಅನ್ ಅಥವಾ ಶಿವನು ತನ್ನ ಸಹಜವಾದ ...ವ್ಯಶಕ್ತಿಯ ಇಲ್ಲವೆ ಅಮ್ಮನ ಯೋಗದಿಂದ ಅನಿಲ್ ಅಥವಾ ಶರಣ ...ನಾಗುವನು. ಶಿವನ ನೆನಹಿನಿಂದ ರೂಪಗೊಂಡ ಈ ತೋರಿಕೆಯಲ್ಲಿ ಅನಿಲ್ ಅಥವಾ ಶರಣನು ವಿವಿಧ ಪ್ರಪಂಚಕ್ಕೆ ಸಾಕ್ಷೀಭೂತನಾಗಿರುವನು. ತನ್ನ ಸ್ವರೂಪದ ಅರುಹಿನಲ್ಲಿ ಶಿವನೊಡನೆ ಒಂದಾಗಿದ್ದರೂ ತೋರಿಕೆಯಲ್ಲಿ ವ್ಯಕ್ತವಾಗಿರುವ ಶಕ್ತಿಯಿಂದ ಶರಣನು ಬೇರೆಯಾಗಿರುವನು. ಶಿವಶಕ್ತಿಗಳೊಡನಿರುವ ಈ ಸಂಬಂಧದಿಂದ ಶರಣನು ಕಾಲಗತಿಯಲ್ಲಿ ತಲೆಯೆತ್ತಿದ ಒಬ್ಬ ಜೀವನೆಂದು ಭಾವಿಸಲಾಗದು. ಜೀವನು ವಿವಿಧ ಪ್ರಪಂಚಕ್ಕೆ ತಳಹದಿಯಾಗಿಹನು. ನಮ್ಮ ಅನುಭವಕ್ಕೆ ಗೋಚರವಾಗುವ ಅನೇಕತ್ವದ ಪ್ರಾಣವೆಂದರೂ ಈ ಜೀವನೇ! ಈ ಜೀವನಿಗೆ ಗೀತೆಯು ಬಣ್ಣ ಬದಲಿಸುವ, ಭಾಗವಾಗುವ, ಎರಡರ ಎಡೆಯಾಟದಲ್ಲಿ ಓಡಾಡುವ ಕ್ಷರ ಪುರುಷನೆಂದು ಕರೆಯುತ್ತದೆ. ಆದರೆ ಅನಿಲ್ ಅಥವಾ ಶರಣನು ಅಕ್ಷರಪುರುಷನು. ಅವನೇ ನಮ್ಮ ನಿರ್ವಿಕಾರ ನಿಜಾತ್ಮನು. ದೇವನೊಡನೆ ದಿವ್ಯ ಸಮರಸಿಯಾಗಲಿರುವ, ಅನಿತ್ಯವಾದ ಮತ್ತು ಬದಲಾಗುತ್ತಿರುವ ಸಂಗತಿಗಳಿಂದ ಬಿಡುಗಡೆ ಹೊಂದಲಿರುವ, ಅವಿಚ್ಛೇದಿಯಾದ ಆ ನಮ್ಮ ಆತ್ಮನು ಅವನೇ! ಅನಿಲ್ ಅಥವಾ ಅಕ್ಷರ ಪುರುಷನೊಡನೆ ನಮ್ಮ ಪುರುವಾಳ್ತಿಯನ್ನು ಪಡೆಯುವದರಲ್ಲಿಯೆ ನಮಗೆ ಮರವೆಯಿಂದ, ಕಾಮನೆಯಿಂದ ಮತ್ತು ವಿಧಿಬದ್ಧವಾದ ಕರ್ಮಗಳ ಕತ್ತರೆಯಿಂದ ಬಿಡುಗಡೆಯುಂಟಾಗುತ್ತದೆ. ತಂದೆಯು ತಾಯಸಂಗದಿಂದ ಮಗನಾಗಿ ಜನಿಸುವನು ಎಂಬ ಅರ್ಥಪೂರಿತವಾದ ಅನುಭವದ ಮಾತೊಂದಿದೆ. ದಾಸನಲ್ಲ, ದೇಸಿವಡೆಯ ಮಗನಾಗಬೇಕೆಂಬುದನ್ನು ಸಿದ್ಧಿಸುವುದೇ ಸಾಕ್ಷಾತ್ಕಾರದ ರಹಸ್ಯವು. ವೀರಶೈವರು ಈ ಮಗನಿಗೆ ಶರಣ ಅಥವಾ ಅಂಗ ಎಂದು ಕರೆಯುವರು. ಯಾಕೆಂದರೆ ಇಳಿಕೆಯ ಕ್ರಮದಲ್ಲಿ ಶಿವನು ಚಿತ್‌ಶಕ್ತಿಯಿಂದ ಶರಣನಾಗಿ ಹೊರಹೊಮ್ಮುವನು. ಹುದುಗಿದುದನ್ನು ಹೊರಹೊಮ್ಮಿಸುವ ಇಲ್ಲವೆ ಅಡಗಿದುದನ್ನು ಅರಳಿಸುವ ಈ ಘನವಾದ ಪ್ರಯೋಗ

ದಲ್ಲಿ (*Dynamis*) ಆನ್-ಅನಿಲ್, ಶಿವ-ಶರಣ, ಲಿಂಗ-ಅಂಗ ಇವರ ಸಂಗಸಮರಸವು ದೊರಕೊಳ್ಳುವದು. ಅಂಗ-ಲಿಂಗಗಳ ಈ ಸಂಗದಲ್ಲಿ, ಆತ್ಮ-ಪರಮಾತ್ಮರ ಈ ಸೇರುವೆಯಲ್ಲಿ ಬಿಚ್ಚಿ ಬೇರಾಗದ ಬೆರಸಿ ಒಂದಾಗದ ದಿವ್ಯಾನುಭವವು ಒಡಮೂಡಿದೆ ಎಂಬುದೂ ಸ್ಪಷ್ಟವಾದುದು. ಎರಡಳಿದು ಏಕಾದ ಬಗೆಯು ಸತ್ಯವೂ ನಿತ್ಯವೂ ಆದುದರಿಂದ ಎರಡರ ಈ ಬಗೆಯು— ದ್ವಂದ್ವದ ಈ ಕಲಹವು ಸಹ ಒಂದೇ ಸವನೆ ತಲೆಯೆತ್ತಿ ಕುಣಿದಾಡುವಂಥಹದೂ ಆಹುದು. ಆತ್ಮ ಪರಮಾತ್ಮರಲ್ಲಿಯ ಸಂಬಂಧವು ಒಬ್ಬರು ಇನ್ನೊಬ್ಬರಲ್ಲಿ ನೆನಹಿನಿಂದ ಸೇರುವಿಯಾದ ಸಂಬಂಧವು (*Will-union*) ವ್ಯಕ್ತಿತ್ವವನ್ನು ಕಂದಿಸುವ ಕುಂದಿಸುವ ಸಂಬಂಧವದಲ್ಲ. ಯಾಕಂದರೆ ಆತ್ಮನಿಗೆ ಪರಮಾತ್ಮನಲ್ಲಿ ಹೊಂದಿಕೆಯಾದರೂ ತಾಯ ಒಡಲ ಕೂಸಿನ ವ್ಯಕ್ತಿತ್ವದಂತೆ ಅವನ ವ್ಯಕ್ತಿತ್ವಕ್ಕೆ ಅಸ್ತಿತ್ವವಿದೆಯೆಂದು ವೀರಶೈವರು ತಿಳಿಯುತ್ತಾರೆ. ಆತ್ಮ-ಪರಮಾತ್ಮರಲ್ಲಿಯ ಬೆರೆತು ಬೇರಾಗಿ ಕಾಣುವ (*Union-in separateness*) ಈ ಗೂಢವು ಸರ್ವಸಮ್ಮತವಾದ ಅತ್ಯವಶ್ಯವಾದ ಅನುಭವದ ತತ್ವವಿದೆ. ಆದುದರಿಂದ ಅನಿಲ್ ಅಥವಾ ಅಂಗನು ಆನ್ ಅಥವಾ ಲಿಂಗದಲ್ಲಿ ಒಬ್ಬರಲ್ಲೊಬ್ಬರು ಹೊಂದಿಕೆಗೊಳ್ಳುವ ಹೋಲುವೆಯ (*Identity-in-adaptability*) ತೆರದಲ್ಲಿ ಸೇರುವೆಯಾಗಿರುತ್ತಾನೆ.

ಪರಶಿವನ ಪ್ರಕಟತೆಗೆ ಯೋಗ್ಯವಾದ ಲಿಂಗಲೀಲೆಗೆ ಭೋಗ್ಯವಾದ ಕಾರ್ಯಕ್ಷೇತ್ರನಿರ್ಮಿತಿಗೆ ಅಪಾರವಾದ ಅಂತರಂಗದ ಅರಿವಿನಿಂದ ಪ್ರಚೋದಿತವಾಗಿ ಅವ್ಯಾ ಅಥವಾ ಚಿತ್‌ಶಕ್ತಿಯು ಆತವಸ್ ಅಥವಾ ಸೃಷ್ಟಿಯಾಗುವದು. ಯಾಕಂದರೆ ವಸ್ತುಗಳ ಮೊತ್ತವೆಲ್ಲ ಶಿವನ ಸ್ವಸ್ವರೂಪದಿಂದ ಹೊರಹೊಮ್ಮಿ ರೂಪಗೊಂಡು ಸೃಷ್ಟಿಯಲ್ಲಿ ಪರಿಣಾಮಗೊಂಡುದು. ಶಿವನಿಗೆ ಲಿಂಗ-ಅಂಗವೆಂದು ಇತ್ತೆರನಾಗಿ ತತ್ವಗೊಳ್ಳುವದು ನೈಜವಾಗಿರುವಂತೆ ಶಕ್ತಿಗೆ ದೃಷ್ಟಿ ಮತ್ತು ಸೃಷ್ಟಿ ಎಂಬ ಇಬ್ಬಗೆಯಾದ ತತ್ವದಲ್ಲಿ ರೂಪಗೊಳ್ಳುವುದು ಸ್ವಾಭಾವಿಕವಾದುದು. ಯುರೋಪದವರು ಯಾವುದಕ್ಕೆ ಪ್ರಕೃತಿ (*Nature*) ಎಂದು ಕರೆಯುವರೋ ಅದು 'ಕೇವಲ ಆತವಸ್ ಅಥವಾ ಸೃಷ್ಟಿಯು. ಆತವಸ್ ಅವ್ಯಾ ಇವುಗಳೊಳಗಿನ ಆಳವಾದ ಮತ್ತು ನೀಳವಾದ ಮೇಲು-ಕೀಳುಗಳ ದೆಸೆಯಿಂದಲೇ ಮತ್ತು ಅಧಃ ಪ್ರಕೃತಿ-ಊರ್ಧ್ವಪ್ರಕೃತಿ ಇವುಗ

ಯೊಳಗಿನ ಹೆಚ್ಚುಕಡಿಮೆಯ ದೆಸೆಯಿಂದಲೇ ವೀರಶೈವನು ವ್ಯಕ್ತಿ ಮತ್ತು ವಿಶ್ವಗಳೊಳಗಿನ ಕೊನೆಗಾಣಿಸಲು ಬಾರದ ಈ ಕಲಹವನ್ನು ಕಿತ್ತೊಗೆಯಲು ಶಕ್ತನಾಗಿಹನು. ಅವನಿಗೆ ನಾನಾತ್ವದಲ್ಲಿ ಅಥವಾ ದ್ವೈತದಲ್ಲಿ ಅಲ್ಪಸತ್ಯವೂ ಏಕತ್ವದಲ್ಲಿ ಅಥವಾ ಅದ್ವೈತದಲ್ಲಿ ಮಹಾಸತ್ಯವೂ ತೋರುವುದು. ಅವನಿಗೆ ಹಲವು ಮತ್ತು ಒಂದು ಈ ಎರಡೂ ಸತ್ಯವೇ! ಯಾವುದೂ ಮಾಯೆಯಾಗಿ, ಮಾಟವಾಗಿ, ಮರುಳಾಗಿ ತೋರದು. ಯಾಕಂದರೆ ಅತವ್ ಅಥವಾ ಸೃಷ್ಟಿಯು ಶಿವನ ನೆನಪಿನಿಂದ ಹೊರಹೊಮ್ಮಿದುದು. ಅದರಲ್ಲಿ ದೈವೀಪ್ರೇರಣೆಯು ದಿವ್ಯ ಉದ್ದೇಶವೊಂದಿದೆ, ಅದನ್ನು ಕಂಡುಹಿಡಿದು ಅದನ್ನು ಕೊನೆಮುಟ್ಟಿಸಬೇಕೆಂಬುದೇ ಅವನ ಗೊತ್ತುಗುರಿ. ಇದನ್ನು ಸಾಧಿಸಿಕೊಳ್ಳಲು, ಸಂಕುಚಿತ ದೃಷ್ಟಿಯ ನೆನಹನ್ನು ತಿದ್ದಿ ಸರಿಪಡಿಸಿಕೊಳ್ಳಲು, ಸಮ್ಯಕ್‌ದೃಷ್ಟಿಯ ಸುಜ್ಞಾನ ದೃಷ್ಟಿಯ ಅಥವಾ ಅನಿಮಿಷದೃಷ್ಟಿಯ ಆನಂದ ಪ್ರತೀತಿಯನ್ನು ಪಡೆಯಲು ಮತ್ತು ಆ ಆನಂದಜ್ಯೋತಿಯಲ್ಲಿ ಕಾಮನೆಗಳ ಕತ್ತಲೆಯನ್ನು ಪರಿಹರಿಸಿಕೊಳ್ಳಲು ಅತವ್ ಅಥವಾ ಸೃಷ್ಟಿಯು ಒಂದು ಕಾರ್ಯರಂಗವೆಂದು ವೀರಶೈವನು ಭಾವಿಸಿಕೊಳ್ಳುವನು.

> ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ. ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ ಕೂಡಲಸಂಗಮದೇವಾ.

ವೀರಶೈವವು ಎತ್ತ ಸಾಗಿದೆ ಎಂಬುದನ್ನು ತಿಳಿದುಕೊಳ್ಳುವಹದಕ್ಕೆ ನಾವೀಗ ಬಂದಿಹೆವು. ವೀರಶೈವವು ಎತ್ತ ಸಾಗಿದೆ ಎಂಬ ಪ್ರಶ್ನೆಗೆ ಆನ್ ಅನಿಲ್ ಅಮ್ಮಾ ಮತ್ತು ಅತವ್ ಅಥವಾ ಶಿವ ಶರಣ ಶಕ್ತಿ ಮತ್ತು ಸೃಷ್ಟಿ ಈ ನಾಲ್ಕು ತತ್ವಗಳಿಂದ ಅನುಭವಿಗಳೆಲ್ಲರ ಅನುಭವ ಸಮ್ಮತವಾದ ಹೊಂದಿಕೆಯ ಜೀವನವು ಹೊರಹೊಮ್ಮಿರುವದೆಂಬ ಈ ಸಿದ್ಧಾಂತವನ್ನು ಮಂಡಿಸುವದರಲ್ಲಿ ಮತ್ತು ಇಂಥ ಜೀವನದ ವಿಕಾಸವನ್ನು ಕಂಡುಕೊಳ್ಳುವದರಲ್ಲಿ ವೀರಶೈವವು ಮುಂದುವರಿದಿದೆ ಎಂಬ ಮಾರುತ್ತರವನ್ನು ಹೇಳಬಲ್ಲೆವು. ಅನುಭವದ ಘನತೆಯಿಂದ ಬೆರೆತ ಈ ನಾಲ್ಕು ಪದಗಳಲ್ಲಿ ಅಗಲಿಸಲಾದ ಮೇಳವಿದೆ ಎಂಬುದು ಸ್ಪಷ್ಟವಾದುದು. ಇವುಗಳ ಸಂಯೋಗದಲ್ಲಿ ವಿಭಾಗದ ಸ್ವರೂಪವಿಲ್ಲ ಎಂಬುದೂ

ಸ್ಪಷ್ಟವಾದುದು. ಆದರೂ ಈ ಪದಗಳ ತಾತ್ವಿಕ ವಿವೇಚನೆಯಲ್ಲಿ ಇಂಥದೊಂದು ವಿಂಗಡಿಕೆಯನ್ನು ಅಂಗೀಕರಿಸಬೇಕಾಯಿತು. ಈ ನಾಲ್ಕರ ತತ್ವವಿವರಣೆಯಲ್ಲಿ ಇಷ್ಟಲಿಂಗದ ಕಲ್ಪನೆಯು ಪ್ರತಿಬಿಂಬಿತವಾಗಿ ಈ ತತ್ವಗಳನ್ನೊಳಗೊಂಡ ಸಿದ್ಧಾಂತವೆಂದು ವೀರಶೈವ ಸಿದ್ಧಾಂತವೆಂದು ಕರೆಯಿಸಿಕೊಂಡಿದೆ ಎಂದು ಹೇಳಬೇಕಾದರೆ ಕಾರಣವಿಲ್ಲದೆ ಇಲ್ಲ. ಉದ್ದ ಅಗಲ ಎತ್ತರ ಇಲ್ಲವೆ ಮೇಲೆ ಕೆಳಗೆ, ಎಡ ಬಲ, ಹಿಂದೆ ಮುಂದೆ ಈ ಮೂರು ಮಾತುಗಳು ದೇಶ (ಅವಕಾಶ) ವರ್ಣನೆಯನ್ನು ಮಾಡುತ್ತವೆ. ಆದರೆ ಕಾಲದ ಸಂಬಂಧವಿಲ್ಲದೆ ಅವಕಾಶದ ವರ್ಣನೆಯು ಪೂರ್ಣತೆಗೊಳ್ಳದು ಎಂಬುದನ್ನು ಮರೆಯಲಾಗದು. ಅವಕಾಶವು ಅನಂತವಾದುದು; ಅದರಂತೆ ಕಾಲವೂ ಅನಂತವಾದುದು. ವಸ್ತುವಿನ ಅಸ್ತಿತ್ವವನ್ನು ವಿವರಿಸಲು ಅನಂತವಾದ ಈ ಕಾಲ-ಅವಕಾಶಗಳ ಸಂಬಂಧ ಸಿದ್ಧಾಂತವು (*The Theory of Relativity*) ಅತ್ಯವಶ್ಯವೆಂದು ಮಂಡಿಸಿದ ಅಲ್ಬರ್ಟ ಈನಸ್ಟಿನ್‌ನ ಜನ್ಮ (೧೮೭೯.) ಅಭಿಪ್ರಾಯವು ಸಿದ್ಧಾಂತ ವಿಜ್ಞಾನಶಾಸ್ತ್ರದಲ್ಲಿ ಕ್ರಾಂತಿಯನ್ನೆಬ್ಬಿಸಿ ಗಣಿತಶಾಸ್ತ್ರದ ಭ್ರಾಂತಿಯನ್ನು ಅಡಗಿಸಿದಂತೆ ಹಸುಗೆಗೆ ಎಡೆಯಿಲ್ಲದಂತೆ ಬೆಸುಗೆಯಾಗಿರುವ ಈ ನಾಲ್ಕು ತತ್ವಗಳ ಸಿದ್ಧಾಂತವು ತತ್ವಜ್ಞಾನದ ಬಾಡವನ್ನು ಅಲ್ಲಾಡಿಸಿ ತಿದ್ದುಪಡಿಯನ್ನು ಉಂಟುಮಾಡುವುದಲ್ಲದೆ ಅನುಭವ ಕಳೆಗೆ ಕೇಂದ್ರವಾಗಿದೆಯೆಂದು ಅರಿಯಬಹುದು.

ಇಷ್ಟಲಿಂಗದ ಕಲ್ಪನೆಯಲ್ಲಿ ಹಸುಗೆಯಿಲ್ಲದ ಬೆಸುಗೆಯಿಂದ ಕೂಡಿದ ಈ ನಾಲ್ಕು ತತ್ವಗಳು ಅದು ಹೇಗೆ ಅಡಕವಾಗಿವೆ ಎಂಬುದನ್ನು ಆಕೃತಿಗಳಿಂದ ಈಗ ತಿಳಿಸಿದರೆ ತೀರಿತು; ಇಷ್ಟಲಿಂಗದ ರಹಸ್ಯವನ್ನು ಹೇಳಿದಂತಾಯಿತು. ಅತವಾ ಅಥವಾ ಸೃಷ್ಟಿಯನ್ನು ಗೀತೆಯು ಅಪರಾಕೃತಿಯೆಂದೂ ಆಗಮವು ಅಧಃ ಸೃಷ್ಟಿಯೆಂದೂ ಕರೆಯುತ್ತವೆ. ಯಾಕೆಂದರೆ ಒಂದರಲ್ಲಿ ಹಲವು ಬಗೆಯಾಗಿ ರೂಪಗೊಳ್ಳುವುದೇ ಈ ಅಧಃ ಸೃಷ್ಟಿಯ ಲಕ್ಷಣವು ಒಂದರ ಹುದುಗದಲ್ಲಿ ಹುದುಗಿದ ಹಲವನ್ನು ಹಲವಾಗಿ ಒಗೆವಂತೆ ಮಾಡುವದು ಒಂದರ ಲೀಲೆ. ಹೀಗೆ ಒಂದು ತನ್ನತನದಲ್ಲಿ ಬದಲಾಗುವದರಿಂದ ಮತ್ತು ಜೀವನದ ದೃಷ್ಟಿಕೋನದಲ್ಲಿ ವಿಂಗಡಿಕೆಗೆ ಅವಕಾಶವನ್ನು ಕಲ್ಪಿಸಿಕೊಡುವುದರಿಂದ, ಇದು ಅರುವಿನ ಅನೇಕ ಕೇಂದ್ರಗಳುಳ್ಳದೆಂದು ಮತ್ತು ವಿಶ್ವಗತಿಯಲ್ಲಿ ವ್ಯಕ್ತವಾಗುವ

ಅನಂತ ಶಕ್ತಿಗಳಲ್ಲಿ ಹಂಚಿಕೆಗೊಂಡು ಇದು ನೆಲೆಸಿರುವದೆಂದೂ ಹೊಳೆಯುತ್ತದೆ. ಈ ಅಪರಪ್ರಕೃತಿಯು ವಿಶ್ವಗತಿಯ ಉದ್ದೇಶಕ್ಕೆ ಸಾಧನವಾಗಿಹುದು. ಮತ್ತು ಅಪಾರವಾದ ತುರೀಯ ಆನಂದವನ್ನು ಎಡೆಬಿಡದೆ ಪ್ರಕಟಗೊಳಿಸುವ ದಿವ್ಯಶಕ್ತಿಯ ಪ್ರಗತಿಪರ ಆವಿರ್ಭಾವಕ್ಕೆ ಅನುಕೂಲವಾಗಿಹುದು ಎಂದು ವೀರಶೈವನು ತಿಳಿಯುತ್ತಾನಷ್ಟೇ! ಇನ್ನು ಈ ಜೀವ-ಮನಗಳನ್ನು ಕುರಿತು ಒಂದಿಷ್ಟು ಆಲೋಚಿಸುವಾ. ಹೊರದಾಟವಿರುವಲ್ಲೆಲ್ಲ ಜೀವ–ಮನಗಳು ಅಡಗುವ ಮತ್ತು ಅರಳಿಸುವ ಸಾಮರ್ಥ್ಯದಿಂದ ಕೂಡಿಕೊಂಡು ಇದ್ದುದು ಕಂಡುಬರುತ್ತದೆ. ಮತ್ತು ಜೀವ-ಮನಗಳು ಮೊದಲಕಾರ್ಯಪ್ರವೃತ್ತಿಗೆ ಅನುಕೂಲಿಸುವಂಥ ಒಂದು ಪ್ರಾಕೃತ ರೂಪದಿಂದ ಕೂಡಿಕೊಂಡಿರುವವು. ಈ ಅಧಃ ಸೃಷ್ಟಿಯಲ್ಲಿ ಪ್ರಕೃತಿ-ಜೀವ-ಮನ ಎಲ್ಲವೂ ಪ್ರಾಕೃತ ಅಂಶಗಳೇ. ಪಾಶ್ಚಿಮಾತ್ಯ ತತ್ವಜ್ಞಾನಿಗಳ ಈ ವಿಚಾರವಾಗಲಿ, ಸಾಮಾನ್ಯವಾಗಿ ಇವಕ್ಕೇ ಹಿಂದುತತ್ವಜ್ಞಾನಿಗಳು ಕರೆಯುವ ಸತ್ವ-ರಜ-ತಮ ಗುಣಗಳ ವಿಚಾರವಾಗಲಿ ಪ್ರಾಕೃತಸೃಷ್ಟಿಗೆ ಸಂಬಂಧಪಟ್ಟುದು. ಸತ್ವ-ರಜ-ತಮಗಳು ಸಮತೂಕದಲ್ಲುಳಿಯಬೇಕು; ಅಂದರೆ ಅತಮ್ ಅಥವಾ ಅಧಃ ಸೃಷ್ಟಿಯು ಹಿಡಿತದಲ್ಲುಳಿಯುವದು ಎಂದು ತತ್ವಜ್ಞಾನಿಗಳು ಹೇಳುತ್ತಾರೆ. ಸಮತೂಕಕ್ಕಿಳಿದ ಈ ಸೃಷ್ಟಿಯನ್ನು ಒಂದು ಸಮಭುಜ ತ್ರಿಕೋಣದಿಂದ ರೂಪಿಸಬಹುದು.

ಅಮ್ಮಾ ಅಥವಾ ಚಿತ್‌ಶಕ್ತಿಗೆ ಗೀತೆಯು ಪರಾಪ್ರಕೃತಿಯೆಂದು ಕರೆಯುತ್ತದೆ; ಆಗಮಗಳು ಊರ್ಧ್ವಸೃಷ್ಟಿಯೆಂದು ಕರೆಯುತ್ತವೆ. ಇದು ಕೇವಲ ಒಂದರ (*Unity*) ಅರಿವಿನಿಂದ ಕೂಡಿದುದು. ಒಂದು ಎನ್ನುವದು ಪ್ರಾಮುಖ್ಯವಾದ ಸತ್ಯವು. ಇದು ಇಲ್ಲದಿದ್ದರೆ ಹಲವು ಎನ್ನುವದು ಅಸತ್ಯವೇ ಸರಿ. ಅನೇಕತ್ವವು ಏಕತ್ವದಲ್ಲಿ ಸ್ಪಷ್ಟವಾಗಿಯಾಗಲಿ, ಇಲ್ಲವೆ ಅಸ್ಪಷ್ಟವಾಗಿಯಾಗಲಿ, ಇದ್ದೇ ಇರುತ್ತದೆ. ಇದು ಇಲ್ಲದಿದ್ದರೆ ಏಕತ್ವವು ಏನೂ ಇಲ್ಲದ ಬಚ್ಚಬರಿಯ ಬಯಲು (*Void of non-existence*) ಎನಿಸುವದು ಇಲ್ಲವೆ ಶಾಂತಿಯುಕ್ತ ಶೂನ್ಯವೆನಿಸುವದು. (*State of blank repose*). ಈ ಏಕತ್ವದ ಅರಿವಿನಲ್ಲಿ "ಎಲ್ಲವೂ ನಾನೆ ಇರುವೆ, ಎಲ್ಲರೊಳು ನಾ ವ್ಯಾಪಿಸಿರುವೆ" ಎಂಬ ಭಾವವು ಬಲಿತಿರುವದು. ಅದರಲ್ಲಿ ಕಲ್ಪನೆಯ ಕೈಚಳಕವಾಗಲಿ ಕಣ್ಣಂಕೆಯ ಕೋಟಲೆಯಾಗಲಿ

ಇರದು. ಒಂದರ ಈ ಅರಿವಿನಿಂದ ಆತ್ಮನು ಶುದ್ಧವಾದ ಇರುವಿಕೆಯಲ್ಲಿ, ಶುದ್ಧವಾದ ಎಚ್ಚರಿಕೆಯಲ್ಲಿ ಮತ್ತು ಶುದ್ಧವಾದ ಹಿಗ್ಗುವಿಕೆಯಲ್ಲಿ ವ್ಯಕ್ತಗೊಳ್ಳುವನು; ಸಚ್ಚಿದಾನಂದಮಯನಾಗಿ ತೋರುವನು. ಪ್ರಭುವಿನ ಪ್ರಾಣವಾಗಿರುವ ಈ ಅಮ್ಮಾ ಅಥವಾ ಪರಾಪ್ರಕೃತಿಯು ಸಹ ಸಚ್ಚಿದಾನಂದಮಯಿಯಾಗಿರುವಳು. ಅರಿವಿನ ಈ ಪರಾಶಕ್ತಿಯನ್ನು ರೂಪಿಸಲು ಇನ್ನೊಂದು ಸಮಭುಜ ತ್ರಿಕೋಣವು ಬೇಕು. ಯಾಕಂದರೆ ಸತ್ ಚಿತ್ ಆನಂದ ಇವುಗಳಲ್ಲಿ ಅವುದು ಕಿರಿದು ಅವುದು ಹಿರಿದು ಎಂದು ಹೇಗೆ ಹೇಳುವದು? ಆದರೆ ಅಲ್ಲಿ ಅಮ್ಮಾ ಮತ್ತು ಅತವ್ ಇವುಗಳಲ್ಲಿಯು ಸೂಕ್ಷ್ಮವಾದ ಅರ್ಥಗೌರವದ ಅಭ್ಯಂತರವನ್ನು ಮಾತ್ರ ಗಮನಿಸಬೇಕು. ಅಮ್ಮಾ ಸಚ್ಚಿದಾನಂದಮಯಿಯಾದರೆ ಅತವ್ ಸತ್ವರಜಸ್ತಮೋಮಯಿಯಾಗಿಹುದು. ಅಮ್ಮಾ ಪರಾಪ್ರಕೃತಿಯಾದರೆ ಅತವ್ ಅಪರಾಪ್ರಕೃತಿಯಾಗಿಹುದು. ಅಮ್ಮಾ ಆಧ್ಯಾತ್ಮಿಕ ಊರ್ಧ್ವಸೃಷ್ಟಿಯಾದರೆ ಅತವ್ ಭೌತಿಕ ಅಧಃ ಸೃಷ್ಟಿಯಾಗಿಹುದು. ಆದರೂ ಇವು ಒಂದರಿಂದ ಇನ್ನೊಂದು ಬೇರೆಯಾಗಿಲ್ಲ. ಒಂದಕ್ಕೊಂದು ಹೊಂದಿಕೆಯಾದ ತೆರದಲ್ಲಿರುವವು. ಅವನ್ನು ಚಿತ್ರಿಸುವ ತ್ರಿಕೋಣಗಳು ಅವುಗಳಂತೆಯೇ ತೋರಿಕೆಯಲ್ಲಿ ಒಂದೇ ಆದರೂ ಇರುವಿಕೆಯಲ್ಲಿ ಭಿನ್ನವಾಗಿವೆ. ಯಾಕಂದರೆ ಗುಣತ್ರಯವನ್ನು ಚಿತ್ರಿಸುವ ತ್ರಿಕೋಣದ ವಿರುದ್ಧದಿಶೆಗೆ ಮಾರ್ಪಾಟಾದ ಅವಸ್ಥೆಯನ್ನು—ಸಚ್ಚಿದಾನಂದ ಲಕ್ಷಣತ್ರಯವನ್ನು—ಚಿತ್ರಿಸುವ ತ್ರಿಕೋಣವಿರಬೇಕಾಗುವದು. ಇಂತು ಚಿತ್ರಿಸಿದಾಗ ಅವುಗಳ ಆಕಾರವು $\overline{\underline{\times}}$ ಹೀಗೆ ಆಗುವದು.

ಅಧಃಸೃಷ್ಟಿ ಊರ್ಧ್ವಸೃಷ್ಟಿ ಇವೆರಡರ ನಡುವೆ ಇವೆರಡನ್ನು ತಳಕು ಹಾಕುವ ಸೃಷ್ಟಿಯೊಂದಿದೆ. ಇದು ಅರುಹಿನ ಸೃಷ್ಟಿಯು. ಇದಕ್ಕೆ ವಸ್ತುಗಳ ಯಥಾರ್ಥಜ್ಞಾನವೇ ತಳಹದಿಯು. ಶಾಸ್ತ್ರದಲ್ಲಾಗಲಿ ಸೊಬಗಿನಲ್ಲಾಗಲಿ, ತತ್ವದಲ್ಲಾಗಲಿ ತೋರಿಕೆಯಲ್ಲಾಗಲಿ ಸತ್ಯವನ್ನು ಶೋಧಿಸುವ ಮಾನವನ ಹರಿದಾಟಗಳಲ್ಲೆಲ್ಲ —ಜ್ಞಾನಸಂಪಾದನೆಯ ಈ ಪ್ರಯತ್ನಗಳಲ್ಲೆಲ್ಲ ಒಳ್ಳೇ ಜೀವನದ ಹೋರಾಟವು ಒಡಮೂಡಿದೆ. ಇವು ಒಂದು ಕಲೆಯ ಶಾಂತಿಯ ರಚನೆಗಾಗಿ ಇರಲಿ ಇಲ್ಲವೆ ಒಂದು ಸೊಬಗಿನ ಸವಿಯ ಸೇವನೆಗಾಗಿ ಇರಲಿ —ಇವೆಲ್ಲ ನೀತಿಯ ಹೊದಿಕೆಯಲ್ಲಿ ಒಡೆದು ಕಾಣುವ ಎಂದೆಂದೂ ಮಸುಳಿಸಲು ಬಾರದ ಉತ್ತಮಜೀವ

ನದ ಇಂಬನ್ನು ಸೊಂಪನ್ನು ಪೆಂಪನ್ನು ನಿರೂಪಿಸುತ್ತಿವೆ. ಜೀವಿತದಲ್ಲೆಲ್ಲ ಮಾನವನು ತಾನು ಪರವಸ್ತುವಿನ ಸನ್ನಿಧಿಯಲ್ಲಿರುವಂತೆ ತದಿತರವಾದ ಬೇರೊಂದು ವಸ್ತುವಿನೊಡನೆ ತಾನು ಸಂಬಂಧವನ್ನಿಟ್ಟುಕೊಂಡಂತೆಯೂ ತಿಳಿಯುತ್ತಾನೆ. ಈ ತರಹದ ತಿಳಿವಳಿಕೆಗೆ ಅಂತಃಕರಣಗಳಾಗಲಿ ಬಹಿಃಕರಣಗಳಾಗಲಿ ಕಾರಣೀಭೂತವಾಗಿರಬೇಕು. ಈ ತರಹದ ಒಳ ಹೊರಗಿನ ತಿಳಿಯು ಈ ತರಹದ ಜ್ಞಾತೃಜ್ಞೇಯು ಜ್ಞಾನವು ಪ್ರತಿಯೊಂದು ಅನುಭವ ಜೀವನದಲ್ಲಿ ಪ್ರಾಮುಖ್ಯವಾದುದು. ಆಧ್ಯಾತ್ಮ ಸಾಧನೆಯ ಈ ಕಾರ್ಯಗಳಲ್ಲಿ, ಜ್ಞಾನಾನುಭವ ಸಂಪಾದನೆಯ ಈ ಕಾರ್ಯಗಳಲ್ಲಿ ನಮ್ಮಿಂದ ಇತರವಾದುದು ಕೇವಲ ಇತರವಲ್ಲ, ಅದು ನಮ್ಮದು ಎಂಬ ನಂಬುಗೆಗೆ ಇಂಬಿರುವದು. ಅರುಹಿನ ಸೃಷ್ಟಿಯ ಒಡನಾಡಿಗೆ ಅನಿಮಿಷ ದೃಷ್ಟಿಯ ಸಂಪಾದಕನಿಗೆ ಸಮ್ಯಕ್ ಜ್ಞಾನ ಸಂಪಾದಕನಿಗೆ ಅಥವಾ ಸುಜ್ಞಾನಿಗೆ ಈ ನಂಬುಗೆಯು ಅತ್ಯವಶ್ಯ ಇರಬೇಕಾದುದು. ಅಂದರೇನೇ ಅದು ನಮ್ಮ ಅಂತರಂಗದ ಮಾತಿಗೆ—ಮಾರುತ್ತರವನ್ನಪೇಕ್ಷಿಸುವ ನಮ್ಮ ಒಳನುಡಿಗೆ—ಪ್ರತ್ಯುತ್ತರವಾದಿಯಾಗುತ್ತದೆ. ಮಾರುತ್ತರವೀವ ಈ ದಿವ್ಯದೃಷ್ಟಿಯು ನಮ್ಮ ಆಧ್ಯಾತ್ಮಿಕ ಕಾರ್ಯಕಲಾಪಗಳಲ್ಲೆಲ್ಲ ವ್ಯಾಪ್ತಿಗೊಂಡು ಒಡೆದುಕಾಣುತ್ತಿದೆ. ಈ ದೃಷ್ಟಿಯಿಂದ ವಿಚಾರಿಸಲು ಮಾರ್ಪಡಿಗುಡುವ ಈ ತಿಳಿಗಣ್ಣನ್ನು ತುಂಬ ಅರಳಿಸುವಂತೆ ಮಾಡುವ ಕಾರ್ಯವೇ ಅನುಭವ ಸಂಪಾದನೆ ಎನಿಸುತ್ತದೆ. ಈ ದೆಸೆಯಿಂದಲೇ ಇದು ಇನ್ನೊಂದು ನಾಲ್ಕನೆಯ ತುರೀಯ ಸೃಷ್ಟಿಯ ಶಕ್ಯತೆಯನ್ನು ಸೂಚಿಸುತ್ತಿದೆ.

ಹಿಂದು ತತ್ವಜ್ಞಾನಿಗಳು ಈ ಸೃಷ್ಟಿಗೆ ಮಹರ್ಲೋಕವೆನ್ನುವರು. ಯಾಕಂದರೆ ಇದು ಅಪಾರವಾದ ಅರುಹಿನ ಸೃಷ್ಟಿಯು. ಈ ಮಹರ್ಲೋಕದ ರಹಸ್ಯವು ಬುದ್ಧಿಗಮ್ಯವಾದ (*Intellect*) ವಿಷಯವಲ್ಲ; ಭಾವಗಮ್ಯವಾದ (*Intuition*) ವಿಷಯವು. ಬುದ್ಧಿಗಮ್ಯ ವಿಷಯವು ಆಕಾರವನ್ನು ಕಾಣುವದಲ್ಲದೆ ಕಂಡ ಆಕಾರದಲ್ಲಿ ತನ್ನ ಸ್ವರೂಪವನ್ನೂ ನಿಶ್ಚಯಿಸುವದು. ಹೀಗೆ ಒಮ್ಮೆ ಸ್ವರೂಪ ನಿಶ್ಚಯವಾಗಲು ಇದು ಇನ್ನುಳಿದ ಎಲ್ಲ ಬುದ್ಧಿಗಮ್ಯವಿಷಯಗಳಿಗಿಂತ ಭಿನ್ನವಾಗಿ ತೋರುವದು. ನಿರ್ದಿಷ್ಟವಾದ ಭಾವಗಮ್ಯ ವಿಷಯವು ವಸ್ತುವಿನಲ್ಲಿ ತನ್ನ ತಾ ಕಾಣುವದಲ್ಲದೆ ವಸ್ತುನಿಷ್ಪನ್ನವಾದ ಈ ಸೃಷ್ಟಿಯಲ್ಲಿಯೂ ತನ್ನ ತಾ ಕಾಣು

ವದು. ಇದು ಒಂದು ಕುರುಹಿನಲ್ಲಿ ಪ್ರತಿಬಿಂಬಿಸುವ ಈ ಪ್ರಪಂಚದೊಡನೆ ತನ್ನ ಸ್ವರೂಪವನ್ನು ಹೊಂದಿಸಿಕೊಂಡಿರುವದು. ಇದುದರಿಂದಲೇ ಸ್ವರೂಪದ ಮರೆಯ ಸತ್ಯದ ಜ್ಞಾನವನ್ನು ಇದು ಯಾವಾಗಲೂ ತನ್ನಲ್ಲಿ ಬಿಂಬಿಸಿಕೊಂಡಿರುವದೆಂದು ಹೇಳಬೇಕಾಗುವದು. ಇದರ ಧರ್ಮವು ದೃಷ್ಟಿ — ಇದ್ದಕ್ಕಿದ್ದಂತೆ ಕಾಣುವದು — ಕಲ್ಪಿಸುವದಲ್ಲ. ಇಂಥ ದೃಷ್ಟಿಯನ್ನು, ಇಂಥ ಸಮ್ಯಕ್ ದೃಷ್ಟಿಯನ್ನು ಸಂಪಾದಿಸಿದ ಮಹಾಂತನು ಅನಿಲ್ ಅಥವಾ ಶರಣ ಇಲ್ಲವೆ ಮಹರ್ಷಿಯು. ಇವನನ್ನು ರೂಪಿಸುವದು ಒಂದು ನೆಟ್ಟನೆಯ ಗೆರೆಯಿಂದ. ಯಾಕೆಂದರೆ ಶರಣನು ಜನನ ಮರಣಾತ್ಮಕ ಸಂಸಾರ ಚಕ್ರಕ್ಕೆ — ಪೂರ್ವಾಶ್ರಯದ ಹುರುಳಿಲ್ಲದ, ಪೂರ್ಣತೆಗೆ ಎದುರಾಗಿ ಸಾಗಿದವನು. ಆದುದರಿಂದ ಈ ಮೂರನೆಯ ಮೆಟ್ಟಲಿನಲ್ಲಿ ಲಿಂಗದ ಕಲ್ಪನೆಯ ವಿಕಾಸಕ್ಕೆ ಈ $\overline{\underline{\times}}$ ರೂಹು ಉಂಟು. ಶರಣನಲ್ಲಿ ಸಮ್ಯಕ್ ದೃಷ್ಟಿಯ ವ್ಯವಹಾರಗಳು ಬಲಗೊಳ್ಳುವದರಿಂದ ಮತ್ತು ಅವನ ಜೀವನವೆಲ್ಲ ಶುದ್ಧವಾದ ಇರುವಿಕೆಯಲ್ಲಿ ಸಾಗಿರುವದರಿಂದ ಸತ್ ಇದನ್ನು ರೂಪಿಸುವ ರೇಖೆಯಲ್ಲಿ ಬಲಕ್ಕೆ ಶರಣನನ್ನು ರೂಪಿಸುವ ರೇಖೆಯನ್ನು ಬೆಳೆಸಿದೆ. ಶರಣನು ಚಿತ್ ಶಕ್ತಿಯ ಒಡಲಿನಿಂದೊಗೆದವನಲ್ಲವೇ ?

ಕೊನೆಯದಾಗಿ ನಾವು ರೂಪಿಸಬೇಕಾದುದು ಆನ್ ಅಥವಾ ಶಿವನನ್ನು. ಶಿವನು ತುರೀಯ ಸತ್ಯವಸ್ತುವು, ಜ್ಞಾನಮಯನು. ವಿಮರ್ಶ ಶಕ್ತಿಯುತನು, ವಿಶ್ವಾತೀತನು, ಅನಂತನು. ಇವನನ್ನು ಆಸ್ತಿಕ ಮತವಾದಿಗಳು ಸಚರಾಚರದ ರಚನೆಗೆ ಬಾರದ, ವಾಚಾಮಗೋಚರವಾದ ಪ್ರಕಾಶನೆಂದು (*Ineffable and uncreated light*) ಪ್ರಶಂಸಿಸುವರು. ಕ್ರೈಸ್ತ ಅನುಭವಿಗಳು ದೇವ, ದಿವ್ಯಕತ್ತಲೆ, ಗಹನವಾದ ಗುಹೆ (*God-head, the Divine Dark, the Deep Abyss*) ಎಂದು ಕರೆಯುವರು. ವೀರಶೈವ ಶರಣರು ಅನಾದ್ಯನಂತ ಪ್ರಕಾಶಮಯ ಸ್ಥಿರ ನಿಃಶಬ್ದ ಬ್ರಹ್ಮ (*the infinite luminous silence*) ಎಂದು ಹೊಗಳುವರು. ಸೂಫಿ ಅನುಭವಿಗಳು ಬಚ್ಚಬರಿಯ ಬೆಳಕು (*The Dawn of Nothing*) ಎಂದು ವರ್ಣಿಸುವರು. ಇಂಥ ಶಿವನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ, ಜಗವ ಹುಟ್ಟಿಸಲೂ ಬಲ್ಲ, ಜಗವ ಹೊಂದಿಸಲೂ ಬಲ್ಲ; ತನ್ನಿಂದ ಒಕ್ಕು ಮಿಕ್ಕು ಪ್ರಸಾದವೆನಿಸುವ ಈ ವಿಶ್ವದಲ್ಲಿ ತಾನೆ

ತೊಟ್ಟಿಲವಾಗಿ ತಾನೆ ಶಿಶುವಾಗಿ, ತಾನೆ ಮಲಗಿ, ತಾನೆ ಎಚ್ಚತ್ತು ತನ್ನ ತಾನೆ ನೋಡಿ ಲೀಲೆಯನಾಡಿ ನಗಿಸುವನೊಮ್ಮೆ ಅಳಿಸುವನೊಮ್ಮೆ! ಇಂಥವನು ಅಳತೆಗೆ ನಿಲುಕನು, ಯಾಕಂದರೆ ಅವನು ಅದನ್ನು ಮೀರಿದವನು. ಅವನಿಗೆ ಎರಡೆಂಬುದಿಲ್ಲ, ಯಾಕಂದರೆ ಒಂದೂ ಅವನೇ ಸಕಲವೂ ಅವನೇ ಏನೂ ಇಲ್ಲದ ನಿರವಯಲೂ ಅವನೇ! ಇಂಥವನನ್ನು ರೂಪಿಸುವುದು ಹೇಗೆ? ಶಬ್ದಗಳಿಗೆ ಶಕ್ತಿ ಸಾಲದು; ವ್ಯಾಖ್ಯೆ ವಿವರಣೆಗಳ ಅಳವಿಗೆ ನಿಲುಕದು. ಇಂಥವನನ್ನು ರೂಪಿಸಲು ಮಾನವನ ಕೈಸೋತ ಪ್ರಯತ್ನವೆಲ್ಲ ಕೊನೆಗೆ ಪೂಜೆಯಲ್ಲಿ ಪರಿಣಮಿಸುವದು; ಶೂನ್ಯತೆಗೊಳ್ಳುವದು. ಶ್ರುತಿತತಿಯ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲ ಎಂದು ಅವನನ್ನು ವರ್ಣಿಸುವುದಿಲ್ಲವೇ? ಸೃಷ್ಟಿ, ಶಕ್ತಿ, ಶರಣ ಇವುಗಳ ಅನುಭವವನ್ನು ಮೀರಿ ಆಚೆಗೆ ಅವನಿರುವದರಿಂದ ಅವನಿಗೆ ಮೂರನೆಯ ಮೆಟ್ಟಲಿನಲ್ಲಿ ಹೇಳಿದ ಚಿತ್ರದಲ್ಲಿ ಮೇಲಿನ ಸ್ಥಾನವಿದೆ. ಈ ಕೊನೆಯ ಮೆಟ್ಟಲಿನಲ್ಲಿ ಆ ಇಷ್ಟಲಿಂಗದ ಆಕಾರವು ⚲ ಇಂತಾಗುವದು. ದೇವರ ವಿಷಯವಾದ ಸರಿಯಾದ ಮತ್ತು ಸಂಪೂರ್ಣವಾದ ವಿಚಾರಕ್ಕೆ ತಕ್ಕುದಾದ ಒಂದು ಆಕಾರವಿದೆ; ಅದನ್ನು ರೂಪಿಸುವುದು ಅತ್ಯವಶ್ಯವಾದುದು ಎಂದು ಹೇಳಿದೆಯಷ್ಟೇ! ಇದೇ ಆ ಆಕಾರವು! ಸಭ್ಯರೇ, ವೀರಶೈವರಲ್ಲಿ ಲಿಂಗದ ಕಲ್ಪನೆಯು ಅದೆಷ್ಟು ಗಾಢವೂ ಗೂಢವೂ, ಗಹನವೂ ಗಂಭೀರವೂ ಶುದ್ಧವೂ ಸಂಪೂರ್ಣವೂ ಆಗಿದೆ ಎಂಬುದನ್ನು ಆಲೋಚಿಸಿರಿ. ಇಂಥ ಒಂದು ಸುಸಂಬದ್ಧವಾದ ಸಂಪೂರ್ಣವಾದ ಸತ್ಯದ ಸ್ವರೂಪವನ್ನು ತಿಳಿಸುವುದರ ಕಡೆಗೆ ವೀರಶೈವವು ಸಾಗಿದೆ ಎಂಬುದು ಸ್ಪಷ್ಟವಾದುದು. ವೀರಶೈವವು ಎತ್ತ ಸಾಗಿದೆ ಎಂಬ ಮಾತಿಗೆ ಉತ್ತರವಿದು.

# ದರುಶನವ ಕೊಡಬಾರದೆ?

(ಲೇಖಕ:— ಶ್ರೀ ಆನಂದಕವಿ-ಕುರುಗುಂದ.)

(೧)

ಕನ್ನಡದ ಕುಲದೀಪ ಕುಶಲಮತಿ ಬಸವಣ್ಣ
ಉನ್ನತದ ಕ್ರಾಂತಿಯನು ವಿಶ್ವದಲಿ ಹಬ್ಬಿಸಿದ
ನಿನ್ನ ವಚನಗಳ ಹೊಳೆ ಹೊನ್ನಾಗಿ ರನ್ನಾಗಿ
ಹೊಸತಾಗಿ ಹರಿಯುತಿಹುದು.

ಕಲ್ಯಾಣ ಬಸವಣ್ಣ ಕಲಿಯುಗದ ಮುಕ್ಕಣ್ಣ!
ನಲ್ಮೆಯಿಂ ನೋಡಲ್ಕೆ ಬೇಗನೇ ಬಾರಣ್ಣ
ಸಲ್ಲಲಿತ ಭಕ್ತಿಯಿಂ ಕೊಂಡಾಡಿ ನಿನ್ನನ್ನು
ಪ್ರೇಮದಿಂ ನಮಿಸುತಿಹೆವು.

(೨)

ಹೊಸತರದ ಕ್ರಾಂತಿಯನು ಹಬ್ಬಿಸಿದ ಬಸವೇಶ!
ನಸುನಗುತೆ ನಲಿನಲಿದು ನಮಿಸುತ್ತೆ ಬೇಡುವೆನು
ರಸನೆಯೊಳು ಸಂತತಂ ತವನಾಮ ಸುಧೆಯಿರಲಿ
ಬೇರೊಂದು ವರವನೊಲ್ಲೆ

ಹಸನಾದ ಮನಸಿನೊಳ್ ಕನಸಿನೊಳ್ ನಿದ್ದೆಯೊಳ್
ಜಸವೆತ್ತ ನಿನ್ನ ಸುಂದರ ವಚನದರುಹಿರಲಿ!
ಬಸವೇಶ! ಬಸವರಸ! ಬಸವಣ್ಣ! ಶ್ರೀಬಸವದೇವ
ರಾಜೇಂದ್ರ ಪಾಹಿ।

"ಅನುಭವದ ಮಂಟಪ"ವ ಸಾನುರಾಗದಿ ರಚಿಸಿ
ಜನಹಿತಕೆ ಘನತರದ ಆತ್ಮವನ್ನರ್ಪಿಸಿದ
ಪುಣ್ಯಾತ್ಮ ಬಸವಣ್ಣ! ಅನುದಿನದಿ ನಿನ್ನನ್ನು ಜಗವೆಲ್ಲ
ನೆನಿಸುತಿಹುದು

## ದರುಶನವ ಕೊಡಬಾರದೆ

ಕನ್ನಡದ ನಾಡಿಂದು ಕನವರಿಸುತಿರುತಿಹುದು.
ಜನದದಿಂದಿನ್ನೊಮ್ಮೆ ಬೇಗನೇ ದಯಮಾಡು
ಪುನ್ನಿನಾ-ಮಾದೇವಿ ಮಡಿವಾಳಮಾಚಯ್ಯ ಮೊದಲಾದ
ಶರಣರೊಡನೆ ॥

(೨)

"ಬೆಳ್ಳಿಯಾಹಬ್ಬ"ದಾ ಮಲ್ಲಿಗೆಯ ಮಕರಂದ
ಎಲ್ಲೆಡೆಗೆ ಘಮಸುತಿದೆ ಮಾಮರವು ಚಿಗಿಯುತಿದೆ
ಉಲ್ಲಾಸದಿಂದೀಗ ಕಳಕಂಠ ಕೂಗುತಿವೆ ಬಾರಯ್ಯ ಬಸವಣ್ಣನೆ!

ಜಕ್ಕನಾ ಗೀತೆಗಳು ಉಕ್ಕುಕ್ಕಿ ಹರಿಯುತಿವೆ
ದಿಕ್ಕುದಿಕ್ಕಿಗೆ ನಿನ್ನ ನಾಡಗುಡಿ ಮೆರೆಯುತಿದೆ
ಅಕ್ಕರದಿ ನೋಡಲ್ಕೆ ಅಳಿಯನಂ ಕರಕೊಂಡು ಬೇಗಬಾ
ಬಸವಣ್ಣನೇ

(೩)

ಕಲ್ಯಾಣ ಕರೆಯುತಿದೆ. ಕನ್ನಡವು ಕುಣಿಯುತಿದೆ.
ಬಲ್ಲಿದನೆ ಬಸವಣ್ಣ! ಬಾ! ಎನ್ನ ಬಂಧುವೇ
ಎಲ್ಲಿ ನೋಡಿದಡಲ್ಲಿ ನಿನ್ನ ವಚನದ ಸೊಲ್ಲು ಎಡಬಿಡದೆ
ಕೇಳುತಿಹುದು.

ಕಣ್ಣುಗಳು ನಿನ್ನನ್ನು ನೋಡಲ್ಕೆ ಬಯಸುವವು
ಧನ್ಯತಮ ಕರ್ಣಮುಂ ಕೊಂಡಾಡಿ ನಲಿಯುವವು.
ಮುನ್ನಿನಾ ಹನ್ನೆರಡು ಶತಮಾನ ನೆನೆನೆನೆದು ಶೋಕವಂ
ಗೈಯ್ಯುತಿಹವು.

(೪)

ಕರಣಕ್ಕೆ ಆನಂದ! ಕಂಗಳಿಗೆ ದುಃಖವೈ!
ಧರಿಗೆಲ್ಲ ಸುಖವೀವ ಧರ್ಮಾತ್ಮ ಬಸವಣ್ಣ!
ಕರುಣಾಳು ದೇವನೇ ಕರ್ನಾಟಕಿನ್ನೊಮ್ಮೆ ದರುಶನವ
ಕೊಡಬಾರದೆ?

ಬಾರಯ್ಯಾ! ಬಸವಣ್ಣಾ! ಬಾ! ಎನ್ನ ಶ್ರೀಗುರುವೆ!
ಭಾರತವು ಅಲ್ಲಲ್ಲಿ! ವಿಶ್ವವೇ ನಿನ್ನನ್ನೇ
ಹಾರೈಸಿ ಹಂಬಲಿಸಿ ಹಾತೊರೆದು ಕರೆಯುವದು ಬೇಗಬಾ!
ಬಸವಣ್ಣನೇ!

---